

ಶ್ರೀ ವೇದವ್ಯಾಸಃ ಪ್ರಸೀದತು

ಭಗವಾನ್ ಶ್ರೀ ವೇದವ್ಯಾಸ ರಚಿತ

# ಬ್ರಹ್ಮವೈವರ್ತ ಮಹಾಪುರಾಣ

## ಪ್ರಥಮ ಭಾಗ

*(ಒಟ್ಟು ಎರಡು ಭಾಗಗಳು)*


*ಅನುವಾದ-ಲೇಖಕರು*

**ಪಂ. ಪಂಢರೀನಾಥಾಚಾರ್ಯ ಗಲಗಲಿ**

*ರಾಜ್ಯಪ್ರಶಸ್ತಿ, ರಾಷ್ಟ್ರಪ್ರಶಸ್ತಿ ವಿಜೇತರು*



*-: ಪ್ರಕಾಶಕರು :-*

**ಖೋಡೇ ಫೌಂಡೇಶನ್**

*ಗ್ರಂಥಪ್ರಕಟಣಾ ವಿಭಾಗ*

ನಂ.9, ಮೊದಲನೇ ಮುಖ್ಯರಸ್ತೆ, ಗಾಂಧಿನಗರ

ಬೆಂಗಳೂರು-560 009

✆ : 6644753, ಫ್ಯಾಕ್ಸ್ : 0091-80-6646098




**BRAMHA VYVARTHA MAHĀPURĀṆA** of **Bhagavān Sri Vedavyāsā**, **Edited and Translated in Kannada by** *Rajyaprashasti, Rastraprashasti Puraskrutha* **Panditha Sri Pandarinathāchārya Galagali**, Vishveswara Nagar, Shanti Colony, Hubli-580 032. Ph.: (0836) 53970

First Edition : 1998

No. of Pages : xviii + 501

No. of Copies : 1,000



Price : Rs. 108=00

*Typeset at* : **VĀGARTHA PRINTONICS,**
No.149, 8th Cross, N.R. Colony,
BANGALORE-560 019. Ph.: 627677

*Printed at* : **SRI VENKATESHWARA PRINTERS,**
No.35, Newcross Road, Chick Mavalli,
Near Ganapathi Vidyamandira
BANGALORE-560 004. Ph.: 6671001

# ಬ್ರಹ್ಮವೈವರ್ತಮಹಾಪುರಾಣ

## ಪ್ರಸ್ತಾವನಾ

ಬ್ರಹ್ಮವೈವರ್ತಪುರಾಣವು ಮುಖ್ಯವಾಗಿ ವಿಷ್ಣುಪಾರಮ್ಯ ಪ್ರತಿಪಾದಕವಾದ ಮಹಾಪುರಾಣ. ಇದರಲ್ಲಿ ಭಗವಾನ್ ಶ್ರೀವೇದವ್ಯಾಸರು ಪರಬ್ರಹ್ಮನಾದ ಶ್ರೀಹರಿಯ ಮಹಿಮೆಯನ್ನು ವಿಶದವಾಗಿ ವಿವರಿಸಿದ್ದರಿಂದ 'ಬ್ರಹ್ಮವೈವರ್ತಮಹಾಪುರಾಣ' ಎಂದು ಇದಕ್ಕೆ ಹೆಸರು ಬಂದಿದೆ.

ವಿವೃತಂ ಬ್ರಹ್ಮ ಕಾರ್ತ್ಸ್ನ್ಯಂ ಚ ಕೃಷ್ಣೇನ ಯತ್ರ ಶೌನಕಂ ।
ಬ್ರಹ್ಮ ವೈವರ್ತಕಂ ತೇನ ಪ್ರವದಂತಿ ಪುರಾವಿದಃ ॥ ೧/೨/೫೮

ಈ ಮಹಾಪುರಾಣದಲ್ಲಿ ಹದಿನೆಂಟು ಸಾವಿರ ಶ್ಲೋಕಗಳು ಇರುತ್ತವೆ. ನಾಲ್ಕು ಖಂಡಗಳಲ್ಲಿ ಇದು ವಿಭಕ್ತವಾಗಿರುತ್ತದೆ. ಬ್ರಹ್ಮಖಂಡ, ಪ್ರಕೃತಿಖಂಡ, ಗಣೇಶಖಂಡ, ಕೃಷ್ಣಜನ್ಮಖಂಡ. ಮೊದಲಿನ ಬ್ರಹ್ಮಖಂಡದಲ್ಲಿ (೩೦) ಮೂವತ್ತು ಅಧ್ಯಾಯಗಳಿವೆ. ಎರಡನೆಯ ಪ್ರಕೃತಿಖಂಡದಲ್ಲಿ (೫೭) ಐವತ್ತೇಳು ಅಧ್ಯಾಯಗಳು ಇರುತ್ತವೆ. ಮೂರನೆಯದಾದ ಗಣಪತಿಖಂಡದಲ್ಲಿ (೪೬) ನಲವತ್ತಾರು ಅಧ್ಯಾಯಗಳು. ಕೊನೆಯದಾದ ಕೃಷ್ಣಜನ್ಮಖಂಡದಲ್ಲಿ (೧೩೩) ಒಂದುನೂರ ಮೂವತ್ತಮೂರು ಅಧ್ಯಾಯಗಳಿವೆ. ಒಟ್ಟು ಈ ಬ್ರಹ್ಮವೈವರ್ತದಲ್ಲಿ (೨೬೬) ಎರಡುನೂರ ಅರವತ್ತಾರು ಅಧ್ಯಾಯಗಳು ಇರುತ್ತವೆ.

ಅಷ್ಟಾದಶಸಹಸ್ರಂ ತತ್ ಪುರಾಣಂ ಪರಿಕೀರ್ತಿತಮ್ ।
ಬ್ರಹ್ಮ-ಪ್ರಕೃತಿ-ವಿಘ್ನೇಶ-ಕೃಷ್ಣಖಂಡೈಃ ಸಮಾಚಿತಮ್ ॥

ನಾಲ್ಕು ಖಂಡಗಳಲ್ಲಿ ಹದಿನೆಂಟು ಸಾವಿರ ಪದ್ಯಗಳುಳ್ಳದ್ದು ಬ್ರಹ್ಮವೈವರ್ತಪುರಾಣ ಎಂದು ನಾರದ ಪುರಾಣದಲ್ಲಿ ಹೇಳಲಾಗಿದೆ. ಆದರೆ ನಾರದಪುರಾಣ, ಮತ್ಸ್ಯಪುರಾಣ, ಶಿವಪುರಾಣಾದಿಗಳಲ್ಲಿ ಹೇಳಿದ ಬ್ರಹ್ಮವೈವರ್ತಪುರಾಣದ ಕೆಲವು ವಿಷಯಗಳು ಈಗ ಉಪಲಬ್ಧವಿದ್ದ ಬ್ರಹ್ಮವೈವರ್ತದಲ್ಲಿ ಗೋಚರಿಸುವುದಿಲ್ಲ. ನಾರದಾದಿ ಪುರಾಣಗಳಲ್ಲಿ ಹೇಳಿದ ರಥಂತರ ಕಲ್ಪವೃತ್ತಾಂತ, ಸಾವರ್ಣಿ ನಾರದ ಸಂವಾದ, ಬ್ರಹ್ಮವರಾಹವೃತ್ತಾಂತ, ಬ್ರಹ್ಮನ ವಿವರ್ತ ವಿಚಾರ ಇದಾವುದೂ ಪ್ರಕೃತ ಬ್ರಹ್ಮ ವೈವರ್ತದಲ್ಲಿ ಬರುವುದಿಲ್ಲ.

ತತಃ ಸಾವರ್ಣಿ ಸಂವಾದೋ ನಾರದಸ್ಯ ಸಮೀರಿತಃ ।
ಕೃಷ್ಣಮಾಹಾತ್ಮ್ಯ ಸಂಯುಕ್ತೋ ನಾನಾಖ್ಯಾನ ಕಥೋತ್ತರಃ ॥

ಎಂದು ನಾರದ ಪುರಾಣದಲ್ಲಿ ಹೇಳಿದ ಸಾವರ್ಣಿಯಿಂದ ನಾರದರಿಗೆ ನಿರೂಪಿಸಲ್ಪಟ್ಟ ಬಗೆಬಗೆಯ ಆಖ್ಯಾನ ಕಥಾಚರಿತ್ರಗಳಿಂದ ಒಡಗೂಡಿದ ಶ್ರೀಕೃಷ್ಣನ ಮಾಹಾತ್ಮ್ಯವು ಪ್ರಕೃತ ಬ್ರಹ್ಮವೈವರ್ತದಲ್ಲಿ ಬಿಟ್ಟುಹೋಗಿದೆ.

ಮತ್ಸ್ಯಪುರಾಣ ಶಿವಪುರಾಣಗಳಲ್ಲಿ ಬ್ರಹ್ಮವೈವರ್ತವು ಬ್ರಹ್ಮದೇವರ ಮಹಿಮಾ ಪ್ರತಿಪಾದಕವೆಂದು ಹೇಳಲಾಗಿದೆ. ಸ್ಕಂದಪುರಾಣದಲ್ಲಿ ಸವಿತೃದೇವನ ಅರ್ಥಾತ್ ಸೂರ್ಯನ ಮಾಹಾತ್ಮ್ಯ ಪ್ರತಿಪಾದನೆಯೇ ಇದರಲ್ಲಿ ಪ್ರಧಾನವಾಗಿ ಬಂದಿದೆ ಎಂದು ಹೇಳಲಾಗಿದೆ. ಆದರೆ ವಸ್ತುಸ್ಥಿತಿಯೆಂದರೆ ಆಚೂಲಮೂಲವಾಗಿ ಈ ಪುರಾಣವನ್ನು ಪರಿಶೀಲಿಸಿದರೆ ಮಹಾವಿಷ್ಣುವಿನ ಮಹಿಮೆ-ಗರಿಮೆಗಳೇ ಈ ಪುರಾಣದುದ್ದಕ್ಕೂ ಕಥಿತ ಪ್ರಥಿತವಾಗಿವೆ. ಆದುದರಿಂದ ಇದೊಂದು ಶ್ರೀಮದ್ ಭಾಗವತದಂತೆ ಮುಖ್ಯವಾದ ವೈಷ್ಣವಪುರಾಣವೆಂದು ಪರಿಗಣಿತವಾಗಿದೆ. ಆದಿ ಶ್ರೀಶಂಕರಾಚಾರ್ಯರು, ಶ್ರೀಮನ್ ಮಧ್ವಾಚಾರ್ಯರೂ ತಮ್ಮ ಗ್ರಂಥಗಳಲ್ಲಿ ಈ ಪುರಾಣವನ್ನು ಪ್ರಮಾಣತ್ವೇನ ಉಲ್ಲೇಖಿಸಿದ್ದಾರೆ.

ಇದರಲ್ಲಿ ಮೊಟ್ಟಮೊದಲನೆಯದಾದ ಬ್ರಹ್ಮಖಂಡದಲ್ಲಿ ಪರಬ್ರಹ್ಮನಾದ ಪರಮಾತ್ಮನ ಮಹಾಮಹಿಮೆ ಪ್ರತಿಪಾದಿತವಾಗಿದೆ. ಶ್ರೀಹರಿಯ ದಿವ್ಯಲೀಲೆಗಳನ್ನು ವೈಷ್ಣವರು ಸದಾಧ್ಯಾನ ಮಾಡುತ್ತಾರೆ.

**ಬ್ರಹ್ಮಖಂಡೇ ಸರ್ವಬೀಜಂ ಪರಂ ಬ್ರಹ್ಮನಿರೂಪಣಂ ।**
**ಧ್ಯಾಯಂತೇ ಯೋಗಿನಃ ಸಂತೋ ವೈಷ್ಣವಾ ಯತ್ ಪರಾತ್ ಪರಮ್ ॥**

ಎರಡನೆಯದಾದ ಪ್ರಕೃತಿಖಂಡದಲ್ಲಿ ಪ್ರಕೃತಿಯ ಮಹಿಮೆಯ ಬಣ್ಣನೆ ಬರುತ್ತದೆ. ಚಿತ್‌ಪ್ರಕೃತಿ ಅಚಿತ್ ಪ್ರಕೃತಿ ಎರಡಕ್ಕೂ ಅಭಿಮಾನಿಯಾದ ಮಹಾಲಕ್ಷ್ಮಿಯು ಶ್ರೀಕೃಷ್ಣನ ಆದೇಶಕ್ಕೆ ಅನುಸಾರವಾಗಿ ಕಾಲಕಾಲಕ್ಕೆ ದುರ್ಗಾ ಲಕ್ಷ್ಮಿ ಸಾವಿತ್ರೀ ಸರಸ್ವತೀ ರಾಧಾದಿ ರೂಪಗಳನ್ನು ಧರಿಸಿ ಕಾಲಕಾಲಕ್ಕೆ ಭಗವಂತನ ಸೃಷ್ಟಿ ಸ್ಥಿತಿ ಸಂಹಾರ ಸಂರಕ್ಷಣಾದಿಕಾರ್ಯಗಳಲ್ಲಿ ವ್ಯಾಪೃತಳಾಗಿ ಭಗವತ್ ಕಾರ್ಯಸಾಧಕಳಾಗುತ್ತಾಳೆ.

ಇದಲ್ಲದೆ ಈ ಪ್ರಕೃತಿಖಂಡದಲ್ಲಿ ಸಾವಿತ್ರಿ ತುಲಸಿ ಮೊದಲಾದ ದೇವಿಯರ ಪವಿತ್ರವೂ ವಿಚಿತ್ರವೂ ಆದ ಚಾರು-ಚರಿತ್ರೆಗಳು ಮಾರ್ಮಿಕವಾಗಿಯೂ ಮನೋಹರ-ವಾಗಿಯೂ ನಿರೂಪಿಸಲ್ಪಟ್ಟಿವೆ.

ಇವಲ್ಲದೆ ಶಾಲಿಗ್ರಾಮ ಶಿಲಾವರ್ಣನೆ, ಕರ್ಮವಿಪಾಕ, ಮಂತ್ರ, ಸ್ತೋತ್ರ, ಕವಚ, ವಿದ್ಯಾ, ಪ್ರಕೃತಿ ಲಕ್ಷಣ, ಪುಣ್ಯಾತ್ಮ ಪಾಪಾತ್ಮರ ಸ್ಥಾನನಿರ್ದೇಶನ, ಶುಭಾಶುಭ ನರಕ ವ್ಯಾವರ್ಣನಾದಿಗಳೂ ಪ್ರಸಂಗಾನುಸಾರವಾಗಿ ಹೇಳಲ್ಪಟ್ಟಿವೆ.

ಮೂರನೆಯದಾದ ಗಣೇಶ ಖಂಡದಲ್ಲಿ ಗಣಪತಿಯ ಜನ್ಮ ಹಾಗೂ ಚಿತ್ರವಿಚಿತ್ರವಾದ ಚಾರುಚರಿತ್ರವು ಕೃಷ್ಣಾವತಾರರೂಪದಿಂದ ಬಣ್ಣಿಸಲ್ಪಟ್ಟಿವೆ. ಇದರಲ್ಲಿ ಗಣೇಶ ಭೃಗು-ಸಂವಾದ-ಗುಪ್ತಸ್ತೋತ್ರ-ಮಂತ್ರ-ತಂತ್ರ-ಕವಚಾದಿಗಳ ದಿಗ್ದರ್ಶನವಿರುತ್ತದೆ.

ಇದರಲ್ಲಿ 'ಅತಿಥಿದೇವೋಭವ' ಎಂದು ಉಪನಿಷತ್ತಿನಲ್ಲಿ ಹೇಳಿದುದನ್ನು ವಿಸ್ತಾರ- ವಾಗಿ ಹೇಳಲಾಗಿದೆ.

**ಅಪೂಜಿತೋಽತಿಥಿರ್ಯಸ್ಯ ಭವನಾದ್ವಿನಿವರ್ತತೆ**
**ಪಿತೃದೇವಾಸ್ತತಃ ಪಶ್ಚಾತ್ ಗುರುವೋ ಯಾಂತ್ಯಪೂಜಿತಾಃ ॥**

ಯಾರಮನೆಯಿಂದ ಅತಿಥಿಯು ಅಪೂಜಿತನಾಗಿ ತಿರುಗಿ ಹೋಗುವನೋ ಆ ಮನೆಯಿಂದ ಪಿತೃಗಳೂ ದೇವತೆಗಳೂ ಅಗ್ನಿಗಳೂ ಗುರುಗಳೂ ಅಲ್ಲಿ ನಿಲ್ಲದೆ ಹೊರಟು-ಹೋಗುತ್ತಾರೆ.

ಇದೇ ತೃತೀಯ ಖಂಡದಲ್ಲಿ ಸ್ವಧರ್ಮರಕ್ಷಣೆಯ ಆದರ್ಶ ಉಪದೇಶವು ಇರುತ್ತದೆ.

ನಾಲ್ಕನೆಯದಾದ ಶ್ರೀಕೃಷ್ಣಜನ್ಮಖಂಡದಲ್ಲಿ ಶ್ರೀಕೃಷ್ಣಪರಮಾತ್ಮನ ವಿವಿಧ ಲೀಲಾ-ವಿಲಾಸಗಳ ವಿಸ್ತಾರವರ್ಣನೆಯು ಮನೋಜ್ಞವಾಗಿ ಚಿತ್ರಿಸಲ್ಪಟ್ಟಿದೆ. ಭಗವಂತನ ಜನ್ಮ, ಲೋಕೋದ್ಧಾರಕವಾದ ಕುಶಲಕರ್ಮ, ದುಷ್ಟಶಿಕ್ಷಣ, ಸಾಧುರಕ್ಷಣಾದಿ ಅವತಾರ-ಕಾರ್ಯಗಳ ವಿಶದವರ್ಣನೆ ಇರುತ್ತದೆ. ಅದರಲ್ಲಿಯೂ ಭಗವತ್ ಪ್ರಿಯಳೂ ಸಾಕ್ಷಾತ್ ಲಕ್ಷ್ಮಿಯ ಅವತಾರಭೂತಳೂ ಆದ ರಾಧೆಯ ಸ್ವರೂಪ ಸ್ವಭಾವ ದೈವೀ- ಮಹಿಮೆಗಳ ಚೇತೋಹಾರಿ ನಿರೂಪಣೆ ಉದ್ಬೋಧಕವಾಗಿ ಬಂದಿದೆ.

ಶ್ರೀಕೃಷ್ಣ ರಾಧಾರಮಣಿಯರ ಇಂಥ ಹೃದಯಂಗಮವಾದ ರಸಭರಿತವರ್ಣನೆಯು ಬ್ರಹ್ಮ ವೈವರ್ತಪುರಾಣದ ಹೊರತಾಗಿ ಬೇರಾವ ಪುರಾಣದಲ್ಲಿಯೂ ಬರುವುದಿಲ್ಲ. ಭಾಗವತದಲ್ಲಿ ರಾಧೆಯ ಉಲ್ಲೇಖವೇ ಬರುವುದಿಲ್ಲ. ಶ್ರೀರಾಧಾಕೃಷ್ಣ ಯುಗಲದ ದಿವ್ಯಭವ್ಯಮಹಿಮೆಯ ಉದಾತ್ತ ಹಾಗೂ ಉತ್ಕೃಷ್ಟ ಆವಿಷ್ಕಾರ ಹಾಗೂ ಪ್ರಭಾವ ಪರಿಷ್ಕಾರಗಳು ಇಲ್ಲಿಯ ಚತುರ್ಥಖಂಡದಲ್ಲಿ ಬಂದದ್ದು ಪರಮಪುರುಷಾರ್ಥಪ್ರದ. ಉತ್ತರಭಾರತದ ಭಾವುಕ-ಭಕ್ತಜನರು ಇದರ ಪಠಣ ಪಾಠನ ಪಾರಾಯಣ ಪ್ರವಚನಾದಿಗಳನ್ನು ಆದರಾತಿಶಯದಿಂದ ಮಾಡುತ್ತಲೇ ಇರುತ್ತಾರೆ.

ಅದರಲ್ಲಿಯೂ ಚೈತನ್ಯಮತಾನುಯಾಯಿಗಳಾದ ಗೌಡೀಯ ವೈಷ್ಣವರಿಗೆಲ್ಲ ಈ ಪುರಾಣವು ಪರಮಪ್ರಮಾಣವೂ ಪರಮಮಾನನೀಯವೂ ಪ್ರತಿನಿತ್ಯಪೂಜನೀಯವೂ ಮನನೀಯವೂ ಆಗಿವೆ. ಸ್ಕಂದ ಪುರಾಣದ ಶಿವರಹಸ್ಯಖಂಡದಲ್ಲಿ ಬ್ರಹ್ಮವೈವರ್ತವು ಸೂರ್ಯಮಾಹಾತ್ಮ್ಯ ಪ್ರಶಂಸನ ಪರವೆಂದು ಹೇಳಲಾಗಿದೆ. ಆದರೆ ಈಗ ಉಪಲಬ್ಧವಿದ್ದ ಬ್ರಹ್ಮವೈವರ್ತದಲ್ಲಿ ಪ್ರಾಮುಖ್ಯವಾಗಿ ರಾಧಾಕೃಷ್ಣರ ಚೇತಶ್ಚಮತ್ಕಾರವಾದ ಪವಿತ್ರಚರಿತ್ರದ ಸುಚಾರು ಚಿತ್ರಣವಿದ್ದುದು ಸುಜ್ಞವಾಚಕರಿಗೆ ಗೋಚರವಾಗುತ್ತದೆ.

ಕೃಷ್ಣನಿಗಿಂತ ಇಲ್ಲಿ ರಾಧಾದೇವಿಯ ಮಹಾಮಹಿಮೆ ಅಧಿಕಾಧಿಕವಾಗಿ ಬಣ್ಣಿಸಲ್ಪಟ್ಟಿದೆ. ಈ ಬ್ರಹ್ಮವೈವರ್ತದಲ್ಲಿ ಶ್ರೀಕೃಷ್ಣನೇ ಪರಾತ್ಪರನಾದ ಪರಬ್ರಹ್ಮ ಎಂದು ನಿಷ್ಕೃಷ್ಟವಾಗಿ ಹೇಳಲ್ಪಟ್ಟಿದೆ. ಈ ರಾಧಾಕೃಷ್ಣರ ನಿತ್ಯನಿರಂತರ ವಾಸಸ್ಥಳ ಎಂದರೆ ಅತ್ಯುತ್ತಮವಾದ ಗೋಲೋಕ ಎಂದು ಪ್ರತಿಪಾದಿತವಾಗಿದೆ.

ಈ ಬ್ರಹ್ಮವೈವರ್ತದ ಪ್ರಕೃತಿಖಂಡ ಹಾಗೂ ಗಣೇಶಖಂಡಗಳಲ್ಲಿ ತಾಂತ್ರಿಕಸಾಮಗ್ರಿಯು ಅಧಿಕಾಧಿಕವಾಗಿ ನಿರ್ದಿಷ್ಟವಾಗಿದೆ. ಈ ತಾಂತ್ರಿಕಭಾಗವು ಒಂಬತ್ತು ಹತ್ತನೆಯ ಶತಮಾನದ ಮಧ್ಯಭಾಗದಲ್ಲಿ ತಾಂತ್ರಿಕರಿಂದ ಸೇರಿಸಲ್ಪಟ್ಟಿರಬಹುದು ಎಂದು ವಾರಾಣಸಿಯ ಸಂಪೂರ್ಣಾ-ನಂದ ಸಂಸ್ಕೃತ ವಿಶ್ವವಿದ್ಯಾಲಯದ ಪುರಾಣ ಇತಿಹಾಸ ವಿಭಾಗದ ಅಧ್ಯಕ್ಷರಾದ ಶ್ರೀಕೃಷ್ಣಮಣಿ ತ್ರಿಪಾಠಿಗಳು ಅಭಿಪ್ರಾಯ ಪಟ್ಟಿದ್ದಾರೆ.

ರಾಧಾವಲ್ಲಭೀಯ ಸಂಪ್ರದಾಯಾನುಸಾರಿಯಾದ ಶ್ರೀರಾಧಾ ಉಪಾಸನೆಯ ನಿರ್ದೇಶನವು ಇದರಲ್ಲಿ ಇರುವುದರಿಂದ ಇದರಲ್ಲಿಯ ಕೆಲವು ಭಾಗವು ೯-೧೦ನೇ ಶತಮಾನದಲ್ಲಿ ಈ ಪುರಾಣ ಶರೀರಾಂತಃಪ್ರವೇಶಿತವಾಗಿರಬಹುದೆಂದು ಕೆಲವು ವಿದ್ವಾಂಸರು ವಾದಿಸುತ್ತಾರೆ. ಆದರೆ ಆದಿಶಂಕರಾಚಾರ್ಯರಲ್ಲದೇ ಅನೇಕ ಪ್ರಾಚೀನ ನಿಬಂಧಕಾರರೂ ಸ್ಮೃತಿಕಾರರೂ ಈ ಬ್ರಹ್ಮವೈವರ್ತದ ಪದ್ಯಗಳನ್ನು ಹೇರಳವಾಗಿ ತಮ್ಮ ನಿಬಂಧಗ್ರಂಥಗಳಲ್ಲಿ ಉದ್ಧರಿಸಿದ್ದರಿಂದ ಇದು ಉಳಿದ ಪ್ರಾಚೀನ ಪುರಾಣಗಳಂತೆ ವ್ಯಾಸ ರಚಿತವಾಮದರಿಂದ ಅವುಗಳಷ್ಟೇ ಎಂದರೆ ಕ್ರಿಸ್ತಪೂರ್ವ ಮೂರುಸಾವಿರ ವರ್ಷದಷ್ಟು ಮೂಲಬ್ರಹ್ಮಪುರಾಣವು ಪ್ರಾಚೀನವೂ ಸಮೀಚೀನವೂ ಆಗಿದೆ. ಇದೇ ವೈದಿಕ ವಿಮರ್ಶಕ ವಿದ್ವಾಂಸರ ವಿಚಿತೋಚಿತ ಅಭಿಪ್ರಾಯವಾಗಿದೆ. ಅನಂತರ ಕ್ರಿಸ್ತಶಕದ ಆರು ಏಳನೆಯ ಶತಮಾನಗಳಿಂದ ಹದಿನಾರನೆಯ ಶತಮಾನದವರೆಗೂ ಎಲ್ಲ ಪುರಾಣಗಳಲ್ಲಿ ಆದಂತೆ ಬಗೆಬಗೆಯ ಆವಾಪ ಉದ್ವಾಪ ಉಪದ್ವ್ಯಾಪಗಳು ಇದರಲ್ಲಿಯೂ ನಡೆದಿದ್ದರೆ ಆಶ್ಚರ್ಯವಿಲ್ಲ.

ಸ್ಮೃತಿಚಂದ್ರಿಕಾಗ್ರಂಥದಲ್ಲಿ ಬ್ರಹ್ಮವೈವರ್ತಪುರಾಣದ (೧೫೦೦) ಹದಿನೈದು ನೂರು ಸಾಲುಗಳನ್ನು ಎತ್ತಿಕೊಳ್ಳಲಾಗಿದೆ. ಮತ್ತು ಹೇಮಾದ್ರಿಯ ಚತುರ್ವರ್ಗ-ಚಿಂತಾಮಣಿ, ಮಾಧವಾಚಾರ್ಯರ ಕಾಲನಿರ್ಣಯ ಗ್ರಂಥಗಳಲ್ಲಿ ಬ್ರಹ್ಮವೈವರ್ತದ ಅವತರಣಿಕೆಗಳನ್ನು ಹೇರಳವಾಗಿ ಉದಾಹರಿಸಿದ್ದು ಕಂಡುಬರುತ್ತದೆ. ಇವಲ್ಲದೆ ವ್ರತಕಾಲ ವಿವೇಕ, ರಾಸಯಾತ್ರಾವಿವೇಕ, ಸ್ಮೃತಿತತ್ತ್ವ, ಕಾಲ ಸಾರ, ವರ್ಷಕ್ರಿಯಾ ಕಾಮುದೀ, ಹರಿಭಕ್ತಿವಿಲಾಸ ಮುಂತಾದ ಅನೇಕ ಪರವರ್ತಿಧರ್ಮಶಾಸ್ತ್ರಗ್ರಂಥಕಾರರು ಬ್ರಹ್ಮವೈವರ್ತ ಪುರಾಣದ ಅನೇಕ ಪದ್ಯಗಳನ್ನು ತಮ್ಮ ವಿವಕ್ಷಿತಾರ್ಥ ಸಾಧನೆಗೆ ಪರಮಪ್ರಮಾಣಭೂತವಾಗಿ ಉದಾಹರಿಸುತ್ತಾರೆ. ಇದರ ಮೇಲಿಂದ ಈ ಪುರಾಣವು ಪ್ರಾಚೀನವೂ ಸಕಲ ವಿದ್ವನ್ಮಾನ್ಯವೂ ಪ್ರಮಾಣ-ಮೂರ್ಧನ್ಯವೂ ಆಗಿತ್ತೆಂಬುದು ನಿಚ್ಚಳವಾಗಿ ತಿಳಿದುಬರುತ್ತದೆ.

ಶ್ರೀರಾಧಾಕೃಷ್ಣರ ದಿವ್ಯಾನುಭಾವವನ್ನೂ ಮಹಾಲಕ್ಷ್ಮೀದೇವಿಯಿಂದ ಅಭಿಮನ್ಯವಾಗಿ ತತ್ಸ್ವರೂಪಿಣಿ ಎಂದು ಬಣ್ಣಿಸಲ್ಪಟ್ಟ ಪ್ರಕೃತಿಯ ಪ್ರಭಾವ ಪ್ರಾಧಾನ್ಯ ಪ್ರಾಶಸ್ತ್ಯಗಳನ್ನೂ ಇಲ್ಲಿ ಬಿಂಬಿಸಿ ಚಿತ್ರಿಸಲಾಗಿದೆ. ಈ ಪುರಾಣದಲ್ಲಿ ಗಣೇಶನೂ ವಿಷ್ಣುವಿನ ಅವತಾರವೆಂದು ಹೇಳಿ 'ಸಾಮಾನಿ ಸರ್ವಾಣಿ ಯಮಾವಿಶಂತಿ ತಂ ವೈ ವಿಷ್ಣುಂ ಪರಮಮುದಾಹರಂತಿ' 'ಯದ್ಯದ್ವಿಭೂತಿ ಮತ್ಸತ್ತ್ವಂ, ತತ್ರತತ್ರಸ್ಥಿತೋ ವಿಷ್ಣುಃ ತತ್ಛಕ್ತಿ ಪ್ರಬೋಧಕಃ' ಎಂಬ ನಿಗಮಾಗಮೋಕ್ತಿಗಳಿಗೆ ನಿದರ್ಶನವನ್ನು ಒದಗಿಸುತ್ತದೆ ಈ ಪುರಾಣ.

ಒಟ್ಟಾರೆ ಈ ಬ್ರಹ್ಮವೈವರ್ತ ಪುರಾಣವು ಮಾನವನ ಸರ್ವಾಂಗೀಣ ಅಭ್ಯುದಯ ಸರ್ವತೋಮುಖವಿಕಾಸ ಹಾಗೂ ಆಧ್ಯಾತ್ಮಿಕ ಉನ್ನತಿ ಆಗಬೇಕೆಂಬ ಘನೋದ್ದೇಶದಿಂದ ಶ್ರೀನಾರಾಯಣಾವತಾರಿಗಳಾದ ಭಗವಾನ್ ಶ್ರೀಬಾದರಾಯಣರಿಂದ ಬರೆಯಲ್ಪಟ್ಟಿದೆ.

ವೇದವ್ಯಾಸ ದೇವರಿಂದ ರಚಿಸಲ್ಪಟ್ಟ ಹದಿನೆಂಟೂ ಪುರಾಣಗಳನ್ನು ಕನ್ನಡೀ- ಕರಿಸುವ ಘನೋದ್ದೇಶದಿಂದ ಕಾಲುಶತಮಾನದ ಹಿಂದೆ ನಾನು ಪ್ರವೃತ್ತನಾಗಿದ್ದೆ. ಒಂದು ವಿಶ್ವವಿದ್ಯಾಲಯ, ಮಠ ಮಾನ್ಯದವರು ಮಾಡಬೇಕಾದ ಈ ಮಹಾಕಾರ್ಯವನ್ನು ಏಕಾಕಿಯಾಗಿ ದರಿದ್ರನಾದ ನಾನು ಎತ್ತಿಕೊಂಡು ಈಗ ಇಪ್ಪತ್ತೈದು ವರ್ಷಗಳಿಂದ ಹೋರಾಡುತ್ತಿದ್ದೇನೆ. ಘನಸರಕಾರದವರು ಹದಿನೆಂಟೂ ಪುರಾಣಗಳಿಗೆ ಸಹಾಯ ಸಲ್ಲಿಸುತ್ತೇವೆಂದು ಹೇಳಿ ಕೆಲವೇ ಪುರಾಣಗಳಿಗೆ ಸಹಾಯ ನೀಡಿ ನಿಲ್ಲಿಸಿಬಿಟ್ಟರು. ದಾರಿದ್ರ್ಯ ದುರವಸ್ಥೆಗಳಲ್ಲಿ ತೊಳಲಾಡುತ್ತಿರುವ ನಾನು ಹತ್ತು ವರ್ಷ ಪುರಾಣ ಪ್ರಕಾಶನ ಕಾರ್ಯವನ್ನು ಅನಿವಾರ್ಯವಾಗಿ ನಿಲ್ಲಿಸಬೇಕಾಯಿತು.

ಆದರೆ ಬೆಂಗಳೂರು, ಬಳ್ಳಾರಿ, ಹೊಸಪೇಟ, ಶಾಬಾದ, ಶಿವಮೊಗ್ಗ, ಭದ್ರಾವತಿ, ಗುಲ್ಬರ್ಗಾ ಮುಂತಾದ ಊರುಗಳಲ್ಲಿ ನಮ್ಮ ಪುರಾಣಪ್ರವಚನ ಉಪನ್ಯಾಸಗಳಿಂದ ಪ್ರಭಾವಿತರಾದ ಆಸ್ತಿಕ ಭಾವುಕ ಭಕ್ತಜನರು ಮತ್ತೆ ಪುರಾಣ ಪ್ರಕಾಶನವನ್ನು ಪ್ರಾರಂಭಿಸಿರಿ ಎಂದು ಒತ್ತಾಯ ಪಡಿಸಿದ್ದರಿಂದ ಅವರೆಲ್ಲರ ಬಿನ್ನಹದ ಮೇರೆಗೆ ಮತ್ತೆ ಪುರಾಣಪ್ರಕಾಶನದ ಕಾರ್ಯವನ್ನು ಪುನಃ ಎತ್ತಿಕೊಂಡೆ. ಇದೊಂದು ಹಿಮಾಲಯ ಸಾಹಸ. ವಿಶಿಷ್ಟ ಶ್ರೀಮಂತ ಉದಾರಿ ಜನರ ಸಹಾಯ ಸಹಕಾರವಿಲ್ಲದೆ ಇದನ್ನು ನಿಸ್ತರಿಸುವುದು ದುಸ್ತರ.

ಒಂದು ಪುರಾಣವನ್ನು ಮುದ್ರಿಸಬೇಕಾದರೆ ಮೊದಲು ಮದ್ರಾಸ್, ಕಲಕತ್ತಾ, ಬರೋಡಾ, ತಂಜಾವೂರು, ಮೈಸೂರು, ಮುಂಬೈ ಮುಂತಾದ ನಗರಗಳಲ್ಲಿ ಹಾಗೂ ಪ್ರಾಚೀನ ಸಾಂಪ್ರದಾಯಿಕ ಪಂಡಿತರ ಮನೆಗಳಲ್ಲಿ ಇದ್ದ ಜೀರ್ಣ ಶೀರ್ಣತಾಡವಾಲೆ ಗ್ರಂಥಗಳನ್ನು ಓದಬೇಕು. ಅನಂತರ ಅವರ ಅನುಮತಿ ತೆಗೆದುಕೊಂಡು ಪಂಡಿತರ ಸಹಾಯದಿಂದ ನಕಲು ಮಾಡಿಕೊಳ್ಳಬೇಕು. ಆ ಎಲ್ಲ ಬೇರೆ ಬೇರೆ ತಾಡವಾಲೆಗ್ರಂಥಗಳ ನಕಲಿ ಪ್ರತಿಗಳನ್ನು ಪಂಡಿತ ಮಂಡಲಿಯೊಂದಿಗೆ ಕೂಡಿ ಸಂಶೋಧನ ಮಾಡಬೇಕು. ಶುದ್ಧಪ್ರತಿಯನ್ನು ಸಿದ್ಧಗೊಳಿಸಬೇಕು. ಅನಂತರ ಅನೇಕ ಪಂಡಿತರ ಸಹಾಯದಿಂದ ಕನ್ನಡೀಕರಿಸಿ ಅನಂತರ ಮುದ್ರಣಕ್ಕೆ ಕೊಡಬೇಕು. ಇದು ಪುರಾಣ- ಪ್ರಕಾಶನದ ಮಹಾಕಾರ್ಯದ ಮೊದಲನೆ ಘಟ್ಟ. ಇದು ಬಹುವ್ಯಯಸಾಧ್ಯ ಮತ್ತು ಬಹುಶ್ರಮ ಸಾಧ್ಯ. ಅನಂತರ ಕಾಗದ, ಅಕ್ಷರಜೋಡಣೆ, ಪ್ರೂಫ್‌ರೀಡಿಂಗ್, ಪ್ರಿಂಟಿಂಗ್, ಬೈಂಡಿಂಗ್ ಮೊದಲಾದವೆಲ್ಲ ಎರಡನೆಯ ಹಂತ. ಲಕ್ಷಾವಧಿ ರೂಪಾಯಿ ವೆಚ್ಚದ ಈ ದುಸ್ತರ ಕಾರ್ಯವನ್ನು ನಿಸ್ತರಿಸುವುದು ಹೇಗೆ ಎಂದು ನಾನು ಚಿಂತಾಕ್ರಾಂತನಾಗಿ ನಿಂತು- ಕೊಂಡಾಗ ಬೆಂಗಳೂರಿನ ಶ್ರೀಮಂತ ಧೀಮಂತ ಕೊಡುಗೈ ದಾನಿಗಳೊಬ್ಬರು,

ಶ್ರೀಯುತ ಅನಂತರಾಯರ ಪ್ರಯತ್ನದಿಂದ ಎಲ್ಲ ಹಳೆ ಹೊಸ ಪುರಾಣಗಳನ್ನು ಮುದ್ರಿಸಿಕೊಡುವ ಮಹಾಕಾರ್ಯಕ್ಕೆ ಮುಂದೆ ಬಂದರು.

ಅವರೇ 'ಮಹಾದಾನಿ' ಶ್ರೀ ಕೆ.ಎಲ್. ಶ್ರೀಹರಿ ಖೋಡೆಯವರು. ಅವರು ಈ ಮೊದಲು ಮಾಡಿದ ಗಾಯತ್ರೀಯಜ್ಞವನ್ನು ಬೆಂಗಳೂರಿನ ಜನತೆ ಮರೆಯುವಂತಿಲ್ಲ. **ಶ್ರೀ ೧೦೮ ಶ್ರೀ ಪೇಜಾವರ ಶ್ರೀಗಳವರು** ನಡೆಸುವ ಪೂರ್ಣಪ್ರಜ್ಞ ವಿದ್ಯಾಪೀಠಕ್ಕೆ ಅವರು ಸಲ್ಲಿಸಿದ, ಸಲ್ಲಿಸುತ್ತಲಿರುವ ಸೇವೆ ಸಹಾಯ ಸಹಕಾರಗಳು ವರ್ಣನಾತೀತ. ಚಿರಸ್ಮರಣೀಯ. ಇವಲ್ಲದೇ ಅವರು ಮಾಡಿದ ಮಾಡುತ್ತಲಿರುವ ಅನೇಕಾನೇಕ ಲೋಕೋಪಕಾರಕ, ಸರ್ವಜನೋಪಯುಕ್ತ, ಧಾರ್ಮಿಕ, ಸಾಮಾಜಿಕ, ಸಾಂಸ್ಕೃತಿಕ, ನೈತಿಕ, ಆಧ್ಯಾತ್ಮಿಕ ಕಾರ್ಯಗಳೆಲ್ಲವೂ ಅತ್ಯಂತ ಯೋಗ್ಯ ಮತ್ತು ಸರ್ವಶ್ಲಾಘ್ಯ. ಅವರು ಮಾಡಿದ ಮಾಡುತ್ತಲಿರುವ ಪುಣ್ಯಕಾರ್ಯಗಳನ್ನು ವರ್ಣಿಸಲು ನನ್ನಲ್ಲಿ ಶಬ್ದಗಳೇ ಇಲ್ಲ. **ಅವರ ಕುಲಸ್ವಾಮಿಯಾದ ಪಾಂಡುರಂಗ** ವಿಠ್ಠಲನು ಅವರಿಗೆ ಮತ್ತು ಅವರ ಕುಟುಂಬದವರಿಗೆ ಉತ್ತರೋತ್ತರ ಉತ್ಕರ್ಷವನ್ನೂ ಆಯುಷ್ಯ, ಆರೋಗ್ಯ ಐಶ್ವರ್ಯಗಳನ್ನೂ ಕೊಟ್ಟು ಕರುಣೆಯಿಂದ ಕೈಹಿಡಿದು ಕಾಪಾಡಲಿ ಎಂದು ಶ್ರೀಹರಿಯಲ್ಲಿ ಪ್ರಾರ್ಥಿಸುತ್ತೇನೆ.

ಶ್ರೀವೇದವ್ಯಾಸರಚಿತವಾದ ಎಲ್ಲ ಹದಿನೆಂಟು ಪುರಾಣ ಪ್ರಕಾಶನದ ಈ ನಮ್ಮ ಕಾರ್ಯವು ಯಶಸ್ವಿಯಾಗಲು ತಿರುಪತಿಯ ಶ್ರೀನಿವಾಸ ದೇವರೇ ಮೊದಲು ನಮಗೆ ಅಭಯಹಸ್ತ ನೀಡಿದ್ದಾನೆ. ಈ ಮಹಾಕಾರ್ಯಕ್ಕೆ ಶ್ರೀಹರಿಖೋಡೆಯವರ ಬೆಂಬಲದಿಂದ, ನಾವು ಕೈಕೊಂಡ ಶ್ರೀವ್ಯಾಸ ರಚಿತ ಅಷ್ಟಾದಶ ಮಹಾಪುರಾಣಗಳ ಅನುವಾದ ಗ್ರಂಥಗಳ ಮುದ್ರಣ ಪ್ರಕಾಶನಾದಿ ಪುಣ್ಯಕರ ಮತ್ತು ಸರ್ವಜನೋಪಯುಕ್ತವಾದ ಮಹಾಕಾರ್ಯವು ನಿರ್ವಿಘ್ನ-ವಾಗಿ ನೆರವೇರುವುದೆಂದು ಭಾವಿಸಿ ಭರವಸೆಯಿಂದ ಈ ಭಗೀರಥ ಸಾಹಸದಲ್ಲಿ ಮುಂದುವರಿಯುತ್ತಿದ್ದೇವೆ.

ಈ ಪುರಾಣ ಗ್ರಂಥಗಳ ಪರಿಶೋಧನೆ, ಪರಿವರ್ತನೆ, ಪ್ರೂಫ್‌ರೀಡಿಂಗ್, ಕಠಿಣ ಪೌರಾಣಿಕ, ಪದ್ಯಪ್ರಕರಣ, ಪ್ರಘಟ್ಟಗಳ ಅರ್ಥಾಪಣೆ, ಯಥಾರ್ಥ ಅರ್ಥಾವಧಾರಣಾದಿ ಮಹತ್ವದ ಮತ್ತು ವಿದ್ವದೈಕಸಾಧ್ಯವಾದ ಈ ಪೌರಾಣಿಕ ಪವಿತ್ರ ಕಾರ್ಯದಲ್ಲಿ ಎಲ್ಲ ರೀತಿಯಿಂದಲೂ ನಮಗೆ ಸಹಕರಿಸಿದ ವಿದ್ವನ್ಮಂಡಲಿಗೆ ನಾನು ಕೃತಜ್ಞತಾಪೂರ್ವಕವಾಗಿ ವಂದನೆಗಳನ್ನು ಅರ್ಪಿಸುತ್ತೇನೆ.

ನಮ್ಮ ಎಲ್ಲ ಪುರಾಣಗ್ರಂಥಗಳ ಸಂಶೋಧನೆ, ಭಾಷಾಂತರ, ಶುದ್ಧೀಕರಣ ಮೊದಲಾದವುಗಳಲ್ಲಿ ನಮಗೆ ಮುಖ್ಯ ಸಹಾಯಕರಾದ ವಿದ್ವಾನ್ ಹಯವದನ ಪುರಾಣಿಕ್, ಪಂ. ಸಾಣೂರಭೀಮಭಟ್, ಡಾ|| ಹೆಚ್. ಶ್ರೀನಿವಾಸ್, ಪಂ. ರಾಮವಿಠ್ಠಲಾಚಾರ್ಯ ಪಂಡಿತ ಅನಂತತಂತ್ರಿ, ಪಂಡಿತ ಬದರೀ ಆಚಾರ್ಯ, ಪಂಡಿತ ಸುರೇಶಾಚಾರ್ಯ, ಪಂಡಿತ ವಾದಿರಾಜಾಚಾರ್ಯ, ಪಂಡಿತ ಶ್ರೀಹರಿ ಆಚಾರ್ಯ,

**ಪಂಡಿತ ಮಾದನೂರ ನಾರಾಯಣ ಆಚಾರ್ಯ, ಪಂಡಿತ ಅಣ್ಣಯ್ಯಾಚಾರ್ಯ, ಪಂಡಿತ ಶಾಂರ್ಗಪಾಣಿ ಆಚಾರ್ಯ, ಪಂಡಿತ ಮುರಲೀಧರ ಆಚಾರ್ಯ, ಸೌಭಾಗ್ಯವತೀ ವಾಣೀ, ಪಂಡಿತ ನರಸಿಂಹಾಚಾರ್ಯ, ಪಂಡಿತ ರಂಗನಾಥಾಚಾರ್ಯ** ಮುಂತಾದ ಪಂಡಿತ ಪ್ರಕಾಂಡರೆಲ್ಲರ ಉಪಕಾರವನ್ನು ಹೃದಯಪೂರ್ವಕವಾಗಿ ನೆನೆಯುತ್ತೇನೆ.

ಮುಖ್ಯವಾಗಿ ಈ ಬ್ರಹ್ಮವೈವರ್ತ ಮಹಾಪುರಾಣದ ಅಭಿಲೇಖನ, ಸಂಶೋಧನ, ಪರಿವರ್ತನ, ಪರಿಷ್ಕರಣ, ಶುದ್ಧೀಕರಣ ಮೊದಲಾದ ಎಲ್ಲ ಕಾರ್ಯಗಳನ್ನೂ ಪರಿಶ್ರಮದಿಂದ ಮಾಡಿದ ಪೂರ್ಣಪ್ರಜ್ಞ ವಿದ್ಯಾಪೀಠದ ನಿವೃತ್ತ ಪ್ರಾಚಾರ್ಯರಾದ **ಪಂಡಿತ ಸಾರ್ವಭೌಮ ಹಯವದನ ಪುರಾಣಿಕರಿಗೆ** ನಾನು ಅತ್ಯಂತ ಕೃತಜ್ಞತೆಯಿಂದ ಪ್ರಣಾಮಗಳನ್ನು ಅರ್ಪಿಸುತ್ತೇನೆ.

ಈ ಪುರಾಣ ಪುಸ್ತಕವನ್ನು ಅತ್ಯಲ್ಪ ಅವಧಿಯಲ್ಲಿ ಅತ್ಯಂತ ಸುಂದರವಾದ ಅಕ್ಷರಗಳಲ್ಲಿ ಅಕ್ಷರಜೋಡಣೆ ಮಾಡಿಕೊಟ್ಟ **ವಾಗರ್ಥ ಪ್ರಿಂಟಾನಿಕ್ಸ್**‌ರವರಿಗೆ ನಾನು ಅತ್ಯಂತ ಆಭಾರಿ-ಯಾಗಿದ್ದೇನೆ. ಈ ಮಹಾಪುರಾಣವನ್ನು ಅತ್ಯಂತ ಶ್ರದ್ಧೆಯಿಂದ ಬಹಳ ಅಚ್ಚುಕಟ್ಟಾಗಿ ಮುದ್ರಿಸಿಕೊಟ್ಟಿರುವ ಶ್ರೀ **ವೆಂಕಟೇಶ್ವರ ಪ್ರಿಂಟರ್ಸ್**, ನಂ. 35, ನ್ಯೂ ಕ್ರಾಸ್‌ರೋಡ್, *(ಗಣಪತಿ ವಿದ್ಯಾಮಂದಿರ)* ಚಿಕ್ಕಮಾವಳ್ಳಿ, ಬೆಂಗಳೂರು-560-004. ಇದರ ಮಾಲೀಕರಾದ **ಮುದ್ರಣ ಪ್ರಶಸ್ತಿ ವಿಜೇತರಾದ ಶ್ರೀಮಾನ್ ಕೆ.ವಿ. ಸತ್ಯನಾರಾಯಣ ಮತ್ತು ಕುಟುಂಬದವರಿಗೆ** ಶ್ರೀ ಲಕ್ಷ್ಮೀವೆಂಕಟೇಶ್ವರ ಸ್ವಾಮಿಯು ಸಕಲ ಸನ್ಮಂಗಳವನ್ನು ದಯಪಾಲಿಸಲಿ.

ಇದೆಲ್ಲಕ್ಕೂ ಬಹುಮುಖ್ಯವಾಗಿ ನನ್ನನ್ನು ದಾನಧರೂಣ ಹೃದಯವೈಶಾಲ್ಯ ಕವಿ ಹಾಗೂ ಕೈಗಾರಿಕೋದ್ಯಮಿ ಶ್ರೀಮಾನ್ ಕೆ.ಎಲ್. ಶ್ರೀಹರಿಖೋಡೆಯವರ ಬಳಿಗೆ ಕರೆದುಕೊಂಡು ಹೋಗಿ ಅವರಿಗೆ ಈ ಕಾರ್ಯದ ಮಹತ್ವ ಹಾಗೂ ಆವಶ್ಯಕತೆಗಳನ್ನು ತಿಳಿಸಿ ಅವರಿಂದ ಪುರಾಣಪ್ರಕಾಶನಕ್ಕೆ ಪರ್ಯಾಪ್ತವಾದ ಸಹಾಯಧಾರೆ ಹರಿದುಬರುವಂತೆ ಮಾಡಿದ **ಶ್ರೀಮಾನ್ ಅನಂತರಾವ್** ಮತ್ತು ಕುಟುಂಬದವರಿಗೂ ನಾನು ಆಭಾರಿಯಾಗಿದ್ದೇನೆ.

೩೦-೩-೯೮
ಹುಬ್ಬಳ್ಳಿ

**ಶ್ರೀ ಪಂಢರೀನಾಥಾಚಾರ್ಯ ಗಲಗಲಿ**
*ರಾಜ್ಯಪ್ರಶಸ್ತಿ, ರಾಷ್ಟ್ರಪ್ರಶಸ್ತಿ,*
*ಶ್ರೀ ವಿಶ್ವೇಶತೀರ್ಥ ಪ್ರಶಸ್ತಿ ವಿಜೇತರು*
ಶಾಂತಿಕಾಲನಿ, ವಿಶ್ವೇಶ್ವರನಗರ,
ಹುಬ್ಬಳ್ಳಿ - ೫೮೦ ೦೩೨

॥ ಶುಭಮಸ್ತು ॥

ಶ್ರೀವೇದವ್ಯಾಸಃ ಪ್ರಸೀದತು

# ಬ್ರಹ್ಮವೈವರ್ತಮಹಾಪುರಾಣ

## ವಿಷಯಾನುಕ್ರಮಣಿಕೆ - ಬ್ರಹ್ಮಖಂಡ-ಪ್ರಕೃತಿಖಂಡ-ಗಣಪತಿಖಂಡ

## ಬ್ರಹ್ಮಖಂಡ

ಅಧ್ಯಾಯ ಪುಟ ಸಂಖ್ಯೆ

*ಬ್ರಹ್ಮಖಂಡ ಸಮಾಪ್ತಿ*

# ಪ್ರಕೃತಿಖಂಡ

*ಪ್ರಕೃತಿಖಂಡ ಸಮಾಪ್ತಿ*

# ಗಣಪತಿ ಖಂಡ

*ಗಣಪತಿಖಂಡ ಸಮಾಪ್ತಿ .*

ಬ್ರಹ್ಮವೈವರ್ತಮಹಾಪುರಾಣದಲ್ಲಿನ ಒಟ್ಟು ಎರಡು ಭಾಗಗಳಲ್ಲಿ ಪ್ರಥಮಭಾಗ ಸಮಾಪ್ತಿ

ಮಹರ್ಷಿ ವೇದವ್ಯಾಸ ಪ್ರಣೀತ

# ಬ್ರಹ್ಮವೈವರ್ತ ಮಹಾಪುರಾಣ

## ಬ್ರಹ್ಮಖಂಡ

**ಅನುಕ್ರಮಣಿಕೆ**

**ಅಧ್ಯಾಯ-೧**

**ಗಣೇಶ ಬ್ರಹ್ಮೇಶ ಸುರೇಶ ಶೇಷಾಃ**
**ಸುರಾಶ್ಚ ಸರ್ವೇ ಮನವೋ ಮುನೀಂದ್ರಾಃ ।**
**ಸರಸ್ವತೀ ಶ್ರೀ ಗಿರಿಜಾದಿಕಾಶ್ಚ ಯಂ**
**ನಮಂತಿ ದೇವಂ ಪ್ರಣಮಾಮಿ ತಂ ವಿಭುಂ ॥**

ಗಣೇಶ ಬ್ರಹ್ಮ ರುದ್ರ ಇಂದ್ರ ಶೇಷ ಮುಂತಾದ ಎಲ್ಲ ದೇವತೆಗಳೂ ಮನುಗಳೂ ಮುನಿಶ್ರೇಷ್ಠರೂ ಸರಸ್ವತಿ ಲಕ್ಷ್ಮಿ ಪಾರ್ವತಿ ಮುಂತಾದವರೂ ಸರ್ವವ್ಯಾಪ್ತನಾದ ಯಾವ ದೇವನಿಗೆ ನಮಸ್ಕರಿಸುವವರೋ ಅವನಿಗೆ ನನ್ನ ನಮನ.

ಆ ದೇವ ಸೃಷ್ಟಿಗೆ ಇಚ್ಛೆ ಮಾಡಿದೊಡನೆ ತನ್ನ ರೋಮಕೂಪಗಳಲ್ಲಿ ಮೊದಲೆ ಸೂಕ್ಷ್ಮರೂಪದಿಂದ ಅಡಗಿದ್ದ ಜಗತ್ತನ್ನು ಸ್ಥೂಲರೂಪದಿಂದ ಸೃಷ್ಟಿಸುತ್ತಾನೆ. ಸುರನರ ಮುನಿಗಳಾರೂ ಅನೇಕ ಜನ್ಮ ಸಾಧನೆಯಿಂದಲೂ ಅವನೊಲಿಮೆಯಿಲ್ಲದೆ ಸ್ವಪ್ನ-ದಲ್ಲಿಯೂ ಅವನನ್ನು ಕಾಣಲಾರರು. ತ್ರಿಗುಣರಹಿತನಾದರೂ ನೀಲರೂಪ ಆತ. ಅವನನ್ನು ನಾನು ಧ್ಯಾನಿಸುವೆನು.

ಗುಣಾತೀತನಾದ ಆ ದೇವನೆ ಕೃಷ್ಣ. ಅವನೆ ಪರಂಬ್ರಹ್ಮ, ಅಚ್ಯುತ. ಅವನಿಂದಲೆ ಪ್ರಕೃತಿ ಬ್ರಹ್ಮ ವಿಷ್ಣು ಶಿವ ಮುಂತಾದವರೆಲ್ಲ ಆವಿರ್ಭವಿಸುವರು. ಅವನಿಗೆ ನನ್ನ ವಂದನೆ.

ಭಗವಾನ್ ವಾಸುದೇವನಿಗೆ ನನ್ನ ನಮನ.

**ನಾರಾಯಣಂ ನಮಸ್ಕೃತ್ಯ ನರಂ ಚೈವ ನರೋತ್ತಮಂ ।**
**ದೇವೀಂ ಸರಸ್ವತೀಂ ವ್ಯಾಸಂ ತತೋ ಜಯಮುದೀರಯೇತ ॥**

ನಾರಾಯಣನನ್ನೂ ನರನನ್ನೂ ನರೋತ್ತಮನನ್ನೂ ಶ್ರೀದೇವಿಯನ್ನೂ ಸರಸ್ವತಿ-ಯನ್ನೂ ವೇದವ್ಯಾಸನನ್ನೂ ನಮಿಸಿ ಸರ್ವತ್ರ ಜಯದಾಯಕವಾದ ಈ ಬ್ರಹ್ಮವೈವರ್ತ ಮಹಾಪುರಾಣವನ್ನು ಪಠಿಸಬೇಕು.

ಅಮೃತಪರಮಪೂರ್ವಂ ಭಾರತೀಕಾಮಧೇನುಂ
ಶ್ರುತಿಗಣವತ್ಸೋ ವ್ಯಾಸದೇವೋ ದುದೋಹ ।
ಅತಿರುಚಿರಪುರಾಣಂ ಬ್ರಹ್ಮವೈವರ್ತಮೇತತ್
ಪಿಬತ ಪಿಬತ ಮುಗ್ಧಾ ದುಗ್ಧಮಕ್ಷಯ್ಯಮೀಷ್ಟಂ ॥

ಸರಸ್ವತಿಯೆಂಬ ಕಾಮಧೇನುವಿಗೆ ವೇದವನ್ನು ಕರುವನ್ನಾಗಿ ಮಾಡಿ ವೇದವ್ಯಾಸ ಹಾಲು ಕರೆದ. ಅಮೃತದಂಥ ಈ ಹಾಲೆ ಈ ಬ್ರಹ್ಮವೈವರ್ತಪುರಾಣ. ಶಿಶುವಿನಂಥ ಮುಗ್ಧ ಸಾಧಕರು ಇದನ್ನು ಯಥೇಚ್ಛ ಕುಡಿಯಿರಿ.

ಭಾರತ ದೇಶದಲ್ಲಿ ನೈಮಿಷಾರಣ್ಯವಿದೆ. ಅಲ್ಲಿ ಒಮ್ಮೆ ಶೌನಕಾದಿ ಮುನಿಗಳು ನಿತ್ಯ ನೈಮಿತ್ತಿಕ ಕರ್ಮಗಳನ್ನು ಮಾಡಿ ದರ್ಭಾಸನದಲ್ಲಿ ಮಂಡಿಸಿದ್ದಾರೆ. ಆಗ ಸೂತಪುತ್ರ ಬಂದ. ಅವನಿಗೆ ಮುನಿಗಳು ಆಸನವಿತ್ತು ಅತಿಥಿ ಸತ್ಕಾರ ಮಾಡಿ ಕುಶಲಪ್ರಶ್ನೆ ಮಾಡಿದರು.

ಎಲ್ಲ ಪುರಾಣಗಳ ರಹಸ್ಯವನ್ನರಿತಿದ್ದ ಆ ಸೌತಿಯಿಂದ ಶ್ರುತಿ ಸಮ್ಮತವಾದ ಪರಮಮಂಗಳಕರವಾದ ಶ್ರೀಕೃಷ್ಣ ಚರಿತ್ರೆಯನ್ನು ಕೇಳಬಯಸಿ, 'ಸೌತಿಯೇ, ನಿನಗೆ ಕ್ಷೇಮವೆ ? ನಿನ್ನಾಗಮನವೆಲ್ಲಿಂದ ? ಎಲ್ಲಿಗೆ ಹೋಗುತ್ತಿರುವೆ ? ನಿನ್ನ ದರ್ಶನ ದೊರೆತ ಈ ದಿನವೆ ಪುಣ್ಯದಿನ. ಈ ಕಲಿಯುಗದಲ್ಲಿ ಮುಮುಕ್ಷುಗಳು ತತ್ವಜ್ಞಾನರಹಿತವಾಗಿ ಸಂಸಾರದಿಂದ ಭಯಗೊಂಡಿರುವರು. ನೀನು ಎಲ್ಲ ಪುರಾಣಗಳನ್ನರಿತವ, ದಯಾಳು.

ಶ್ರೀಕೃಷ್ಣೇ ನಿಶ್ಚಲಾ ಭಕ್ತಿರ್ಯತೋ ಭವತಿ ಶಾಶ್ವತೀ ।
ತತ್ ಕಥ್ಯತಾಂ ಮಹಾಭಾಗ ಪುರಾಣಂ ಜ್ಞಾನವರ್ಧನಂ ॥

ಶ್ರೀಕೃಷ್ಣನಲ್ಲಿ ನಿಶ್ಚಲ ಭಕ್ತಿ ಉಂಟುಮಾಡುವ ಜ್ಞಾನವರ್ಧಕವಾದ ಒಂದು ಪುರಾಣವನ್ನು ಹೇಳು.

ಆ ಪುರಾಣದಲ್ಲಿ ನಿಖಿಲಪ್ರಪಂಚದ ಬೀಜರೂಪವಾದ ಪರಬ್ರಹ್ಮನ ಸ್ವರೂಪ, ಅವನು ಮಾಡುವ ಸೃಷ್ಟಿಯ ಕ್ರಮ, ಅವನ ಸಾಕಾರ ನಿರಾಕಾರ ರೂಪ, ಅವನನ್ನು ಧ್ಯಾನಿಸುವ ಬಗೆ, ಪ್ರಕೃತಿ ಗುಣತ್ರಯ ಮಹಾದಾದಿ ತತ್ವಗಳ ವಿವರ, ಗೋಲೋಕ ವೈಕುಂಠ ಶಿವಲೋಕ ಸ್ವರ್ಗಲೋಕಗಳ ವರ್ಣನೆ, ಪರಮಾತ್ಮನ ಅಂಶ ಮತ್ತು ಕಲೆಗಳು, ದೇವದೇವಿಯರ ಉತ್ಪತ್ತಿ, ಸಮುದ್ರ ಪರ್ವತ ನದಿಗಳ ಸೃಷ್ಟಿ ಪ್ರಕೃತಿಯ ಅಂಶ ಕಲೆಗಳು, ಅವುಗಳ ಚರಿತ್ರೆ ಧ್ಯಾನ ಪೂಜಾ ಸ್ತೋತ್ರಗಳು, ದುರ್ಗಾಸರಸ್ವತಿ ಲಕ್ಷ್ಮಿ ಸಾವಿತ್ರಿಯರ ವರ್ಣನೆ, ರಾಧಾಕೃಷ್ಣರ ವಿಹಾರ, ಜೀವಿಗಳ ಕರ್ಮವಿಪಾಕ ನರಕ ಸ್ವರೂಪ, ಕರ್ಮಬಂಧದಿಂದ ಮುಕ್ತಿ ಹೊಂದುವ ಬಗೆ, ಯಾವ ಕರ್ಮದಿಂದ ಯಾವ ಜನ್ಮ, ಅವುಗಳಲ್ಲಿ ಶುಭ ಅಶುಭಗಳಾವುವು, ಯಾವ ದುಷ್ಕರ್ಮಫಲ ಯಾವ ರೋಗ,

ಆ ದುಷ್ಕರ್ಮದಿಂದ ಪಾರಾಗುವ ಬಗೆ, ಮನಸಾ ತುಲಸಿ ಕಾಳಿ ಗಂಗೆ ಪೃಥ್ವೀ ದೇವಿಯರ ಚರಿತ್ರೆ, ಸಾಲಗ್ರಾಮ ಶಿಲಾಮಹಿಮೆ, ಅದರ ದಾನ, ಧರ್ಮಾಧರ್ಮ ಸ್ವರೂಪ, ಗಣೇಶನ ಚರಿತ್ರೆ, ಅವನ ಕವಚ ಸ್ತೋತ್ರ ಮಂತ್ರಗಳ ರಹಸ್ಯ ಇನ್ನಿತರ ಅಪೂರ್ವ ಆಖ್ಯಾನಗಳು ಇವೆಲ್ಲವನ್ನೂ ನಮಗೆ ಬಣ್ಣಿಸಿ ಹೇಳು.

ಪರಿಪೂರ್ಣನಾದ ಕೃಷ್ಣಪರಮಾತ್ಮ ಪುಣ್ಯಕ್ಷೇತ್ರವಾದ ಭಾರತದಲ್ಲಿ ಅವತರಿಸಿದ ಜನನದ ಭ್ರಮೆ ಉಂಟುಮಾಡಿದ ಬಗೆಯನ್ನೂ ಹೇಳು. ಅವನು ಯಾವ ಪುಣ್ಯವಂತನ ಮನೆಯಲ್ಲಿ ಅವತರಿಸಿದ ? ಯಾವ ಪುಣ್ಯವಂತಳು ಅವನನ್ನು ಹೊತ್ತು ಧನ್ಯಳಾದಳು ? ಆತ ಆವಿರ್ಭವಿಸಿ ಎಲ್ಲಿಗೆ ಹೋದ, ಏಕೆ ಹೋದ, ಹೋಗಿ ಏನು ಮಾಡಿದ ? ಹೇಗೆ ಹಿಂತಿರುಗಿ ಬಂದ ? ಯಾರ ಪ್ರಾರ್ಥನೆ ಕೇಳಿ ಭೂಭಾರ- ವಿಳುಹಿದ ? ಏನು ಧರ್ಮನಿಯಮವನ್ನು ಬೋಧಿಸಿ ಗೋಲೋಕಕ್ಕೆ ಹೋದ ? ಇವೆಲ್ಲವನ್ನೂ ಹೇಳು.

ಶ್ರುತಿಗಳಲ್ಲಿಯೂ ಸಿಗದ, ಮುನಿಗಳಿಗೂ ತಿಳಿಯಲಾಗದ ಆಖ್ಯಾನಗಳನ್ನೂ ಹೇಳು. ನಾವು ಕೇಳಿದ್ದನ್ನೂ, ಜೊತೆಗೆ, ಕೇಳದೆ ಬಿಟ್ಟಿದ್ದನ್ನೂ ಕರುಣೆಯಿಂದ ಹೇಳು. ಹಾಗೆ ಹೇಳುವವನೆ ಸದ್ಗುರುತಾನೆ ?

ಸೌತಿ— ಮುನಿಗಳೆ, ನಿಮ್ಮ ಪಾದಕಮಲ ದರ್ಶನದ ಪುಣ್ಯದ ಬಲದಿಂದ ನಾನು ಕ್ಷೇಮವಾಗಿಯೆ ಇದ್ದೇನೆ. ಸಿದ್ಧಕ್ಷೇತ್ರದಿಂದ ಬಂದಿದ್ದೇನೆ. ನಾರಾಯಣಾಶ್ರಮಕ್ಕೆ ಹೋಗುತ್ತಿದ್ದೇನೆ. ಮಧ್ಯಮಾರ್ಗದಲ್ಲಿ ನಿಮ್ಮನ್ನು ಕಂಡು ವಂದಿಸೋಣ, ಪುಣ್ಯಕರ-ವಾದ ನೈಮಿಷಾರಣ್ಯವನ್ನು ನೋಡಿ ಹೋಗೋಣ ಎಂದು ಬಂದೆ.

ದೇವ ದ್ವಿಜ ಗುರುಗಳನ್ನು ನೋಡಿ ವಂದಿಸಿದವನು ಸೂರ್ಯ ಚಂದ್ರ-ರಿರುವಷ್ಟೂಕಾಲ ಕಾಲಸೂತ್ರ ನರಕದಲ್ಲಿ ಬಿದ್ದು ನರಳುವನು.

ಹರಿ ಬ್ರಾಹ್ಮಣರೂಪದಿಂದ ಸಂಚರಿಸುತ್ತಾನೆ. ಪುಣ್ಯವಂತನು ಮಾತ್ರ ಆ ಹರಿ ರೂಪಿಯಾದ ಬ್ರಾಹ್ಮಣನನ್ನು ನಮಿಸುತ್ತಾನೆ.

ಶೌನಕರೆ, ನೀವು ಕೇಳಿದ ಎಲ್ಲ ವಿಷಯಗಳನ್ನೊಳಗೊಂಡುದು ಪುರಾಣಗಳಲ್ಲೆಲ್ಲ ಶ್ರೇಷ್ಠವಾದ ಬ್ರಹ್ಮವೈವರ್ತ. ಎಲ್ಲ ಪುರಾಣ ಉಪಪುರಾಣ ವೇದಗಳಲ್ಲಿ ಬರುವ ಎಲ್ಲ ತಪ್ಪು ಕಲ್ಪನೆಗಳನ್ನು ಈ ಪುರಾಣ ಪರಹರಿಸುತ್ತದೆ. ತತ್ವಜ್ಞಾನ ಹೆಚ್ಚಿಸಿ ವಿಷ್ಣುಭಕ್ತಿ ನೀಡುತ್ತದೆ. ಭುಕ್ತಿಮುಕ್ತಿಗಳನ್ನೂ ನೀಡುತ್ತ ಕಲ್ಪವೃಕ್ಷದಂತಿರುತ್ತದೆ.

ಜಗತ್ತಿಗೆ ಮೂಲಕಾರಣನಾದ ಪರಬ್ರಹ್ಮನನ್ನು ಯೋಗಿಗಳು, ಸಂತರು, ವೈಷ್ಣವರು ಧ್ಯಾನಿಸುತ್ತಾರೆ. ಯೋಗಿಗಳು ಸಂತರು ವೈಷ್ಣವರೆಂದರೆ ಬೇರೆ ಬೇರೆಯಲ್ಲ. ಎಲ್ಲ ಭಕ್ತರೂ ಜ್ಞಾನಪರಿಪಾಕಾನುಸಾರವಾಗಿ ಯೋಗಿಗಳು ಸಂತರು ಅಥವಾ ವೈಷ್ಣವ-ರೆನಿಸುತ್ತಾರೆ. ಸಂತರ ಸಂಗದಿಂದ ಸಂತರೂ ಯೋಗಿಗಳ ಸಂಗದಿಂದ ಯೋಗಿಗಳೂ ವೈಷ್ಣವರ ಸಂಗದಿಂದ ವೈಷ್ಣವರೂ ಆಗುತ್ತಾರೆ. ಇದೆಲ್ಲ ಬ್ರಹ್ಮಖಂಡದಲ್ಲಿದೆ.

ಪ್ರಕೃತಿ ಖಂಡದಲ್ಲಿ ದೇವ ದೇವಿಯರ ಉದ್ಭವ, ದೇವಿಯರ ಚರಿತ್ರೆ, ಜೀವರ ಕರ್ಮವಿಪಾಕ, ಶಾಲಗ್ರಾಮ ಸ್ವರೂಪ, ದೇವತೆಗಳ ಕವಚ ಸ್ತೋತ್ರಮಂತ್ರ ಪೂಜೆಗಳು, ಪ್ರಕೃತಿಯ ಲಕ್ಷಣ ಕಲೆ ಅಂಶಗಳ ನಿರೂಪಣ, ಪುಣ್ಯಪಾಪಗಳಿಗೆ ಸಿಗುವ ಶುಭಾಶುಭ ಸ್ಥಾನಗಳು, ನರಕಗಳು, ರೋಗಗಳು ಮತ್ತು ಅವುಗಳಿಂದ ಮುಕ್ತಿ ಪಡೆವ ಬಗೆ ಇವೆಲ್ಲ ವರ್ಣಿತವಾಗುತ್ತವೆ.

ಗಣೇಶ ಖಂಡದಲ್ಲಿ ಗಣೇಶನ ಜನ್ಮ. ಇದು ಬಹಳ ಅಪೂರ್ವ. ಗಣೇಶ ಭೃಗು ಸಂವಾದದಲ್ಲಿ ಸಕಲ ತತ್ವನಿರೂಪಣವಿದೆ. ಗೋಪ್ಯವಾದ ಕವಚ ಸ್ತೋತ್ರಮಂತ್ರ ತಂತ್ರಗಳ ವಿವರಗಳಿವೆ.

ಶ್ರೀಕೃಷ್ಣ ಜನ್ಮಖಂಡದಲ್ಲಿ ಶ್ರೀಕೃಷ್ಣನ ಅವತಾರ, ಅವನ ಭೂಭಾರಹರಣ ಕಾರ್ಯ, ಮಂಗಳಕರವಾದ ವಿಹಾರ, ಸಜ್ಜನರಿಗೆ ಅವನು ತೋರಿದ ಧರ್ಮಮಾರ್ಗ ಇವೆಲ್ಲ ನಿರೂಪಿತವಾಗುತ್ತವೆ.

ಹೀಗೆ ನಾಲ್ಕು ಖಂಡಗಳಲ್ಲಿ ಸರ್ವಧರ್ಮರಹಸ್ಯವನ್ನು ತಿಳಿಸುವ ಶ್ರೇಷ್ಠಪುರಾಣ ಬ್ರಹ್ಮವೈವರ್ತ. ಸಕಲರಿಗೆ ಸಕಲಾಭೀಷ್ಟಪ್ರದ.

ವಿವೃತಂ ಬ್ರಹ್ಮಕಾರ್ತ್ಸ್ನ್ಯಂ ಚ ಕೃಷ್ಣೇನ ಯತ್ರ ಶೌನಕಂ ।
ಬ್ರಹ್ಮ ವೈವರ್ತಕಂ ತೇನ ಪ್ರವದಂತಿ ಪುರಾವಿದಃ ॥

ಈ ಪುರಾಣದಲ್ಲಿ ವೇದವ್ಯಾಸ ಬ್ರಹ್ಮ ಸ್ವರೂಪವನ್ನು ಪೂರ್ಣ ವರ್ಣಿಸಿರುವುದರಿಂದ ಇದಕ್ಕೆ ಬ್ರಹ್ಮವೈವರ್ತವೆಂದು ಹೆಸರಾಯಿತು.

ಇದು ಗೋಲೋಕದಲ್ಲಿ ಕೃಷ್ಣನಿಂದ ಬ್ರಹ್ಮನಿಗೆ ಉಪದೇಶಗೊಂಡು ಪುಷ್ಕರದಲ್ಲಿ ಬ್ರಹ್ಮನಿಂದ ಧರ್ಮನಿಗೂ, ಧರ್ಮನಿಂದ ತನ್ನ ಮಗನಾದ ನಾರಾಯಣನಿಗೂ, ನಾರಾಯಣನಿಂದ ನಾರದನಿಗೂ, ನಾರದನಿಂದ ಗಂಗಾ ತೀರದಲ್ಲಿ ವೇದವ್ಯಾಸನಿಗೂ ಉಪದಿಷ್ಟವಾಯಿತು.

ವ್ಯಾಸನು ಸಂಕ್ಷಿಪ್ತವಾದ ಈ ಪುರಾಣವನ್ನು ಹದಿನೆಂಟು ಸಾವಿರ ಶ್ಲೋಕಗಳಿಗೆ ವಿಸ್ತಾರಗೊಳಿಸಿ ಸಿದ್ಧಕ್ಷೇತ್ರದಲ್ಲಿ ನನಗೆ ಉಪದೇಶಿಸಿದ. ಅದನ್ನೇ ನಾನು ನಿಮಗೆ ಹೇಳುತ್ತಿದ್ದೇನೆ, ಕೇಳಿ.

ಈ ಅಧ್ಯಾಯದ ಶ್ರವಣಕ್ಕೆ ಪೂರ್ಣ ಪುರಾಣ ಶ್ರವಣದ ಫಲವಿದೆ.

**ಇಲ್ಲಿಗೆ ಬ್ರಹ್ಮ ವೈವರ್ತಪುರಾಣದ ಸೌತಿ ಶೌನಕ ಪ್ರಶ್ನೋತ್ತರ ರೂಪವಾದ ಬ್ರಹ್ಮಖಂಡದಲ್ಲಿ ಅನುಕ್ರಮಣಿಕೆ ಎಂಬ ಒಂದನೆ ಅಧ್ಯಾಯ ಮುಗಿಯಿತು.**

# ಪರಬ್ರಹ್ಮ ನಿರೂಪಣ

## ಅಧ್ಯಾಯ-೨

ಶೌನಕ— ಸೌತಿ, ಎಂಥ ಅದ್ಭುತ ವಿಷಯಗಳನ್ನು ನಾವು ಕೇಳುತ್ತಿದ್ದೇವೆ! ಎಲ್ಲವನ್ನೂ ಬಿಡಿಸಿ ಹೇಳುತ್ತ ಉತ್ತಮವಾದ ಬ್ರಹ್ಮಖಂಡವನ್ನು ವಿವರಿಸು.

ಸೌತಿ— ಅಪಾರ ತೇಜಸ್ಸಿನ ಗುರು ವೇದವ್ಯಾಸರ ಪಾದಕಮಲಗಳಿಗೆ ವಂದಿಸಿ ಶ್ರೀಹರಿಯನ್ನೂ ದೇವತೆಗಳನ್ನೂ ಮುನಿಗಳನ್ನೂ ನಮಿಸಿ ಸನಾತನ ಧರ್ಮ ರಹಸ್ಯಗಳನ್ನರುಹುವೆನು. ವೇದವ್ಯಾಸನ ಮುಖದಿಂದ ನಾನು ಕೇಳಿ ತಿಳಿದ ಬ್ರಹ್ಮಖಂಡ ಅಜ್ಞಾನದ ಕತ್ತಲನ್ನೋಡಿಸಿ ತತ್ವಜ್ಞಾನದ ಮಾರ್ಗ ತೋರುವಂಥದ್ದು.

ಸೃಷ್ಟಿಗೆ ಮೊದಲು ಪ್ರಳಯದಲ್ಲಿ ಕೋಟಿ ಸೂರ್ಯರಿಗೆ ಸಮಾನವಾಗಿ ಬೆಳಗುವ ಜಗತ್ಕಾರಣನಾದ ಪರಮಾತ್ಮನೊಬ್ಬನೆ ಇದ್ದ. ಸ್ವತಂತ್ರನಾದ ಆತನ ಉದರದಲ್ಲಿ ಲೋಕತ್ರಯವೂ ಅಡಗಿತ್ತು. ಅದರಲ್ಲಿ ಎಲ್ಲಕ್ಕಿಂತ ಮೇಲೆ ಮೂರು ಕೋಟಿಯೋಜನ ವಿಸ್ತಾರದ ಗೋಲೋಕ. ಆ ಲೋಕ ತೇಜೋರೂಪ, ಮಹಾರತ್ನ ಭೂಮಿಮಯ. ಯೋಗಿಗಳೂ ಕೂಡ ಅದನ್ನು ಸ್ವಪ್ನದಲ್ಲಿಯೂ ಕಾಣಲಾರರು. ವಿಷ್ಣುಭಕ್ತರಿಗೆ ಮಾತ್ರ ಅಲ್ಲಿ ಪ್ರವೇಶ. ಅಲ್ಲಿ ಆಧಿವ್ಯಾಧಿ ಜರಾಮರಣ ಶೋಕ ಭಯವಿಲ್ಲ. ರತ್ನ ಖಚಿತವಾದ ಅಸಂಖ್ಯ ಗೃಹಗಳು. ಪ್ರಳಯಕಾಲದಲ್ಲಿ ಅಲ್ಲಿ ಕೃಷ್ಣನೊಬ್ಬನೆ ಇರುತ್ತಾನೆ. ಸೃಷ್ಟಿ-ಕಾಲದಲ್ಲಿ ಗೋಪಗೋಪಿಯರೆಲ್ಲ ಇರುತ್ತಾರೆ.

ಈ ಗೋಲೋಕಕ್ಕಿಂತ ಐವತ್ತು ಕೋಟಿಯೋಜನ ಕೆಳಗೆ ಬಲಭಾಗದಲ್ಲಿ ವೈಕುಂಠ, ಎಡಭಾಗದಲ್ಲಿ ಶಿವಲೋಕ. ಕೋಟಿಯೋಜನ ವಿಸ್ತಾರದ ವೈಕುಂಠ ಪ್ರಳಯದಲ್ಲಿ ಶೂನ್ಯವಾಗಿರುತ್ತದೆ. ಸೃಷ್ಟಿಯಲ್ಲಿ ಲಕ್ಷ್ಮೀನಾರಾಯಣರಿಂದ ಕೂಡಿರುತ್ತದೆ. ಜರಾ-ಮರಣವರ್ಜಿತರಾದ ಚತುರ್ಭುಜಯುಕ್ತರಾದ ಪಾರ್ಷದರೂ ಇರುತ್ತಾರೆ. ಕೋಟಿ-ಯೋಜನ ವಿಸ್ತಾರದ ಶಿವಲೋಕವೂ ಪ್ರಳಯ ಕಾಲದಲ್ಲಿ ಶೂನ್ಯವಾಗಿರುತ್ತದೆ. ಸೃಷ್ಟಿಯಲ್ಲಿ ಶಿವಪಾರ್ವತಿಯರೂ ಅವರ ಪಾರ್ಷದರೂ ಇರುತ್ತಾರೆ.

ಗೋಲೋಕದಲ್ಲಿ ಬೆಳಗುವ ಜ್ಯೋತಿಮನೋಹರ, ಪರಮಾಹ್ಲಾದಕರ. ಅದನ್ನು ಯೋಗಿಗಳು ಯಾವಾಗಲೂ ಧ್ಯಾನಿಸುತ್ತಾರೆ. ಜ್ಞಾನದೃಷ್ಟಿಯಿಂದ ಕಾಣುತ್ತಾರೆ. ನವ-ಮೇಘ ಶ್ಯಾಮವರ್ಣ. ಶರತ್ಕಾಲದ ಕಮಲದಂಥ ಕಣ್ಣುಗಳು. ಹುಣ್ಣಿಮೆ ಚಂದ್ರನಂಥ ಮುಖ. ಕೋಟಿಮನ್ಮಥರ ಲಾವಣ್ಯ, ಕೊಳಲೂದುತ್ತಿರುವ ನಗುಮೊಗದ ದ್ವಿಭುಜರೂಪ. ಸರ್ವಾಂಗಗಳಲ್ಲಿ ಕಸ್ತೂರಿ ಕುಂಕುಮ ಗಂಧಲೇಪ. ಮೈಯೆಲ್ಲ ರಾಶಿರಾಶಿ ರತ್ನಾಲಂಕಾರಗಳು. ಎದೆಯಲ್ಲಿ ಶ್ರೀವತ್ಸ ಕೌಸ್ತುಭರತ್ನ, ತಲೆಯಲ್ಲಿ ರತ್ನಖಚಿತ ಕಿರೀಟ. ವನಮಾಲಾಭೂಷಿತವಾಗಿ ರತ್ನಸಿಂಹಾಸನವನ್ನಲಂಕರಿಸಿದೆ. ಅದೇ ಪರಬ್ರಹ್ಮ, ಸನಾತನ ಪರಮಾತ್ಮ. ಸ್ವತಂತ್ರ, ಸರ್ವಕರ್ತೃ, ಸರ್ವಾಧಾರ, ಪರಾತ್ಪರ.

ಬಾಲಗೋಪಾಲ ರೂಪದಿಂದ ಭಕ್ತರಿಗೆ ಅನುಗ್ರಹ ಮಾಡುತ್ತಿದೆ. ನಿರ್ವಿಕಾರ, ಪರಿಪೂರ್ಣ, ಸರ್ವವ್ಯಾಪ್ತ, ರಾಸಮಂಡಲದಲ್ಲಿರುವ ಪರಮಮಂಗಳ ರೂಪ. ಪರಮಾನಂದ ಕಾರಣ. ಸರ್ವಾಭೀಷ್ಟದಾಯಕ. ಪ್ರಕೃತಿಯಿಂದಾಚೆ ಇದೆ. ಗುಣತ್ರಯ-ರಹಿತವಾಗಿದೆ. ಆದ್ಯಪುರುಷ ಸತ್ಯಸ್ವತಂತ್ರ, ಅದ್ವಿತೀಯ ಪರಮಾತ್ಮ ಸ್ವರೂಪ. ವಿಷ್ಣುಭಕ್ತರು ಮಾತ್ರ ಆ ಪರತತ್ವವನ್ನು ಧ್ಯಾನಿಸಿ ಮುಕ್ತಿ ಪಡೆಯುವರು.

ಇಂಥ ಪರಮಾತ್ಮನು ಆದಿಸೃಷ್ಟಿಯಲ್ಲಿ ಮೊದಲಿಗೆ ಆಕಾಶ ಹೊರತು ಬೇರೆಲ್ಲ ವಿಶ್ವವೆ ಶೂನ್ಯವಾಗಿರುವುದನ್ನು ಕಂಡ.

**ಇಲ್ಲಿಗೆ ಬ್ರಹ್ಮವೈವರ್ತಪುರಾಣದ ಸೌತಿ ಶೌನಕ ಪ್ರಶ್ನೋತ್ತರ ರೂಪವಾದ ಬ್ರಹ್ಮಖಂಡದಲ್ಲಿ ಪರಬ್ರಹ್ಮ ನಿರೂಪಣವೆಂಬ ಎರಡನೆ ಅಧ್ಯಾಯ ಮುಗಿಯಿತು.**

## ದುರ್ಗಾಸ್ತೋತ್ರ

**ಅಧ್ಯಾಯ-೩**

ಇಡಿ ವಿಶ್ವವೂ ಗೋಲೋಕವೂ ಶೂನ್ಯವಾಗಿರುವುದನ್ನು ನೀರುಗಾಳಿ ಇಲ್ಲದೆ ಜಂತುಗಳಿಲ್ಲದೆ ಕತ್ತಲಿಂದಾವೃತವಾಗಿರುವುದನ್ನೂ ಕಂಡು ಪರಮಾತ್ಮ ಯಾರ ಸಹಾಯವೂ ಇಲ್ಲದೆ ಸ್ವೇಚ್ಛೆಯಿಂದಲೆ ಸೃಷ್ಟಿಸಲು ಸಂಕಲ್ಪಿಸಿದ.

ಮೊದಲಿಗೆ ಆ ಪರಮಪುರುಷನ ಬಲಭಾಗದಿಂದ ಪ್ರಪಂಚೋತ್ಪತ್ತಿಗೆ ಮೂಲ-ಕಾರಣವಾದ ತ್ರಿಗುಣಗಳು ಪ್ರಾದುರ್ಭವಿಸಿದವು. ಮಹತ್ತತ್ವ ಅಹಂಕಾರ ಪಂಚ-ತನ್ಮಾತ್ರಗಳೂ ಹುಟ್ಟಿದುವು.

ಸ್ವಯಂ ನಾರಾಯಣ ಪ್ರಾದುರ್ಭವಿಸಿದ. ಆತ ಪೀತಾಂಬರ ಉಟ್ಟು ವನಮಾಲೆ ಧರಿಸಿದ, ಚತುರ್ಭುಜಗಳಲ್ಲಿ ಶಂಖಚಕ್ರಗದಾಪದ್ಮ ಧರಿಸಿದ ನೀಲವರ್ಣದ ಯುವಕ, ರತ್ನಾಲಂಕಾರ ಭೂಷಿತ. ಎದೆಯಲ್ಲಿ ಶ್ರೀವತ್ಸ ಕೌಸ್ತುಭರತ್ನಗಳನ್ನು ಧರಿಸಿದ್ದ. ಶರತ್ಕಾಲದ ಪೂರ್ಣಚಂದ್ರನನ್ನು ಧಿಕ್ಕರಿಸುವ ಸುಂದರ ಮುಖ. ಕಾಮದೇವನನ್ನು ನಾಚಿಸುವ ಮನೋಹರರೂಪ. ಈತ ಶ್ರೀಕೃಷ್ಣನ ಮುಂದೆ ಕೈಮುಗಿದು ನಿಂತು ಸ್ತುತಿಸಿದ-

'ಸೃಷ್ಟಿಗೆ ಮೂಲಕಾರಣ, ತಪಸ್ಸಿಗೆ ಫಲನೀಡುವವ, ನವ ಮೇಘಶ್ಯಾಮ, ಸ್ವಾತ್ಮಾರಾಮ. ಸರ್ವೇಶ್ವರ, ಸರ್ವವೇದಜ್ಞ, ವೇದೋಕ್ತ ಸರ್ವಫಲದಾಯಕ, ಫಲಸ್ವರೂಪನಾದ ಪರಮಾತ್ಮನೆ ನಿನಗೆ ನಮೋ ಎನ್ನುವೆನು'.

ಹೀಗೆ ಸ್ತುತಿಸಿ ಅವನಾಜ್ಞೆಯಂತೆ ಅವನೆದುರಿಗೆ ರತ್ನ ಸಿಂಹಾಸನದಲ್ಲಿ ಕುಳಿತ.

ನಾರಾಯಣ ಮಾಡಿದ ಈ ಸ್ತೋತ್ರವನ್ನು ಮೂರು ಸಂಧ್ಯೆಗಳಲ್ಲಿ ಪಠಿಸುವವನ ಪಾಪಗಳೆಲ್ಲ ಪರಿಹಾರವಾಗುವುವು. ಪುತ್ರ ಭಾರ್ಯೆ ರಾಜ್ಯ ಧನಗಳನ್ನಪೇಕ್ಷಿಸುತ್ತಿದ್ದರೆ ಅವೆಲ್ಲ ಲಭಿಸುವುವು. ಕಾರಾಗಾರದಲ್ಲಿ ಬದ್ಧನಾಗಿದ್ದರೆ ಬಿಡುಗಡೆಯಾಗುವುದು. ರೋಗಿಯಾಗಿದ್ದರೆ ರೋಗ ಪರಿಹಾರವಾಗುವುದು.

ಕೃಷ್ಣನ ಎಡಭಾಗದಿಂದ ಶಿವ ಪ್ರಾದುರ್ಭವಿಸಿದ. ಆತ ಶುದ್ಧ ಸ್ಫಟಿಕ ವರ್ಣದವ. ಪಂಚಮುಖಿ, ದಿಗಂಬರ. ಚಿನ್ನದಂತೆ ಹೊಳೆವ ಜಟೆ, ನಗುಮೊಗ, ಮೂರು ಕಣ್ಣು ತಲೆಯಲ್ಲಿ ಚಂದ್ರ, ಕೈಗಳಲ್ಲಿ ತ್ರಿಶೂಲ ಪಟ್ಟಿ ಮುಂತಾದ ಆಯುಧಗಳು. ಜಪಮಾಲೆ ಧರಿಸಿದ್ದ. ಯೋಗೀಂದ್ರರಿಗೆ ಪರಮಗುರು. ಮೃತ್ಯುವಿಗೆ ಮೃತ್ಯು, ಮೃತ್ಯುಂಜಯ. ಜ್ಞಾನದಲ್ಲಿ ಆನಂದ ಕಾಣುವವ. ಮಹಾಜ್ಞಾನಿ. ಮಹಾಜ್ಞಾನಪ್ರದ. ಪೂರ್ಣಚಂದ್ರನಂತೆ ಆಹ್ಲಾದಕ, ವೈಷ್ಣವಾಗ್ರಣಿ-ಬ್ರಹ್ಮತೇಜದಿಂದ ಜ್ವಲಿಸುವವ. ಈತ ಕೃಷ್ಣನ ಮುಂದೆ ನಿಂತು ಕೈಮುಗಿದು ಮೈಯೆಲ್ಲ ರೋಮಾಂಚಗೊಂಡು ಕಣ್ಣಲ್ಲಿ ಆನಂದಬಾಷ್ಪ ಸುರಿಸುತ್ತ ಗದ್ಗದ ಕಂಠದಿಂದ ಸ್ತುತಿಸಿದ-

ಪರಮಾತ್ಮ, ನೀನು ವಿಶ್ವವನ್ನು ಗೆಲ್ಲುವವ, ಜಯದಾಯಕ, ವಿಶ್ವಕಾರಣ, ವಿಶ್ವಾಧಾರ, ವಿಶ್ವೇಶ್ವರ, ವಿಶ್ವರಕ್ಷಕ, ಭಕ್ತರಿಗೆ ಅಭೀಷ್ಟಫಲದಾಯಕ, ಫಲಸ್ವರೂಪ, ತೇಜೋರೂಪ, ತೇಜೋದಾಯಕ, ನಿನಗಿದೋ ನಮಸ್ಕಾರ.

ಹೀಗೆ ಶಿವ ಕೃಷ್ಣನನ್ನು ಸ್ತುತಿಸಿ ನಾರಾಯಣನೊಡನೆ ಸಂಭಾಷಿಸಿ ಅವನಾಜ್ಞೆ ಪಡೆದು ರತ್ನಸಿಂಹಾಸನದಲ್ಲಿ ಕುಳಿತ.

ಶಿವ ಮಾಡಿದ ಈ ಸ್ತೋತ್ರವನ್ನು ಭಕ್ತಿಯಿಂದ ಪಠಿಸುವವನಿಗೆ ಸರ್ವಸಿದ್ಧಿ. ಪದೇ ಪದೇ ಕಾರ್ಯಜಯ. ಮಿತ್ರವೃದ್ಧಿ ಧನೈಶ್ವರ್ಯವೃದ್ಧಿ. ಶತ್ರುಬಲನಾಶ. ದುಃಖದುರಿತಗಳ ಕ್ಷಯ.

ಕೃಷ್ಣನ ನಾಭಿ ಕಮಲದಿಂದ ಚತುರ್ಮುಖ ಬ್ರಹ್ಮ ಉದಿಸಿದ. ಆತ ಮಹಾ ತಪಸ್ವಿಯಾದ ವೃದ್ಧ. ಕೈಯಲ್ಲಿ ಕಮಂಡಲು ಹಿಡಿದಿದ್ದ. ಬಿಳಿಬಟ್ಟೆ ಬಿಟ್ಟಿದ್ದ. ಅವನ ಹಲ್ಲುಗಳು ಬಿಳಿ. ತಲೆಗೂದಲುಗಳೂ ಬಿಳಿ. ಯೋಗೀಶ್ವರನಾದ ಆತ ಎಲ್ಲರಿಗೂ ತಂದೆ, ಎಲ್ಲರಿಗೂ ಗುರು. ತಪಸ್ಸಿಗೆ ಫಲ ನೀಡುವವ. ಸರ್ವಸಂಪತ್ಪ್ರದಾಯಕ. ಸರ್ವಸೃಷ್ಟಿಕರ್ತ, ಸರ್ವಪಾಪವಿನಾಶಕ. ನಾಲ್ಕು ವೇದಗಳನ್ನು ಬಲ್ಲವ. ವೇದಮಾತೆಯ ಪತಿ, ಕೃಪಾನಿಧಿ. ಆತ ಕೃಷ್ಣನ ಮುಂದೆ ನಿಂತು ಕೈಮುಗಿದು ಮೈರೋಮಾಂಚಗೊಂಡು ಭಕ್ತಿಯಿಂದ ತಲೆಬಾಗಿ ಸ್ತುತಿಸಿದ-

'ಕೃಷ್ಣ ನೀನು ಗುಣಾತೀತ ನಾಶರಹಿತ ಅವ್ಯಕ್ತ ಬಾಲಗೋಪಾಲರೂಪ ಮನೋಹರ ನವಮೇಘಶ್ಯಾಮ ಕೋಟಿಮನ್ಮಥಲಾವಣ್ಯದಿಂದೊಪ್ಪುವವ, ಗೋಪಿಯರ ಮನ ಸೆಳೆವವ, ವೃಂದಾವನದ ರಾಸಮಂಡಲದಲ್ಲಿ ರಾಸೋಲ್ಲಾಸಗೊಳ್ಳುವವ.'

ಹೀಗೆ ಹೇಳಿ ನಮಿಸಿ ಅವನಾಜ್ಞೆಯಂತೆ ನಾರಾಯಣ ಶಿವರೊಡನೆ ಸಂಭಾಷಿಸಿ ರತ್ನ ಸಿಂಹಾಸನದಲ್ಲಿ ಕುಳಿತ.

ಬ್ರಹ್ಮ ಮಾಡಿದ ಈ ಸ್ತೋತ್ರವನ್ನು ಪ್ರಾತಃಕಾಲದಲ್ಲೆದ್ದು ಪಠಿಸಿದರೆ ಪಾಪ ಪರಿಹಾರವಾಗಿ ದುಃಸ್ವಪ್ನಗಳೆಲ್ಲ ಸುಸ್ವಪ್ನವಾಗುವುವು. ಗೋವಿಂದನಲ್ಲಿ ಭಕ್ತಿ ಲಭಿಸುವುದು. ಸಂಪತ್ತು ಪುತ್ರ ಪೌತ್ರಾಭಿವೃದ್ಧಿ. ಅಪಕೀರ್ತಿನಾಶ, ಸತ್ಕೀರ್ತಿವೃದ್ಧಿ.

ಕೃಷ್ಣನ ಎದೆಯಿಂದ ಧರ್ಮ ಪ್ರಾದುರ್ಭವಿಸಿದ. ಆತ ಬಿಳಿ ಬಣ್ಣದವ, ನಗುಮೊಗದವ. ಜಟಾಧಾರಿ. ಸರ್ವಜ್ಞ. ಸರ್ವಸಾಕ್ಷಿ. ಎಲ್ಲರಲ್ಲಿ ದಯೆ ಉಳ್ಳವ. ಹಿಂಸೆ ಕೋಪಗಳನ್ನರಿಯದವ, ಧರ್ಮಜ್ಞಾನ ಉಳ್ಳವ, ಧಾರ್ಮಿಕ. ಅವನು ಕೃಷ್ಣನ ಮುಂದೆ ದಂಡಪ್ರಣಾಮ ಮಾಡಿ ಸ್ತುತಿಸಿದ-

'ಶ್ರೀಕೃಷ್ಣ ವಿಷ್ಣೋ, ವಾಸುದೇವ, ಪರಮಾತ್ಮ, ಈಶ್ವರ, ಗೋವಿಂದ, ಪರಮಾನಂದ, ಏಕ, ಅಕ್ಷರ, ಅಚ್ಯುತ, ಗೋಪೇಶ್ವರ, ಗೋಪೀನಾಥ, ಗೋಪಾಲ, ಗೋರಕ್ಷಕ, ವಿಭೋ, ಗೋನಾಥ, ಗೋಷ್ಠಸ್ಥ ಗೋವತ್ಸಪುಚ್ಛಧಾರಿ, ಗೋಗೋಪಗೋಪೀ ಮಧ್ಯಸ್ಥ ಪ್ರಧಾನ, ಪುರಷೋತ್ತಮ, ನವಘನಶ್ಯಾಮ, ಕಾಮವಾಸ, ಮನೋಹರ, ನಿನಗೆ ನನ್ನ ನಮನ.'

ಹೀಗೆ ಸ್ತುತಿಸಿ ಬ್ರಹ್ಮವಿಷ್ಣು ಮಹೇಶರೊಡನೆ ಸಂಭಾಷಿಸಿ ರತ್ನ ಸಿಂಹಾಸನದಲ್ಲಿ ಕುಳಿತ.

ಧರ್ಮನ ಮುಖದಿಂದುದಿಸಿದ ಇಪ್ಪತ್ತನಾಲ್ಕು ಕೃಷ್ಣನಾಮಗಳನ್ನು ಬೆಳಿಗ್ಗೆ ಎದ್ದು ಪಠಿಸಿದರೆ ಸರ್ವಕಾರ್ಯ ಜಯ, ಸುಖ, ಮರಣಕಾಲದಲ್ಲಿ ಹರಿನಾಮಸ್ಮರಣ ಲಾಭ, ಮುಕ್ತಿ. ನಿತ್ಯ ಧರ್ಮಾಚರಣಶಕ್ತಿ, ಅಧರ್ಮದಲ್ಲಿ ಅನಾಸಕ್ತಿ, ಧರ್ಮಾದಿ ನಾಲ್ಕು ಪುರುಷಾರ್ಥಸಿದ್ಧಿ. ಅವನ ದರ್ಶನ ಮಾತ್ರದಿಂದ ಬೇರೆಯವರಿಗೂ ಪಾಪ ಪರಿಹಾರ. ಆಪತ್ತು ದುಃಖಗಳೆಲ್ಲ ಗರುಡನನ್ನು ಕಂಡ ಹಾವುಗಳಂತೆ ಪಲಾಯನ ಮಾಡುವುವು.

ಧರ್ಮನ ಎಡಭಾಗದಿಂದ ಮೂರ್ತಿದೇವಿ ಹೊರಗೆ ಬಂದಳು. ಸಾಕ್ಷಾತ್ ಎರಡನೆ ಲಕ್ಷ್ಮಿಯಂತಿದ್ದಳು.

ಕೃಷ್ಣನ ಮುಖದಿಂದ ಸರಸ್ವತಿ ಉದಿಸಿದಳು. ಅವಳು ಶುಕ್ಲ ವರ್ಣದವಳು. ವೀಣಾಪುಸ್ತಕಧಾರಿಣಿ. ಕೋಟಿ ಪೂರ್ಣಚಂದ್ರರ ಕಾಂತಿಯ ಮುಖ, ಶರತ್ಕಾಲದ ಕಮಲದಂಥ ಕಣ್ಣುಗಳು, ವಹ್ನಿಯಂತೆ ಶುದ್ಧವಾದ ಸೀರೆ ಉಟ್ಟು ರತ್ನಾಭರಣಗಳನ್ನು

ಧರಿಸಿದ್ದಳು. ನಗುಮೊಗದ ಸುಂದರ ದಂತಪಂಕ್ತಿಯಿಂದೊಪ್ಪುವ ಪರಮ ಸುಂದರಿ. ಶ್ರುತಿಶಾಸ್ತ್ರಜ್ಞರಲ್ಲೆಲ್ಲ ಅಗ್ರಗಣ್ಯಳು. ಎಲ್ಲರಿಗೂ ತಾಯಿ, ವಾಗ್ದೇವತೆ. ಕವಿಗಳ ಇಷ್ಟದೇವತೆ. ಶುದ್ಧ ಸತ್ವಮಯಿ ಶಾಂತರೂಪಳು.

ಸರಸ್ವತಿ ಗೋವಿಂದನ ಮುಂದೆ ವೀಣೆ ನುಡಿಸುತ್ತ ಅವನ ಗುಣಗಾನ ಮಾಡುತ್ತ ಹಾಡಿದಳು ಕುಣಿದಳು. ಕೈಮುಗಿದು ಹರಿ ಕಲ್ಪಕಲ್ಪಗಳಲ್ಲಿ ಪ್ರತಿಯುಗದಲ್ಲಿ ಮಾಡುವ ಮಹಾಕಾರ್ಯಗಳನ್ನು ಬಣ್ಣಿಸಿ ಸ್ತುತಿಸಿದಳು—

'ಕೃಷ್ಣ, ನೀನು ರಾಸಮಂಡಲ ಮಧ್ಯದಲ್ಲಿ ರಾಸಲೀಲಾರಸವನ್ನು ಸವಿಯುವಿ, ರತ್ನಾಲಂಕಾರ ಧರಿಸಿ ಸಿಂಹಾಸನದಲ್ಲಿ ಮಂಡಿಸುವಿ. ರಾಸಕ್ರೀಡೆಯಾಡಿ ರಾಧೆಯ ಹೃದಯನ್ನಾಳುವಿ. ಗೋಪಿಯರ ಮನ ಸೆಳೆಯುವಿ.'

ಸರಸ್ವತಿ ಮಾಡಿದ ಈ ಸ್ತೋತ್ರವನ್ನು ಬೆಳಿಗ್ಗೆ ಎದ್ದು ಪಠಿಸಿದರೆ ವಿದ್ಯೆ ಬುದ್ಧಿ ಐಶ್ವರ್ಯ ಸಂತತಿ ಲಾಭ.

ಕೃಷ್ಣನ ಮನಸ್ಸಿನಿಂದ ಮಹಾಲಕ್ಷ್ಮಿ ಉದಿಸಿದಳು. ಅವಳು ಗೌರವರ್ಣದವಳು. ಪೀತಾಂಬರ ಉಟ್ಟು ರತ್ನಾಭರಣಗಳನ್ನು ಧರಿಸಿದ್ದಾಳೆ. ನಗುಮೊಗದ ನವಯುವತಿ. ಐಶ್ವರ್ಯದ ಅಧಿದೇವತೆ. ಸರ್ವಸಂಪತ್‌ಫಲದಾಯಕಳು. ಸ್ವರ್ಗದಲ್ಲಿ ಸ್ವರ್ಗಲಕ್ಷ್ಮಿ ಅವಳೆ. ರಾಜಲಕ್ಷ್ಮಿ ಅವಳೆ. ಅವಳು ಹರಿಯ ಮುಂದೆ ನಿಂತು ಭಕ್ತಿಯಿಂದ ತಲೆಬಾಗಿ ಸ್ತುತಿಸಿದಳು-

ಹರಿ, ನೀನು ಸತ್ಯಸ್ವರೂಪ, ಸತ್ಯಜಗದೀಶ, ಸತ್ಯ ಜಗತ್ಕಾರಣ, ಸತ್ಯಜಗದಾಧಾರ, ಸತ್ಯ ಜಗಜ್ಜ್ಞಾನಿ, ಸತ್ಯ ಜಗನ್ಮೂಲ, ಸನಾತನ, ನಿನಗೆ ವಂದನೆಗಳು.

ಹೀಗೆ ಹರಿಸ್ತುತಿಗೈದು ನಮಿಸಿ ಬಂಗಾರದಂತೆ ಹೊಳೆಯುತ್ತ ದಿಕ್ಕುಗಳನ್ನು ಬೆಳಗಿಸುವ ಲಕ್ಷ್ಮಿ ಸುಖಾಸನದಲ್ಲಿ ಕುಳಿತಳು.

ಕೃಷ್ಣನ ಬುದ್ಧಿಯಿಂದ ಮೂಲ ಪ್ರಕೃತಿ ಉದಿಸಿದಳು. ಅವಳು ಸಕಲ ಪ್ರಪಂಚದ ಅಧಿಷ್ಠಾತ್ರಿ. ಕೋಟಿ ಸೂರ್ಯರ ಕಾಂತಿಯಿಂದ ಬಂಗಾರದಂತೆ ಹೊಳೆಯುವವಳು. ನಗುಮೊಗದವಳು. ಕಮಲದ ಕಣ್ಣವಳು. ಕೆಂಪು ಸೀರೆ ಉಟ್ಟು ರತ್ನಾಭರಣ ಧರಿಸಿದ್ದಳು. ಜೀವಿಗಳ ಹಸಿವು ನೀರಡಿಕೆ ನಿದ್ದೆ ದಯೆ ಶ್ರದ್ಧೆ ಕ್ಷಮೆ ಮುಂತಾದವು-ಗಳೆಲ್ಲಕ್ಕೂ ಅವಳೇ ನಿಯಾಮಕಳು. ನೂರು ಕೈಗಳ ಭಯಂಕರ ದುರ್ಗೆ ಭಯಂಕರ ಆಪತ್ತುಗಳನ್ನು ಕಳೆಯುತ್ತಾಳೆ. ಕೃಷ್ಣನ ಪತ್ನಿ, ಲೋಕಕ್ಕೆ ಜನನಿ. ತ್ರಿಶೂಲ ಶಕ್ತಿ ಧನುಸ್ ಬಾಣ ಖಡ್ಗ ಶಂಖ ಚಕ್ರ ಗದಾ ಪದ್ಮ ಅಕ್ಷಮಾಲೆ ಕಮಂಡಲು ವಜ್ರ ಅಂಕುಶ ಪಾಶ ಭುಖಂಡಿ ದಂಡ ತೋಮರ ನಾರಾಯಣಾಸ್ತ್ರ ಬ್ರಹ್ಮಾಸ್ತ್ರ ರುದ್ರಾಸ್ತ್ರ ಪಾಶುಪತಾಸ್ತ್ರ ಪರ್ಜನ್ಯಾಸ್ತ್ರ ವಾರುಣಾಸ್ತ್ರ ಆಗ್ನೇಯಾಸ್ತ್ರ ಗಾಂಧರ್ವಾಸ್ತ್ರಗಳನ್ನು ಹಿಡಿದಿದ್ದಾಳೆ.

ಇವಳು ಕೃಷ್ಣನ ಮುಂದೆ ನಿಂತು ಆನಂದದಿಂದ ಸ್ತುತಿಸಿದಳು—

'ನಾನು ಜಡಪ್ರಕೃತಿಯ ಅಭಿಮಾನಿನಿ. ಸರ್ವಪ್ರಪಂಚದ ಒಡತಿ. ಸರ್ವಪ್ರಪಂಚ ಪ್ರೇರಕಳು ನಿಜ. ಆದರೆ ನಾನು ನಿನ್ನಿಂದ ಜನಿಸಿದವಳು. ಸ್ವತಂತ್ರಳಲ್ಲ. ನೀನೆ ಜಗದೀಶ. ಜಗತ್ತಿಗೆ ಸೃಷ್ಟಿಸ್ಥಿತಿ ಲಯಮೋಕ್ಷದಾಯಕ. ಸೃಷ್ಟಿಕರ್ತನಿಗೆ ಸೃಷ್ಟಿಕರ್ತ. ಲಯಕರ್ತನಿಗೆ ಲಯಕರ್ತ. ಪರಮಾನಂದರೂಪ. ನೀನು ಕಣ್ಣವೆ ಮುಚ್ಚಿದರೆ ಸಾಕು, ಬ್ರಹ್ಮನಿಗೆ ಲಯ. ಹುಬ್ಬಿನ ಕುಣಿತದಿಂದಲೆ ಕೋಟಿ ವಿಷ್ಣುಗಳನ್ನು ಬ್ರಹ್ಮಾದಿ ದೇವತೆಗಳನ್ನು ಸೃಜಿಸಬಲ್ಲೆ. ನನ್ನಂಥ ದೇವಿಯರನ್ನು ಎಷ್ಟು ಬೇಕಾದರೂ ಅನಾಯಾಸದಿಂದ ಸೃಜಿಸಬಲ್ಲೆ. ಅತ್ಯಂತ ಪರಿಪೂರ್ಣನಾದ ನಿನ್ನನ್ನು ನಾನು ಆನಂದದಿಂದ ವಂದಿಸುವೆ. ಜಗತ್ತಿಗೆ ಆಧಾರನಾದ ವಿರಾಟ್‌ಪುರುಷನೂ ನಿನ್ನ ಒಂದು ಅಂಶ ಮಾತ್ರ. ಬ್ರಹ್ಮ ವಿಷ್ಣು ಶಿವಾದಿಗಳು ನಾನು ಸರಸ್ವತಿ ಮುಂತಾದವರೂ ವೇದಗಳೂ, ನಿನ್ನನ್ನು ಸ್ತುತಿಸಲೂ ಶಕ್ತರಲ್ಲ.

ಹೀಗೆ ಹೇಳಿ ನಮಿಸಿ ದುರ್ಗೆ ರತ್ನ ಸಿಂಹಾಸನದಲ್ಲಿ ಕುಳಿತಳು. ದೇವತೆಗಳು ಅವಳನ್ನು ಸ್ತುತಿಸಿದರು.

ದುರ್ಗೆ ಮಾಡಿದ ಈ ಸ್ತೋತ್ರವನ್ನು ದೇವಪೂಜೆಯ ಕಾಲದಲ್ಲಿ ಪಠಿಸುವವನು ಸರ್ವತ್ರ ವಿಜಯಿಯಾಗುವನು, ಸುಖಿಯಾಗುವನು. ದುರ್ಗೆ ಎಂದೂ ಅವನ ಮನೆ ಬಿಟ್ಟು ಹೋಗಲಾರಳು. ಅವನು ಸಂಸಾರಸಾಗರದಲ್ಲಿ ಮುಳುಗಿದ್ದು ಯಶಸ್ವಿಯಾಗಿ ಮೆರೆಯುತ್ತಾನೆ. ಕೊನೆಯಲ್ಲಿ ವಿಷ್ಣುಲೋಕ ಪಡೆಯುತ್ತಾನೆ.

**ಇಲ್ಲಿಗೆ ಶ್ರೀ ಬ್ರಹ್ಮವೈವರ್ತಮಹಾಪುರಾಣದ ಬ್ರಹ್ಮಖಂಡದಲ್ಲಿ ಸೌತಿ ಶೌನಕ ಸಂವಾದದಲ್ಲಿ ದುರ್ಗಾಸ್ತೋತ್ರವೆಂಬ ಮೂರನೆ ಅಧ್ಯಾಯ ಮುಗಿಯಿತು.**

## ಸೃಷ್ಟಿ ನಿರೂಪಣೆ

## ಅಧ್ಯಾಯ-೪

ಕೃಷ್ಣನ ನಾಲಿಗೆ ತುದಿಯಿಂದ ಸಾವಿತ್ರಿ ಉದಿಸಿದಳು. ಶುದ್ಧಸ್ಫಟಿಕದಂತೆ ಶುಭ್ರವರ್ಣದ ಮನೋಹರಳಾದ ಆ ದೇವಿ ಬಿಳಿ ಬಟ್ಟೆ ಉಟ್ಟು ಸರ್ವಾಲಂಕಾರ ಧರಿಸಿ ಜಪಮಾಲೆ ಹಿಡಿದಿದ್ದಳು. ಅವಳು ಹರಿಯ ಮುಂದೆ ನಿಂತು ಕೈಮುಗಿದು ತಲೆಬಾಗಿ ಭಕ್ತಿಯಿಂದ ಸ್ತುತಿಸಿದಳು—

''ಸರ್ವಕಾರಣ, ಸನಾತನ, ಪರಂಬ್ರಹ್ಮ, ಜ್ಯೋತಿಃಸ್ವರೂಪ, ಪರಾತ್ಪರತರ, ಶ್ಯಾಮ, ನಿರ್ವಿಕಾರ, ನಿರಂಜನನಾದ ಪರಮಾತ್ಮನನ್ನು ನಮಿಸುವೆನು.''

ಹೀಗೆ ಹೇಳಿ ನಮಿಸಿ ವೇದಮಾತೆ ಸಾವಿತ್ರಿ ರತ್ನಸಿಂಹಾಸನದಲ್ಲಿ ಕುಳಿತಳು.

ಕೃಷ್ಣನ ಮನಸ್ಸಿನಿಂದ ಮನ್ಮಥನುದಿಸಿದ.

ಪುಟಕ್ಕಿಟ್ಟ ಚಿನ್ನದಂತೆ ಹೊಳೆಯುತ್ತ ಪಂಚಬಾಣಗಳಿಂದ ಎಲ್ಲರ ಎದೆ ಕಲಕುತ್ತಾನೆ ಆತ. ಅದರಿಂದ ಮನ್ಮಥನೆಂದು ಅವನಿಗೆ ಅನ್ವರ್ಥನಾಮ.

ಮನ್ಮಥನ ಎಡ ಭಾಗದಿಂದ ರತಿ ಉದಿಸಿದಳು. ಅವಳು ಮನ್ಮಥನ ಪ್ರೇಯಸಿ. ಎಲ್ಲರನ್ನೂ ಮರುಳು ಮಾಡಬಲ್ಲ ರೂಪಸಿ. ನಗುಮೊಗದ ಆಕೆಯನ್ನು ನೋಡಿದ ಮಾತ್ರಕ್ಕೆ ಅವಳಲ್ಲಿ ಪ್ರೀತಿ ಉಂಟಾಗುವುದರಿಂದ ರತಿ ಎಂಬುದು ಅವಳಿಗೆ ಅನ್ವರ್ಥನಾಮ.

ಮನ್ಮಥ ಹರಿಯನ್ನು ಕೊಂಡಾಡಿ ರತಿಯೊಡನೆ ರತ್ನಸಿಂಹಾಸನದಲ್ಲಿ ಕುಳಿತ.

ಮಾರಣ, ಸ್ತಂಭನ, ಜೃಂಭಣ, ಶೋಷಣ, ಉನ್ಮಾದನ ಎಂಬ ಐದು ಬಾಣಗಳನ್ನು ಧರಿಸಿದ್ದ ಆತ ಪರೀಕ್ಷಾರ್ಥವಾಗಿ ಆ ಬಾಣಗಳನ್ನು ಎಲ್ಲರ ಮೇಲೆ ಪ್ರಯೋಗಿಸಿದ.

ಕೃಷ್ಣನ ಇಚ್ಛೆಯಿಂದ ಎಲ್ಲರೂ ಕಾಮಪರವಶರಾದರು. ರತಿಯನ್ನು ನೋಡುತ್ತ ಮಹಾಯೋಗಿಯಾದ ಬ್ರಹ್ಮನಿಗೂ ವೀರ್ಯಸ್ಖಲನ ಹೊಂದಿತು. ಆ ವೀರ್ಯದಿಂದ ಅಗ್ನಿ ಪ್ರಾದುರ್ಭವಿಸಿದ. ಕೋಟಿತಾಲ ಪ್ರಮಾಣದಷ್ಟು ಬೆಳೆದು ನಿಂತ.

ಹರಿ ನಿಶ್ವಾಸವಾಯುವಿನ ಜೊತೆಗೆ ಬಾಯಿಂದ ಒಂದು ಜಲಕಣವನ್ನು ಸೃಷ್ಟಿಸಿದ. ಆ ಜಲಕಣ ವೃದ್ಧಿಯಾಗಿ ಪ್ರಪಂಚವನ್ನೆ ಮುಳುಗಿಸುವಷ್ಟಾಯಿತು. ಅದರ ಒಂದು ಕಣ ಈ ಬೆಂಕಿಯನ್ನು ಆರಿಸಿತು. ಅಂದಿನಿಂದ ಬೆಂಕಿ ನೀರಿಂದ ಆರುತ್ತದೆ ಎಂಬ ನಿಯಮ ಉಂಟಾಯಿತು. ಆ ನೀರಿನಿಂದ ವರುಣ ಪ್ರಾದುರ್ಭವಿಸಿದ. ಆತ ಜಲಾಭಿಮಾನಿ, ಜಲಾಧಿಪತಿ.

ಅಗ್ನಿಯ ಎಡಭಾಗದಿಂದ ಅವನ ಮಡದಿ ಸ್ವಾಹಾ ಉದಿಸಿದಳು. ವರುಣನ ಎಡಭಾಗದಿಂದ ಅವನ ಮಡದಿ ವರುಣಾನಿ ಉದಿಸಿದಳು. ಹರಿಯ ನಿಶ್ವಾಸದಿಂದ

ವಾಯು ಪ್ರಾದುರ್ಭವಿಸಿದ. ಅವನೆ ಎಲ್ಲ ಜೀವಿಗಳ ಪ್ರಾಣಧಾರಕ. ವಾಯುವಿನ ಎಡಭಾಗದಿಂದ ಅವನ ಮಡದಿ ವಾಯುವಿ ಉದಿಸಿದಳು. ಕಾಮ ಬಾಣದಿಂದ ಕೃಷ್ಣನಿಗೂ ವೀರ್ಯ ಸ್ಖಲನಹೊಂದಿತು. ಅದನ್ನು ಆತ ನೀರಲ್ಲಿಟ್ಟ. ಸಾವಿರ ವರ್ಷಗಳಾದಾಗ ಅದು ಶಿಶುವಾಗಿ ಜನಿಸಿತು. ಮಹಾವಿರಾಟ ಪುರುಷನಾಗಿ ಪ್ರಪಂಚಧಾರಣ ಮಾಡಿತು. ಆ ಪುರುಷನ ಒಂದು ರೋಮ ಕೂಪದಲ್ಲಿ ಇಡಿ ವಿಶ್ವ ಅಡಗಿರುತ್ತದೆ. ಮಹತ್ತಿಗಿಂತ ಮಹತ್ತು ಆತ. ಅವನಿಗಿಂತ ಮಹತ್ತು ಇನ್ನಿಲ್ಲ. ಆದರೆ ಅವನೂ ಕೃಷ್ಣನ ಹದಿನಾರನೆ ಒಂದಂಶ ಮಾತ್ರ.

ಆ ಮಹಾವಿಷ್ಣು ಸರ್ವಾಧಾರ, ಸನಾತನ, ಮಹಾಸಾಗರದಲ್ಲಿ ಆತ ನೀರಲ್ಲಿ ತಾವರೆ ಎಲೆಯಂತೆ ಮಲಗಿದ. ಆಗ ಅವನ ಕರ್ಣಮಲದಿಂದ ಇಬ್ಬರು ದೈತ್ಯರು ಹುಟ್ಟಿಬಂದು ಬ್ರಹ್ಮನನ್ನು ಕೊಲ್ಲಬಂದರು. ನಾರಾಯಣ ಅವರನ್ನು ತನ್ನ ತೊಡೆಗಳ ಮೇಲೆ ಇರಿಸಿಕೊಂಡು ಶಿರಚ್ಛೇದ ಮಾಡಿದ. ಅವರ ಮೇದಸ್ಸಿನಿಂದ ಮೇದಿನಿಯನ್ನು ನಿರ್ಮಿಸಿದ. ಈ ಮೇದಿನಿಯ ಮೇಲೆಯೆ ಎಲ್ಲ ಜಂತುಗಳಿವೆ. ಅದರ ಅಭಿಮಾನಿನಿ ಭೂದೇವಿ.

**ಇಲ್ಲಿಗೆ ಶ್ರೀಬ್ರಹ್ಮ ವೈವರ್ತಮಹಾಪುರಾಣದ ಸೌತಿ ಶೌನಕ ಸಂವಾದದಲ್ಲಿ ಸೃಷ್ಟಿ ನಿರೂಪಣೆ ಎಂಬ ನಾಲ್ಕನೆ ಅಧ್ಯಾಯ ಮುಗಿಯಿತು.**

## ಅಧ್ಯಾಯ-೫

## ಗೋಲಕದಲ್ಲಿ ಕೃಷ್ಣನಿಂದ ರಾಧೆಯ ಪ್ರಾದುರ್ಭಾವ, ಕೃಷ್ಣ ಹಾಗೂ ರಾಧೆಯರ ರೋಮಕೂಪಗಳಿಂದ ಗೋಪಾಲಕರ ಮತ್ತು ಗೋಪಾಂಗನೆಯರ ಉದಯ

ಶೌನಕ— ಗೋವುಗಳು ಗೋಪರು ಗೋಪಿಯರು ಇವರೆಲ್ಲ ಗೋಲೋಕದಲ್ಲಿ ನಿತ್ಯವಾಗಿರುವರೆ ? ಅಥವಾ ಅನಿತ್ಯರೆ ? ನಮ್ಮ ಈ ಸಂದೇಹವನ್ನು ದಯವಿಟ್ಟು ಪರಿಹರಿಸು.

ಸೌತಿ— ಎಲ್ಲಕ್ಕಿಂತ ಆದಿ ಸೃಷ್ಟಿಯಲ್ಲಿ ಅವರು ವ್ಯಕ್ತರಾಗುತ್ತಾರೆ. ಪ್ರಳಯದಲ್ಲಿ ಅವ್ಯಕ್ತರಾಗಿರುತ್ತಾರೆ. ನಾರಾಯಣ ಮಹೇಶ್ವರ ಪ್ರಕೃತಿಯೂ ಆದಿ ಸೃಷ್ಟಿಯಲ್ಲಿ ವ್ಯಕ್ತರಾಗುತ್ತಾರೆ. ಪ್ರಳಯದಲ್ಲಿ ಅವ್ಯಕ್ತರಾಗಿರುತ್ತಾರೆ.

ಮೊದಲಿಗೆ ಬ್ರಹ್ಮಕಲ್ಪ ವಾರಾಹಕಲ್ಪ ಪಾದ್ಮಕಲ್ಪಗಳನ್ನು ವರ್ಣಿಸುತ್ತೇನೆ.

ಕಲ್ಪಗಳು ಮೂರುವಿಧ— ಬ್ರಾಹ್ಮ ವಾರಾಹ ಪಾದ್ಮಕಲ್ಪಗಳೆಂದು. ಯುಗಗಳು ನಾಲ್ಕು ವಿಧ. ಸತ್ಯ ತ್ರೇತಾ ದ್ವಾಪರ ಕಲಿಯುಗಗಳೆಂದು. ಮುನ್ನೂರ ಅರವತ್ತು

ಮಾನುಷ ಯುಗಗಳು ಒಂದು ದಿವ್ಯಯುಗವೆನಿಸುತ್ತದೆ. ಇಂಥ ದಿವ್ಯಯುಗಗಳು ಎಪ್ಪತ್ತೊಂದು, ಒಂದು ಮನ್ವಂತರ. ಹದಿನಾಲ್ಕು ಮನ್ವಂತರಗಳು ಬ್ರಹ್ಮನ ಒಂದು ಹಗಲು. ಅಷ್ಟೇ ಒಂದು ರಾತ್ರಿ. ಈ ರೀತಿ ಮುನ್ನೂರ ಅರವತ್ತು ದಿನಗಳು ಬ್ರಹ್ಮನಿಗೆ ಒಂದು ವರ್ಷ. ನೂರೆಂಟು ವರ್ಷಗಳು ಬ್ರಹ್ಮನ ಆಯುಷ್ಯ. ಇದು ಮಹಾವಿಷ್ಣುವಿಗೆ ಒಮ್ಮೆ ಕಣ್ಣೆವೆ ಮುಚ್ಚಿ ತೆರೆವ ಕಾಲ.

ಬ್ರಹ್ಮನ ಇಡಿ ಆಯುಷ್ಯ ಒಂದು ಕಲ್ಪವೆನಿಸುತ್ತದೆ. ಸಂವರ್ತ ಮೊದಲಾದ ಸಣ್ಣಕಲ್ಪಗಳೂ ಉಂಟು. ಬ್ರಹ್ಮನ ಒಂದು ದಿನವೆ ಒಂದು ಸಣ್ಣಕಲ್ಪ. ಇಂಥ ಏಳು ಸಣ್ಣಕಲ್ಪಗಳ ಕಾಲ ಮಾರ್ಕಂಡೇಯನಿದ್ದ.

ಕೃಷ್ಣನಾಜ್ಞೆಯಂತೆ ನಾರಾಯಣ ಬ್ರಹ್ಮಕಲ್ಪದಲ್ಲಿ ಮಧುಕೈಟಭರ ಮೇದಸ್ಸಿನಿಂದ ಮೇದಿನಿಯನ್ನು ಸೃಷ್ಟಿಸಿದ. ವಾರಾಹಕಲ್ಪದಲ್ಲಿ ಸಮುದ್ರದಲ್ಲಿ ರಸಾತಳಕ್ಕಿಳಿದಿದ್ದ ಭೂಮಿಯನ್ನು ವರಾಹರೂಪದಿಂದ ಉದ್ಧರಿಸಿದ. ಪಾದ್ಮಕಲ್ಪದಲ್ಲಿ ನಾರಾಯಣನ ನಾಭಿಕಮಲದಲ್ಲಿದ್ದ ಬ್ರಹ್ಮನು ಮೂರು ನಿತ್ಯಲೋಕಗಳನ್ನು ಬಿಟ್ಟು ಅನಿತ್ಯವಾದ ಬ್ರಹ್ಮಲೋಕದವರೆಗಿನ ಮೂರು ಲೋಕಗಳನ್ನು ಸೃಷ್ಟಿಸಿದ.

ಶೌನಕರೆ, ಇದಿಷ್ಟು ಕಾಲದ ಮತ್ತು ಸೃಷ್ಟಿಯ ವಿವರವಾಯಿತು. ಇನ್ನೇನು ಕೇಳಬಯಸುವಿರಿ ?

ಶೌನಕ— ಬಳಿಕ ಶ್ರೀಕೃಷ್ಣನೇನು ಮಾಡಿದ ? ದೇವದೇವಿಯರನ್ನು ಸೃಜಿಸಿ ಏನು ಮಾಡಿದ, ಹೇಳು.

ಸೌತಿ— ಹೀಗೆ ಸೃಷ್ಟಿ ಮಾಡಿದ ಬಳಿಕ ಕೃಷ್ಣ ಗೋಲೋಕಕ್ಕೆ ರಾಸಕ್ರೀಡೆಗಾಗಿ ಹೊರಟ.

ಅಲ್ಲಿ ಸುಂದರವಾದ ಕಲ್ಪವೃಕ್ಷಗಳ ನಡುವೆ ವಿಸ್ತಾರವಾದ ಸಮಪ್ರದೇಶ. ನೆಲಕ್ಕೆ ಚಂದನ ಆಗುರು ಕಸ್ತೂರಿ ಕುಂಕುಮ ಬಳಿದಿದೆ. ದಧಿ ಲಾಜ ಸಕ್ತು ಧಾನ್ಯ ದೂರ್ವೆ ಪಲಾಶಗಳಿಂದ ತುಂಬಿದೆ. ರೇಶ್ಮೆದಾರ ನವ ಚಂದನದ ಚಿಗುರುಗಳು, ಬಾಳೆ ಕಂಬ-ಗಳು, ತೋರಣಗಳು ರತ್ನ ಖಚಿತವಾದ ಮೂರು ಕೋಟಿ ಮಂಟಪಗಳು ಪ್ರಜ್ವಲಿಸುವ ರತ್ನದೀಪಗಳು ಗಂಧ ಪುಷ್ಪ ಧೂಪಗಳು ಶೃಂಗಾರಯೋಗ್ಯ ಭೋಗವಸ್ತುಗಳು ಮನೋಹರವಾಗಿ ಅಲಂಕೃತವಾದ ಶಯ್ಯೆಗಳು ಎಲ್ಲೆಲ್ಲೂ ಕಂಡುಬರುತ್ತವೆ. ಅಲ್ಲಿಗೆ ದೇವದೇವಿಯರೊಡನೆ ಹೋಗಿ ಕುಳಿತ ಕೃಷ್ಣ. ದೇವದೇವಿಯರು ಅಲ್ಲಿ ಕೃಷ್ಣನ ರಾಸಲೀಲೆ ಕಂಡು ವಿಸ್ಮಿತರಾದರು.

ಆಗ ಕೃಷ್ಣನ ಎಡಭಾಗದಿಂದ ರಾಧೆ ಪ್ರಾದುರ್ಭವಿಸಿದಳು. ಒಡನೆ ಓಡಿಹೋಗಿ ಹೂಗಳನ್ನು ತಂದು ಕೃಷ್ಣನ ಪಾದಗಳನ್ನು ಪೂಜಿಸಿದಳು. ಹೀಗೆ 'ರಾ' ಎಂದರೆ ರಾಸದಲ್ಲಿ ಪ್ರಾದುರ್ಭವಿಸಿ ಕೃಷ್ಣನ ಪೂಜೆಗಾಗಿ 'ಧಾ' ಧಾವಿಸಿದವಳಾದ್ದರಿಂದ ಆಕೆ ರಾಧೆ ಎನಿಸಿದಳು.

ರಾಧೆ ಕೃಷ್ಣನ ಪ್ರಾಣೇಶ್ವರಿ, ಪ್ರಾಣಗಳಿಂದ ಉದಿಸಿದವಳು. ಪ್ರಾಣಗಳಿಗಿಂತ ಹೆಚ್ಚಿನವಳು. ಹದಿನಾರರ ಹೊಸ ಹರೆಯದವಳು. ಅಗ್ನಿಯಂತೆ ಹೊಳೆವ ಬಟ್ಟೆ ಧರಿಸಿ ನಗುವ ಮನೋಹರಿ ಕೋಮಲಾಂಗಿ, ಸುಂದರಿಯರಲ್ಲೆಲ್ಲ ಸುಂದರಿ. ಅವಳದು ದಾಸವಾಳ ಹೂವಿನಂಥ ಚೆಂದುಟಿ. ಮುತ್ತಿನ ಸಾಲಿನಂಥ ದಂತಪಂಕ್ತಿ. ಕೋಟಿ ಚಂದ್ರರ ಕಾಂತಿಯ ಮುಖ. ಕಮಲದಂಥ ಕಣ್ಣುಗಳು. ಗರುಡನ ಕೊಕ್ಕಿನಂಥ ಮೂಗು, ಬಂಗಾರದಂತೆ ಹೊಳೆವ ಕೆನ್ನೆಗಳು, ರತ್ನಕುಂಡಲ ಶೋಭಿತವಾದ ಕಿವಿಗಳು, ಚಂದನ ಅಗುರು ಕಸ್ತೂರಿ ಕುಂಕುಮ ಯುಕ್ತವಾದ ಸಿಂಧೂರ ತಿಲಕ. ಜಾಜಿ ಹೂಮುಡಿದ ಸಿರಿಮುಡಿ, ಸ್ಥಲಕಮಲಗಳಂತಿರುವ ಪಾದಗಳು, ಹಂಸದಂಥ ನಡಿಗೆ. ವಿಚಿತ್ರ ನಾನಾ ರತ್ನಾಲಂಕಾರಗಳು. ಹೀಗೆ ಶೋಭಿಸುವ ರಾಧೆ ಗೋವಿಂದನೊಡನೆ ಸಂಭಾಷಿಸಿ ಅವನ ಮುಖವನ್ನೆ ನೋಡುತ್ತ ರತ್ನಸಿಂಹಾಸನದಲ್ಲಿ ಮಂಡಿಸಿದಳು.

ರಾಧೆಯ ರೋಮಕೂಪಗಳಿಂದ ಲಕ್ಷ ಕೋಟಿ ಸಂಖ್ಯೆಯಲ್ಲಿ ಗೋಪಾಂಗನೆಯರು ಪ್ರಾದುರ್ಭವಿಸಿದರು. ಅವರೆಲ್ಲರೂ ರಾಧೆಯಂತೆಯೆ ಕಾಣುತ್ತಿದ್ದರು. ಸ್ಥಿರ ಯೌವನವತಿಯರು.

ಕೃಷ್ಣನ ರೋಮ ಕೂಪಗಳಿಂದ ಮೂವತ್ತು ಕೋಟಿ ಸಂಖ್ಯೆಯಲ್ಲಿ ಗೋಪಾಲಕರು ಉದಿಸಿದರು. ಅವರೆಲ್ಲರೂ ಕೃಷ್ಣನಂತೇ ಕಾಣುತ್ತಿದ್ದರು.

ಕೃಷ್ಣನ ರೋಮಕೂಪಗಳಿಂದ ಗೋವುಗಳೂ ಉದಿಸಿದುವು. ನಾನಾಬಗೆಯ ಗೂಳಿಗಳು, ಹಸುಗಳು, ಕರುಗಳು, ನಾನಾವರ್ಣದವು. ಸ್ಥಿರಯೌವನ ಉಳ್ಳವು. ಬಲು ಸುಂದರವಾಗಿದ್ದುವು. ಅವುಗಳಲ್ಲಿಯೆ ಕೋಟಿ ಸಿಂಹಗಳ ಬಲದಿಂದ ಕೂಡಿದ್ದ ಒಂದು ಗೂಳಿಯನ್ನು ಶಿವನಿಗೆ ವಾಹನವಾಗಿ ಕೃಷ್ಣನಿತ್ತ.

ಕೃಷ್ಣನ ಪಾದ ನಖರಂಧ್ರಗಳಿಂದ ಹಂಸಗಳು ಉದಿಸಿದುವು. ಹೆಣ್ಣುಗಂಡು ಮರಿಗಳು ಎಲ್ಲವೂ ಮನೋಹರ. ಅವುಗಳಲ್ಲಿ ಮಹಾಬಲಶಾಲಿಯಾದ ಒಂದು ಹಂಸವನ್ನು ಕೃಷ್ಣ ಬ್ರಹ್ಮನಿಗೆ ವಾಹನವಾಗಿ ಇತ್ತ.

ಕೃಷ್ಣನ ಎಡಕಿವಿಯಿಂದ ಮನೋಹರವಾದ ಬಿಳಿ ಕುದುರೆಗಳು ಪ್ರಾದುರ್ಭವಿ-ಸಿದುವು. ಅವುಗಳಲ್ಲೊಂದನ್ನು ಕೃಷ್ಣ ಧರ್ಮನಿಗೆ ವಾಹನವಾಗಿತ್ತ.

ಕೃಷ್ಣನ ಬಲಗಿವಿಯಿಂದ ಮಹಾಬಲಿ ಪರಾಕ್ರಮದ ಸಿಂಹಗಳು ಉದಿಸಿದುವು. ಅವುಗಳಲ್ಲಿ ಒಂದನ್ನು ಕೃಷ್ಣ ದುರ್ಗೆಗೆ ವಾಹನವಾಗಿತ್ತ. ಜೊತೆಗೆ ಅಮೂಲ್ಯವಾದ ಒಂದು ರತ್ನಹಾರವನ್ನೂ ಇತ್ತ.

ಯೋಗೇಶ್ವರನಾದ ಕೃಷ್ಣ ಯೋಗದಿಂದ ಐದು ರಥಗಳನ್ನು ನಿರ್ಮಿಸಿದ. ಅವು ಮನೋವೇಗದಿಂದ ಧಾವಿಸಬಲ್ಲುವು. ಲಕ್ಷಯೋಜನ ಎತ್ತರ. ನೂರು ಯೋಜನ

ವಿಸ್ತಾರ. ಲಕ್ಷಚಕ್ರಗಳು, ಅದರಲ್ಲಿ ಲಕ್ಷ ಕ್ರೀಡಾಗೃಹಗಳಿವೆ. ಶೃಂಗಾರ ಭೋಗ ವಸ್ತು ಸಮೇತವಾದ ಅಸಂಖ್ಯ ಶಯ್ಯೆಗಳಿವೆ. ಲಕ್ಷ ರತ್ನ ದೀಪಗಳಿವೆ. ಬೆಂಕಿಯಂತೆ ಹೊಳೆವ ಚಿತ್ರ ಧ್ವಜಪತಾಕೆಗಳಿವೆ. ಮುತ್ತಿನ ಜಾಲಗಳಿಂದ ಮತ್ತು ಮಾಣಿಕ್ಯ ವಜ್ರಾದಿ ಮಾಲೆಗಳಿಂದ ಶೋಭಿಸುತ್ತಿವೆ. ಅವುಗಳಲ್ಲಿ ಒಂದನ್ನು ನಾರಾಯಣನಿಗೆ, ಇನ್ನೊಂದನ್ನು ರಾಧೆಗೂ ಕೊಟ್ಟು ಉಳಿದುವನ್ನು ಕೃಷ್ಣ ತನ್ನಲ್ಲೇ ಇರಿಸಿಕೊಂಡ.

ಕೃಷ್ಣನ ಗುಹ್ಯ ಪ್ರದೇಶದಿಂದ ಪಿಂಗಲ ವರ್ಣದ ಕುಬೇರ ಉದ್ಭವಿಸಿದ. ಜೊತೆಗೆ ಪಿಂಗಟ ವರ್ಣದ ಗಣಗಳೂ ಉದಿಸಿದರು. ಗುಹ್ಯದಿಂದ ಬಂದವರಾದ್ದರಿಂದ ಅವರಿಗೆ ಗುಹ್ಯಕರೆಂದೇ ಹೆಸರು. ಅವರ ನಾಯಕ ಕುಬೇರ. ಅವನೆ ಧನಾಧಿಪತಿ.

ಕುಬೇರನ ಎಡಭಾಗದಿಂದ ಅವನ ಮಡದಿ ಮನೋರಮೆ ಮೂಡಿ ಬಂದಳು. ಕೃಷ್ಣನ ಗುಹ್ಯಪ್ರದೇಶದಿಂದ ವಿಕಾರಮುಖದ ಭೂತಪ್ರೇತ ಪಿಶಾಚ ಕೂಷ್ಮಾಂಡ ಭೈರವ ಬ್ರಹ್ಮರಾಕ್ಷಸ ಬೇತಾಳಗಳೂ ಪ್ರಾದುರ್ಭವಿಸಿದುವು.

ಕೃಷ್ಣನ ಮುಖದಿಂದ ಚತುರ್ಭುಜರಾದ ಪಾರ್ಷದರು ಜನಿಸಿದರು. ಅವರೆಲ್ಲ ಪೀತಾಂಬರ ಉಟ್ಟು ಶಂಖಚಕ್ರಗದಾಪದ್ಮ ಕಿರೀಟಕುಂಡಲ ವನಮಾಲೆಗಳನ್ನು ರತ್ನಾಭರಣಗಳನ್ನೂ ತೊಟ್ಟಿದ್ದರು.

ಕೃಷ್ಣ ಈ ಚತುರ್ಭುಜರಾದ ಪಾರ್ಷದರನ್ನು ನಾರಾಯಣನಿಗೂ ಗುಹ್ಯಕರನ್ನು ಕುಬೇರನಿಗೂ ಭೂತಪ್ರೇತ ಮೊದಲಾದುವನ್ನು ಶಿವನಿಗೂ ಕೊಟ್ಟ.

ಕೃಷ್ಣನ ಪಾದಕಮಲಗಳಿಂದ ಕೃಷ್ಣಭಕ್ತರು ಜನಿಸಿದರು. ಅವರೆಲ್ಲ ದ್ವಿಭುಜರು. ಶ್ಯಾಮವರ್ಣದವರು ಕೈಯಲ್ಲಿ ಜಪಮಾಲೆ ಹಿಡಿದವರು. ಕೃಷ್ಣನ ಪಾದಕಮಲಗಳನ್ನೇ ಸದಾ ಧ್ಯಾನಿಸುತ್ತ ದಾಸರಾಗಿ ಆರಾಧಿಸುವವರು. ಮೈಯೆಲ್ಲ ರೋಮಾಂಚಗೊಂಡು ಕಣ್ಣಲ್ಲಿ ಆನಂದಾಶ್ರು ಹರಿಸಿ ಗದ್ಗದ ಕಂಠದಿಂದ ಕೃಷ್ಣನ ಗುಣಗಾನ ಮಾಡುವವರು.

ಕೃಷ್ಣನ ಬಲಗಣ್ಣಿಂದ ರುರು, ಸಂಹಾರ, ಕಾಲ, ಅಸಿತ, ಕ್ರೋಧ, ಭೀಷಣ, ಮಹಾಭೈರವ, ಖಟ್ವಾಂಗರೆಂಬ ಎಂಟು ಮಂದಿ ಭೈರವರು ಜನಿಸಿದರು. ಅವರೆಲ್ಲ ಮುಕ್ಕಣ್ಣರು. ದಿಗಂಬರರು, ತ್ರಿಶೂಲ, ಪಟ್ಟಿಶಗಳನ್ನು ಹಿಡಿದ ಬೆಂಕಿಯ ಜ್ವಾಲೆಯಂತೆ ಜ್ವಲಿಸುವ ಮಹಾಕಾಯದವರು, ಭಯಂಕರರು, ಚಂದ್ರಶೇಖರರಾಗಿ ಶಿವನಂತೆ ಹೊಳೆವವರು.

ಕೃಷ್ಣನ ಎಡಗಣ್ಣಿಂದ ದಿಕ್ಪಾಲಕರಿಗೊಡೆಯನಾದ ಈಶಾನ ಉದಿಸಿದ. ಅವನೂ ತ್ರಿಶೂಲ ಪಟ್ಟಿಶ ಗದಾಧಾರಿಯಾದ, ವ್ಯಾಘ್ರಚರ್ಮ ಉಟ್ಟ ಮಹಾಕಾಯದವನು. ಮುಕ್ಕಣ್ಣ ಮತ್ತು ಚಂದ್ರಶೇಖರ. ಕೃಷ್ಣನ ಮೂಗಿನ ಹೊಳ್ಳೆಯಿಂದ ಡಾಕಿನಿಯರು

ಯೋಗಿನಿಯರು ಕ್ಷೇತ್ರಪಾಲರು ಸಹಸ್ರ ಸಂಖ್ಯೆಯಲ್ಲಿ ಹುಟ್ಟಿದರು. ಕೃಷ್ಣನ ಬೆನ್ನಿನಿಂದ ದಿವ್ಯ ಶರೀರಗಳಾದ ಮೂರು ಕೋಟಿ ದೇವತೆಗಳು ಉದಿಸಿದರು.

**ಇಲ್ಲಿಗೆ ಶ್ರೀಬ್ರಹ್ಮವೈವರ್ತ ಮಹಾಪುರಾಣದ ಬ್ರಹ್ಮಖಂಡದಲ್ಲಿ ಸೌತಿ ಶೌನಕ ಸಂವಾದದಲ್ಲಿ ಸೃಷ್ಟಿ ನಿರೂಪಣದಲ್ಲಿ ರಾಧಾಕೃಷ್ಣರಿಂದ ಗೋಪಾಂಗನೆಯರ ಮತ್ತು ಗೋಪಾಲಕರ ಪ್ರಾದುರ್ಭಾವದ ಐದನೆ ಅಧ್ಯಾಯ ಮುಗಿಯಿತು.**

## ಕೃಷ್ಣನಿಂದ ಶಿವದುರ್ಗೆಯರಿಗೆ ಮಂತ್ರೋಪದೇಶ, ಬ್ರಹ್ಮನಿಗೆ ಸೃಷ್ಟಿಯ ಆದೇಶ

ಅಧ್ಯಾಯ-೬

ಕೃಷ್ಣ ಮಹಾಲಕ್ಷ್ಮಿಯನ್ನು ಸರಸ್ವತಿಯನ್ನೂ ಕೌಸ್ತುಭ ವನಮಾಲೆಗಳೊಂದಿಗೆ ನಾರಾಯಣನಿಗಿತ್ತ. ಸಾವಿತ್ರಿಯನ್ನು ಬ್ರಹ್ಮನಿಗಿತ್ತ. ಮೂರ್ತಿಯನ್ನು ಧರ್ಮನಿಗೂ, ರತಿಯನ್ನು ಕಾಮನಿಗೂ ಮನೋರಮೆಯನ್ನು ಕುಬೇರನಿಗೂ ಇತ್ತ. ಮತ್ತು ಉಳಿದವರಿಗೆ ಅವರವರ ಅಂಗಗಳಿಂದ ಜನಿಸಿದ ದೇವಿಯರನ್ನು ಅವರವರಿಗೇ ಕೊಟ್ಟ.

ಯೋಗೀಶ್ವರನಾದ ಶಂಕರನನ್ನು ಕರೆದು ದುರ್ಗೆಯನ್ನು ಪರಿಗ್ರಹಿಸು ಎಂದ. ಆಗ ಶಂಕರ ಭೀತನಾಗಿ ಕೃಷ್ಣನಿಗೆ ಪ್ರಣಾಮ ಮಾಡಿ ಹೇಳಿದ-

'ದುರ್ಗೆಯನ್ನು ನಾನೀಗ ಮದುವೆಯಾಗಲಾರೆ, ಪ್ರಭು! ನಿನ್ನ ಭಕ್ತಿಯ, ನಿನ್ನ ದಾಸ್ಯದ ಮಾರ್ಗದಲ್ಲಿ ಆಕೆ ಎಲ್ಲರಿಗೂ ಅಡಚಣೆಯಾಗುವವಳು. ತತ್ವಜ್ಞಾನಕ್ಕೆ ಯೋಗಾಭ್ಯಾಸಕ್ಕೆ ವಿರೋಧಿನಿ. ಮೋಕ್ಷೇಚ್ಛೆಯನ್ನೂ ನಾಶಮಾಡುವಳು. ವಿಷಯಾಭಿಲಾಷೆ ಹೆಚ್ಚಿಸುವಳು. ತಪಸ್ಸನ್ನು ತಡೆದು ಮಹಾಮೋಹ ನೀಡುವಳು. ಸಂಸಾರದ ಕಾರಾಗಾರದಲ್ಲಿ ಸಂಕೋಲೆಯಾಗಿರುವಳು. ಸದ್ಬುದ್ಧಿ ಕಳೆದು ದುರ್ಬುದ್ಧಿ ಕೊಡುವಳು. ದುಃಖಭೋಗ ನೀಡುವಳು. ಇಂಥ ದುರ್ಗೆಯನ್ನು ನಾ ಬಯಸಲಾರೆ.'

'ಪ್ರಭು, ನನಗೆ ವರನೀಡು. ಭಕ್ತರಿಗೆ ಬೇಕಾದ ವರ ನೀಡುವವನೆ ಭಗವಂತ ತಾನೆ? ನನಗೆ ನಿನ್ನ ಭಕ್ತಿಯಲ್ಲಿ ದಾಸ್ಯದಲ್ಲಿ ಆಸಕ್ತಿ ಸದಾ ಬೆಳೆಯುವಂತೆ ನಿನ್ನ ನಾಮ ಜಪದಲ್ಲಿ ಪಾದಸೇವೆಯಲ್ಲಿ ತೃಪ್ತಿಯಾಗದಂತೆ, ನನ್ನ ಐದು ಮುಖಗಳಿಂದಲೂ ನಿನ್ನ ದಿವ್ಯ ಮಂಗಲ ನಾಮವನ್ನು ಸ್ವಪ್ನದಲ್ಲೂ ಜಾಗರದಲ್ಲೂ ಸದಾ ಹಾಡುತ್ತ

ತಿರುಗುವಂತೆ, ಕೋಟಿ ಕಲ್ಪಗಳಲ್ಲೂ ನಿನ್ನ ಧ್ಯಾನದಲ್ಲಿಯೆ ಮುಳುಗುವಂತೆ, ಭೋಗೇಚ್ಛೆಗೆ ಮನಸೋಲದಂತೆ, ನಿನ್ನ ಸೇವೆ ಪೂಜೆ ವಂದನೆ ನಾಮ ಸಂಕೀರ್ತನೆ-ಗಳಿದ್ದರೆ ಸಮಾಧಾನ, ಅದಿಲ್ಲದಿದ್ದರೆ ಕಳವಳವಾಗುವಂತೆ ವರನೀಡು.

ಸ್ಮರಣ, ಕೀರ್ತನ, ಶ್ರವಣ, ಜಪ, ಧ್ಯಾನ, ಪಾದಸೇವನ, ವಂದನ, ಆತ್ಮನಿವೇದನ, ನೈವೇದ್ಯ, ಭೋಜನ, ಎಂಬ ನವವಿಧ ಭಕ್ತಿಯನ್ನು ನೀಡು.

ಸಾಷ್ಟಿಕ, ಸಾಲೋಕ್ಯ, ಸಾರೂಪ್ಯ, ಸಾಮೀಪ್ಯ, ಸಾಮ್ಯ, ಸಾಯುಜ್ಯ ಎಂಬ ಆರುಬಗೆಯ ಮೋಕ್ಷಗಳು, ಅಣಿಮಾ, ಗರಿಮಾ, ಲಘಿಮಾ, ಪ್ರಾಪ್ತಿ, ಪ್ರಾಕಾಮ್ಯ, ಮಹಿಮಾ, ಈಶಿತ್ವ, ವಶಿತ್ವ, ಸರ್ವಕಾಮಾವಸಾಯಕಾ, ಸಾರ್ವಜ್ಞ, ದೂರಶ್ರವಣ, ಪರಕಾಯ ಪ್ರವೇಶ, ವಾಕ್ಸಿದ್ಧಿ, ಕಲ್ಪವೃಕ್ಷತ್ವ, ಸೃಷ್ಟಿಶಕ್ತಿ, ಸಂಹಾರಶಕ್ತಿ, ಅಮರತ್ವ, ಸರ್ವಾಗ್ರ್ಯತ್ವ ಎಂಬ ಹದಿನೆಂಟು ಯೋಗಸಿದ್ಧಿಗಳು. ಯೋಗ, ತಪಸ್ಸು, ದಾನ, ವ್ರತ, ಯಶಸ್ಸು, ಕೀರ್ತಿ, ವಾಕ್‌ಶಕ್ತಿ, ಸತ್ಯ, ಧರ್ಮ, ಉಪವಾಸ, ತೀರ್ಥಾಟನ, ಸ್ನಾನ, ಅನ್ಯಸುರಾರ್ಚನ, ಅನ್ಯಸುರಾರ್ಚನೆಯ ದರ್ಶನ, ಸರ್ವ ಭೂಪ್ರದಕ್ಷಿಣ, ಸರ್ವಸಮುದ್ರಸ್ನಾನ, ಸ್ವರ್ಗದರ್ಶನ, ಬ್ರಹ್ಮತ್ವ, ರುದ್ರತ್ವ ವಿಷ್ಣುತ್ವ ಇನ್ನೂ ಏನೇನು ಅನಿರ್ವಚನೀಯ ಅಭೀಷ್ಟ ಸಿದ್ಧಿಗಳಿವೆಯೊ ಅವೆಲ್ಲ ನಿನ್ನ ಭಕ್ತಿಯ ಹದಿನಾರನೆ ಒಂದಂಶಕ್ಕೆ ಸಮನಲ್ಲ.'

ಯೋಗಿಶ್ರೇಷ್ಠನಾದ ಶಿವನ ಈ ಮಾತು ಕೇಳಿ ಕೃಷ್ಣ ನಗುತ್ತ ನುಡಿದ-

'ಶಂಕರ, ನೀನು ಕೋಟಿಕಲ್ಪಕಾಲ ನನ್ನ ಪೂರ್ಣಸೇವೆ ಮಾಡು. ತಪಸ್ವಿಗಳಿಗೆ, ಯೋಗಿಗಳಿಗೆ, ಸಿದ್ಧರಿಗೆ, ಜ್ಞಾನಿಗಳಿಗೆ, ವೈಷ್ಣವರಿಗೆಲ್ಲ ನೀನೆ ಮೊದಲಿಗನೆನಿಸು. ಅಮರತ್ವಪಡೆ. ಮೃತ್ಯುಂಜಯನೆನಿಸು. ಸರ್ವವೇದಜ್ಞನಾಗು.

ಅಸಂಖ್ಯ ಬ್ರಹ್ಮಲಯಗಳನ್ನು ಜ್ಞಾನದೃಷ್ಟಿಯಿಂದ ನೀನು ಕಾಣುವೆ. ಪರಾಕ್ರಮ ಕೀರ್ತಿಗಳಲ್ಲಿ ನನಗೆ ಸಮಾನನೆನಿಸುವೆ. ಪ್ರಾಣಕ್ಕಿಂತ ಮಿಗಿಲಾದವ ನೀನು. ನನಗೆ ನಿನಗಿಂತ ಮೇಲಾದ ಭಕ್ತನಿಲ್ಲ. ನಿನಗಿಂತ ಹೆಚ್ಚು ಪ್ರೀತಿಪಾತ್ರನಿಲ್ಲ. ಯಾರು ನಿನ್ನನ್ನು ನಿಂದಿಸುವರೊ ಅವರು ಪರಮ ಪಾಪಿಗಳು, ಅಜ್ಞಾನಿಗಳು, ಅವಿವೇಕಿಗಳು. ಸೂರ್ಯ ಚಂದ್ರರಿರುವಷ್ಟು ಕಾಲ ಅವರು ದುಃಖಿಗಳಾಗುವರು. ಕೋಟಿಕಲ್ಪಗಳ ಬಳಿಕ-ವಾದರೂ ನೀನು ದುರ್ಗೆಯನ್ನು ಮದುವೆಯಾಗಲೆ ಬೇಕು. ಆ ಮೂಲಕ ನನ್ನ ಮಾತನ್ನು ನಡೆಸಬೇಕು.

ನಾನೀಗ ಮದುವೆಯಾಗಲಾರೆನೆಂಬ ನಿನ್ನ ಮಾತಿನಿಂದ ಮುಂದೆ ಮದುವೆಯಾಗು-ವೆನೆಂದೇ ಹೇಳಿದಂತಾಯಿತು. ಆ ನಿನ್ನ ಮಾತನ್ನು ನೀನು ನಡೆಸಬೇಕು. ದುರ್ಗೆಯನ್ನು ಮದುವೆಯಾಗಿ ಸಹಸ್ರ ದಿವ್ಯವರ್ಷಕಾಲ ದೀರ್ಘವಾದ ಶೃಂಗಾರಲೀಲೆ ನಡೆಸಬೇಕು.

ಮದುವೆಯಿಂದ ದುಃಖವೆನ್ನುವುದು ಕೆಲವೆಡೆ ಸತ್ಯವಾಗಬಹುದು. ಕೆಟ್ಟ ಹೆಂಡತಿ ದುಃಖದಾಯಕಳು. ಪತಿವ್ರತಾಸ್ತ್ರೀ ಹಾಗಲ್ಲ. ಒಳ್ಳೆಯ ಕುಲದ ಹೆಂಡತಿ ಪತಿಯನ್ನು ಪುತ್ರನಂತೆಯೆ ಪ್ರೀತಿಯಿಂದ ಪಾಲಿಸುವಳು. ಕುಲಸ್ತ್ರೀಗೆ ಪತಿಯೆ ಬಂಧು, ಪತಿಯೆ ರಕ್ಷಕ, ಪತಿಯೆ ದೇವತೆ. ಅವನು ಪತಿತನಿರಲಿ ಸಭ್ಯನಿರಲಿ ಶ್ರೀಮಂತನಿರಲಿ ದರಿದ್ರ-ನಿರಲಿ ಏನೂ ಪರಿಗಣಿಸಲಾರಳು.

ಕೆಟ್ಟಕುಲದವಳು ತಂದೆ ತಾಯಿಗಳಿಂದ ದುರಾಚಾರ ಕಲಿತು ಪತಿಯನ್ನು ತೊರೆಯುತ್ತಾಳೆ ಪರಪುರುಷರನ್ನು ಸೇರುತ್ತಾಳೆ.

ಪತಿಯನ್ನು ದೇವತೆಗಿಂತ ಹೆಚ್ಚಾಗಿ ಪೂಜಿಸುವ ಸತಿ ಗೋಲೋಕದಲ್ಲಿ ಪತಿ-ಯೊಡನೆ ಕೋಟಿಕಲ್ಪ ಕಾಲ ಸುಖಪಡುವಳು. ಆದ್ದರಿಂದ ನೀನು ಮದುವೆಯಾಗು.

ದುರ್ಗಾಸಹಿತನಾದ ನಿನ್ನ ಸಹಸ್ರ ಲಿಂಗಗಳಿಗೆ ಪುಣ್ಯಕ್ಷೇತ್ರದಲ್ಲಿ ಗಂಧಪುಷ್ಪ ಧೂಪದೀಪ ನೈವೇದ್ಯಗಳೆಂಬ ಪಂಚಪೂಜೆ ಸಲ್ಲಿಸುವವನು ಕೋಟಿ ಕಲ್ಪಕಾಲ ಗೋಲೋಕದಲ್ಲಿ ನನ್ನೊಡನೆ ವಿಹರಿಸುವನು. ಲಕ್ಷಲಿಂಗಾರ್ಚನೆ ಮಾಡುವವನಿಗೆ ಗೋಲೋಕದಿಂದ ಚ್ಯುತಿಯೆ ಇಲ್ಲ. ಮಣ್ಣು, ಭಸ್ಮ, ಗೋಮಯ, ಮರಳುಗಳಿಂದ ಮಾಡಿದ ಲಿಂಗವನ್ನು ಒಮ್ಮೆ ಅರ್ಚಿಸಿದರೂ ಹತ್ತು ಸಾವಿರ ಕಲ್ಪಕಾಲ ಸ್ವರ್ಗದಲ್ಲಿ ವಾಸ ಲಭಿಸುತ್ತದೆ.

ಲಿಂಗಾರ್ಚನೆಯಿಂದ ಸಂತತಿ, ಭೂಮಿ, ವಿದ್ಯೆ, ಸಂಪತ್ತು, ಜ್ಞಾನ, ಮುಕ್ತಿ ಎಲ್ಲ ಲಭಿಸುತ್ತದೆ. ಲಿಂಗಾರ್ಚನೆ ನಡೆಯುವ ಸ್ಥಳವೆಲ್ಲ ಪುಣ್ಯಕ್ಷೇತ್ರ. ಮಹಾದೇವ, ಮಹಾದೇವ, ಮಹಾದೇವ ಎಂದು ಹೇಳುವವನ ಹಿಂದೆ ಹಿಂದೆ ನಾನು ಬರುತ್ತೇನೆ, ಮಹಾಸ್ತೋತ್ರ ನಾಮ ಶ್ರವಣದ ಅಭಿಲಾಷೆಯಿಂದ.

ಶಿವ ಎನ್ನುತ್ತ ಪ್ರಾಣತ್ಯಾಗ ಮಾಡುವವನು ಕೋಟಿ ಜನ್ಮಗಳಲ್ಲಿ ಮಾಡಿದ ಪಾಪದಿಂದ ಮುಕ್ತನಾಗಿ ಮೋಕ್ಷ ಪಡೆಯುವನು. ಶಿವ ಎಂದರೆ ಶುಭ. ಮುಕ್ತಿಯೆ ಶುಭ. ಶಿವನಾಮಸಂಕೀರ್ತನದಿಂದ ಮುಕ್ತಿ ದೊರೆಯುವುದರಿಂದ ಶಿವ ಎಂಬ ಹೆಸರು ನಿನಗೆ ಸಾರ್ಥಕ. ಧನಸಂಪತ್ತನ್ನೂ ಬಂಧುವರ್ಗವನ್ನು ಕಳೆದುಕೊಂಡು ಶೋಕ-ಸಾಗರದಲ್ಲಿ ಮುಳುಗಿದವನೂ ಶಿವ ಎಂದು ಉಚ್ಚರಿಸಿದ ಮಾತ್ರಕ್ಕೆ ಎಲ್ಲವನ್ನೂ ತಿರುಗಿ ಪಡೆಯುತ್ತಾನೆ.

ಪಾಪಘ್ನೇ ವರ್ತತೇ ಶಿಶ್ಚ ವಶ್ಚ ಮುಕ್ತಿಪ್ರದೇ ತಥಾ ।<br>ಪಾಪಘ್ನೋ ಮೋಕ್ಷದೋ ನೃಣಾಂ ಶಿವಸ್ತೇನ ಪ್ರಕೀರ್ತಿತಃ ॥

'ಶಿ' ಎಂದರೆ ಪಾಪಪರಿಹಾರಕ. 'ವ' ಎಂದರೆ ಮುಕ್ತಿದಾಯಕ. ಪಾಪ-ಪರಿಹಾರಕನೂ ಮುಕ್ತಿದಾಯಕನೂ ಆಗಿರುವುದರಿಂದ ನೀನು ಶಿವನೆನಿಸಿರುವಿ. ಶಿವನೆಂಬ ಮಂಗಳನಾಮ ಉಚ್ಚರಿಸುವವ ಕೋಟಿ ಜನ್ಮಗಳಲ್ಲಿ ಮಾಡಿದ ಪಾಪಗಳಿಂದ ಮುಕ್ತನಾಗುವನು.

ಹೀಗೆ ಹೇಳಿ ಕೃಷ್ಣ ಶಿವನಿಗೆ ಕಲ್ಪವೃಕ್ಷದಂತೆ ಸಕಲಾಭೀಷ್ಟದಾಯಕವಾದ ಮಂತ್ರಗಳನ್ನು ಉಪದೇಶಿಸಿ, ಮೃತ್ಯುವನ್ನು ಗೆಲ್ಲುವಂಥ ಸಕಲಾಭೀಷ್ಟದಾಯಕವಾದ ಮಂತ್ರಗಳನ್ನು ಉಪದೇಶಿಸಿ, ಮೃತ್ಯುವನ್ನು ಗೆಲ್ಲುವಂಥ ತತ್ವಜ್ಞಾನವನ್ನೂ ನೀಡಿದ.

ಬಳಿಕ ಕೃಷ್ಣ ದುರ್ಗೆಗೆ ಹೇಳಿದ— ''ಮಗಳೆ, ನೀನೀಗ ಗೋಲೋಕದಲ್ಲಿ ನನ್ನ ಬಳಿಯೆ ಇರು. ಕಾಲ ಬಂದಾಗ ಶಿವನನ್ನು ಸೇರುವಿ. ಎಲ್ಲ ದೇವತೆಗಳ ತೇಜಸ್ಸಿನಲ್ಲೂ ನೀನು ಇದ್ದು ಅವರ ಮೂಲಕ ದೈತ್ಯರನ್ನು ಸಂಹರಿಸಿ ಸರ್ವಪೂಜ್ಯಳೆನಿಸುವಿ. ಮುಂದೆ ಒಂದು ಕಲ್ಪದಲ್ಲಿ ದಕ್ಷಕನ್ಯೆಯಾಗಿ ಜನಿಸಿ ಶಿವನನ್ನು ಮದುವೆಯಾಗಿ, ದಕ್ಷಯಜ್ಞದಲ್ಲಿ ಪತಿನಿಂದೆ ಕೇಳಿ, ಶರೀರತ್ಯಾಗ ಮಾಡಿ, ಹಿಮಾಲಯನಿಂದ ಮೇನೆಯಲ್ಲಿ ಪಾರ್ವತಿಯಾಗಿ ಜನಿಸುವಿ. ಆಗ ಪುನಃ ಶಿವನನ್ನು ಮದುವೆಯಾಗಿ ಒಂದು ಸಾವಿರ ದಿವ್ಯ ವರ್ಷಗಳ ಕಾಲ ಶಿವನೊಡನೆ ವಿಹಾರ ಮಾಡುವಿ. ಅವನಲ್ಲೆ ಐಕ್ಯ ಹೊಂದುವಿ.

ಎಲ್ಲ ಕಾಲಗಳಲ್ಲೂ ಶರತ್ಕಾಲದ ಮಹಾಪೂಜೆಯಲ್ಲಿ ನೀನು ಪೂಜೆಗೊಳ್ಳುವಿ. ಗ್ರಾಮನಗರಗಳಲ್ಲೆಲ್ಲ ನಾನಾ ನಾಮಗಳಿಂದ ಗ್ರಾಮದೇವತೆಯಾಗಿ ಪೂಜ್ಯಳಾಗುವಿ.

ನನ್ನಾಜ್ಞೆಯಂತೆ ಶಿವನು ರಚಿಸುವ ಶಾಸ್ತ್ರಗಳ ಮೂಲಕ ನಿನ್ನ ಪೂಜಾವಿಧಿಯನ್ನೂ ಕವಚ ಸ್ತೋತ್ರಗಳನ್ನೂ ವಿಧಿಸುವೆನು. ನಿನ್ನ ಆರಾಧಕರು ಧರ್ಮ ಅರ್ಥ ಕಾಮ ಮೋಕ್ಷಗಳಿಗೆ ಭಾಗಿಗಳಾಗುವರು. ಪುಣ್ಯಕ್ಷೇತ್ರವಾದ ಭಾರತದಲ್ಲಿ ಯಾರು ನಿನ್ನನ್ನು ಪೂಜಿಸುವರೋ ಅವರ ಯಶಸ್ಸು, ಕೀರ್ತಿ, ಧರ್ಮ, ಐಶ್ವರ್ಯವೆಲ್ಲವೂ ವೃದ್ಧಿಯಾಗುವುವು.''

ಹೀಗೆ ಹೇಳಿ ಕೃಷ್ಣ ದುರ್ಗೆಗೆ ಕಾಮ ಬೀಜ ಸಹಿತವಾದ ಏಕಾದಶಾಕ್ಷರ ಮಂತ್ರವನ್ನು ಉಪದೇಶಿಸಿದ. ಶ್ರೀಮಾಯಾ ಕಾಮಬೀಜ ಸಹಿತವಾದ ದಶಾಕ್ಷರ ಮಂತ್ರವನ್ನೂ ಉಪದೇಶಿಸಿದ.

ಶಿವನಿಗೂ ಕವಚ ಸ್ತೋತ್ರ ಸಹಿತವಾಗಿ ತ್ರಯೋದಶಾಕ್ಷರ ಮಂತ್ರವನ್ನು ಉಪದೇಶಿಸಿದ. ಧರ್ಮ, ಕಾಮ, ವಹ್ನಿ, ಕುಬೇರ, ವಾಯು ಮುಂತಾದ ದೇವತೆ-ಗಳೆಲ್ಲರಿಗೂ ಮಂತ್ರ ಕವಚ ಸ್ತೋತ್ರಗಳನ್ನು ನೀಡಿದ.

ಬ್ರಹ್ಮನಿಗೆ ಜಗತ್‌ಸೃಷ್ಟಿ ಮಾಡಲು ಆಜ್ಞಾಪಿಸಿದ. ಸೃಷ್ಟಿಮಾಡುವುದರಿಂದಲೆ ಬ್ರಹ್ಮನಿಗೆ ವಿಧಿ ಎಂಬ ಹೆಸರು ಒಪ್ಪುವುದು. ಕೃಷ್ಣ ಹೇಳಿದ, 'ಒಂದು ಸಾವಿರ

ದಿವ್ಯವರ್ಷಕಾಲ ನನ್ನ ಕುರಿತು ತಪಸ್ಸು ಮಾಡು' ಎಂದು. ಹೀಗೆ ಹೇಳಿ ಒಂದು ಸುಂದರವಾದ ಮಾಲೆಯನ್ನು ನೀಡಿ ಗೋಪ ಗೋಪಿಯರೊಡನೆ ವೃಂದಾವನಕ್ಕೆ ಹೊರಟ ಕೃಷ್ಣ.

**ಇಲ್ಲಿಗೆ ಶ್ರೀಬ್ರಹ್ಮವೈವರ್ತ ಮಹಾಪುರಾಣದ ಸೌತಿಶೌನಕ ಸಂವಾದದಲ್ಲಿ ಸೃಷ್ಟಿ ನಿರೂಪಣವೆಂಬಲ್ಲಿ ಕೃಷ್ಣನಿಂದ ಶಿವದುರ್ಗೆಯರಿಗೆ ಮಂತ್ರೋಪದೇಶ ಎಂಬಲ್ಲಿ ಆರನೆ ಅಧ್ಯಾಯ ಮುಗಿಯಿತು.**

## ಅಧ್ಯಾಯ-೭

## ಬ್ರಹ್ಮನಿಂದ ಸಪ್ತದ್ವೀಪ, ಸಪ್ತಸಾಗರ ಎಂಟು ಪರ್ವತ ಸಹಿತ ಬ್ರಹ್ಮಾಂಡ ಸೃಷ್ಟಿ

ಚತುರ್ಮುಖನು ತಪಸ್ಸು ಮಾಡಿ ಸಿದ್ಧಿಪಡೆದು ಮೊದಲಿಗೆ ಮಧುಕೈಟಭರ ಮೇದಸ್ಸಿನಿಂದ ಭೂಮಿಯನ್ನು ನಿರ್ಮಿಸಿದ.

ಭೂಮಿಯಲ್ಲಿ ಮುಖ್ಯವಾದ ಎಂಟು ಪ್ರಧಾನ ಪರ್ವತಗಳನ್ನೂ ಅಸಂಖ್ಯ ಸಣ್ಣಪರ್ವತಗಳನ್ನೂ ಸೃಜಿಸಿದ. ಮೇರು, ಕೈಲಾಸ, ಮಲಯ, ಹಿಮಾಲಯ, ಉದಯ, ಅಸ್ತ, ಸುವೇಲ, ಗಂಧಮಾದನ ಇವೇ ಎಂಟು ಪ್ರಧಾನ ಪರ್ವತಗಳು.

ಏಳು ಸಮುದ್ರಗಳನ್ನೂ ಏಳು ದ್ವೀಪಗಳನ್ನೂ ಅನೇಕ ನದನದಿಗಳನ್ನೂ ಗ್ರಾಮನಗರಗಳನ್ನೂ ವೃಕ್ಷಗಳನ್ನೂ ನಿರ್ಮಿಸಿದ. ಲವಣ, ಇಕ್ಷು, ಸುರಾ, ಸರ್ಪಿ, ದಧಿ, ದುಗ್ಧ, ಶುದ್ಧೋದ ಇವು ಏಳು ಸಮುದ್ರಗಳು. ಒಂದು ಲಕ್ಷ ಯೋಜನಗಳಿಂದ ತೊಡಗಿ ಕ್ರಮವಾಗಿ ಎರಡೆರಡು ಪಟ್ಟು ವಿಸ್ತಾರವಾದವು. ಜಂಬು, ಶಾಕ, ಕುಶ, ಪ್ಲಕ್ಷ, ಕ್ರೌಂಚ, ನ್ಯಗ್ರೋಧ, ಪುಷ್ಕರ ಇವು ಏಳು ದ್ವೀಪಗಳು.

ಮೇರುವಿನ ಎಂಟು ಶಿಖರಗಳಲ್ಲಿ ಎಂಟು ಲೋಕಪಾಲಕರ ವಿಹಾರಕ್ಕಾಗಿ ಎಂಟು ನಗರಗಳನ್ನು ನಿರ್ಮಿಸಿದ. ಮೇರುವಿನ ಬುಡದಲ್ಲಿ ಶೇಷನಿಗೂ ನಗರ ಕಟ್ಟಿಸಿಕೊಟ್ಟ. ಮೇಲ್ಗಡೆ ಏಳು ಸ್ವರ್ಗಲೋಕಗಳನ್ನು ನಿರ್ಮಿಸಿದ. ಭೂಲೋಕ, ಭುವರ್ಲೋಕ, ಸ್ವರ್ಲೋಕ, ಜನೋಲೋಕ, ತಪೋಲೋಕ, ಸತ್ಯಲೋಕ ಇವೆ ಏಳು ಸ್ವರ್ಗಲೋಕಗಳು.

ಮೇರುವಿನ ತುದಿಯಲ್ಲಿ ಜರಾಮರಣ ವರ್ಜಿತವಾದ ಬ್ರಹ್ಮಲೋಕವನ್ನೂ ಅದಕ್ಕಿಂತ ಮೇಲೆ ಧ್ರುವಲೋಕವನ್ನೂ ನಿರ್ಮಿಸಿದ. ಮೇರುವಿನ ಕೆಳಗೆ ಏಳು ಪಾತಾಳ

ಲೋಕಗಳನ್ನೂ ನಿರ್ಮಿಸಿದ. ಅತಲ ವಿತಲ ಸುತಲ ತಲಾತಲ ಮಹಾತಲ ಪಾತಾಲ ರಸಾತಲ ಇವೆ ಆ ಏಳು ಪಾತಾಳಲೋಕಗಳು. ಇವು ಸ್ವರ್ಗಕ್ಕಿಂತಲೂ ಹೆಚ್ಚು ಭೋಗಪದಾರ್ಥಗಳಿಂದ ಕೂಡಿವೆ.

ಹೀಗೆ ಸಪ್ತದ್ವೀಪ ಸಪ್ತಸಾಗರ ಸಪ್ತ ಸ್ವರ್ಗ ಸಪ್ತ ಪಾತಾಳಗಳಿಂದ ಕೂಡಿದ ಬ್ರಹ್ಮಾಂಡಗಳು ಲೆಕ್ಕವಿಲ್ಲದಷ್ಟು ಮಹಾವಿಷ್ಣುವಿನ ರೋಮ ಕೂಪಗಳಲ್ಲಿ ಅಡಗುವುವು. ಪ್ರತಿ ವಿಶ್ವದಲ್ಲಿಯೂ ಬ್ರಹ್ಮವಿಷ್ಣು ಮಹೇಶ್ವರರು ಸುರನರಾದಿಗಳು ಕೃಷ್ಣನ ಮಾಯೆಯಿಂದ ಹುಟ್ಟುವವರು. ಕೃಷ್ಣನು ನಿರ್ಮಿಸುವ ಬ್ರಹ್ಮಾಂಡಗಳನ್ನು ಎಣಿಸಲು ಜಗದೀಶರಾದ ಶಿವಬ್ರಹ್ಮ ವಿಷ್ಣುಗಳೂ ಶಕ್ತರಲ್ಲ. ಇನ್ನು ಬೇರೆ ದೇವತೆಗಳು ಎಷ್ಟರವರು ?

ಎಣಿಸಲು ಶಕ್ತನಾದ ಕೃಷ್ಣನೂ ತಾನು ಸೃಜಿಸುವ ಬ್ರಹ್ಮಾಂಡಗಳ ಸಂಖ್ಯೆ ಇಷ್ಟೇ ಎಂದು ಹೇಳಲಾರ.

ಈ ವಿಶ್ವದಲ್ಲಿರುವ ಕಾರ್ಯವಸ್ತುಗಳೆಲ್ಲ ಅನಿತ್ಯ ಸ್ವಪ್ನದಂತೆ ನಶ್ವರ. ವೈಕುಂಠ ಶಿವಲೋಕ ಗೋಲೋಕಗಳು ಮಾತ್ರ ಆತ್ಮ ಆಕಾಶ ದಿಕ್ಕುಗಳಂತೆ ವಿಶ್ವ ಬಹಿರ್ಭೂತಗಳಾಗಿದ್ದು ನಿತ್ಯವಾಗಿವೆ.

**ಇಲ್ಲಿಗೆ ಶ್ರೀ ಬ್ರಹ್ಮವೈವರ್ತಮಹಾಪುರಾಣದ ಬ್ರಹ್ಮಖಂಡದಲ್ಲಿ ಸೌತಿ ಶೌನಕ ಸಂವಾದದಲ್ಲಿ ಬ್ರಹ್ಮನಿಂದ ಸಪ್ತದ್ವೀಪ, ಸಪ್ತಸಾಗರ, ಅಷ್ಟಕುಲಾಚಲ ಸಹಿತ ಬ್ರಹ್ಮಾಂಡ ನಿರ್ಮಾಣ ಎಂಬಲ್ಲಿ ಏಳನೆಯ ಅಧ್ಯಾಯ ಮುಗಿಯಿತು.**

## ಬ್ರಹ್ಮನಾರದ ಶಾಪೋಪಲಂಭನ

## ಅಧ್ಯಾಯ-೮

ಚತುರ್ಮುಖ ಬ್ರಹ್ಮ ಪ್ರಪಂಚ ಸೃಷ್ಟಿಮಾಡಿ ಸಾವಿತ್ರಿಯಲ್ಲಿ ಗರ್ಭಾಧಾನ ಮಾಡಿದ. ಅವಳು ನೂರು ದಿವ್ಯ ವರ್ಷಗಳ ಕಾಲ ಗರ್ಭಧರಿಸಿ ನಾಲ್ಕು ವೇದಗಳನ್ನೂ ತರ್ಕವ್ಯಾಕರಣಾದಿ ಶಾಸ್ತ್ರಗಳನ್ನೂ ಮೂವತ್ತಾರು ದಿವ್ಯ ರಾಗಿಣಿಯರನ್ನೂ, ಆರು ಸುಂದರ ರಾಗಗಳನ್ನೂ, ನಾನಾ ತಾಲಗಳನ್ನೂ, ಸತ್ಯ ತ್ರೇತಾದ್ವಾಪರ ಕಲಿಯುಗ-ಗಳನ್ನೂ, ವರ್ಷ ಮಾಸ ಋತು ತಿಥಿ ದಂಡ ಕ್ಷಣಾದಿಗಳನ್ನೂ, ದಿನ ರಾತ್ರಿ ವಾರ ಸಂಧ್ಯೆ ಉಷಃ ಕಾಲಗಳನ್ನೂ, ಪುಷ್ಟಿ ದೇವಸೇನಾ ಮೇಧಾ ವಿಜಯಾ ಜಯಾ ಮೊದಲಾದ ದೇವತೆಗಳನ್ನೂ, ಆರು ಮಂದಿ ಕೃತ್ತಿಕೆಯರನ್ನೂ, ಯೋಗ

ಕರಣಗಳನ್ನೂ, ಷಣ್ಮುಖನ ಭಾರ್ಯೆಯಾದ ದೇವಸೇನೆಯನ್ನೂ, ಬ್ರಾಹ್ಮ ಪಾದ್ಮ ವಾರಾಹ ಎಂಬ ಮೂರು ಕಲ್ಪಗಳನ್ನೂ, ನಿತ್ಯ ನೈಮಿತ್ತಿಕ ದ್ವಿಪರಾರ್ಧ ಪ್ರಾಕೃತವೆಂಬ ನಾಲ್ಕು ಬಗೆಯ ಪ್ರಳಯಗಳನ್ನೂ, ಕಾಲ ಮೃತ್ಯುಕನ್ಯೆ ಮತ್ತು ವ್ಯಾಧಿಗಳನ್ನೂ ಪ್ರಸವಿಸಿ ಎಲ್ಲರಿಗೂ ಎದೆ ಹಾಲನ್ನಿತ್ತಳು.

ಇತ್ತ ಬ್ರಹ್ಮನ ಬೆನ್ನಿನಿಂದ ಅಧರ್ಮನೂ ಅಧರ್ಮನ ಎಡ ಭಾಗದಿಂದ ಅಲಕ್ಷ್ಮಿಯೂ ಹುಟ್ಟಿದರು.

ಬ್ರಹ್ಮನ ನಾಭಿಯಿಂದ ಶಿಲ್ಪಿಗಳಿಗೆ ಮೂಲಪುರುಷನಾದ ವಿಶ್ವಕರ್ಮನೂ ಮಹಾಪರಾಕ್ರಮಿಗಳಾದ ಅಷ್ಟ ವಸುಗಳೂ ಜನಿಸಿದರು. ಮನಸ್ಸಿನಿಂದ ಬ್ರಹ್ಮತೇಜಸ್ಸಿನಿಂದ ಜ್ವಲಿಸುವ ಸನಕಸನ್ನಂದ ಸನಾತನ ಸನತ್ಕುಮಾರ ಎಂಬ ಹೆಸರಿನ ಐದು ವರ್ಷ ವಯಸ್ಸಿನ ನಾಲ್ಕು ಮಂದಿ ಮಕ್ಕಳು ಜನಿಸಿದರು. ಬ್ರಹ್ಮನ ಬಾಯಿಯಿಂದ ಕ್ಷತ್ರಿಯರಿಗೆ ಮೂಲಪುರುಷನಾದ ಸ್ವಾಯಂಭುವ ಮನುವೂ ಅವನ ಪತ್ನಿಯಾದ ಶತರೂಪೆಯೂ ಜನಿಸಿದರು.

ಮನು ಬ್ರಹ್ಮನ ಆಜ್ಞೆ ಪಾಲಿಸಲು ವಿಧೇಯನಾಗಿ ನಿಂತ. ಆದರೆ ಸನಕಾದಿಗಳಿಗೆ ಸೃಷ್ಟಿ ಮಾಡಲಾಜ್ಞಾಪಿಸಿದಾಗ ಅವರು 'ಇಲ್ಲ' ಎನ್ನುತ್ತ ಕೃಷ್ಣನನ್ನು ಕುರಿತು ತಪಸ್ಸು ಮಾಡಲು ಹೊರಟು ಹೋದರು. ಬ್ರಹ್ಮನಿಗೆ ಕೋಪ ಬಂದಿತು. ಆಗ ಅವನ ಹಣೆಯಿಂದ ಏಕಾದಶ ರುದ್ರರು ಆವಿರ್ಭವಿಸಿದರು. ಪ್ರಳಯಕಾರಕನೆಂದು ಪ್ರಸಿದ್ಧ-ನಾದ ಕಾಲಾಗ್ನಿರುದ್ರ ಅವರಲ್ಲೊಬ್ಬ. ತಮೋಗುಣ ಪ್ರಧಾನರಲ್ಲೆಲ್ಲ ಅವನೆ ಪ್ರಧಾನ. ರಜೋಗುಣ ಪ್ರಧಾನ ಬ್ರಹ್ಮ. ಸತ್ವಗುಣಪ್ರಧಾನ ಶಿವ ಮತ್ತು ವಿಷ್ಣು. ಗೋಲೋಕಾಧಿಪತಿ ಕೃಷ್ಣ ಗುಣತ್ರಯ ರಹಿತ. ಶುದ್ಧ ಸತ್ವಗುಣ ಸಂಪನ್ನನಾದ ವೈಷ್ಣವಾಗ್ರೇಸರನಾದ ಶಿವನನ್ನು ತಮೋಗುಣ ಪ್ರಧಾನನೆನ್ನುವವರು ಅಜ್ಞಾನಿಗಳು, ಮೂರ್ಖರು.

ಏಕಾದಶ ರುದ್ರರ ವೇದೋಕ್ತ ನಾಮಗಳು ಇವು- ಮಹಾನ್, ಮಹಾತ್ಮ, ಮತಿಮಾಸ ಭೀಷಣ ಭಯಂಕರ ಋತುಧ್ವಜ ಊರ್ಧ್ವಕೇಶ ಪಿಂಗಲಾಕ್ಷ ರುಚಿ ಮತ್ತು ಶುಚಿ.

ಬ್ರಹ್ಮನ ಬಲಗಿವಿಯಿಂದ ಪುಲಸ್ತ್ಯಮುನಿ, ಎಡಗಿವಿಯಿಂದ ಪುಲಹ, ಬಲಗಣ್ಣಿಂದ ಅತ್ರಿ ಎಡಗಣ್ಣಿಂದ ಕ್ರತು. ನಾಸಾರಂಧ್ರದಿಂದ ಅರಣಿ ಅಂಗಿರಸರು, ಮುಖದಿಂದ ರುಚಿ, ಎಡಭಾಗದಿಂದ ಭೃಗು, ಬಲಭಾಗದಿಂದ ದಕ್ಷ, ಛಾಯೆಯಿಂದ ಕರ್ದಮ, ನಾಭಿಯಿಂದ ಪಂಚಶಿಖಿ, ಎದೆಯಿಂದ ಓಢು, ಕಂಠದಿಂದ ನಾರದ, ಹೆಗಲಿಂದ ಮರೀಚಿ, ಕತ್ತಿನಿಂದ ಅಪಾಂತರತಮ, ನಾಲಿಗೆಯಿಂದ ವಸಿಷ್ಠ, ಕೆಳತುಟಿಯಿಂದ ಪ್ರಚೇತಸ, ಎಡ ಹೊಟ್ಟೆಯಿಂದ ಹಂಸ, ಬಲಹೊಟ್ಟೆಯಿಂದ ಯತಿ -ಹೀಗೆ ಮಕ್ಕಳು ಜನಿಸಿದರು. ಅವರಿಗೆ ಬ್ರಹ್ಮ ಸೃಷ್ಟಿ ಮಾಡಲು ಆಜ್ಞಾಪಿಸಿದ.

ಆಗ ನಾರದನೆಂದ, 'ಅಪ್ಪ ನಮ್ಮ ಹಿರಿಯಣ್ಣಂದಿರಾದ ಸನಕಾದಿಗಳನ್ನು ಮೊದಲಿಗೆ, ಹಿಂದಕ್ಕೆ ಕರೆಸು, ಸಂಸಾರವಂದಿಗರನ್ನಾಗಿ ಮಾಡು. ಬಳಿಕ ನಮಗೆ ಈ ರೀತಿ ಆಜ್ಞೆ ಮಾಡು. ಅವರಿಗೂ ನೀನೆ ತಂದೆ. ಅವರನ್ನು ತಪಸ್ಸಿಗೆ ಕಳಿಸಿ ನಮ್ಮನ್ನು ಸಂಸಾರ ಹೂಡಲು ಆಜ್ಞಾಪಿಸುವುದು ಸರಿಯೆ ? ಪ್ರಭು, ನಿನಗೆ ಬುದ್ಧಿ ಪಲ್ಲಟವಾಯಿತೆ ! ತನ್ನ ಮಕ್ಕಳಲ್ಲಿಯೆ ಒಬ್ಬನಿಗೆ ಅಮೃತದಂಥ ತಪಸ್ಸು ಇನ್ನೊಬ್ಬನಿಗೆ ವಿಷಕ್ಕಿಂತ ಘೋರವಾದ ವಿಷಯ ಭೋಗ ನೀಡುತ್ತಿರುವೆಯಲ್ಲ ?

ಬಹು ಅಗಾಧವಾದ ಘೋರ ಭವಸಾಗರದಲ್ಲಿ ಮುಳುಗುವವನಿಗೆ ಕೋಟಿ ಕಲ್ಪ ಕಳೆದರೂ ಉದ್ಧಾರವಿಲ್ಲ. ಎಲ್ಲರನ್ನೂ ಸಂಸಾರದಿಂದ ಉದ್ಧರಿಸುವವನು ಪುರುಷೋತ್ತಮನಾದ ಕೃಷ್ಣ. ದಯಾಮಯ ಭಕ್ತವತ್ಸಲನಾದ ಅವನನ್ನು ಬಿಟ್ಟು ಸರ್ವನಾಶಕಾರಣವಾದ ವಿಷಯ ಭೋಗಕ್ಕೆ ಯಾವ ಮೂರ್ಖ ಮನಸ್ಸು ಕೊಡಬಲ್ಲ ?

ಸ್ವಪ್ನದಂತೆ ನಶ್ವರ ವಿಷಯಭೋಗ. ದೀಪಕ್ಕೆ ಬೀಳುವ ಹುಳುಗಳಿಗೆ ದೀಪ. ಗಾಳಕ್ಕೆ ಸಿಲುಕುವ ಮೀನುಗಳಿಗೆ ಗಾಳದ ಮಾಂಸ ಹೇಗೆ ಆಕರ್ಷಕವಾಗಿದ್ದರೂ ಅನರ್ಥಕಾರಣವೋ ಹಾಗೆ ವಿಷಯಾಸಕ್ತರಿಗೆ ಈ ವಿಷಯ ಭೋಗ.''

-ಹೀಗೆ ಹೇಳಿ ನಾರದ ಬ್ರಹ್ಮನಿಗೆ ನಮಸ್ಕರಿಸಿ ನಿಂತ. ಬ್ರಹ್ಮ ಕೋಪದಿಂದ ಉರಿವ ಬೆಂಕಿಯಂತಾದ. ಅವನ ಮುಖ ಕೆಂಪಾಯಿತು. ತುಟಿ ಅದುರಿತು, ಮೈ ನಡುಗಿತು. ಮಗನಿಗೆ ಶಾಪವಿತ್ತ—

'ನಾರದ, ನಿನಗೆ ಜ್ಞಾನಲೋಪವಾಗಲಿ, ನೀನು ಸ್ತ್ರೀಲಂಪಟನಾಗಿ ಸ್ತ್ರೀಯರ ಕೈಯಲ್ಲಿ ಕೋತಿಯಂತೆ ಕುಣಿ. ಐವತ್ತು ಮಂದಿ ಯುವತಿಯರನ್ನು ಮದುವೆಯಾಗಿ ಶೃಂಗಾರಲೋಲುಪನಾಗು. ನಾನಾ ಪ್ರಕಾರದ ಶೃಂಗಾರಕಲಾ ನಿಪುಣನಾಗು. ಕಾಮ-ಶಾಸ್ತ್ರವೇತ್ತನಾಗು. ಕಾಮಕಲಾನಿಪುಣರಿಗೆಲ್ಲ ಗುರುಗಳಿಗೆ ಗುರುವೆನಿಸು. ಮಧುರವಾಗಿ ಹಾಡುತ್ತ ವೀಣೆ ನುಡಿಸುತ್ತ ಗಂಧರ್ವರಲ್ಲಿ ಮೊದಲಿಗನೆನಿಸು. ಉಪಬರ್ಹಣ ಎಂಬ ಹೆಸರಿನಿಂದ ಪ್ರಸಿದ್ಧನಾಗು. ಆ ಸ್ತ್ರೀಯರೊಂದಿಗೆ ಲಕ್ಷಯುಗಗಳ ಕಾಲ ನಿರ್ಜನ ವನಗಳಲ್ಲಿ ವಿಹರಿಸುತ್ತಿರು. ಮುಂದೆ ದಾಸೀಪುತ್ರನಾಗಿ ಜನಿಸಿ ವಿಷ್ಣುಭಕ್ತ-ರೊಡನಾಟದಿಂದ, ವಿಷ್ಣುಭಕ್ತರ ಉಚ್ಛಿಷ್ಟ ಭೋಜನದಿಂದ ಕೃಷ್ಣಾನುಗ್ರಹ ಹೊಂದಿ ತಿರುಗಿ ನನ್ನ ಮಗನಾಗಿ ಜನಿಸು. ಆಗ ನಿನಗೆ ದಿವ್ಯ ಜ್ಞಾನ ನೀಡುವೆನು. ಈಗ ನೀನು ನನಗೆ ಮಗನೆ ಅಲ್ಲ. ತೊಲಗು, ಪತಿತನಾಗು.' ಹೀಗೆ ಬ್ರಹ್ಮ ನಾರದನಿಗೆ ಶಾಪವಿತ್ತು ಸುಮ್ಮನಾದ. ನಾರದ ಕಣ್ಣೀರಿಟ್ಟು ಕೈಮುಗಿದು ಹೇಳಿದ—

''ಅಪ್ಪ, ಅಪ್ಪ, ಇದೇನು ? ಜಗತ್ತಿಗೆ ಹಿರಿಯನಾದ, ತಪಸ್ವಿಗಳಲ್ಲೆಲ್ಲ ಶ್ರೇಷ್ಠನಾದ ನೀನು ಹೀಗೆ ನಿಷ್ಕಾರಣ ಕೋಪ ಮಾಡಬಹುದೆ ? ಶಾಂತನಾಗು.

ಮಕ್ಕಳು ದುರ್ಮಾರ್ಗದಲ್ಲಿದ್ದರೆ ಜ್ಞಾನಿಯಾದ ತಂದೆ ಶಪಿಸಬಹುದು. ಮನೆಯಿಂದ ಹೊರಗೆ ಅಟ್ಟಲೂ ಬಹುದು. ತಪಸ್ವಿಯಾದ ಪುತ್ರನನ್ನೂ ಹೀಗೆ ಶಪಿಸುವುದುಂಟೆ ?

ಆಗಲಿ, ನಾನು ಯಾವುದೇ ಜನ್ಮವೆತ್ತಿದರೂ ಹರಿಭಕ್ತಿ ನನ್ನಲ್ಲಿ ಸ್ಥಿರವಾಗಿರುವಂತೆ ವರನೀಡು. ಸೃಷ್ಟಿಕರ್ತನ ಮಗನಾಗಿದ್ದು ಹರಿಭಕ್ತಿ ಮಾಡದಿದ್ದರೆ ಹಂದಿಗಿಂತ ನೀಚನೆನಿಸುವನು. ಜನ್ಮಾಂತರಸ್ಮರಣೆಯಿಂದ ಹರಿಭಕ್ತಿ ಹೊಂದಿದ್ದರೆ ಹಂದಿಯೂ ಗೋಲೋಕಪ್ರಾಪ್ತಿಗೆ ಯೋಗ್ಯವೆನಿಸೀತು.

ಕೃಷ್ಣಪರಮಾತ್ಮನ ಪಾದಾರವಿಂದದ ಭಕ್ತಿಯೆಂಬ ಮಧುವನ್ನು ಪಾನ ಮಾಡುವ ಪವಿತ್ರಾತ್ಮರಾದ ವಿಷ್ಣು ಭಕ್ತರ ಸ್ಪರ್ಶ ಮಾತ್ರದಿಂದ ಭೂಮಿ ಪಾವನವಾಗುವುದು. ಪುಣ್ಯತೀರ್ಥಗಳೂ ಕೂಡ ಪಾಪಿಗಳ ಪಾಪ ತೊಳೆಯುವುದಕ್ಕೆ ಮುನ್ನ ತಮ್ಮ ಪಾವಿತ್ರ್ಯಕ್ಕಾಗಿ ವಿಷ್ಣುಭಕ್ತರ ಸ್ಪರ್ಶ ಬಯಸುತ್ತವೆ.

ವಿಷ್ಣುಮಂತ್ರೋಪದೇಶ ಪಡೆದ ಮಾತ್ರಕ್ಕೆ ಮಾನವರು ತಮ್ಮ ಹಿಂದಿನ ಮತ್ತು ಮುಂದಿನ ಕೋಟಿ ತಲೆಮಾರಿನೊಂದಿಗೆ ತಾವೂ ಮುಕ್ತರಾಗುವರು. ಕೋಟಿ ಜನ್ಮಗಳ ಪಾಪ ನೀಗಿಕೊಳ್ಳುವರು.

**ಪುತ್ರಾನ್ ದಾರಾಂಶ್ಚ ಶಿಷ್ಯಾಂಶ್ಚ ಸೇವಕಾನ್ ಬಾಂಧವಾಂಸ್ತಥಾ ।**

**ಯೋ ದರ್ಶಯತಿ ಸನ್ಮಾರ್ಗಂ ಸದ್ಗತಿಸ್ತಂ ಲಭೇದ್ ಧ್ರುವಂ ॥**

ಮಕ್ಕಳು ಹೆಂಡಿರು ಶಿಷ್ಯರು ಸೇವಕರು ಬಾಂಧವರು ಇವರೆಲ್ಲರನ್ನೂ ಯಾರು ಸನ್ಮಾರ್ಗಕ್ಕೆ ಹಚ್ಚುವನೋ ಅವನನ್ನು ಸದ್ಗತಿ ತಾನಾಗಿಯೇ ಅರಸಿ ಬರುವುದು.

ಶಿಷ್ಯರ ವಿಶ್ವಾಸ ಪಾತ್ರನಾಗಿದ್ದು ಆ ಶಿಷ್ಯರನ್ನು ದುರ್ಮಾರ್ಗಕ್ಕೆ ಹಚ್ಚುವ ಗುರು ಸೂರ್ಯ ಚಂದ್ರರಿರುವಷ್ಟು ಕಾಲ ಕುಂಭೀಪಾಕ ನರಕದಲ್ಲಿ ಬಿದ್ದು ಹೊರಳುವನು. ಕೃಷ್ಣಭಕ್ತಿ ನೀಡದ ಗುರು ಗುರುವಲ್ಲ, ತಂದೆ ತಂದೆಯಲ್ಲ, ಪ್ರಭು ಪ್ರಭುವಲ್ಲ, ಮಗನೂ ಮಗನಲ್ಲ.

ನಿರಪರಾಧಿಯಾದ ನನಗೆ ನೀನು ಶಪಿಸಿರುವೆ. ಆದರಿಂದ ನಾನೂ ನಿನಗೆ ಶಪಿಸುವುದು ಉಚಿತ. ಜ್ಞಾನಿಗಳೂ ಕೂಡ ಹೀಗೆ ಹಿಂಸಕನನ್ನು ಹಿಂಸಿಸುತ್ತಾರೆ. 'ಕವಚ ಸ್ತೋತ್ರ ಪೂಜೆಗಳ ಸಹಿತವಾಗಿ ನಿನ್ನ ಮಂತ್ರ ಲೋಕದಲ್ಲಿ ಲುಪ್ತವಾಗಲಿ. ಮೂರು ಕಲ್ಪಗಳ ಕಾಲ ನಿನಗೆ ಪೂಜೆ ಇಲ್ಲವಾಗಲಿ. ಯಜ್ಞಭಾಗ ಮತ್ತು ವ್ರತಾದಿಗಳಲ್ಲಿ ಪೂಜೆ ಮಾತ್ರವೆ ಸಿಗುವಂತಾಗಲಿ.'

ಹೀಗೆ ಹೇಳಿ ನಾರದ ಸುಮ್ಮನಾದ. ಬ್ರಹ್ಮನೂ ಮನಸ್ಸಿನಲ್ಲೇ ವ್ಯಥೆ ಪಡುತ್ತ ಸುಮ್ಮನಿದ್ದ.

ಬಳಿಕ ನಾರದ ತಂದೆಯ ಶಾಪದಿಂದ ಉಪಬರ್ಹಣ ಗಂಧರ್ವನಾಗಿ ದಾಸೀ-ಪುತ್ರನಾಗಿ ತಿರುಗಿ ಬ್ರಹ್ಮಪುತ್ರನಾದ. ತಂದೆಯಿಂದಲೆ ಜ್ಞಾನ ಪಡೆದು ಮಹರ್ಷಿಯಾದ.

**ಇಲ್ಲಿಗೆ ಶ್ರೀ ಬ್ರಹ್ಮವೈವರ್ತ ಮಹಾಪುರಾಣದ ಬ್ರಹ್ಮಖಂಡದಲ್ಲಿ ಸೌತಿ ಶೌನಕ ಸಂವಾದದಲ್ಲಿ ಬ್ರಹ್ಮನಾರದ ಶಾಪೋಪಲಂಭನವೆಂಬ ಎಂಟನೆ ಅಧ್ಯಾಯ ಮುಗಿಯಿತು.**

## ಮರೀಚಿ, ಅತ್ರಿ, ಕಶ್ಯಪಾದಿಗಳಿಂದ ದೇವ ದಾನವ ಮಾನವ ಪಶು ಪಕ್ಷ್ಯಾದಿಗಳ ಉತ್ಪತ್ತಿ

**ಅಧ್ಯಾಯ-೯**

ಇತ್ತ ಬ್ರಹ್ಮ ತನ್ನ ಮಕ್ಕಳೆಲ್ಲರಿಗೂ ಸೃಷ್ಟಿಕಾರ್ಯಕ್ಕೆ ಆಜ್ಞಾಪಿಸಿದ್ದರಿಂದ ಮರೀಚಿ ಮನಸ್ಸಿನಿಂದ ಕಶ್ಯಪನನ್ನೂ, ಅತ್ರಿ ಕಣ್ಣಿನಿಂದ ಕ್ಷೀರಸಮುದ್ರದಲ್ಲಿ ಚಂದ್ರನನ್ನೂ ಪ್ರಚೇತಸನು ಮನಸ್ಸಿನಿಂದ ಗೌತಮನನ್ನೂ, ಪುಲಸ್ತ್ಯನು ಮನಸ್ಸಿನಿಂದ ಮೈತ್ರಾ-ವರುಣನನ್ನೂ ಪಡೆದರು. ಸ್ವಾಯಂಭುವಮನು ಶತರೂಪಾದೇವಿಯಲ್ಲಿ ಆಕೂತಿ ದೇವಹೂತಿ ಪ್ರಸೂತಿಯರೆಂಬ ಮೂವರು ಹೆಣ್ಣುಮಕ್ಕಳನ್ನೂ ಪ್ರಿಯವ್ರತ ಉತ್ತಾನ-ಪಾದರೆಂಬ ಇಬ್ಬರು ಗಂಡು ಮಕ್ಕಳನ್ನೂ ಪಡೆದ.

ಉತ್ತಾನಪಾದನ ಮಗನೆ ಪರಮಧಾರ್ಮಿಕನಾದ ಧ್ರುವ. ಆಕೂತಿಯನ್ನು ರುಚಿ, ಪ್ರಸೂತಿಯನ್ನು ದಕ್ಷ, ದೇವಹೂತಿಯನ್ನು ಕರ್ದಮ ಮದುವೆಯಾದರು. ಕರ್ದಮ-ನಿಗೆ ಮಗನಾಗಿ ಸ್ವಯಂ ಕಪಿಲ ಆವಿರ್ಭವಿಸಿದ. ದಕ್ಷನಿಗೆ ಅರವತ್ತು ಮಂದಿ ಹೆಣ್ಣುಮಕ್ಕಳು. ಅವರಲ್ಲಿ ಎಂಟುಮಂದಿ ಧರ್ಮನನ್ನೂ ಹನ್ನೊಂದು ಮಂದಿ ರುದ್ರರನ್ನೂ ಹದಿಮೂರುಮಂದಿ ಕಶ್ಯಪನನ್ನೂ ಇಪ್ಪತ್ತೇಳು ಮಂದಿ ಚಂದ್ರನನ್ನೂ ಒಬ್ಬಳು ಸತೀದೇವಿ ಶಿವನನ್ನೂ ಮದುವೆಯಾದರು.

ಧರ್ಮನನ್ನು ಮದುವೆಯಾದ ಎಂಟುಮಂದಿ ದಕ್ಷಕನ್ಯೆಯರು ಶಾಂತಿ ಪುಷ್ಟಿ ಧೃತಿ ತುಷ್ಟಿ ಕ್ಷಮಾ ಶ್ರದ್ಧಾ ಮತಿ ಮತ್ತು ಸ್ಮೃತಿ. ಇವರ ಮಕ್ಕಳು ಶಾಂತಿಗೆ ಸಂತೋಷ, ಪುಷ್ಟಿಗೆ ಮಹಾನ್, ಧೃತಿಗೆ ಧೈರ್ಯ, ತುಷ್ಟಿಗೆ ಹರ್ಷ ಮತ್ತು ದರ್ಪ, ಕ್ಷಮೆಗೆ ಸಹಿಷ್ಣು, ಶ್ರದ್ಧೆಗೆ ಧಾರ್ಮಿಕ, ಮತಿಗೆ ಜ್ಞಾನ, ಸ್ಮೃತಿಗೆ ಜಾತಿಸ್ಮರ. ಇವರ ಜೊತೆಗೆ ಧರ್ಮನಿಗೆ ಮೊದಲನೆ ಹೆಂಡತಿ ಮೂರ್ತಿಯಲ್ಲಿ ನರನಾರಾಯಣರೂ ಮಕ್ಕಳಾಗಿ ಜನಿಸಿದರು. ಈ ಧರ್ಮಪುತ್ರರೆಲ್ಲರೂ ಪರಮ ಧಾರ್ಮಿಕರು.

ರುದ್ರಪತ್ನಿಯರು— ಕಲಾ, ಕಲಾವತೀ, ಕಾಷ್ಠಾ, ಕಾಲಿಕಾ, ಕಲಹಪ್ರಿಯಾ, ಕಂದಲೀ, ಭೀಷಣಾ, ರಾಸ್ನಾ, ಪ್ರಮೋಚಾ, ಭೂಷಣಾ ಮತ್ತು ಶುಕೀ. ಇವರೆಲ್ಲರಿಗೂ ಬಹುಮಂದಿ ಪುತ್ರರು ಜನಿಸಿದರು. ಅವರೆಲ್ಲರೂ ಶಿವನ ಪರಿವಾರದವರಾದರು. ಸತೀದೇವಿ ಶಿವನಿಂದೆಯನ್ನು ಸಹಿಸದೆ ಶರೀರತ್ಯಾಗ ಮಾಡಿ ಪಾರ್ವತಿಯಾಗಿ ಜನಿಸಿ ಶಿವನನ್ನೇ ಮದುವೆಯಾದಳು.

ಕಶ್ಯಪನ ಹೆಂಡಂದಿರು ದೇವ ಮಾತೆ ಅದಿತಿ, ಸರ್ಪಮಾತೆ ಕದ್ರು, ಪಕ್ಷಿಮಾತೆ ವಿನತಾ, ಗೋಮಹಿಷ ಮಾತೆ ಸುರಭಿ, ಸಾರಮೇಯಾದಿ ಚತುಷ್ಪಾದ ಪ್ರಾಣಿಗಳ ಮಾತೆ ಸರಮಾ, ದಾನವ ಮಾತೆ ದನು, ದನಾಯು, ಪ್ರಧಾ, ಮುನಿ, ಸುರಸಾ, ಇಲಾ, ಮತ್ತು ಕ್ರೋಧವಶಾ. ಇಂದ್ರ ಉಪೇಂದ್ರ ಮುಂತಾದ ದ್ವಾದಶಾದಿತ್ಯರು ಅದಿತಿ ಪುತ್ರರು ಮಹಾಬಲಶಾಲಿಗಳು. ಇಂದ್ರನಿಗೆ ಶಚಿಯಲ್ಲಿ ಜನಿಸಿದವ ಜಯಂತ. ಆದಿತ್ಯನಿಗೆ ವಿಶ್ವಕರ್ಮಪುತ್ರಿಯಲ್ಲಿ ಶನಿ ಯಮ ಎಂಬ ಇಬ್ಬರು ಪುತ್ರರು ಮತ್ತು ಕಾಲಿಂದಿ ಎಂಬ ಒಬ್ಬಳು ಪುತ್ರಿ. ಉಪೇಂದ್ರನಿಂದ ಭೂದೇವಿ-ಯಲ್ಲಿ ಮಂಗಳ ಜನಿಸಿದ.

ಶೌನಕ— ಉಪೇಂದ್ರನಿಂದ ಭೂದೇವಿಯಲ್ಲಿ ಮಂಗಳ ಹುಟ್ಟಿದ್ದು ಹೇಗೆ ?

ಸೌತಿ— ಉಪೇಂದ್ರನ ರೂಪಕ್ಕೆ ಮರುಳಾಗಿ ಭೂದೇವಿ ಸುಂದರ ಪ್ರೌಢ ಯುವತಿಯ ವೇಷ ಧರಿಸಿ ಮಲಯ ಪರ್ವತದ ರಮ್ಯವಾದ ನಿರ್ಜನ ವನದಲ್ಲಿ ಅವನನ್ನು ಸಮೀಪಿಸಿದಳು. ಆತ ಅಲ್ಲಿ ಮೈಯೆಲ್ಲ ಶ್ರೀಗಂಧ ಪೂಸಿಕೊಂಡು ರತ್ನಾಲಂಕಾರ ಭೂಷಿತನಾಗಿ ಮಂದಹಾಸ ಮುಖಮುದ್ರೆಯಿಂದ ಸುಖಶಯನ ಮಾಡಿದ್ದ. ಭೂದೇವಿ ಮುಗುಳುನಗುತ್ತ ಅವನ ಶಯ್ಯೆಯ ಬಳಿಸಾರಿ ಜಾಜಿಯ ಹೂಮಾಲೆ ಇತ್ತಳು. ಕಸ್ತೂರಿ ಕುಂಕುಮಯುಕ್ತ ಶ್ರೀಗಂಧವಿತ್ತಳು. ಉಪೇಂದ್ರ ಅವಳ ಮನೋಗತವರಿತು ಅವಳೊಡನೆ ಕೂಡಿದ. ನಾನಾ ಪ್ರಕಾರದ ಶೃಂಗಾರಕ್ರೀಡೆಯಾಡಿ ಅವಳು ಮೈಮರೆತಳು. ಅವಳಲ್ಲಿ ಗರ್ಭಾಧಾನ ಮಾಡಿ ಹೊರಟುಹೋದ ಉಪೇಂದ್ರ. ಆ ದಾರಿಯಾಗಿ ಸಂಚರಿಸುತ್ತ ಬಂದ ಊರ್ವಶಿ ಭೂದೇವಿಯನ್ನು ಕಂಡು ಎಚ್ಚರಿಸಿದಳು. ಭೂದೇವಿ ಗರ್ಭವನ್ನು ಭರಿಸಲಾರದೆ ಹವಳದ ಗನಿಯಲ್ಲಿರಿಸಿದಳು. ಅದರಿಂದ ಹವಳದಂತೆ ಕೆಂಪಾದ, ಸೂರ್ಯನಂತೆ ತೇಜಸ್ವಿ-ಯಾದ ಮಂಗಳ ಜನಿಸಿದ. ಅವನ ಮಡದಿ ಮೇಧಾ. ಅವಳಲ್ಲಿ ಘಂಟೇಶ್ವರನೆಂಬ ಮಹಾತೇಜಸ್ವಿಯಾದ ಮಗ ಜನಿಸಿದ.

ದಿತಿಯಲ್ಲಿ ಕಶ್ಯಪನಿಂದ ಹಿರಣ್ಯಕಶಿಪು ಹಿರಣ್ಯಾಕ್ಷರೆಂಬ ಇಬ್ಬರು ಗಂಡುಮಕ್ಕಳೂ ಸಿಂಹಿಕೆ ಎಂಬ ಒಬ್ಬ ಮಗಳೂ ಹುಟ್ಟಿದರು. ಸಿಂಹಿಕೆಯ ಮಗನೆ ರಾಹು. ಹಿರಣ್ಯಾಕ್ಷನಿಗೆ ಮಕ್ಕಳಾಗಲಿಲ್ಲ. ಆತ ವರಾಹ ರೂಪಿ ಹರಿಯಿಂದ ಹತನಾದ.

ಹಿರಣ್ಯಕಶಿಪುವಿನ ಮಗ ವಿಷ್ಣು ಭಕ್ತಾಗ್ರೇಸರನಾದ ಪ್ರಹ್ಲಾದ. ಅವನ ಮಗ ವಿರೋಚನ. ಅವನ ಮಗ ಬಲಿ. ಬಲಿಯ ಮಗನೆ ಮಹಾಯೋಗಿ ಶಿವಭಕ್ತ ಬಾಣ.

ಕದ್ರುವಿನ ಮಕ್ಕಳು ಅನಂತ ವಾಸುಕಿ ಕಾಳಿಯ ಧನಂಜಯ ಕರ್ಕೋಟಕ ತಕ್ಷಕ ಪದ್ಮ ಐರಾವತ ಮಹಾಪದ್ಮ ಶಂಕು ಶಂಖ ಸಂವರಣ ಧೃತರಾಷ್ಟ್ರ ದುರ್ಧರ್ಷಣ ದುರ್ಜಯ ದುರ್ಮುಖ ಬಲ ಗೋಕ್ಷ ಗೋ ಕಾಮುಕ ವಿರೂಪ ಮುಂತಾದವರು. ಸರ್ಪಜಾತಿಯಲ್ಲಿ ಶ್ರೇಷ್ಠರಾದವರೆಲ್ಲ ಕದ್ರುವಿನ ಮಕ್ಕಳು. ಮನಸಾ ಅನಂತನ ಮಾನಸಕನ್ಯೆ. ಲಕ್ಷ್ಮಿಯಂತೆ ಹೊಳೆವವಳು. ಅವಳ ಪತಿ ನಾರಾಯಣನ ಕುಲದ ಜರತ್ಕಾರು. ಅವರಿಬ್ಬರ ಮಗ ಆಸ್ತಿಕ. ಈ ಮೂವರ ನಾಮ ಮಾತ್ರದಿಂದಲೆ ಸರ್ಪಭಯಪರಿಹಾರ.

ವಿನತೆಯ ಮಕ್ಕಳು ಗರುಡ ಅರುಣರು ಮತ್ತು ಎಲ್ಲ ಪಕ್ಷಿಜಾತಿಗಳು. ಹಸು ಎಮ್ಮೆಗಳು ಸುರಭಿಯ ಸಂತತಿ. ನಾಯಿ ಮುಂತಾದ ಬೇರೆಲ್ಲ ನಾಲ್ಕು ಕಾಲಿನ ಪ್ರಾಣಿಗಳು ಸರಮೆಯ ಸಂತತಿ. ದಾನವರು ದನುವಿನ ಸಂತತಿ.

ಚಂದ್ರನ ಮಡದಿಯರು ಅಶ್ವಿನಿ ಭರಣಿ ಕೃತ್ತಿಕಾ ರೋಹಿಣಿ ಮೃಗಶಿರಾ ಆರ್ದ್ರಾ ಪುನರ್ವಸು ಜ್ಯೇಷ್ಠಾ ಮೂಲಾ ಪೂರ್ವಾಷಾಢಾ ಉತ್ತರಾಷಾಢಾ ಶ್ರವಣಾ ಧನಿಷ್ಠಾ ಶತಭಿಷಾ ಪೂರ್ವಾಭಾದ್ರಾ ಉತ್ತರಾಭಾದ್ರಾ ರೇವತಿ. ಅವರಲ್ಲಿ ರೋಹಿಣಿ ತುಂಬ ರಸಿಕಳು. ಶೃಂಗಾರ ರಸದಿಂದ ಚಂದ್ರನನ್ನು ಆಕರ್ಷಿಸಿದವಳು. ಅವಳ ವಶನಾಗಿ ಚಂದ್ರ ಬೇರೆ ಮಡದಿಯರನ್ನೆ ಮರೆತ. ಅವರೆಲ್ಲ ತಂದೆಯಲ್ಲಿ ದೂರಿತ್ತರು. ತಂದೆ ದಕ್ಷ ಕುಪಿತನಾಗಿ ಚಂದ್ರನಿಗೆ ಶಾಪವಿತ್ತ. ಆದರಿಂದ ಕ್ಷಯರೋಗಗ್ರಸ್ತನಾಗಿ ಚಂದ್ರ ದಿನೇ ದಿನೇ ಕ್ಷೀಣಿಸಿ ದುಃಖಿತನಾದ. ಶರೀರ ಅರ್ಧಾಂಶ ಕ್ಷೀಣಿಸಿದಾಗ ಶಿವನನ್ನು ಮೊರೆಹೊಕ್ಕ. ಕರುಣಾಸಾಗರನಾದ ಶಿವ ಅಭಯನೀಡಿದ. ಕ್ಷಯಮುಕ್ತನನ್ನಾಗಿ ಮಾಡಿ ತನ್ನ ತಲೆಯಲ್ಲಿರಿಸಿಕೊಂಡ. ಅಲ್ಲಿ ಚಂದ್ರ ಅಮರನಾಗಿ ನಿರ್ಭಯನಾಗಿದ್ದ. ಹೀಗೆ ಚಂದ್ರನನ್ನು ತಲೆಯಲ್ಲಿರಿಸಿಕೊಂಡು ಶಿವ ಚಂದ್ರಶೇಖರನೆನಿಸಿದ. ಆದರಿಂದ ಅವನನ್ನು ಮೀರಿಸುವ ಶರಣರಕ್ಷಕ ದೇವ ಬೇರೆ ಇಲ್ಲ.

ಚಂದ್ರ ಹೀಗೆ ಕ್ಷಯಮುಕ್ತನಾದಾಗ ದಕ್ಷಕನ್ಯೆಯರು ಪುನಃ ಕಣ್ಣೀರಿಟ್ಟರು. ದಕ್ಷನನ್ನೇ ಮೊರೆಹೊಕ್ಕರು. ಗಟ್ಟಿಯಾಗಿ ಅತ್ತು ಹೇಳಿದರು—

'ಅಪ್ಪ, ನಾವು ನಿನ್ನಲ್ಲಿ ಬೇಡಿದುದು ಪತಿಸೌಭಾಗ್ಯವನ್ನು. ಆದರೆ ಪತಿ ನಮ್ಮನ್ನು ತೊರೆದೇ ಹೋದ. ಪತಿಯೆ ನಾರಿಗೆ ಕಣ್ಣು. ಪತಿಯೆ ಗತಿ. ಪತಿಯೆ ಪ್ರಾಣ. ಪತಿಯೆ ಸಂಪತ್ತು. ಧರ್ಮ ಅರ್ಥ ಕಾಮ ಮೋಕ್ಷಗಳನ್ನು ತಂದುಕೊಡುವವ. ಸಂಸಾರ ದುಃಖದಿಂದ ದಾಟಿಸುವವ. ಪತಿಯೇ ಸತಿಗೆ ನಾರಾಯಣ. ಸತಿಯ

ಧರ್ಮಕರ್ಮಗಳೆಲ್ಲ ಪತಿಯ ಅಧೀನ. ಪತಿಗೆ ಅನುಕೂಲಗಳಲ್ಲದ ಸತಿ ಮಾಡುವ ಎಲ್ಲ ಕರ್ಮ ವ್ಯರ್ಥ. ಸರ್ವತೀರ್ಥ ಸ್ನಾನ, ಸರ್ವಯಜ್ಞ ದಕ್ಷಿಣೆ, ಸರ್ವವಿಧ ದಾನ ಪುಣ್ಯ ವ್ರತನಿಯಮ ದೇವಾರ್ಚನ ಉಪವಾಸ ತಪಸ್ಸು ಇವೆಲ್ಲ ಪತಿಯ ಪಾದಸೇವೆಯ ಹದಿನಾರನೆ ಒಂದಂಶಕ್ಕೂ ಸಮವಾಗಲಾರದು.

ಹೆಣ್ಣಿಗೆ ಎಲ್ಲ ಬಂಧುಗಳಿಗಿಂತ ಮಗನೆ ಹೆಚ್ಚು. ಅವನೂ ಪತಿಯ ಒಂದು ಅಂಶ. ಆದ್ದರಿಂದ ನೂರುಮಂದಿ ಮಕ್ಕಳಿಗಿಂತ ಒಬ್ಬ ಪತಿ ಮೇಲು.

ದುಷ್ಕುಲ ಪ್ರಸೂತಳು ಮಾತ್ರ ಪತಿಯನ್ನು ಸದಾ ದ್ವೇಷಿಸುವಳು. ಪರಪುರುಷರಲ್ಲಿ ಆಸಕ್ತಳಾಗುವಳು. ಪತಿವ್ರತೆ ತನ್ನ ಪತಿ ಪತಿತನಾದರೂ ರೋಗಿಯಾದರೂ ದುಷ್ಟನಾದರೂ ದರಿದ್ರನಾದರೂ ಗುಣಹೀನನಾದರೂ ಅವನನ್ನು ಪರಿತ್ಯಜಿಸ-ಲಾರಳು. ಆತ ಯುವಕನಿರಲಿ ವೃದ್ಧನಿರಲಿ ಒಂದೇ ರೀತಿ ಸೇವಿಸುವಳು. ಪತಿ ಸದ್ಗುಣಿಯಿರಲಿ ದುರ್ಗುಣಿಯಿರಲಿ ಸತಿ ಅವನನ್ನು ದ್ವೇಷಿಸಿದರೆ, ತ್ಯಜಿಸಿದರೆ ಚಂದ್ರ ಸೂರ್ಯರಿರುವಷ್ಟು ಕಾಲ ಕಾಲಸೂತ್ರ ನರಕ ಪ್ರಾಪ್ತವಾಗುತ್ತದೆ. ಅಲ್ಲಿ ಅವಳನ್ನು ನಾಯಿಗಳ ಗಾತ್ರದ ಕ್ರಿಮಿಗಳು ಕಡಿದು ತಿನ್ನುತ್ತವೆ. ಅನಂತರ ಹದ್ದು ಹಂದಿ ಮುಂತಾದ ದುಷ್ಟಮೃಗ ಜನ್ಮ ನೂರಾರು ಬರುತ್ತವೆ. ಕೊನೆಯಲ್ಲಿ ಪೂರ್ವಪುಣ್ಯದಿಂದ ಮಾನವಜನ್ಮ ಬಂದರೂ ವಿಧವೆಯಾಗುವಳು ದರಿದ್ರಳು ರೋಗಿಷ್ಠೆಯೂ ಆಗುವಳು.

ಆದ್ದರಿಂದ, ಅಪ್ಪ, ನಾವು ಪತಿಭಿಕ್ಷೆ ಬೇಡುತ್ತಿದ್ದೇವೆ. ನೀನು ಬ್ರಹ್ಮಪುತ್ರ.. ಬ್ರಹ್ಮನಿಗೆ ಸರಿಸಾಟಿಯಾದವ. ಹೊಸ ಜಗತ್ತನ್ನೇ ಸೃಜಿಸಬಲ್ಲವ.'

ಮಕ್ಕಳ ಮಾತನ್ನು ಕೇಳಿ ದಕ್ಷ ಶಿವನ ಬಳಿಗೆ ಹೋದ. ಶಿವ ಅವನನ್ನು ಕಂಡು ಎದ್ದು ನಿಂತು ಸಮೀಪಿಸಿದ. ದಕ್ಷ ಆಶೀರ್ವದಿಸಿ ಹೇಳಿದ-

'ಶಿವ, ನನಗೆ ನನ್ನ ಅಳಿಯನನ್ನು ಕೊಡು. ಅವನು ನನ್ನ ಮಕ್ಕಳಿಗೆ ಪ್ರಾಣಪ್ರಿಯನಾದ ಪತಿ. ಅವನನ್ನು ಕೊಡದಿದ್ದರೆ ನಿನಗೆ ಕ್ರೂರಶಾಪ ಕೊಡುವೆ.'

ಶರಣಾಗತ ರಕ್ಷಕನಾದ ಶಿವ ಅಮೃತಕ್ಕಿಂತ ಸವಿಯಾದ ಮಾತನ್ನಾಡಿದ—

'ನೀನು ನನ್ನನ್ನು ಶಾಪದಿಂದ ಬೂದಿ ಮಾಡಿದರೂ ಸರಿಯೆ, ನಾನು ಶರಣಾಗತನಾದ ಚಂದ್ರನನ್ನು ಬಿಟ್ಟುಕೊಡಲಾರೆ.'

ದಕ್ಷ ಶಪಿಸಲು ಉದ್ಯುಕ್ತನಾದ, ಶಿವ ಎಲ್ಲ ಆಪತ್ತನ್ನು ಕಳೆವ ಗೋವಿಂದನನ್ನು ನೆನೆದ. ಗೋವಿಂದ ವೃದ್ಧ ಬ್ರಾಹ್ಮಣರೂಪದಿಂದ ಬಂದ. ಇಬ್ಬರೂ ಅವನನ್ನು ನಮಿಸಿದರು. ಆತ ಶಿವನಿಗೆ ಹೇಳಿದ-

'ಶಿವ, ಬಂಧುಗಳಲ್ಲೆಲ್ಲ ತನ್ನ ಆತ್ಮನಿಗಿಂತ ಹೆಚ್ಚು ಯಾರೂ ಅಲ್ಲ. ಅದರಿಂದ ನೀನು ನಿನ್ನ ಆತ್ಮವನ್ನು ಉಳಿಸಿಕೊಳ್ಳು, ಚಂದ್ರನನ್ನು ಬಿಟ್ಟುಕೊಡು. ನೀನು

ವೈಷ್ಣವಾಗ್ರೇಸರ. ತಪಸ್ವಿಗಳಲ್ಲೆಲ್ಲ ಶ್ರೇಷ್ಠ. ಪ್ರಶಾಂತ ಮನಸ್ಸಿನವ. ಹಿಂಸೆ ಕೋಪ-ಗಳನ್ನು ತೊರೆದು ಸರ್ವಜೀವರಲ್ಲಿ ಸಮನಾಗಿರುವವ. ದಕ್ಷನಾದರೂ ಕೋಪಿಷ್ಟ.

**ಶಿಷ್ಟೋ ಬಿಭೇತಿ ದುರ್ಧರ್ಷಂ ನ ದುರ್ಧರ್ಷಶ್ಚ ಕಂಚನ ।**

ಶಿಷ್ಟ ದುಷ್ಟನಿಗೆ ಅಂಜಬೇಕು. ಹೊರತು ದುಷ್ಟ ಯಾರಿಗೂ ಅಂಜುವುದಿಲ್ಲ.

ನಾರಾಯಣನ ಮಾತು ಕೇಳಿ ಶಿವ ನಕ್ಕು ನುಡಿದ.

ನಾನು ನನ್ನ ತಪಸ್ಸನ್ನೆಲ್ಲ ಕೊಟ್ಟೇನು. ತೇಜಸ್ಸನ್ನು ಸರ್ವಸಂಪತ್ತನ್ನು ಏಕೆ ಪ್ರಾಣ-ವನ್ನೂ ಕೊಟ್ಟೇನು, ಆದರೆ ಶರಣಾಗತನನ್ನು ಮಾತ್ರ ಎಂದೂ ಬಿಟ್ಟುಕೊಡೆನು.

**ಯೋ ದದಾತಿ ಭಯೇನೈವ ಪ್ರಪನ್ನಂ ಶರಣಾಗತಂ**
**ತಂ ಚ ಧರ್ಮಃ ಪರಿತ್ಯಜ್ಯ ಯಾತಿ ಶಪ್ತ್ವಾ ಸುದಾರುಣಂ**

ಯಾರು ಶರಣಾಗತನನ್ನು ಭಯದಿಂದ ಬಿಟ್ಟುಕೊಡುವನೋ ಅವನನ್ನು ಧರ್ಮ ಕ್ರೂರವಾಗಿ ಶಪಿಸಿ ತೊರೆದುಹೋಗುವುದು. ಆದ್ದರಿಂದ ನಾನು ಎಲ್ಲವನ್ನು ಬಿಡಬಲ್ಲೆ, ಆದರೆ ಸ್ವಧರ್ಮವನ್ನು ಬಿಡಲಾರೆ.

**ಯಃ ಸ್ವಧರ್ಮವಿಹೀನಶ್ಚ ಸ ಚ ಸರ್ವ ಬಹಿಷ್ಕೃತಃ**

ಸ್ವಧರ್ಮವನ್ನು ಬಿಟ್ಟವ ಸರ್ವಧರ್ಮ ಬಹಿಷ್ಕೃತನಾಗುವ.

**ಯಶ್ಚ ಧರ್ಮಂ ಸದಾ ರಕ್ಷೇತ್ ಧರ್ಮಸ್ತಂ ಪರಿರಕ್ಷತಿ ।**

ಯಾರು ಧರ್ಮವನ್ನು ಸದಾ ರಕ್ಷಿಸಿಕೊಳ್ಳುವನೋ ಅವನನ್ನು ಧರ್ಮ ರಕ್ಷಿಸುತ್ತದೆ. ಪ್ರಭು, ನೀನು ಎಲ್ಲ ಧರ್ಮವನ್ನರಿತವ. ಈಗೇಕೆ ಹೀಗೆ ಮಾಯೆಯಿಂದ ನನಗೆ ಉಪದೇಶಿಸುವೆ ? ನೀನು ಎಲ್ಲರಿಗೂ ಸೃಷ್ಟಿಲಯಕರ್ತ. ನಿನ್ನಲ್ಲಿ ದೃಢಭಕ್ತಿ ಉಳ್ಳ ನನಗೆ ಎಲ್ಲಿಯ ಭಯ ?

ಶಂಕರನ ಮಾತು ಕೇಳಿ ಹರಿ ಅವನ ತಲೆಯಲ್ಲಿದ್ದ ಅರ್ಧಚಂದ್ರನನ್ನು ತೆಗೆದು ದಕ್ಷನಿಗೆ ಕೊಟ್ಟ. ಈಗ ಒಬ್ಬ ಅರ್ಧಚಂದ್ರ ಶಿವನ ತಲೆಯಲ್ಲಿ ರೋಗಮುಕ್ತನಾಗಿ ಉಳಿದ. ಇನ್ನೊಬ್ಬ ಅರ್ಧಚಂದ್ರ ದಕ್ಷನ ಬಳಿ ಕ್ಷಯರೋಗದಿಂದ ಬಳಲುತ್ತಿದ್ದ. ಕೊನೆಗೆ ದಕ್ಷನ ಪ್ರಾರ್ಥನೆ ಕೇಳಿ ಹರಿ ಚಂದ್ರನನ್ನು ಒಂದು ಪಕ್ಷದಲ್ಲಿ ವೃದ್ಧಿಯನ್ನೂ ಇನ್ನೊಂದು ಪಕ್ಕದಲ್ಲಿ ಕ್ಷಯವನ್ನೂ ಹೊಂದುವಂತೆ ವ್ಯವಸ್ಥೆ ಮಾಡಿದ.

ದಕ್ಷ ಚಂದ್ರನನ್ನು ತನ್ನ ಮಕ್ಕಳಿಗಿತ್ತ. ಚಂದ್ರ ಅಂದಿನಿಂದ ದಕ್ಷನಿಗೆ ಅಂಜಿ ಅವರೆಲ್ಲರನ್ನೂ ಸಮನಾಗಿ ಕಾಣತೊಡಗಿದ.

ಇದಿಷ್ಟು ಪುಷ್ಕರ ಕ್ಷೇತ್ರದಲ್ಲಿ ಋಷಿಗಳು ಸಭೆಯಲ್ಲಿ ಗುರುಮುಖದಿಂದ ನಾನು ಕೇಳಿರುವ ಸೃಷ್ಟಿಕ್ರಮ. ಸಂಕ್ಷೇಪವಾಗಿ ಅದನ್ನು ತಿಳಿಸಿದ್ದೇನೆ.

**ಇಲ್ಲಿಗೆ ಶ್ರೀಬ್ರಹ್ಮವೈವರ್ತ ಮಹಾಪುರಾಣದ ಬ್ರಹ್ಮಖಂಡದಲ್ಲಿ ಸೌತಿ ಶೌನಕ ಸಂವಾದದಲ್ಲಿ ಒಂಬತ್ತನೆ ಅಧ್ಯಾಯ ಮುಗಿಯಿತು.**

## ಜಾತಿ ಸಂಬಂಧ ನಿರ್ಣಯ

**ಅಧ್ಯಾಯ-೧೦**

ಸೌತಿ— ಭೃಗುವಿನ ಮಕ್ಕಳು ಚ್ಯವನ ಮತ್ತು ಶುಕ್ರ. ಕ್ರತುವಿಗೆ ಅವನ ಪತ್ನಿಯಾದ ಕ್ರಿಯೆಯಲ್ಲಿ ಹುಟ್ಟಿದ ಮಕ್ಕಳು ವಾಲಖಿಲ್ಯರು. ಅಂಗಿರಸನಿಗೆ ಬೃಹಸ್ಪತಿ ಉತಥ್ಯ ಶಂಬರರು ಮಕ್ಕಳು. ವಸಿಷ್ಠನ ಮಗ ಶಕ್ತಿ. ಶಕ್ತಿಯ ಮಗ ಪರಾಶರ. ಪರಾಶರ ಪುತ್ರ ಕೃಷ್ಣ ದ್ವೈಪಾಯನ ರೂಪಿಯಾದ ಶ್ರೀಹರಿ. ಅವನ ಮಗ ಶಿವಾಂಶನಾದ ಶುಕ. ಪುಲಸ್ತ್ಯನ ಮಗ ವಿಶ್ವಶ್ರವ. ಅವನ ಮಗ ಕುಬೇರ.

ಶೌನಕ— **ಅಹೋ ಪುರಾಣವಿದುಷಾಂ ಅತ್ಯಂತಂ ದುರ್ಗಮಂ ವಚಃ ।** ಪುರಾಣಜ್ಞರ ಮಾತನ್ನು ಅರ್ಥ ಮಾಡಿಕೊಳ್ಳುವುದೆ ಕಷ್ಟ! ಏಕೆಂದರೆ ಈಗ ತಾನೆ ನೀನು ಕುಬೇರ ಕೃಷ್ಣನಿಂದ ಜನಿಸಿದವನೆಂದು ಹೇಳಿರುವಿ. ಈಗ ಹೇಗೆ ವಿಶ್ವಶ್ರವನಿಂದ ಹುಟ್ಟುತ್ತಾನೆ ?

ಸೌತಿ— ಶೌನಕರೆ, ನಾನು ಹಿಂದೆ ಹೇಳಿದಂತೆ ದಿಕ್ಪಾಲಕರೆಲ್ಲ ಆದಿಸೃಷ್ಟಿಯಲ್ಲಿ ಭಗವಂತನಿಂದ ಜನಿಸಿದ್ದು ನಿಜವೆ. ಆದರೆ ಕುಬೇರ ಪುನಃ ಬ್ರಾಹ್ಮಣ ಶಾಪದಿಂದ ವಿಶ್ವಶ್ರವನ ಮಗನಾಗಿ ಹುಟ್ಟಿದ. ಅದು ಹೇಗೆಂದರೆ ಒಮ್ಮೆ ಉತಥ್ಯ ಪ್ರಚೇತಸನಿಗೆ ಗುರುದಕ್ಷಿಣೆ ಕೊಡಲೆಂದು ಕೋಟಿಸುವರ್ಣ ನಾಣ್ಯಗಳನ್ನು ಕುಬೇರನಲ್ಲಿ ಯಾಚಿಸಿದ. ಕುಬೇರ ಕೊಡಲಿಲ್ಲ. ಉತಥ್ಯ ಅವನನ್ನು ಶಾಪದಿಂದ ಬೂದಿ ಮಾಡಿದ. ಇದರಿಂದ ಕುಬೇರ ವಿಶ್ರವಸ್ಸಿನ ಮಗನಾಗಿ ಹುಟ್ಟಿ ತಿರುಗಿ ಧನಾಧಿಪನಾದ. ರಾವಣ ಕುಂಭಕರ್ಣರೂ ಧಾರ್ಮಿಕನಾದ ವಿಭೀಷಣನೂ ವಿಶ್ರವಸ್ಸಿನ ಮಕ್ಕಳೆ.

ಪುಲಹನ ಮಗ ವಾತ್ಸ್ಯ. ರುಚಿಯ ಮಗ ಶಾಂಡಿಲ್ಯ. ಗೌತಮನ ಮಗ ಸಾವರ್ಣಿ. ಕಶ್ಯಪನ ಮಗ ಕಾಶ್ಯಪ. ಬೃಹಸ್ಪತಿಯ ಮಗ ಭರದ್ವಾಜ. ಕಾಶ್ಯಪ ಭರದ್ವಾಜ ವಾತ್ಸ್ಯ ಸಾವರ್ಣಿ ಶಾಂಡಿಲ್ಯ ಈ ಐವರೂ ಗೋತ್ರಪ್ರವರ್ತಕರಾದರು.

ಬ್ರಹ್ಮನ ಮುಖದಿಂದ ಬೇರೆ ಬೇರೆ ಬ್ರಾಹ್ಮಣ ಜಾತಿಯವರು ಉತ್ಪನ್ನರಾದರು. ಆದರೆ ಅವರು ಗೋತ್ರಶೂನ್ಯರಾಗಿ ಬೇರೆ ಬೇರೆ ದೇಶಗಳಲ್ಲಿರ ತೊಡಗಿದರು.

ಚಂದ್ರ ಸೂರ್ಯ ಮನುಗಳ ವಂಶದವರು ಕ್ಷತ್ರಿಯರೆನಿಸಿದರು. ಬೇರೆ ಕ್ಷತ್ರಿಯರೂ ಬ್ರಹ್ಮನೂ ಬಾಹುವಿನಿಂದ ಜನಿಸಿದವರಿದ್ದಾರೆ.

ಬ್ರಹ್ಮನ ತೊಡೆಯಿಂದ ಜನಿಸಿದವರು ವೈಶ್ಯರು. ಪಾದದಿಂದ ಜನಿಸಿದವರು ಶೂದ್ರರು.

ಈ ಜಾತಿಗಳ ಪರಸ್ಪರ ಸಂಪರ್ಕದಿಂದ ಹುಟ್ಟಿದವರು ಸಂಕರ ಜಾತಿಯವರು. ಅವರಲ್ಲಿ ಗೋಪಾಲಕ ನಾಪಿತ ಭಿಲ್ಲ ಮೋದಕ ಕೂಬರ ತಾಂಬೂಲಿ ಸ್ವರ್ಣಕಾರ ಮುಂತಾದವರು ಸಚ್ಛೂದ್ರರೆನಿಸಿದರು. ಶೂದ್ರನಾರಿಯಲ್ಲಿ ವೈಶ್ಯನಿಂದ ಹುಟ್ಟಿದವ ಕರಣ. ವೈಶ್ಯ ನಾರಿಯಲ್ಲಿ ಬ್ರಾಹ್ಮಣನಿಂದ ಹುಟ್ಟಿದವ ಅಂಬಷ್ಠ. ವಿಶ್ವಕರ್ಮನಿಗೆ ಶೂದ್ರಸ್ತ್ರೀಯಲ್ಲಿ ಹೂವಾಡಿಗ ಕಮ್ಮಾರ. ಬಳೆಗಾರ ನೇಕಾರ ಕುಂಬಾರ ಕಂಚುಗಾರ ಎಂಬ ಆರು ಬಗೆಯ ಶ್ರೇಷ್ಠ ಶಿಲ್ಪಿಗಳು ಮಕ್ಕಳಾಗಿ ಹುಟ್ಟಿದರು. ಜೊತೆಗೆ ಚಿಪ್ಪಿಗ, ಚಿತ್ರಕಾರ ಸ್ವರ್ಣಕಾರರೂ ಹುಟ್ಟಿದರು. ಇವರು ಮಾತ್ರ ಪತಿತರು. ಬ್ರಾಹ್ಮಣ ಶಾಪದಿಂದಾಗಿ ಯಾಗ ಮಾಡುವ ಅಧಿಕಾರವಿಲ್ಲದವರು.

ಶೌನಕ— ವಿಶ್ವಕರ್ಮ ಶೂದ್ರ ಸ್ತ್ರೀಸಂಗವೇಕೆ ಮಾಡಿದ ? ಬ್ರಾಹ್ಮಣ ಶಾಪವೇಕೆ ಬಂದಿತು ?

ಸೌತಿ— ಘೃತಾಚಿ ಎಂಬ ಅಪ್ಸರೆಯೊಮ್ಮೆ ಚೆನ್ನಾಗಿ ಸಿಂಗರಿಸಿಕೊಂಡು ಪುಷ್ಕರದ ಕಡೆಗೆ ಹೋಗುತ್ತಿದ್ದಳು. ಅವಳನ್ನು ಕಂಡು ವಿಶ್ವಕರ್ಮ ಕಾಮಪರವಶನಾದ. ಏಕೆಂದರೆ ಅವಳು ಹದಿನಾರರ ತಾರುಣ್ಯದಿಂದೊಪ್ಪುವ ಸರ್ವಾಂಗ ಸುಂದರಿ ಕೋಮಲೆ. ರತ್ನಾಭರಣದಿಂದ ಮನೋಹರವಾಗಿ ಸಿಂಗರಿಸಿಕೊಂಡಿದ್ದಳು. ತಪಸ್ವಿಗಳ ಮನಸ್ಸನ್ನೂ ಸೂರೆಗೊಳ್ಳುತ್ತಿದ್ದಳು. ಅವಳ ಚಂಚಲನೋಟ ಚಂದ್ರನಂಥ ಮುಖ ತೊಂಡೆ ಹಣ್ಣಿನಂಥ ತುಟಿ ಕರ್ಪೂರ ಬೆರೆಸಿದ ಸಿಂದೂರ ತಿಲಕದಿಂದ ಶೋಭಿಸುವ ಹಣೆ ರತ್ನಕುಂಡಲ ಶೋಭಿತವಾದ ಕಿವಿಗಳನ್ನು ನೋಡಿ ಮೋಹಿತನಾದ ವಿಶ್ವಕರ್ಮ. ಕಾಮಶಾಸ್ತ್ರ ವಿಶಾರದನಾದ ಆತ ಅವಳಲ್ಲಿ ಶೃಂಗಾರಭಾವ ವರ್ಧಿಸುವಂತೆ ಕಿವಿಗಿಂಪಾಗಿ ಮಾತನಾಡಿದ-

'ಸುಂದರಿ, ನನ್ನ ಪ್ರಾಣಗಳನ್ನೇ ಅಪಹರಿಸುತ್ತ ಎಲ್ಲಿಗೆ ಹೋಗುತ್ತಿರುವಿ ? ಒಂದುಕ್ಷಣ ನಿಲ್ಲು. ಪ್ರಾಣಪ್ರಿಯೆ, ನಿನ್ನನ್ನರಸಿ ಪ್ರಪಂಚವೆಲ್ಲ ಸುತ್ತಿದೆ. ಈಗ ನಿನ್ನನ್ನು ಕಂಡೆ. ನಾನು ಪ್ರಾಣವನ್ನಾದರೂ ಬಿಡಬಲ್ಲೆ. ನಿನ್ನನ್ನು ಬಿಡಲಾರೆ. ನೀನಿಂದು ಮನ್ಮಥನ ಭವನಕ್ಕೆ ಹೋಗುತ್ತಿರುವಿ ಎಂದು ರಂಭೆಯಿಂದ ಕೇಳಿ ತಿಳಿದೆ. ಆದರೆ ಈಗ ನೀನು ನನ್ನ ಬಳಿಗೆ ಬಾ. ಇಲ್ಲಿಯೆ ಸರಸ್ವತೀ ತೀರದ ಮನೋಹರ ಉದ್ಯಾನದಲ್ಲಿ

ಹೂವಿನ ಕಂಪು ಹೊತ್ತು ಮೆಲ್ಲಗೆ ಬೀಸುವ ತಂಗಾಳಿಯಲ್ಲಿ ನನ್ನೊಡನೆ ವಿಹಾರ ಮಾಡು. ನಾನು ಮೃತ್ಯುಂಜಯನ ವರದಿಂದ ಮೃತ್ಯುವನ್ನು ಗೆದ್ದವನು. ಕುಬೇರನಿಂದ ಧನವನ್ನು ಪಡೆದವನು. ವರುಣನಿಂದ ರತ್ನಮಾಲೆ, ವಾಯುವಿನಿಂದ ರತ್ನಾಭರಣಗಳು ಅಗ್ನಿಯಿಂದ ಶುಭ್ರವಾದ ಜೋಡಿ ವಸ್ತ್ರಗಳನ್ನು ಪಡೆದವನು. ಮನ್ಮಥನಿಂದ ಸ್ತ್ರೀಗೆ ಸುಖ ನೀಡುವ ಕಾಮಶಾಸ್ತ್ರ ವಿದ್ಯೆಯನ್ನು ಕಲಿತವನು. ಚಂದ್ರನಿಂದ ದುರ್ಲಭವಾದ ಶೃಂಗಾರ ಶಿಲ್ಪ ಕಲಿತವನು. ಪ್ರಿಯೆ, ಈ ರತ್ನಮಾಲೆಯನ್ನು, ಈ ಜೋಡಿ ವಸ್ತ್ರವನ್ನು, ಈ ಎಲ್ಲ ಆಭರಣಗಳನ್ನು ನಿನಗಾಗಿ ಕಾದಿರಿಸಿದ್ದೇನೆ. ಅವನ್ನೆಲ್ಲ ನನ್ನ ಮನೆಯಲ್ಲಿ ನಿನಗಾಗಿ ತೆಗೆದಿಟ್ಟು ನಿನ್ನನ್ನೇ ಅರಸುತ್ತ ಇಲ್ಲಿಗೆ ಬಂದಿದ್ದೇನೆ. ನಮ್ಮ ವಿಹಾರವೆಲ್ಲ ಮುಗಿದೊಡನೆ ಅವೆಲ್ಲವನ್ನೂ ನಿನಗೆ ಕೊಡುತ್ತೇನೆ.''

ಹೀಗೆ ಕಾಮಪರವಶನಾಗಿ ವಿಶ್ವಕರ್ಮನಾಡಿದ ಮಾತುಕೇಳಿ ಘೃತಾಚಿ ನಕ್ಕು ನೀತಿಯುತವಾದ ಸುಂದರವಾದ ಪ್ರತ್ಯುತ್ತರವಿತ್ತಳು-

ನೀನು ಹೇಳಿದುದೆಲ್ಲ ಸರಿಯೆ. ನಾನೊಪ್ಪುತ್ತೇನೆ. ಆದರೆ ಈಗಿನ ಸಂದರ್ಭಕ್ಕೆ ಅನುಸಾರವಾಗಿ ನಾನು ನಿನಗೆ ಒಂದು ಮಾತು ಹೇಳಬೇಕಾಗಿದೆ ಕೇಳು. ನಾನೀಗ ಹೋಗುತ್ತಿರುವುದು ಮನ್ಮಥನ ಬಳಿಗೆ. ನಾನು ಸಿಂಗರಿಸಿಕೊಂಡಿರುವುದು ಅವನಿಗಾಗಿ. ನಾವು ಅಪ್ಸರೆಯರು ಯಾವ ದಿನ ಯಾರ ಬಳಿಗೆ ಹೋಗುವೆವೊ ಆ ದಿನ ಅವನು ನಮಗೆ ಪತಿ. ಆದರಿಂದ ನಾನಿಂದು ಮನ್ಮಥನ ಪತ್ನಿ. ನಿನಗೆ ಗುರುಪತ್ನಿಯಾಗಿರುತ್ತೇನೆ. ಏಕೆಂದರೆ ನೀನು ಈಗಾಗಲೆ ಹೇಳಿದೆ, ಮನ್ಮಥನಿಂದ ವಿದ್ಯೆ ಕಲಿತವನೆಂದು. ವಿದ್ಯೆ ಕಲಿಸುವವ ಮಂತ್ರೋಪದೇಶ ಮಾಡುವವ ಗುರುವೆನಿಸುತ್ತಾನೆ.

ವಿದ್ಯಾದಾತಾ ಮಂತ್ರದಾತಾ ಗುರುರ್ಲಕ್ಷ ಗುಣೈಃ ಪಿತುಃ ।
ಮಾತುಃ ಸಹಸ್ರ ಗುಣವಾನ್ ನಾಸ್ತ್ಯನ್ಯಸ್ತತ್ಸಮೋ ಗುರುಃ ॥

ವಿದ್ಯಾದಾಯಕನಾದ ಮಂತ್ರದಾಯಕನಾದ ಗುರು ತಂದೆಗಿಂತ ಲಕ್ಷಪಾಲು, ತಾಯಿಗಿಂತ ಸಹಸ್ರಪಾಲು ಶ್ರೇಷ್ಠ. ಅವನಿಗೆ ಸಮನಾದ ಗುರು ಬೇರೆ ಇಲ್ಲ.

ಗುರೋಃ ಶತಗುಣೈಃ ಪೂಜ್ಯಾ ಗುರುಪತ್ನೀ ಶ್ರುತೌ ಶ್ರುತಾ ।
ಪಿತುಃ ಶತಗುಣೈಃ ಪೂಜ್ಯಾ ಯಥಾ ಮಾತಾ ವಿಚಕ್ಷಣಾ ॥

ತಂದೆಗಿಂತ ತಾಯಿ ಹೇಗೆ ನೂರುಪಾಲು ಹೆಚ್ಚು ಪೂಜ್ಯಳೋ ಹಾಗೆಯೆ ಗುರುವಿಗಿಂತ ಗುರುಪತ್ನಿ ನೂರು ಪಾಲು ಹೆಚ್ಚು ಪೂಜ್ಯಳು ಎಂದು ಶ್ರುತಿ ಇದೆ.

ಮಾತ್ರಾ ಸಮಾಗಮೇ ಸೂನೋ ರ್ಯಾವಾನ್ ದೋಷಃ ಶ್ರುತೌ ಶ್ರುತಃ ।
ತತೋ ಲಕ್ಷಗುಣೋ ದೋಷೋ ಗುರುಪತ್ನೀ ಸಮಾಗಮೇ ॥

ಮಾತೃಸಂಗಕ್ಕೆ ಶ್ರುತಿಯಲ್ಲಿ ಎಷ್ಟು ದೋಷ ಹೇಳಿದೆಯೋ ಅದಕ್ಕಿಂತ ಲಕ್ಷಪಾಲು ಹೆಚ್ಚಿನದು ಗುರುಪತ್ನೀ ಸಂಗ. 'ಅಮ್ಮ' ಎಂದು ಕರೆದು ಯಾರೊಡನೆ ಮಾತಾಡುವೆವೋ ಅವಳು ತಾಯಿಗೆ ಸಮಾನ. ತಾಯಿಗೆ ಸಮಾನರಾದವರ ಸಂಗ ಮಾಡಿದರೂ ಕಾಲಸೂತ್ರ ನರಕ ಪ್ರಾಪ್ತಿ. ಚಂದ್ರ ಸೂರ್ಯರಿರುವಷ್ಟು ಕಾಲ ಅಲ್ಲಿ ವಾಸ. ಮಾತೃಸಂಗವಿನ್ನೂ ನಾಲ್ಕುಪಟ್ಟು ಹೆಚ್ಚು ಪಾಪಕರ. ಗುರುಪತ್ನೀ ಸಂಗವಿನ್ನೂ ಲಕ್ಷಪಾಲು ಹೆಚ್ಚು ಪಾಪಕರ. ಅದರಿಂದ ಕುಂಭೀಪಾಕ ನರಕ ಪ್ರಾಪ್ತಿ. ಬ್ರಹ್ಮನ ಆಯುಷ್ಯದಷ್ಟು ಕಾಲ ಅಲ್ಲಿ ವಾಸ. ಆ ಪಾಪಿಗೆ ಪ್ರಾಯಶ್ಚಿತ್ತವೆ ಶ್ರುತಿಯಲ್ಲಿ ಉಕ್ತವಾಗಿಲ್ಲ. ಕುಂಭೀಪಾಕ ಕುಂಬಾರನ ಚಕ್ರದಾಕಾರದ್ದು. ಕತ್ತಿಯಲುಗಿನಂತೆ ಹರಿತ. ಕೆಟ್ಟ ರಕ್ತ ಮಲಮೂತ್ರಗಳಿಂದ ತುಂಬಿದೆ. ಶೂಲದಂತೆ ಚುಚ್ಚುವ ಕ್ರಿಮಿಗಳಿಂದ ತುಂಬಿದೆ. ಬೆಂಕಿಯ ಸಮುದ್ರವೊ ಎಂಬಂತೆ ಸುಡುತ್ತದೆ. ಪುರುಷನಿಗೆ ಗುರುಪತ್ನೀ ಸಂಗದಿಂದ ಎಷ್ಟು ದೋಷವೋ ಅಷ್ಟೇ ದೋಷ ಗುರುಪತ್ನಿಗೂ ಪರಪುರುಷ ಸಂಗದಿಂದ ಬರುತ್ತದೆ. ಚಿಂತಿಸಬೇಡ. ನಾನಿಂದು ಮನ್ಮಥನ ಬಳಿಗೆ ಹೋಗುತ್ತಿದ್ದರೂ ಇನ್ನೊಂದು ದಿನ ನಿನ್ನ ಬಳಿಗೆ ಬಂದೇ ಬರುತ್ತೇನೆ.'

ಈ ಮಾತು ಕೇಳಿ ವಿಶ್ವಕರ್ಮ ಅಸಹನೆಯಿಂದ ಘತಾಚಿಯನ್ನು ಶಪಿಸಿದ. 'ಭೂಮಿಯಲ್ಲಿ ಶೂದ್ರಳಾಗಿ ಜನಿಸು' ಎಂದು. ಘೃತಾಚಿಯೂ ಅವನನ್ನು ಶಪಿಸಿದಳು. 'ನೀನು ಸ್ವರ್ಗದಿಂದ ಪತಿತನಾಗು. ಭೂಮಿಯಲ್ಲಿ ಮನುಷ್ಯನಾಗಿ ಹುಟ್ಟು'.

ಘೃತಾಚಿ ಮನ್ಮಥನ ಬಳಿಗೆ ಹೋಗಿ ಅವನೊಡನೆ ವಿಹರಿಸಿ ಈ ವಿಶ್ವಕರ್ಮ ಶಾಪದ ವೃತ್ತಾಂತವನ್ನು ಅವನಿಗೆ ತಿಳಿಸಿದಳು. ಅವನ ಸೂಚನೆಯಂತೆ ಪ್ರಯಾಗದಲ್ಲಿ ಒಬ್ಬ ಗೊಲ್ಲನ ಮಡದಿಯಲ್ಲಿ ಜನಿಸಿದಳು. ಪೂರ್ವಜನ್ಮ ಸ್ಮರಣೆ ಇದ್ದುದರಿಂದ ಆಕೆ ಶೂದ್ರಜಾತಿಯಲ್ಲಿ ವಿವಾಹವಾಗಲು ಇಷ್ಟಪಡಲಿಲ್ಲ. ತಪಸ್ಸಿನಲ್ಲಿ ಆಸಕ್ತಳಾಗಿ ಪುಟಕ್ಕಿಟ್ಟ ಚಿನ್ನದಂತೆ ಹೊಳೆವ ಅವಳು ಗಂಗಾತೀರದಲ್ಲಿ ದೇವಮಾನದ ಒಂದು ನೂರು-ವರ್ಷಗಳ ಕಾಲ ತಪಸ್ಸು ಮಾಡಿದಳು. ಬಳಿಕ ವಿಶ್ವಕರ್ಮನಿಂದಲೆ ಒಂಬತ್ತು ಮಕ್ಕಳನ್ನು ಪಡೆದು ಸ್ವರ್ಗಕ್ಕೆ ಹಿಂತಿರುಗಿದಳು.

ಶೌನಕ— ಘೃತಾಚಿ ವಿಶ್ವಕರ್ಮನಿಂದ ಮಕ್ಕಳನ್ನು ಪಡೆದುದು ಹೇಗೆ ? ಎಲ್ಲಿ ? ಅವಳು ಎಷ್ಟು ಕಾಲ ಭೂಮಿಯಲ್ಲಿದ್ದಳು ?

ಸೌತಿ— ವಿಶ್ವಕರ್ಮ ಬ್ರಹ್ಮನ ಬಳಿಗೆ ಹೋಗಿ ತನ್ನ ಶಾಪವೃತ್ತಾಂತವನ್ನರುಹಿದ. ಬಳಿಕ ಬ್ರಹ್ಮನ ಆಜ್ಞೆಯಂತೆ ಭೂಮಿಯಲ್ಲಿ ಬ್ರಾಹ್ಮಣನಾಗಿ ಜನಿಸಿ ಶಿಲ್ಪಿಯೆನಿಸಿದ. ರಾಜ ಮಹಾರಾಜರ ಶಿಲ್ಪಕಾರ್ಯಗಳನ್ನು ಮಾಡಿದ. ಅವನ ಶಿಲ್ಪವೆಂದರೆ ಆಶ್ಚರ್ಯಕರ, ಮನೋಹರ.

ಒಮ್ಮೆ ಗಂಗಾಸ್ನಾನಕ್ಕೆ ಹೋದಾಗ ಅಲ್ಲಿ ಘೃತಾಚಿಯನ್ನು ಕಂಡ. ಅವನಿಗೂ ಪೂರ್ವಜನ್ಮ ಸ್ಮರಣೆ ಇತ್ತು. ಈಕೆ ಘೃತಾಚಿ ಎಂದು ಗುರುತಿಸಿ ಮಧುರವಾಗಿ ನುಡಿದ 'ಓ ಘೃತಾಚಿ, ನೀನೀಗ ಇಲ್ಲಿ! ಸುಂದರಿ, ನಿನಗೆ ನನ್ನ ನೆನಪಿದೆಯೆ ? ನಾನು ವಿಶ್ವಕರ್ಮ. ನಿನ್ನ ಶಾಪವನ್ನು ತೊಲಗಿಸುವೆ, ಬಾ. ನನ್ನನ್ನು ಸೇರು. ನಿನಗಾಗಿ ನನ್ನೆದೆಯನ್ನು ಮನ್ಮಥ ಸುಡುತ್ತಿದ್ದಾನೆ.'

ಬ್ರಾಹ್ಮಣನ ಮಾತು ಕೇಳಿ ಘೃತಾಚಿ ನುಡಿದಳು—

'ಅಂದು ನಾನು ಮನ್ಮಥನ ಪತ್ನಿಯಾಗಿದ್ದೆ. ಇಂದೂ ನಾನು ತಪಸ್ವಿನಿಯಾಗಿರುವೆ. ಭಾರತ ಭೂಮಿಯಲ್ಲಿ ಅದರಲ್ಲಿಯೂ ಗಂಗಾತೀರದಂತ ಪವಿತ್ರಕ್ಷೇತ್ರದಲ್ಲಿ ನಾನು ನಿನ್ನನ್ನು ಸೇರಬಹುದೆ ? ಹೇಳು.

ವಿಶ್ವಕರ್ಮ, ಈ ಭಾರತದೇಶ ಪುಣ್ಯಕ್ಷೇತ್ರ, ಕರ್ಮಭೂಮಿ. ಇಲ್ಲಿ ಯಾವ ಕರ್ಮ ಮಾಡಿದರೂ ಅದರ ಫಲವನ್ನು, ಅದು ಶುಭವಿರಲಿ ಅಶುಭವೆ ಇರಲಿ, ಬೇರೆ ಲೋಕದಲ್ಲಿ ಉಣಬೇಕಾಗುತ್ತದೆ.

ಜೀವನು ಅನೇಕ ಜನ್ಮಗಳ ತಪಸ್ಸಿನ ಫಲವಾಗಿ ಮೋಕ್ಷ ಸಾಧನವಾದ ಮಾನವ ಶರೀರ ಪಡೆದರೂ ವಿಷ್ಣುಮಾಯೆಯಿಂದ ಮೋಹಿತನಾಗಿ ಬಂಧಕ ಕರ್ಮಗಳನ್ನು ಮಾಡುತ್ತಾನೆ. ಆ ದೇವಿ ವಿಷ್ಣುಮಾಯೆ ಯಾರಿಗೆ ಒಲಿಯುವಳೋ ಅವನಿಗೆ ಮಾತ್ರ ಶ್ರೀಕೃಷ್ಣ ಭಕ್ತಿ ನೀಡುತ್ತಾನೆ. ಅಭೀಷ್ಟ ಮಂತ್ರವನ್ನೂ ನೀಡುತ್ತಾನೆ. ಯಾವ ಮೂಢ ಮಾನವ ಭಾರತ ಭೂಮಿಯಲ್ಲಿ ಜನ್ಮವೆತ್ತಿಯೂ ವಿಷಯಾಸಕ್ತನಾಗಿ ಕೃಷ್ಣನನ್ನು ಕೊರೆಯುವನೋ ಅವನು ವಿಷ್ಣುಮಾಯೆಯಿಂದ ಮೋಹಿತನಾಗುತ್ತಾನೆ.

ವಿಶ್ವಕರ್ಮ, ನನಗೆ ಪೂರ್ವಜನ್ಮದ ಸ್ಮರಣೆ ಇದೆ. ನಾನು ಘೃತಾಚಿ ಎಂಬುದು ನನಗೆ ಗೊತ್ತಿದೆ. ಅದರಿಂದಲೆ ಮೋಕ್ಷಕ್ಕಾಗಿ ಪುಣ್ಯಕರವಾದ ಗಂಗಾತೀರದಲ್ಲಿ ತಪಸ್ಸು ಮಾಡುತ್ತಿದ್ದೇನೆ. ಇದು ಶೃಂಗಾರವಿಹಾರಕ್ಕೆ ತಕ್ಕ ಸ್ಥಳವಲ್ಲ. ನಿನ್ನ ಕಾಮಪರವಶತೆ-ಯನ್ನು ಸೈರಿಸಿಕೊಳ್ಳು.

> ಅನ್ಯತ್ರ ಕೃತ ಪಾಪಂ ಚ ಗಂಗಾಯಾಂ ಚ ವಿನಶ್ಯತಿ ।
> ಗಂಗಾತೀರೇ ಕೃತಂ ಪಾಪಂ ಸದ್ಯೋ ಲಕ್ಷಗುಣಂ ಭವೇತ್ ।
> ತತ್ತು ನಾರಾಯಣಕ್ಷೇತ್ರೇ ತಪಸಾ ಚ ವಿನಶ್ಯತಿ ॥

ಬೇರೆ ಕಡೆ ಪಾಪ ಮಾಡಿದ್ದರೆ ಗಂಗಾತೀರದಲ್ಲಿ ಅದಕ್ಕೆ ಪರಿಹಾರ. ಗಂಗಾ-ತೀರದಲ್ಲೇ ಪಾಪ ಮಾಡಿದರೆ ಅದು ಲಕ್ಷ ಪಾಲು ಹೆಚ್ಚುವುದು. ಅದೂ ಕೂಡ ಬದರಿಕಾಶ್ರಮದಲ್ಲಿ ತಪಸ್ಸು ಮಾಡಿದರೆ ನಾಶವಾಗುವುದು.

ಘೃತಾಚಿಯ ಈ ಮಾತನ್ನು ಕೇಳಿದೊಡನೆ ವಿಶ್ವಕರ್ಮ ವಾಯುರೂಪಿಯಾಗಿ ಅವಳನ್ನೆತ್ತಿ ಮಲಯಾಚಲಕ್ಕೊಯ್ದ. ಅಲ್ಲಿ ನಿರ್ಜನ ವನದಲ್ಲಿ ಹೂವಿನ ಹಾಸಿಗೆಯ ಮೇಲೆ ರಮಿಸಿದ. ಪೂರ್ಣವಾಗಿ ಹನ್ನೆರಡು ವರ್ಷ ಆನಂದದಿಂದ ವಿಹರಿಸಿದ. ಅವಳು ಗರ್ಭವತಿಯಾಗಿ ದೃಢಕಾಯರೂ ಬಲಿಷ್ಠರೂ ಜ್ಞಾನಯುಕ್ತರೂ ನಾನಾ ಶಿಲ್ಪಕಲೆಗಳಲ್ಲಿ ಚತುರರೂ ಆದ ಒಂಬತ್ತು ಮಂದಿ ಮಕ್ಕಳಿಗೆ ಜನ್ಮವಿತ್ತಳು. ಆ ಮಕ್ಕಳು ಹೂವಾಡಿಗ ಕಮ್ಮಾರ ಬಳೆಗಾರ ನೇಕಾರ ಕುಂಬಾರ ಬಡಗಿ ಅಕ್ಕಸಾಲಿಗ ಚಿತ್ರಕಾರ ಕಂಚುಗಾರರ ಕಲೆಗಳಲ್ಲಿ ದಕ್ಷರಾದರು. ವಿಶ್ವಕರ್ಮ ಘೃತಾಚಿಯರು ಅವರಿಗೆ ವರ ನೀಡಿ ಭೂಮಿಯಲ್ಲಿರಲು ಹೇಳಿ ತಾವು ಮನುಷ್ಯ ಶರೀರ ತೊರೆದು ಸ್ವರ್ಗಕ್ಕೆ ತೆರಳಿದಳು.

ಆ ಒಂಬತ್ತು ಮಂದಿ ಮಕ್ಕಳಲ್ಲಿ ಒಬ್ಬ ಅಕ್ಕಸಾಲಿಗ ಬ್ರಾಹ್ಮಣರ ಚಿನ್ನ ಕದ್ದು ಅವರ ಶಾಪದಿಂದ ಪತಿತನಾದ. ಬಡಗಿ ಬ್ರಾಹ್ಮಣರಿಗೆ ಸಕಾಲದಲ್ಲಿ ಯಜ್ಞ ಸಾಧನವಾದ ಮರದ ಉಪಕರಣಗಳನ್ನು ಮಾಡಿಕೊಡದಿದ್ದುದರಿಂದ, ಚಿತ್ರಕಾರನೂ ತನ್ನ ಕರ್ತವ್ಯದಿಂದ ಚ್ಯುತನಾಗಿದ್ದುದರಿಂದ ಬ್ರಾಹ್ಮಣ ಶಾಪದಿಂದ ಪತಿತರಾದರು. ವರ್ತಕನೂ ಅಕ್ಕಸಾಲಿಗನ ಸಂಸರ್ಗದಿಂದ ಚಿನ್ನ ಕದಿಯುವುದು ಮುಂತಾದ ಅಪರಾಧ ಮಾಡಿ ಬ್ರಾಹ್ಮಣ ಶಾಪದಿಂದ ಪತಿತನಾದ.

ಚಿತ್ರಕಾರನಿಗೆ ಜಾರಿಣಿ ಶೂದ್ರಸ್ತ್ರೀಯಲ್ಲಿ ಗಾರೆ ಕೆಲಸದವ ಜನಿಸಿದ. ಜಾರದೋಷದಿಂದ ಅವನು ಪತಿತನಾದ. ಗಾರೆ ಕೆಲಸದವನಿಗೆ ಕುಂಬಾರರ ಸ್ತ್ರೀಯಲ್ಲಿ ಮನೆಕಟ್ಟುವ ಕೋಟಕ, ಕೋಟಕ ಸ್ತ್ರೀಯಲ್ಲಿ ಕುಂಬಾರನಿಂದ ಗಾಣಿಗ, ರಾಜಪುತ್ರಸ್ತ್ರೀಯಲ್ಲಿ ಕ್ಷತ್ರಿಯನಿಂದ ಬೇಡ, ಬೇಡನಿಂದ ತಳವಾರ ಸ್ತ್ರೀಯಲ್ಲಿ ನಟ, ನಟನಿಂದ ಬೇಡ ಸ್ತ್ರೀಯಲ್ಲಿ ಮಲ್ಲ, ಮಂತ್ರ, ಮಾವಟಿಗ, ಹಾಸ್ಯಗಾರ, ಕೋಲ, ಕಲಂಧರರು, ಶೂದ್ರನಿಂದ ಬ್ರಾಹ್ಮಣ ಸ್ತ್ರೀಯಲ್ಲಿ ಚಂಡಾಲ, ಬೇಡನಿಂದ ಚಂಡಾಲಸ್ತ್ರೀಯಲ್ಲಿ ಚಮ್ಮಾರ, ಚಂಡಾಲನಿಂದ ಚಮ್ಮಾರ ಸ್ತ್ರೀಯಲ್ಲಿ ಕಟುಕ, ಕಟುಕನಿಂದ ಬೇಡ ಸ್ತ್ರೀಯಲ್ಲಿ ಕೊಂಚ, ಕೊಂಚ ಸ್ತ್ರೀಯಲ್ಲಿ ಬೆಸ್ತನಿಂದ ಕರ್ತಾರ, ನಟನಿಂದ ಚಂಡಾಲ ಸ್ತ್ರೀಯಲ್ಲಿ ಹಡ್ಡಿ ಮತ್ತು ಡಮರು. ಹಡ್ಡಿ ಸ್ತ್ರೀಯಲ್ಲಿ ಚಂಡಾಲನಿಂದ ವನಚರರಾದ ಐವರು ಮಕ್ಕಳು, ನಟನಿಂದ ಬೇಡಸ್ತ್ರೀಯಲ್ಲಿ ಗಂಗಾಪುತ್ರ, ಗಂಗಾಪುತ್ರ ಸ್ತ್ರೀಯಲ್ಲಿ ವೇಷಧಾರಿಯಿಂದ ಯುಂಗಿ, ವೈಶ್ಯನಿಂದ ಬೇಡಸ್ತ್ರೀಯಲ್ಲಿ ಶುಂಡಿ, ಶುಂಡಿಸ್ತ್ರೀಯಲ್ಲಿ ವೈಶ್ಯನಿಂದ ಪೌಂಡ್ರಕ, ಕ್ಷತ್ರಿಯನಿಂದ ಕರಣಸ್ತ್ರೀಯಲ್ಲಿ ರಾಜಪುತ್ರ, ರಾಜಪುತ್ರ ಸ್ತ್ರೀಯಲ್ಲಿ ಕರಣನಿಂದ ಆಗರಿ, ಕ್ಷತ್ರಿಯನಿಂದ ವೈಶ್ಯ ಸ್ತ್ರೀಯಲ್ಲಿ ಬೆಸ್ತ ಜನಿಸಿದರು. ಕಲಿಯುಗದಲ್ಲಿ ಬೇಡನ ಸಹವಾಸದಿಂದ ಬೆಸ್ತ ಪತಿತನಾಗುತ್ತಾನೆ. ಬೇಡ ಸ್ತ್ರೀಯಲ್ಲಿ ಬೆಸ್ತನಿಂದ ಆಗಸ, ಆಗಸ ಸ್ತ್ರೀಯಲ್ಲಿ ಬೇಡನಿಂದ

ಕೋಯಾಲಿ, ನಾಪಿತನಿಂದ ಗೋಪಸ್ತ್ರೀಯಲ್ಲಿ ಸರ್ವಸ್ವಿ, ಸರ್ವಸ್ವಿ ಸ್ತ್ರೀಯಲ್ಲಿ ಕ್ಷತ್ರಿಯನಿಂದ ವ್ಯಾಧ, ಬೇಡನಿಂದ ಕುಂಡಿ ಸ್ತ್ರೀಯಲ್ಲಿ ಏಳುಮಂದಿ ಮಕ್ಕಳಾದರು. ಕಲಿಯುಗದಲ್ಲಿ ಹಡ್ಡಿಯ ಸಂಪರ್ಕದಿಂದ ಇವರೆಲ್ಲ ದಸ್ಯುಗಳಾದರು.

ಬ್ರಾಹ್ಮಣಸ್ತ್ರೀಯಲ್ಲಿ ಅವಳು ಋತುಮತಿಯಾದ ಮೊದಲನೆ ದಿನ ಋಷಿಯಿಂದ ಹುಟ್ಟಿದವ ಕೂದರ. 'ಕು' ಕೆಟ್ಟ 'ಉದರ' ಗರ್ಭದಲ್ಲಿ ಜನಿಸಿದುದರಿಂದ ಅವನು ಕೂದರನೆನಿಸಿದ. ಕೋಟಕ ಸ್ತ್ರೀಯಲ್ಲಿ 'ಕೂದರ'ನಿಂದ ಪತಿತ ಹುಟ್ಟಿದ. ವೈಶ್ಯಸ್ತ್ರೀ-ಯಲ್ಲಿ ಅವಳು ಋತುಮತಿಯಾದ ಮೊದಲದಿನದಲ್ಲಿ ಕ್ಷತ್ರಿಯನಿಂದ ಹುಟ್ಟಿದವ ಮಹಾದಸ್ಯು. ಕ್ಷತ್ರಿಯನಿಂದ ಶೂದ್ರ ಸ್ತ್ರೀಯಲ್ಲಿ ಹಾಗೆಯೆ ಋತುದೋಷದಿಂದ ಹುಟ್ಟಿದವ ಮ್ಲೇಚ್ಛ. ಈ ಮ್ಲೇಚ್ಛರು ಬಲಿಷ್ಠರು ಕ್ರೂರರು ನಿರ್ಭಯರು ಯುದ್ಧದಲ್ಲಿ ಅಜೇಯರು. ಶೌಚಾಚಾರ ವರ್ಜಿತರು, ಧರ್ಮಾಚರಣ ರಹಿತರು.

ಮ್ಲೇಚ್ಛನಿಂದ ನೇಕಾರ ಸ್ತ್ರೀಯಲ್ಲಿ ಜೋಲ, ಜೋಲನಿಂದ ನೇಕಾರ ಸ್ತ್ರೀಯಲ್ಲಿ ಶರಾಂಕ ಜನಿಸಿದ. ಹೀಗೆ ವರ್ಣಸಾಂಕರ್ಯ ದೋಷದಿಂದ ಇನ್ನೂ ಎಷ್ಟೋ ಜಾತಿ-ಗಳು ನಾವಿನ್ನೂ ಕೇಳದಿರುವವು ಹುಟ್ಟಿವೆ. ಅವುಗಳ ಹೆಸರನ್ನೂ ಸಂಖ್ಯೆಯನ್ನೂ ಹೇಳಲು ಯಾರು ಸಮರ್ಥರು ?

ಅಶ್ವಿನೀ ಕುಮಾರನಿಂದ ಬ್ರಾಹ್ಮಣಸ್ತ್ರೀಯಲ್ಲಿ ವೈದ್ಯ ಜನಿಸಿದ. ವೈದ್ಯನಿಂದ ಶೂದ್ರ ಸ್ತ್ರೀಯಲ್ಲಿ ಮಂತ್ರ ಔಷಧಿಗಳಲ್ಲಿ ನಿಪುಣರಾದ ಅನೇಕ ಮಕ್ಕಳು ಹುಟ್ಟಿದರು. ಅವರಿಂದ ಶೂದ್ರಸ್ತ್ರೀಯಲ್ಲಿ ಹಾವಾಡಿಗರು ಹುಟ್ಟಿದರು.

ಶೌನಕ— ಅಶ್ವಿನೀ ಕುಮಾರನಿಗೆ ಬ್ರಾಹ್ಮಣಸ್ತ್ರೀಯಲ್ಲಿ ಸಂತತಿ ಪಡೆಯುವ ಪ್ರಸಂಗವೇಕೆ ಬಂದಿತು ?

ಸೌತಿ— ಅತ್ಯಂತ ಸುಂದರಿಯಾದ ಬ್ರಾಹ್ಮಣಸ್ತ್ರೀಯೊಬ್ಬಳು ತೀರ್ಥಯಾತ್ರೆಗೆ ಹೊರಟಿದ್ದಳು. ದಾರಿಯಲ್ಲಿ ನಿರ್ಜನವಾದ ಒಂದು ಉದ್ಯಾನದ ಬಳಿ ಅಶ್ವಿನೀಕುಮಾರ ಅವಳನ್ನು ಕಂಡು ಬಲಾತ್ಕರಿಸಿದ. ಆಗ ಒಂದು ಮಗು ಜನಿಸಿತು. ಅವಳು ಈ ಮಗುವನ್ನು ಮನೆಗೆ ತಂದು ಪತಿಗೆ ಎಲ್ಲವನ್ನೂ ತಿಳಿಸಿದಳು. ಆತ ಕೋಪಗೊಂಡು ತಾಯಿ ಮಗು ಇಬ್ಬರನ್ನೂ ತ್ಯಜಿಸಿಹೋದ. ಇತ್ತ ಬ್ರಾಹ್ಮಣಸ್ತ್ರೀ ಯೋಗಶಕ್ತಿಯಿಂದ ಗೋದಾವರೀ ನದಿಯಾಗಿ ಹರಿದಳು. ಮಗುವಿಗೆ ಅಶ್ವಿನಿ ಕುಮಾರನೆ ಚಿಕಿತ್ಸಾಶಾಸ್ತ್ರ ಮಂತ್ರ ಶಿಲ್ಪಗಳನ್ನು ಕಲಿಸಿಕೊಟ್ಟ.

ಬ್ರಾಹ್ಮಣ ವೇದಧರ್ಮವನ್ನು ತೊರೆದು ಜ್ಯೋತಿಷ್ಯ ಗಣಿತಗಳಿಂದ ಹಣ ಸಂಪಾದನೆ ಮಾಡತೊಡಗಿದಾಗ ಗಣಕನೆನಿಸಿದ. ಬ್ರಾಹ್ಮಣ ಲೋಭಿಯಾಗಿ ಶೂದ್ರನಿಂದ ಮೊದಲಿನ ದಾನ ಸ್ವೀಕರಿಸಿದಾಗ, ಮೃತರಿಗಾಗಿ ಕೊಡುವ ದಾನಕ್ಕೆ ಮೊದಲಿಗೆ ಕೈಯೊಡ್ಡಿದಾಗ ಅಗ್ರದಾನಿಯೆನಿಸಿದ.

ಬ್ರಹ್ಮನ ಯಜ್ಞದಲ್ಲಿ ಯಜ್ಞಕುಂಡದಿಂದ ಧರ್ಮಭೋಧಕನಾದ ನನ್ನ ಪೂರ್ವ-ಪುರುಷ ಸೂತ ಉದಿಸಿದ. ಬ್ರಹ್ಮನಿಂದ ಪುರಾಣವಿದ್ಯೆಯನ್ನು ಕಲಿತ. ಎಲ್ಲ ಕಡೆ ಪ್ರವಚನ ಮಾಡಿದ. ಸೂತನಿಂದ ವೈಶ್ಯ ಸ್ತ್ರೀಯಲ್ಲಿ ಹುಟ್ಟಿದವನೆ ಭಟ್ಟ, ವಾವದೂಕ ಎಂಬ ಹೆಸರುಗಳಿಂದ ಪ್ರಸಿದ್ಧನಾದ ಸ್ತುತಿಪಾಠಕ.

ಇದಿಷ್ಟು ಜಾತಿನಿರ್ಣಯದ ಬಗ್ಗೆ ಹೇಳಿದ್ದೇನೆ. ವರ್ಣಸಾಂಕರ್ಯದಿಂದ ಜನಿಸಿದ ಜಾತಿಗಳಿನ್ನೂ ಬೇರೆ ಬಹಳ ಇವೆ.

ಎಲ್ಲ ಜಾತಿಗಳಲ್ಲೂ ಮಾನವರ ಪರಸ್ಪರ ಸಂಬಂಧದ ಬಗ್ಗೆ ಇನ್ನು ಮುಂದೆ ಹೇಳುತ್ತೇನೆ. ಅದು ವೇದೋಕ್ತವಾಗಿದ್ದು ಬ್ರಹ್ಮನೆ ಹಿಂದೆ ಉಪದೇಶಿಸಿದುದು. ಜನ್ಮ ಕೊಟ್ಟವ ಪಿತ. ಹಡೆದವಳು ಮಾತೆ. ಪಿತನ ಪಿತ ಪಿತಾಮಹ. ಅವನ ಪಿತ ಪ್ರಪಿತಾಮಹ, ಪಿತನ ಮಾತೆ ಪಿತಾಮಹಿ. ಅವಳ ಅತ್ತೆ ಪ್ರಪಿತಾಮಹಿ. ಅವಳ ಅತ್ತೆ ವೃದ್ಧ ಪ್ರಪಿತಾಮಹಿ. ಮಾತೆಯ ಮಾತೆ ಮಾತಾಮಹಿ. ಪ್ರಮಾತಾಮಹನ ಪತ್ನಿ ಪ್ರಮಾತಾಮಹಿ. ವೃದ್ಧ ಪ್ರಮಾತಾಮಹನ ಪತ್ನಿ ವೃದ್ಧ ಪ್ರಮಾತಾಮಹಿ. ಪಿತನ ಸೋದರ ಪಿತೃವ್ಯ. ಮಾತೆಯ ಸೋದರ ಮಾತುಲ. ಪಿತನ ಸೋದರಿ ಪಿತೃಷ್ವಸಾ. ಮಾತೆಯ ಸೋದರಿ ಮಾತುಷ್ವಸಾ. ಮಗನು ಪುತ್ರ. ಮಗಳು ದುಹಿತಾ. ಪುತ್ರನ ಪತ್ನಿ ವಧು. ದುಹಿತಳ ಪತಿ ಜಾಮಾತಾ. ಗಂಡ ಪತಿ. ಪತಿಯ ಸೋದರ ದೇವರ. ಪತಿಯ ಸೋದರಿ ನನಾಂದಾ. ಪತಿಯ ಪಿತ ಶ್ವಶುರ. ಪತಿಯ ಮಾತೆ ಶ್ವಶ್ರೂ. ಹೆಂಡತಿ ಪತ್ನಿ. ಪತ್ನಿಯ ಸೋದರ ಶ್ಯಾಲಕ. ಪತ್ನಿಯ ಸೋದರಿ ಶ್ಯಾಲಿಕಾ. ಪತ್ನಿಯ ಮಾತೆ ಶ್ವಶ್ರೂ. ಪತ್ನಿಯ ಪಿತ ಶ್ವಶುರ. ಸೋದರ ಭ್ರಾತೃ. ಸೋದರಿ ಭಗಿನಿ. ಭಗಿನಿಯ ಪುತ್ರ ಭಾಗಿನೇಯ. ಭ್ರಾತನ ಪುತ್ರ ಭ್ರಾತೃಪುತ್ರ. ಭಗಿನಿಯ ಪತಿ ಆವುತ್ತ. ಪತ್ನಿಯ ಸೋದರಿಯ ಪತಿ ತನಗೆ ಭ್ರಾತಾ. ಏಕೆಂದರೆ ಇಬ್ಬರಿಗೂ ಒಬ್ಬನೆ ಮಾವ. ಆದರಿಂದ ಅವನು ಸೋದರ ಸಮಾನ. ಆ ಮಾವ ತಂದೆಗೆ ಸಮಾನ.

> ಅನ್ನದಾತಾ ಭಯತ್ರಾತಾ ಪತ್ನೀತಾತಸ್ತಥೈವ ಚ ।
> ವಿದ್ಯಾದಾತಾ ಜನ್ಮದಾತಾ ಪಂಚೈತೇ ಪಿತರೋ ನೃಣಾಂ ॥

ಅನ್ನ ನೀಡುವವ, ಆಪತ್ತಿನಿಂದ ಕಾಪಾಡುವವ, ಹೆಣ್ಣುಕೊಟ್ಟ ಮಾವ, ವಿದ್ಯೆ ನೀಡುವ ಗುರು. ಜನ್ಮದಾತ ಈ ಐವರು ಪಿತರೆನಿಸುತ್ತಾರೆ.

> ಅನ್ನದಾತುಶ್ಚ ಯಾ ಪತ್ನೀ ಭಗಿನೀ ಗುರುಕಾಮಿನೀ
> ಮಾತಾ ಚ ತತ್ಸಪತ್ನೀ ಚ ಕನ್ಯಾ ಪುತ್ರಪ್ರಿಯಾ ತಥಾ ।
> ಮಾತುರ್ಮಾತಾ ಪಿತುರ್ಮಾತಾ ಶ್ವಶ್ರೂಃ ಪಿತ್ರೋಃ ಸ್ವಸಾ ತಥಾ
> ಪಿತೃವ್ಯಸ್ತ್ರೀ ಮಾತುಲಾನೀ ಮಾತರಶ್ಚ ಚತುರ್ದಶ ॥

ಅನ್ನದಾತನ ಮಡದಿ, ಸೋದರಿ, ಗುರುಪತ್ನಿ, ತಾಯಿ, ತಾಯಿಯ ಸವತಿ, ಮಗಳು, ಸೊಸೆ, ತಾಯಿಯ ತಾಯಿ, ತಂದೆಯ ತಾಯಿ, ಅತ್ತೆ, ತಾಯಿಯ ಸೋದರಿ, ತಂದೆಯ ಸೋದರಿ, ಚಿಕ್ಕಪ್ಪ ದೊಡ್ಡಪ್ಪಂದಿರ ಹೆಂಡತಿ, ಸೋದರ ಮಾವನ ಹೆಂಡತಿ ಈ ಹದಿನಾಲ್ಕು ಮಂದಿ ಮಾತೆಯರೆನಿಸುತ್ತಾರೆ.

ಪುತ್ರನ ಪುತ್ರ ಪೌತ್ರ. ಅವನ ಪುತ್ರ ಪ್ರಪೌತ್ರ. ಮುಂದಿನವರೆಲ್ಲ ಕುಲಜರು. ಮಗಳ ಮಗ ದೌಹಿತ್ರ. ದೌಹಿತ್ರನ ಪುತ್ರ ಮುಂತಾದವರು ಬಾಂಧವರು. ಸೋದರಿಯ ಮಗನ ಮಕ್ಕಳು ಮುಂತಾದವರೂ ಬಾಂಧವರೆನಿಸುತ್ತಾರೆ. ಸೋದರನ ಮಗನ ಮಕ್ಕಳು ಮುಂತಾದವರು ಜ್ಞಾತಿಗಳು. ಗುರುಪುತ್ರ ಸೋದರ-ನಂತೆ. ನಮ್ಮ ಪೋಷಣೆಯಲ್ಲಿರುವವ ನಮಗೆ ಪರಮಬಾಂಧವ. ಗುರುಪುತ್ರಿ ಸೋದರಿಯಂತೆ. ನಮ್ಮ ಪೋಷಣೆಯಲ್ಲಿರುವವಳು ತಾಯಿಯಂತೆ. ಮಗನ ಗುರು ಸೋದರನಂತೆ. ಮಗನ ಮಾವನೂ ಸೋದರನಂತೆ. ಅವನು ವಿವಾಹ ಸಂಬಂಧ-ದಿಂದ ಬಂಧು ಎನಿಸುತ್ತಾನೆ. ಹಾಗೆಯೆ ಮಗಳ ಮಾವನೂ ಮಗಳ ಗುರುವೂ ಸೋದರನಂತೆ. ಬಂಧುಗಳೆಲ್ಲ ಮಿತ್ರರೆ. ಏಕೆಂದರೆ ಸುಖ ನೀಡುವವನೆ ಮಿತ್ರ. ದುಃಖ ನೀಡುವವನೆ ಶತ್ರು. ಬಾಂಧವನೂ ಸ್ನೇಹ ಸಂಬಂಧವಿಲ್ಲದೆ ಸುಖ ನೀಡಲಾರ. ದುಃಖವನ್ನೇ ನೀಡುತ್ತಾನೆ.

ಸ್ನೇಹ ಸಂಬಂಧ ಮೂರು ಬಗೆಯದು- ವಿದ್ಯೆಯಿಂದ ರಕ್ತ ಸಂಬಂಧದಿಂದ ಮತ್ತು ಪ್ರೀತಿಯಿಂದ ಎಂದು. ಇವುಗಳಲ್ಲಿ ಪ್ರೀತಿಯಿಂದಾದ ಸ್ನೇಹ ಸಂಬಂಧ ಮಿತ್ರನದು. ಇದು ಬಹಳ ದುರ್ಲಭ. ಮಿತ್ರನ ತಾಯಿ ಹೆಂಡತಿ ಇಬ್ಬರೂ ತನಗೆ ತಾಯಿಯಂತೆ. ಮಿತ್ರನ ಸೋದರ ತನಗೆ ಸೋದರನಂತೆ. ಮಿತ್ರನ ತಂದೆ ತನಗೆ ತಂದೆಯಂತೆ.

ನಾಲ್ಕನೆಯದೂ ಒಂದು ನಾಮಸಂಬಂಧವೆಂಬುದಿದೆ ಎನ್ನುತ್ತಾನೆ ಪ್ರಜಾಪತಿ. ಜಾರನಿಗೆ ಉಪಪತಿ ಎಂಬ ನಾಮವಿದೆ. ಜಾರೆಗೆ ಉಪಪತ್ನಿ ಎಂಬ ನಾಮವಿದೆ. ಆದರಿಂದ ಜಾರ ಪತಿ ಸಮಾನನೆಂದೂ ಜಾರೆ ಪತ್ನೀಸಮಾನಳೆಂದೂ ಹೇಳಿ-ದಂತಾಗುತ್ತದೆ. ಆದರೆ ಈ ನಾಮಸಂಬಂಧ ಎಲ್ಲೆಡೆ ನಿಂದಿತವಾಗಿದೆ. ವೇದ ವಿರುದ್ಧವಾಗಿದೆ. ವಿಶ್ವಾಮಿತ್ರ ನಿರ್ಮಿತವೆಂದು ಕೆಲವು ದೇಶಗಳಲ್ಲಿ ರೂಢಿ. ಅದು ಅವರಿಗೆ ಅಪರಿಹಾರ್ಯವಾಗಿದೆ. ಆದರೆ ಅದು ಪುರುಷರಿಗೆ ಅಪಕೀರ್ತಿಕರ. ಸ್ತ್ರೀಯರಿಗಿನ್ನೂ ಹೆಚ್ಚು ಅಪಕೀರ್ತಿಕರ. ಆದರೂ ತಪೋವರ್ಚಸ್ಸುಳ್ಳವರಿಗೆ ಅದು ದೋಷವಾಗದಿರುವುದರಿಂದ ಎಲ್ಲ ಯುಗಗಳಲ್ಲಿಯೂ ರೂಢಿಯಲ್ಲಿದೆ.

**ಇಲ್ಲಿಗೆ ಶ್ರೀ ಬ್ರಹ್ಮವೈವರ್ತ ಮಹಾಪುರಾಣದ ಬ್ರಹ್ಮ ಖಂಡದಲ್ಲಿ ಸೌತಿ-ಶೌನಕ ಸಂವಾದದಲ್ಲಿ ಜಾತಿ ಸಂಬಂಧ ನಿರ್ಣಯವೆಂಬ ಹತ್ತನೆ ಅಧ್ಯಾಯ ಮುಗಿಯಿತು.**

## ವಿಷ್ಣು, ವೈಷ್ಣವ ಪ್ರಶಂಸೆ

**ಅಧ್ಯಾಯ-೧೧**

ಶೌನಕ— ಆ ಬ್ರಾಹ್ಮಣ ಪತ್ನಿಯನ್ನು ಪರಿತ್ಯಾಗ ಮಾಡಿ ಮುಂದೇನು ಮಾಡಿದ ? ಅಶ್ವಿನೀ ಕುಮಾರರು ಯಾರ ವಂಶದಲ್ಲಿ ಹುಟ್ಟಿದರು ?

ಸೌತಿ— ಆ ಬ್ರಾಹ್ಮಣ ಭಾರದ್ವಾಜ ಗೋತ್ರದ ಒಬ್ಬ ಮಹಾಮುನಿ. ಸುತಪಾ ಎಂದೇ ಹೆಸರು. ಆತ ಲಕ್ಷ ವರ್ಷಕಾಲ ಹಿಮಾಲಯದಲ್ಲಿ ತಪಸ್ಸು ಮಾಡಿದ. ಬ್ರಹ್ಮವರ್ಚಸ್ಸಿನಿಂದ ಪ್ರಜ್ವಲಿಸಿದ. ಒಮ್ಮೆ ಇದ್ದಕ್ಕಿದ್ದಂತೆ ಆಕಾಶದಲ್ಲಿ ಕ್ಷಣಕಾಲ ಕೃಷ್ಣಜ್ಯೋತಿಯನ್ನು ಕಂಡ. ಪ್ರಕೃತಿಯಿಂದಾಚೆ ನಿರ್ಲಿಪ್ತನಾಗಿರುವ ಆ ಪರಮಾತ್ಮನೆ ಮೈದೋರಿದರೂ ಆತ ಮೋಕ್ಷವರವನ್ನು ಬೇಡಲಿಲ್ಲ. ನಿಶ್ಚಲಭಕ್ತಿ ಬೇಡಿದ, ದಾಸ್ಯ ಬೇಡಿದ. ಆಗ ಆಕಾಶವಾಣಿಯಾಯಿತು. 'ಮೊದಲಿಗೆ ಪತ್ನಿಯನ್ನು ಪರಿಗ್ರಹಿಸು. ಪ್ರಾರಬ್ಧ ಭೋಗಿಸಿ ಕಳೆದುಕೊಳ್ಳು, ಬಳಿಕ ನಿನಗೆ ಭಕ್ತಿ ದಾಸ್ಯ ನೀಡುತ್ತೇನೆ.'

ಬ್ರಹ್ಮನು ಆತನಿಗೆ ಪಿತೃಗಳ ಮಾನಸ ಪುತ್ರಿಯನ್ನಿತ್ತ. ಅವಳಲ್ಲಿ ಕಲ್ಯಾಣ ಮಿತ್ರ ಜನಿಸಿದ. ಅವನ ಸ್ಮರಣಮಾತ್ರದಿಂದ ಕಲಿಬಾಧೆ ನಿವೃತ್ತಿಯಾಗುವುದು. ಅಗಲಿದ ಬಂಧುಗಳು ಪುನಃ ಲಭಿಸುತ್ತಾರೆ. ಮುನಿ ಕಲ್ಯಾಣಮಿತ್ರನ ತಾಯಿಯನ್ನೂ ಪರಿತ್ಯಜಿಸಿ ಅಶ್ವಿನಿ ಕುಮಾರನನ್ನು ಶಪಿಸಿದ- ''ನಿನಗೆ ಯಜ್ಞದಲ್ಲಿ ಹವಿರ್ಭಾಗವಿಲ್ಲದಿರಲಿ. ನಿನ್ನ ಸೋದರನ ಜೊತೆಗೇ ನಿನಗೆ ಪೂಜೆ ಹೊರತು ಪ್ರತ್ಯೇಕ ಪೂಜೆ ಇಲ್ಲವೆಂದಾಗಲಿ. ವ್ಯಾಧಿಗ್ರಸ್ತನಾಗು. ನಿನ್ನ ಅಂಗಗಳು ನಿಷ್ಕ್ರಿಯವಾಗಲಿ'' ಒಡನೆ ಸೂರ್ಯ ಅಶ್ವಿನೀ ಕುಮಾರನೊಂದಿಗೆ ಸುತಪನ ಬಳಿ ಬಂದು ಸ್ತುತಿಸಿದ-

''ಪೂಜ್ಯ ವಿಪ್ರನೆ ಕ್ಷಮಿಸು. ನನ್ನ ಮಗ ಮಾಡಿದ ತಪ್ಪನ್ನು ಕ್ಷಮಿಸು. ಬ್ರಹ್ಮ ವಿಷ್ಣು ಮಹೇಶ್ವರ ಮುಂತಾದ ದೇವತೆಗಳೆಲ್ಲ ಸದಾ ವಿಪ್ರನು ನೀಡುವ ಫಲಪುಷ್ಪ ಜಲಾದಿಗಳನ್ನೆ ಸ್ವೀಕರಿಸುತ್ತಾರೆ. ವಿಪ್ರ ಆವಾಹಿಸಿದ ದೇವತೆಗಳನ್ನೆ ಜಗತ್ತಿನಲ್ಲಿ ಎಲ್ಲರೂ ಪೂಜಿಸುತ್ತಾರೆ. ಅದರಿಂದ ವಿಪ್ರನಿಗಿಂತ ಬೇರೆ ದೇವತೆಯಿಲ್ಲ. ಸ್ವಯಂ ಹರಿಯೆ ವಿಪ್ರರೂಪಿ. ವಿಪ್ರ ಸಂತುಷ್ಟನಾದರೆ ನಾರಾಯಣ ಸಂತುಷ್ಟನಾಗುತ್ತಾನೆ. ನಾರಾಯಣ ಸಂತುಷ್ಟನಾದರೆ ಎಲ್ಲ ದೇವತೆಗಳು ಸಂತುಷ್ಟರಾಗುತ್ತಾರೆ.

**ನಾಸ್ತಿ ಗಂಗಾಸಮಂ ತೀರ್ಥಂ ನ ಚ ಕೃಷ್ಣಾತ್ ಪರಃ ಸುರಃ ।**
**ನ ಶಂಕರಾತ್ ವೈಷ್ಣವಶ್ಚ ನ ಸಹಿಷ್ಣುರ್ಧರಾಪರಾ ॥**

ಗಂಗೆಗೆ ಸಮಾನ ತೀರ್ಥವಿಲ್ಲ. ಕೃಷ್ಣನನ್ನು ಮೀರಿಸುವ ದೇವತೆಯಿಲ್ಲ. ಶಂಕರನಿಗಿಂತ ಹೆಚ್ಚಿನ ವಿಷ್ಣುಭಕ್ತನಿಲ್ಲ. ಧರೆಗಿಂತ ಮೇಲಾದ ಕ್ಷಮಾಶೀಲನಿಲ್ಲ.

**ನ ಚ ಸತ್ಯಾತ್ ಪರೋ ಧರ್ಮೋ ನ ಸಾಧ್ವೀ ಪಾರ್ವತೀಪರಾ ।**
**ನ ದೈವಾದ್ ಬಲವಾನ್ ಕಶ್ಚಿತ್ ನ ಚ ಪುತ್ರಾತ್ ಪರಃ ಪ್ರಿಯಃ ॥**

ಸತ್ಯಕ್ಕಿಂತ ಮಿಗಿಲಾದ ಧರ್ಮವಿಲ್ಲ. ಪಾರ್ವತಿಗಿಂತ ಮಿಗಿಲಾದ ಪತಿವ್ರತೆಯಿಲ್ಲ. ದೈವಕ್ಕಿಂತ ಪ್ರಬಲವಾದುದು ಬೇರೆ ಇಲ್ಲ. ಪುತ್ರನಿಗಿಂತ ಹೆಚ್ಚಿನ ಪ್ರೀತಿಪಾತ್ರನಿಲ್ಲ.

ನಚ ವ್ಯಾಧಿಸಮಃ ಶತ್ರುರ್ನಚ ಪೂಜ್ಯೋ ಗುರೋಃ ಪರಃ ।
ನಾಸ್ತಿ ಮಾತೃಸಮೋ ಬಂಧುಃ ನ ಚ ಮಿತ್ರಂ ಪಿತುಃ ಪರಂ ॥

ವ್ಯಾಧಿಗೆ ಸಮಾನ ಶತ್ರುವಿಲ್ಲ. ಗುರುವಿಗಿಂತ ಹೆಚ್ಚಿನ ಪೂಜ್ಯನಿಲ್ಲ. ತಾಯಿಗೆ ಸಮಾನ ಬಂಧು ಇಲ್ಲ. ತಂದೆಗೆ ಅಧಿಕ ಮಿತ್ರನಿಲ್ಲ.

ಏಕಾದಶೀ ವ್ರತಾನ್ನಾನ್ಯತ್ ತಪೋ ನಾನಶನಾತ್ ಪರಂ ।
ಪರಂ ಸರ್ವಧನಾದ್ ರತ್ನಂ ವಿದ್ಯಾರತ್ನಂ ಪರಂ ತತಃ ॥

ಏಕಾದಶೀ ವ್ರತಕ್ಕಿಂತ ಮಿಗಿಲಾದ ವ್ರತವಿಲ್ಲ. ಉಪವಾಸಕ್ಕಿಂತ ಮಿಗಿಲಾದ ತಪವಿಲ್ಲ. ಎಲ್ಲ ಧನಕ್ಕಿಂತ ರತ್ನ ಶ್ರೇಷ್ಠ. ಎಲ್ಲ ರತ್ನಕ್ಕಿಂತ ವಿದ್ಯಾರತ್ನ ಶ್ರೇಷ್ಠ.

ಎಲ್ಲ ಆಶ್ರಮಗಳಲ್ಲಿಯೂ ವಿಪ್ರಶ್ರೇಷ್ಠ. ವಿಪ್ರನಿಗೆ ಸಮನಾದ ವೇದ ವೇದಾಂಗಜ್ಞನಾದ ಗುರುವಿಲ್ಲ ಎಂದು ಪ್ರಜಾಪತಿ ವಚನವಿದೆ.'

ಸೂರ್ಯನ ಪ್ರಾರ್ಥನೆಗೆ ಮುನಿದು ಸುತಪ ತನ್ನ ತಪೋಬಲದಿಂದ ಅಶ್ವಿನಿ ಕುಮಾರನನ್ನು ನೀರೋಗಿಗಳನ್ನಾಗಿಸಿ ಯಜ್ಞದಲ್ಲಿ ಹವಿರ್ಭಾಗ ಅವನಿಗೆ ಸಿಗುವಂತೆ ವರ ನೀಡಿ ಹರಿಸೇವಾಪರನಾಗಿ ಗಂಗಾ ತೀರಕ್ಕೆ ತೆರಳಿದ. ಸೂರ್ಯನೂ ಪುತ್ರ-ನೊಂದಿಗೆ ಹಿಂತೆರಳಿದ.

ಸೂರ್ಯ ಮಾಡಿದ ವಿಪ್ರಸ್ತುತಿಯನ್ನು ಯಾವನು ಪಠಿಸುವನೋ ಅವನು ವಿಪ್ರಾನುಗ್ರಹದಿಂದ ಸರ್ವತ್ರ ವಿಜಯಿಯಾಗುತ್ತಾನೆ. ಬೆಳಿಗ್ಗೆ ಎದ್ದು 'ವಿಪ್ರನಿಗೆ ನಮಸ್ಕಾರ' ಎನ್ನುವವ ಎಲ್ಲ ತೀರ್ಥಗಳಲ್ಲಿ ಸ್ನಾನ ಮಾಡಿದಂತಾಗುವುದು. ಎಲ್ಲಯಜ್ಞ ಮಾಡಿದ ಫಲ ಬರುವುದು.

ಪೃಥಿವ್ಯಾಂ ಯಾನಿ ತೀರ್ಥಾನಿ ತಾನಿ ತೀರ್ಥಾನಿ ಸಾಗರೇ ।
ಸಾಗರೇ ಯಾನಿ ತೀರ್ಥಾನಿ ವಿಪ್ರಪಾದೇಷು ತಾನಿ ಚ ॥

ಭೂಮಿಯಲ್ಲಿರುವ ಎಲ್ಲ ತೀರ್ಥಗಳೂ ಸಮುದ್ರದಲ್ಲಿವೆ. ಹಾಗೇ ಸಮುದ್ರದಲ್ಲಿರುವ ಎಲ್ಲ ತೀರ್ಥಗಳೂ ವಿಪ್ರರ ಪಾದಗಳಲ್ಲಿವೆ.

ವಿಪ್ರಪಾದೋದಕಂ ಪೀತ್ವಾ ಯಾವತ್ತಿಷ್ಠತಿ ಮೇದಿನೀ ।
ತಾವತ್ ಪುಷ್ಕರ ಪಾತ್ರೇಷು ಪಿಬಂತಿ ಪಿತರೋ ಜಲಂ ॥

ವಿಪ್ರಪಾದೋದಕಂ ಪುಣ್ಯಂ ಭಕ್ತಿಯುಕ್ತಶ್ಚ ಯಃ ಪಿಬೇತ್ ।
ಸ ಸ್ನಾತಃ ಸರ್ವತೀರ್ಥೇಷು ಸರ್ವಯಜ್ಞೇಷು ದೀಕ್ಷಿತಃ ॥

**ಮಹಾರೋಗೀ ಯದಿ ಪಿಬೇತ್ ವಿಪ್ರಪಾದೋದಕಂ ದ್ವಿಜ ।**
**ಮುಚ್ಯತೇ ಸರ್ವರೋಗಾಚ್ಚ ಮಾಸಮೇಕಂ ತು ಭಕ್ತಿತಃ ॥**

ವಿಪ್ರ ಪಾದೋದಕ ಪಾನ ಮಾಡಿದರೆ ಭೂಮಿ ಇರುವಷ್ಟು ಕಾಲವೂ ಪಿತೃಗಳು ಕಮಲದೆಲೆಯ ಪಾತ್ರೆಯಲ್ಲಿ ನೀರು ಕುಡಿಯುವರು. ಪವಿತ್ರವಾದ ವಿಪ್ರ-ಪಾದೋದಕವನ್ನು ಭಕ್ತಿಯಿಂದ ಕುಡಿವವನು ಎಲ್ಲ ತೀರ್ಥಸ್ನಾನ ಮಾಡಿದಂತಾಗುತ್ತದೆ. ಎಲ್ಲ ಯಜ್ಞ ಮಾಡಿದ ಫಲ ಬರುತ್ತದೆ. ಮಹಾರೋಗ ಪೀಡಿತನಾದವನು ಒಂದು ತಿಂಗಳ ಕಾಲ ಭಕ್ತಿಯಿಂದ ವಿಪ್ರಪಾದೋದಕ ಪಾನ ಮಾಡಿದರೆ ಸರ್ವರೋಗಗಳಿಂದ ಮುಕ್ತನಾಗುವನು.

ವಿಷ್ಣುಭಕ್ತನೂ ಸಂಧ್ಯಾವಂದನೆಯಿಂದ ಪೂತಾತ್ಮನೂ ಆದ ವಿಪ್ರನು ಲೌಕಿಕ ವಿದ್ಯೆಯಲ್ಲಿ ನಿಪುಣನಿರಲಿ ಇಲ್ಲದಿರಲಿ ವಿಷ್ಣುವಿನಂತೆ ಪೂಜ್ಯನೆನಿಸುತ್ತಾನೆ. ವಿಷ್ಣು-ಭಕ್ತನಾದ ವಿಪ್ರ ಹೊಡೆದರೂ ಪ್ರತಿಯಾಗಿ ಹೊಡೆಯಬಾರದು. ಶಪಿಸಿದರೂ ಪ್ರತಿಶಾಪ ನೀಡಬಾರದು. ಗೋವುಗಳಿಗಿಂತ ನೂರು ಪಟ್ಟು ಹೆಚ್ಚು ಪೂಜ್ಯ ವಿಪ್ರ. ವಿಪ್ರನ ಪಾದೋದಕವನ್ನೂ ನೈವೇದ್ಯವನ್ನೂ ಸೇವಿಸುವವನು ರಾಜಸೂಯಯಾಗದ ಫಲವನ್ನು ಪಡೆಯುತ್ತಾನೆ.

**ಏಕಾದಶ್ಯಾಂ ನ ಭುಂಕ್ತೇ ಯೋ ನಿತ್ಯಂ ಕೃಷ್ಣಂ ಸಮರ್ಚಯೇತ್ ।**
**ತಸ್ಯ ಪಾದೋದಕಂ ಪ್ರಾಪ್ಯ ಸ್ಥಲಂ ತೀರ್ಥಂ ಭವೇದ್ಧ್ರುವಂ ॥**

ಏಕಾದಶಿ ಉಪವಾಸ ನಿತ್ಯ ಕೃಷ್ಣನ ಅರ್ಚನೆಗಳನ್ನು ಮಾಡುವವನ ಪಾದೋದಕ ಬಿದ್ದ ಸ್ಥಲವೆ ತೀರ್ಥವೆನಿಸುವುದು ನಿಶ್ಚಿತ.

ಕೃಷ್ಣನ ನೈವೇದ್ಯ ಉಣ್ಣುವವ ಪೂತಾತ್ಮನಾಗಿ ಜೀವನ್ಮುಕ್ತನೆನಿಸುತ್ತಾನೆ. ಸತ್ಕುಲ ಪ್ರಸೂತರಾದ ದ್ವಿಜರಿಗೆ ವಿಷ್ಣುವಿಗೆ ಅನಿವೇದಿತನಾದ ಅನ್ನವೆಂದರೆ ಅದು ಮಲಕ್ಕೆ ಸಮಾನ. ನೀರು ಮೂತ್ರಕ್ಕೆ ಸಮಾನವೆಂದು ಪ್ರಜಾಪತಿ ವಚನವಿದೆ. ಬ್ರಹ್ಮನೂ ಬ್ರಹ್ಮಪುತ್ರರೂ ಎಲ್ಲರೂ ವಿಷ್ಣುಭಕ್ತರು. ವಿಪ್ರ ಅವರ ಕುಲದಲ್ಲಿ ಹುಟ್ಟಿದವನೆಂದ ಮೇಲೆ ಅವನು ವಿಷ್ಣುವಿಗೆ ವಿಮುಖ ಹೇಗಾದಾನು ? ಒಂದು ವೇಳೆ ತಂದೆ ತಾಯಿಗಳ ತಾತಂದಿರ ಅಥವಾ ಹಿರಿಯರ ಸಂಸರ್ಗದೋಷದಿಂದಾಗಿ ವಿಷ್ಣುವಿಮುಖನಾದರೆ ಅವನು ಬದುಕಿದ್ದು ಸತ್ತಂತೆಯೆ.

**ಸ ಕಿಂ ಗುರುಃ ಸ ಕಿಂ ತಾತಃ ಸ ಕಿಂ ಪುತ್ರಃ ಸ ಕಿಂ ಸಖಾ ।**
**ಸ ಕಿಂ ರಾಜಾ ಸ ಕಿಂ ಬಂಧುರ್ನ ದದ್ಯಾತ್ ಯೋ ಹರೌ ಮತಿಂ ॥**

ತಾನು ಹರಿಭಕ್ತನಾಗಿ ಪರರಿಗೆ ಭಕ್ತಿ ಉಪದೇಶಿಸಿದವ ಗುರುವೆ, ತಾತನೆ, ಮಗನೆ, ಮಿತ್ರನೆ, ರಾಜನೆ, ಬಂಧುವೆ ?

**ಅವೈಷ್ಣವಾದ್ ದ್ವಿಜಾದ್ ವಿಪ್ರ ಚಂಡಾಲೋ ವೈಷ್ಣವೋ ವರಃ ।**
**ಸಗಣಃ ಶ್ವಪಚೋ ಮುಕ್ತೋ ಬ್ರಾಹ್ಮಣೋ ನರಕಂ ವ್ರಜೇತ್ ॥**

ವಿಷ್ಣುಭಕ್ತಿರಹಿತನಾದ ದ್ವಿಜನಿಗಿಂತ ವಿಷ್ಣುಭಕ್ತನಾದ ಚಂಡಾಲನೆ ಲೇಸು. ಏಕೆಂದರೆ ಆ ಚಂಡಾಲ ಸಪರಿವಾರನಾಗಿ ಮುಕ್ತನಾಗುತ್ತಾನೆ, ದ್ವಿಜ ನರಕಕ್ಕೆ ಹೋಗುತ್ತಾನೆ.

**ಸಂಧ್ಯಾಹೀನೋಽಶುಚಿರ್ನಿತ್ಯಂ ಕೃಷ್ಣೇ ವಾ ವಿಮುಖೋ ದ್ವಿಜಃ ।**
**ಸ ಏವ ಬ್ರಾಹ್ಮಣಾಭಾಸೋ ವಿಷ ಹೀನೋ ಯಥೋರಗಃ ॥**

ಸಂಧ್ಯಾವಂದನೆ ಮಾಡದ ದ್ವಿಜನಿಗೂ ವಿಷ್ಣು ವಿಮುಖನಾದ ದ್ವಿಜನಿಗೂ ಸದಾ ಅಶೌಚ. ಆತ ತೋರಿಕೆಗೆ ಮಾತ್ರ ದ್ವಿಜ, ವಿಷವಿಲ್ಲದ ಹಾವಿನಂತೆ. ಗುರುಮುಖದಿಂದ ಯಾರ ಕಿವಿಗೆ ವಿಷ್ಣುಮಂತ್ರ ಬೀಳುವುದೋ ಅವನು ವಿಷ್ಣುಭಕ್ತನಾಗಿ ಪೂತಾತ್ಮ-ನೆನಿಸುತ್ತಾನೆ. ಜೀವನ್ಮುಕ್ತನೆನಿಸುತ್ತಾನೆ. ವಿಷ್ಣುಭಕ್ತ ತನ್ನ ತಾತ ಮುತ್ತಾತ ಮುಂತಾದ ನೂರಾರು ಕೋಟಿ ಪಿತೃಗಳೊಂದಿಗೆ ವಿಷ್ಣುಲೋಕ ಸೇರುತ್ತಾನೆ.

ಬ್ರಾಹ್ಮಣ ಕ್ಷತ್ರಿಯ ವೈಶ್ಯ ಶೂದ್ರ ಎಂಬ ನಾಲ್ಕು ಜಾತಿಗಳಂತೆ ವೈಷ್ಣವ ಎಂಬುದೂ ಒಂದು ಬೇರೆ ಜಾತಿ. ವಿಷ್ಣುಭಕ್ತರು ಸದಾ ವಿಷ್ಣುವಿನ ಪಾದಕಮಲವನ್ನು ಸ್ಮರಿಸುತ್ತಾರೆ. ಅವರನ್ನು ವಿಷ್ಣು ಸ್ಮರಿಸುತ್ತಾನೆ. ಅವರ ರಕ್ಷಣೆಗಾಗಿ ವಿಷ್ಣು ಸುದರ್ಶನ ಚಕ್ರವನ್ನು ನೇಮಿಸಿದ್ದರೂ ಅಷ್ಟರಿಂದಲೆ ನಿಶ್ಚಿಂತನಾಗದೆ ತಾನೆ ಆ ಭಕ್ತರ ಬಳಿ ಇರುತ್ತಾನೆ.

**ಇಲ್ಲಿಗೆ ಶ್ರೀ ಬ್ರಹ್ಮವೈವರ್ತ ಮಹಾಪುರಾಣದ ಸೌತಿ ಶೌನಕ ಸಂವಾದದಲ್ಲಿ ವಿಷ್ಣು ವೈಷ್ಣವ ಬ್ರಾಹ್ಮಣ ಪ್ರಶಂಸೆಯೆಂಬ ಹನ್ನೊಂದನೆ ಅಧ್ಯಾಯ ಮುಗಿಯಿತು.**

## ನಾರದ ಜನ್ಮಕಥನ

**ಅಧ್ಯಾಯ-೧೨**

ಶೌನಕ— ಋಷಿವಂಶ ವರ್ಣನೆಯ ಪ್ರಸಂಗದಲ್ಲಿ ಬೇರೆ ಬೇರೆ ವಿಷಯಗಳು ಬಂದಿವೆ. ಈಗ ಬ್ರಹ್ಮ ನಾರದನಿಗೆ ಶಾಪ ಕೊಟ್ಟ ಬಳಿಕ ಏನಾಯಿತೆಂದು ಕೇಳಲು ಈಗ ಕುತೂಹಲ ಉಂಟಾಗಿದೆ. ಬ್ರಹ್ಮಪುತ್ರರಲ್ಲಿ ಯಾರು ಸೃಷ್ಟಿಕಾರ್ಯ ಮಾಡಿದರು, ಯಾರು ಬ್ರಹ್ಮಚರ್ಯದಿಂದಿದ್ದರು ? ತಂದೆಯನ್ನು ವಿರೋಧಿಸಿದ ನಾರದ ಮುಂದೇನು ಮಾಡಿದ ? ತಂದೆಯ ಶಾಪದಿಂದ ಅವನಿಗೇನು ಪರಿಣಾಮ-ವಾಯಿತು ? ಅವನ ಶಾಪದಿಂದ ತಂದೆಗೇನಾಯಿತು ? ಇವೆಲ್ಲವನ್ನೂ ಹೇಳು.

ಸೌತಿ— ಹಂಸ ಯತಿ ಅರಣಿ ವೋಢು ಪಂಚಶಿಖ ಅಪಾಂತರತಮ ಸನಕಾದಿಗಳು ಇವರ ಹೊರತು ಬೇರೆ ಬ್ರಹ್ಮಪುತ್ರರು ಅನೇಕ ಮಂದಿ ಬ್ರಹ್ಮನ ಆಜ್ಞೆಯನ್ನು ಪಾಲಿಸಿ ಸಂಸಾರವಂದಿಗರಾದರು. ಮಕ್ಕಳನ್ನು ಪಡೆದರು.

ನಾರದನ ಶಾಪದಿಂದ ಬ್ರಹ್ಮ ಲೋಕದಲ್ಲಿ ಪೂಜೆ ಇಲ್ಲದವನಾದ. ಆದರಿಂದಲೆ ಬಲ್ಲವರು ಬ್ರಹ್ಮಮಂತ್ರವನ್ನು ಉಪಾಸನ ಮಾಡುವುದಿಲ್ಲ. ನಾರದನೂ ಬ್ರಹ್ಮಶಾಪ-ದಿಂದ ಗಂಧರ್ವನಾಗಿ ಹುಟ್ಟಿದ. ಆ ವೃತ್ತಾಂತವನ್ನು ವಿಸ್ತಾರವಾಗಿ ಹೇಳುತ್ತೇನೆ ಕೇಳು.

ಒಬ್ಬ ಗಂಧರ್ವರಾಜ ಎಲ್ಲ ಬಗೆಯ ಐಶ್ವರ್ಯವಿದ್ದೂ ಪುತ್ರಹೀನನಾಗಿದ್ದ. ಪುತ್ರಾರ್ಥಿಯಾಗಿ ಗುರು ವಸಿಷ್ಠರ ಉಪದೇಶದಂತೆ ಪುಷ್ಕರ ಕ್ಷೇತ್ರದಲ್ಲಿ ಶಿವನ ಕುರಿತು ಏಕಾಗ್ರತೆಯಿಂದ ತಪಸ್ಸು ಮಾಡಿದ. ವಸಿಷ್ಠರು ಅವನಿಗೆ ಶಿವ ಕವಚ ಸ್ತೋತ್ರ ಹಾಗೂ ದ್ವಾದಶಾಕ್ಷರ ಮಂತ್ರಗಳನ್ನು ಉಪದೇಶಿಸಿದರು. ಆತ ನಿರಾಹಾರನಾಗಿ ದೇವಮಾನದ ನೂರು ವರ್ಷಕಾಲ ಆ ಮಂತ್ರ ಜಪಿಸಿದ. ಕೊನೆಯಲ್ಲಿ ಶಿವ ಮೈದೋರಿದ. ಪ್ರಸನ್ನ ಮುಖದಿಂದ ಬ್ರಹ್ಮವರ್ಚಸ್ಸಿನಿಂದ ದಶದಿಕ್ಕುಗಳನ್ನು ಬೆಳಗಿಸುತ್ತ ನಿಂತ. ತ್ರಿಶೂಲ ಪಟ್ಟಿಶಧಾರಿ. ದಿಗಂಬರ, ವೃಷಭವಾಹನ, ಶುದ್ಧ ಸ್ಫಟಿಕದಂತೆ ಹೊಳೆವ ಮೈಬಣ್ಣದವ. ಚಂದ್ರಶೇಖರ, ತ್ರಿಣೇತ್ರ, ಚಿನ್ನದಂತೆ ಹೊಳೆವ ಜಟಾಜೂಟದವ. ನೀಲಕಂಠ, ಸರ್ಪವನ್ನೆ ಯಜ್ಞೋಪವೀತವಾಗಿ ಧರಿಸಿದವ, ಸರ್ವಸಂಹಾರಕ ಮೃತ್ಯುಂಜಯ ಗ್ರೀಷ್ಮಕಾಲದ ಮಧ್ಯಾಹ್ನ ಸೂರ್ಯನಿಗಿಂತ ಕೋಟಿಪಾಲು ಬೆಳಗುವವ. ತತ್ವಜ್ಞಾನ-ದಾಯಕ ಹರಿಭಕ್ತಿಯನ್ನು ಮುಕ್ತಿಯನ್ನೂ ಕೊಡುವವ. ಇಂಥ ಶಿವನನ್ನು ಕಂಡ ಗಂಧರ್ವರಾಜ ದಂಡ ಪ್ರಣಾಮ ಮಾಡಿ ವಸಿಷ್ಠರು ಉಪದೇಶಿಸಿದ್ದ ಮಂತ್ರದಿಂದ ಸ್ತುತಿಸಿದ. ಬೇಕಾದ ವರ ಕೇಳೆಂದ ಕೃಪಾನಿಧಿ ಶಿವ. ಗಂಧರ್ವರಾಜ ಪರಮ ವೈಷ್ಣವ-ನಾದ ಒಬ್ಬ ಮಗನನ್ನು ಬೇಡಿದ. ಶಿವ ನಕ್ಕು ಹೇಳಿದ-

ಗಂಧರ್ವರಾಜ, ನೀನು ಧನ್ಯ. ಈ ಒಂದು ವರವಿದ್ದರೆ ಸಾಕು. ಬೇರೆ ಎಲ್ಲ ಚರ್ವಿತಚರ್ವಣ. ಹರಿಯಲ್ಲಿ ದೃಢಭಕ್ತಿ ಉಳ್ಳವ ಅನಾಯಾಸವಾಗಿ ಸಕಲ ಪ್ರಪಂಚ-ವನ್ನಾಳಬಲ್ಲ. ತನ್ನ ಮತ್ತು ಮಾತಾಮಹನ ಕುಲಕೋಟಿಯನ್ನುದ್ಧರಿಸಿ ಗೋಲೋಕಕ್ಕೆ ಹೋಗಬಲ್ಲ. ಕೋಟಿ ಜನ್ಮಾರ್ಜಿತವಾದ ಸಂಚಿತ ಆಗಾಮಿ ಪ್ರಾರಬ್ಧವೆಂಬ ತ್ರಿವಿಧ ಪಾಪವನ್ನೂ ಅನಿಷ್ಟ ಪುಣ್ಯವನ್ನೂ ಕಳೆದುಕೊಂಡು ಮೋಕ್ಷದಲ್ಲಿ ಹರಿಯ ದಾಸ್ಯವನ್ನು ಪಡೆಯಬಲ್ಲ.

ಸತಿ ಸುತರು ಐಶ್ವರ್ಯ ಸುಖ ದುಃಖಾನುಭವವೆಲ್ಲ ಮಾನವನಿಗೆ ಕೃಷ್ಣಭಕ್ತಿ ಮನದಲ್ಲಿ ಮೂಡುವ ವರೆಗೆ ಮಾತ್ರ. ಅದು ಮೂಡಿತೆಂದರೆ ಎಲ್ಲ ಕಾಮನೆಗಳೂ ಬತ್ತಿಹೋಗುವುವು. ಭಕ್ತಿ ಎಂಬ ಖಡ್ಗ ಕಾಮನೆಯೆಂಬ ವೃಕ್ಷದ ಬೇರನ್ನೆ ಕಡಿದೊಗೆಯ ಬಲ್ಲುದು.

ಕೃಷ್ಣಭಕ್ತರೆ ಪುಣ್ಯವಂತರು. ಅವರಿಗೆ ಪರಮ ವೈಷ್ಣವರಾದ ಮಕ್ಕಳು ಹುಟ್ಟಿ ಅನಾಯಾಸವಾಗಿ ಕುಲಕೋಟಿಯನ್ನು ಉದ್ಧರಿಸುತ್ತಾರೆ. ಆದರಿಂದ ವೈಷ್ಣವ ಪುತ್ರ-ನೊಬ್ಬ ಜನಿಸಬೇಕೆಂಬ ಒಂದು ವರದಿಂದಲೆ ಮಾನವ ಕೃತಾರ್ಥನೆನಿಸುತ್ತಾನೆ. ಬೇರೆ ವರವೇಕೆ ಬೇಕು ?

ವೈಷ್ಣವರಾದ ನಮಗೆ ಶ್ರೀಕೃಷ್ಣನ ಭಕ್ತಿ ದಾಸ್ಯಗಳೆಂಬುದು ಒಂದು ದೊಡ್ಡ ನಿಧಿ. ಅದನ್ನು ನಾವು ಯಾರಿಗೂ ಕೊಡಲು ಸಿದ್ಧರಿಲ್ಲ. ದುರ್ಲಭವಾದ ಬೇರಾವ ವರವನ್ನಾದರೂ ಕೇಳು. ಇಂದ್ರ ಪದವಿ ಬೇಕೆ ? ದೇವ ಜನ್ಮಬೇಕೆ ಅಥವಾ ಬ್ರಹ್ಮಪದವಿಯೆ ಬೇಕೆ ? ಅಥವಾ ಸರ್ವಸಿದ್ಧಿದಾಯಕವಾದ ಮಹಾಯೋಗ ಜ್ಞಾನವನ್ನಾಗಲಿ ಮೃತ್ಯುಜಯವನ್ನಾಗಲಿ ಸುಲಭವಾಗಿ ಕೊಡಬಲ್ಲೆ. ಹರಿದಾಸತನ ಒಂದನ್ನು ಬಿಡು.'

ಶಿವನ ಮಾತು ಕೇಳಿದಾಗ ಗಂಧರ್ವರಾಜನಿಗೆ ಗಂಟಲು ಒಣಗಿತು. ಸರ್ವ ಸಂಪದ್ದಾಯಕನಾದ ಶಿವನ ಮುಂದೆ ದೀನನಾಗಿ ಹೇಳಿದ.

'ಶಿವನೆ, ಹರಿಯು ಕಣ್ಣರೆಪ್ಪೆ ಮುಚ್ಚಿದೊಡನೆ ಬ್ರಹ್ಮಪದವಿ ನಾಶ ಹೊಂದುತ್ತಿರು-ವಾಗ ಸ್ವಪ್ನದಂತೆ ಅಶಾಶ್ವತವಾದ ಆ ಪದವಿಯನ್ನು ಕೃಷ್ಣಭಕ್ತನೇಕೆ ಬಯಸುವ ? ಇನ್ನು ಇಂದ್ರಪದವಿ ದೇವಜನ್ಮ, ಯೋಗಸಿದ್ಧಿ, ಮೃತ್ಯುಜಯ ಮುಂತಾದುವೆಲ್ಲ ಭಕ್ತನಿಗೆ ಇಷ್ಟವೆನಿಸೀತೆ ?

ವಿಷ್ಣುಭಕ್ತರು ಸಾಲೋಕ್ಯ ಸಾಷ್ಟಿಕ ಸಾಮೀಪ್ಯ ಸಾಯುಜ್ಯ ಮೋಕ್ಷಗಳನ್ನೂ ಬಯಸಲಾರರು. ಸ್ವಪ್ನದಲ್ಲಾಗಲಿ ಜಾಗರದಲ್ಲಾಗಲಿ ಅವರು ದುರ್ಲಭವಾದ ದೃಢ ಭಕ್ತಿಯೊಂದನ್ನೇ ಬಯಸುವರು.

ಆದರಿಂದ ವೈಷ್ಣವ ಪುತ್ರನೆಂಬ ವರವನ್ನು ನೀಡು. ನೀನು ಬೇಡುವವರಿಗೆ ಕಲ್ಪವೃಕ್ಷ. ಆದರೂ ನೀನೀ ವರ ನೀಡದಿದ್ದರೆ ಪಾಪಿಯಾದ ನನ್ನ ತಲೆಯನ್ನೇ ಕತ್ತರಿಸಿ ಅಗ್ನಿಯಲ್ಲಿ ನಿನಗರ್ಪಿಸುತ್ತೇನೆ.'

ಭಕ್ತಾನುಗ್ರಹಕಾರಕನಾದ ಶಿವ ಹೇಳಿದ, 'ಹರಿಭಕ್ತ, ಹರಿದಾಸ, ಪರಮವೈಷ್ಣವ ಚಿರಾಯುಷಿ ಗುಣಶಾಲಿ ಸದಾ ಸ್ಥಿರಯೌವನ ಉಳ್ಳವ ಜ್ಞಾನಿ ಪರಮಸುಂದರ ಗುರುಭಕ್ತ ಮತ್ತು ಜಿತೇಂದ್ರಿಯನಾದ ಒಬ್ಬ ಮಗನನ್ನು ನೀ ಪಡೆಯುವಿ.' ಹೀಗೆ ಹೇಳಿ ಶಿವ ತನ್ನ ಲೋಕಕ್ಕೆ ತೆರಳಿದ.

ಗಂಧರ್ವರಾಜ ಸಂತುಷ್ಟನಾಗಿ ತನ್ನ ಮನೆಗೆ ಬಂದ. ಇಷ್ಟಾರ್ಥ ಸಿದ್ಧಿಸಿತೆಂದರೆ ಮಾನವರೆಲ್ಲ ಸಂತುಷ್ಟರೆ ಆಗುವರು ತಾನೆ ?

ಬಳಿಕ ಗಂಧರ್ವ ರಾಜನ ಪತ್ನಿಯಲ್ಲಿ ನಾರದ ಜನ್ಮವೆತ್ತಿದ. ಆಕೆ ಗಂಧಮಾದನದಲ್ಲಿ ಪುತ್ರನನ್ನು ಪ್ರಸವಿಸಿದಳು. ಪೂಜ್ಯಗುರು ವಸಿಷ್ಠರು ಮಗುವಿಗೆ ಶುಭದಿನದಲ್ಲಿ ನಾಮಕರಣ ಮಾಡಿದರು. ಉಪ-ಶ್ರೇಷ್ಠ, ಬರ್ಹಣ-ಪೂಜ್ಯ. ಪೂಜ್ಯರಲ್ಲೆಲ್ಲ ಶ್ರೇಷ್ಠನಾಗುವನೆಂದು 'ಉಪಬರ್ಹಣ' ಎಂಬ ನಾಮವಿಟ್ಟರು.

**ಇಲ್ಲಿಗೆ ಶ್ರೀ ಬ್ರಹ್ಮವೈವರ್ತ ಮಹಾಪುರಾಣದ ಬ್ರಹ್ಮಖಂಡದಲ್ಲಿ ಸೌತಿ ಶೌನಕ ಸಂವಾದದಲ್ಲಿ ನಾರದ ಜನ್ಮಕಥನವೆಂಬ ಹನ್ನೆರಡನೆ ಅಧ್ಯಾಯ ಮುಗಿಯಿತು.**

## ಮಾಲಾವತೀ ವಿಲಾಪ

**ಅಧ್ಯಾಯ-೧೩**

ಪುತ್ರೋತ್ಸವ ಸಂದರ್ಭದಲ್ಲಿ ಗಂಧರ್ವರಾಜ ಬ್ರಾಹ್ಮಣರಿಗೆ ಸಂತೋಷದಿಂದ ನಾನಾಬಗೆಯ ರತ್ನಗಳನ್ನೂ ಧನವನ್ನೂ ಕೊಟ್ಟ. ಉಪಬರ್ಹಣ ಮುಂದೆ ವಸಿಷ್ಠರಿಂದ ದುರ್ಲಭವಾದ ವಿಷ್ಣುಮಂತ್ರ ಉಪದೇಶ ಪಡೆದು ಘೋರ ತಪಸ್ಸು ಮಾಡಿದ.

ನವತರುಣನಾದ ಆತನನ್ನು ಒಮ್ಮೆ ಗಂಡಕೀ ತೀರದಲ್ಲಿ ಗಂಧರ್ವ ಸ್ತ್ರೀಯರು ನೋಡಿ ಮೋಹಗೊಂಡರು. ಅದರಿಂದ ತೀವ್ರ ತಪಸ್ಸು ಮಾಡಿ ಯೋಗದಿಂದ ಶರೀರತ್ಯಾಗ ಮಾಡಿ ಚಿತ್ರರಥನೆಂಬ ಗಂಧರ್ವರಾಜನ ಐವತ್ತು ಮಂದಿ ಕುಮಾರಿಯರಾಗಿ ಜನಿಸಿ ತಂದೆಯ ಅನುಮತಿಯಿಂದ ಉಪಬರ್ಹಣನ ಕೊರಳಿಗೆ ಹೂಮಾಲೆ ಹಾಕಿದರು. ಉಪಬರ್ಹಣ ಅವರನ್ನು ಮದುವೆಯಾಗಿ ದೇವ ಮಾನದ ಮೂರು ಲಕ್ಷವರ್ಷಗಳ ಕಾಲ ವಿಹರಿಸಿದ.

ಒಂದು ದಿನ ಬ್ರಹ್ಮಲೋಕಕ್ಕೆ ಹೋಗಿ ಅವನ ಆಸ್ಥಾನದಲ್ಲಿ ಹರಿನಾಮ ಕೀರ್ತನೆ ನಡೆಸಿದ. ಆಗ ರಂಭೆ ನಾಟ್ಯವಾಡುತ್ತಿದ್ದಳು. ಅವಳನ್ನು ನೋಡಿ ಮೋಹಪರವಶನಾದ. ಕೀರ್ತನೆ ನಿಂತಿತು. ದೇವತೆಗಳು ನೋಡಿ ಗಟ್ಟಿಯಾಗಿ ನಕ್ಕರು. ಬ್ರಹ್ಮನಿಗೆ ಕೋಪ ಬಂದಿತು. ಕೋಪದಿಂದ ಆತ ಶಪಿಸಿದ—

'ಉಪಬರ್ಹಣ, ಹೋಗು, ಗಂಧರ್ವ ಶರೀರ ತೊರೆದು ಶೂದ್ರಜನ್ಮ ಹೊಂದು. ಬಳಿಕ ವೈಷ್ಣವರ ಸಂಗದಿಂದಾಗಿ ನನ್ನ ಮಗನಾಗಿ ಜನಿಸು.

**ವಿನಾ ವಿಪತ್ತೇರ್ಮಹಿಮಾ ಪುಂಸಾಂ ನೈವ ಭವೇತ್ ಸುತ ।**
**ಸುಖಂ ದುಃಖಂ ಚ ಸರ್ವೇಷಾಂ ಕ್ರಮೇಣ ಪ್ರಭವೇದಿತಿ ॥**

ವಿಪತ್ತು ಬಾರದೆ ಸಂಪತ್ತು ಯಾರಿಗೂ ಬರಲಾರದು. ಏಕೆಂದರೆ ಸುಖ ದುಃಖಗಳು ಎಲ್ಲರಿಗೂ ಕ್ರಮವಾಗಿಯೆ ಬರುತ್ತವೆ.'

ಬ್ರಹ್ಮಶಾಪಕ್ಕೊಳಗಾದ ಉಪಬರ್ಹಣ ಮೂಲಾಧಾರ ಸ್ವಾಧಿಷ್ಠಾನ ಮಣಿಪೂರ ಅನಾಹತ ವಿಶುದ್ಧ ಆಜ್ಞಾ ಎಂಬ ಷಟ್‌ಚಕ್ರಗಳನ್ನು ಭೇದಿಸಿ ಇಡಾ, ಸುಷುಮ್ನಾ, ಮೇಧಾ, ಪಿಂಗಲಾ, ಪ್ರಾಣಹಾರಿಣಿ, ಸರ್ವಜ್ಞಾನಪ್ರದಾ, ಮನಃಸಂಯಮಿನಿ, ವಿಶುದ್ಧಾ, ನಿರುದ್ಧಾ, ವಾಯುಸಂಚಾರಿಣಿ, ತೇಜಃಶುಷ್ಕಕರೀ, ಬಲಪುಷ್ಟಿಕರೀ, ಬುದ್ಧಿ-ಸಂಚಾರಿಣೀ, ಜ್ಞಾನಜೃಂಭಣಕಾರಿಣಿ, ಸರ್ವಪ್ರಾಣಹರಾ, ಪುನರ್ಜೀವನಕಾರಣೀ ಎಂಬ ಹದಿನಾರು ನಾಡಿಗಳನ್ನೂ ಭೇದಿಸಿ ಯೋಗಬಲದಿಂದ ಆತ್ಮವನ್ನು ಮನಸ್ಸಿನೊಂದಿಗೆ ಬ್ರಹ್ಮರಂಧ್ರಕ್ಕೆ ತಂದು ಮುಹೂರ್ತಕಾಲ ಮನಸ್ಸನ್ನು ಪರಮಾತ್ಮ-ನಲ್ಲಿ ನೆಟ್ಟನು. ಪೂರ್ವಜನ್ಮ ಸ್ಮರಣೆ ಇದ್ದುದರಿಂದ ಆತ ಉತ್ತಮ ಯೋಗಿಯೆ ಆಗಿದ್ದು ಯೋಗಬಲದಿಂದ ಪರಬ್ರಹ್ಮನನ್ನು ಕಂಡ. ಮೂರು ತಂತಿಗಳ ವೀಣೆಯನ್ನು ಎಡಹೆಗಲಲ್ಲಿ, ಶುದ್ಧಸ್ಫಟಿಕ ಮಾಲೆಯನ್ನು ಬಲಗೈಯಲ್ಲಿ ಧರಿಸಿ ವೇದವೇದ್ಯ ಪರಾತ್ಪರ ಪರಬ್ರಹ್ಮ ನಾರಾಯಣನ ಕೃಷ್ಣ ಎಂಬ ಎರಡು ತಾರಕ ಬೀಜಾಕ್ಷರಗಳನ್ನು ಜಪಿಸುತ್ತ ಪೂರ್ವದಿಕ್ಕಿಗೆ ತಲೆಯನ್ನೂ ಪಶ್ಚಿಮಕ್ಕೆ ಕಾಲುಗಳನ್ನೂ ಇರಿಸಿ ದರ್ಭಶಯನನಾಗಿ ಶರೀರ ತ್ಯಾಗ ಮಾಡಿದ. ಅದನ್ನು ನೋಡಿ ಸಹಿಸಲಾರದೆ ಗಂಧರ್ವ ರಾಜನೂ ಪತ್ನೀ ಸಮೇತನಾಗಿ ಕೃಷ್ಣಧ್ಯಾನ ಮಾಡುತ್ತ ಯೋಗಬಲದಿಂದ ಶರೀರತ್ಯಾಗ ಮಾಡಿದ. ಪತ್ನಿಯರೂ ಬಾಂಧವರೂ ವಿಷ್ಣುಮಾಯೆಯಿಂದ ಮೋಹಿತರಾಗಿ ಶೋಕಾರ್ತರಾಗಿ ಬಹಳ ಅತ್ತರು, ವಿಲಾಪ ಮಾಡಿದರು.

ಐವತ್ತು ಮಂದಿ ಪತ್ನಿಯರಲ್ಲಿ ಮುಖ್ಯಳು ಪರಮಪ್ರಿಯಳು ಪಟ್ಟಮಹಿಷಿ ಮಾಲಾವತಿ. ಅವಳು ಪತಿಯ ಶರೀರವನ್ನು ತಬ್ಬಿಕೊಂಡು ಶೋಕಾರ್ತಳಾಗಿ ಅಳುತ್ತ ನುಡಿದಳು— ಹೇ ನಾಥ ರತಿಕ್ರೀಡಾನಿಪುಣ, ರಸಿಕಚಕ್ರವರ್ತಿ, ನನಗೆ ದರ್ಶನ ಕೊಡು. ನಾನು ಶೋಕ ಸಾಗರದಲ್ಲಿ ಮುಳುಗಿದ್ದೇನೆ. ಅಂದು ನೀನೂ ನಾನೂ ಮಲಯಾಚಲದ ಬಳಿ ಪುಷ್ಪಭದ್ರಾ ನದೀತೀರದ ಮನೋಹರ ಪುಷ್ಪೋದ್ಯಾನದಲ್ಲಿ ಚಂದನವನದಲ್ಲಿ ಚಂದನ ಪುಷ್ಪತಲದಲ್ಲಿ ಚಂದನ ಪರಿಮಳ ಹೊತ್ತ ಗಾಳಿಯನ್ನು ಸೇವಿಸುತ್ತ ಏಕಾಂತದಲ್ಲಿ ಮಾಡಿದ ವಿಹಾರ, ಗಂಧಮಾದನದ ಬಳಿ ರಮ್ಯವಾದ ಮಾಲತೀ ತೀರದಲ್ಲಿ ಕೋಗಿಲೆಯ ದನಿಯಾಲಿಸುತ್ತ ಮಾಡಿದ ವಿಹಾರ, ಶ್ರೀನಿವಾಸ ವಾಸಮಾಡಿದ ಶ್ರೀಶೈಲದ ದಿವ್ಯವನದಲ್ಲಿ ಶ್ರೀದೇವಿಯ ಪಾದಕಮಲ ಸ್ಪರ್ಶದಿಂದ ಪುನೀತವಾದ ಚೆಲುವಾದ ನೆಲದಲ್ಲಿ ಮಾಡಿದ ವಿಹಾರ- ಇಹೆಲ್ಲ ನೆನಪಿಗೆ ಬಂದು ನನ್ನ ಮನಸ್ಸನ್ನು ನೋಯಿಸುತ್ತದೆ. ಅಂದು ನೀನು ನನ್ನ ಮೇಲೆ ಮಾತುಗಳ ಅಮೃತ ಸೇಚನೆ ಮಾಡುತ್ತಿದ್ದುದು ನೆನೆದಷ್ಟೂ ಮನಸ್ಸಿಗೆ ದುಃಖದಾಯಕವಾಗುತ್ತದೆ.

**ಸಾಧುನಾ ಸಹ ಸಂಸರ್ಗೋ ವೈಕುಂಠಾದಪಿ ದುರ್ಲಭಃ ।**
**ಅಹೋತತೋಽತಿ ವಿಚ್ಛೇದೋ ಮರಣಾದಪಿ ದುಸ್ತರಃ ॥**

ಸಜ್ಜನರ ಸಂಗ ವೈಕುಂಠ ವಾಸಕ್ಕಿಂತಲೂ ಹೆಚ್ಚು ದುರ್ಲಭ. ಆದರೆ ಅವರ ವಿಯೋಗ ಮರಣ ಸಂಕಟಕ್ಕಿಂತಲೂ ಹೆಚ್ಚು ಅಸಹನೀಯವೆನಿಸುತ್ತದೆ.

ಸಜ್ಜನವಿಯೋಗಕ್ಕಿಂತಲೂ ಬಂಧುವಿಯೋಗ ಹೆಚ್ಚು ಸಂಕಟದಾಯಕ. ಬಂಧು-ವಿಯೋಗಕ್ಕಿಂತ ಪುತ್ರವಿಯೋಗ ಹೆಚ್ಚು ದುಃಖಕರ. ಇವೆಲ್ಲಕ್ಕಿಂತ ಸತಿಗೆ ಪತಿ-ವಿಯೋಗ ಹೆಚ್ಚು ಅಸಹನೀಯ. ಅದಕ್ಕಿಂತ ಹೆಚ್ಚಿನ ಸಂಕಟ ಬೇರೆ ಇಲ್ಲ.

**ಶಯನೇ ಭೋಜನೇ ಸ್ನಾನೇ ಸ್ವಪ್ನೇ ಜಾಗರಣೇಽಪಿ ಚ ।**
**ಸ್ವಾಮೀ ವಿಚ್ಛೇದ ದುಃಖಂ ಚ ನೂತನಂ ಚ ದಿನೇ ದಿನೇ ॥**

ಶಯನ ಭೋಜನ ಸ್ನಾನ ನಿದ್ದೆ ಜಾಗರ ಎಲ್ಲ ಅವಸ್ಥೆಗಳಲ್ಲಿಯೂ ಪತಿ ವಿರಹದ ದುಃಖ ದಿನದಿಂದ ದಿನಕ್ಕೆ ಹೊಸ ಹೊಸತಾಗಿ ಅನುಭವಕ್ಕೆ ಬರುವುದು.

ಎಲ್ಲ ಬಂಧು ಶೋಕವನ್ನೂ ಪತಿ ಮರೆಸಬಲ್ಲ. ಪತಿಶೋಕವನ್ನು ಮರೆಸುವಂಥ ಬಂಧು ಒಬ್ಬನೂ ಇಲ್ಲ. ಅದರಿಂದ ಸತ್ಕುಲದಿಂದ ಬಂದ ಹೆಣ್ಣಿಗೆ ಪತಿಗಿಂತ ಹೆಚ್ಚಿನ ಬಂಧು ಇಲ್ಲ ಎಂದು ಬ್ರಹ್ಮನ ವಚನವಿದೆ. ದಿಕ್ಪಾಲಕರುಗಳಿರ, ಧರ್ಮದೇವತೆಯೆ, ಪ್ರಜಾಪತಿಯೆ, ಶಿವನೆ, ಹರಿಯೆ! ನನಗೆ ಪತಿಭಿಕ್ಷೆ ನೀಡಿ.'

ಹೀಗೆ ಹೇಳಿ ಮಾಲಾವತಿ ವಿರಹಶೋಕದಿಂದ ಮೂರ್ಛಿತಳಾದಳು. ಪತಿಯ ಶವವನ್ನು ತಬ್ಬಿಕೊಂಡು ಒಂದು ಹಗಲು ರಾತ್ರಿ ಪೂರ್ತಿಯಾಗಿ ಮೂರ್ಛಿತಳಾಗೇ ಇದ್ದಳು. ಮರುದಿನ ಬೆಳಿಗ್ಗೆ ಮೂರ್ಛೆ ತಿಳಿದೆದ್ದು ಪುನಃ ಹರಿಯನ್ನು ಕುರಿತು ಹೇಳಿದಳು—

'ಹೇ ಕೃಷ್ಣ, ಜಗನ್ನಾಥ, ನೀನು ಜಗತ್ತಿಗೇ ನಾಥ. ನನಗೆ ನಾಥನಲ್ಲವೆ ? ಜಗತ್ತನ್ನೆ ಪಾಲಿಸುವವ ನನ್ನನ್ನು ಪಾಲಿಸಲಾರೆಯ ? ಈತ ಪತಿ, ನಾನು ಸತಿ ಎಂಬುದು ನಿನ್ನ ಮಾಯೆಯಿಂದಾದುದು. ನೀನೆ ಎಲ್ಲಕ್ಕೂ ಕಾರಣ.

ನನ್ನ ಪೂರ್ವಕರ್ಮದಿಂದ ಗಂಧರ್ವ ನನಗೆ ಪತಿಯಾದ. ಅವನ ಪೂರ್ವ-ಕರ್ಮದಿಂದ ನಾನು ಅವನಿಗೆ ಸತಿಯಾದೆ. ಈಗ ಕರ್ಮಭೋಗ ತೀರಿದ ಬಳಿಕ ಅವನೆಲ್ಲೋ! ನಾನೆಲ್ಲೋ! ಯಾರು ಯಾರಿಗೆ ಪತಿ, ಸತಿ ಅಥವಾ ಪುತ್ರ ? ಅವರವರ ಕರ್ಮಾನುಸಾರ ಬ್ರಹ್ಮ ಅವರನ್ನು ಒಂದೆಡೆ ಸೇರಿಸುತ್ತಾನೆ, ಅಗಲಿಸುತ್ತಾನೆ. ಸೇರಿದಾಗ ಪರಮಾನಂದ, ಅಗಲಿದಾಗ ಪ್ರಾಣಸಂಕಟ. ಇದೇ ಅಜ್ಞಾನಿಯ ಪಾಡು. ಆತ್ಮಾ-ರಾಮನಾದ ಯೋಗಿಗೆ ಅದೊಂದೂ ಇಲ್ಲ.

**ನಶ್ವರೋ ವಿಷಯಃ ಸತ್ಯಂ ಭುವಿ ಭೋಗಶ್ಚ ಬಾಂಧವಃ ।**
**ಸ್ವಯಂ ತ್ಯಕ್ತಃ ಸುಖಾಯೈವ ದುಃಖಾಯ ತ್ಯಾಜಿತಃ ಪರೈಃ ॥**

ವಿಷಯಭೋಗ ಬಂಧುಬಾಂಧವರ ಸುಖವೆಲ್ಲವೂ ನಶ್ವರವೆ. ಅದನ್ನು ನಾವಾಗಿ ಬಿಟ್ಟರೆ ಪರಮಸುಖ. ಶತ್ರುಗಳಿಂದಾಗಿ ಬಿಡಬೇಕಾಗಿ ಬಂದರೆ ಮಾತ್ರ ಬಹಳ ದುಃಖ ಆದ್ದರಿಂದ ಸಜ್ಜನರು ಸಂಪತ್ತನ್ನು ತಾವಾಗಿ ತ್ಯಜಿಸಿ ಕೃಷ್ಣನ ಪಾದಕಮಲವನ್ನು ಸದಾ ಧ್ಯಾನಿಸುತ್ತಾರೆ.

ಎಲ್ಲಕಡೆ ಪುರುಷರೆ ಜ್ಞಾನ ಸಂಪಾದಿಸುವುದು ಕಂಡುಬರುತ್ತದೆ. ಸ್ತ್ರೀಯೊಬ್ಬಳು ಜ್ಞಾನಸಂಪಾದಿಸುವುದು ಎಲ್ಲಿ ಕಂಡಿದೆ ? ಆದ್ದರಿಂದ ನಾನು ಮೂಢಳು. ನನ್ನ ಇಷ್ಟಾರ್ಥ ಸಲಿಸು. ನನಗೆ ದೇವ ಪದವಿಯಲ್ಲಾಗಲಿ ಇಂದ್ರ ಪದವಿಯಲ್ಲಾಗಲಿ, ಏಕೆ, ಮೋಕ್ಷ ಪದವಿಯಲ್ಲಾಗಲಿ ಅಪೇಕ್ಷೆ ಇಲ್ಲ. ನನಗೆ ನನ್ನ ಪತಿಯನ್ನು ನೀಡು. ಅವನೆ ನನಗೆ ಧರ್ಮ ಅರ್ಥ ಕಾಮ ಮೋಕ್ಷವೆಂಬ ಸಕಲ ಪುರುಷಾರ್ಥಗಳನ್ನು ನೀಡುವವ.

ಲೋಕದಲ್ಲಿ ಯಾವ ಸ್ತ್ರೀಗೂ ಇಂಥ ಪತಿಯನ್ನು ಈವರೆಗೆ ಬ್ರಹ್ಮ ಕೊಟ್ಟಿಲ್ಲ. ಅವನಿಗೆ ಎಲ್ಲ ಸದ್ಗುಣಗಳನ್ನೂ ಸೌಂದರ್ಯವನ್ನೂ ಶೀಲವನ್ನೂ, ಏಕೆ, ಅಮರತ್ವ ಒಂದನ್ನು ಬಿಟ್ಟು ಬೇರೆಲ್ಲವನ್ನೂ ಬ್ರಹ್ಮ ಕೊಟ್ಟಿದ್ದಾನೆ. ರೂಪ ಗುಣ ತೇಜಸ್ಸು ಪರಾಕ್ರಮ ಜ್ಞಾನ ಶಾಂತಿ ಸಂತೋಷ ಇವೆಲ್ಲವುಗಳಲ್ಲಿ ನನ್ನ ಪತಿ ಹರಿಗೆ ಸಮಾನ. ಹರಿಯ ಭಕ್ತ, ಗಾಂಭೀರ್ಯದಲ್ಲಿ ಸಾಗರಕ್ಕೆ, ತೇಜಸ್ಸಿನಲ್ಲಿ ಸೂರ್ಯನಿಗೆ, ಪರಿಶುದ್ಧತೆಯಲ್ಲಿ ಅಗ್ನಿಗೆ, ಕಣ್ಣಿಗೆ ತಂಪು ನೀಡುವ ಕಾಂತಿಯಲ್ಲಿ ಚಂದ್ರನಿಗೆ, ಸೌಂದರ್ಯದಲ್ಲಿ ಮನ್ಮಥನಿಗೆ, ಬುದ್ಧಿ ವೈಭವದಲ್ಲಿ ಬೃಹಸ್ಪತಿಗೆ, ಕಾವ್ಯ ರಚನೆಯಲ್ಲಿ ಶುಕ್ರನಿಗೆ, ಸರ್ವಶಾಸ್ತ್ರಜ್ಞಾನದಲ್ಲಿ ಸರಸ್ವತಿಗೆ, ಪ್ರತಿಭೆಯಲ್ಲಿ ಭೃಗುವಿಗೆ, ಧನಸಂಪತ್ತಿನಲ್ಲಿ ಕುಬೇರನಿಗೆ, ದಾನ ಮಾಡುವುದರಲ್ಲಿ ಮನುವಿಗೆ, ಧರ್ಮಾಚರಣೆಯಲ್ಲಿ ಧರ್ಮನಿಗೆ, ಸತ್ಯದಲ್ಲಿ ಸತ್ಯವ್ರತನಿಗೆ, ತಪಸ್ಸಿನಲ್ಲಿ ಕುಮಾರಸ್ವಾಮಿಗೆ, ಸದಾಚಾರದಲ್ಲಿ ಬ್ರಹ್ಮನಿಗೆ ಐಶ್ವರ್ಯದಲ್ಲಿ ಇಂದ್ರನಿಗೆ, ಸಹನೆಯಲ್ಲಿ ಪೃಥಿವಿಗೆ ಸಮಾನ ನನ್ನ ಪತಿ. ಇಂಥ ಪತಿಯ ಪ್ರಾಣ ಹೋಯಿತು, ನನ್ನ ಪ್ರಾಣವೇಕೆ ಹೋಗುತ್ತಿಲ್ಲ ?

ದೇವತೆಗಳಿರ! ನೀವೆಲ್ಲ ಯಜ್ಞಗಳಲ್ಲಿ ಹವಿಸ್ಸನ್ನೂ ತುಪ್ಪವನ್ನೂ ಯಥೇಚ್ಛ ತಿನ್ನಲು ಮಾತ್ರ ಯೋಗ್ಯರು, ನೋಡಿ, ಇನ್ನೊಂದು ಕ್ಷಣದಲ್ಲಿ ಯಜ್ಞಭಾಗವೆ ನಿಮಗಿಲ್ಲದಂತೆ ಮಾಡುವೆನು. ನಾರಾಯಣ, ಜಗನ್ನಾಥ, ನನ್ನ ಪತಿಯನ್ನು ಬೇಗನೆ ಬದುಕಿಸಿಕೊಡು. ಇಲ್ಲದಿದ್ದರೆ ನಾ ನಿನ್ನ ಶಪಿಸುವೆ. ಬ್ರಹ್ಮ, ನಿನಗೀಗಾಗಲೆ ಮಗನ ಶಾಪದಿಂದ ಭೂಲೋಕದಲ್ಲಿ ಪೂಜೆ ಇಲ್ಲದಂತಾಗಿದೆ. ನಾನೀಗ ನಿನ್ನ ಪದವಿಯನ್ನೂ ನಿನಗಿಲ್ಲದಂತೆ ಮಾಡುವೆ. ಶಿವನೆ, ನಾನಿನ್ನ ಶಪಿಸಿ ನಿನಗೆ ಜ್ಞಾನಲೋಪವಾಗುವಂತೆ ಮಾಡುತ್ತೇನೆ. ಧರ್ಮನಿಗೆ ಧರ್ಮಲೋಪಗೊಳಿಸುತ್ತೇನೆ. ಯಮನಿಗೆ ಅವನ

ಅಧಿಕಾರವಿಲ್ಲದಂತೆ ಮಾಡುತ್ತೇನೆ. ನಿಷ್ಠುರರಾಗಿರುವ ಕಾಲ ಮೃತ್ಯುಕನ್ಯೆಯರನ್ನು ಶಪಿಸುತ್ತೇನೆ. ಎಲ್ಲರನ್ನೂ ಶಪಿಸುತ್ತೇನೆ. ಜರಾವ್ಯಾಧಿಗಳಿಬ್ಬರನ್ನು ಹೊರತು ಇನ್ನೆಲ್ಲರನ್ನೂ ಶಪಿಸುತ್ತೇನೆ. ಏಕೆಂದರೆ ಜರಾವ್ಯಾಧಿಗಳಿಂದಾಗಿ ನನ್ನ ಪತಿಗೆ ಮರಣ ಉಂಟಾಗಿಲ್ಲ.''

ಹೀಗೆ ಹೇಳಿ ಮಾಲಾವತಿ ಕೌಶಿಕೀ ತೀರದಲ್ಲಿ ಪತಿಯ ಶವವನ್ನಾಲಿಂಗಿಸಿ ದೇವತೆಗಳನ್ನು ಶಪಿಸಲು ಉದ್ಯುಕ್ತಳಾದಳು. ಆಗ ಬ್ರಹ್ಮನು ಎಲ್ಲ ದೇವತೆಗಳೊಂದಿಗೆ ಕ್ಷೀರಸಮುದ್ರ ತೀರದಲ್ಲಿ ವಿಷ್ಣುವನ್ನು ಶರಣು ಹೊಂದಿದ. ಅಲ್ಲಿ ಸ್ನಾನ ಮಾಡಿ ಪರಮಾತ್ಮನನ್ನು ಸ್ತುತಿಸಿ ಅರಿಕೆ ಮಾಡಿಕೊಂಡ—

ಉಪಬರ್ಹಣನ ಪತ್ನಿ ಮಾಲಾವತಿ ಪತಿಶೋಕದಿಂದ ನನ್ನನ್ನೂ ಎಲ್ಲದೇವತೆ-ಗಳನ್ನೂ ಶಪಿಸುತ್ತಿದ್ದಾಳೆ. ರಕ್ಷಿಸು, ರಕ್ಷಿಸು. ಸಾಧು ಸಂತರು ಮುನಿಗಳೆಲ್ಲರೂ ನಿದ್ದೆ ಜಾಗರಗಳಲ್ಲಿ ಎಲ್ಲ ಸಂದರ್ಭಗಳಲ್ಲಿ ನಿನ್ನನ್ನೆ ಜಪಿಸುವರು. ಶರಣಾಗತರಾದ ದೀನರನ್ನು ಆರ್ತರನ್ನು ರಕ್ಷಿಸುವವ ನೀನು. ಹೇ ಹೃಷೀಕೇಶ, ನಮ್ಮನ್ನು ರಕ್ಷಿಸು. ನಾವು ನಿನ್ನನ್ನೇ ಶರಣು ಹೊಂದಿರುವೆವು. ಮಗನ ಶಾಪದಿಂದ ನನಗೆ ಈಗಾಗಲೆ ಪೂಜೆ ಇಲ್ಲವಾಗಿದೆ. ಇನ್ನು ನನ್ನ ಪದವಿಯನ್ನೂ ಇಲ್ಲದಂತೆ ಮಾಡುತ್ತಿದ್ದಾಳೆ, ಈ ಮಾಲಾವತಿ. ಇಡಿ ಬ್ರಹ್ಮಾಂಡದ ಮೇಲೆ ಸರ್ವಾಧಿಕಾರವನ್ನು ನೀನೆ ನನಗೆ ಕೊಟ್ಟಿರುವೆ. ಈ ನನ್ನ ಅಧಿಕಾರ ಸಂಪತ್ತು ಎಲ್ಲ ನನ್ನ ಕೈತಪ್ಪಿ ಹೋಗುತ್ತಿದೆ, ಪ್ರಭು.'

ಶಿವನೂ ಅರಿಕೆ ಮಾಡಿಕೊಂಡ— 'ನೂರು ಮನ್ವಂತರ ಕಾಲ ಪುಷ್ಕರ ಕ್ಷೇತ್ರದಲ್ಲಿ ಮಾಡಿದ ತಪಸ್ಸಿನ ಫಲವಾಗಿ ನನಗೆ ನೀನು ದುರ್ಲಭವಾದ ತತ್ವಜ್ಞಾನ ನೀಡಿರುವೆ.

ಐಶ್ವರ್ಯಂ ವಾ ಧನಂ ವಾಪಿ ವಿದ್ಯಾವಾ ವಿಕ್ರಮೋಽಥವಾ ।
ಜ್ಞಾನಸ್ಯ ಪರಮಾರ್ಥಸ್ಯ ಕಲಾಂ ನಾರ್ಹಂತಿ ಷೋಡಶೀಂ ॥

ಐಶ್ವರ್ಯವಾಗಲಿ ಧನವಾಗಲಿ ಪಾಂಡಿತ್ಯವಾಗಲಿ ಪರಾಕ್ರಮವಾಗಲಿ ದಿವ್ಯ ತತ್ವ-ಜ್ಞಾನದ ಹದಿನಾರನೆ ಒಂದು ಭಾಗಕ್ಕೂ ಸಮವಾಗಲಾರದು. ಯಾರಿಗೂ ತಿಳಿಯದಿದ್ದ ರಹಸ್ಯವಾದ ಅತ್ಯಂತ ದುರ್ಲಭವಾದ ಯಾವ ಜ್ಞಾನರತ್ನವನ್ನು ನೀನು ನನಗೆ ಕೊಟ್ಟಿರುವೆಯೋ ಅದೀಗ ಒಬ್ಬಳು ಸ್ತ್ರೀಯ ಶಾಪದಿಂದ ನಾಶವಾಗುತ್ತಿದೆ. ಪಾತಿವ್ರತ್ಯದ ತೇಜಸ್ಸೆ ಅಂಥದ್ದು. ಅದು ಎಲ್ಲ ತೇಜಸ್ಸಿಗಿಂತ ಹೆಚ್ಚಿನದು. ಆದರಿಂದ ನಾನು ಸುಟ್ಟು ಹೋಗುತ್ತಿದ್ದೇನೆ. ರಕ್ಷಿಸು.'

ಧರ್ಮ ಹೇಳಿದ, 'ಧರ್ಮವೆ ಎಲ್ಲ ರತ್ನಗಳಿಗಿಂತ ಶ್ರೇಷ್ಠ ರತ್ನ ಅದನ್ನು ನೀನೆ ನನಗೆ ಕೊಟ್ಟಿರುವೆ. ಅದಕ್ಕಾಗಿ ಏಳು ಮನ್ವಂತರಗಳ ಕಾಲ ನಾನು ತಪಸ್ಸು ಮಾಡಿದ್ದೇನೆ. ಒಬ್ಬ ಸ್ತ್ರೀಯ ಶಾಪದಿಂದ ಅದು ಈಗ ಕಳೆದು ಹೋಗುತ್ತಿದೆ, ಪ್ರಭು.'

ದೇವತೆಗಳು ಹೇಳಿದರು, 'ಯಜ್ಞಭಾಗಿಗಳಾಗಿ ತುಪ್ಪದಾಹುತಿ ಸ್ವೀಕರಿಸುವಂತೆ ನೀನೆ ನಮಗೆ ಅಧಿಕಾರ ಕೊಟ್ಟಿರುವಿ. ಅದು ಈಗ ಸ್ತ್ರೀ ಶಾಪದಿಂದ ತಪ್ಪಿಹೋಗುತ್ತಿದೆ, ಕೃಷ್ಣ.'

ಹೀಗೆ ಹೇಳಿ ಎಲ್ಲರೂ ಭಯವಿಹ್ವಲರಾಗಿ ಸುಮ್ಮನೆ ನಿಂತರು. ಆಗ ಒಂದು ಅಶರೀರವಾಣಿ ಕೇಳಿತು- 'ದೇವತೆಗಳೆ, ಮೊದಲಿಗೆ ನೀವೆಲ್ಲ ಅಲ್ಲಿಗೇ ಹೋಗಿರಿ. ಬಳಿಕ ನಾನು ಬಂದು ಮಾಲಾವತಿಯ ಕೋಪವನ್ನು ಶಾಂತಗೊಳಿಸಿ ನಿಮ್ಮನ್ನು ರಕ್ಷಿಸುವೆನು.'

ಎಲ್ಲರೂ ಕೌಶಿಕೀ ತೀರದಲ್ಲಿ ಮಾಲಾವತಿ ಇದ್ದೆಡೆಗೆ ಬಂದರು. ದಿವ್ಯ ರತ್ನಾಭರಣ ಭೂಷಿತಳಾಗಿ ಲಕ್ಷ್ಮಿಯಂತೆ ಬೆಳಗುತ್ತ ಅಗ್ನಿಯಂತೆ ಶುದ್ಧವಾದ ಬಟ್ಟೆಯುಟ್ಟು ಹಣೆಯಲ್ಲಿ ತಿಲಕವಿಟ್ಟು ಶರತ್ಕಾಲದ ಚಂದ್ರನಂತೆ ದಿಕ್ಕುಗಳನ್ನು ಬೆಳಗಿಸುತ್ತ ಚಿರಕಾಲದ ಪಾತಿವ್ರತ್ಯದಿಂದ ಬಂದ ತೇಜಸ್ಸಿನಿಂದ ಅಗ್ನಿಜ್ವಾಲೆಯಂತೆ ಹೊಳೆಯುತ್ತ ಪತಿಯ ಶವದ ಬಳಿ ಯೋಗಾಸನದಲ್ಲಿ ಕುಳಿತಿದ್ದಳು ಮಾಲಾವತಿ. ಬಲಗೈಯಲ್ಲಿ ಪತಿಯ ವೀಣೆ ಹಿಡಿದಿದ್ದಳು. ಎಡಗೈಯಲ್ಲಿ ಹೆಬ್ಬೆರಳು ತೋರುಬೆರಳುಗಳಿಂದ ಸ್ಫಟಿಕಾಕ್ಷಮಾಲೆ ಹಿಡಿದಿದ್ದಳು. ಸಂಪಿಗೆಯಂತೆ ಹೊಳೆವ ಮೈ, ತೊಂಡೆಹಣ್ಣಿನಂಥ ತುಟಿ, ರತ್ನಮಾಲೆಯಿಂದ ಶೋಭಿಸುವ ಕಂಠ, ಹದಿನಾರರ ನವಯುವತಿಯಂತೆ ಸ್ಥಿರ-ಯೌವನವತಿ. ಪತಿಯ ಶವವನ್ನು ಶುಭದೃಷ್ಟಿಯಿಂದ ದಿಟ್ಟಿಸುತ್ತಿದ್ದಳು. ಅವಳನ್ನು ನೋಡಿ ದೇವತೆಗಳು ವಿಸ್ಮಿತರಾದರು.

**ಇಲ್ಲಿಗೆ ಶ್ರೀ ಬ್ರಹ್ಮವೈವರ್ತ ಮಹಾಪುರಾಣದ ಬ್ರಹ್ಮಖಂಡದಲ್ಲಿ ಸೌತಿ ಶೌನಕ ಸಂವಾದದಲ್ಲಿ ಮಾಲಾವತೀ ವಿಲಾಪವೆಂಬ ಹದಿಮೂರನೆ ಅಧ್ಯಾಯ ಮುಗಿಯಿತು.**

## ಯಾವ ದೇವತೆಯ ಆರಾಧನೆಯಿಂದ ಯಾವ ಫಲ ?

ಅಧ್ಯಾಯ-೧೪

ದೇವತೆಗಳು ಬಂದೊಡನೆ ಮಾಲಾವತಿ ಅವರನ್ನು ನಮಿಸಿದಳು. ಅವರ ಮುಂದೆ ಪತಿಯ ಶವವಿಟ್ಟು ಅಳತೊಡಗಿದಳು. ಆಗ ಅಲ್ಲಿಗೆ ಒಬ್ಬ ಬ್ರಾಹ್ಮಣ ಬಾಲಕ ಬಂದ. ಆತ ಅತ್ಯಂತ ಮನೋಹರ ರೂಪದವ. ಬಿಳಿ ಬಟ್ಟೆ ಉಟ್ಟು ಉಜ್ವಲವಾದ ತಿಲಕಧರಿಸಿ ದಂಡ ಛತ್ರಗಳನ್ನು ಹಿಡಿದಿದ್ದಾನೆ. ಪುಸ್ತಕ ಹಿಡಿದಿದ್ದಾನೆ. ನಿಡಿದಾದ ತೋಳು, ಪ್ರಶಾಂತವಾದ ಹಸನ್ಮುಖಿ. ಮೈಯೆಲ್ಲ ಶ್ರೀಗಂಧ ಲೇಪಿಸಿ ಕೊಂಡಿದ್ದಾನೆ.

ಬ್ರಹ್ಮತೇಜಸ್ಸಿನಿಂದ ಬೆಳಗುತ್ತಿದ್ದಾನೆ. ವಿಷ್ಣುಮಾಯೆಯಿಂದ ಮೋಹಿತರಾದ ದೇವತೆ-ಗಳನ್ನು ಕಂಡು ಆತ ಹೇಳಿದ—

'ಇದೇನು ? ಬ್ರಹ್ಮಾದಿದೇವತೆಗಳೆಲ್ಲ ಇಲ್ಲಿಗೆ ದಯಮಾಡಿಸಿರುವಿರಿ. ಸ್ವಯಂ ಜಗತ್ತಿಗೆ ಸೃಷ್ಟಿಕರ್ತನಾದ ಬ್ರಹ್ಮನೆ ಬಂದಿದ್ದಾನೆ. ಬ್ರಹ್ಮಾಂಡಲಯಕಾರಕನಾದ ಶಿವನೂ ಬಂದಿದ್ದಾನೆ. ಮೂಲೋಕಕ್ಕೆ ಕರ್ಮಸಾಕ್ಷಿಯಾದ ಧರ್ಮನೂ ಬಂದಿದ್ದಾನೆ. ಸೂರ್ಯಚಂದ್ರ ಅಗ್ನಿ ಕಾಲ ಮೃತ್ಯುಕನ್ಯೆ ಯಮ ಮುಂತಾದವರೆಲ್ಲ ಬಂದಿದ್ದಾರೆ. ಆಶ್ಚರ್ಯ ಮಾಲಾವತಿ, ನಿನ್ನ ತೊಡೆಯಲ್ಲಿ ಅದಾರ ಶವ ?

ಮಾಲಾವತಿ ಬ್ರಹ್ಮಚಾರಿಗೆ ನಮಿಸಿ ಹೇಳಿದಳು 'ವಿಪ್ರರೂಪಿ ಜನಾರ್ದನನನ್ನು ಸಂತೋಷದಿಂದ ನಮಿಸುವೆನು. ಕೇವಲ ಹೂವಿನಿಂದಲೂ ನೀರಿಂದಲೂ ಹರಿ ತುಷ್ಟನಾಗುತ್ತಾನೆ. ಹರಿ ತುಷ್ಟನಾದರೆ ದೇವತೆಗಳೆಲ್ಲ ತುಷ್ಟರಾಗುತ್ತಾರೆ. ವಿಪ್ರನೆ, ನಾನು ಶೋಕಾರ್ತಳಾಗಿದ್ದೇನೆ. ನನ್ನ ಶೋಕಕ್ಕೆ ಕಾರಣವೇನೆಂದು ಹೇಳುತ್ತೇನೆ ಕೇಳು, ಕೇಳಿ ಕೃಪೆ ಮಾಡು. ನಾನು ಉಪಬರ್ಹಣ ಗಂಧರ್ವನ ಮಡದಿ, ಚಿತ್ರರಥನ ಕುಮಾರಿ, ಮಾಲಾವತಿ, ದೇವಮಾನದಲ್ಲಿ ಲಕ್ಷವರ್ಷಗಳಷ್ಟು ಕಾಲ ರಮ್ಯ ಸ್ಥಳಗಳಲ್ಲಿ ಈತನೊಡನೆ ಸ್ವಚ್ಛಂದ ವಿಹಾರ ಮಾಡಿದವಳು. ಪತಿವ್ರತೆಗೆ ಪತಿಯಲ್ಲಿ ಪ್ರೇಮ-ವೆಷ್ಟೆಂಬುದನ್ನು ಶಾಸ್ತ್ರಾನುಸಾರ ನೀನೂ ತಿಳಿಯಬಲ್ಲೆ. ಈಗ ಅಕಸ್ಮಾತ್ ಬ್ರಹ್ಮನ ಶಾಪದಿಂದ ನನ್ನ ಪತಿ ಪ್ರಾಣತ್ಯಾಗ ಮಾಡಿರುವನು. ಅದರಿಂದ ದೇವತೆಗಳೆದುರಲ್ಲಿ ಅಳುತ್ತ ಪತಿಯನ್ನು ತಿರುಗಿ ಬದುಕಿಸಿಕೊಡಿರೆಂದು ಕೇಳಿಕೊಳ್ಳುತ್ತಿದ್ದೇನೆ. ಆದರೆ ಇವರೆಲ್ಲರೂ ತಮ್ಮ ತಮ್ಮ ಸ್ವಾರ್ಥಸಾಧನೆಯಲ್ಲಿಯೆ ಮುಳುಗಿದ್ದಾರೆ. ಇನ್ನೊಬ್ಬರ ಗೊಡವೆಯೇ ಅವರಿಗಿಲ್ಲ.

ಸುಖದುಃಖ ಭಯ ಶೋಕ ಸಂತಾಪವೆಲ್ಲ ಕರ್ಮಫಲಗಳು. ಜನನ ಮರಣಗಳಿಂದ ಬಿಡುಗಡೆ ಹೊಂದಿ ಪರಮಾನಂದ ಅನುಭವಿಸುವುದೆ ನಿಜವಾದ ಐಶ್ವರ್ಯ. ದೇವತೆಗಳು ಕರ್ಮಫಲಗಳನ್ನು ಕೊಡುವುದು ಮಾತ್ರವಲ್ಲದೆ ಕರ್ಮ-ವೃಕ್ಷದ ಬೇರನ್ನೂ ತರಿದು ಮೋಕ್ಷ ನೀಡಬಲ್ಲರು. ಅದರಿಂದ ದೇವತೆಗಳಿಗಿಂತ ಹೆಚ್ಚಿನ ದಯಾಶಾಲಿಗಳು ಅಭೀಷ್ಟದಾಯಕರು ಇನ್ನಿಲ್ಲ. ನಾನು ಈ ದೇವತೆಗಳಲ್ಲಿಯೆ ಪತಿಭಿಕ್ಷೆ ಕೇಳುತ್ತಿದ್ದೇನೆ. ಅವರು ನೀಡಿದರೆ ಒಳ್ಳೆಯದೆ. ಇಲ್ಲದಿದ್ದರೆ ಅವರು ಸ್ತ್ರೀಹತ್ಯಾ ಪಾತಕಿಗಳಾಗುವರು. ಅವರಿಗೆ ನಾನು ಭೀಕರ ಶಾಪ ನೀಡುವೆನು. ಪತಿವ್ರತೆಯ ಶಾಪವನ್ನು ಯಾರಿಗೆ ತಾನೆ ಇದಿರಿಸಲಾದೀತು ?' ಹೀಗೆ ಹೇಳಿ ಮಾಲಾವತಿ ಸುಮ್ಮನಾದಳು.

ಬ್ರಾಹ್ಮಣ ಬಾಲಕ ಹೇಳಿದ— ಮಾಲತಿ, ಕರ್ಮಗಳಿಗೆ ಫಲದಾಯಕರು ದೇವತೆಗಳನ್ನೆವುದು ನಿಜವೆ. ಆದರೆ ಕೃಷಿಯ ಫಲ ತಕ್ಷಣವೆ ರೈತನಿಗೆ ಸಿಗಲಾರದು.

ಬೀಜ ಬಿತ್ತಿದರೆ ಮೊಳೆತು ಕಾಲ ಬಂದಾಗ ಫಲ ನೀಡುತ್ತದೆ. ಆ ಫಲವೂ ಕಾಲ ಬಂದಾಗಲೆ ಪಕ್ವವಾಗುವುದು. ಹಾಗೆಯೆ ಕರ್ಮದ ಫಲವೂ ಕಾಲ ಬಂದಾಗಲೆ ಸಿಗುತ್ತದೆ. ಆದರಿಂದ ಚಿರಕಾಲ ತಪಸ್ಸು ಮಾಡಬೇಕು.

ಫಲವತ್ತಾದ ಭೂಮಿಯಲ್ಲಿ ಉತ್ತಮ ಫಲ ಸಿಗುವಂತೆ ಬ್ರಾಹ್ಮಣ ಮುಖದಲ್ಲಿ ಭಕ್ತಿಯಿಂದ ಅನ್ನದ ಆಹುತಿ ನೀಡಿದರೆ ಉತ್ತಮ ಫಲ ಸಿಗುತ್ತದೆ. ಚಿರಕಾಲ ತಪಸ್ಸು ಮಾಡದೆ ಬಲ ಸೌಂದರ್ಯ ಐಶ್ವರ್ಯ ಧನಸಂಪತ್ತು ಪತಿ ಸತಿ ಸುತರು ಇವಾವುದೂ ಸಿಗಲಾರದು.

ಪ್ರತಿಜನ್ಮದಲ್ಲಿಯೂ ಸುಂದರಿಯಾದ ಗುಣಶೀಲ ಸಂಪನ್ನಳಾದ ವಿನೀತಳಾದ ಮಡದಿಯನ್ನೂ ಜೊತೆಗೆ ಸ್ಥಿರವಾದ ಸಂಪತ್ತು ಪುತ್ರ ಪೌತ್ರಾದಿ ಸಂತತಿ ಭೂಮಿ ಧನ ಸಂಪತ್ತೆಲ್ಲ ದೊರಕಲು ದೇವಿ ದುರ್ಗೆಯನ್ನಾರಾಧಿಸಬೇಕು. ಮಂಗಳ ಸ್ವರೂಪನಾದ ಮಂಗಲದಾಯಕನಾದ ಜ್ಞಾನಾನಂದಮಯನಾದ ಮೃತ್ಯುಂಜಯ ಶಿವನನ್ನು ಭಕ್ತಿಯಿಂದ ಸೇವಿಸಿದರೆ ಪ್ರತಿಜನ್ಮದಲ್ಲಿಯೂ ಪುರುಷನಿಗೆ ಒಳ್ಳೆಯ ಹೆಂಡತಿಯೂ ಸ್ತ್ರೀಗೆ ಒಳ್ಳೆಯ ಪತಿಯೂ ಲಭಿಸುವರು. ಜೊತೆಗೆ ವಿದ್ಯೆ ಜ್ಞಾನ ಕವಿತ್ವಶಕ್ತಿ ಪುತ್ರ ಪೌತ್ರಾದಿ ಸಂತತಿ ಉತ್ತಮ ಸಂಪತ್ತು ಬಲಧನ ಪರಾಕ್ರಮಗಳೆಲ್ಲ ದೊರಕುವುದು.

ಬ್ರಹ್ಮನನ್ನು ಸೇವಿಸಿದರೆ ಸಂತತಿ ಸಂಪತ್ತು ವಿದ್ಯೆ ಐಶ್ವರ್ಯ ಆನಂದಗಳು ಲಭಿಸುವುವು.

ಸೂರ್ಯನನ್ನು ಭಜಿಸಿದರೆ ವಿದ್ಯೆ ಸುಖ ಆರೋಗ್ಯ ಧನ ಪುತ್ರಪ್ರಾಪ್ತಿ.

ದೇವದೇವನಾದ ಗಣೇಶನ ಭಕ್ತ್ಯಾರಾಧನೆಗಳಿಂದ ನಿದ್ದೆಯಲ್ಲಾಗಲಿ ಎಚ್ಚರದಲ್ಲಾಗಲಿ ನಿರ್ವಿಘ್ನವಾಗಿ ಪರಮಾನಂದ ಲಭಿಸುವುದು. ಐಶ್ವರ್ಯ ಪುತ್ರ ಪೌತ್ರಾದಿ ಸಂತತಿ ಧನಸಂಪತ್ತು ಜ್ಞಾನ ವಿದ್ಯೆ ಕವಿತ್ವ ಶಕ್ತಿಗಳೂ ದೊರಕುವುವು.

ಸರ್ವೇಶ್ವರನಾದ ಲಕ್ಷ್ಮೀ ರಮಣನಾದ ಹರಿಯನ್ನು ಸಕಾಮನಾಗಿ ಭಜಿಸಿದರೆ ವಿಷಯ ಭೋಗವೂ ನಿಷ್ಕಾಮನಾಗಿ ಭಜಿಸಿದರೆ ಮುಕ್ತಿಯೂ ಲಭಿಸುವುದು. ಸುರೇಶ್ವರನಾದ ವಿಷ್ಣುವನ್ನು ಭಜಿಸಿಯೂ ಯಾರು ಮುಕ್ತಿಯನ್ನು ಬೇಡದೆ ಐಹಿಕವಾದ ಯಶಸ್ಸು ಕೀರ್ತಿ ತಪಸ್ಸು ಧರ್ಮಗಳನ್ನು ಬೇಡುವನೋ ಅವನು ಮೂಢ. ವಿಷ್ಣುಮಾಯೆಯಿಂದ ಮೋಹಿತನಾದ ಆ ಮೂಢನು ಮಾತ್ರ ಹಾಗೇ ಮಾಡುವನು.

ದೇವಿ ನಾರಾಯಣಿ ಒಲಿದರೆ ವಿಷ್ಣುಮಂತ್ರ ನೀಡುವಳು.

ಧರ್ಮನನ್ನು ಭಜಿಸಿದರೆ ಸರ್ವ ಧರ್ಮಾಚರಣ ಸಾಮರ್ಥ್ಯ ಲಭಿಸುವುದು. ಆದರಿಂದ ಇಹದಲ್ಲಿ ಸುಖಲಾಭ. ಪರದಲ್ಲಿ ವಿಷ್ಣುಲೋಕಪ್ರಾಪ್ತಿ.

ಯಾರು ಯಾವ ದೇವತೆಯನ್ನು ಭಜಿಸುವನೋ ಅವನು ಮೊದಲಿಗೆ ಆ ದೇವತಾಲೋಕವನ್ನು ಪಡೆದು ಕೊನೆಯಲ್ಲಿ ವಿಷ್ಣುಲೋಕ ಪಡೆಯುವನು.

ಆದರೆ ಬ್ರಹ್ಮ ವಿಷ್ಣು ಶಿವಾದಿ ವಂದ್ಯನಾದ ಪರಾತ್ಪರ ಅಕ್ಷರ ಬ್ರಹ್ಮ ರೂಪನಾದ ಸಾಕಾರನೂ ನಿರಾಕಾರನೂ ಜ್ಯೋತಿಃ ಸ್ವರೂಪನೂ ಸ್ವತಂತ್ರನೂ ಆದ ಸರ್ವೇಶ್ವರ-ನಾದ ಕೃಷ್ಣನನ್ನು ನಿಷ್ಕಾಮ ಭಕ್ತಿಯಿಂದ ಆರಾಧಿಸುವವನು ಜೀವನ್ಮುಕ್ತನಾಗುವನು. ಎಂದೂ ವಿಷಯ ಭೋಗಲಾಲಸೆಯಲ್ಲಿ ಸಿಲುಕುವುದಿಲ್ಲ. ಭಗವಂತನನ್ನು ಹೊರತು ಇನ್ನೇನೂ ಬಯಸುವುದಿಲ್ಲ. ಸಾರೂಪ್ಯ ಸಾಮೀಪ್ಯ ಸಾಲೋಕ್ಯ ಸಾಯುಜ್ಯವೆಂಬ ನಾಲ್ಕು ಬಗೆಯ ಮೋಕ್ಷವನ್ನೂ ಬಯಸುವುದಿಲ್ಲ. ಬ್ರಹ್ಮ ಪದವಿಯಾಗಲಿ ದೇವತ್ವ-ವಾಗಲಿ ಮೋಕ್ಷವಾಗಲಿ ಅವನಿಗೆ ತುಚ್ಛವಾಗಿ ಕಾಣುವುದು. ಐಶ್ವರ್ಯವೂ ಅವನಿಗೆ ಮಣ್ಣಿನ ಹೆಂಟೆಗೆ ಸಮಾನ, ನಶ್ವರ. ಇಂದ್ರಪದವಿ ಮನುಪದವಿ ಚಿರಂಜೀವಿತ್ವಗಳು ನೀರ ಮೇಲಿನ ಗುಳ್ಳೆಗಳಂತೆ, ಬಲು ತುಚ್ಛ. ನಿದ್ದೆಯಲ್ಲಾಗಲಿ ಎಚ್ಚರದಲ್ಲಾಗಲಿ ಅವನು ಬಯಸುವುದು ಭಗವಂತನ ಸೇವೆಯೊಂದನ್ನೆ. ಭಗವಂತನ ಪಾದಕಮಲದಲ್ಲಿ ದೃಢಭಕ್ತಿ ಹೊಂದಿ ತನ್ನ ಮಾತಾಮಹನ ಮತ್ತು ಮಾವನ ಕುಲಕೋಟಿಯನ್ನು ಉದ್ಧರಿಸುತ್ತಾನೆ. ಹೆಂಡತಿ ಮಕ್ಕಳನ್ನು ದಾಸ ದಾಸಿಯರನ್ನು ಅನಾಯಾಸವಾಗಿ ಉದ್ಧರಿಸುತ್ತಾನೆ. ಗೋಲೋಕ ಪಡೆಯುತ್ತಾನೆ.

ವಿಷಯಾಸೆ ಉಳ್ಳವನು ಕೃಷ್ಣನ ಸೇವೆ ಮಾಡುವವರೆಗೆ ಗರ್ಭವಾಸ ನರಕಗಳನ್ನು ಅನುಭವಿಸುತ್ತಾನೆ. ಗುರುಮುಖದಿಂದ ವಿಷ್ಣುಮಂತ್ರ ಪಡೆದನೆಂದರೆ ಮುಂದೆ ಯಮನೂ ಅವನನ್ನು ಸೆಳೆದೊಯ್ಯಲು ಭಯ ಪಡುತ್ತಾನೆ. ಬ್ರಹ್ಮಲೋಕ ಮಾರ್ಗ-ವಾಗಿ, ಆತ ವಿಷ್ಣುಲೋಕಕ್ಕೆ ಹೋಗುವಾಗ ಅವನನ್ನು ಬ್ರಹ್ಮನೂ ಮಧುಪರ್ಕಾದಿ-ಗಳಿಂದ ಸತ್ಕರಿಸುತ್ತಾನೆ. ತನ್ನ ಲೋಕವನ್ನು ದಾಟಿ ವಿಷ್ಣುಲೋಕಕ್ಕೆ ಹೋಗುತ್ತಿದ್ದಾನೆ ಎಂದು ಸಂತಸಪಡುತ್ತಾನೆ. ಮುಂದೆ ಗೋಲೋಕ ಸೇರಿದ ಬಳಿಕ ನೂರಾರು ಕೋಟಿ ಕಲ್ಪ ಕಳೆದರೂ ಹಿಂತಿರುಗಿ ಬರುವ ಪ್ರಸಂಗವಿಲ್ಲ. ಕೋಟಿ ಜನ್ಮದಲ್ಲಿ ಮಾಡಿದ ಪಾಪವೆಲ್ಲ ಗರುಡನಿಗೆ ಹೆದರಿದ ಹಾವುಗಳಂತೆ ಅವನಿಂದ ದೂರ ಓಡುವುವು.

**ಇಲ್ಲಿಗೆ ಶ್ರೀ ಬ್ರಹ್ಮವೈವರ್ತ ಮಹಾಪುರಾಣದ ಸೌತಿ ಶೌನಕ ಸಂವಾದದಲ್ಲಿ ದೇವತೋಪಾಸನೆಯ ಫಲನಿರೂಪಣವೆಂಬ ಹದಿನಾಲ್ಕನೆ ಅಧ್ಯಾಯ ಮುಗಿಯಿತು.**

## ಮಾಲಾವತೀ ಕಾಲಪುರುಷ ಸಂವಾದ

**ಅಧ್ಯಾಯ-೧೫**

'ಮಾಲಾವತಿ, ನಿನ್ನ ಪತಿ ಯಾವ ರೋಗದಿಂದ ಸತ್ತನೆಂದು ಹೇಳು. ನಾನು ವೈದ್ಯ. ಎಲ್ಲ ರೋಗಗಳಿಗೂ ಚಿಕಿತ್ಸೆಯನ್ನು ನಾನು ಬಲ್ಲೆ. ಸಾಯುತ್ತಿರುವವನನ್ನಾಗಲಿ ಸತ್ತವನನ್ನಾಗಲಿ ಒಂದು ವಾರದೊಳಗೆ ದಿವ್ಯಜ್ಞಾನದಿಂದ ಅನಾಯಾಸವಾಗಿ ಬದುಕಿಸಬಲ್ಲೆ. ಬೇಡನು ಮೃಗಗಳನ್ನು ಹಿಡಿದುತರುವಂತೆ ಮೃತ್ಯು ಯಮ ಕಾಲ ವ್ಯಾಧಿಗಳನ್ನೂ ಹಿಡಿದುತಂದು ನಿನ್ನ ಮುಂದೆ ನಿಲ್ಲಿಸಬಲ್ಲೆ. ವ್ಯಾಧಿ ಶರೀರದಲ್ಲಿ ಸಂಚರಿಸದಂತೆ ಮಾಡುವುದು ಹೇಗೆ, ವ್ಯಾಧಿ ಹುಟ್ಟಲು ಕಾರಣವೇನು, ವ್ಯಾಧಿ ಕಾರಣವಾದ ದೋಷಗಳು ಶರೀರದಲ್ಲಿ ಸಂಚರಿಸದಂತೆ ಮಾಡುವುದು ಹೇಗೆ ? ಎಂಬುದನ್ನೆಲ್ಲ ಶಾಸ್ತ್ರಾನುಸಾರ ಬಲ್ಲೆ. ಒಬ್ಬನು ದುಃಖಿತನಾಗಿ ಯೋಗಬಲದಿಂದ ದೇಹ, ತ್ಯಾಗ ಮಾಡುತ್ತಿದ್ದರೆ ಅವನಿಗೆ ಯೋಗ ಧರ್ಮಾನುಸಾರ ಜೀವನೋಪಾಯ ತಿಳಿಸಲೂ ಬಲ್ಲೆ.

ಬ್ರಾಹ್ಮಣ ಬಾಲಕನ ಮಾತು ಕೇಳಿ ಮಾಲಾವತಿ ನಸುನಕ್ಕು ಭಕ್ತಿಯಿಂದ ನುಡಿದಳು- 'ಆಶ್ಚರ್ಯ! ಬಾಲಕನ ಮುಖದಿಂದ ಎಂಥ ಮಾತನ್ನು ಕೇಳುತ್ತಿದ್ದೇನೆ! ವಯಸ್ಸಿನಲ್ಲಿ ಬಾಲಕನಾದರೂ ಹಿರಿಯ ಯೋಗವೇತ್ತರ ಜ್ಞಾನ ಭಂಡಾರ ಆ ಮಾತಿನಲ್ಲಿ ತುಂಬಿದೆ. ಬ್ರಹ್ಮಚಾರಿ, ನೀನು ನನ್ನ ಪತಿಯನ್ನು ಬದುಕಿಸಿಕೊಡುವೆನೆಂದು ಮಾತು ಕೊಟ್ಟಿರುವಿ. ಸತ್ಪುರುಷರು ಮಾತುಕೊಟ್ಟರೆ ಅದು ಸುಳ್ಳಾಗುವುದಿಲ್ಲ. ಇನ್ನೇನು ? ಪತಿ ಬದುಕಿ ಬಂದನೆಂದೇ ತಿಳಿಯುತ್ತೇನೆ.

ಬ್ರಹ್ಮಚಾರಿ, ನೀನು ನನ್ನ ಪತಿಯನ್ನು ಬದುಕಿಸು, ಆದರೆ ಮೊದಲಿಗೆ ನಾನು ನನ್ನ ಕೆಲವು ಸಂದೇಹಗಳನ್ನು ಪರಿಹರಿಸಿಕೊಳ್ಳಬೇಕಾಗಿದೆ. ಪತಿ ಬದುಕಿ ಬಂದಮೇಲೆ ಆ ಸಂದೇಹಗಳನ್ನು ಅವನೆದುರಿನಲ್ಲಿ, ಅವನೇನಾದರೂ ವಿರೋಧಿಸಿದರೆ, ದೇವತೆಗಳ ಮುಂದೆ ಇಡಲಾರೆ. ಏಕೆಂದರೆ ಪತಿ ಪತ್ನಿಯನ್ನು ರಕ್ಷಿಸುತ್ತಿದ್ದರೆ ಅವಳನ್ನು ಬಾಧಿಸಲು ಯಾರೂ ಶಕ್ತರಲ್ಲ. ಪತಿ ಶಿಕ್ಷಿಸುತ್ತಿದ್ದರೆ ಅದನ್ನು ತಪ್ಪಿಸಲೂ ಯಾರೂ ಸಮರ್ಥನಲ್ಲ. ದೇವತೆಗಳಲ್ಲಿಯೂ ಹೀಗೇ ನಿಯಮ.

ಪತಿಯ ಇಚ್ಛೆಗೆ ವಿರುದ್ಧವಾಗಿ ಸತಿಯನ್ನು ರಕ್ಷಿಸುವ ಅಥವಾ ಶಿಕ್ಷಿಸುವ ಶಕ್ತಿ ಇಂದ್ರನಿಗೂ ಇಲ್ಲ. ಬ್ರಹ್ಮರುದ್ರರಿಗೂ ಇಲ್ಲ. ಪತಿ ಪತ್ನಿಯರ ಸಂಬಂಧವೆ ಹೀಗೆ.

ಸತಿಗೆ ರಕ್ಷಕ, ಶಿಕ್ಷಕ, ಪೋಷಕ, ಪೂಜ್ಯ, ಗುರು ಎಲ್ಲ ಪತಿಯೆ. ಸತ್ಕುಲದಿಂದ ಬಂದಹೆಣ್ಣು ಪತಿಗೆ ಅನುವರ್ತಿಯಾಗಿರುತ್ತಾಳೆ. ಯಾರು ಸ್ವೇಚ್ಛಾನುಸಾರ ವರ್ತಿಸು-ವರೋ ಅವಳು ಸ್ವಭಾವದಲ್ಲಿಯೆ ಕೆಟ್ಟವಳು. ಅವಳು ಪರಪುರುಷರನ್ನು ಸೇರುವಳು. ಪತಿಯನ್ನು ನಿಂದಿಸುವಳು. ನಾನು ಪತಿಯಲ್ಲಿ ಸದಾ ಭಕ್ತಿ ಇರಿಸಿದವಳು. ನೀನು

ಹೇಳಿದಂತೆ ಕಾಲ ಯಮ ಮೃತ್ಯುಕನ್ಯೆಯರನ್ನು ಹಿಡಿದು ತರಬಲ್ಲೆಯಾದರೆ ಹಾಗೇ ಮಾಡು, ನನ್ನ ಮುಂದೆ ತಂದು ಅವರನ್ನು ನಿಲ್ಲಿಸು.'

ಬ್ರಾಹ್ಮಣ ಬಾಲಕ ಕಾಲ ಯಮ ಮೃತ್ಯುಕನ್ಯೆಯರನ್ನು ತಂದು ಸಭೆಯಲ್ಲಿ ಮಾಲಾವತಿಯ ಮುಂದೆ ನಿಲ್ಲಿಸಿದ. ಮಾಲಾವತಿ ಮೊದಲಿಗೆ ಮೃತ್ಯುಕನ್ಯೆಯನ್ನು ಕಂಡಳು. ಅವಳು ತನ್ನ ಪತಿಯಾದ ಕಾಲನ ಎಡಭಾಗದಲ್ಲಿ ಅರವತ್ತ ನಾಲ್ಕುಮಂದಿ ಮಕ್ಕಳ ಜೊತೆಗೆ ನಿಂತಿದ್ದಳು. ಕಪ್ಪುಬಣ್ಣದ ಮೈಯವಳು. ಕೆಂಪುಬಟ್ಟೆ ಉಟ್ಟಿದ್ದಳು. ಆರು ಕೈಗಳ ಭಯಂಕರ ರೂಪ. ಆದರೂ ಶಾಂತಳಾಗಿ ದಯಾಯುಕ್ತಳಾಗಿ ನಸುನಗುತ್ತ ನಿಂತಿದ್ದಳು.

ಬಳಿಕ ಮಾಲಾವತಿ ನಾರಾಯಣಾಂಶ ಸಂಭೂತನಾದ ಕಾಲನನ್ನು ಕಂಡಳು. ಆತ ಗ್ರೀಷ್ಮಕಾಲದ ಮಧ್ಯಾಹ್ನ ಸೂರ್ಯನಂಥ ಪ್ರಖರ ತೇಜಸ್ಸಿನವ. ಮಹಾ ಭಯಂಕರ ರೂಪದವ. ಆರು ಮುಖ. ಇಪ್ಪತ್ತನಾಲ್ಕು ಕಣ್ಣು, ಆರು ಕಾಲು, ಹದಿನಾರು ಕೈ. ಕಪ್ಪು ಬಣ್ಣದ ಮೈ. ಕೆಂಪುಬಟ್ಟೆ ಉಟ್ಟಿದ್ದಾನೆ. ವಿಕೃತಾಕಾರದವ.

ಸರ್ವಸಂಹಾರಕ, ದೇವದೇವ, ಸರ್ವೇಶ್ವರ. ಮಂದಹಾಸ ಸೂಸುವ ಪ್ರಸನ್ನ ಮುಖನಾಗಿ ಅಕ್ಷಮಾಲೆ ಹಿಡಿದು ತನ್ನ ಸ್ವರೂಪವೆ ಆದ ಪರಬ್ರಹ್ಮ ಕೃಷ್ಣಪರಮಾತ್ಮ-ನನ್ನು ಕುರಿತು ಜಪಿಸುತ್ತಿದ್ದ.

ಬಳಿಕ ಮಾಲಾವತಿ ಅರವತ್ತನಾಲ್ಕು ವ್ಯಾಧಿಗಳನ್ನು ಕಂಡಳು. ಅವರೆಲ್ಲ ವಯಸ್ಸಿನಿಂದ ಅತ್ಯಂತ ವೃದ್ಧರಾದರೂ ಮಾತೆಯ ಸ್ತನಪಾನ ಮಾಡುವ ಶಿಶು-ಗಳಾಗಿದ್ದರು.

ಬಳಿಕ ಮಾಲಾವತಿ ಯಮನನ್ನು ಕಂಡಳು. ಅವನಿಗೆ ದೊಡ್ಡ ಪಾದಗಳು. ಕರಿಬಣ್ಣದ ಮೈ. ಧರ್ಮಿಷ್ಠ, ಧರ್ಮಸ್ವರೂಪ, ಧರ್ಮಾಧರ್ಮ ವಿಚಾರವೆಲ್ಲ ಬಲ್ಲವ. ಪಾಪಿಗಳಿಗೆ ಶಿಕ್ಷೆ ಕೊಡುವವ. ಪರಬ್ರಹ್ಮ ಸನಾತನ ಭಗವಂತನನ್ನು ಕುರಿತು ಜಪಿಸುತ್ತಿದ್ದ.

ಎಲ್ಲರನ್ನೂ ಕಂಡು ನಿಃಶಂಕೆಯಿಂದ ಮೊದಲಿಗೆ ಯಮನನ್ನು ಪ್ರಶ್ನಿಸಿದಳು ಮಾಲಾವತಿ. ಅವಳ ಕಣ್ಣು ಮುಖಗಳು ಪ್ರಸನ್ನವಾಗಿದ್ದುವು.

'ಹೇ ಧರ್ಮರಾಜ, ನೀನು ಧರ್ಮಿಷ್ಠ, ಧರ್ಮಶಾಸ್ತ್ರ ವಿಶಾರದ. ಅಕಾಲದಲ್ಲಿ ನನ್ನ ಪತಿಯನ್ನೇಕೆ ಸೆಳೆದೊಯ್ದೆ ?'

ಯಮನೆಂದ, 'ಮಾಲಾವತಿ, ಯಾರೂ ಕಾಲ ಬಾರದೆ ಮರಣ ಹೊಂದುವುದಿಲ್ಲ. ಪರಮಾತ್ಮನ ಆಜ್ಞೆಯಿಲ್ಲದೆ ಜೀವಂತನಾದ ವ್ಯಕ್ತಿಯನ್ನು ನಾನೆಂದೂ ಸೆಳೆಯುವುದಿಲ್ಲ.

ನಾನು, ಕಾಲ, ಮೃತ್ಯುಕನ್ಯೆ, ವ್ಯಾಧಿಗಳು ಎಲ್ಲರೂ ಜೀವಿಗಳ ಗರ್ಭೋತ್ಪತ್ತಿಯಿಂದ ತೊಡಗಿ ಆಯುಸ್ಸನ್ನು ಗಣಿಸುತ್ತಲೆ ಇರುತ್ತೇವೆ. ನಮಗೆ ಹಾಗೆ ಪರಮಾತ್ಮನ ಆಜ್ಞೆ ಇದೆ. ವಿಚಾರಜ್ಞಳಾದ ಮೃತ್ಯುಕನ್ಯೆ ಯಾವ ವ್ಯಕ್ತಿಯನ್ನು ಸೇರುವಳೊ ಆ ವ್ಯಕ್ತಿಯನ್ನು ನಾನು ಸೆಳೆದೊಯ್ಯುತ್ತೇನೆ.'

ಮಾಲಾವತಿ ಮೃತ್ಯುಕನ್ಯೆಯನ್ನು ಕೇಳಿದಳು— 'ಹೇ ಮೃತ್ಯುಕನ್ಯೆ, ನೀನೂ ಒಬ್ಬಳು ಸ್ತ್ರೀಯೆ. ಪತಿಶೋಕವೆಂದರೇನೆಂಬುದನ್ನು ಅರಿಯಬಲ್ಲವಳು. ನೀನೆ ಹೇಳು. ನಾನಿನ್ನೂ ಬದುಕಿರುವಾಗ ನನ್ನ ಪತಿಯನ್ನು ನೀನು ಹೇಗೆ ಸೆಳೆದೊಯ್ದೆ ?'

ಮೃತ್ಯುಕನ್ಯೆ ಹೇಳಿದಳು, 'ಮಾಲಾವತಿ, ನಾನೇನು ಮಾಡಲಿ ? ಹಿಂದೆ ಬ್ರಹ್ಮನು ಈ ಕೆಲಸಕ್ಕಾಗಿಯೆ ನನ್ನನ್ನು ಹುಟ್ಟಿಸಿದ್ದಾನೆ. ಎಷ್ಟು ತಪಸ್ಸು ಮಾಡಿದರೂ ನಾನೀ ಕೆಲಸವನ್ನು ತಪ್ಪಿಸಿಕೊಳ್ಳಲಾರದಾದೆ. ಪತಿವ್ರತೆಯಲ್ಲಿ ಯಾರಾದರೂ ಒಬ್ಬಳು ತೇಜಸ್ವಿನಿಯಾದವಳು ನನ್ನನ್ನು ಭಸ್ಮ ಮಾಡಲು ಶಕ್ತಳಾದರೆ ಆಗ ಎಲ್ಲರ ಆಪತ್ತು ಪರಿಹಾರವಾದೀತು. ಆದರಿಂದ ನನ್ನ ಪತಿಗೂ ಮಕ್ಕಳಿಗೂ ಮುಂದೆ ಏನಾದರಾಗಲಿ ಎಂದು ಎಷ್ಟೋಬಾರಿ ಅಂದುಕೊಂಡಿದ್ದೇನೆ. ಆದರೂ ಕಾಲನ ಆಜ್ಞೆಯಂತೆ ನಾನೂ ನನ್ನ ಮಕ್ಕಳಾದ ವ್ಯಾಧಿಗಳೂ ಜೀವಿಗಳನ್ನು ಸೆಳೆದೊಯ್ಯಬೇಕಾಗಿದೆ. ಇದರಲ್ಲಿ ನನ್ನ ತಪ್ಪಿಲ್ಲ. ನನ್ನ ಮಕ್ಕಳಲ್ಲೂ ತಪ್ಪಿಲ್ಲ. ಬೇಕಾದರೆ ಕಾಲನನ್ನೆ ಕೇಳು. ಬಳಿಕ ನಿನಗೆ ಏನು ಯುಕ್ತವೆನಿಸುವುದೋ ಅದನ್ನು ಮಾಡು.'

ಮಾಲಾವತಿ ಕಾಲನನ್ನು ಪ್ರಶ್ನಿಸಿದಳು, 'ಹೇ ಭಗವನ್ ಕಾಲ, ನೀನು ನಾರಾಯಣನ ಅಂಶ. ಸನಾತನ, ಕರ್ಮರೂಪ ಮತ್ತು ಕರ್ಮಸಾಕ್ಷಿ. ಪರಾತ್ಪರನಾದ ನಿನಗೆ ನಮಸ್ಕಾರ. ನಾನು ಜೀವಿಸಿರುವಾಗಲೆ ನನ್ನ ಪತಿಯನ್ನೇಕೆ ಸೆಳೆದೊಯ್ದೆ ? ನೀನು ಎಲ್ಲರ ದುಃಖವನ್ನರಿಯಬಲ್ಲ ಸರ್ವಜ್ಞ, ದಯಾನಿಧಿ.'

ಕಾಲ ಹೇಳಿದ, 'ಮಾಲಾವತಿ, ನಿನ್ನ ಪತಿಯನ್ನು ಸೆಳೆದೊಯ್ಯಲು ನಾನಾರು ? ಯಮನಾರು ? ಮೃತ್ಯುಕನ್ಯೆ ಯಾರು ? ವ್ಯಾಧಿಗಳಾರು ? ನಾವೆಲ್ಲರೂ ಕೃಷ್ಣನ ಆಜ್ಞೆಯಂತೆ ನಡೆಯುವವರು. ಪ್ರಕೃತಿ ಬ್ರಹ್ಮ ವಿಷ್ಣು ಶಿವ ಮುಂತಾದ ದೇವತೆಗಳೂ ಋಷಿಗಳೂ ಮನುಗಳೂ ಮಾನವರೂ ಎಲ್ಲ ಜಂತುಗಳೂ ಆ ಕೃಷ್ಣನ ಆಜ್ಞಾನು-ವರ್ತಿಗಳೇ. ಅವನ ಪಾದಕಮಲಗಳನ್ನೆ ಜ್ಞಾನಿಗಳಾದ ಯೋಗಿಗಳು ಸದಾ ಧ್ಯಾನಿಸುತ್ತಾರೆ. ಅವನ ಪುಣ್ಯ ನಾಮಗಳನ್ನು ಜಪಿಸುತ್ತಾರೆ.

ಅವನ ಭಯದಿಂದ ಗಾಳಿ ಬೀಸುತ್ತದೆ. ಅವನ ಭಯದಿಂದ ಸೂರ್ಯ ಬೆಳಗುತ್ತಾನೆ. ಅವನಾಜ್ಞೆಯಂತೆ ಬ್ರಹ್ಮ ಸೃಷ್ಟಿ ಮಾಡುತ್ತಾನೆ. ವಿಷ್ಣು ಪಾಲನ ಮಾಡುತ್ತಾನೆ. ರುದ್ರ ಲಯ ಮಾಡುತ್ತಾನೆ. ಕರ್ಮಸಾಕ್ಷಿಯಾದ ಧರ್ಮನೂ

ಅವನಾಜ್ಞೆಯನ್ನು ಪಾಲಿಸುವವ. ರಾಶಿ ಚಕ್ರಗ್ರಹಗಳೆಲ್ಲ ಅವನಾಜ್ಞೆಯಂತೆ ಸಂಚರಿಸುತ್ತವೆ. ಅವನಾಜ್ಞೆಯಂತೆಯೆ ಮರಗಿಡಗಳು ಹೂಹಣ್ಣುಗಳನ್ನು ನೀಡುತ್ತವೆ. ಅವನಾಜ್ಞೆಯಿಂದಲೆ ಭೂಮಿ ನೀರನ್ನೂ ಸರ್ವಪದಾರ್ಥಗಳನ್ನೂ ಹೊತ್ತು ಎಲ್ಲ ಭಾರವನ್ನೂ ಸಹಿಸುತ್ತಾಳೆ. ನಿಶ್ಚಲಳಾಗಿ ನಿಂತಿರುತ್ತಾಳೆ. ಪ್ರಕೃತಿಯೂ ವಿಷ್ಣುಮಾಯೆಯಿಂದ ಮೋಹಿತಳಾಗಿ ಅವನ ಭಯದಿಂದಲೆ ಸಕಲ ಪ್ರಪಂಚ ಮೂಲಕಾರಣವೆನಿಸುತ್ತಾಳೆ. ಎಲ್ಲ ವಸ್ತುಗಳನ್ನರಿಯಬಲ್ಲ ಸಮರ್ಥರೂ ಕೃಷ್ಣನ ಮಹಿಮೆಗಳ ಕೊನೆಯರಿಯರು. ಪುರಾಣಗಳೆಲ್ಲ ಅವನ ಸ್ತೋತ್ರರೂಪವಾಗಿವೆ. ಬ್ರಹ್ಮ ವಿಷ್ಣು ಮಹೇಶ್ವರರೆಲ್ಲ ಅವನ ತೇಜಸ್ಸಿನ ಹದಿನಾರನೆ ಒಂದಂಶ. ಅವನು ಕಾಲನಿಗೆ ಕಾಲ, ಮೃತ್ಯುವಿಗೆ ಮೃತ್ಯು. ಅವನನ್ನೆ ಧ್ಯಾನಿಸು. ಅವನೆ ಸರ್ವಾಭೀಷ್ಟದಾಯಕ. ಅವನೆ ನಿನಗೆ ಪತಿಭಿಕ್ಷೆ ನೀಡಬಲ್ಲ.' ಹೀಗೆ ಹೇಳಿ ಕಾಲ ಸುಮ್ಮನಾದ.

ಬ್ರಾಹ್ಮಣ ಬಾಲಕ ಪುನಃ ಹೇಳತೊಡಗಿದ.

**ಇಲ್ಲಿಗೆ ಶ್ರೀ ಬ್ರಹ್ಮವೈವರ್ತ ಮಹಾಪುರಾಣದ ಸೌತಿ ಶೌನಕ ಸಂವಾದದಲ್ಲಿ ಮಾಲಾವತೀ ಕಾಲ ಪುರುಷಸಂವಾದವೆಂಬ ಹದಿನೈದನೆ ಅಧ್ಯಾಯ ಮುಗಿಯಿತು.**

## ಮಾಲಾವತಿ-ವಿಷ್ಣುಸಂವಾದದಲ್ಲಿ ಚಿಕಿತ್ಸಾಪ್ರಣಯನ

**ಅಧ್ಯಾಯ-೧೬**

'ಮಾಲಾವತಿ, ಕಾಲ ಯಮ ಮೃತ್ಯುಕನ್ಯೆ ವ್ಯಾಧಿಗಳು ಇವರೆಲ್ಲರನ್ನೂ ಕಂಡಿದ್ದಾಯಿತು. ಈಗ ಇನ್ನೇನು ಸಂದೇಹ ಉಳಿದಿದೆ, ಹೇಳು.

ಮಾಲಾವತಿ ಸಂತುಷ್ಟಳಾಗಿ ತನ್ನ ಮನಸ್ಸಿನಲ್ಲಿ ಹುದುಗಿದ್ದ ಜಿಜ್ಞಾಸೆಯನ್ನು ಆತನ ಮುಂದಿಟ್ಟಳು—

'ಬ್ರಹ್ಮಚಾರಿ, ವ್ಯಾಧಿ ಪ್ರಾಣಿಗಳ ಪ್ರಾಣಗಳನ್ನು ಹೀರುತ್ತದೆ ಎಂದೆಯಲ್ಲವೆ ? ಈಗ, ವ್ಯಾಧಿಗೆ ಕಾರಣವೇನು, ಅದು ಸಂಚರಿಸದಂತೆ ಮಾಡಲು ಉಪಾಯವೇನು, ಎಲ್ಲವನ್ನೂ ಹೇಳು. ಹಾಗೇ ನಾನು ಕೇಳಿದ್ದು ಕೇಳದಿದ್ದುದು, ನನಗೆ ತಿಳಿದುದು ತಿಳಿಯದಿದ್ದುದು ಎಲ್ಲವನ್ನೂ ಹೇಳು. ನೀನು ದೀನರಲ್ಲಿ ದಯೆ ಉಳ್ಳ ಗುರು.

ಮಾಲಾವತಿಯ ಮಾತು ಕೇಳಿ ವಿಪ್ರರೂಪಿ ಜನಾರ್ದನ ವೈದ್ಯ ಸಂಹಿತೆಯ ಬಗ್ಗೆ ಹೇಳತೊಡಗಿದ—

**ವಂದೇ ತಂ ಸರ್ವತತ್ವಜ್ಞಂ ಸರ್ವಕಾರಣಕಾರಣಂ ।**
**ವೇದ ವೇದಾಂಗ ಬೀಜಸ್ಯ ಬೀಜಂ ಶ್ರೀಕೃಷ್ಣಮೀಶ್ವರಂ ॥**

ಜಗನ್ನಾಥನಾದ ಶ್ರೀಕೃಷ್ಣ ಎಲ್ಲ ತತ್ವಗಳನ್ನೂ ಬಲ್ಲವ. ಎಲ್ಲ ಕಾರಣಗಳಿಗೂ ಕಾರಣ. ವೇದ ವೇದಾಂಗಗಳ ಮೂಲಪುರುಷರಿಗೂ ಮೂಲಪುರುಷ. ಅವನನ್ನು ನಮಿಸುವೆನು.

ಕೃಷ್ಣ ಮಂಗಳಕರವಾದ ಋಗ್ವೇದ ಯಜುರ್ವೇದ ಸಾಮವೇದ ಅಥರ್ವಣವೇದ ಎಂಬ ನಾಲ್ಕು ವೇದಗಳನ್ನು ಬ್ರಹ್ಮನಿಗೆ ಉಪದೇಶಿಸಿದ. ಬ್ರಹ್ಮ ಆ ನಾಲ್ಕು ವೇದ-ಗಳಿಂದ ಐದನೆ ವೇದವೆನಿಸಿದ ಆಯುರ್ವೇದವನ್ನು ರಚಿಸಿದ. ಅದನ್ನು ಸೂರ್ಯನಿಗೆ ಉಪದೇಶಿಸಿದ. ಸೂರ್ಯ ಅದರಿಂದ ಭಾಸ್ಕರ ಸಂಹಿತೆಯನ್ನು ರಚಿಸಿ ತನ್ನ ಶಿಷ್ಯರಿಗೆ ಉಪದೇಶಿಸಿದ. ಆ ಶಿಷ್ಯರು ಬೇರೆ ಬೇರೆ ಆಯುರ್ವೇದ ಸಂಹಿತೆಗಳನ್ನು ರಚಿಸಿದರು-

ಧನ್ವಂತರಿ.......................................... ಚಿಕಿತ್ಸಾ ತತ್ವವಿಜ್ಞಾನ
ದಿವೋದಾಸ.......................................... ಚಿಕಿತ್ಸಾ ದರ್ಪಣ
ಕಾಶಿರಾಜ.......................................... ಚಿಕಿತ್ಸಾ ಕೌಮುದಿ
ಅಶ್ವಿನೀಕುಮಾರ.................................... ಚಿಕಿತ್ಸಾ ಸಾರತಂತ್ರ
ಅಶ್ವಿನೀಕುಮಾರ.................................... ಚಿಕಿತ್ಸಾ ಭ್ರಮಘ್ನ
ನಕುಲ .............................................. ವೈದ್ಯಕ ಸರ್ವಸ್ವ
ಸಹದೇವ.................................. ವ್ಯಾಧಿ ಸಿಂಧು ವಿಮರ್ದನ
ಯಮ.................................................. ಜ್ಞಾನಾರ್ಣವ
ಚ್ಯವನ ................................................ ಜೀವದಾನ
ಜನಕ ........................................ ವೈದ್ಯ ಸಂದೇಹ ಭಂಜನ
ಬುಧ.................................................. ಸರ್ವಸಾರ
ಜಾಬಾಲ ............................................... ತಂತ್ರಸಾರ
ಜಾಜಲಿ........................................ ವೇದಾಂಗ ಸಾರತಂತ್ರ
ಪೈಲ ................................................. ವೈದ್ಯನಿದಾನ
ಕರಥ ................................................... ಸರ್ವಧರ
ಅಗಸ್ತ್ಯ........................................ ದ್ವೈಧನಿರ್ಣಯ ತಂತ್ರ

ಈ ಹದಿನಾರು ವೈದ್ಯಗ್ರಂಥಗಳ ವೈದ್ಯಶಾಸ್ತ್ರಕ್ಕೆ ಬೀಜರೂಪವಾಗಿವೆ. ರೋಗ-ನಾಶಕ್ಕೂ ಬಲವರ್ಧನೆಗೂ ಉಪಾಯಗಳನ್ನು ತಿಳಿಸುತ್ತವೆ. ಆಯುರ್ವೇದದ ಕ್ಷೀರ-ಸಮುದ್ರವನ್ನು ಈ ಹದಿನಾರು ಮಂದಿ ವೈದ್ಯರು ತಮ್ಮ ಜ್ಞಾನದ ಕಡಗೋಲಿಂದ ಮಥಿಸಿದಾಗ ತೇಲಿ ಬಂದ ಬೆಣ್ಣೆಯೆ ಈ ಗ್ರಂಥಗಳೆಂದು ಬಲ್ಲವರು ಹೇಳುತ್ತಾರೆ. ಈ

ಗ್ರಂಥಗಳನ್ನು ಕ್ರಮವಾಗಿ ಅಭ್ಯಾಸಮಾಡಿ ಅವುಗಳ ಮೂಲಕ ಭಾಸ್ಕರ ಸಂಹಿತೆಯನ್ನು ಅಧ್ಯಯನ ಮಾಡಿದರೆ ಆಯುರ್ವೇದದ ಮೂಲತತ್ವಗಳೆಲ್ಲ ತಿಳಿದುಬರುತ್ತವೆ.

**ವ್ಯಾಧೇಸ್ತತ್ವ ಪರಿಜ್ಞಾನಂ ವೇದನಾಯಾಶ್ಚ ನಿಗ್ರಹಃ ।**
**ಏತದ್ ವೈದ್ಯಸ್ಯ ವೈದ್ಯತ್ವಂ ನ ವೈದ್ಯಃ ಪ್ರಭುರಾಯುಷಃ ॥**

ರೋಗದ ಯಥಾರ್ಥ ಸ್ವರೂಪವನ್ನು ತಿಳಿದು ವೇದನೆಯನ್ನೂ ಪರಿಹರಿಸ-ಬಲ್ಲವನಾದರೆ ಸಾಕು. ಅದರಿಂದ ವೈದ್ಯ ವೈದ್ಯನೆನಿಸುತ್ತಾನೆ. ಹೊರತು ರೋಗಿಗೆ ಆಯುಷ್ಯವಿಲ್ಲದಿದ್ದರೆ ಕೊಡಲಾರ, ಇದ್ದರೆ ತೆಗೆಯಲಾರ. ಆಯುರ್ವೇದ ವಿದ್ಯೆ-ಯರಿತು ಚಿಕಿತ್ಸಾಕ್ರಮ ತಿಳಿದು ಧರ್ಮಿಷ್ಠನೂ ದಯಾಳುವೂ ಆದವನೆ ವೈದ್ಯ-ನೆನಿಸುತ್ತಾನೆ.

ಜ್ವರಗಳು ಸರ್ವರೋಗ ಜನಕರಾಗಿದ್ದು ಶಿವಭಕ್ತರಾದ ಯೋಗಿಗಳಾಗಿರುತ್ತಾರೆ. ಅವರದು ವಿಕೃತರೂಪ. ಮೂರು ತಲೆ ಮೂರು ಕಾಲು ಆರು ಕೈ ಒಂಬತ್ತು ಕಣ್ಣು-ಗಳುಳ್ಳವರು. ಮೈಗೆ ಭಸ್ಮ ಬಳಿದುಕೊಂಡಿರುತ್ತಾರೆ. ಕಾಲ ಯಮನಂತೆ ಭಯಂಕರರು, ನಿಷ್ಠುರಿಗಳು.

ಜ್ವರಗಳಿಗೆ ಮಂದಾಗ್ನಿ ಜನಕ. ಮಂದಾಗ್ನಿಗೆ ವಾತಪಿತ್ತಕಫಗಳು. ಅದರಿಂದ ಜ್ವರಗಳು ವಾತಜನ್ಯ ಪಿತ್ತಜನ್ಯ ಕಫಜನ್ಯ ತ್ರಿದೋಷಜನ್ಯಗಳೆಂದು ನಾಲ್ಕು ಬಗೆ. ಪಾಂಡು, ಕಾಮಾಲೆ, ಕುಷ್ಠ ಶೋಧ ಪ್ಲೀಹ ಶೂಲ ಜ್ವರ ಅತಿಸಾರ ಗ್ರಹಣಿ ಕಾಸ ವ್ರಣ ಹಲೀಮಕ ಮೂತ್ರಕೃಚ್ಛ್ರ ಗುಲ್ಮ ರಕ್ತಪಿತ್ತ ವಿಷರೋಗ ಮೂತ್ರವ್ಯಾಧಿ ಗೂನು ತೋದ ಗಲಗಂಡ ಮನೋರೋಗ ಸನ್ನಿಪಾತ ಅಜೀರ್ಣವ್ಯಾಧಿ ಇವಿಷ್ಟು ಪ್ರಧಾನ ವ್ಯಾಧಿಗಳು. ಇವುಗಳ ಭೇದ ಪ್ರಭೇದಗಳಿಂದ ಒಟ್ಟು ಅರವತ್ತನಾಲ್ಕು ರೋಗ-ಗಳಾಗುತ್ತದೆ. ಇವರೆಲ್ಲ ಮೃತ್ಯುಕನ್ಯೆಯ ಮಕ್ಕಳು.

ಜರೆಯೂ ಅವಳ ಮಗಳು. ತಮ್ಮಂದಿರೊಡನೆ ಭೂಲೋಕದಲ್ಲಿ ಸದಾ ಸಂಚರಿಸುವವಳು. ಜರಾರೋಗ ನಿವಾರಣೋಪಾಯ ತಿಳಿದು ಇಂದ್ರಿಯ ನಿಗ್ರಹ ಮಾಡಿಕೊಂಡಿರುವವರನ್ನು ಕಂಡರೆ ಇವರೆಲ್ಲರಿಗೂ ಭಯ. ಗರುಡನನ್ನು ಕಂಡ ಹಾವುಗಳಂತೆ ದೂರ ಓಡುವರು.

ಕಣ್ಣಿಗೆ ನೀರಿನ ಸೇಕ, ವ್ಯಾಯಾಮ, ಅಂಗಾಲಿಗೆ ಎಣ್ಣೆ ತಿಕ್ಕುವುದು ಕಿವಿಗಳಿಗೂ ನೆತ್ತಿಗೂ ಎಣ್ಣೆ ಹಾಕುವುದು ಇವೆಲ್ಲ ಜರಾವ್ಯಾಧಿ ನಾಶಕ. ವಸಂತದಲ್ಲಿ ಓಡಾಟವನ್ನೂ ಬೆಂಕಿ ಕಾಯಿಸುವುದನ್ನೂ ಕಡಿಮೆ ಮಾಡಬೇಕು. ಯೋಗ್ಯಕಾಲದಲ್ಲಿ ಯುವತಿಯ ಸಂಗ ಮಾಡಬೇಕು. ಸೆಕೆಗಾಲದಲ್ಲಿ ಬಾವಿನೀರಿನ ಸ್ನಾನ. ಮೈಗೆ ಚಂದನ ಲೇಪ, ಗಾಳಿಸೇವನೆ. ಮಳೆಗಾಲದಲ್ಲಿ ಬಿಸಿನೀರ ಸ್ನಾನ. ಮಳೆಯಲ್ಲಿ ನೆನೆಯದಿರುವುದು,

ಕಾಲಕ್ಕೆ ಮಿತವಾಗಿ ಉಣ್ಣುವುದು. ಶರತ್ಕಾಲದಲ್ಲಿ ಭೂಸಂಚಾರ ವರ್ಜನ, ಬಾವಿ-ನೀರಿನ ಸ್ನಾನ, ಮಿತಾಹಾರ. ಹೇಮಂತದಲ್ಲಿ ಬಾವಿ ನೀರಿನ ಸ್ನಾನ, ಆಗಾಗ ಬೆಂಕಿಕಾಯಿಸಿಕೊಳ್ಳುವುದು. ಆಗತಾನೆ ಪಾಕ ಮಾಡಿದ ಬೆಚ್ಚನೆ ಅನ್ನ ಉಣ್ಣುವುದು, ಶಿಶಿರದಲ್ಲಿ ಬಿಸಿನೀರಿನ ಸ್ನಾನ ಆಗಾಗ ಬೆಂಕಿ ಕಾಯಿಸಿಕೊಳ್ಳುವುದು, ಆಗತಾನೆ ಪಾಕಮಾಡಿದ ಬೆಚ್ಚನೆ ಅನ್ನ ಉಣ್ಣುವುದು -ಹೀಗೆ ಮಾಡುತ್ತಿದ್ದರೆ ಮುಪ್ಪು ಬರುವುದಿಲ್ಲ.

**ಸದ್ಯೋಮಾಂಸಂ ನವಾನ್ನಂ ಚ ಬಾಲಾಂ ಸ್ತ್ರೀಂ ಕ್ಷೀರಭೋಜನಂ ।**
**ಘೃತಂ ಚ ಸೇವತೇ ಯೋಽಹಿ ಜರಾ ತಂ ನೋಪಗಚ್ಛತಿ ॥**

ನವಮಾಂಸ, ನವಾನ್ನ, ನವತರುಣಿ, ಹಾಲು ತುಪ್ಪ ಸೇವನೆ ಮಾಡುವವನಿಗೆ ಮುಪ್ಪು ಬರುವುದಿಲ್ಲ. ಹಸಿವಾದಾಗ ಭೋಜನ, ಬಾಯಾರಿದಾಗ ಜಲಪಾನ, ನಿತ್ಯ ತಾಂಬೂಲ ಸೇವನ ಮಾಡುವವನಿಗೆ ಮುಪ್ಪುಬರುವುದಿಲ್ಲ. ಮೊಸರು, ಹೊಸಬೆಣ್ಣೆ ಬೆಲ್ಲಗಳನ್ನು ಸೇವಿಸುತ್ತ ಸಂಯಮದಿಂದಿರುವವನಿಗೆ ಮುಪ್ಪು ಬರುವುದಿಲ್ಲ.

**ಶುಷ್ಕ ಮಾಂಸಂ ಸ್ತ್ರಿಯಂ ವೃದ್ಧಾಂ ಬಾಲಾರ್ಕಂ ತರುಣಂ ದಧಿ ।**
**ಸಂಸೇವಂತಂ ಜರಾಯಾತಿ ಪ್ರಹೃಷ್ಟಾ ಭ್ರಾತೃಭಿಃ ಸಹ ॥**

ಒಣಗಿದ ಮಾಂಸ, ವಯಸ್ಸಾದ ಹೆಂಗಸು, ಎಳೆ ಬಿಸಿಲು, ಆಗತಾನೆ ಹೆಪ್ಪಾದ ಮೊಸರು, ಇವನ್ನು ಸೇವಿಸುವವನ ಬಳಿಗೆ ಜರೆ ತನ್ನ ಸೋದರರೊಂದಿಗೆ ಸಂತೋಷದಿಂದ ಬರುವಳು.

**ರಾತ್ರೌ ಯೇ ದಧಿ ಸೇವಂತೇ ಪುಂಶ್ಚಲೀಶ್ಚ ರಜಸ್ವಲಾಃ ।**
**ತಾನುಪೈತಿ ಜರಾ ಹೃಷ್ಟಾ ಭ್ರಾತೃಭಿಃ ಸಹ ಸುಂದರಿ ॥**

ಮಾಲಾವತಿ, ರಾತ್ರಿಯಲ್ಲಿ ಮೊಸರನ್ನು ಸೇವಿಸುವವರನ್ನು ವೇಶ್ಯಾಸಂಗ ರಜಸ್ವಲಾ-ಸಂಗ ಮಾಡುವವರನ್ನೂ ಜರೆ ಮತ್ತು ರೋಗಗಳು ಬೇಗನೆ ಆಕ್ರಮಿಸುವುವು.

ಮುಟ್ಟಾದವಳು, ಹಾದರಗಿತ್ತಿ, ಪತಿಪುತ್ರರಿಲ್ಲದವಳು, ಸೂಳೆಯ ಸೇವಕಿ, ಶೂದ್ರ-ನಿಂದ ಯಾಗ ಮಾಡಿಸುವವನ ಹೆಂಡತಿ, ಋತುಮತಿಯಾಗದ ಹೆಂಗಸು ಇಂಥ ಸ್ತ್ರೀಯರ ಅನ್ನ ಉಣ್ಣುವವನಿಗೆ ಬ್ರಹ್ಮಹತ್ಯಾಪಾಪ ಬರುವುದು, ಮುಪ್ಪು ಬರುವುದು.

ಪಾಪಗಳಿಗೂ ವ್ಯಾಧಿಗಳಿಗೂ ಸದಾ ಮೈತ್ರಿ. ಆದರಿಂದ ಪಾಪ ವ್ಯಾಧಿಗೂ ಜರೆಗೂ ಮೂಲಕಾರಣ. ವ್ಯಾಧಿ ಜರೆ ದೈನ್ಯ ದುಃಖ ಶೋಕಗಳು ಪಾಪದಿಂದ ಉಂಟಾಗುತ್ತವೆ. ಆದರಿಂದ ಭಾರತ ದೇಶದಲ್ಲಿ ಸಜ್ಜನರು ಪಾಪಮಾಡಲು ಭಯಪಡುತ್ತಾರೆ. ಸ್ವಧರ್ಮಾಚರಣ ದೀಕ್ಷೆ ಹೊತ್ತು ಹರಿಸೇವೆ ಗುರುದೇವ ಅತಿಥಿ ಪೂಜೆ ತಪಸ್ಸು ವ್ರತ

ಉಪವಾಸ ತೀರ್ಥಯಾತ್ರೆಗಳನ್ನು ಮಾಡುವವನನ್ನು ಕಂಡರೆ ರೋಗಗಳೆಲ್ಲ ಗರುಡನನ್ನು ಕಂಡ ಹಾವುಗಳಂತೆ ದೂರ ಓಡುವುವು. ಇವರನ್ನು ಮುಪ್ಪು ಆವರಿಸುವುದಿಲ್ಲ, ವ್ಯಾಧಿಗಳು ಪೀಡಿಸುವುದಿಲ್ಲ.

ಎಲ್ಲ ರೋಗಗಳಿಗೆ ಜ್ವರ ಕಾರಣವೆಂದೂ ಜ್ವರಕ್ಕೆ ವಾತಪಿತ್ತಕಫಗಳು ಕಾರಣ-ವೆಂದೂ ಹಿಂದೆ ಹೇಳಿದೆ. ಈ ವಾತಾದಿಗಳು ಶರೀರದಲ್ಲಿ ಹೇಗೆ ಸಂಚರಿಸುತ್ತದೆ ಅವನ್ನು ನಿಗ್ರಹಿಸುವುದು ಹೇಗೆ ಎಂಬುದನ್ನೂ ಹೇಳುತ್ತೇನೆ ಕೇಳು.

ಹಸಿದಾಗ ಆಹಾರ ಉಣದಿದ್ದರೆ ನಾಭಿ ದೇಶದಲ್ಲಿರುವ ಮಣಿಪೂರ ಚಕ್ರದಲ್ಲಿ ಪಿತ್ತದೋಷ ಉತ್ಪನ್ನವಾಗುವುದು. ತಾಳೆಯ ಹಣ್ಣು ಬೇಲದ ಹಣ್ಣು ತಿಂದು ಒಡನೆ ನೀರು ಕುಡಿದರೆ ಅದೇ ಪಿತ್ತವಾಗಿ ಬೇಗನೆ ಪ್ರಾಣನಾಶಕವಾಗುವುದು. ನೆತ್ತಿಗೆ ಬಹಳ ಬಿಸಿಯಾದ ನೀರು ಎರೆದುಕೊಂಡರೆ ಭಾದ್ರಪದದಲ್ಲಿ ಕಹಿ ಪದಾರ್ಥ ತಿಂದರೆ ಪಿತ್ತ-ಪ್ರಕೋಪ ಉಂಟಾಗುವುದು. ಸಕ್ಕರೆಯೊಡನೆ ಕೊತ್ತಂಬರಿ ಬೀಜದ ಪುಡಿ, ತಣ್ಣೀರಲ್ಲಿ ಕಲಸಿದ ಹಿಟ್ಟು, ಕಡಲೆಗಳು, ಮೊಸರು ಮಜ್ಜಿಗೆ ಹೊರತಾಗಿ ಬೇರೆ ಎಲ್ಲ ಗವ್ಯಗಳು ಅಂದರೆ ಹಾಲು ತುಪ್ಪ ಸೆಗಣಿ ಗಂಜಲಗಳು, ಪಕ್ವವಾದ ಬೇಲದ ಹಣ್ಣು, ತಾಳೆ ಹಣ್ಣುಗಳು, ಶುಂಠಿ, ಹೆಸರುಕಾಳಿನ ಕಟ್ಟು, ಸಕ್ಕರೆ ಬೆರೆಸಿದ ಎಳ್ಳಿನ ಪುಡಿ ಇವನ್ನು ಸೇವಿಸಿದರೆ ಬೇಗನೆ ಪಿತ್ತ ಶಮನವಾಗುವುದು ಬಲ ಪುಷ್ಟಿ ದೊರೆಯುವುದು.

ಊಟವಾದೊಡನೆ ಸ್ನಾನ, ಬಾಯಾರಿಕೆ ಇಲ್ಲದಾಗ ನೀರು ಕುಡಿಯುವುದು, ಎಳ್ಳೆಣ್ಣೆ, ತಂಗಳನ್ನ, ಮಜ್ಜಿಗೆ, ಹೆಚ್ಚು ಕಳಿತ ಬಾಳೆಹಣ್ಣು, ಮೊಸರು, ಮಳೆನೀರು, ಸಕ್ಕರೆ ಬೆರೆಸಿದ ನೀರು, ಎಳನೀರು, ಮೈಗೆ ಎಣ್ಣೆ ಹಚ್ಚದೆ ಹಳೆ ನೀರಲ್ಲಿ ಸ್ನಾನ, ಕಳಿತ ಮುಂಜಾಹಣ್ಣು, ಬಲಿತ ಸೌತೆಕಾಯಿ, ಮಳೆಗಾಲದಲ್ಲಿ ಬಾವಿನೀರಿನ ಸ್ನಾನ -ಇವೆಲ್ಲ ಕಫದೋಷ ಉಂಟುಮಾಡುವುವು. ಕಫ ಮಾನವನ ಬ್ರಹ್ಮರಂಧ್ರದಲ್ಲಿ ಉತ್ಪನ್ನ-ವಾಗುವುದು, ಬಹಳ ವೀರ್ಯ ನಾಶಮಾಡುವುದು, ಬೆಂಕಿಕಾಯಿಸಿ ಮೈ ಬೆವರಿಸಿ-ಕೊಳ್ಳುವುದು, ಕಣ್ಣಿಗೆ ಅಂಜನ, ಕಾಸಿದ ಎಣ್ಣೆ, ಹೆಚ್ಚು ಸಂಚಾರ, ಒಣಗಿದ ಪದಾರ್ಥ, ಹೆಚ್ಚು ಕಳಿತಿಲ್ಲದ ಬಾಳೆಹಣ್ಣು, ಮಸಾಲೆ ಪದಾರ್ಥಗಳು, ಲಕ್ಕಿ ಸೊಪ್ಪು, ಅನ್ನಪಾನ ಬಿಡುವುದು, ತುಪ್ಪದೊಂದಿಗೆ ಬೂರುಗಚೂರ್ಣ, ತುಪ್ಪ ಬೆರೆಸಿದ ಸಕ್ಕರೆ, ಮೆಣಸು, ಹಿಪ್ಪಲಿ ಒಣಶುಂಠಿ ಜೀವಕ ಬೇರು ಜೇನುತುಪ್ಪ ಇವೆಲ್ಲ ಬೇಗನೆ ಕಫ ನಾಶಮಾಡಿ ಬಲಪುಷ್ಟಿ ನೀಡುವುವು.

ಊಟವಾದೊಡನೆ ನಡೆಯುವುದು, ಓಡುವುದು, ಕಟ್ಟೆಗೆ ಒಡೆಯುವುದು, ಬೆಂಕಿ ಕಾಯಿಸುವುದು, ಸದಾ ಸಂಚಾರ, ಅತಿಯಾದ ಸ್ತ್ರೀಸಂಗ, ವೃದ್ಧಸ್ತ್ರೀಸಂಗ, ಸದಾ ಚಿಂತೆ, ಜಿಡ್ಡೆ ಇಲ್ಲದ ಆಹಾರ, ಉಪವಾಸ, ಯುದ್ಧ, ಜಗಳ, ಕ್ರೂರಮಾತು, ಭಯ ಶೋಕ ಇವೆಲ್ಲ ವಾತದೋಷಕ್ಕೆ ಕಾರಣಗಳು. ಭ್ರೂಮಧ್ಯದಲ್ಲಿರುವ ಆಜ್ಞಾಚಕ್ರದಲ್ಲಿ

ಇದರ ಉತ್ಪತ್ತಿ. ಕಳಿತ ಬಾಳೆಹಣ್ಣು, ಮಾದಳದ ಹಣ್ಣಿನೊಂದಿಗೆ ಸಕ್ಕರೆ ಬೆರೆಸಿದ ನೀರು, ಎಳನೀರು, ಆಗತಾನೆ ಕಡೆದ ಮಜ್ಜಿಗೆ ಬೆರೆಸಿದ ಹಿಟ್ಟು, ಎಮ್ಮೆಯ ಹಾಲಿನ ಮೊಸರು, ಸಿಹಿಮೊಸರು, ತಂಗಳನ್ನ, ಯಗಚಿಹಣ್ಣು ತಣ್ಣೀರು ಕಾಸಿದ ಎಣ್ಣೆ, ಎಳ್ಳೆಣ್ಣೆ ನೀರು ಹಿಪ್ಪಲಿ, ತಾಳೆಹಣ್ಣು, ಖರ್ಜೂರ, ಬಿಸಿಮಾಡಿದ ನೆಲ್ಲಿರಸ, ತಣ್ಣಗಾಗದ ಬಿಸಿನೀರಸ್ನಾನ, ಚಂದನಗಂಧ ಲೇಪನ, ತಾವರೆ ಎಲೆ ಹಾಸಿ ಮಲಗುವುದು, ಬೀಸಣಿಗೆಯಿಂದ ಬೀಸಿಕೊಳ್ಳುವುದು ಇವೆಲ್ಲ ವಾತ ದೋಷಹರ.

ಕ್ಲೇಶ ಸಂತಾಪ ಕಾಮಬಾಧೆಗಳಿಂದ ಎಂದು ವಾತ ಮೂರು ಬಗೆಯಾಗಿ ಹುಟ್ಟುತ್ತದೆ.

ಮಾಲಾವತಿ, ನಾನಿದುವರೆಗೆ ವಿವಿಧರೋಗಗಳನ್ನೂ ಅವುಗಳ ನಿವಾರಣೆಗೆ ಸಜ್ಜನರು ರಚಿಸಿದ ನಾನಾ ಶಾಸ್ತ್ರಗಳನ್ನೂ ವರ್ಣಿಸಿದ್ದೇನೆ. ಆ ಶಾಸ್ತ್ರಗಳಲ್ಲಿ ದುರ್ಲಭವಾದ ರಸಾಯನಾದಿ ಉಪಾಯಗಳನ್ನೂ ವರ್ಣಿಸಲಾಗಿದೆ. ಆ ಎಲ್ಲ ಶಾಸ್ತ್ರಗಳ ಬಗ್ಗೆ ಯಥಾವತ್ತಾಗಿ ಹೇಳಬೇಕೆಂದರೆ ಒಂದು ವರ್ಷವೂ ಸಾಲದು. ಯಾವ ರೋಗದಿಂದ ನಿನ್ನ ಪತಿ ಮೃತನಾದನೆಂದು ಹೇಳು. ಸರಿಯಾದ ಔಷಧಿ ಮಾಡಿ ಅವನನ್ನು ಬದುಕಿಸುತ್ತೇನೆ.

ಬ್ರಹ್ಮಚಾರಿಯ ಮಾತು ಕೇಳಿ ಮಾಲಾವತಿ ಸಂತೋಷದಿಂದ ಎಲ್ಲ ವೃತ್ತಾಂತವನ್ನು ಹೇಳತೊಡಗಿದಳು- 'ಬ್ರಹ್ಮಸಭೆಯಲ್ಲಿ ನನ್ನ ಪತಿ ರಂಭೆಯನ್ನು ಕಂಡು ಮೋಹಿತನಾಗಿ ಬ್ರಹ್ಮಶಾಪ ಪಡೆದ. ಯೋಗಬಲದಿಂದ ಪ್ರಾಣತ್ಯಾಗ ಮಾಡಿದ. ಈ ನಿಮಿತ್ತದಿಂದ ನಿನ್ನ ಮುಖದಿಂದ ಅಪೂರ್ವವಾದ ಮನೋಹರವಾದ ಅನೇಕ ವಿಷಯಗಳನ್ನು ಕೇಳಿ ತಿಳಿದಂತಾಯಿತು. ಕಷ್ಟಪಡದೆ ಯಾರಿಗೆ ತಾನೆ ಇಷ್ಟ ದೊರಕೀತು? ? ಈಗ ನೀನು ನನ್ನ ಪ್ರಾಣಕಾಂತನನ್ನು ಬದುಕಿಸಿಕೊಡು. ನಿಮ್ಮೆಲ್ಲರನ್ನೂ ನಮಿಸಿ ನಾನು ನನ್ನ ಪತಿಯೊಂದಿಗೆ ಮನೆಗೆ ಹೋಗುತ್ತೇನೆ.'

ಮಾಲಾವತಿಯ ಮಾತು ಕೇಳಿ ಬ್ರಹ್ಮಚಾರಿ ರೂಪದ ಹರಿ ದೇವತೆಗಳ ಬಳಿಗೆ ಹೋದನು.

**ಇಲ್ಲಿಗೆ ಶ್ರೀ ಬ್ರಹ್ಮವೈವರ್ತ ಮಹಾಪುರಾಣದ ಸೌತಿ ಶೌನಕ ಸಂವಾದದಲ್ಲಿ ಮಾಲಾವತೀ ವಿಷ್ಣುಸಂವಾದದಲ್ಲಿ ಚಿಕಿತ್ಸಾಪ್ರಣಯನವೆಂಬ ಹದಿನಾರನೆ ಅಧ್ಯಾಯ ಮುಗಿಯಿತು.**

## ವಿಷ್ಣುಪ್ರಶಂಸಾ ಪ್ರಣಯನ

**ಅಧ್ಯಾಯ-೧೭**

ದೇವತೆಗಳು ಬ್ರಹ್ಮಚಾರಿಯನ್ನು ಇದಿರುಗೊಂಡು ಗೌರವಿಸಿದರು. ಬಳಿಕ ಪರಸ್ಪರ ಸಂಭಾಷಣೆ ನಡೆಯಿತು. ಬ್ರಹ್ಮಚಾರಿ ಶ್ರೀಹರಿಯೆ ಎಂಬುದನ್ನು ವಿಷ್ಣುಮಾಯೆಯಿಂದ ಮೋಹಿತರಾಗಿದ್ದ ದೇವತೆಗಳು ತಿಳಿದಿರಲಿಲ್ಲ.

ಬ್ರಹ್ಮಚಾರಿ ಮಧುರವಾಗಿ ನುಡಿದ, 'ದೇವತೆಗಳೆ, ಮಾಲಾವತಿ ಪತಿವಿರಹ ದುಃಖ ತಾಳಲಾರದೆ ಪತಿಯ ಜೀವದಾನವನ್ನು ಬೇಡುತ್ತಿದ್ದಾಳೆ. ಈಗ ನಾವೇನು ಮಾಡಬೇಕು ಹೇಳಿ. ಅವಳು ಪತಿವ್ರತೆ. ನಿಮ್ಮೆಲ್ಲರನ್ನೂ ಶಪಿಸಲು ಉದ್ಯುಕ್ತಳಾಗಿದ್ದಾಳೆ. ನಿಮ್ಮ ಕ್ಷೇಮಕ್ಕಾಗಿ ನಾನು ಅವಳಿಗೆ ಸಮಾಧಾನ ಹೇಳಿ ಬಂದಿದ್ದೇನೆ.

ನೀವು ಶ್ವೇತದ್ವೀಪದಲ್ಲಿ ಹರಿಯನ್ನು ಸ್ತೋತ್ರ ಮಾಡಿದಿರಿ. ಆದರೂ ಹರಿ ಏಕೆ ಇಲ್ಲಿಗೆ ಬರಲಿಲ್ಲ ? 'ನೀವು ಮುಂದೆ ಹೋಗಿರಿ. ಹರಿ ಹಿಂದಿನಿಂದ ಬರುತ್ತಾನೆ' ಎಂದು ಅಶರೀರವಾಣಿಯಾಯಿತೆಂದಿರಿ. ಆದರೆ ಇಲ್ಲಿ ನಡೆದುದೇ ಬೇರೆ. ಏನುಕಾರಣ ? ಅಶರೀರವಾಣಿ ಸುಳ್ಳಾಗುವುದಿಲ್ಲ ತಾನೆ ?'

ಬ್ರಹ್ಮಚಾರಿಯ ಮಾತು ಕೇಳಿ ಸ್ವಯಂ ಜಗದ್ಗುರು ಬ್ರಹ್ಮ ಹಿತಕರವಾದ ಪರಮ ಮಂಗಲಕರವಾದ ಸತ್ಯವಚನವನ್ನಾಡಿದ— 'ಬ್ರಹ್ಮಚಾರಿ, ನನ್ನ ಮಗ ನಾರದ ನನ್ನ ಶಾಪದಿಂದ ಉಪಬರ್ಹಣ ಗಂಧರ್ವನಾಗಿ ಜನಿಸಿ ಪುನಃ ನನ್ನ ಶಾಪದಿಂದಲೆ ಈಗ ಯೋಗಬಲದಿಂದ ಪ್ರಾಣ ತೊರೆದಿದ್ದಾನೆ. ಒಂದು ಲಕ್ಷ ದಿವ್ಯವರ್ಷಗಳ ಕಾಲ ಅವನು ಭೂಮಿಯಲ್ಲಿದ್ದ. ಮುಂದೆ ಶೂದ್ರನಾಗಿ ಜನ್ಮ ತಳೆದು ಬಳಿಕ ನನ್ನ ಮಗನಾಗಿ ಜನಿಸಲಿದ್ದಾನೆ. ಈಗ ಹರಿಯ ಅನುಗ್ರಹದಿಂದ ಈತನಿಗೆ ಜೀವದಾನ ಮಾಡುತ್ತೇನೆ, ಒಂದು ಸಾವಿರ ವರ್ಷಗಳ ಆಯುಷ್ಯ ನೀಡುತ್ತೇನೆ. ಅಷ್ಟುಕಾಲ ನನ್ನ ಶಾಪ ಅವನಿಗೆ ತಗುಲದಂತೆ ಮಾಡುತ್ತೇನೆ.

ಹರಿ ಏಕೆ ಇಲ್ಲಿಗೆ ಬರಲಿಲ್ಲ ಎಂದು ಕೇಳುತ್ತಿರುವಿ. ಆದರೆ ಆತ ಎಲ್ಲೆಡೆ ಇದ್ದಾನೆ. ಎಲ್ಲ ತಿಳಿದಿರುತ್ತಾನೆ. ಸ್ವತಂತ್ರನಾತ. ನಮ್ಮಂತೆ ಪ್ರಾಕೃತ ಶರೀರ ಅವನಿಗಿಲ್ಲ. ಆತ ಒಲಿದರೆ ಭಕ್ತರ ಅನುಗ್ರಹಕ್ಕಾಗಿ ತನ್ನ ಅಪ್ರಾಕೃತ ಶರೀರವನ್ನು ಸ್ವೇಚ್ಛೆಯಿಂದ ತೋರುವನಷ್ಟೆ.

**ವಿಷೀಶ್ಚ ವ್ಯಾಪ್ತಿವಚನೋ ನುಶ್ಚ ಸರ್ವತ್ರ ವಾಚಕಃ ।**
**ಸರ್ವವ್ಯಾಪೀ ಚ ಸರ್ವಾತ್ಮಾ ತೇನ ವಿಷ್ಣುಃ ಪ್ರಕೀರ್ತಿತಃ ॥**

'ವಿಷ್ಣು' ಎಂಬಲ್ಲಿ ವಿಷ' ಎಂದರೆ ವ್ಯಾಪಿಸಿರುವವ. 'ನು' ಎಂದರೆ 'ಸರ್ವತ್ರ.' ಎಂದರ್ಥ. ಸರ್ವವ್ಯಾಪಿಯಾದ್ದರಿಂದ ವಿಷ್ಣು ಎನಿಸುತ್ತಾನೆ.

**ಅಪವಿತ್ರಃ ಪವಿತ್ರೋ ವಾ ಸರ್ವಾವಸ್ಥಾಂ ಗತೋಽಪಿ ವಾ ।**
**ಯಃ ಸ್ಮರೇತ್ ಪುಂಡರೀಕಾಕ್ಷಂ ಸ ಬಾಹ್ಯಾಭ್ಯಂತರಃ ಶುಚಿಃ ॥**

ಅಪವಿತ್ರನಿರಲಿ ಪವಿತ್ರನಿರಲಿ ಯಾವುದೇ ಅವಸ್ಥೆಯಲ್ಲಿರಲಿ ಯಾರು ತಾವರೆಯಂಥ ಕಣ್ಣಿನ ಹರಿಯನ್ನು ನೆನೆಯುವನೋ ಅವನು ಹೊರಗೂ ಒಳಗೂ ಶುಚಿ ಎನಿಸುತ್ತಾನೆ.

**ಕರ್ಮಾರಂಭೇ ಚ ಮಧ್ಯೇ ವಾ ಶೇಷೇ ವಿಷ್ಣುಂ ಚ ಯಃ ಸ್ಮರೇತ್ ।**
**ಪರಿಪೂರ್ಣಂ ತಸ್ಯ ಕರ್ಮ ವೈದಿಕಂ ಚ ಭವೇದ್ ದ್ವಿಜ ॥**

ಯಾವುದೇ ಕರ್ಮದ ಆರಂಭ ಮಧ್ಯ ಅಂತ್ಯಗಳಲ್ಲಿ ಯಾರು ಹರಿಸ್ಮರಣೆ ಮಾಡುವನೋ ಅವನ ಆ ಕರ್ಮ ಯಥಾಶಾಸ್ತ್ರೀಯವೆನಿಸಿ ಪೂರ್ಣಫಲದಾಯಕ-ವಾಗುವುದು.

ಸೃಷ್ಟಿಕರ್ತನಾದ ನಾನು, ಲಯಕಾರಕ ಹರ, ಕರ್ಮಸಾಕ್ಷಿ ಧರ್ಮ, ಲೋಕ ಸಂಹಾರಕ ಕಾಲ, ಪಾಪಿಗಳಿಗೆ ಶಿಕ್ಷೆ ನೀಡುವ ಯಮ, ಎಲ್ಲರನ್ನು ಸೆಳೆದೊಯ್ಯುವ ಮೃತ್ಯು, ಎಲ್ಲಕ್ಕೂ ಒಡತಿಯೂ ಕಾರಣಳೂ ಆದ ದುರ್ಗೆ ಎಲ್ಲರೂ ಆ ವಿಷ್ಣುವಿನ ಭಯದಿಂದ ಅವನಾಜ್ಞೆಯಂತೆ ತಮ್ಮ ತಮ್ಮ ಕಾರ್ಯ ಮಾಡುತ್ತಾರೆ.

ಶಿವ ಹೇಳಿದ, 'ಬ್ರಹ್ಮಚಾರಿ, ಬ್ರಹ್ಮಪುತ್ರರಲ್ಲಿ ಯಾರ ವಂಶದವ ನೀನು ? ವೇದಾಧ್ಯಯನ ಮಾಡಿ ಏನು ಸಾರಾಂಶ ತಿಳಿದಿರುವಿ ? ಯಾರ ಶಿಷ್ಯ ನೀನು ? ನಿನ್ನ ಹೆಸರೇನು ? ಆಕಾರದಲ್ಲಿ ಸಣ್ಣ ಮಗುವಿನಂತಿದ್ದರೂ ಸೂರ್ಯನಿಗಿಂತ ಹೆಚ್ಚು ಬೆಳಗುತ್ತಿರುವಿ. ಆದರೂ ನಮ್ಮೆಲ್ಲರ ಒಡೆಯನಾದ ಹರಿ ನಮ್ಮ ಹೃದಯದಲ್ಲಿಯೆ ಇರುವನೆಂಬುದನ್ನರಿಯೆಯಾ ? ಅವನು ನಮ್ಮ ಶರೀರದಿಂದ ಹೊರಟುಹೋದರೆ ರಾಜನ ಜೊತೆಗೆ ಅವನ ಪರಿವಾರವೂ ಹೋಗುವಂತೆ ಅವನ ಜೊತೆಗೆ ಎಲ್ಲ ಇಂದ್ರಿಯಾಭಿಮಾನಿ ದೇವತೆಗಳೂ ಹೊರಟು ಹೋಗುವರು, ಒಡನೆ ಶರೀರಪಾತ-ವಾಗುವುದು. ಆದ್ದರಿಂದಲೆ ಜೀವ ಪರಮಾತ್ಮನಿಗೆ ಸರ್ವಥಾ ಅಧೀನನಾಗಿದ್ದು ಪ್ರತಿಬಿಂಬದಂತಿರುವನು. ಜೀವನ ಮನಸ್ಸು ಜ್ಞಾನ ಚೇತನಾಶಕ್ತಿ ಪ್ರಾಣಗಳು ಇಂದ್ರಿಯಗಳು ಬುದ್ಧಿ ಧಾರಣಾ ಶಕ್ತಿ ಧೈರ್ಯ ಸ್ಮರಣಶಕ್ತಿ ನಿದ್ದೆ ದಯೆ ಆಲಸ್ಯ ಹಸಿವು ನೀರಡಿಕೆ ಪುಷ್ಟಿ ಶ್ರದ್ಧೆ ಸಂತೋಷ ಇಚ್ಛೆ ಕ್ಷಮೆ ಲಜ್ಜೆ ಮುಂತಾದುವೆಲ್ಲ ಅವನ ಅಧೀನ. ಅವನಾಜ್ಞೆಯನ್ನೆ ಪಾಲಿಸುತ್ತವೆ.

**ಈಶ್ವರೇ ಚ ಸ್ಥಿತೇ ದೇಹೀ ಕ್ಷಮಶ್ಚ ಸರ್ವಕರ್ಮಸು ।**
**ಗತೇಽಸ್ಪೃಶ್ಯಃ ಶವಸ್ತ್ವಾಜ್ಯಃ ಶಸ್ತಂ ದೇಹೀ ನ ಮನ್ಯತೇ ॥**

ಹರಿ ದೇಹದಲ್ಲಿದ್ದರೆ ಮಾತ್ರ ಜೀವ ತನ್ನೆಲ್ಲ ಕೆಲಸ ಮಾಡಲು ಶಕ್ತ. ಅವನು ಹೊರಟು ಹೋದರೆ ಶರೀರ ಶವವಾಗಿ ಅಸ್ಪೃಶ್ಯವೆನಿಸುತ್ತದೆ. ತ್ಯಾಜ್ಯವೆನಿಸುತ್ತದೆ. ಅಂಥ ಹರಿಯನ್ನು ಯಾವ ಜೀವ ಮರೆಯಬಲ್ಲ ? ಸ್ವತಃ ಸರ್ವಸೃಷ್ಟಿಕರ್ತನಾದ ಬ್ರಹ್ಮನೂ ಹರಿಯ ಪಾದಾರವಿಂದ ನೋಡಲು ಅಶಕ್ತನಾಗಿ ಸದಾ ಧ್ಯಾನಿಸುತ್ತಾನೆ. ಮೊದಲೆ ಜ್ಞಾನಿಯಾಗಿದ್ದರೂ ಆತ ಒಂದು ಲಕ್ಷ ಯುಗಗಳ ಕಾಲ ಹರಿಯ ಕುರಿತು ತಪಸ್ಸು ಮಾಡಿಯೆ ಜಗತ್‌ಸೃಷ್ಟಿಯ ಸಾಮರ್ಥ್ಯ ಹೊಂದಿದ್ದಾನೆ. ನಾನೂ ಲೆಕ್ಕವಿಲ್ಲ-ದಷ್ಟು ಕಾಲ ಹರಿಯ ಕುರಿತು ತಪಸ್ಸು ಮಾಡಿದ್ದೇನೆ. ಆದರೆ ನನಗೆ ಇನ್ನೂ ಅದು ಸಾಕೆನಿಸಿಲ್ಲ. ಶ್ರೇಯಸ್ಸು ಎಷ್ಟು ದೊರೆತರೂ ಯಾರಿಗೆ ತೃಪ್ತಿಯಾಗುತ್ತದೆ ? ಅದರಿಂದ ನಾನು ಈಗಲೂ ಬೇರೆಲ್ಲ ಕರ್ಮಗಳಲ್ಲಿ ಆಸಕ್ತಿ ತೊರೆದು ಐದು ಮುಖಗಳಿಂದಲೂ ಹರಿನಾಮ ಸಂಕೀರ್ತನೆ ಮಾಡುತ್ತ ಎಲ್ಲೆಡೆ ಸಂಚರಿಸುತ್ತಿದ್ದೇನೆ. ಹರಿನಾಮ ಕೀರ್ತನದ ಬಲದಿಂದಲೆ ನಾನು ಸರ್ವಸಂಹಾರಕ, ಆದರೆ ನನಗೆ ಮೃತ್ಯು ಇಲ್ಲ, ಮೃತ್ಯುಂಜಯ-ನೆನಿಸಿದ್ದೇನೆ. ಮೃತ್ಯು ನನ್ನನ್ನು ನೋಡಿದರೆ ಪಲಾಯನ ಮಾಡುತ್ತಾಳೆ. ನಾನು ಕಾಲದಲ್ಲಿ ವಿಲೀನನಾಗಿ ತಿರುಗಿ ಅವನಿಂದ ಆವಿರ್ಭಾವ ಹೊಂದುತ್ತೇನೆ. ಹರಿಯ ಅನುಗ್ರಹದಿಂದ ಕಾಲನಾಗಲಿ ಮೃತ್ಯುವಾಗಲಿ ನನ್ನನ್ನು ಸಂಹರಿಸಲಾರರು.

ಹರಿ ಗೋಲೋಕದಲ್ಲಿದ್ದರೂ ಅವನೆ ಒಂದು ಅಂಶದಿಂದ ವೈಕುಂಠದಲ್ಲಿಯೂ ಇನ್ನೊಂದು ಅಂಶದಿಂದ ಶ್ವೇತದ್ವೀಪದಲ್ಲಿಯೂ ಇದ್ದಾನೆ. ಅಂಶ ಅಂಶಿಗಳಿಗೆ ಭೇದವಿಲ್ಲ. ಬೆಂಕಿಗೂ ಕಿಡಿಗೂ ಹೇಗೆ ಅಭೇದವೋ ಹಾಗೆ.

ಎಪ್ಪತ್ತೊಂದು ದಿವ್ಯ ಚತುರ್ಯುಗಗಳ ಕಾಲ ಒಂದು ಮನ್ವಂತರಕಾಲ. ಇದರ ಇಪ್ಪತ್ತೆಂಟರಷ್ಟು ದೀರ್ಘವಾದ ಕಾಲ ಬ್ರಹ್ಮನಿಗೆ ಒಂದುದಿನ. ಈ ಲೆಕ್ಕದಂತೆ ಬ್ರಹ್ಮನಿಗೆ ನೂರುವರ್ಷ ಆಯುಸ್ಸು. ಇದು ಹರಿಗೆ ಒಮ್ಮೆ ಕಣ್ಣಿನ ರೆಪ್ಪೆ ಹೊಡೆಯುವ ಕಾಲ. ಇಂಥ ಕೃಷ್ಣನ ಮಹಿಮೆಯನ್ನು ಯಾರು ಪೂರ್ತಿ ತಿಳಿಯಬಲ್ಲರು ? ಅವನ ಮಹಿಮೆಯ ಒಂದಂಶವನ್ನೂ ನಾನು ಪೂರ್ತಿ ತಿಳಿಯಲಾರೆ.'

ಹೀಗೆ ಹೇಳಿ ಶಿವ ಸುಮ್ಮನಾದ. ಸರ್ವಕರ್ಮಸಾಕ್ಷಿಯಾದ ಧರ್ಮ ಹೇಳಿದ- 'ಯಾರ ಹಸ್ತಪಾದಗಳು ಸರ್ವತ್ರ ವ್ಯಾಪಿಸಿವೆಯೋ ಯಾರ ಕಣ್ಣು ಸರ್ವವನ್ನೂ ಕಾಣಬಲ್ಲುದೊ, ಸರ್ವಾಂತರಾತ್ಮನಾಗಿ ಎಲ್ಲರಿಗೂ ಕಾಣುತ್ತಿದ್ದರೂ ದುರ್ಜನರಿಗೆ ಮಾತ್ರ ಯಾರು ಕಾಣುವುದಿಲ್ಲವೋ ಅಂಥ ವಿಷ್ಣು ಈ ದೇವತೆಗಳ ಸಭೆಗೆ ಬಂದಿಲ್ಲವೆಂದು ನೀನು ಹೇಳುವುದರ ಅಭಿಪ್ರಾಯವೇನು ? ಮುನಿಗಳಿಗೂ ಬುದ್ಧಿಮೋಹ ಉಂಟುಮಾಡುವ ಉದ್ದೇಶವೆ ? ಮಹಾತ್ಮರ ನಿಂದೆಯನ್ನು ಸಜ್ಜನರು ಕೇಳುವುದಿಲ್ಲ. ನಿಂದೆ ಮಾಡುವವನು ಶ್ರೋತೃಗಳೊಂದಿಗೆ ಕುಂಭೀಪಾಕ ನರಕ ಹೊಂದುವನು.

**ಶ್ರುತ್ವಾ ದೈವಾನ್ಮಹನ್ನಿಂದಾಂ ಶ್ರೀವಿಷ್ಣೋಃ ಸ್ಮರಣಾದ್ ಬುಧಃ ।**
**ಮುಚ್ಯತೇ ಸರ್ವಪಾಪೇಭ್ಯಃ ಪುಣ್ಯಂ ಪ್ರಾಪ್ನೋತಿ ದುರ್ಲಭಂ ॥**

ದೈವಾತ್ ಮಹಾತ್ಮರ ನಿಂದೆ ಕಿವಿಗೆ ಬಿದ್ದರೆ ಶ್ರೀವಿಷ್ಣುಸ್ಮರಣೆ ಮಾಡಬೇಕು. ಆದರಿಂದ ಸರ್ವಪಾಪ ಪರಿಹಾರ, ದುರ್ಲಭ ಪುಣ್ಯಲಾಭವೂ ಉಂಟು.

ಇಚ್ಛೆ ಇದ್ದಾಗಲಿ ಇಲ್ಲದಿದ್ದಾಗಲಿ ವಿಷ್ಣುನಿಂದೆ ಮಾಡುವವ, ಅದನ್ನು ಕೇಳುವವ ಕೇಳಿ ಸಭೆಯಲ್ಲಿ ನಗುವವ ಇವರೆಲ್ಲ ನರಾಧಮರು. ಬ್ರಹ್ಮನ ಆಯುಷ್ಯದಷ್ಟು ದೀರ್ಘಕಾಲ ಅವರು ಕುಂಭೀಪಾಕ ನರಕ ಹೊಂದುತ್ತಾರೆ. ಅವರಿರುವ ಸ್ಥಳವೂ ಮದ್ಯದ ಪಾತ್ರೆಯಂತೆ ಅಪವಿತ್ರ.

ವಿಷ್ಣುನಿಂದೆ ಮೂರು ಬಗೆ- 'ವಿಷ್ಣು ಎಲ್ಲೂ ಯಾರಿಗೂ ಕಾಣಿಸುವುದಿಲ್ಲ' ಎನ್ನುವುದು, 'ವಿಷ್ಣುವೆ ಇಲ್ಲ' ಎನ್ನುವುದು. 'ವಿಷ್ಣು ಒಬ್ಬ ಸಾಮಾನ್ಯ ದೇವತೆ' ಎನ್ನುವುದು. ಇಂಥ ನಿಂದೆ ಮಾಡುವವರಿಗೆ ನೂರು ಬ್ರಹ್ಮರ ಕಾಲ ಕಳೆದರೂ ತೀರದ ನರಕವಾಸ.

**ಗುರೋರ್ನಿಂದಾಂ ಯಃ ಕರೋತಿ ಪಿತುರ್ನಿಂದಾಂ ನರಾಧಮಃ ।**
**ಸ ಯಾತಿ ಕಾಲಸೂತ್ರಂ ಚ ಯಾವಚ್ಚಂದ್ರ ದಿವಾಕರೌ ॥**

ಗುರುನಿಂದೆಯನ್ನು ಮಾಡುವವನೂ ಪಿತೃನಿಂದೆ ಮಾಡುವವನೂ ಸೂರ್ಯ-ಚಂದ್ರರಿರುವಷ್ಟು ಕಾಲ ಕಾಲಸೂತ್ರನರಕವನ್ನನುಭವಿಸುತ್ತಾನೆ. ವಿಷ್ಣು ಎಲ್ಲರಿಗೂ ಗುರುವೂ ಹೌದು, ಪಿತನೂ ಹೌದು. ಏಕೆಂದರೆ ಅವನೆ ಎಲ್ಲರನ್ನೂ ಸೃಷ್ಟಿಸುವವ, ಜ್ಞಾನ ನೀಡುವವ, ಪಾಲನ ಪೋಷಣ ಮಾಡುವವ, ಭಯದಿಂದ ರಕ್ಷಿಸುವವ, ವರ ನೀಡುವವ.

ಬ್ರಹ್ಮ, ಶಿವ, ಧರ್ಮರ ಮಾತು ಕೇಳಿ ಬ್ರಹ್ಮಚಾರಿ ನಕ್ಕು ಹೇಳಿದ, 'ದೇವತೆಗಳೆ, ನಾನೇನು ವಿಷ್ಣುನಿಂದೆ ಮಾಡಿದೆ ? ಹರಿ ಇಲ್ಲಿಗೆ ಬರಲಿಲ್ಲ, ಬರುತ್ತಾನೆ ಎಂದು ಹೇಳಿದ ಆಕಾಶವಾಣಿ ಸುಳ್ಳಾಯಿತು ಎಂದೆನಷ್ಟೆ. ನೀವೆ ಹೇಳಿ, ವಿಷ್ಣು ಎಲ್ಲೆಡೆ ಕಾಣಿಸುವನಾದರೆ ನೀವೇಕೆ ಶ್ವೇತದ್ವೀಪದವರೆಗೆ ಹೋದಿರಿ ? ಅವನ ಅಂಶ ಕಾಣಿಸುವದಾದರೆ ನೀವೇಕೆ ಶ್ವೇತದ್ವೀಪದ ವರೆಗೆ ಹೋದಿರಿ ? ಅವನ ಅಂಶ ಅಂಶಿಗಳಿಗೆ ಏನೂ ವಿಶೇಷವಿಲ್ಲದಿದ್ದರೆ ಪರಿಪೂರ್ಣನೂ ಸರ್ವವ್ಯಾಪ್ತನೂ ಆದ ಅವನನ್ನು ಎಲ್ಲ ಸಜ್ಜನರೂ ಹೇಗೆ ತಾನೆ ಧ್ಯಾನಿಸಬಲ್ಲರು ? ಕೋಟಿಜನ್ಮವೆತ್ತಿದರೂ ಅವನ ವ್ಯಾಪ್ತ ರೂಪದ ಧ್ಯಾನ ಶಕ್ಯವಾಗಲಾರದು. ಎಲ್ಲರಿಗೂ ಆಸೆ ಮಾತ್ರ ಪ್ರಬಲವಾಗಿದೆ. ಎಲ್ಲರೂ ಪೂರ್ಣನಾದ ಕೃಷ್ಣನನ್ನಾರಾಧಿಸಬಯಸುವವರೆ. ಅಲ್ಪ-ರಾಗಲಿ ಮಹಾತ್ಮರಾಗಲಿ ಎಲ್ಲರೂ ಕೃಷ್ಣನ ಪರಮಪದ ಹೊಂದಲಿಚ್ಛಿಸುವರು. ಇದು

ಕುಳ್ಳ ಕೈಯಿಂದ ಚಂದ್ರನನ್ನು ಹಿಡಿಯ ಬಯಸುವಂತೆಯೆ ಸರಿ. ಆದ್ದರಿಂದ ಅವನ ಅಂಶ ಅಂಶಿಗಳಿಗೆ ವಿಶೇಷವಿದ್ದೇ ಇದೆ. ಅದರಿಂದ ಅವನಿಗೆ ಅನೇಕ ರೂಪಗಳಿವೆ. ಅದರಿಂದಲೆ ನೀವೆಲ್ಲ ಶ್ವೇತದ್ವೀಪ ನಿವಾಸಿಯಾದ ಒಂದು ರೂಪದ ಬಳಿಗೆ ಹೋದಿರಿ.

ಹೀಗೆ ಅನಾದಿಕಾಲದಿಂ ಪ್ರತಿಕಲ್ಪದಲ್ಲಿಯೂ ಬ್ರಹ್ಮಾಂಡಗಳೆಷ್ಟೋ ಆಗಿಹೋಗಿವೆ. ಬ್ರಹ್ಮವಿಷ್ಣುಶಿವಾದಿ ದೇವತೆಗಳೆಷ್ಟೋ ಆಗಿಹೋಗಿದ್ದಾರೆ. ಹೀಗೇ ಮುಂದೆಯೂ ಬರಲಿದ್ದಾರೆ. ಆ ಎಲ್ಲ ಬ್ರಹ್ಮಾಂಡಗಳನ್ನೂ ಆ ಎಲ್ಲ ದೇವತೆಗಳನ್ನೂ ಎಣಿಸಿ ಇಷ್ಟೇ ಎಂದು ಹೇಳಲು ಯಾರು ಸಮರ್ಥರು ? ಎಲ್ಲಕ್ಕೂ ಪ್ರಭು ಕೃಷ್ಣ. ಭಕ್ತರನ್ನು ಅನುಗ್ರಹಿಸುವುದಕ್ಕಾಗಿ ಅವರಿಗೆ ಕಾಣಲು ಯೋಗ್ಯವಾದ ರೂಪಗಳನ್ನು ಆತ ತೋರುತ್ತಾನೆ. ವೈಕುಂಠದಲ್ಲಿ ಚತುರ್ಭುಜ ರೂಪ. ಲಕ್ಷ್ಮೀರಮಣನಾಗಿ ಸುನಂದ, ನಂದ, ಕುಮುದ ಮುಂತಾದ ಪರಿವಾರದಿಂದ ಯುಕ್ತನಾಗಿರುತ್ತಾನೆ. ಗೋಲೋಕ-ದಲ್ಲಿ ದ್ವಿಭುಜ ರೂಪ ದ್ವಿಭುಜರಾದ ಗೋಪಗೋಪಿಯರಿಂದ ಪರಿವೃತನಾಗಿ ರಾಧಾರಮಣನಾಗಿ ಅನೇಕ ಸ್ವೇಚ್ಛಾರೂಪಗಳಿಂದ ವೃಂದಾವನದಲ್ಲಿ ರಾಸಕ್ರೀಡೆ-ಯಾಡುತ್ತಾನೆ. ಈ ಎಲ್ಲ ರೂಪಗಳೂ ಕೋಟಿ ಸೂರ್ಯರಂತೆ ಬೆಳಗುವ ಜ್ಯೋತಿರ್ಮಂಡಲಗಳೆ ಆಗಿದ್ದು ಮಹಾಯೋಗಿಗಳು ಸದಾ ಧ್ಯಾನಿಸುವ ರೂಪ-ಗಳಾಗಿವೆ. ಸಾಮಾನ್ಯ ಭಕ್ತರು ನೀಲ ಮೇಘ ಶ್ಯಾಮನಾದ ಪೀತಾಂಬರಧಾರಿಯಾದ ಕೋಟಿಮನ್ಮಥರ ಲಾವಣ್ಯದಿಂದೊಪ್ಪುವ ದ್ವಿಭುಜ ಬಾಲಕೃಷ್ಣರೂಪವನ್ನೆ ಧ್ಯಾನಿಸು-ವರು. ಈ ಎಲ್ಲ ರೂಪಗಳೂ ಸತ್ಯ, ನಿತ್ಯ.

ನೀವು ನನ್ನನ್ನು ಕೇಳಿದಿರಿ, 'ನಿನ್ನ ವಂಶ ಯಾವುದು, ಯಾರ ಶಿಷ್ಯ' ಎಂದು ಮುಂತಾಗಿ. ನನ್ನ ಮಾತುಗಳಿಂದ ನಾನು ಯಾವ ವಂಶದವ ಯಾರ ಶಿಷ್ಯ-ನೆಂಬುದನ್ನೆಲ್ಲ ನೀವೆ ಊಹಿಸಿಕೊಳ್ಳಿ. ಈಗ ಮೊದಲಿಗೆ ಗಂಧರ್ವನನ್ನು ಬದುಕಿಸಿ ಕೊಡಿ.'

ಹೀಗೆ ಹೇಳಿ ನಕ್ಕು ಬ್ರಹ್ಮಚಾರಿ ಸುಮ್ಮನಾದ.

**ಇಲ್ಲಿಗೆ ಶ್ರೀ ಬ್ರಹ್ಮವೈವರ್ತ ಮಹಾಪುರಾಣದ ಸೌತಿ ಶೌನಕ ಸಂವಾದದಲ್ಲಿ ವಿಷ್ಣು ಸುರಸಂಘ ಸಂವಾದದಲ್ಲಿ ವಿಷ್ಣುಪ್ರಶಂಸಾ ಪ್ರಣಯನವೆಂಬ ಹದಿನೇಳನೆ ಅಧ್ಯಾಯ ಮುಗಿಯಿತು.**

## ಮಹಾಪುರುಷ ಸ್ತೋತ್ರ

**ಅಧ್ಯಾಯ-೧೮**

ವಿಷ್ಣುಮಾಯೆಯಿಂದ ಬ್ರಹ್ಮಾದಿದೇವತೆಗಳು ಮೋಹಿತರಾಗಿ ಬ್ರಹ್ಮಚಾರಿ-ಯೊಂದಿಗೆ ಮಾಲಾವತಿಯ ಬಳಿಗೆ ಹೋದರು.

ಬ್ರಹ್ಮ ಕಮಂಡಲು ಜಲದಿಂದ ಶವವನ್ನು ಪ್ರೋಕ್ಷಿಸಿ ಮನಸ್ಸನ್ನು ಒಳಗೆ ಕಳಿಸಿದ. ಶಿವ ಜ್ಞಾನಶಕ್ತಿ ನೀಡಿದ. ಧರ್ಮ ಧರ್ಮಜ್ಞಾನ ನೀಡಿದ. ಅಗ್ನಿ ಜಾಠರಾಗ್ನಿಯನ್ನಿತ್ತ. ಕಾಮ ಎಲ್ಲ ಕಾಮನೆಗಳನ್ನಿತ್ತ. ವಾಯು ಪ್ರಾಣಸಂಚಾರ ನೀಡಿದ. ಸೂರ್ಯ ದೃಷ್ಟಿಶಕ್ತಿ ನೀಡಿದ. ಸರಸ್ವತಿ ವಾಕ್‌ಶಕ್ತಿ ನೀಡಿದಳು. ಲಕ್ಷ್ಮಿ ಶೋಭೆ ನೀಡಿದಳು.

ಇಷ್ಟಾದರೂ ಶವ ಎದ್ದೇಳಲಿಲ್ಲ. ಜಡವಾಗಿ ಹಾಗೇ ಬಿದ್ದಿತು.

ಬ್ರಹ್ಮನಾಜ್ಞೆಯಂತೆ ಮಾಲಾವತಿ ನದೀಸ್ನಾನ ಮಾಡಿ ಶುಭ್ರವಸ್ತ್ರ ಧರಿಸಿ ಭಗವಂತ-ನನ್ನು ಸ್ತೋತ್ರ ಮಾಡಿದಳು—

ಸರ್ವಕಾರಣಗಳಿಗೂ ಕಾರಣನಾದ ಪರಮಾತ್ಮನನ್ನು ನಮಿಸುವೆನು. ಅವನಿಲ್ಲದೆ ಇದ್ದರೆ ಪ್ರಾಣಿಗಳೆಲ್ಲ ಬರಿ ಶವದಂತೆ ಬಿದ್ದಿರುತ್ತವೆ. ಎಲ್ಲರ ಒಳಗೂ ಸಾಕ್ಷಿರೂಪದಿಂದ ಇರುವನು. ಆದರೆ ಯಾರೂ ಅವನನ್ನು ನೋಡಲಾರರು. ಬ್ರಹ್ಮ ವಿಷ್ಣು ಶಿವಾದಿ-ಗಳನ್ನು ಹಡೆದ ಪ್ರಕೃತಿಗೂ ಸೃಷ್ಟಿಕರ್ತನಾತ. ಅವನ ಸೇವಾರೂಪವಾಗಿ ಬ್ರಹ್ಮ ಸೃಷ್ಟಿ ಮಾಡುತ್ತಾನೆ. ವಿಷ್ಣು ಪಾಲಿಸುತ್ತಾನೆ. ಶಿವ ಲಯಗೈಯುತ್ತಾನೆ. ತಾನು ಪ್ರಕೃತಿಗೆ ಅತೀತನಾಗಿದ್ದು ದೇವತೆಗಳು ಮನುಗಳು ಮುನಿಗಳು ಸಿದ್ಧರುಗಳೆಲ್ಲರ ಧ್ಯಾನಕ್ಕೆ ಗೋಚರನಾಗುತ್ತಾನೆ. ಜ್ಞಾನಾನಂದಮಯವಾದ ಅಪ್ರಾಕೃತ ರೂಪದಿಂದ ಸಾಕಾರನೂ ಪ್ರಾಕೃತ ಶರೀರ ರಹಿತನಾದ್ದರಿಂದ ನಿರಾಕಾರನೂ ಆಗಿದ್ದಾನೆ. ಸ್ವತಂತ್ರನಾಗಿದ್ದಾನೆ. ಸರ್ವೋತ್ತಮನಾಗಿದ್ದಾನೆ. ಸರ್ವಾಭೀಷ್ಟದಾಯಕನಾಗಿದ್ದಾನೆ. ಸರ್ವರಿಂದ ತಪಸ್ಸು ಮಾಡಿಸುವವನೂ ಅವನೆ, ಅದಕ್ಕೆ ಫಲ ನೀಡುವವನೂ ಅವನೆ. ಸ್ವತಃ ಜ್ಞಾನಸ್ವರೂಪ, ಸರ್ವಾಧಾರ, ಸರ್ವಕಾರಣ. ಕರ್ಮಫಲದಾಯಕ, ಕರ್ಮಕ್ಷಯಕಾರಕ. ಸ್ವತಂತ್ರ ತೇಜೋರೂಪ. ಭಕ್ತಾನುಗ್ರಹಕ್ಕಾಗಿ ನಾನಾ ಅವತಾರ ಮಾಡುತ್ತಾನೆ. ಈ ಅವತಾರ-ಗಳು ಭಕ್ತರ ಧ್ಯಾನಕ್ಕಾಗಿ. ಅವತಾರಗಳನ್ನಲ್ಲದೆ ಮೂಲರೂಪವನ್ನು ಧ್ಯಾನಿಸಲು ಭಕ್ತರು ಶಕ್ತರಲ್ಲ. ಅವನ ರೂಪಗಳೆಲ್ಲವೂ ಕೋಟಿ ಸೂರ್ಯರಂತೆ ಹೊಳೆವ ತೇಜೋಮಂಡಲಗಳೆ.

ಅತ್ಯಂತ ಮನೋಹರ ನೀಲಮೇಘಶ್ಯಾಮ ವರ್ಣ. ಶರತ್ಕಾಲದ ಕಮಲದಂಥ ಕಣ್ಣುಗಳು. ಶರತ್ಕಾಲದ ಹುಣ್ಣಿಮೆಯ ಚಂದ್ರನಂಥ ಮಂದಹಾಸ ಸೂಸುವ ಮುಖ. ಶರೀರದಲ್ಲಿ ಕೋಟಿ ಮನ್ಮಥರ ಲಾವಣ್ಯ ಲಾಸ್ಯವಾಡುತ್ತದೆ. ಮೈಯೆಲ್ಲ ಶ್ರೀಗಂಧದ ಲೇಪ. ರತ್ನಾಲಂಕಾರ ಧರಿಸಿದ್ದಾನೆ. ಪೀತಾಂಬರಧಾರಿಯಾಗಿ ದ್ವಿಭುಜನಾಗಿ ಕೈಯಲ್ಲಿ

ಕೊಳಲು ಹಿಡಿದು ರಾಧೆಯೊಡನೆ ಬಾಲರೂಪದಿಂದ ಕ್ರೀಡಿಸುತ್ತಾನೆ. ಗೋಪಿಯ-ರೊಡನೆ ರಾಸಕ್ರೀಡೆಯಾಡುತ್ತಾನೆ. ಬಾಲಗೋಪಾಲರೂಪದಿಂದ ವೃಂದಾವನದಲ್ಲಿ ಗೋಪಬಾಲರೊಡನೆ ಗೋವುಗಳನ್ನು ಕಾಯುತ್ತಾನೆ. ಗೋಲೋಕದಲ್ಲಿ ವಿರಜಾನದೀ ತೀರದ ಪಾರಿಜಾತವನದಲ್ಲಿ ಗೋಪಿಯರನ್ನು ಮರುಳು ಮಾಡುತ್ತ ಮುರಲೀನಾದ ಗೈಯುತ್ತಾನೆ. ವೈಕುಂಠದಲ್ಲಿ ಲಕ್ಷ್ಮೀರಮಣನಾಗಿ ಚತುರ್ಭುಜನಾಗಿ ಚತುರ್ಭುಜ-ರಾದ ಪಾರ್ಷದರಿಂದ ಪರಿವೃತನಾಗಿರುತ್ತಾನೆ. ಶ್ವೇತದ್ವೀಪದಲ್ಲಿ ಜಗತ್ತಿಗೆ ಪಾಲನ ಕರ್ತನಾಗಿ ವಿಷ್ಣುರೂಪದಿಂದ ಲಕ್ಷ್ಮೀಸಮೇತನಾಗಿರುತ್ತಾನೆ.

ಒಂದು ಅಂಶದಿಂದ ಬ್ರಹ್ಮರೂಪ, ಒಂದು ಅಂಶದಿಂದ ಶಿವರೂಪ, ಒಂದು ಅಂಶದಿಂದ ವಿರಾಡ್ರೂಪನಾಗಿ ರೋಮಕೂಪಗಳಲ್ಲಿ ಬ್ರಹ್ಮಾಂಡ ಧರಿಸುತ್ತಾನೆ.

ಲೀಲೆಯಿಂದ ನಾನಾ ಅವತಾರ ತಾಳುತ್ತಾನೆ. ಯೋಗಿಗಳ ಹೃದಯದಲ್ಲಿ ವಾಸವಾಗಿರುತ್ತಾನೆ. ಪ್ರಾಣಿಗಳಲ್ಲಿ ಪ್ರಾಣರೂಪ ಅವನೆ. ಇಂಥ ಪರಮಾತ್ಮನನ್ನು ಸ್ತೋತ್ರಮಾಡಲು ನಾನು ಅಶಕ್ತಳು. ಅಬಲೆಯಾದ ನಾನೆ ಏಕೆ, ಸಾವಿರಮುಖದ ಶೇಷನೂ ವಾಙ್ಮನಸಾತೀತನಾದ ಆತನನ್ನು ಸ್ತೋತ್ರಮಾಡಲಾರ. ಐದು ಮುಖದ ರುದ್ರನೂ ನಾಲ್ಕು ಮುಖದ ಬ್ರಹ್ಮನೂ ಗಜಮುಖದ ಗಣೇಶನೂ ಆರು ಮುಖದ ಕುಮಾರನೂ, ಶ್ರೀದೇವಿ ಸರಸ್ವತಿಯರೂ ಶಕ್ತರಲ್ಲ. ವೇದಗಳೆ ಶಕ್ತವಲ್ಲವೆಂದಮೇಲೆ ವೇದವೇತ್ತನಾದ ಯಾವ ವಿದ್ವಾಂಸ ತಾನೆ ಶಕ್ತನಾದಾನು ? ಪೂರ್ಣಕಾಮನಾದ ಆತನನ್ನು ಶೋಕಾರ್ತಳಾದ ನಾನು, ಪರಾತ್ಪರನಾದ ಅವನನ್ನು ಓರ್ವ ಅಬಲೆಯಾದ ನಾನು ಏನು ಸ್ತೋತ್ರ ಮಾಡಬಲ್ಲೆ ?'

ಹೀಗೆ ಹೇಳಿ ಮಾಲಾವತಿ ಕಣ್ಣೀರು ಸುರಿಸಿದಳು. ದಯಾನಿಧಿಯಾದ ಕೃಷ್ಣನನ್ನು ಪುನಃ ಪುನಃ ನಮಿಸಿದಳು. ಆಗ ಕೃಷ್ಣ ಗಂಧರ್ವ ಸಹಿತನಾಗಿ ಶವವನ್ನು ಪ್ರವೇಶಿಸಿದ.

ಒಡನೆ ಗಂಧರ್ವನೆದ್ದು ಸ್ನಾನ ಮಾಡಿ ಮಡಿಯುಟ್ಟು ವೀಣೆಧರಿಸಿ ಎದುರಿಗೆ ನಿಂತಿದ್ದ ದೇವತೆಗಳನ್ನು ನಮಿಸಿದ. ದೇವತೆಗಳು ದುಂದುಭಿ ಮೊಳಗಿಸಿ ಮಾಲಾವತೀ ಉಪಬರ್ಹಣ ದಂಪತಿಗಳ ಮೇಲೆ ಹೂಮಳೆಗರೆದರು, ಆಶೀರ್ವದಿಸಿದರು, ಉಪ-ಬರ್ಹಣ ದೇವತೆಗಳ ಮುಂದೆ ಆನಂದದಿಂದ ಹಾಡಿ ಕುಣಿದ. ಬಳಿಕ ಪತ್ನಿಯೊಡನೆ ಮನೆಗೆ ತೆರಳಿದ.

ಗಂಧರ್ವನಗರದಲ್ಲಿ ಮಾಲಾವತಿ ಬ್ರಾಹ್ಮಣರಿಗೆ ಧನಕನಕರತ್ನಾದಿಗಳನ್ನೂ ಮೃಷ್ಟಾನ್ನವನ್ನೂ ನೀಡಿ ವೇದಘೋಷ ಮಾಡಿಸಿದಳು. ಮಂಗಳಮಯವಾದ ದೊಡ್ಡ ಉತ್ಸವವನ್ನೆ ಆಚರಿಸಿದಳು. ದೇವತೆಗಳು ಮಂಗಳಕರವಾದ ಹರಿನಾಮವನ್ನು ಹಾಡಿದರು. ಬ್ರಹ್ಮಚಾರಿ ರೂಪದಿಂದ ಬಂದಿದ್ದ ಹರಿ ತನ್ನ ಧಾಮಕ್ಕೆ ತೆರಳಿದ.

ಮಾಲಾವತಿ ಮಾಡಿದ ಹರಿಸ್ತುತಿಯನ್ನು ಪೂಜಾಕಾಲದಲ್ಲಿ ಪಠಿಸಿದರೆ ಹರಿಭಕ್ತಿ ಹರಿದಾಸ್ಯಗಳು ಲಭಿಸುವುವು. ಧರ್ಮ ಅರ್ಥ ಕಾಮ ಮೋಕ್ಷರೂಪ ಸಕಲ ಪುರುಷಾರ್ಥ ಲಭಿಸುವುದು. ವಿದ್ಯಾರ್ಥಿಗೆ ವಿದ್ಯೆ, ಧನಾರ್ಥಿಗೆ ಧನ, ಭಾರ್ಯಾರ್ಥಿಗೆ ಭಾರ್ಯೆ, ಪುತ್ರಾರ್ಥಿಗೆ ಪುತ್ರ, ಧರ್ಮಾರ್ಥಿಗೆ ಧರ್ಮ, ಯಶೋಽರ್ಥಿಗೆ ಯಶಸ್ಸು, ರಾಜ್ಯಕಳಕೊಂಡವನಿಗೆ ರಾಜ್ಯ, ಸಂತತಿ ಕಳಕೊಂಡವನಿಗೆ ಸಂತತಿ, ರೋಗಾರ್ತನಿಗೆ ರೋಗಮುಕ್ತಿ, ಬಂಧನದಲ್ಲಿರುವವನಿಗೆ ಬಂಧಮುಕ್ತಿ, ಭಯಭೀತನಾದವನಿಗೆ ಭಯದಿಂದ ಮುಕ್ತಿ, ಧನಕಳಕೊಂಡವನಿಗೆ ಧನಪ್ರಾಪ್ತಿ, ದರೋಡೆಕೋರರ ಕೈಗೆ ಸಿಕ್ಕವನಿಗೆ, ಮಹಾರಣ್ಯದಲ್ಲಿ ಕ್ರೂರ ಮೃಗಗಳ ಬಾಧೆಗೊಳಗಾದವನಿಗೆ, ಕಾಳ್ಗಿಚ್ಚಿನಲ್ಲಿ ಸಿಲುಕಿದವನಿಗೆ, ಸಮುದ್ರದಲ್ಲಿ ಮುಳುಗುತ್ತಿರುವವನಿಗೆ ಇವರೆಲ್ಲರಿಗೂ ಅವರ ಎಲ್ಲ ಆಪತ್ತಿನಿಂದ ಬಿಡುಗಡೆ ಈ ಸ್ತೋತ್ರ ಪಾಠದ ಫಲ.

**ಇಲ್ಲಿಗೆ ಶ್ರೀ ಬ್ರಹ್ಮವೈವರ್ತ ಮಹಾಪುರಾಣದ ಸೌತಿ ಶೌನಕ ಸಂವಾದದಲ್ಲಿ ಗಂಧರ್ವಜೀವ ದಾನದಲ್ಲಿ ಮಹಾಪುರುಷ ಸ್ತೋತ್ರ-ಪ್ರಣಯನವೆಂಬ ಹದಿನೆಂಟನೆ ಅಧ್ಯಾಯ ಮುಗಿಯಿತು.**

## ವಿಷ್ಣು ಶಂಕರ ಸ್ತೋತ್ರ ಕಥನ

**ಅಧ್ಯಾಯ-೧೯**

ಮಾಲಾವತಿ ಬ್ರಾಹ್ಮಣರಿಗೆ ದ್ರವ್ಯದಾನ ಮಾಡಿ, ಪತಿಗೆ ಸಂತೋಷವಾಗುವಂತೆ ವೇಷಗಳಿಂದ ಭೂಷಿತಳಾದಳು. ಪತಿಗೆ ಶುಶ್ರೂಷೆ ಮಾಡಿದಳು. ಶೃಂಗಾರ ರಸಿಕಳಾದ್ದರಿಂದ ಪತಿಯೊಡನೆ ಬಹುಕಾಲ ರಮಿಸಿದಳು.

ಪತಿಗೆ ಮರೆತುಹೋಗಿದ್ದ ಮಹಾಪುರುಷಸ್ತೋತ್ರ ಪೂಜೆ ಕವಚ ಮಂತ್ರಗಳನ್ನು ತಾನೆ ಏಕಾಂತದಲ್ಲಿ ನೆನಪಿಗೆ ತಂದುಕೊಟ್ಟಳು.

ಹರಿಹರರ ಸ್ತೋತ್ರ ಪೂಜಾದಿಗಳನ್ನೂ ದ್ವಾದಶಾಕ್ಷರ ಮಂತ್ರಗಳನ್ನೂ ಹಿಂದೆ ವಸಿಷ್ಠರು ಉಪಬರ್ಹಣನಿಗೆ ಉಪದೇಶಿಸಿದ್ದರು. ಅವುಗಳಲ್ಲಿ ಮರೆತುಹೋದ ಸ್ತೋತ್ರ ಕವಚಾದಿಗಳನ್ನು ದಯಾನಿಧಿಗಳಾದ ವಸಿಷ್ಠರೆ ತಿರುಗಿ ಉಪದೇಶಿಸಿದರು.

ಕುಬೇರ ಭವನದಂಥ ತನ್ನ ಆಶ್ರಮದಲ್ಲಿ ಬಾಂಧವರಿಂದೊಡಗೂಡಿ ಪರಮಾನಂದದಿಂದ ಗಂಧರ್ವ ರಾಜ್ಯವಾಳಿದ, ಉಪಬರ್ಹಣ.

ಶೌನಕರು ಕೇಳಿದರು— ಗಂಧರ್ವದಂಪತಿಗಳಿಗೆ ವಸಿಷ್ಠರು ಉಪದೇಶಿಸಿದ ವಿಷ್ಣುವಿನ ಸ್ತೋತ್ರ ಕವಚಮಂತ್ರ ಪೂಜಾವಿಧಿಗಳಾವುವು? ಶಿವನ ದ್ವಾದಶಾಕ್ಷರ ಮಂತ್ರ ಸ್ತೋತ್ರಕವಚಗಳಾವುವು? ಅವುಗಳನ್ನು ಹೇಳು. ಕೇಳುವ ಕುತೂಹಲ, ನನಗೆ.

ಸೌತಿ— ಮಾಲಾವತಿ ಭಗವಂತನನ್ನು ಸ್ತುತಿಸಿದುದೆ ಹಿಂದೆ ಉಪಬರ್ಹಣ ವಸಿಷ್ಠರಿಂದ ಉಪದೇಶ ಪಡೆದ ಮಂತ್ರವಾಗಿತ್ತು. ಇನ್ನು ವಸಿಷ್ಠರೆ ಉಪದೇಶಿಸಿದ ಮಂತ್ರ ಕವಚಗಳನ್ನು ಹೇಳುತ್ತೇನೆ ಕೇಳು.

'ಓಂ ನಮೋ ಭಗವತೇ ರಾಸಮಂಡಲೇಶಾಯ ಸ್ವಾಹಾ'

'ರಾಸಮಂಡಲದೊಡೆಯನಾದ ಭಗವಂತನಿಗಿದೊ ನಮಸ್ಕಾರ' ಎನ್ನುವ ಈ ಹದಿನಾರು ಅಕ್ಷರಗಳ ಮಂತ್ರ ಕಲ್ಪವೃಕ್ಷದಂತೆ ಸರ್ವಾಭೀಷ್ಟಪ್ರದವಾಗಿದೆ. ಇದನ್ನು ವಸಿಷ್ಠರು ಉಪಬರ್ಹಣನಿಗೆ ಉಪದೇಶಿಸಿದ್ದರು. ಹಿಂದೆ ಇದನ್ನೆ ಪುಷ್ಕರಕ್ಷೇತ್ರದಲ್ಲಿ ಬ್ರಹ್ಮ ಷಣ್ಮುಖನಿಗೆ ಉಪದೇಶಿಸಿದ್ದ. ಕೃಷ್ಣನೂ ಗೋಲೋಕದಲ್ಲಿ ಶಿವನಿಗೆ ಇದೇ ಮಂತ್ರ ಉಪದೇಶಿಸಿದ್ದ. ಈ ಮಂತ್ರಸಾಧಕ ವೇದೋಕ್ತ ರೀತಿಯಿಂದ ವಿಷ್ಣು ಧ್ಯಾನಮಾಡಿ ನೈವೇದ್ಯಾದಿ ಉಪಚಾರಗಳನ್ನು ಅರ್ಪಿಸಬೇಕು.

ಅತ್ಯಂತ ಗೋಪ್ಯವಾದ ವಿಷ್ಣುಕವಚವನ್ನು ನಾನು ನಮ್ಮ ತಂದೆಯಿಂದ ಉಪದೇಶ ಪಡೆದಿದ್ದೇನೆ. ತಂದೆಗೆ ಹಿಂದೆ ಗಂಗಾತೀರದಲ್ಲಿ ಶಿವ ಉಪದೇಶಿಸಿದ್ದ. ಶಿವ ಬ್ರಹ್ಮ ಧರ್ಮರಿಗೆ ಗೋಲೋಕದ ರಾಸಮಂಡಲದಲ್ಲಿ ಕೃಷ್ಣ ಉಪದೇಶಿಸಿದ್ದ.

ಬ್ರಹ್ಮ ಕೃಷ್ಣನನ್ನು ಪ್ರಾರ್ಥಿಸಿದ, 'ಪ್ರಭು, ನನಗೂ ಶಿವನಿಗೂ ಧರ್ಮನಿಗೂ ಪ್ರಪಂಚದಲ್ಲಿಯೆ ಅತಿ ಪವಿತ್ರವಾದ ನಿನ್ನ ಕವಚಮಂತ್ರ ಉಪದೇಶಿಸು. ನಾನು ಮುಂದೆ ನಿನ್ನ ಅನುಗ್ರಹದಿಂದ ಅದನ್ನು ಮಕ್ಕಳಿಗೆ ಉಪದೇಶಿಸುತ್ತೇನೆ.'

ಕೃಷ್ಣ ಹೇಳಿದ, 'ಗೋಪ್ಯವಾದ ಸುದುರ್ಲಭವಾದ ಈ ಕವಚವನ್ನು ನಿಮಗೆ ಈಗ ಉಪದೇಶಿಸುತ್ತೇನೆ, ಕೇಳಿ. ಇದನ್ನು ಯಾರಾರಿಗೋ ಉಪದೇಶಿಸಬೇಡಿ. ಇದು ನನಗೆ ಪ್ರಾಣಕ್ಕೆ ಸಮಾನ. ನನ್ನ ಶರೀರದಲ್ಲಿ ಯಾವ ತೇಜಸ್ಸು ಇದೆಯೋ ಅದೇ ಈ ಕವಚದಲ್ಲಿಯೂ ಇದೆ. ಈ ಕವಚಧಾರಣ ಮಾಡಿ ಜಗತ್ ಸೃಷ್ಟಿಮಾಡು. ಸೃಷ್ಟಿಕರ್ತ-ನೆನಿಸು. ಶಿವ, ನೀನು ಸಂಹಾರಕರ್ತನೆನಿಸು, ನನ್ನಂತೆ ಕೀರ್ತಿಶಾಲಿಯಾಗು, ಧರ್ಮ, ನೀನು ಕರ್ಮಸಾಕ್ಷಿ ಎನಿಸು. ನೀವೆಲ್ಲ ಈ ಮಂತ್ರಬಲದಿಂದ ತಪಸ್ಸುಗಳಿಗೆ ಫಲದಾಯಕರೆನಿಸಿರಿ. ನಿಮಗೆ ಹಾಗೆ ವರನೀಡುತ್ತಿದ್ದೇನೆ.

ಪ್ರಪಂಚದಲ್ಲೆ ಅತ್ಯಂತ ಪವಿತ್ರವಾದ ಈ ಕವಚಕ್ಕೆ ಸ್ವಯಂ ಹರಿಯೆ ಋಷಿ. ಗಾಯತ್ರಿ ಛಂದಸ್ಸು. ನಾನೆ ದೇವತೆ. ಧರ್ಮ ಅರ್ಥ ಕಾಮ ಮೋಕ್ಷ ಎಲ್ಲಕ್ಕೂ ಈ ಮಂತ್ರ ಸಾಧನೆ ಉಪಾಯವಾಗಬಲ್ಲುದು. ಮೂರು ಲಕ್ಷ ಬಾರಿ ಜಪಿಸಿದ್ದರೆ ಸಿದ್ಧಿ. ಸಿದ್ಧಿಯಾಯಿತೆಂದರೆ ಆ ಸಾಧಕ ಜ್ಞಾನ ತೇಜಸ್ಸು ಪರಾಕ್ರಮಗಳಲ್ಲಿ ನನಗೆ ಸಮಾನನಾಗುವನು.

ಪ್ರಣವೋ ಮೇ ಶಿರಃ ಪಾತು ನಮೋ ರಾಸೇಶ್ವರಾಯ ಚ ।
ಭಾಲಂ ಪಾಯಾನ್ನೇತ್ರಯುಗ್ಮಂ ನಮೋ ರಾಧೇಶ್ವರಾಯ ಚ ॥

ಪ್ರಣವ ಮಂತ್ರ ನನ್ನ ಶಿರಸ್ಸನ್ನು ಕಾಪಾಡಲಿ. 'ನಮೋ ರಾಸೇಶ್ವರಾಯ' ಎಂಬ ಮಂತ್ರ ಹಣೆಯನ್ನು ಕಾಪಾಡಲಿ. 'ನಮೋ ರಾಧೇಶ್ವರಾಯ' ಎಂಬ ಮಂತ್ರ ಎರಡು ಕಣ್ಣುಗಳನ್ನು ರಕ್ಷಿಸಲಿ.

**'ಕೃಷ್ಣ' ಪಾಯಾತ್ ಶ್ರೋತ್ರಯುಗ್ಮಂ 'ಹೇ ಹರೇ' ಘ್ರಾಣಮೇವ ಚ ।**
**ಜಿಹ್ವಿಕಾಂ ವಹ್ನಿಜಾಯಾತು ಕೃಷ್ಣಾಯೇತಿ ಚ ಸರ್ವತಃ ॥**

'ಕೃಷ್ಣ' ಎಂಬ ಮಂತ್ರ ಕಿವಿಗಳೆರಡನ್ನು ರಕ್ಷಿಸಲಿ. 'ಹೇ ಹರೇ' ಎಂಬ ಮಂತ್ರ ಮೂಗನ್ನು ರಕ್ಷಿಸಲಿ. 'ಕೃಷ್ಣಾಯ ಸ್ವಾಹಾ' ಎಂಬ ಮಂತ್ರ ನಾಲಿಗೆಯನ್ನು ರಕ್ಷಿಸಲಿ.

**ಶ್ರೀಕೃಷ್ಣಾಯ ಸ್ವಾಹೇತಿ ಚ ಕಂಠಂ ಪಾತು ಷಡಕ್ಷರಃ ।**
**ಹ್ರೀಂ ಕೃಷ್ಣಾಯ ನಮೋ ವಕ್ತ್ರಂ ಕ್ಲೀಂ ಪೂರ್ವಶ್ಚ ಭುಜದ್ವಯಂ ॥**

'ಶ್ರೀಕೃಷ್ಣಾಯ ಸ್ವಾಹಾ' ಎಂಬ ಷಡಕ್ಷರ ಮಂತ್ರ ಕಂಠವನ್ನು ರಕ್ಷಿಸಲಿ. 'ಹ್ರೀಂ ಕೃಷ್ಣಾಯ ನಮಃ' ಎಂಬ ಮಂತ್ರ ಮುಖವನ್ನು ರಕ್ಷಿಸಲಿ. 'ಕ್ಲೀಂ ಕೃಷ್ಣಾಯ ನಮಃ' ಎಂಬ ಮಂತ್ರ ಎರಡು ಭುಜಗಳನ್ನು ರಕ್ಷಿಸಲಿ.

**ನಮೋ ಗೋಪಾಂಗನೇಶಾಯ ಸ್ಕಂದಾವಷ್ಟಾಕ್ಷರೋಽವತು ।**
**ದಂತಪಂಕ್ತಿಮೋಷ್ಠಯುಗ್ಮಂ ನಮೋ ಗೋಪೀಶ್ವರಾಯ ಚ ॥**

'ನಮೋ ಗೋಪಾಂಗನೇಶಾಯ' ಎಂಬ ಅಷ್ಟಾಕ್ಷರ ಮಂತ್ರ ಹೆಗಲುಗಳನ್ನು ರಕ್ಷಿಸಲಿ, 'ನಮೋ ಗೋಪೀಶ್ವರಾಯ' ಮಂತ್ರ ದಂತಪಂಕ್ತಿ ಮತ್ತು ಎರಡು ತುಟಿಗಳನ್ನು ರಕ್ಷಿಸಲಿ.

**ಓಂ ನಮೋ ಭಗವತೇ ರಾಸಮಂಡಲೇಶಾಯ ಸ್ವಾಹಾ ।**
**ಸ್ವಯಂ ವಕ್ಷಃಸ್ಥಲಂ ಪಾತು ಮಂತ್ರೋಽಯಂ ಷೋಡಶಾಕ್ಷರಃ ॥**

'ಓಂ ನಮೋ ಭಗವತೇ ರಾಸ ಮಂಡಲೇಶಾಯ ಸ್ವಾಹಾ' ಎಂಬ ಷೋಡಶಾಕ್ಷರ ಮಂತ್ರ ಎದೆಯನ್ನು ಕಾಪಾಡಲಿ.

**ಐಂ ಕೃಷ್ಣಾಯ ಸ್ವಾಹೇತಿಚ ಕರ್ಣಯುಗ್ಮಂ ಸದಾವತು ।**
**ಓಂ ವಿಷ್ಣವೇ ಸ್ವಾಹೇತಿ ಚ ಕಪೋಲಂ ಸರ್ವತೋಽವತು ॥**

'ಐಂ ಕೃಷ್ಣಾಯ ಸ್ವಾಹಾ' ಎಂಬ ಮಂತ್ರ ಎರಡು ಕಿವಿಗಳನ್ನು ರಕ್ಷಿಸಲಿ. 'ಓಂ ವಿಷ್ಣವೇ ಸ್ವಾಹಾ' ಎಂಬ ಮಂತ್ರ ಕಪೋಲವನ್ನು ರಕ್ಷಿಸಲಿ.

**ಓಂ ಹರಯೇ ನಮ ಇತಿ ಪೃಷ್ಠಂ ಪಾದಂ ಸದಾವತು ।**
**ಓಂ ಗೋವರ್ಧನ ಧಾರಿಣೇ ಸ್ವಾಹಾ ಸರ್ವಶರೀರಕಂ ।**

ಓಂ ಹರಯೇ ನಮಃ ಎಂಬ ಮಂತ್ರ ಬೆನ್ನನ್ನೂ ಪಾದವನ್ನೂ ರಕ್ಷಿಸಲಿ. 'ಓಂ ಗೋವರ್ಧನ ಧಾರಿಣೇ ಸ್ವಾಹಾ' ಎಂಬ ಮಂತ್ರ ಇಡೀ ಶರೀರವನ್ನು ರಕ್ಷಿಸಲಿ.

**ಪ್ರಾಚ್ಯಾಂ ಮಾಂ ಪಾತು ಶ್ರೀಕೃಷ್ಣ ಆಗ್ನೇಯ್ಯಾಂ ಪಾತು ಮಾಧವಃ ।**
**ದಕ್ಷಿಣೇ ಪಾತು ಗೋಪೀಶೋ ನೈಋತ್ಯಾಂ ನಂದನಂದನಃ ॥**

**ವಾರುಣ್ಯಾಂ ಪಾತು ಗೋವಿಂದೋ ವಾಯವ್ಯಾಂ ರಾಧಿಕೇಶ್ವರಃ ।**
**ಉತ್ತರೇ ಪಾತು ರಾಸೇಶಃ ಐಶಾನ್ಯಾಮಚ್ಯುತಃ ಸ್ವಯಂ ।**
**ಸತತಂ ಸರ್ವತಃ ಪಾತು ಪರೋ ನಾರಾಯಣಃ ಸ್ವಯಂ ॥**

ಪೂರ್ವದಿಕ್ಕಿನಲ್ಲಿ ಶ್ರೀಕೃಷ್ಣ, ಆಗ್ನೇಯದಲ್ಲಿ ಮಾಧವ, ದಕ್ಷಿಣದಲ್ಲಿ ಗೋಪೀಶ, ನೈಋತ್ಯದಲ್ಲಿ ನಂದನಂದನ, ಪಶ್ಚಿಮದಲ್ಲಿ ಗೋವಿಂದ, ವಾಯವ್ಯದಲ್ಲಿ ರಾಧಿಕೇಶ್ವರ ಉತ್ತರದಲ್ಲಿ ರಾಸೇಶ, ಈಶಾನ್ಯದಲ್ಲಿ ಅಚ್ಯುತ, ಎಲ್ಲಕಡೆ ಸ್ವಯಂ ನಾರಾಯಣ ನನ್ನನ್ನು ರಕ್ಷಿಸಲಿ.

ನನಗೆ ಪ್ರಾಣಸಮಾನವಾಗಿ ಪ್ರಾಯವೆನಿಸಿದ ಈ ಕವಚವನ್ನು ನಿಮಗೆ ಈಗ ಉಪದೇಶಿಸಿದ್ದೇನೆ. ಸಾವಿರಾರು ಅಶ್ವಮೇಧಗಳಾಗಲಿ ನೂರಾರು ವಾಜಪೇಯ-ಗಳಾಗಲಿ ಈ ಕವಚಧಾರಣೆಯ ಹದಿನಾರನೆ ಒಂದಂಶಕ್ಕೆ ಸಮವಲ್ಲ.

ಗುರುವನ್ನು ವಿದ್ಯುಕ್ತವಾಗಿ ವಸ್ತ್ರಾಲಂಕಾರ ಸುಗಂಧ ದ್ರವ್ಯಗಳಿಂದ ಸತ್ಕರಿಸಿ ತಾನು ಸ್ನಾನಮಾಡಿ ಕವಚಧಾರಣ ಮಾಡಬೇಕು. ಅದರಿಂದ ಮಾನವ ಜೀವನ್ಮುಕ್ತ-ನಾಗುತ್ತಾನೆ. ಕವಚದ ಸಿದ್ಧಿ ಪಡೆದರೆ ಸಾಕ್ಷಾತ್ ವಿಷ್ಣುವಿಗೆ ಸಮನಾಗುತ್ತಾನೆ.

ಸೌತಿ— ಶಿವಕವಚವನ್ನೂ, ಸ್ತೋತ್ರವನ್ನೂ ಹೇಳುತ್ತೇನೆ ಕೇಳಿ. ಅದನ್ನೂ ವಸಿಷ್ಠರು ಪುಷ್ಕರಕ್ಷೇತ್ರದಲ್ಲಿ ಉಪಬರ್ಹಣನಿಗೆ ಉಪದೇಶಿಸಿದ್ದರು. ಹಿಂದೆ ಇದೇ ಮಂತ್ರವನ್ನು ಬ್ರಹ್ಮ ರಾವಣನಿಗೆ ಉಪದೇಶಿಸಿದ್ದ. ಶಿವ ಬಾಣನಿಗೆ ಮತ್ತು ದೂರ್ವಾಸನಿಗೆ ಉಪದೇಶಿಸಿದ್ದ. 'ಓಂ ನಮೋ ಭಗವತೇ ಶಿವಾಯ ಸ್ವಾಹಾ' ಎಂಬುದೇ ಆ ಮಂತ್ರ.

ಬಾಣಾಸುರ ಶಿವನನ್ನು ಪ್ರಾರ್ಥಿಸಿದ— 'ಮಹೇಶ್ವರ, ನನಗೆ ಸಂಸಾರದಿಂದ ಪಾವನಗೊಳಿಸುವ ಕವಚವನ್ನು ಉಪದೇಶಿಸು.'

ಶಿವ ಹೇಳಿದ— ವತ್ಸ, ನಿನಗೆ ಪರಮಾದ್ಭುತವಾದ ಗೋಪ್ಯ ಸುದುರ್ಲಭವಾದ ಕವಚವನ್ನು ಉಪದೇಶಿಸುವೆ. ಹಿಂದೆ ಇದನ್ನೇ ನಾನು ದುರ್ವಾಸನಿಗೆ ತ್ರೈಲೋಕ್ಯ ವಿಜಯಶಕ್ತಿಗಾಗಿ ಉಪದೇಶಿಸಿದ್ದೆ. ಈ ಕವಚವನ್ನು ಭಕ್ತಿಯಿಂದ ಧರಿಸುವವ ಅನಾಯಾಸವಾಗಿ ಮೂಲೋಕವನ್ನು ಗೆಲ್ಲಬಲ್ಲ. ಇದಕ್ಕೆ ಪ್ರಜಾಪತಿ ಋಷಿ. ಗಾಯತ್ರಿ

ಛಂದಸ್ಸು. ನಾನೆ ದೇವತೆ. ಧರ್ಮ ಅರ್ಥ ಕಾಮ ಮೋಕ್ಷ ಪ್ರಾಪ್ತಿಗೆ ಕಾರಣವಾಗುತ್ತದೆ ಈ ಕವಚ ಸಾಧನೆ. ಸಿದ್ಧಿಪಡೆದರೆ ಸಾಧಕ ತೇಜಸ್ಸು ತಪಸ್ಸು ಪರಾಕ್ರಮಗಳಲ್ಲಿ ನನಗೆ ಸಮನಾಗುತ್ತಾನೆ.

ಶಂಭುರ್ಮೇ ಮಸ್ತಕಂ ಪಾತು ಮುಖಂ ಪಾತು ಮಹೇಶ್ವರಃ ।
ದಂತಪಂಕ್ತಿಂ ನೀಲಕಂಠೋಽಪ್ಯಧರೋಷ್ಠಂ ಹರಃ ಸ್ವಯಂ
ಕಂಠಂ ಪಾತು ಚಂದ್ರಚೂಡಃ ಸ್ಕಂಧೌ ವೃಷಭವಾಹನಃ ।
ವಕ್ಷಃಸ್ಥಲಂ ನೀಲಕಂಠಃ ಪಾತು ಪೃಷ್ಠಂ ದಿಗಂಬರಃ ।
ಸರ್ವಾಂಗಂ ಪಾತು ವಿಶ್ವೇಶಃ ಸರ್ವ ದಿಕ್ಷು ಚ ಸರ್ವದಾ ।
ಸ್ವಪ್ನೇ ಜಾಗರಣೇ ಚೈವ ಸ್ಥಾಣುರ್ಮೇ ಪಾತು ಸಂತತಂ ॥

ಶಂಭು ನನ್ನ ಶಿರಸ್ಸನ್ನೂ, ಮಹೇಶ್ವರ ಮುಖವನ್ನೂ ನೀಲಕಂಠ ದಂತ-ಪಂಕ್ತಿಯನ್ನೂ, ಹರನು ಕೆಳತುಟಿಯನ್ನೂ, ಚಂದ್ರಚೂಡ ಕಂಠವನ್ನೂ, ವೃಷಭವಾಹನ ಹೆಗಲುಗಳನ್ನೂ, ನೀಲಕಂಠ ಎದೆಯನ್ನೂ, ದಿಗಂಬರ ಬೆನ್ನನ್ನೂ, ವಿಶ್ವೇಶ ಸರ್ವಾಂಗವನ್ನೂ ರಕ್ಷಿಸಲಿ. ಎಲ್ಲ ದಿಕ್ಕುಗಳಲ್ಲಿಯೂ ಸ್ವಪ್ನಜಾಗರಗಳಲ್ಲಿಯೂ ಸ್ಥಾಣು ನನ್ನನ್ನು ರಕ್ಷಿಸಲಿ.

ಬಾಣ, ನಿನಗೆ ಪರಮಾದ್ಭುತವಾದ ಕವಚವನ್ನು ಉಪದೇಶಿಸಿದ್ದೇನೆ. ಇದನ್ನು ಯಾರಾರಿಗೋ ಉಪದೇಶಿಸಬೇಡ. ಪ್ರಯತ್ನಪೂರ್ವಕವಾಗಿ ಕಾಪಾಡಿಕೊಂಡಿರು. ಸರ್ವತೀರ್ಥಸ್ನಾನದ ಫಲಕವಚಧಾರಣದಿಂದಲೆ ಲಭಿಸುತ್ತದೆ. ಈ ಕವಚ ಉಪದೇಶ ಪಡೆಯದೆ ನೂರುಲಕ್ಷ ಜಪ ಮಾಡಿದರೂ ಯಾವ ಮಂತ್ರವೂ ಸಿದ್ಧಿಸದು.'

ಸೌತಿ— ಇದು ಶಿವಕವಚ. ಇನ್ನು ಶಿವಸ್ತೋತ್ರವನ್ನು ಹೇಳುತ್ತೇನೆ, ಕೇಳು. ಈ ಶ್ರೇಷ್ಠ ಮಂತ್ರ ಕಲ್ಪವೃಕ್ಷದಂತೆ ಸರ್ವಾಭೀಷ್ಟದಾಯಕ. ಇದೂ ಹಿಂದೆ ವಸಿಷ್ಠಮುನಿ ಉಪದೇಶಿಸಿದ ಮಂತ್ರವೆ.

ಬಾಣಾಸುರ ಹೀಗೆ ಸ್ತೋತ್ರ ಮಾಡಿದ-

'ದೇವೋತ್ತಮ, ದೇವೇಶ, ಯೋಗಿವರ್ಯ, ಯೋಗಿ ಗುರು, ಯೋಗ-ಕಾರಣನಾದ ಹೇ ಶಿವನೆ, ನಿನಗಿದೋ ನಮಸ್ಕಾರ. ಜ್ಞಾನಾನಂದಮಯ ಜ್ಞಾನರೂಪ ಜ್ಞಾನಕಾರಣ ಸನಾತನ, ತಪಸ್ಸುಗಳಿಗೆ ಫಲದಾಯಕ, ಸರ್ವ ಸಂಪತ್ಪ್ರದ, ತಪಸ್ಸಿಗೆ ಪ್ರೇರಕ, ತಪೋರೂಪ ತಪೋಧನ ಪೂಜ್ಯ, ಅಭೀಷ್ಟದಾಯಕ, ಸಿದ್ಧಗಣ ವಂದ್ಯ, ಭುಕ್ತಿ ಮುಕ್ತಿಪ್ರದ, ನರಕಾರ್ಣವ ತಾರಕ, ಬೇಗ ಒಲಿಯುವವ, ಪ್ರಸನ್ನಮುಖ ಕರುಣಾಸಾಗರ ಹಿಮ ಚಂದನಗಂಧ ಕುಂದ ಪುಷ್ಪ ಚಂದ್ರ ಕಮಲಗಳಂತೆ ಮೈಬಣ್ಣ ಉಳ್ಳವ, ಬ್ರಹ್ಮಜ್ಯೋತಿಃಸ್ವರೂಪ, ಭಕ್ತಾನುಗ್ರಹಕ್ಕಾಗಿ ಅವತರಿಸುವವ, ಬಹುರೂಪ-

ಧಾರಕ, ಪೃಥ್ವಿಜಲ ಅಗ್ನಿ ಆಕಾಶ ವಾಯು ಚಂದ್ರಸೂರ್ಯ ಯಜಮಾನ ರೂಪನಾಗಿರುವವ. ಅನಾಯಾಸವಾಗಿ ಭಕ್ತರಿಗೆ ತನ್ನ ಲೋಕ ಕೊಡುವವ, ಭಕ್ತರ ಜೀವನಾಧಾರ, ಭಕ್ತಾನುಗ್ರಹಕಾರಕ -ಇಂಥ ಶಿವನನ್ನು ವೇದಗಳೂ ಸ್ತೋತ್ರ ಮಾಡಲು ಶಕ್ತವಾಗಲಾರವು. ನಾನೇನು ಸ್ತೋತ್ರ ಮಾಡಬಲ್ಲೆ ? ಅಪರಿಮಿತ, ವಾಙ್ಮನಸುಗಳಿಗೆ ಅತೀತ, ವ್ಯಾಘ್ರಚರ್ಮ ಉಟ್ಟವ, ವೃಷಭವಾಹನ, ದಿಗಂಬರ, ತ್ರಿಶೂಲ ಪಟ್ಟಿಶಗಳನ್ನು ಧರಿಸಿದವ, ಮಂದಹಾಸಯುಕ್ತ, ಚಂದ್ರಶೇಖರ, ಇಂಥ ಶಿವನಿಗೆ ವಂದನೆಗಳು.

ಸೌತಿ— ಹೀಗೆ ಪ್ರತಿದಿನ ಭಕ್ತಿಯಿಂದ ಬಾಣನೂ ದೂರ್ವಾಸನೂ ಶಿವನನ್ನು ಸ್ತೋತ್ರಮಾಡಿ ನಮಿಸಿದರು. ಶಿವನ ಈ ಮಹಾಸ್ತೋತ್ರವನ್ನು ವಸಿಷ್ಠರು ಉಪಬರ್ಹಣನಿಗೆ ಹಿಂದೆ ಉಪದೇಶಿಸಿದ್ದರು. ಅದನ್ನೆ ನಿಮಗೆ ನಾನು ಹೇಳಿದ್ದೇನೆ. ಇದನ್ನು ಭಕ್ತಿಯಿಂದ ಪಠಿಸುವವನು ಸರ್ವತೀರ್ಥಸ್ನಾನದ ಫಲವನ್ನು ಹೊಂದುತ್ತಾನೆ. ಪುತ್ರರಿಲ್ಲದವರೂ ಕುಷ್ಠಶೂಲ ರೋಗಿಗಳೂ ಒಂದು ವರ್ಷ ಈ ಸ್ತೋತ್ರ ಶ್ರವಣ ಮಾಡಬೇಕು. ಹವಿಷ್ಯಾನ್ನ ಉಣ್ಣುತ್ತ ಇಂದ್ರಿಯ ನಿಗ್ರಹ ಮಾಡಿಕೊಳ್ಳಬೇಕು. ಗುರುವಾದ ಶಿವನನ್ನು ನಮಿಸಬೇಕು. ಆಗ ಪುತ್ರಲಾಭ ಹಾಗೂ ರೋಗಗಳಿಂದ ಮುಕ್ತಿ ದೊರೆಯುವುದು ಎಂದು ವ್ಯಾಸರು ಹೇಳಿದ್ದಾರೆ. ಕಾರಾಗೃಹದಲ್ಲಿ ಬದ್ಧನಾಗಿ ಬಿಡುಗಡೆ ಕಾಣದವನು ಒಂದು ತಿಂಗಳ ಕಾಲ ಈ ಸ್ತೋತ್ರ ಪಠಿಸಿದರೆ ಬಿಡುಗಡೆ-ಯಾಗುವುದು. ಒಂದು ತಿಂಗಳ ಕಾಲ ಶ್ರವಣದಿಂದ ರಾಜ್ಯಕಳೆದುಕೊಂಡವನಿಗೆ ಪುನಃ ರಾಜ್ಯಲಾಭ, ಸಂಪತ್ತನ್ನು ಕಳೆದುಕೊಂಡವನಿಗೆ ಪುನಃ ಸಂಪತ್‌ಪ್ರಾಪ್ತಿ, ಕ್ಷಯ ರೋಗಗ್ರಸ್ತನು ಒಂದು ವರ್ಷ ಸ್ತೋತ್ರಶ್ರವಣ ಮಾಡಿದರೆ ಶಿವನ ಅನುಗ್ರಹದಿಂದ ನಿಶ್ಚಯವಾಗಿ ರೋಗಮುಕ್ತಿ. ಸದಾಶ್ರವಣ ಮಾಡುವವನಿಗೆ ಮೂಲೋಕದಲ್ಲಿ ಅಸಾಧ್ಯವೆಂಬುದು ಒಂದೂ ಇರಲಾರದು. ಅವನಿಗೆ ಎಂದೂ ಬಂಧುವಿಯೋಗವಿಲ್ಲ. ಸ್ಥಿರವಾದ ಮಹಾ ಐಶ್ವರ್ಯಲಾಭ. ಇದರಲ್ಲಿ ಸಂಶಯವಿಲ್ಲ. ಸಂಯಮಯುಕ್ತನಾಗಿ ಭಕ್ತಿಯಿಂದ ಒಂದು ತಿಂಗಳು ಶ್ರವಣ ಮಾಡಿದರೆ ಹೆಂಡತಿಯಿಲ್ಲದವ ವಿನೀತಳಾದ ಪತಿವ್ರತೆಯಾದ ಹೆಂಡತಿಯನ್ನು ಪಡೆಯುತ್ತಾನೆ. ಮಹಾಮೂರ್ಖನಾದ ಮಂದ ಬುದ್ಧಿಯವನೂ ಗುರೂಪದೇಶ ಮಾತ್ರದಿಂದ ವಿದ್ಯೆಬುದ್ಧಿಗಳನ್ನು ಪಡೆಯುತ್ತಾನೆ. ದರಿದ್ರನಾಗಿದ್ದು ಕರ್ಮ ಮಾಡುತ್ತ ಬಳಲುವವ ಶಿವನ ಅನುಗ್ರಹದಿಂದ ಸಂಪತ್ತನ್ನು ಪಡೆಯುತ್ತಾನೆ. ನಿತ್ಯ ಮೂರು ಸಂಧ್ಯೆಗಳಲ್ಲಿ ಶ್ರವಣ ಮಾಡುವವನು ಈ ಲೋಕದಲ್ಲಿ ಸುಖ ಕೀರ್ತಿ ಸಂಪಾದಿಸಿ ಕೊನೆಯಲ್ಲಿ ಶಿವಲೋಕ ಸೇರುತ್ತಾನೆ. ಶಿವನ ಉತ್ತಮ ಪಾರ್ಷದನೆನಿಸಿ ಸೇವೆ ಮಾಡುತ್ತಾನೆ.

**ಇಲ್ಲಿಗೆ ಶ್ರೀ ಬ್ರಹ್ಮವೈವರ್ತ ಮಹಾಪುರಾಣದ ಸೌತಿ ಶೌನಕ ಸಂವಾದದಲ್ಲಿ ವಿಷ್ಣು ಶಂಕರ ಸ್ತೋತ್ರ ಕಥನವೆಂಬ ಹತ್ತೊಂಬತ್ತನೆ ಅಧ್ಯಾಯ ಮುಗಿಯಿತು.**

## ಉಪಬರ್ಹಣ ಜನ್ಮಕಥನ

## ಅಧ್ಯಾಯ-೨೦

ಉಪಬರ್ಹಣ ಗಂಧರ್ವ ಉಳಿದ ತನ್ನ ಜೀವಿತಕಾಲವೆಲ್ಲ ಮಾಲಾವತಿ ಹಾಗೂ ಇತರ ಸ್ತ್ರೀಯರೊಡನೆ ನಿರ್ಜನವನದಲ್ಲಿ ಸಂತೋಷದಿಂದ ವಿಹರಿಸಿದ. ಅವನ ತಂದೆಯಾದ ಗಂಧರ್ವರಾಜ ಪತ್ನೀಪುತ್ರಸಹಿತನಾಗಿ ನಾನಾವಿಧ ಯಜ್ಞಗಳನ್ನು ಮಾಡಿ ಮಹತ್ತಾದ ಪುಣ್ಯಗಳಿಸಿದ. ರಾಜಪದವಿಯಮ್ನೂ ಭೋಗಿಸಿದ. ಸ್ಥಿರಯೌವನವತಿಯೂ ಸುಶೀಲೆಯೂ ಆದ ಪತ್ನಿಯೊಡನೆ ಕುಬೇರ ಭವನದಂಥ ಅರಮನೆಯಲ್ಲಿ ಸುಖವನುಭವಿಸಿದ. ಅಂತ್ಯದಲ್ಲಿ ಪತ್ನೀ ಸಹಿತನಾಗಿ ಗಂಗಾತೀರದಲ್ಲಿ ಅಸುನೀಗಿ ವೈಕುಂಠಕ್ಕೆ ತೆರಳಿದ.

ಉಪಬರ್ಹಣ ತಂದೆ ತಾಯಿಗಳಿಗೆ ಉತ್ತರಕ್ರಿಯೆ ಮಾಡಿ ಬ್ರಾಹ್ಮಣರಿಗೆ ನಾನಾ ವಿಧದ ಧನಕನಕಾದಿ ದಾನಗಳನ್ನಿತ್ತ. ತನ್ನ ಅವಸಾನಕಾಲ ಪ್ರಾಪ್ತವಾದಾಗ ಪ್ರಾಣತ್ಯಾಗ ಮಾಡಿ ಬ್ರಹ್ಮಶಾಪಾನುಸಾರ ಬ್ರಾಹ್ಮಣನಿಂದ ಶೂದ್ರ ಸ್ತ್ರೀಯಲ್ಲಿ ಜನಿಸಿದ.

ಮಾಲಾವತಿ ಅಭೀಷ್ಟಸಿದ್ಧಿಯಿಂದ ತೃಪ್ತಳಾಗಿ ಪುಷ್ಕರಕ್ಷೇತ್ರದ ವಹ್ನಿದಂಡದಲ್ಲಿ ಪ್ರಾಣತ್ಯಾಗಮಾಡಿ ಮನುವಂಶದ ಸೃಂಜಯನ ಮಡದಿಯಲ್ಲಿ ಜನಿಸಿದಳು. ಅವಳಿಗೆ ಆಗ ಪೂರ್ವಜನ್ಮಸ್ಮರಣೆ ಇದ್ದಿತು. ಆದರಿಂದ ಉಪಬರ್ಹಣನೆ ಪತಿಯಾಗಿ ದೊರಕಲಿ ಎಂದು ಅವಳು ಬಯಸಿದಳು.

ಶೌನಕ— ಉಪಬರ್ಹಣ ಬ್ರಾಹ್ಮಣನಿಂದ ಶೂದ್ರಸ್ತ್ರೀಯಲ್ಲಿ ಹೇಗೆ ಜನಿಸಿದ ?

ಸೌತಿ— ಕಾನ್ಯಕುಬ್ಜದಲ್ಲಿ ದ್ರುಮಿಲನೆಂಬ ಒಬ್ಬ ಗೊಲ್ಲರ ರಾಜನಿದ್ದ. ಅವನ ಹೆಂಡತಿ ಕಲಾವತಿ ಪತಿವ್ರತೆಯಾದರೂ ಪತಿಯಿಂದ ಮಕ್ಕಳನ್ನು ಪಡೆಯಲಿಲ್ಲ. ಪತಿದೋಷದಿಂದಾಗಿ ಮಕ್ಕಳಾಗದಿದ್ದುದರಿಂದ ಅವಳು ಪತಿಯಾಜ್ಞೆ ಪಡೆದು ಅರಣ್ಯದಲ್ಲಿ ತಪಸ್ಸು ಮಾಡುತ್ತಿದ್ದ ಕಶ್ಯಪ ಪುತ್ರನಾದ ನಾರದನೆಂಬ ಒಬ್ಬ ತಪಸ್ವಿಯ ಬಳಿಗೆ ಬಂದಳು. ಆತ ಶ್ರೀಕೃಷ್ಣನನ್ನು ಧ್ಯಾನಿಸುತ್ತ ಬ್ರಹ್ಮತೇಜಸ್ಸಿನಿಂದ ಜ್ವಲಿಸುತ್ತಿದ್ದ. ಕಲಾವತಿ ಸುಂದರ ವೇಷಭೂಷಿತಳಾಗಿ ಮುನಿಗೆ ಕಾಣುವಂತೆ ದೂರ ನಿಂತಳು. ದೂರದಿಂದಲೂ ಗ್ರೀಷ್ಮ ಕಾಲದ ಮಧ್ಯಾಹ್ನ ಸೂರ್ಯನಂತೆ ಬೆಳಗುವ ಮುನಿಯ ಹತ್ತಿರ ನಿಲ್ಲಲು ಅವಳು ಅಶಕ್ತಳಾಗಿದ್ದಳು.

ಮುನಿ ಧ್ಯಾನದಿಂದ ಬಹಿರ್ಮುಖನಾದ. ಕಣ್ಣಮುಂದೆ ದೂರದಲ್ಲಿ ನಿಂತಿದ್ದ ಸ್ಥಿರಯೌವನವತಿಯಾದ ಸುಂದರಿಯನ್ನು ಕಂಡ. ಸಂಪಿಗೆಯಂಥ ಮೈಬಣ್ಣ! ಶರತ್ಕಾಲದ ಕಮಲದಂಥ ಕಣ್ಣುಗಳು. ಶರತ್ಕಾಲದ ಹುಣ್ಣಿಮೆ ಚಂದ್ರನಂಥ ಮುಖ. ಪೀತಾಂಬರ ಉಟ್ಟು ರತ್ನಾಭರಣ ಧರಿಸಿ ಮುಗುಳು ನಗುತ್ತಿದ್ದಳು. ಮುನಿಯ ಅಂದಕ್ಕೆ ಮನಸೋತು ಆಸೆ ತುಂಬಿದ ಕಣ್ಣುಗಳಿಂದ ನೋಡುತ್ತ ನಿಂತಿದ್ದಳು. ಹಣೆಗೆ ಸಿಂಧೂರ

ತಿಲಕ ಕಣ್ಣಿಗೆ ಕಾಡಿಗೆ ಪಾದಗಳಿಗೆ ಅಲಕ್ತಕ ಧರಿಸಿದ್ದಳು, ಊರ್ವಶಿಯಂಥ ಆ ಚೆಲುವೆ.

ಮುನಿ ಕೇಳಿದ, 'ಸುಂದರಿ, ನೀನಾರು, ಈ ನಿರ್ಜನವನದಲ್ಲಿ ಪರಪುರುಷರನ್ನು ಕಾಮಿಸುವೆ ? ಯಾರ ಪತ್ನಿ ನೀನು ?'

ಮುನಿಯ ಮಾತನ್ನು ಕೇಳಿ ಕಲಾವತಿ ಶ್ರೀಹರಿಯನ್ನು ನೆನೆದು ವಿನಯಪೂರ್ವಕವಾಗಿ ನುಡಿದಳು, 'ನಾನು ಗೊಲ್ಲರವಳು. ದ್ರುಮಿಲನೆಂಬ ಗೊಲ್ಲರಾಜನ ಮಡದಿ. ನನಗೆ ಮಕ್ಕಳಿಲ್ಲ. ಪತಿಯಾಜ್ಞೆ ಪಡೆದು ಪುತ್ರಪ್ರಾಪ್ತಿಗಾಗಿ ನಿನ್ನ ಬಳಿಗೆ ಬಂದಿದ್ದೇನೆ. ಬೇಡಿ ಬಂದ ಹೆಣ್ಣನ್ನು ಉಪೇಕ್ಷಿಸಬೇಡ.

**ತೇಜೀಯಸಾಂ ನ ದೋಷಾಯ ವಹ್ನೇಃ ಸರ್ವಭುಜೋ ಯಥಾ ।**

'ಅಗ್ನಿ ಸರ್ವಭಕ್ಷಕವಾಗಿರುವಂತೆ ಬ್ರಹ್ಮತೇಜೋಯುಕ್ತರಾಗಿರುವವರು ಯಾವ ಸ್ತ್ರೀಯನ್ನೂ ಭೋಗಿಸಬಹುದು, ದೋಷವಿಲ್ಲ'.

ಮುನಿ ಕುಪಿತನಾಗಿ ನಿತ್ಯಸತ್ಯವಾದ ಮಾತನ್ನಾಡಿದ, 'ಯಾರು ಭೋಗಾರ್ಹಳಾದ ಗೃಹಲಕ್ಷ್ಮಿಯನ್ನು ಪರರಿಗೆ ಕೊಡಬಯಸುವನೋ ಆ ಮೂಢನನ್ನು ಆಕೆಯೂ ತ್ಯಜಿಸುವಳು, ಎಂದು ವೇದದ ಉಪದೇಶವಿದೆ. ನಾನು ನಿನ್ನನ್ನು ಭೋಗಿಸುವುದರಿಂದ ಮುಂದೆ ದ್ರುಮಿಲನು ನಿನ್ನನ್ನು ಪರಿತ್ಯಜಿಸುತ್ತಾನೆ. ನೀನು ಅವನಿಗೆ ಭೋಗಾರ್ಹಳಾಗುವುದಿಲ್ಲ.

ಬ್ರಾಹ್ಮಣ ಶೂದ್ರ ಸ್ತ್ರೀಯನ್ನು ಪರಿಗ್ರಹಿಸಿದರೆ ಚಂಡಾಲನಾಗುತ್ತಾನೆ. ದ್ವಿಜೋಚಿತ ಕರ್ಮಗಳಿಗೆ ಅನಧಿಕಾರಿಯಾಗುತ್ತಾನೆ. ಅವನಿಗೆ ಪಿತೃಶ್ರಾದ್ಧ, ಯಜ್ಞ, ಶಾಲಿಗ್ರಾಮ ಶಿಲಾಸ್ಪರ್ಶ, ದೇವತಾರ್ಚನೆಗಳಲ್ಲಿ ಅಧಿಕಾರವಿಲ್ಲದಂತಾಗುತ್ತದೆ ಎಂದು ಬ್ರಹ್ಮವಚನವಿದೆ. ಆತ ತಾನು ಕುಂಭೀಪಾಕಕ್ಕೆ ಬೀಳುವುದು ಮಾತ್ರವಲ್ಲದೆ ಜೊತೆಗೆ ಹತ್ತುತಲೆಮಾರಿನ ಪೂರ್ವಿಕರನ್ನೂ ಹತ್ತು ತಲೆಮಾರಿನ ಮುಂದಿನ ಪೀಳಿಗೆಯವರನ್ನೂ ನರಕಕ್ಕೆ ಸೆಳೆದೊಯ್ಯುತ್ತಾನೆ. ಮಾತಾಮಹರ ಕುಲವನ್ನು ನರಕಕ್ಕೆ ಬೀಳಿಸುತ್ತಾನೆ. ಅವನು ನೀಡುವ ಪಿಂಡತರ್ಪಣಗಳು ಪಿತೃಗಳಿಗೆ ಮಲಮೂತ್ರ ಸಮಾನ. ಶಾಲಗ್ರಾಮಸ್ಪರ್ಶ ಮಾಡಿದರೆ ಪ್ರಾಯಶ್ಚಿತ್ತವಾಗಿ ಮೂರುದಿನ ಉಪವಾಸ ಮಾಡಬೇಕಾಗುವುದು. ಅವನು ಸಮರ್ಪಿಸುವ ನೈವೇದ್ಯ ಜಲಗಳನ್ನು ದೇವತೆಗಳು ಸ್ವೀಕರಿಸುವುದಿಲ್ಲ. ಅವನು ನೀಡುವ ಅನ್ನ ಸನ್ಯಾಸಿಗಳಿಗೂ ಬ್ರಾಹ್ಮಣರಿಗೂ ಮಲಸಮಾನವೆನಿಸುತ್ತದೆ.

ಶೂದ್ರನ ಉಚ್ಛಿಷ್ಟ ಉಣ್ಣುವ ಬ್ರಾಹ್ಮಣ ಇಪ್ಪತ್ತೊಂದು ತಲೆಮಾರಿನ ಪೂರ್ವಿಕರೊಡನೆ ಇಂದ್ರನಿರುವಷ್ಟು ಕಾಲ ಕುಂಭೀಪಾಕದಲ್ಲಿ ಬಿದ್ದಿರುವನು.

ಶೂದ್ರಸ್ತ್ರೀಯ ಅಧರಪಾನ ಮಾಡುವ ಬ್ರಾಹ್ಮಣನೂ ಅವನಿಗೆ ಸಮಾನನೆ ಆಗುವನು ಎಂದು ಅಂಗಿರಸ ವಚನವಿದೆ.

ಅಜ್ಞಾನಿಯಾದ ಶೂದ್ರ ಬ್ರಾಹ್ಮಣ ಸ್ತ್ರೀ ಪರಿಗ್ರಹ ಮಾಡಿದರೆ ಹದಿನಾಲ್ಕು ಇಂದ್ರರ ಕಾಲ ಕಾಲಸೂತ್ರ ನರಕದಲ್ಲಿ ನರಳುತ್ತಾನೆ. ಆ ಬ್ರಾಹ್ಮಣಸ್ತ್ರೀಯೂ ಹದಿನೆಂಟು ಇಂದ್ರರ ಕಾಲ ಕಾಲಸೂತ್ರನರಕದಲ್ಲಿ ನರಳುತ್ತ ಕ್ರಿಮಿಗಳಿಗೆ ಆಹಾರವಾಗುವಳು. ಬಳಿಕ ಇಬ್ಬರೂ ಚಂಡಾಲ ಜನ್ಮ ಹೊಂದಿ ಕುಷ್ಠರೋಗಕ್ಕೆ ಬಲಿಯಾಗಿ ಸಂಬಂಧಿ ಜನರಿಂದ ಪರಿತ್ಯಕ್ತರಾಗುವರು.'

ಹೀಗೆ ಹೇಳಿ ಮುನಿ ಸುಮ್ಮನಾದ. ಕಲಾವತಿಯ ಗಂಟಲು ತುಟಿ ತಾಲುಗಳು ಒಣಗಿದುವು. ಹಾಗೇ ನಿಂತಳು. ಆಗ ಆಕಸ್ಮಾತ್ ಅದೇ ಮಾರ್ಗವಾಗಿ ಮೇನಕೆ ನಡೆದು ಹೋದಳು. ಅವಳನ್ನು ಕಂಡ ಮುನಿಗೆ ವೀರ್ಯಸ್ಖಲನ ಹೊಂದಿತು. ಕಲಾವತಿ ಅದನ್ನು ಸ್ವೀಕರಿಸಿ ದ್ರುಮಿಲನ ಬಳಿಗೆ ಬಂದಳು. ನಮಸ್ಕಾರ ಮಾಡಿ ನಡೆದ ವೃತ್ತಾಂತವನ್ನರುಹಿದಳು. ಅವನ ಮುಖ ಕಣ್ಣುಗಳು ಆನಂದದಿಂದ ಅರಳಿದುವು. ಮಧುರವಾಗಿ ಆತ ನುಡಿದ—

'ವಿಷ್ಣುಭಕ್ತನಾದ ಮಹಾತ್ಮನಾದ ಒಬ್ಬ ಬ್ರಾಹ್ಮಣನ ವೀರ್ಯ ನಿನ್ನ ಗರ್ಭದಲ್ಲಿ ಬೆಳೆದು ವಿಷ್ಣುಭಕ್ತಬಾಲಕ ಜನಿಸುವನು. ನೀನು ಭಾಗ್ಯವತಿ.

**ಯದ್ಗರ್ಭೇ ವೈಷ್ಣವೋ ಜಾತೋ ಯಸ್ಯ ವೀರ್ಯೇಣ ವಾ ಸತಿ ।**
**ತಯೋರ್ಯಾತಿ ಚ ವೈಕುಂಠಂ ಪುರುಷಾಣಾಂ ಶತಂ ಶತಂ ॥**

ವಿಷ್ಣುಭಕ್ತನೊಬ್ಬ ಯಾರ ಗರ್ಭದಲ್ಲಿ ಯಾರಿಂದ ಜನಿಸುವನೋ ಅವರಿಬ್ಬರೂ ನೂರು ನೂರು ತಲೆ ಮಾರುಗಳಷ್ಟು ಹಿಂದಿನ ಎಲ್ಲ ಪೂರ್ವಿಕರೊಡನೆ ವೈಕುಂಠಕ್ಕೆ ತೆರಳುವರು.

ರತ್ನಖಚಿತವಾದ ದಿವ್ಯವಿಮಾನವೇರಿ ಜನನ ಮರಣ ಜರೆಗಳಿಲ್ಲದ ವೈಕುಂಠ ನಗರವನ್ನು ಸೇರುವರು. ನೀನಿನ್ನು ಯಾರಾದರೊಬ್ಬ ಬ್ರಾಹ್ಮಣನ ಮನೆಗೆ ಹೋಗು. ಕೆಲಕಾಲದ ಬಳಿಕ ನನ್ನ ಬಳಿಗೆ ಬಾ.'

ಹೀಗೆ ಹೇಳಿ ದ್ರುಮಿಲ ಸ್ನಾನ ತರ್ಪಣ ಇಷ್ಟ ದೇವತಾರ್ಚನಗಳನ್ನು ಮಾಡಿ ಬ್ರಾಹ್ಮಣರಿಗೆ ದ್ರವ್ಯದಾನ ಮಾಡಿದ. ನಾಲ್ಕು ಲಕ್ಷ ಕುದುರೆ, ಒಂದು ಲಕ್ಷ ಆನೆ , ನೂರು ಮದ್ದಾನೆ, ಐದುಲಕ್ಷ ಉಚ್ಚೈಃಶ್ರವಸ, ಒಂದು ಸಾವಿರ ರಥ, ಮೂರು ಲಕ್ಷ ಬಂಡಿ, ಹನ್ನೆರಡು ಲಕ್ಷ ಗೋವು, ಮೂರು ಲಕ್ಷ ಎಮ್ಮೆ, ಮೂರು ಲಕ್ಷ ರಾಜಹಂಸ, ಒಂದು ಲಕ್ಷ ಪಾರಿವಾಳ, ನೂರು ಗಿಳಿ, ಒಂದು ಲಕ್ಷ ದಾಸ ದಾಸಿಯರು ಸಾವಿರ ಗ್ರಾಮಗಳು ನೂರು ನಗರಗಳು, ಅಕ್ಕಿ ಧಾನ್ಯಗಳ ಬೆಟ್ಟಗಳು, ನೂರು ಕೋಟಿ

ಹೊನ್ನು, ಸಾವಿರ ರತ್ನಗಳು, ಕೋಟಿ ಕಲಶಗಳು ಲೆಕ್ಕವಿಲ್ಲದಷ್ಟು ಸುವರ್ಣ ಪಾತ್ರೆಗಳು, ಆಭರಣಗಳು ಇವೆಲ್ಲವನ್ನೂ ದ್ರುಮಿಲೆ ಬ್ರಾಹ್ಮಣರಿಗೆ ದಾನ ಮಾಡಿದ. ಕಲಾವತಿಯನ್ನೂ ರತ್ನಾಭರಣಗಳಿಂದ ಸಿಂಗರಿಸಿ ಒಬ್ಬ ಬ್ರಾಹ್ಮಣನಿಗೆ ದಾನ ಮಾಡಿದ. ರಾಜ್ಯವನ್ನೂ ದಾನಮಾಡಿ ಒಳಗೆ ಹೊರಗೆ ಎಲ್ಲೆಡೆ ಹರಿಯನ್ನೆ ಧ್ಯಾನಿಸುತ್ತ ಬದರಿಕಾಶ್ರಮಕ್ಕೆ ತೆರಳಿದ. ಅಲ್ಲಿ ಒಂದು ತಿಂಗಳು ತಪಸ್ಸು ಮಾಡಿ ಗಂಗಾ ತೀರದಲ್ಲಿ ಎಲ್ಲ ಮಹರ್ಷಿಗಳು ನೋಡುತ್ತಿದ್ದಂತೆ ಯೋಗ ಬಲದಿಂದ ಪ್ರಾಣತ್ಯಾಗ ಮಾಡಿದ. ರತ್ನಖಚಿತ ದಿವ್ಯ ವಿಮಾನದಲ್ಲಿ ವಿಷ್ಣು ದೂತರೊಡನೆ ವೈಕುಂಠಕ್ಕೆ ತೆರಳಿದ. ಅಲ್ಲಿ ಹರಿಯ ದಾಸ್ಯ ಹೊಂದು ಸೇವಿಸತೊಡಗಿದ.

ಇತ್ತ ಕಲಾವತಿಯ ವೃತ್ತಾಂತವನ್ನು ಹೇಳುತ್ತೇನೆ. ಪತಿ ಹೊರಟು ಹೋದೊಡನೆ ಕಲಾವತಿ ಗಟ್ಟಿಯಾಗಿ ಅತ್ತಳು. ಅಗ್ನಿಪ್ರವೇಶಮಾಡಿ ಅಸುನೀಗಲು ಹೊರಟಳು. ಬ್ರಾಹ್ಮಣ ತಡೆದ. ನೀನು ಗರ್ಭಿಣಿ, ಮಗುವಿಗೆ ತಾಯಾಗುವವಳು ಪ್ರಾಣ ತ್ಯಾ ಮಾಡಕೂಡದೆನ್ನುತ್ತ ಅವಳನ್ನು ತನ್ನ ಮನೆಗೊಯ್ದ. ಅವಳು ಪುತ್ರನನ್ನು ಹಡೆದಳು. ಪುಟಕ್ಕಿಟ್ಟ ಚಿನ್ನದಂಥ ಮೈ ಬಣ್ಣದಿಂದ ಜ್ವಲಿಸುವ ಬ್ರಹ್ಮತೇಜಸ್ಸಿನಿಂದ ಹೊಳೆಯುತ್ತಿದ್ದ ಆ ಬಾಲಕ. ಅವನ ಬ್ರಹ್ಮತೇಜಸ್ಸು ಗ್ರೀಷ್ಮಕಾಲದ ಮಧ್ಯಾಹ್ನ ಸೂರ್ಯನನ್ನೂ ಮೀರಿಸುತ್ತಿತ್ತು. ರೂಪ ಮನ್ಮಥನನ್ನು ಮೀರಿಸಿತು. ಸುಂದರವಾದ ಕಪೋಲ. ಕಮಲದಂಥ ಪಾದದಲ್ಲಿ ಕಮಲದ ಕಣ್ಣೂ ಶರತ್ಕಾಲದ ಕಮಲ.

ಕಮಲದ ಚಕ್ರದ ಚಿಹ್ನೆಗಳು

ಆ ಸುಂದರ ಬಾಲಕ ಜನಿಸಿ ಸ್ತನಪಾನಕ್ಕಾಗಿ ಅಳುವಾಗ ಸ್ತ್ರೀಯರೆಲ್ಲ ಬಂದು ನೋಡಿ ಆನಂದಪಟ್ಟರು. ಬಳಿಕ ತಮ್ಮ ತಮ್ಮ ಮನೆಗಳಿಗೆ ಹಿಂತಿರುಗಿದರು. ಬ್ರಾಹ್ಮಣನೂ ಬಾಲಕನನ್ನು ಕಂಡು ಆನಂದದಿಂದ ಕುಣಿದ. ಅವನ ಹೆಂಡತಿ ಮಕ್ಕಳೂ ಆನಂದ ಪಟ್ಟರು. ಬಾಲಕ ಶುಕ್ಲಪಕ್ಷದ ಚಂದ್ರನಂತೆ ಬೆಳೆದ. ಪುತ್ರವತಿಯಾದ ಕಲಾವತಿಯನ್ನು ಬ್ರಾಹ್ಮಣ ಮಗಳಂತೆ ರಕ್ಷಿಸಿದ.

**ಇಲ್ಲಿಗೆ ಶ್ರೀ ಬ್ರಹ್ಮವೈವರ್ತ ಮಹಾಪುರಾಣದ ಸೌತಿ ಶೌನಕ ಸಂವಾದದಲ್ಲಿ ಉಪಬರ್ಹಣ ಜನ್ಮಕಥನವೆಂಬ ಇಪ್ಪತ್ತನೆ ಅಧ್ಯಾಯ ಮುಗಿಯಿತು.**

## ನಾರದ ಶಾಪವಿಮೋಚನ

**ಅಧ್ಯಾಯ-೨೧**

ಹುಲಿಕಳೆದಂತೆ ಬಾಲಕ ಪ್ರವರ್ಧಮಾನನಾಗಿ ಐದುವರ್ಷದವನಾದ. ಅವನಿಗೆ ಪೂರ್ವಜನ್ಮ ಸ್ಮರಣೆಯಿದ್ದುದರಿಂದ ಹಿಂದೆ ಸಾಧಿಸಿಕೊಂಡ ಮಂತ್ರಗಳನ್ನು ಸ್ಮರಿಸಿಕೊಂಡ. ಕೃಷ್ಣನ ಗುಣಗಾನ ಮಾಡಿದ. ನಾಮಸಂಕೀರ್ತನ ಮಾಡಿದ. ಹೀಗಾಗಿ ಒಮ್ಮೊಮ್ಮೆ ಅಳುತ್ತಾನೆ, ನಗುತ್ತಾನೆ, ಮೈ ರೋಮಾಂಚಗೊಂಡು ಕುಣಿಯುತ್ತಾನೆ, ಕೃಷ್ಣನ ಕುರಿತಾದ ಸಂಗೀತವಾಗಲಿ ಪುರಾಣಪ್ರವಚನವಾಗಲಿ ಎಲ್ಲೆಲ್ಲಿ ನಡೆಯುತ್ತದೆಯೊ ಅಲ್ಲಲ್ಲಿ ತಪ್ಪದೆ ಈತನಿರುತ್ತಾನೆ. ಮೈಯೆಲ್ಲ ಧೂಳು ಮಾಡಿಕೊಂಡು ಧೂಳಿಂದಲೆ ಕೃಷ್ಣಪ್ರತಿಮೆ ಮಾಡಿ ಧೂಳಿಯಿಂದಲೆ ಪೂಜಿಸುತ್ತಾನೆ, ಧೂಳಿನ ನೈವೇದ್ಯವನ್ನೇ ಅರ್ಪಿಸುತ್ತಾನೆ. ಬೆಳಗಿನ ಉಪಾಹಾರಕ್ಕೆ ತಾಯಿ ಕೂಗಿ ಕರೆದರೆ ಹರಿಪೂಜೆ ಮಾಡುತ್ತಿದ್ದೇನೆ ತಾಳೆನ್ನುತ್ತಾನೆ.

ಶೌನಕ— ಬಾಲಕನಿಗೆ ಈ ಜನ್ಮದಲ್ಲಿ ಏನು ಹೆಸರಾಯಿತು ? ಆ ಹೆಸರು ಬರಿ ಹೆಸರೆ ಅಥವಾ ಅನ್ವರ್ಥವೆ ? ವಿವರಿಸಿ ಹೇಳು.

ಸೌತಿ— ಬಾಲಕ ಜನಿಸಿದುದು ಅನಾವೃಷ್ಟಿಕಾಲದಲ್ಲಿ. ಆದರೆ ಜನ್ಮಕಾಲದಲ್ಲಿ ಮಳೆತರಿಸಿದ್ದ. ಹೀಗೆ 'ನಾರ' ಅಂದರೆ ನೀರನ್ನು 'ದ' ಕೊಟ್ಟದ್ದರಿಂದ 'ನಾರದ' ಎಂದು ಹೆಸರಾಯಿತು. ಪೂರ್ವಜನ್ಮಸ್ಮರಣ ಬಲದಿಂದ ಮಹಾಜ್ಞಾನಿಯಾದ ಬಾಲಕ ಜೊತೆಗಾರರಿಗೆ ಜ್ಞಾನನೀಡಿದ. ಅದರಿಂದ 'ನಾರ' ಅಂದರೆ ಜ್ಞಾನವನ್ನು 'ದ' ಕೊಟ್ಟದವನೆಂದು 'ನಾರದ'ನೆನಿಸಿದ. ನಾರದ ಮುನಿಯ ಮಗನಾದ್ದರಿಂದಲೂ 'ನಾರದ'ನೆನಿಸಿದ.

ಶೌನಕ— ಬಾಲಕನಿಗೆ ನಾರದ ಎಂಬ ಹೆಸರು ಹೇಗೆ ಅನ್ವರ್ಥವೆಂಬುದು ತಿಳಿಯಿತು. ಮುನಿಗೂ ಆ ಮಂಗಳ ನಾಮ ಹೇಗೆ ಬಂದಿತ್ತು ?

ಸೌತಿ— ಕಶ್ಯಪನಿಗೆ ಮೊದಲಿಗೆ ಮಕ್ಕಳಿರಲಿಲ್ಲ. ಆದರೆ ಧರ್ಮಪುತ್ರನಾದ ನರನು ಅವನಿಗೆ ಈ ಮಗನನ್ನು ಅನುಗ್ರಹಿಸಿದ. ನರನಿಂದ ದತ್ತನಾದ್ದರಿಂದ ಆತ ನಾರದ.

ಶೌನಕ— ಈ ಶೂದ್ರ ಜನ್ಮದಲ್ಲಿ ನಾರದ ನಾಮ ಹೇಗೆ ಸಾರ್ಥಕವೆಂದು ತಿಳಿಯಿತು. ಹಿಂದೆ ಬ್ರಹ್ಮಪುತ್ರನಾಗಿದ್ದಾಗ ಆ ಹೆಸರು ಹೇಗೆ ಯುಕ್ತವಾಗಿತ್ತು ?

ಸೌತಿ— ಬ್ರಹ್ಮನ ಕಂಠದಿಂದ ಬಹುಮಂದಿ ನರರು ಅಂದರೆ ಜನರು ಹುಟ್ಟಿದರು. ಬಹುಮಂದಿ ನರರನ್ನು ಹುಟ್ಟಿಸಿದ್ದರಿಂದ ಬ್ರಹ್ಮನ ಕಂಠಕೆ ನರದ ಎಂದು ಹೆಸರು. ನರದವೆನಿಸಿದ ಕಂಠದಿಂದ ಹುಟ್ಟಿದ್ದರಿಂದ ನಾರದ ಎಂಬ ಮಂಗಳನಾಮದಿಂದ ಕರೆದ ಬ್ರಹ್ಮ.

ಈಗ ಬಾಲಕನ ವೃತ್ತಾಂತವನ್ನು ಹೇಳುತ್ತೇನೆ. ಗೋಪಿಯ ಬಾಲಕ ನಾರದ ಬ್ರಾಹ್ಮಣನ ಮನೆಯಲ್ಲಿ ಬೆಳೆಯುತ್ತಿದ್ದ. ಒಂದು ದಿನ ಐದುವರ್ಷದ ಬಾಲಕರಂತೆ ಕಾಣುವ, ಗ್ರೀಷ್ಮಕಾಲದ ಮಧ್ಯಾಹ್ನ ಸೂರ್ಯನಂತೆ ಜ್ವಲಿಸುವ ಬ್ರಹ್ಮಪುತ್ರರಾದ ನಾಲ್ವರು ಮುನಿಗಳು ಬ್ರಾಹ್ಮಣನ ಮನೆಗೆ ಬಂದರು. ಬ್ರಾಹ್ಮಣ ಅವರಿಗೆ ಮಧುಪರ್ಕಾದಿಗಳಿತ್ತು ಸತ್ಕರಿಸಿದ. ಫಲ ಮೂಲಾದಿಗಳನ್ನು ಕೊಟ್ಟ. ಅವರು ತಿಂದರು. ಅವರು ತಿಂದು ಉಳಿದುದನ್ನು ಬಾಲಕ ತಿಂದ. ಆ ನಾಲ್ವರು ಮುನಿಗಳಲ್ಲಿ ಒಬ್ಬನಾದ ಸನತ್ಕುಮಾರ ಬಾಲಕನಿಗೆ ಕೃಷ್ಣಮಂತ್ರ ಉಪದೇಶಿಸಿದ. ತಾಯಿಯ ಮತ್ತು ಬ್ರಾಹ್ಮಣನ ಆಜ್ಞೆಯಂತೆ ಬಾಲಕ ಮುನಿಗಳ ದಾಸ್ಯವನ್ನು ಸ್ವೀಕರಿಸಿದ.

ಒಂದುದಿನ ತಾಯಿ ರಾತ್ರಿಕಾಲದಲ್ಲಿ ಸಂಚರಿಸುವಾಗ ಹಾವು ಕಚ್ಚಿತು. ಹರಿಸ್ಮರಣೆ ಮಾಡುತ್ತ ಅವಳು ಅಸುನೀಗಿದಳು. ರತ್ನಖಚಿತವಾದ ದಿವ್ಯವಿಮಾನವೇರಿ ವಿಷ್ಣು-ಪಾರ್ಷದರೊಂದಿಗೆ ವೈಕುಂಠಕ್ಕೆ ತೆರಳಿದಳು.

ಬೆಳಿಗ್ಗೆ ಬಾಲಕ ಬ್ರಾಹ್ಮಣನ ಮನೆಯನ್ನು ತೊರೆದು ಮುನಿಗಳೊಂದಿಗೆ ನಡೆದ. ಅವನಿಗೆ ಅವರು ತತ್ವಜ್ಞಾನೋಪದೇಶ ನೀಡಿ ಹೊರಟುಹೋದರು.

ಮಹಾಜ್ಞಾನಿಯಾದ ಬಾಲಕ ಗಂಗಾಸ್ನಾನಮಾಡಿ ಮುನಿಗಳು ಉಪದೇಶಿಸಿದ ಕೃಷ್ಣಮಂತ್ರ ಜಪಿಸಿದ. ಆ ಮಂತ್ರಜಪ ಹಸಿವು ಬಾಯಾರಿಕೆ ರೋಗ ಶೋಕಗಳನ್ನೆಲ್ಲ ಕಳೆಯುವಂಥಹುದು. ಭೀಕರ ಅರಣ್ಯದಲ್ಲಿ ಒಂದು ಅರಳಿಮರದ ಬುಡದಲ್ಲಿ ಯೋಗಾಸನದಲ್ಲಿ ಕುಳಿತು ಚಿರಕಾಲ ಮಂತ್ರಜಪಿಸಿದ.

ಶೌನಕ— ಸನತ್ಕುಮಾರರು ಬಾಲಕನಿಗೆ ಉಪದೇಶಿಸಿದ ಆ ಕೃಷ್ಣಮಂತ್ರ ಯಾವುದೆಂದು ಹೇಳು.

ಸೌತಿ— ಹಿಂದೆ ಗೋಲೋಕದಲ್ಲಿ ಕೃಷ್ಣ ಬ್ರಹ್ಮನಿಗೆ ಉಪದೇಶಿಸಿದ್ದ ಇಪ್ಪತ್ತೆರಡು ಅಕ್ಷರಗಳ ಆ ಮಂತ್ರವನ್ನೆ ಬ್ರಹ್ಮ ಸನತ್ಕುಮಾರನಿಗೂ ಸನತ್ಕುಮಾರ ಬಾಲಕನಿಗೂ ಉಪದೇಶಿಸಿದರು.

**'ಓಂ ನಮೋ ಭಗವತೇ ರಾಸಮಂಡಲೇಶ್ವರಾಯ ಶ್ರೀಕೃಷ್ಣಾಯ ಸ್ವಾಹಾ' ।**

ಎಂಬ ಆ ಮಂತ್ರ ಕಲ್ಪವೃಕ್ಷದಂತೆ ಸಕಲಾಭೀಷ್ಟದಾಯಕ.

ಮಹಾಪುರುಷ ಸ್ತೋತ್ರವನ್ನೂ ಕವಚವನ್ನೂ ಹಿಂದೆಯೆ ಹೇಳಿದೆ. ಅದಕ್ಕೆ ಸಂಬಂಧಿಸಿದ ಧ್ಯಾನಕ್ರಮ ಸಾಮವೇದದಲ್ಲಿ ಉಕ್ತವಾಗಿದೆ-

ವೈಷ್ಣವರು ತಮ್ಮ ಹೃದಯಕಮಲದಲ್ಲಿ ಕೋಟಿಸೂರ್ಯ ಸಮಾನ ಕಾಂತಿಉಳ್ಳ ತೇಜೋಮಂಡಲದ ನಡುವೆ ಭಗವಂತನ ಅತ್ಯಂತ ಸುಂದರವಾದ ಅನಿರ್ವಚನೀಯ

ಮನೋಹರ ರೂಪವನ್ನು ಧ್ಯಾನಿಸುವರು. ಆ ರೂಪ ಮೇಘಶ್ಯಾಮವರ್ಣದಿಂದ ಶೋಭಿಸುತ್ತದೆ. ಶರತ್ಕಾಲದ ಕಮಲದಂಥ ಕಣ್ಣುಗಳು. ಶರತ್ಕಾಲದ ಹುಣ್ಣಿಮೆ ಚಂದ್ರನಂಥ ಮುಖ. ತೊಂಡೆ ಹಣ್ಣಿನಂಥ ತುಟಿ, ಮುತ್ತಿಗಿಂತ ಹೆಚ್ಚಾಗಿ ಹೊಳೆವ ದಂತಪಂಕ್ತಿ. ಮುಖದಲ್ಲಿ ಮಂದಹಾಸ. ಕೈಯಲ್ಲಿ ಕೊಳಲು. ಕೋಟಿಮನ್ಮಥರ ಲಾವಣ್ಯ. ಲಕ್ಷ ಚಂದ್ರಮರ ಕಾಂತಿ. ತ್ರಿಭಂಗಿ ನಿಲುವು, ಎರಡು ಕೈಗಳು, ಪೀತಾಂಬರ ಉಟ್ಟು ರತ್ನದ ತೋಳುಬಳೆ ಕಿರುಗೆಜ್ಜೆ ಕುಂಡಲ ಹಾರಗಳನ್ನು ತೊಟ್ಟಿದ್ದಾನೆ. ಮಂಡಿಯ ವರೆಗೆ ಇಳಿ ಬಿಟ್ಟಿದ್ದ ಜಾಜಿಯ ವನಮಾಲೆ. ಮೈಗೆ ಶ್ರೀಗಂಧಲೇಪ, ತಲೆಯ ಮೇಲೆ ನವಿಲಗರಿ, ವಕ್ಷಃಸ್ಥಳದಲ್ಲಿ ಕೌಸ್ತುಭರತ್ನ. ಸ್ಥಿರಯೌವನವತಿಯರಾದ ಸರ್ವಾಲಂಕಾರ ಭೂಷಿತರಾದ ಗೋಪಿಯರಿಂದ ಪರಿವೃತನಾಗಿದ್ದಾನೆ. ರಾಧೆಯನ್ನು ವಕ್ಷಃಸ್ಥಲದಲ್ಲಿ ಆಲಿಂಗಿಸಿಕೊಂಡಿದ್ದಾನೆ. ಬ್ರಹ್ಮ ವಿಷ್ಣು ಶಿವ ಮುಂತಾದವರಿಂದ ಪೂಜೆ ವಂದನೆ ಸ್ತೋತ್ರಗಳನ್ನು ಸ್ವೀಕರಿಸುತ್ತಿದ್ದಾನೆ. ಬಾಲರೂಪ, ರಾಧಾರಮಣನಾಗಿದ್ದಾನೆ. ಶಾಂತಮೂರ್ತಿ, ಪರಾತ್ಪರ, ನಿರ್ಲಿಪ್ತ, ಸಾಕ್ಷಿರೂಪ, ನಿರ್ಗುಣ, ಪ್ರಕೃತಿಗೆ ಅತೀತ, ಸರ್ವೇಶ್ವರ ಪರಮಾತ್ಮನಾಗಿದ್ದಾನೆ.'

ಇದು ಕೃಷ್ಣಮಂತ್ರದ ಧ್ಯಾನಪ್ರಕಾರ. ಸ್ತೋತ್ರಕವಚಗಳೂ ಈ ಮಂತ್ರಕ್ಕೆ ಉಪಯುಕ್ತವಾಗಿವೆ. ಕಲ್ಪವೃಕ್ಷದಂತೆ ಈ ಮಂತ್ರ ಸರ್ವಾಭೀಷ್ಟ ನೀಡುವುದರಲ್ಲಿ ಸಂದೇಹವಿಲ್ಲ.

ಬಾಲಕ ಧ್ಯಾನಮಗ್ನನಾಗಿ ದೇವಮಾನದ ಸಾವಿರ ವರ್ಷಕಾಲ ನಿರಾಹಾರನಾಗಿ ಕುಳಿತ. ಹೊಟ್ಟೆ ಕೃಶವಾದರೂ ಸಿದ್ಧಮಂತ್ರ ಪ್ರಭಾವದಿಂದ ಶರೀರದಲ್ಲಿ ಶಕ್ತಿ ತುಂಬಿಕೊಂಡಿತ್ತು. ಆತ ಧ್ಯಾನದಲ್ಲಿ ದಿವ್ಯಲೋಕವನ್ನೂ ಅದರಲ್ಲಿ ಬಾಲಕೃಷ್ಣನನ್ನೂ ಕಂಡ. ರತ್ನಾಲಂಕಾರ ಭೂಷಿತನಾಗಿ ರತ್ನ ಸಿಂಹಾಸನದಲ್ಲಿ ಮಂಡಿಸಿದ ಶ್ಯಾಮವರ್ಣದ ಬಾಲಗೋಪಾಲ ಮುಗುಳುನಗುನಗುತ್ತಿದ್ದಾನೆ. ಗೋಪಗೋಪಿಯರಿಂದ ಪರಿವೃತ-ನಾಗಿದ್ದಾನೆ. ಎರಡು ಕೈಗಳುಳ್ಳವ, ಮೈಗೆ ಶ್ರೀಗಂಧ ಲೇಪಿಸಿಕೊಂಡಿದ್ದಾನೆ. ಪೀತಾಂಬರ ಉಟ್ಟು ಕೈಯಲ್ಲಿ ಕೊಳಲು ಹಿಡಿದಿದ್ದಾನೆ. ಬ್ರಹ್ಮವಿಷ್ಣು ಶಿವ ಮುಂತಾದವರು ಮಾಡುವ ಸ್ತೋತ್ರಗಳನ್ನಾಲಿಸುತ್ತಾನೆ. ಇಂಥ ಪರಾತ್ಪರ ಪರಮಾತ್ಮನನ್ನು ಕಂಡ ಬಾಲಕ. ಆದರೆ ಒಡನೆ ಆ ಪರಮಾತ್ಮ ಅದೃಶ್ಯನಾದ. ಬಾಲಕ ಅಳತೊಡಗಿದ. ಆಗ ಆಕಾಶವಾಣಿ ನುಡಿಯಿತು- 'ಬಾಲಕ, ನಿನಗೆ ಒಮ್ಮೆ ಭಗವಂತನ ದರ್ಶನವಾಗಿದೆ. ಇನ್ನು ನಿನಗೆ ಈ ಜನ್ಮದಲ್ಲಿ ದರ್ಶನವಿಲ್ಲ. ಈ ಶರೀರ ಹೋಗಿ ಇನ್ನೊಂದು ದಿವ್ಯ ಶರೀರ ಪ್ರಾಪ್ತವಾಗುವುದು. ಆಗ ಜನನ ಮರಣಗಳನ್ನು ಕಳೆವ ಗೋವಿಂದನ ದರ್ಶನ ಪುನಃ ಲಭಿಸುವುದು.'

ಅಶರೀರ ವಾಣಿಯನ್ನು ಕೇಳಿದ ಬಳಿಕ ಬಾಲಕ ಸಮಾಧಾನಪಟ್ಟು ಅಳು ನಿಲ್ಲಿಸಿದ. ಸ್ವಲ್ಪಕಾಲ ಕಳೆದ ಬಳಿಕ ಕೃಷ್ಣನನ್ನು ಹೃದಯದಲ್ಲಿ ಧ್ಯಾನಿಸುತ್ತ ಪುಣ್ಯತೀರ್ಥದಲ್ಲಿ

ಶರೀರತ್ಯಾಗ ಮಾಡಿದ. ಒಡನೆ ಸ್ವರ್ಗಲೋಕದಲ್ಲಿ ದುಂದುಭಿ ಮೊಳಗಿತು. ಪುಷ್ಪವೃಷ್ಟಿಯಾಯಿತು. ನಾರದನಿಗೆ ಶಾಪಮುಕ್ತಿಯಾಯಿತು. ಶರೀರತ್ಯಾಗ ಮಾಡಿ ಆತ ಬ್ರಹ್ಮನ ಶರೀರದಲ್ಲಿ ಪ್ರವೇಶಿಸಿ ಲೀನನಾದ. ಜನ್ಮಮರಣ ಜರೆ ವ್ಯಾಧಿಗಳು ವಿಷ್ಣುಭಕ್ತರಿಗಿಲ್ಲ. ನಿತ್ಯ ದೇಹಿಗಳಾದ ಅವರಿಗೆ ಆವಿರ್ಭಾವತಿರೋಭಾವಗಳು ಸ್ವೇಚ್ಛೆಯಿಂದಲೆ ಆಗುತ್ತವೆ.

**ಇಲ್ಲಿಗೆ ಶ್ರೀ ಬ್ರಹ್ಮವೈವರ್ತ ಮಹಾಪುರಾಣದ ಸೌತಿ ಶೌನಕ ಸಂವಾದದಲ್ಲಿ ನಾರದ ಶಾಪವಿಮೋಚನವೆಂಬ ಇಪ್ಪತ್ತೊಂದನೆ ಅಧ್ಯಾಯ ಮುಗಿಯಿತು.**

## ಬ್ರಹ್ಮಪುತ್ರೋತ್ಪತ್ತಿ ಕಥನ

**ಅಧ್ಯಾಯ-೨೨**

ಸೌತಿ— ಕೆಲವು ಕಲ್ಪಗಳಾದ ಬಳಿಕ ಬ್ರಹ್ಮನ ಸೃಷ್ಟಿಯಲ್ಲಿ ಮತ್ತೆ ಆ ನಾರದ ಮುನಿ ಮರೀಚಿ ಮುಂತಾದ ಮುನಿಗಳೊಂದಿಗೆ ಬ್ರಹ್ಮನ ಕಂಠದಿಂದ ಉದಿಸಿದ. ಹಿಂದೆ ಹೇಳಿದಂತೆ 'ನರದ' ಎನಿಸಿದ ಬ್ರಹ್ಮನ ಕಂಠದಿಂದ ಹುಟ್ಟಿದ್ದರಿಂದ ನಾರದ ಎಂದು ಹೆಸರು.

ಬ್ರಹ್ಮನ ಚೇತಸ್‌ನಿಂದ ಅಂದರೆ ಮನಸಿನಿಂದ ಒಬ್ಬ ಶ್ರೇಷ್ಠ ಮುನಿ ಜನಿಸಿದ. ಅವನಿಗೆ ಬ್ರಹ್ಮ 'ಪ್ರಚೇತಸ್' ಎಂದೇ ಹೆಸರಿಟ್ಟ.

ಬ್ರಹ್ಮನ ದಕ್ಷಭಾಗ ಎಂದರೆ ಬಲಭಾಗದಿಂದ ಹುಟ್ಟಿದ ಒಬ್ಬ ಮಗ ಎಲ್ಲ ಕಾರ್ಯಗಳಲ್ಲಿ ದಕ್ಷನೂ ಆದ್ದರಿಂದ 'ದಕ್ಷ' ಎನಿಸಿದ.

ವೇದಗಳಲ್ಲಿ ಕರ್ದಮ ಎಂದರೆ ಕಾಂತಿ ಎಂದು ಅರ್ಥವಿದೆ. ಬ್ರಹ್ಮನ ಕರ್ದಮದಿಂದ ಹುಟ್ಟಿದ ಒಬ್ಬ ಮುನಿ ಕರ್ದಮನೆನಿಸಿದ.

ಮರೀಚಿ ಎಂದರೆ ತೇಜಸ್ಸು ಎಂಬುದು ವೇದದಲ್ಲಿ ಸ್ಪಷ್ಟವಿದೆ. ಮರೀಚಿ ಮುನಿ ಹುಟ್ಟಿದಾಗಲೆ ಬಹಳ ತೇಜಸ್ಸಿನಿಂದ ಹೊಳೆಯುತ್ತಿದ್ದುದರಿಂದ ಮರೀಚಿ ಎನಿಸಿದ.

ಕ್ರತು ಮಹರ್ಷಿ ಜನ್ಮಾಂತರದಲ್ಲಿ ಬಹಳ ಕ್ರತುಗಳನ್ನು ಅಂದರೆ ಯಜ್ಞಗಳನ್ನು ಮಾಡಿದವ. ಅದರಿಂದ ಬ್ರಹ್ಮಪುತ್ರನಾಗಿ ಜನಿಸಿದಾಗ ಕ್ರತು ಎನಿಸಿದ.

ಶರೀರದಲ್ಲಿ ಮುಖವೆ ಪ್ರಧಾನವಾದ ಅಂಗ. ಬ್ರಹ್ಮನ ಮುಖದಿಂದ ಒಬ್ಬ ಮುನಿ ಜನಿಸಿದ. ತೇಜಸ್ವಿಯಾಗಿದ್ದ. ಹೀಗೆ ಅಂಗದಿಂದ ಹುಟ್ಟಿ ಇರಸ್ ಎಂದರೆ ತೇಜಸ್ವಿಯಾದ್ದರಿಂದ ಅಂಗಿರಸ್ ಎನಿಸಿದ.

ಭೃಗು ಎಂದರೆ ಅತ್ಯಂತ ತೇಜಸ್ವಿ. ಭೃಗುಮುನಿ ಹುಟ್ಟಿದಾಗಲೆ ಅತ್ಯಂತ ತೇಜಸ್ವಿ-ಯಾಗಿದ್ದುದರಿಂದ ಭೃಗು ಎನಿಸಿದ.

ಅರುಣ ಎಂದರೆ ಕೆಂಪು. ಕೆಂಬಣ್ಣದ ಬಾಲಕ ಹುಟ್ಟಿ ತಪೋಜ್ವಾಲೆಯಿಂದ ಜ್ವಲಿಸಿದ. ಆದರಿಂದ ಆರುಣಿ ಎನಿಸಿದ.

ಹಂಸಗಳು ಅಂದರೆ ಇಂದ್ರಿಯಗಳು ಯೋಗಿಗಳಿಗೆ ಯೋಗಬಲದಿಂದ ತಮ್ಮ ವಶಕ್ಕೆ ಬರುವುವು. ಅದರಿಂದ ಪರಮ ಯೋಗೇಶ್ವರನಾದ ಒಬ್ಬ ಬಾಲಕ ಹುಟ್ಟಿ ಹಂಸ ಎನಿಸಿದ.

ವಶಿಷ್ಠ ಮುನಿ ಬ್ರಹ್ಮಪುತ್ರನಾಗಿ ಹುಟ್ಟಿ ಅತಿ ಪ್ರಿಯ ಶಿಷ್ಯನೆನಿಸಿ ಅತ್ಯಂತ ವಶನಾದ್ದರಿಂದ ವಶಿಷ್ಠನೆನಿಸಿದ.

ಯತಿ ಮಹರ್ಷಿ ಬ್ರಹ್ಮಪುತ್ರನಾಗಿ ಜನಿಸಿ ತಪಸ್ಸಿನಲ್ಲಿ ಸತತ ಯತ್ನ ಮಾಡಿದ್ದರಿಂದ ಮತ್ತು ಎಲ್ಲ ಕರ್ಮಗಳಲ್ಲಿ ಸಂಯಮ ತೋರಿದ್ದರಿಂದ ಯತಿ ಎನಿಸಿದ.

'ಪುಲ' ಎಂದರೆ ತಪಸ್ಸು. ಹ ಎಂದರೆ ಸ್ಫುಟ. ಲೋಕಕ್ಕೆ ಪ್ರಕಟವಾಗಿ ಕಾಣುವಂತೆ ತಪಸ್ಸು ಮಾಡಿದ್ದರಿಂದ ಪುಲಹ ಪುಲಹನೆನಿಸಿದ.

'ಪುಲ' ಎಂದರೆ ತಪಸ್ಸು. ಪೂರ್ವಜನ್ಮಗಳಲ್ಲಿ ಬಹಳ ತಪಸ್ಸು ಮಾಡಿದವ-ನಾದ್ದರಿಂದ ಪುಲಸ್ತ್ಯನಿಗೆ ಪುಲಸ್ತ್ಯ ಎಂದು ಹೆಸರಾಯಿತು.

'ಅ' ಎಂದರೆ ವಿಷ್ಣು. 'ತ್ರಿ' ಎಂದರೆ ತ್ರಿಗುಣಾತ್ಮಕ ಪ್ರಕೃತಿ. ಇವರಿಬ್ಬರಲ್ಲಿಯೂ ತಾರತಮ್ಯಾನುಸಾರ ಭಕ್ತಿ ಇರಿಸಿದವನಾದ್ದರಿಂದ ಅತ್ರಿ ಅತ್ರಿಯೆನಿಸಿದ.

ತಪೋಜ್ವಾಲೆಯಿಂದ ಉದ್ಭವಿಸಿದ ಅಗ್ನಿಜ್ವಾಲೆಯಂಥ ಐದು ಜಟೆಗಳಿಂದ ಯುಕ್ತ-ನಾದ್ದರಿಂದ ಬ್ರಹ್ಮಪುತ್ರನೊಬ್ಬ ಪಂಚಶಿಖನೆನಿಸಿದ.

ಪೂರ್ವಜನ್ಮದಲ್ಲಿ ಅಪಾಂತರತಮ ದೇಶದಲ್ಲಿ ತಪಸ್ಸು ಮಾಡಿದವನಾದ್ದರಿಂದ ಇನ್ನೊಬ್ಬ ಬ್ರಹ್ಮಪುತ್ರ ಅಪಾಂತರಮನೆನಿಸಿದ.

ತಾನು ತಪಸ್ಸು ಮಾಡುತ್ತ ಪರರನ್ನೂ ತಪಸ್ಸಿನ ಕಡೆಗೆ ಒಯ್ಯುವುದರಿಂದ ಮತ್ತು ತಪೋಬಲದಿಂದ ಪರರ ರಕ್ಷಣೆಯ ಭಾರ ಹೊರಬಲ್ಲವನಾದ್ದರಿಂದ ಇನ್ನೊಬ್ಬ ಬ್ರಹ್ಮಪುತ್ರ ವೋಢು ಎನಿಸಿದ.

ತಪಸ್ಸಿನ ತೇಜಸ್ಸಿನಿಂದ ಹೊಳೆದುದರಿಂದ ಮತ್ತು ತಪಸ್ಸಿನಲ್ಲಿ ಆಸಕ್ತಿ ಉಳ್ಳವನಾದ್ದರಿಂದ ರುಚಿ ಮಹರ್ಷಿ ರುಚಿಯೆನಿಸಿದ.

ಬ್ರಹ್ಮನ ಕೋಪದಿಂದ ಉದಿಸಿದವರಾದ್ದರಿಂದ ಏಕಾದಶ ರುದ್ರರು ಕೋಪಿ-ಗಳಾದರು. ಹೀಗಾಗಿ ಕೋಪದಿಂದ ರೋದನ ಮಾಡುವುದರಿಂದ ಅವರು ರುದ್ರರು.

ಶೌನಕ— ಈ ಏಕಾದಶ ರುದ್ರರಲ್ಲಿಯೆ ಒಬ್ಬ ಮಹೇಶ್ವರನಿರಬಹುದೆ ? ನನ್ನ ಈ ಸಂದೇಹವನ್ನು ಪರಿಹರಿಸು.

ಸೌತಿ— ಸತ್ವಗುಣಮೂರ್ತಿಯಾದ ವಿಷ್ಣು ಪಾಲಕ. ರಜೋಗುಣ ಮೂರ್ತಿಯಾದ ಬ್ರಹ್ಮ ಸೃಷ್ಟಿಕರ್ತ. ತಮೋಗುಣ ಮೂರ್ತಿಗಳು ಭಯಂಕರರಾದ ಏಕಾದಶ ರುದ್ರರು. ಅವರಲ್ಲೊಬ್ಬ ಕಾಲಾಗ್ನಿ ರುದ್ರ, ಲಯಕಾರಕ. ಅವನು ಮಹೇಶ್ವರನ ಅಂಶ. ಮಹೇಶ್ವರ ಶುದ್ಧ ಸತ್ವ ಸ್ವರೂಪ. ಸಜ್ಜನರಿಗೆ ಮಂಗಲ-ದಾಯಕನಾದ್ದರಿಂದ ಶಿವನೆನಿಸಿದ. ವಿಷ್ಣು ಮಹೇಶ್ವರರಿಬ್ಬರೂ ಪರಿಪೂರ್ಣನಾದ ಕೃಷ್ಣನ ಅಂಶಭೂತರು ಸತ್ವಸ್ವರೂಪರು, ಸಮಾನರು. ಉಳಿದವರೆಲ್ಲರೂ ಕಲಾ-ಸ್ವರೂಪರು. ಇದನ್ನು ನಾನು ರುದ್ರ ಪ್ರಾದುರ್ಭಾವ ಸಮಯದಲ್ಲಿಯೆ ಹೇಳಿದ್ದೇನೆ. ಅದನ್ನು ಹೇಗೆ ಮರೆಯುತ್ತಿರುವಿರಿ ? ಮಾಯೆಯಿಂದ ಮೋಹಿತರು ಎಲ್ಲರೂ. ಅದರಿಂದ ಮುನಿಗಳಿಗೂ ಮತಿಭ್ರಮ ಉಂಟಾಗುವುದು.

ಬ್ರಹ್ಮನಿಗೆ ಕೋಪಬಂದ ಸಂದರ್ಭ ಇದು— ಸನಕ ಸನಂದನ ಸನಾತನ ಸನತ್‌ಕುಮಾರ ಎಂದು ನಾಲ್ವರು ಬ್ರಹ್ಮಪುತ್ರರು ಜನಿಸಿದರು. ಬ್ರಹ್ಮ ಸೃಷ್ಟಿಕಾರ್ಯಕ್ಕೆ ಅವರನ್ನು ಆದೇಶಿಸಿದಾಗ ಒಪ್ಪಲಿಲ್ಲ. ಬ್ರಹ್ಮನಿಗೆ ಕೋಪಬಂದಿತು. ಆ ಕೋಪದಿಂದ ಏಕಾದಶ ರುದ್ರರು ಪ್ರಾದುರ್ಭವಿಸಿದರು. ಸನಕ ಸನಂದ ಈ ಎರಡು ಶಬ್ದಗಳಿಗೂ ಆನಂದ ಎಂದರ್ಥ. ಇಬ್ಬರೂ ಕೃಷ್ಣಭಕ್ತಿಯ ಆನಂದದಿಂದ ಪೂರ್ಣರಾದ್ದರಿಂದ ಆ ಹೆಸರುಗಳು ಅವರಿಗೆ ಯುಕ್ತವಾದುವು. ಸನಾತನ ಎಂದರೆ ನಿತ್ಯ, ಪರಿಪೂರ್ಣ. ಕೃಷ್ಣ ಸನಾತನ. ಅವನ ಭಕ್ತನೂ ಅವನಿಗೆ ಸಮಾನನಾದ್ದರಿಂದ ಸನಾತನ ಸನಾತನನೆನಿಸಿದ. ಸನತ್ಕುಮಾರ ಎಂಬಲ್ಲಿ ಸನತ್ ಎಂದರೆ ನಿತ್ಯ, ಕುಮಾರ ಎಂದರೆ ಬಾಲಕ. ಅದರಿಂದ ಸದಾ ಬಾಲಕನಂತಿರುವ ಕಾರಣ ಸನತ್ಕುಮಾರನಿಗೆ ಆ ಹೆಸರಿಟ್ಟ ಬ್ರಹ್ಮ.

ಹೀಗೆ ಬ್ರಹ್ಮಪುತ್ರರ ನಾಮಗಳ ಅರ್ಥವಿವರಣೆ ನೀಡಿದ್ದೇನೆ. ಇನ್ನು ಮುಂದೆ ನಾರದನ ಕಥೆಯನ್ನು ಕ್ರಮವಾಗಿ ಹೇಳುತ್ತೇನೆ.

**ಇಲ್ಲಿಗೆ ಶ್ರೀ ಬ್ರಹ್ಮವೈವರ್ತ ಮಹಾಪುರಾಣದ ಸೌತಿ ಶೌನಕ ಸಂವಾದದಲ್ಲಿ ಬ್ರಹ್ಮಪುತ್ರೋತ್ಪತ್ತಿ ಕಥನವೆಂಬ ಇಪ್ಪತ್ತೆರಡನೆ ಅಧ್ಯಾಯ ಮುಗಿಯಿತು.**

# ಬ್ರಹ್ಮದೇವರಿಂದ ನಾರದರಿಗೆ ಮದುವೆ ಮಾಡಿಕೊಳ್ಳಲು ಉಪದೇಶ ಹಾಗೂ ಗೃಹಸ್ಥಾಶ್ರಮದ ಶ್ರೇಷ್ಠತೆಯ ಕಥನ. ನಾರದರಿಂದ ಸ್ತ್ರೀಯರ ದೋಷ ಕಥನ

## ಅಧ್ಯಾಯ-೨೩

ಸೌತಿ— ಸೃಷ್ಟಿಕರ್ತ ತನ್ನೆಲ್ಲ ಮಕ್ಕಳನ್ನೂ ಸೃಷ್ಟಿಕಾರ್ಯಕ್ಕೆ ಆದೇಶಿಸುತ್ತ ನಾರದನಿಗೂ ಹಾಗೆ ಆಜ್ಞಾಪಿಸಿದ. ವೇದವೇದಾಂತ ಪಾರಂಗತನಾದ ನಾರದನಿಗೆ ಹಿತವೂ ಸತ್ಯವೂ ವೇದದ ಸಾರಭೂತವೂ ಪರಿಣಾಮದಲ್ಲಿ ಸುಖಕರವೂ ಆದ ಮಾತನ್ನು ಉಪದೇಶಿಸಿದ— 'ನಾರದ, ಬಾ. ನೀನು ನನಗೆ ಪ್ರಾಣಕ್ಕಿಂತ ಹೆಚ್ಚು ಪ್ರಿಯ. ಜ್ಞಾನದ ದೀಪ ಜ್ವಾಲೆಯಿಂದ ಅಜ್ಞಾನದ ಕತ್ತಲನ್ನು ಓಡಿಸುವವ.

ಸರ್ವೇಷಾಮಪಿ ವಂದ್ಯಾನಾಂ ಜನಕಃ ಪರಮೋ ಗುರುಃ ।
ವಿದ್ಯಾದಾತಾ ಮಂತ್ರದಾತಾ ದ್ವೌಸಮೌ ಚ ಪಿತುಃ ಪರೌ ॥

ವಂದ್ಯರಾದ ಹಿರಿಯರಲ್ಲೆಲ್ಲ ಜನ್ಮದಾತ ತಂದೆ ಶ್ರೇಷ್ಠ. ಅವನಿಗಿಂತಲೂ ಶ್ರೇಷ್ಠರು ವಿದ್ಯಾದಾತನಾದ ಗುರು ಮತ್ತು ಮಂತ್ರೋಪದೇಶಕನಾದ ಆಚಾರ್ಯ. ಇವರಿಬ್ಬರೂ ಪರಸ್ಪರ ಸಮಾನರು. ನಾನು ನಿನಗೆ ಜನ್ಮದಾತನಾದ ತಂದೆ ಮಾತ್ರವಲ್ಲದೆ ವಿದ್ಯೋಪದೇಶಕನೂ ಹೌದು. ಪಾಲಕನೂ ಹೌದು. ನಾನು ಆಜ್ಞೆ ಮಾಡುತ್ತಿದ್ದೇನೆ. ನೀನು ಮದುವೆ ಮಾಡಿಕೊಳ್ಳು, ಅದರಿಂದ ನನಗೆ ಸಂತೋಷವಾಗುವುದು.

ಸ ಚ ಶಿಷ್ಯಃ ಸೋಽಪಿ ಪುತ್ರೋ ಯಶ್ಚಾಜ್ಞಾಂ ಪಾಲಯೇದ್ ಗುರೋಃ ।
ನ ಕ್ಷೇಮಂ ತಸ್ಯ ಮೂಢಸ್ಯ ಯೋ ಗುರೋರವಚಸ್ಕರಃ ॥

ಗುರುವಿನ ಮಾತನ್ನು ಕೇಳುವವನೆ ಶಿಷ್ಯ, ತಂದೆಯ ಮಾತು ಕೇಳುವವನೆ ಮಗ, ಗುರುವಿನ ತಂದೆಯ ಮಾತು ಕೇಳದವ ಮೂಢ. ಅವನಿಗೆ ಕ್ಷೇಮವಿಲ್ಲ.

ಸ ಪಂಡಿತಃ ಸ ಚ ಜ್ಞಾನೀ ಸ ಕ್ಷೇಮಾ ಸ ಚ ಪುಣ್ಯವಾನ್ ।
ಗುರೋರ್ವಚಸ್ಕರೋ ಯೋ ಹಿ ಕ್ಷೇಮಂ ತಸ್ಯ ಪದೇ ಪದೇ ॥

ಗುರುಹಿರಿಯರ ಮಾತು ಕೇಳುವವನೆ ಪಂಡಿತ. ಅವನೆ ಜ್ಞಾನಿ, ಅವನೆ ಪುಣ್ಯವಂತ. ಅವನಿಗೆ ಕ್ಷೇಮವಿದೆ. ಹೆಜ್ಜೆಹೆಜ್ಜೆಗೂ ಎಲ್ಲ ಕಾರ್ಯಗಳಲ್ಲಿ ಜಯವಿದೆ.

ಸರ್ವೇಷಾಮಾಶ್ರಮಾಣಾಂ ಚ ಪ್ರಧಾನಃ ಪುಣ್ಯವಾನ್ ಗೃಹೀ ।
ಸ್ತ್ರೀಪುತ್ರ ಪೌತ್ರಯುಕ್ತಂ ಚ ಮಂದಿರಂ ತಪಸಃ ಫಲಂ ॥

ಎಲ್ಲ ಆಶ್ರಮಗಳಲ್ಲಿ ಶ್ರೇಷ್ಠ ಮತ್ತು ಪುಣ್ಯಕರ ಗೃಹಸ್ಥಾಶ್ರಮ. ಹೆಂಡಿರು ಮಕ್ಕಳು ಮೊಮ್ಮಕ್ಕಳಿಂದ ತುಂಬಿದ ಮನೆ ತಪಸ್ಸಿನಿಂದ ಮಾತ್ರ ಲಭ್ಯ.

**ಪಿತರಃ ಪರ್ವಕಾಲೇ ಚ ತಿಥಿ ಕಾಲೇ ಚ ದೇವತಾಃ ।**
**ಸರ್ವೇ ಗೃಹಸ್ಥಮಾಯಾಂತಿ ನಿಪಾನಮಿವ ಧೇನವಃ ॥**

ಬಾಯಾರಿದಾಗ ನೀರಿನ ತೊಟ್ಟಿಗೆ ಹಸುಗಳಂತೆ ಪರ್ವದಿನಗಳಲ್ಲಿ ಪಿತೃಗಳು ಮತ್ತು ಶುಭದಿನಗಳಲ್ಲಿ ದೇವತೆಗಳೂ ಗೃಹಸ್ಥನ ಬಳಿಗೆ ಬರುತ್ತಾರೆ.

**ನಿತ್ಯಂ ನೈಮಿತ್ತಿಕಂ ಕಾಮ್ಯಂ ಕುರ್ವಂತಿ ಗೃಹಿಣಃ ಸದಾ ।**
**ಇಹ ಚೈತತ್ ಸುಖಂ ಪುಣ್ಯಂ ಸ್ವರ್ಗಭೋಗಃ ಪರತ್ರ ಚ ॥**

ನಿತ್ಯ ನೈಮಿತ್ತಿಕ ಕಾಮ್ಯಕರ್ಮಗಳನ್ನು ಗೃಹಸ್ಥರು ಸದಾ ಮಾಡುವುದರಿಂದ ಅವರಿಗೆ ಇಹಲೋಕದಲ್ಲಿ ಸುಖ, ಪುಣ್ಯ ಲಾಭ. ಪರಲೋಕದಲ್ಲಿ ಸ್ವರ್ಗಸುಖ.

**ಜೀವನ್ಮುಕ್ತೋ ಗೃಹಸ್ಥಶ್ಚ ಸ್ವಧರ್ಮಪರಿಪಾಲಕಃ ।**
**ಯಶಸ್ವೀ ಪುಣ್ಯವಾಂಶ್ಚೈವ ಕೀರ್ತಿಮಾನ್ ಧನವಾನ್ ಸುಖೀ ॥**

ಸ್ವಧರ್ಮವನ್ನು ತಪ್ಪದೆ ಆಚರಿಸುವ ಗೃಹಸ್ಥ ಯಶಸ್ಸು ಪುಣ್ಯ ಕೀರ್ತಿ ಧನ ಸುಖ-ಗಳನ್ನು ಹೊಂದಿ ಜೀವನ್ಮುಕ್ತನಾಗುತ್ತಾನೆ.

**ಯಶಸ್ವೀ ಕೀರ್ತಿಮಾನ್ ಯೋ ಹಿ ಮೃತೋ ಜೀವತಿ ಸಂತತಂ ।**
**ಯಶಃ ಕೀರ್ತಿ ವಿಹೀನೋಹಿ ಜೀವನ್ನಪಿ ಮೃತೋಹಿ ಸಃ ॥**

ಯಶಸ್ವಿಯೂ ಕೀರ್ತಿವಂತನೂ ಆದವನು ಮೃತನಾದರೂ ಬದುಕಿರುತ್ತಾನೆ. ಯಶಸ್ಸು ಕೀರ್ತಿಗಳಿಸದವ ಬದುಕಿದ್ದರೂ ಸತ್ತಿರುತ್ತಾನೆ.

-ಬ್ರಹ್ಮನ ಈ ಮಾತು ಕೇಳಿ ನಾರದನಿಗೆ ಗಂಟಲು ತುಟಿ ಬಾಯಿ ಒಣಗಿದುವು. ಭಯ ಉಂಟಾಯಿತು. ವಿನಯದಿಂದ ಹೇಳಿದ— 'ನಮಗೆ ತಂದೆ ಮಕ್ಕಳಿಗೆ ಒಮ್ಮೆ ವಿರಸ ಉಂಟಾಗಿ ಇಬ್ಬರಿಗೂ ದೊಡ್ಡಹಾನಿ ಅಪಕೀರ್ತಿಗಳುಂಟಾದುವು. ನಿನ್ನ ಶಾಪದಿಂದ ನನಗೆ ಗಂಧರ್ವಜನ್ಮ ಶೂದ್ರಜನ್ಮಗಳು ಬಂದುವು. ನಾನು ಆ ಜನ್ಮಗಳಿಗೆ ಉಚಿತವಾದ ಕರ್ಮಗಳನ್ನು ಮಾಡಬೇಕಾಯಿತು. ನೀನೂ ನನ್ನ ಶಾಪದಿಂದ ಅಪೂಜ್ಯನೆನಿಸಿದೆ. ನನಗೆ ಶಾಪ ತೀರಿತು. ನಿನಗೆ ಇನ್ನು ಸ್ವಲ್ಪಕಾಲದ ಬಳಿಕ ಶಾಪವಿಮೋಚನೆಯಾಗಲಿದೆ.

**ದೋಷಾಯ ಕಲ್ಪತೇ ಶಶ್ವದ್ ವಿರೋಧೋ ನ ಗುಣಾಯ ಚ ।**

ದೀರ್ಘಕಾಲದ ವಿರೋಧದಿಂದ ಕೆಟ್ಟದೆ ಆಗುವುದು ಹೊರತು ಒಳ್ಳೆಯ-ದಾಗುವುದಿಲ್ಲ. ಯಾರು ಶ್ರೀಕೃಷ್ಣ ಪಾದಕಮಲಗಳಲ್ಲಿ ದೃಢಭಕ್ತಿ ಉಂಟುಮಾಡು-ವನೋ ಅವನೆ ತಂದೆ, ಅವನೆ ಗುರು ಅವನೆ ಬಂಧು ಅವನೆ ಪುತ್ರ ಅವನೆ ಒಳ್ಳೆಯ ಪ್ರಭು.

**ಅಸದ್ವರ್ತ್ಮನಿ ಚಾಜ್ಞಾನಾದ್ ಗಚ್ಛಂತಿ ಯದಿ ಬಾಲಕಾಃ ।**
**ನಿವರ್ತಯತಿ ತಾನೇವ ಸ ಪಿತಾ ಕರುಣಾನಿಧಿಃ ॥**

ಮಕ್ಕಳು ತಿಳಿಯದೆ ತಪ್ಪುದಾರಿ ತುಳಿಯುವಾಗ ಅವರನ್ನು ತಡೆಯುವ ಕರುಣಾಳುವೇ ನಿಜವಾಗಿ ತಂದೆ. ಮಕ್ಕಳಿಗೆ ಕೃಷ್ಣನ ಪಾದದಲ್ಲಿ ಭಕ್ತಿಯನ್ನು ತಪ್ಪಿಸಿ ಬೇರೆ ವಿಷಯದಲ್ಲಿ ಆಸಕ್ತಿ ಉಂಟುಮಾಡುವ ತಂದೆ, ತಂದೆ ಏನು ?

**ದಾರಗ್ರಹೋ ಹಿ ದುಃಖಾಯ ಕೇವಲಂ ನ ಸುಖಾಯ ಚ ।**
**ತಪಃ ಸ್ವರ್ಗಭಕ್ತಿ ಮುಕ್ತಿಕರ್ಮಣಾಂ ವ್ಯವಧಾಯಕಃ ॥**

ವಿವಾಹವೆಂಬುದು ಕೇವಲ ದುಃಖ ಕಾರಣ ಹೊರತು ಸುಖ ಕಾರಣವಲ್ಲ. ಏಕೆಂದರೆ ಅದು ತಪಸ್ಸು ಸ್ವರ್ಗ ಭಕ್ತಿ ಮುಕ್ತಿ ಕರ್ಮಗಳಿಗೆ ಪ್ರತಿಬಂಧಕವೆ ಆಗುತ್ತದೆ.

ಗೃಹಸ್ಥಾಶ್ರಮ ಸ್ವೀಕರಿಸುವವರು ಮೂಢರು. ಏಕೆಂದರೆ ಸ್ತ್ರೀಯರು ಮೂರು ಬಗೆಯವರಿರುತ್ತಾರೆ— ಸಾಧ್ವೀ ಭೋಗ್ಯಾ ಕುಲಟಾ ಎಂದು. ಇವರಲ್ಲಿ ಸಾಧ್ವಿ ಪತಿಸೇವಾಪರಾಯಣಳಾಗಿದ್ದರೂ ಅದು ಪರಲೋಕ ಭಯದಿಂದ, ಅಥವಾ ಇಹಲೋಕದಲ್ಲಿ ಯಶಸ್ಸಿನಾಸೆಯಿಂದ, ಅಥವಾ ಪತಿಸುಖದಾಸೆಯಿಂದ. ಭೋಗ್ಯೆ ಸುಖಭೋಗ ಬಯಸಿಯೆ ಪತಿಸೇವೆ ಮಾಡುತ್ತಾಳೆ. ಸುಖಭೋಗ ಸಿಗದಿದ್ದರೆ ಸರ್ವಥಾ ಸೇವೆ ಮಾಡುವುದಿಲ್ಲ. ವಸ್ತ್ರಾಲಂಕಾರಗಳು ಸಂಭೋಗ ಮತ್ತು ರುಚಿಯಾದ ಅನ್ನಪಾನ ಸಿಗುವವರೆಗೆ ಮಾತ್ರ ಅವಳು ಪತಿಯ ವಶದಲ್ಲಿರುವಳು, ಪ್ರಿಯೆಯಾಗಿ-ರುವಳು. ಕುಲಟೆ ಬೆಂಕಿ ತನ್ನ ಉತ್ಪತ್ತಿಗೆ ಕಾರಣವಾದ ಕಾಷ್ಠವನ್ನೇ ಸುಡುವಂತೆ ತಾನು ಹುಟ್ಟಿದ ಕುಲಕ್ಕೇ ಕೆಟ್ಟ ಹೆಸರು ತರುವಳು. ಅವಳು ಪತಿಸೇವೆ ಮಾಡಿದರೆ ಅದು ಭಕ್ತಿಯಿಂದಲ್ಲ. ಕೇವಲ ಕಪಟ. ಸದಾ ಪುರುಷರ ಸಹವಾಸ ಬಯಸುವಳು, ಸದಾ ಕಾಮಬಾಧೆಗೆ ವಶಳಾಗುವಳು. ಆಹಾರಕ್ಕಿಂತ ಹೆಚ್ಚಾಗಿ ಹೊಸ ಹೊಸ ಪರಪುರುಷರ ಸಂಗವನ್ನೆ ಬಯಸುವಳು. ಪರಪುರುಷ ಸಂಗಕ್ಕಾಗಿ ತನ್ನ ಪತಿಯನ್ನೇ ಕೊಲ್ಲ ಬಯಸುವಳು. ಅವಳಲ್ಲಿ ವಿಶ್ವಾಸವಿಡುವ ಮೂರ್ಖನ ಜೀವನವೆ ವ್ಯರ್ಥ. ಹೀಗೆ ಉತ್ತಮ ಮಧ್ಯಮ ಅಧಮವರ್ಗಗಳಿಗೆ ಸೇರುವ ಈ ಸ್ತ್ರೀಯರ ಮನಸ್ಸನ್ನು ಕಾಮಶಾಸ್ತ್ರ ಪಂಡಿತರೂ ಅರಿಯರು. ಆತ್ಮಾರಾಮರಾದ ಯೋಗಿಗಳು ಮಾತ್ರ ತಿಳಿಯಬಲ್ಲರು. ಸ್ತ್ರೀಯರು ಸ್ವಾರ್ಥಿಗಳು. ಹೃದಯ ಕತ್ತಿಯ ಅಲುಗಿನಂತೆ ಕ್ರೂರ. ಮುಖ ಮಾತ್ರ ಶರತ್ಕಾಲದ ಕಮಲದಂತೆ ಪ್ರಸನ್ನ, ಮಾತು ಅಮೃತದಂತೆ ಸಿಹಿ. ಹೃದಯ ಕೋಪದಲ್ಲಿ ವಿಷತುಲ್ಯ. ವಿಶ್ವಾಸ ಮಾಡಿದರೆ ಸರ್ವನಾಶ ನಿಶ್ಚಿತ. ಅಭಿಪ್ರಾಯ ನಿಗೂಢ. ಸದಾ ಅವಿನಯ, ಸದಾ ಸಾಹಸ. ಸದಾ ಕಪಟ. ಪುರುಷರಿಗಿಂತ ಎರಡರಷ್ಟು ಹಸಿವು, ನಾಲ್ಕರಷ್ಟು ನಿಷ್ಠುರತೆ, ಆರರಷ್ಟು ಕೋಪ ಹಟಸಾಧನೆ, ಎಂಟರಷ್ಟು ಭೋಗಾಸಕ್ತಿ. ಇಷ್ಟು ದುರ್ಗುಣ ಉಳ್ಳ ಸ್ತ್ರೀಯರಲ್ಲಿ ಆಸ್ಥೆ

ಇಡುವುದರಲ್ಲಿ ಏನು ಔಚಿತ್ಯವಿದೆ ? ಮಲಮೂತ್ರಗಳ ಮನೆಯಾದ ಸ್ತ್ರೀಶರೀರದಲ್ಲಿ ಪುರುಷನಿಗೆ ಏನು ಕ್ರೀಡೆ ಏನು ಸುಖ ?

ಸ್ತ್ರೀಯರೊಡನೆ ಹಗಲು ಸಂಗ ಮಾಡಿದರೆ ತೇಜೋನಾಶ. ಹಗಲು ಸಲ್ಲಾಪ ಮಾಡಿದರೆ ಯಶೋಹಾನಿ. ಅತಿ ಪ್ರೀತಿಯಿಂದ ಧನಹಾನಿ. ಅತ್ಯಾಸಕ್ತಿಯಿಂದ ಶರೀರಕ್ಕೆ ಅಪಾಯ. ಜೊತೆಯಲ್ಲೆ ಇದ್ದರೆ ಪೌರುಷನಾಶ. ಕಲಹ ಮಾಡಿದರೆ ಮಾನಹಾನಿ. ವಿಶ್ವಾಸ ಮಾಡಿದರೆ ಸರ್ವನಾಶ. ಇಂಥ ನಾರಿಯರಲ್ಲಿ ಏನು ತಾನೆ ಸುಖ ಸಿಕ್ಕೀತು ?

ಪುರುಷ ತನ್ನಲ್ಲಿ ಧನಸಂಪತ್ತು ಅಧಿಕಾರ ಗೌರವ ಸೌಂದರ್ಯಗಳಿರುವಷ್ಟುಕಾಲ ಮಾತ್ರ ನಾರಿಯನ್ನು ವಶದಲ್ಲಿಟ್ಟುಕೊಳ್ಳಬಲ್ಲ. ಆತ ರೋಗಿಯೋ ದರಿದ್ರನೋ ವೃದ್ಧನೋ ಆದರೆ ನಾರಿಗೆ ಅಪ್ರಿಯನೆನಿಸುತ್ತಾನೆ. ಆಗ ಅವಳು ಜನ ಏನು ಹೇಳು-ವರೋ ಎಂಬ ಭಯದಿಂದ ಅವನಿಗೆ ಏನೋ ಸ್ವಲ್ಪ ಆಹಾರ ಕೊಡುತ್ತಾಳೆ.

ಹೀಗೆ ಸ್ತ್ರೀಯ ಬಗ್ಗೆ ವಾನು ಅರಿತ ಮಟ್ಟಿಗೆ ಎಲ್ಲ ಹೇಳಿದ್ದೇನೆ. ಅದನ್ನೆಲ್ಲ ನೀನು ತಿಳಿದೇ ಇರುವೆ. ಸರ್ವಜ್ಞನಾಗಿರುವೆ. ನನ್ನ ಮೇಲೆ ಅನುಗ್ರಹಮಾಡು. ಕೃಷ್ಣಭಕ್ತಿ ನೀಡು. ನೀನು ಕಲ್ಪವೃಕ್ಷದಂತೆ ಬೇಡಿದ್ದನ್ನೆಲ್ಲ ಕೊಡುವವ. ನನಗೆ ತಪಸ್ಸಿಗೆ ಅನುಜ್ಞೆ ನೀಡು,' ಎಂದು ತಂದೆಯ ಪಾದಕಮಲವನ್ನು ಹಿಡಿದು ಬೇಡಿಕೊಂಡ, ನಾರದ. ಕೈಮುಗಿದು ಭಕ್ತಿಯಿಂದ ತಲೆಬಾಗಿ ಪ್ರದಕ್ಷಿಣೆ ನಮಸ್ಕಾರ ಮಾಡಿ ತಪಸ್ಸಿಗೆ ಹೊರಟುನಿಂತ. ಸೃಷ್ಟಿಕರ್ತ ಗಟ್ಟಿಯಾಗಿ ಅತ್ತ. ಮಗನನ್ನು ಬಿಗಿದಪ್ಪಿ ಪುನಃ ಪುನಃ ಮುದ್ದಿಟ್ಟ. ಸ್ವಾತ್ಮಾರಾಮರಾದ ಯೋಗೀಶ್ವರರ ಗುರುಗಳಿಗೆ ಗುರುವಾದ ಬ್ರಹ್ಮಪುತ್ರ-ವಿಯೋಗವನ್ನು ಸಹಿಸಲು ಅಶಕ್ತನೆಂದ ಮೇಲೆ ಉಳಿದವರ ಪಾಡೇನು ?

ವಿಷ್ಣು ಮಾಯಾಮೋಹಿತನಾಗಿ ಪುತ್ರಶೋಕ ಕಾತರನಾದ ಬ್ರಹ್ಮ ಮಗನಿಗೆ ಪುನಃ ಹೇಳತೊಡಗಿದ.

**ಇಲ್ಲಿಗೆ ಶ್ರೀ ಬ್ರಹ್ಮವೈವರ್ತ ಮಹಾಪುರಾಣದ ಸೌತಿ ಶೌನಕ ಸಂವಾದದಲ್ಲಿ ಬ್ರಹ್ಮನಾರದ ಸಂವಾದವೆಂಬ ಇಪ್ಪತ್ತಮೂರನೆಯ ಅಧ್ಯಾಯ ಮುಗಿಯಿತು.**

# ಬ್ರಹ್ಮನಾರದೋಕ್ತ ಸಂಸಾರ ಸುಖಾಸುಖವರ್ಣನೆ

## ಅಧ್ಯಾಯ-೨೪

ಬ್ರಹ್ಮ— ಮಗು ನಾರದ, ನೀನು ತಪಸ್ಸಿಗೆ ಹೋಗುವೆಯ ? ಹೋಗು, ನನಗೂ ಈ ಪ್ರಪಂಚದಲ್ಲಿ ಏನು ಕೆಲಸ ? ಗೋಲೋಕಕ್ಕೆ ಹೋಗುತ್ತೇನೆ. ಕೃಷ್ಣನ ಸೇವೆ ಮಾಡುತ್ತೇನೆ. ಸನಕ ಸನಂದನ ಸನಾತನ ಸನತ್ಕುಮಾರ ಯತಿ ಹಂಸ ಆರುಣಿ ವೋಢು ಪಂಚಶಿಖ ಇವರೆಲ್ಲ ನನ್ನ ಮಕ್ಕಳು ತಪಸ್ವಿಗಳಾದರು. ನನಗೇನಿದೆ ಈ ಪ್ರಪಂಚದಲ್ಲಿ ಕೆಲಸ ?

ನನ್ನ ಮಾತು ಕೇಳಿದವರೆಂದರೆ ಮರೀಚಿ ಅಂಗಿರಸ ಭೃಗು ರುಚಿ ಅತ್ರಿ ಕರ್ದಮ ಪ್ರಚೇತ ಕ್ರತು ಮನು ಮತ್ತು ವಸಿಷ್ಠ. ಇವರೆಲ್ಲ ಸದಾ ನನ್ನ ಮಾತಿನಂತೆ ನಡೆಯು-ವವರು. ಉಳಿದವರೆಲ್ಲ ಸ್ವಯಂ ವಿವೇಕಶಾಲಿಗಳು. ನನಗೇನಿದೆ ಇಲ್ಲಿ ಕೆಲಸ ?

ಮಗು, ನಾನೊಂದು ವೇದೋಕ್ತ ವಚನವನ್ನು ಹೇಳುತ್ತೇನೆ ಕೇಳು. ಅದು ಪರಂಪರೆಯಿಂದ ಬಂದುದು, ಧರ್ಮ ಅರ್ಥ ಕಾಮ ಮೋಕ್ಷ ರೂಪವಾದ ನಾಲ್ಕು ಪುರುಷಾರ್ಥಗಳನ್ನು ನೀಡುವಂಥಹುದು, ತಿಳಿದವರೆಲ್ಲ ಈ ಪುರುಷಾರ್ಥಗಳನ್ನು ಬಯಸುತ್ತಾರೆ. ಇದು ವೇದದಲ್ಲಿ ವಿಹಿತವಾದುದು, ಮುನಿಗಳ ಪ್ರಶಂಸೆಗೆ ಪಾತ್ರವಾದುದು.

**ವೇದಪ್ರಣಿಹಿತೋ ಧರ್ಮೋ ಹ್ಯಧರ್ಮಸ್ತದ್ವಿಪರ್ಯಯಃ ।**

'ವೇದವಿಹಿತವಾದುದು ಧರ್ಮ. ವೇದ ನಿಂದಿತವಾದುದು ಅಧರ್ಮ.'

ಬ್ರಾಹ್ಮಣನಾಗಿ ಹುಟ್ಟಿದವನು ಮೊದಲಿಗೆ ಯಜ್ಞೋಪವೀತ ಧರಿಸಬೇಕು. ವೇದಾಧ್ಯಯನ ಮಾಡಿ ಗುರುದಕ್ಷಿಣೆ ನೀಡಿ ಒಳ್ಳೆಯ ಕುಲದ ವಿನೀತೆಯಾದ ಕನ್ಯೆಯನ್ನು ವಿವಾಹವಾಗಬೇಕು.

ಒಳ್ಳೆಯ ಕುಲದವಳು ಪತಿವ್ರತೆಯಾಗಿರುತ್ತಾಳೆ. ಪತಿಸೇವಾ ಪರಾಯಣಳಾಗಿರುತ್ತಾಳೆ.

**ಸದ್ವಂಶೇ ದುರ್ವಿನೀತಾ ಚ ಸಂಭವೇನ್ನ ಕದಾಚನ ।**
**ಆಕರೇ ಪದ್ಮರಾಗಾಣಾಂ ಜನ್ಮ ಕಾಚಮಣೇಃ ಕುತಃ ॥**

ಸತ್ಕುಲದಲ್ಲಿ ಅವಿನೀತೆಯಾದ ನಾರಿ ಹುಟ್ಟುವುದಿಲ್ಲ. ಪದ್ಮರಾಗಮಣಿಯ ಗಣಿಯಲ್ಲಿ ಗಾಜಿನ ಮಣಿಯ ಉತ್ಪತ್ತಿ ಹೇಗಾದೀತು ? ದುಷ್ಟಕುಲದಲ್ಲಿ ಹುಟ್ಟಿ-ದವಳು ತಂದೆ ತಾಯಿಗಳ ದೋಷದಿಂದ ದುಷ್ಟಳೂ ಅವಿನೀತೆಯೂ ಎಲ್ಲ ಕಾರ್ಯಗಳಲ್ಲಿ ಸ್ವಾತಂತ್ರ್ಯ ವಹಿಸುವವಳೂ ಆಗುತ್ತಾಳೆ.

ಮಗು, ಎಲ್ಲ ಸ್ತ್ರೀಯರೂ ದುಷ್ಟರಾಗುವುದಿಲ್ಲ. ಹೆಚ್ಚಿನವರು ಲಕ್ಷ್ಮಿಯಂತಿರು-ತ್ತಾರೆ, ಅಪ್ಸರೆಯಂತಿರುತ್ತಾರೆ. ದುಷ್ಟಕುಲದಲ್ಲಿ ಹುಟ್ಟಿದವರು ಮಾತ್ರ ಕುಲಟೆ-ಯರಾಗಿರುತ್ತಾರೆ.

ಪತಿವ್ರತೆ ಪತಿಯಲ್ಲಿ ಸದ್ಗುಣವಿಲ್ಲದಿದ್ದರೂ ಅವನನ್ನು ಪ್ರಶಂಸೆ ಮಾಡುತ್ತಾಳೆ. ಸೇವಿಸುತ್ತಾಳೆ. ಕುಲಟೆ ಹಾಗಲ್ಲ. ಅವಳು ಸದ್ಗುಣಶಾಲಿಯಾದ ಪತಿಯನ್ನೂ ನಿಂದಿಸುತ್ತಾಳೆ. ಸೇವೆ ಮಾಡುವುದಿಲ್ಲ.

ಸಜ್ಜನರು ಪ್ರಯತ್ನಪೂರ್ವಕವಾಗಿ ಸತ್ಕುಲದ ಕನ್ಯೆಯನ್ನೆ ಮದುವೆಯಾಗಿ ಮಕ್ಕಳನ್ನು ಪಡೆದು ವಾರ್ಧಕ್ಯದಲ್ಲಿ ತಪಸ್ಸಿಗೆ ಹೋಗಬೇಕು.

ದುಷ್ಟಸ್ತ್ರೀಯನ್ನು ಮದುವೆಯಾಗುವುದು ನೀನು ಹೇಳುವಂತೆ ದುಃಖಕರವೆ. ಅದಕ್ಕಿಂತ ಅಗ್ನಿಪ್ರವೇಶವಾಗಲಿ ಹಾವಿನ ಬಾಯಿಗೆ ಬೀಳುವುದಾಗಲಿ ಮುಳ್ಳಿನ ಮೇಲೆ ಮಲಗುವುದಾಗಲಿ ಲೇಸು.

ಮಗು, ನೀನು ನನ್ನಲ್ಲಿ ವೇದಾಧ್ಯಯನ ಮಾಡಿರುವಿ. ಅದಕ್ಕೆ ಗುರುದಕ್ಷಿಣೆ ಬೇಡವೆ ? ನೀನು ಮದುವೆಯಾಗುವುದೆ ನನಗೆ ಗುರುದಕ್ಷಿಣೆ. ನಿನ್ನ ಹಿಂದಿನ ಜನ್ಮದ ಪತ್ನಿಯಾದ ಸತ್ಕುಲ ಪ್ರಸೂತಳಾದ ಮಾಲತಿಯನ್ನು ಒಂದು ಶುಭದಿನದಲ್ಲಿ ಮದುವೆಯಾಗು. ಅವಳು ಮನುವಂಶದ ಸೃಂಜಯರಾಜನ ಮಗಳಾಗಿ ಹುಟ್ಟಿ ನಿನ್ನನ್ನು ಪಡೆಯಲೆಂದು ಭಾರತ ದೇಶದಲ್ಲಿ ತಪಸ್ಸು ಮಾಡುತ್ತಿದ್ದಾಳೆ. ರತ್ನಮಾಲೆಯಂತೆ ಲಕ್ಷ್ಮಿಯಂತೆ ಇರುವ ಆ ಉತ್ತಮ ಸ್ತ್ರೀಯನ್ನು ಪರಿಗ್ರಹಿಸು. ಭಾರತ ಭೂಮಿಯಲ್ಲಿ ಜನರು ಮಾಡುವ ತಪಸ್ಸು ವ್ಯರ್ಥವಾಗಬಾರದು.

ನೀನು ಮೊದಲಿಗೆ ಗೃಹಸ್ಥಾಶ್ರಮ ಕೈಗೊಳ್ಳಬೇಕು. ಅನಂತರ ವಾನಪ್ರಸ್ಥವನ್ನೂ ಅನಂತರ ಮೋಕ್ಷಕ್ಕಾಗಿ ಸಂನ್ಯಾಸವನ್ನೂ ಸ್ವೀಕರಿಸಬೇಕು. ಇದು ಶ್ರುತ್ಯುಕ್ತವಾದ ಕ್ರಮ. ವೈಷ್ಣವರಿಗೆ ಗೃಹಸ್ಥಾಶ್ರಮದಲ್ಲಿ ಹರಿಪೂಜೆ, ಸಂನ್ಯಾಸಾಶ್ರಮದಲ್ಲಿ ತಪಸ್ಸು ಎರಡೂ ಶ್ರುತಿವಿಹಿತವಾಗಿದೆ. ನೀನು ವೈಷ್ಣವ, ಮೊದಲಿಗೆ ಗೃಹಸ್ಥನಾಗಿ ಕೃಷ್ಣನ ಪಾದ-ವನ್ನರ್ಚಿಸು.

**ಅಂತರ್ಬಾಹ್ಯೇ ಹರಿರ್ಯಸ್ಯ ತಸ್ಯ ಕಿಂ ತಪಸಾ ಸುತ ।**
**ನಾಂತರ್ಬಾಹ್ಯೇ ಹರಿರ್ಯಸ್ಯ ತಸ್ಯ ಕಿಂ ತಪಸಾऽನಘ ॥**

ಒಳಗೂ ಹೊರಗೂ ಹರಿಯನ್ನು ಕಾಣಬಲ್ಲವನಿಗೆ ತಪದಿಂದೇನು ಸಾಧಿಸ-ಬೇಕಾಗಿದೆ ? ಒಳಗೂ ಹೊರಗೂ ಹರಿಯನ್ನು ಕಾಣದವ ತಪದಿಂದೇನು ಸಾಧಿಸಬಲ್ಲ ?

ತಪಸ್ಸಿನಿಂದಲೆ ಹರಿಯನ್ನಾರಾಧಿಸಬೇಕು, ಬೇರೆ ಮಾರ್ಗವಿಲ್ಲವೆನ್ನುವುದೂ ನಿಜವೆ. ಆದರೆ ಯಾವುದೇ ಆಶ್ರಮದಲ್ಲಿ ಕೃಷ್ಣನನ್ನು ಅರ್ಚಿಸಿದರೂ ಅದು ತಪಸ್ಸೇ ಆಗುತ್ತದೆ. ಆದ್ದರಿಂದ ಮಗು, ನಾನು ಹೇಳುವುದನ್ನು ಕೇಳು, ಗೃಹಸ್ಥನಾಗಿ ಕೃಷ್ಣನನ್ನು ಅರ್ಚಿಸು.

ಗೃಹಸ್ಥರಿಗೆ ಸದಾ ಸುಖ. ಪ್ರೀತಿಯ ಮಡದಿಯೊಡನೆ ಸುಖವಾಗಿ ರಮಿಸುವು-ದೆಂದರೆ ಸ್ವರ್ಗಸುಖಕ್ಕೆ ಸಮಾನ. ಮುಮುಕ್ಷುಗಳೂ ಕೂಡ ಮಡದಿಯರ ದರ್ಶನ ಆಲಿಂಗನಗಳನ್ನು ಬಯಸುತ್ತಾರೆ.

**ಸರ್ವಸ್ಪರ್ಶ ಸುಖಾತ್ ಸ್ತ್ರೀಣಾಮುಪಸ್ಪರ್ಶ ಸುಖಂ ಪರಂ ।**
**ತತಃ ಸುಖತಮಂ ಪುತ್ರದರ್ಶನಂ ಸ್ಪರ್ಶನಂ ಮುನೇ ॥**

ಎಲ್ಲ ಸ್ಪರ್ಶಸುಖಗಳಿಗಿಂತ ಮಡದಿಯರ ಆಲಿಂಗನ ಸುಖವೆ ಶ್ರೇಷ್ಠ. ಅದಕ್ಕಿಂತಲೂ ಪುತ್ರನ ದರ್ಶನ ಆಲಿಂಗನಗಳು ಹೆಚ್ಚು ಸುಖಕರ.

**ಸರ್ವೇಭ್ಯಃ ಪ್ರೇಯಸೀ ಕಾಂತಾ ಪ್ರಿಯಾ ತೇನ ಸುತಃ ಪ್ರಿಯಃ ।**
**ಪುತ್ರಪ್ರಯೋಜನಾ ಕಾಂತಾ ಶತಕಾಂತಾಪ್ರಿಯಃ ಸುತಃ ॥**

ಎಲ್ಲರಿಗಿಂತ ಪ್ರಿಯಕರಳು ಮಡದಿ. ಆದರಿಂದ ಅವಳಿಗೆ ಪ್ರಿಯೆ ಎಂದೇ ಇನ್ನೊಂದು ಹೆಸರು. ಅಂಥ ಮಡದಿಯಿಂದ ಸಿಗುವ ಪ್ರಯೋಜನ ಪುತ್ರಪ್ರಾಪ್ತಿ-ಯಾಗಿರುವುದರಿಂದ ನೂರುಮಂದಿ ಮಡದಿಯರಿಗಿಂತ ಒಬ್ಬ ಪುತ್ರ ಹೆಚ್ಚು ಪ್ರಿಯ.

**ನಾಸ್ತಿ ಪುತ್ರಾತ್ ಪರೋ ಬಂಧುರ್ನಾಸ್ತಿ ಪುತ್ರಾತ್ ಪ್ರಿಯಃ ಪರಃ ।**
**ಸರ್ವೇಭ್ಯೋ ಜಯಮನ್ವಿಚ್ಛೇತ್ ಪುತ್ರಾದೇಕಾತ್ ಪರಾಜಯಂ ॥**

ಪುತ್ರನಿಗಿಂತ ಹೆಚ್ಚಿನ ಬಂಧು ಇಲ್ಲ. ಪುತ್ರನಿಗಿಂತ ಹೆಚ್ಚಿನ ಪ್ರಿಯನಿಲ್ಲ. ಬೇರೆ ಎಲ್ಲರನ್ನೂ ಗೆಲ್ಲಲು ಬಯಸಬೇಕು. ಆದರೆ ಪುತ್ರನೊಬ್ಬನಿಂದ ಸೋಲನ್ನು ಬಯಸಬೇಕು.

ಆದರ್ಶಗೃಹಸ್ಥ ತನಗೆ ಸಂಪತ್ತೂ ಬೇಡ, ಅದಕ್ಕಿಂತ ಮಗನೆ ಹೆಚ್ಚು ಪ್ರಿಯ ಎನ್ನುತ್ತಾನೆ. ಅದರಿಂದ ತನ್ನೆಲ್ಲ ಸಂಪತ್ತನ್ನೂ ತನಗೆ ಅತ್ಯಂತ ಪ್ರಿಯನಾದ ಪುತ್ರನಿಗೆ ಬಿಟ್ಟು ಹೋಗುತ್ತಾನೆ.'

-ಹೀಗೆ ಹೇಳಿ ಬ್ರಹ್ಮ ಸುಮ್ಮನಾದ. ನಾರದ ಹೇಳತೊಡಗಿದ-

'ತಾನು ವೇದಾರ್ಥವನ್ನೆಲ್ಲ ತಿಳಿದಿದ್ದರೂ ತನ್ನ ಮಗನನ್ನು ದುರ್ಮಾರ್ಗದಲ್ಲಿ ಹೋಗಲು ಉಪದೇಶಿಸುವವ ಎಂಥ ತಂದೆ ? ನೀರಗುಳ್ಳೆಯಂತೆ ಸಂಸಾರವೆಲ್ಲ

ನಶ್ವರ. ನೀರ ಮೇಲೆ ಗೆರೆ ಎಳೆದಂತೆ ವ್ಯರ್ಥ. ಹರಿ ದಾಸ್ಯವನ್ನು ಬಿಟ್ಟು ವಿಷಯದಲ್ಲಿ ಮನಸ್ಸನ್ನು ಹಾಕಿ ದುರ್ಲಭವಾದ ಮಾನವಜನ್ಮವನ್ನು ವ್ಯರ್ಥಗೊಳಿಸಬಾರದು.

**ಕಾ ವಾ ಕಸ್ಯ ಪ್ರಿಯಾ ಪುತ್ರೋ ಬಂಧುಃ ಕೋ ವಾ ಭವಾರ್ಣವೇ ।**
**ಕರ್ಮೋರ್ಮಿಭಿರ್ಯೋಜನಾಚ ತದಪಾಯೇ ವಿಯೋಜನಾ ॥**

ಯಾರು ಯಾರಿಗೆ ಪ್ರಿಯೆ, ಯಾರು ಯಾರಿಗೆ ಪುತ್ರ, ಯಾರು ಯಾರಿಗೆ ಬಂಧು ? ಸಂಸಾರ ಸಾಗರದಲ್ಲಿ ಕರ್ಮದ ಅಲೆಗಳೆದ್ದಾಗ ಯಾರು ಯಾರೋ ಜೊತೆ ಸೇರುತ್ತಾರೆ. ಅಲೆ ಶಾಂತವಾದಾಗ ಬಿಟ್ಟು ಹೋಗುತ್ತಾರೆ.

**ಸುಕರ್ಮ ಕಾರಯೇದ್ ಯೋ ಹಿ ತನ್ಮಿತ್ರಂ ಸ ಪಿತಾ ಗುರುಃ ।**
**ದುರ್ಬುದ್ಧಿಂ ಜನಯೇದ್ ಯೋ ಹಿ ಸ ರಿಪುಃ ಸ್ಯಾತ್ ಕಥಂ ಪಿತಾ ॥**

ಸತ್ಕರ್ಮ ಮಾಡಲು ಪ್ರೇರಿಸುವವನು ಮಿತ್ರನೋ ತಂದೆಯೋ ಗುರುವೋ ಆಗಬಹುದು. ದುರ್ಬುದ್ಧಿ ಹೇಳಿಕೊಡುವವ ಶತ್ರುವೆನಿಸುತ್ತಾನೆ. ಅವನೆಂತು ತಂದೆ ಎನಿಸುತ್ತಾನೆ ?

ಇದು ವೇದದ ಸಾರ. ನಾನು ತಿಳಿದಂತೆ ಹೇಳಿದ್ದೇನೆ. ಆದರೂ ನಿನ್ನಾಜ್ಞೆಯನ್ನು ನಾನು ಪಾಲಿಸಲೆ ಬೇಕು. ಅದಕ್ಕೆ ನಾನು ನರನಾರಾಯಣಾಶ್ರಮ ಹೋಗಿ ನಾರಾಯಣನ ಉಪದೇಶ ಪಡೆದ ಬಳಿಕ ಮದುವೆಯಾಗುತ್ತೇನೆ.

ಹೀಗೆ ಹೇಳಿ ನಾರದ ಸುಮ್ಮನಾದ. ಆಗ ಒಡನೆ ಅವನ ಮೇಲೆ ಪುಷ್ಪವೃಷ್ಟಿ-ಯಾಯಿತು.

ಕ್ಷಣಕಾಲ ತಂದೆಯ ಮುಂದೆ ಸುಮ್ಮನೆ ನಿಂತು ನಾರದ ಪುನಃ ಹೇಳಿದ- 'ನನಗೆ ಕೃಷ್ಣಮಂತ್ರ ಉಪದೇಶಿಸು. ನನಗೆ ಅಭೀಷ್ಟವಾದ ಮಂತ್ರ ಅದು. ಅದಕ್ಕೆ ಸಂಬಂಧಿಸಿದ ತತ್ವವನ್ನೂ ಕೃಷ್ಣನ ಗುಣಗಳನ್ನೂ ಉಪದೇಶಿಸು. ಬಳಿಕ ನಿನ್ನಿಷ್ಟದಂತೆ ನಾನು ಮದುವೆಯಾಗುತ್ತೇನೆ. ಮನಸ್ಸಿನ ಆಸೆ ಪೂರ್ಣವಾದಾಗ ಯಾವುದೇ ಕಾರ್ಯ ಮಾಡುವುದು ಸುಲಭ.

ನಾರದನ ಮಾತು ಕೇಳಿ ಬ್ರಹ್ಮ ಹೇಳಿದ—

**ಪತ್ಯುರ್ಮಂತ್ರಂ ಪಿತುರ್ಮಂತ್ರಂ ನ ಗೃಹ್ಣೀಯಾದ್ ವಿಚಕ್ಷಣಃ ।**
**ವಿವಿಕ್ತಾಶ್ರಮಿಣಾಂ ಚೈವ ನ ಮಂತ್ರಃ ಸುಖದಾಯಕಃ ॥**

ಸತಿ ಪತಿಯಿಂದಲೂ ಸುತ ಪಿತನಿಂದಲೂ ಒಂದು ಆಶ್ರಮದವ ಇನ್ನೊಂದು ಆಶ್ರಮ-ದವನಿಂದಲೂ ಮಂತ್ರೋಪದೇಶ ಪಡೆಯಕೂಡದು. ಪಡೆದರೆ ಸುಖದಾಯಕವಾಗದು.

ಗುರು ಪತಿ ಪತ್ನಿ ವಿದ್ಯೆ ಸುಖ ಭಯ ದುಃಖ ಎಲ್ಲವೂ ಜೀವಿಗೆ ಮಾತೆಯ ಗರ್ಭದಲ್ಲಿರುವಾಗಲೆ ನಿರ್ಣಯವಾಗಿರುತ್ತದೆ. ಅದು ಸ್ವೇಚ್ಛೆಯಿಂದ ನಿರ್ಣಯಿಸು-ವಂಥದ್ದಲ್ಲ. ನಿನಗೆ ಗುರು ನಮಗಿಂತ ಪೂರ್ವದವನಾದ ಮಹೇಶ್ವರ. ಜ್ಞಾನಿಗಳಲ್ಲಿ ಶ್ರೇಷ್ಠ. ಅವನ ಬಳಿಗೆ ಹೋಗು. ಅವನಿಂದ ಮಂತ್ರವನ್ನೂ ಅದರ ತತ್ವವನ್ನೂ ತಿಳಿದು ನಾರಾಯಣನ ಉಪದೇಶವನ್ನು ಪಡೆದು ಬೇಗನೆ ನನ್ನ ಬಳಿ ಬಾ,' ಹೀಗೆ ಹೇಳಿ ಬ್ರಹ್ಮ ಸುಮ್ಮನಾದ.

ನಾರದ ತಂದೆಗೆ ಭಕ್ತಿಯಿಂದ ನಮಿಸಿ ಶಿವಲೋಕಕ್ಕೆ ತೆರಳಿದ.

**ಇಲ್ಲಿಗೆ ಶ್ರೀ ಬ್ರಹ್ಮವೈವರ್ತ ಮಹಾಪುರಾಣದ ಸೌತಿ ಶೌನಕ ಸಂವಾದದಲ್ಲಿ ಬ್ರಹ್ಮನಾರದೋಕ್ತ ಸಂಸಾರ ಸುಖಾಸುಖವರ್ಣನೆ ಎಂಬ ಇಪ್ಪತ್ತನಾಲ್ಕನೆ ಅಧ್ಯಾಯ ಮುಗಿಯಿತು.**

## ಕೈಲಾಸಕ್ಕೆ ನಾರದಾಗಮನ

**ಅಧ್ಯಾಯ-೨೫**

ನಾರದ ಕ್ಷಣದಲ್ಲಿ ಶಿವಲೋಕ ಸೇರಿದ. ಧ್ರುವಲೋಕಕ್ಕಿಂತ ಲಕ್ಷಯೋಜನ ಎತ್ತರದಲ್ಲಿರುವ ಆ ಲೋಕ ಅನರ್ಘ್ಯ ರತ್ನಗಳಿಂದ ನಿರ್ಮಿತವಾಗಿದೆ, ವಿಚಿತ್ರವಾಗಿದೆ. ಯಾವುದೇ ಆಧಾರವಿಲ್ಲದೆ ಯೋಗಶಕ್ತಿಯಿಂದ ಶಿವ ಅದನ್ನು ಧರಿಸಿದ್ದಾನೆ. ಅದರಲ್ಲಿ ನಾನಾ ಬಗೆಯ ಕಟ್ಟಡಗಳಿವೆ. ಅಲ್ಲಲ್ಲ ಪುಣ್ಯಕರ್ಮ ಅನುಷ್ಠಿಸುವ ಮುನಿಗಳೆ ತುಂಬಿದ್ದಾರೆ. ಅಲ್ಲಿ ಸೂರ್ಯ ಚಂದ್ರರ ಬೆಳಕಿಲ್ಲ. ಉಜ್ಜ್ವಲವಾದ ಅಸಂಖ್ಯ ಅಗ್ನಿಗಳೆ ಕೋಟಿಯ ರೂಪದಲ್ಲಿ ಆ ಲೋಕವನ್ನು ಆವರಿಸಿವೆ. ಲಕ್ಷಯೋಜನ ವಿಸ್ತಾರ. ರತ್ನ ವಜ್ರಗಳಿಂದ ನಿರ್ಮಿತವಾದ ಮೂರುಕೋಟಿ ವಿಚಿತ್ರ ಮನೋಹರ ಗೃಹಗಳಿವೆ. ಮಾಣಿಕ್ಯ ಮುತ್ತುಗಳಿಂದ ರತ್ನಕನ್ನಡಿಗಳಿಂದ ಶೋಭಿಸುವ ಆ ಲೋಕವನ್ನು ವಿಶ್ವಕರ್ಮ ಸ್ವಪ್ನದಲ್ಲಿಯೂ ಕಂಡಿಲ್ಲ.

ಅಲ್ಲಿ ಕಲ್ಪದ ಕೊನೆವರೆಗೂ ಶಿವನ ಪರಿವಾರದವರು ವಾಸ ಮಾಡುತ್ತಾರೆ. ನೂರು ಕೋಟಿ ಲಕ್ಷ ಸಿದ್ಧರನ್ನೂ ಮೂರು ಕೋಟಿ ·ಲಕ್ಷಪಾರ್ಷದರನ್ನೂ ಮೂರು ಲಕ್ಷ ವಿಕಾರರೂಪಿ ಭೈರವರನ್ನೂ ನಾನೂರು ಲಕ್ಷ ಕ್ಷೇತ್ರಪಾಲರನ್ನೂ ಮಂದಾರಾದಿ-ಕಲ್ಪವೃಕ್ಷಗಳನ್ನೂ ಸುಂದರ ಕಾಮಧೇನುಗಳನ್ನೂ ಅಲ್ಲಿ ಕಂಡು ನಾರದ ವಿಸ್ಮಿತನಾದ. ಒಡನೆ ದೇವಯೋಗಿಗಳಿಗೆ ಗುರುವಾದ ಶಿವನಿಗೆ ಇದೇನು ಮಹಾ! ಎಂದು ಕೊಂಡ.

ಈ ಲೋಕ ಮೂರು ಲೋಕಕ್ಕಿಂತ ವಿಲಕ್ಷಣ. ಮರಣಭಯ ರೋಗ ದುಃಖ ಜರೆ ಯಾವುದೂ ಇಲ್ಲಿ ಇಲ್ಲ.

ದೂರದಲ್ಲಿ ಸಭಾಮಧ್ಯೆ ಶಾಂತ ಮನೋಹರ ರೂಪಿನ ಶಿವ ಕುಳಿತಿದ್ದುದನ್ನು ನಾರದ ಕಂಡ. ಕಮಲದಂತ ಮೂರು ಕಣ್ಣುಗಳು. ಚಂದ್ರನಂಥ ಐದು ಮುಖಗಳು, ಶಿರದಲ್ಲಿ ಗಂಗೆ ಚಂದ್ರರು, ಪುಟಕ್ಕಿಟ್ಟ ಚಿನ್ನದಂತೆ ಹೊಳೆವ ಜಟೆ, ಬಿಳಿ ಮೈ, ದಿಗಂಬರನಾಗಿದ್ದಾನೆ, ಕಮಲಾಕ್ಷಮಾಲೆ ಹಿಡಿದು ಕೃಷ್ಣನಾಮ ಜಪಿಸುತ್ತಿದ್ದಾನೆ. ನೀಲಕಂಠ ನಾಗಭೂಷಣನಾಗಿ ಯೋಗಿಗಳು ಸಿದ್ಧರು ಮುನಿಗಳಿಂದ ಅರ್ಚನೆ ಸ್ವೀಕರಿಸುತ್ತಿದ್ದಾನೆ. ಸಿದ್ಧರಿಗೆ ಒಡೆಯ, ಸಿದ್ಧಿಕಾರಣ, ಮೃತ್ಯುಂಜಯ, ಕಾಲಯಮನಿಗೆ ಯಮ, ಪ್ರಸನ್ನ ಮುಖದಲ್ಲಿ ಮಂದಹಾಸ, ಲೋಕಕಲ್ಯಾಣಕಾರಕ, ಬೇಡಿದ್ದನ್ನು ಕೊಡುವವ, ಬೇಗನೆ ಭಕ್ತರಿಗೆ ಒಲಿಯುವವ, ಭವರೋಗ ವಿಲ್ಲದವ, ಭಕ್ತಪ್ರಿಯ, ಭಕ್ತರಿಗೆ ಆಪ್ತಬಂಧು. ಇಂಥ ಶಿವನ ಬಳಿಗೆ ಹೋಗಿ ನಾರದ ತಲೆ ಬಾಗಿ ನಮಿಸಿದ. ಮೂರು ತಂತಿಯ ವೀಣೆಯನ್ನು ನುಡಿನುಡಿಸುತ್ತ ಮಧುರ ಕಂಠದಿಂದ ಕೃಷ್ಣನ ಗುಣಗಾನ ಮಾಡತೊಡಗಿದ. ಬ್ರಹ್ಮಪುತ್ರನಾದ ವೇದಪಾರಂಗತನಾದ ನಾರದ ಮುನೀಂದ್ರನನ್ನು ಯೋಗಿ ಸಿದ್ಧ ಮುನಿಗಳಿಂದ ಪರಿವೃತನಾದ ಶಿವ ಕಂಡ. ಸಂತೋಷದಿಂದ ಎದ್ದು ಸಂಭ್ರಮದಿಂದ ಮುನಿಗೆ ಆಲಿಂಗನವಿತ್ತು ಆಶೀರ್ವದಿಸಿದ, ಆಸನಾದಿಗಳನ್ನಿತ್ತ. ಅವನ ಆಗಮನದ ಉದ್ದೇಶವೇನೆಂದು ಕೇಳಿದ. ಪಾರ್ಷದರೊಂದಿಗೆ ಸುಂದರವಾದ ರತ್ನ ಸಿಂಹಾಸನವನ್ನು ಅಲಂಕರಿಸಿದ.

ನಾರದ ಆಸನದಲ್ಲಿ ಕುಳಿತುಕೊಳ್ಳದೆ ಕೈಮುಗಿದು ನಿಂತೇ ಭಕ್ತಿಯಿಂದ ಶಿವನನ್ನು ನಮಿಸಿ ಸ್ತುತಿಸಿದ. ಗಂಧರ್ವರಾಜನಾಗಿದ್ದಾಗ ತಾನು ಮಾಡಿದ ರಮ್ಯವಾದ ಸ್ತೋತ್ರ-ದಿಂದಲೆ ಶಿವನನ್ನು ಹೊಗಳಿ ಪುನಃ ಪುನಃ ಪ್ರಣಾಮ ಮಾಡಿದ. ಶಿವನಾಜ್ಞೆಯಿಂದ ಅವನ ಎಡದಲ್ಲಿ ಕುಳಿತ. ಅವನಲ್ಲಿ ತನ್ನ ಮನದ ಅಭಿಲಾಷೆಯನ್ನು ನಿವೇದಿಸಿಕೊಂಡ. ದಯಾನಿಧಿಯಾದ ಶಿವ ಕೇಳಿ ಆಗಲಿ ಎಂದ.

**ಇಲ್ಲಿಗೆ ಶ್ರೀ ಬ್ರಹ್ಮವೈವರ್ತ ಮಹಾಪುರಾಣದ ಸೌತಿ ಶೌನಕ ಸಂವಾದದಲ್ಲಿ ಕೈಲಾಸಕ್ಕೆ ನಾರದಾಗಮನವೆಂಬ ಇಪ್ಪತ್ತೈದನೆ ಅಧ್ಯಾಯ ಮುಗಿಯಿತು.**

## ಆಹ್ನಿಕ ನಿರೂಪಣ

**ಅಧ್ಯಾಯ-೨೬**

ಹರಿಸ್ತೋತ್ರ ಕವಚ ಮಂತ್ರ ಪೂಜಾವಿಧಿ ಧ್ಯಾನ ಜ್ಞಾನಗಳನ್ನು ಉಪದೇಶಿಸೆಂದು ನಾರದ ಶಿವನಲ್ಲಿ ಬೇಡಿದ. ಅವೆಲ್ಲವನ್ನೂ ಶಿವ ಉಪದೇಶಿಸಿದ. ನಾರದನ ಮನೋರಥ ಪೂರ್ಣವಾಯಿತು. ಆದರೂ ಭಕ್ತಿಯಿಂದ ನಮಿಸಿ ಪುನಃ ಕೇಳಿದ, 'ಬ್ರಾಹ್ಮಣನ ನಿತ್ಯಾಹ್ನಿಕ ಹೇಗಿರಬೇಕು ? ಸ್ವಧರ್ಮಾಚರಣೆ ಹೇಗಿರಬೇಕು ?'

ಶಿವ ಹೇಳತೊಡಗಿದ— 'ಬ್ರಾಹ್ಮಮುಹೂರ್ತದಲ್ಲಿ ಹಾಸಿಗೆಯಿಂದೆದ್ದು ಬಟ್ಟೆ ಒದಲಿಸಿ, ಬ್ರಹ್ಮರಂಧ್ರದಲ್ಲಿರುವ ನಿರ್ಮಲವಾದ ಸೂಕ್ಷ್ಮ ಸಹಸ್ರಾರು ಕಮಲದಲ್ಲಿ ಜ್ಞಾನಮುದ್ರೆ ತೋರುವ ಸಾಕ್ಷಾತ್ ಬ್ರಹ್ಮಸ್ವರೂಪನಾದ ಪ್ರಸನ್ನ ಮುಖದ ಪರಮ-ಗುರುವನ್ನು ಧ್ಯಾನಿಸಿ ಮಾನಸ ಪೂಜೆಯನ್ನು ಅರ್ಪಿಸಬೇಕು. ಹೃದಯಕಮಲದಲ್ಲಿ ಇಷ್ಟದೇವತೆಯನ್ನು ಧ್ಯಾನಿಸಬೇಕು. ಅವನ ಅನುಜ್ಞೆ ಸ್ವೀಕರಿಸಿ ದಿನದ ಕಾರ್ಯಗಳಿಗೆ ತೊಡಗಬೇಕು.

ಮೊದಲಿಗೆ ಗುರುವನ್ನು ಪೂಜಿಸಿ ಅವನ ಆಜ್ಞೆ ಪಡೆದೇ ಇಷ್ಟದೇವತೆಯನ್ನು ಪೂಜಿಸಬೇಕು. ಏಕೆಂದರೆ ಗುರುವಿನಿಂದ ಇಷ್ಟದೇವತೆಯ ಸ್ವರೂಪ ಮಂತ್ರ ಪೂಜಾವಿಧಿ ಜಪಗಳೆಲ್ಲ ತಿಳಿಯುತ್ತದೆ ಹೊರತು ಇಷ್ಟದೇವತೆಯಿಂದ ಗುರುವಿನ ಸ್ವರೂಪ ಮುಂತಾದುದಲ್ಲ. ಅದರಿಂದ ದೇವತೆಗಿಂತ ಗುರು ಮಿಗಿಲು.

ಬ್ರಹ್ಮ ವಿಷ್ಣು ಮಹೇಶ್ವರ ಪ್ರಕೃತಿ ಚಂದ್ರ ಸೂರ್ಯ ಅಗ್ನಿ ವಾಯು ವರುಣ ಮುಂತಾದವರು, ಮಾತಾಪಿತೃಗಳು ಮಿತ್ರರು ಎಲ್ಲರೂ ಗುರುಗಳೆ. ಪರದೇವತೆಯಾದ ಪರಬ್ರಹ್ಮನೂ ಗುರುವೆ. ಅದರಿಂದ ಗುರುಪೂಜೆಗಿಂತ ಮಿಗಿಲಾದ ಪೂಜೆ ಇಲ್ಲ.

ಅಭೀಷ್ಟ ದೇವೇ ರುಷ್ಟೇ ಚ ಸಮರ್ಥೋ ರಕ್ಷಣೇ ಗುರುಃ ।
ನ ಸಮರ್ಥೋ ಗುರೌ ರುಷ್ಟೇ ರಕ್ಷಣೇ ಸರ್ವದೇವತಾಃ ॥

ಇಷ್ಟದೇವತೆ ಕೋಪಗೊಂಡರೆ ಗುರು ರಕ್ಷಿಸಬಲ್ಲ. ಗುರು ಕೋಪಗೊಂಡರೆ ಯಾವ ದೇವನೂ ರಕ್ಷಿಸಲಾರ.

ಯಸ್ಯ ತುಷ್ಟೋ ಗುರುಃ ಶಶ್ವತ್ ಜಯಸ್ತಸ್ಯ ಪದೇ ಪದೇ ।
ಯಸ್ಯ ರುಷ್ಟೋ ಗುರುಸ್ತಸ್ಯ ಸರ್ವನಾಶಶ್ಚ ಸರ್ವದಾ ॥

ಗುರು ಒಲಿದರೆ ಅಡಿಗಡಿಗೆ ಜಯಲಾಭ. ಗುರು ಮುನಿದರೆ ಸದಾ ಸರ್ವನಾಶ.

ಗುರುಪೂಜೆ ಮಾಡದೆ ದೇವಪೂಜೆ ಮಾಡಿದರೆ ಬ್ರಹ್ಮಹತ್ಯೆಗಿಂತ ನೂರುಪಟ್ಟು ಪಾಪ. ಇದರಲ್ಲಿ ಸಂಶಯವಿಲ್ಲ. ಸಾಮವೇದದಲ್ಲಿ ಹರಿ ಹೀಗೆ ಹೇಳಿದ್ದಾನೆ. ಆದ್ದರಿಂದ ಇಷ್ಟದೇವಾರ್ಚನೆಗಿಂತಲೂ ಮೊದಲಿಗೆ ಗುರುಪೂಜೆಯಾಗಬೇಕು.

ಹೀಗೆ ಗುರುವನ್ನೂ ಇಷ್ಟದೇವತೆಯನ್ನೂ ಧ್ಯಾನಿಸಿ ಸ್ತುತಿಸಿದ ಬಳಿಕ ನಿರ್ಮಲ-ವಾದ ಸ್ಥಳದಲ್ಲಿ ಮಲಮೂತ್ರ ವಿಸರ್ಜಿಸಬೇಕು. ನೀರು ನೀರಿನ ಸಮೀಪಸ್ಥಳ, ಮರದ ಬುಡ, ಮಾರ್ಗ, ಹೊಲಗದ್ದೆಗಳು, ದನದ ಕೊಟ್ಟಿಗೆ, ನದಿ, ಗುಹೆ, ಹೂದೋಟ, ಕೆಸರಿನ ಜಾಗ, ಊರಿನ ಒಳಭಾಗ, ಮನೆಗಳ ಸಮೀಪ, ಸೇತುವೆ, ಲಾಳದ ಗುತ್ತಿ, ಸ್ಮಶಾನ, ಬೆಂಕಿಯ ಸಮೀಪ, ಆಟದ ಬಯಲು, ಮಹಾ ಅರಣ್ಯ, ಮಂಚದ ತಳಬಾಗ, ಮರದ ನೆರಳು ಬೀಳುವ ಜಾಗ, ಎಲೆಗಳಿಂದ ಆವೃತವಾದ ಪ್ರಾಣಿಗಳ ವಾಸಸ್ಥಾನ, ಗರಿಕೆದರ್ಭೆಗಳು ಬೆಳೆಯುವ ಸ್ಥಳ, ಹುತ್ತ ಮರಗಳನ್ನು ನೆಡುವ ಜಾಗ, ಯಾಗಾದಿ ಕಾರ್ಯಕ್ಕಾಗಿ ಶುದ್ಧಿಗೊಳಿಸಿದ ಸ್ಥಳ ಇವನ್ನೆಲ್ಲ ಬಿಟ್ಟು ಬೇರೆ ಸ್ಥಳಗಳಲ್ಲಿ ಹಳ್ಳ ತೋಡಿ ಅಲ್ಲಿ ಮಲಮೂತ್ರ ವಿಸರ್ಜಿಸಬೇಕು. ಹಗಲಲ್ಲಿ ಉತ್ತರಾಭಿಮುಖವಾಗಿ ರಾತ್ರಿ ಪಶ್ಚಿಮಾಭಿಮುಖವಾಗಿ ಸಂಧ್ಯಾಕಾಲದಲ್ಲಿ ದಕ್ಷಿಣಾಭಿಮುಖವಾಗಿ, ದುರ್ಗಂಧ ಮೂಗು ಬಾಯೊಳಗೆ ಹೋಗದಂತೆ ಮೌನವಾಗಿದ್ದು ಶ್ವಾಸ ಬಿಗಿ ಹಿಡಿದು ಮಲಮೂತ್ರ ವಿಸರ್ಜಿಸಿ ಮಣ್ಣಿಂದ ಮುಚ್ಚಬೇಕು. ಮೃತ್ತಿಕೆಯಿಂದಲೂ ಜಲ-ದಿಂದಲೂ ಶೌಚ ಮಾಡಿಕೊಳ್ಳಬೇಕು. ಲಿಂಗಕ್ಕೊಮ್ಮೆ, ಎಡಗೈಗೆ ನಾಲ್ಕು ಬಾರಿ, ಎರಡೂ ಕೈಗಳಿಗೆ ಎರಡು ಬಾರಿ ಮೂತ್ರವಿಸರ್ಜನೆಯಲ್ಲಿ ಮೃತ್ತಿಕಾಶೌಚ, ಸ್ತ್ರೀಸಂಗದ ಅನಂತರದ ಮೂತ್ರ ವಿಸರ್ಜನೆಯಲ್ಲಿ ಇದಕ್ಕೆ ಎರಡು ಪಟ್ಟು ಅಥವಾ ನಾಲ್ಕು ಪಟ್ಟು ಮೃತ್ತಿಕಾಶೌಚ. ಮಲವಿಸರ್ಜನೆಯಲ್ಲಿ ಲಿಂಗಕ್ಕೊಮ್ಮೆ ಗುದಕ್ಕೆ ಮೂರುಬಾರಿ ಎಡಗೈಗೆ ಹತ್ತುಬಾರಿ, ಎರಡೂ ಕೈಗಳಿಗೆ ಏಳು ಬಾರಿ, ಕಾಲುಗಳಿಗೆ ಆರು ಬಾರಿ ಮೃತ್ತಿಕಾ ಶೌಚ. ಇದು ಗೃಹಸ್ಥರಾದ ವಿಪ್ರರಿಗೆ ಹೇಳಿದ ಶೌಚ ವಿಧಿ. ವಿಧವಾ ಸ್ತ್ರೀಯರಿಗೆ ಇದಕ್ಕೆ ಎರಡು ಪಟ್ಟು. ಯತಿಗಳು, ಬ್ರಹ್ಮರ್ಷಿಗಳು, ಬ್ರಹ್ಮಚಾರಿಗಳು ಇವರಿಗೆಲ್ಲ ನಾಲ್ಕು ಪಟ್ಟು. ಉಪನಯನವಾಗದ ಬಾಲಕರು, ಶೂದ್ರರು, ಸ್ತ್ರೀಯರು ಇವರಿಗೆಲ್ಲ ದುರ್ಗಂಧ ಹೋಗುವಷ್ಟು ಮಾತ್ರ ಶೌಚ. ಗೃಹಸ್ಥ ಬ್ರಾಹ್ಮಣರಿಗೆ ಹೇಳಿದ ಶೌಚವೆ ಕ್ಷತ್ರಿಯರಿಗೂ ವೈಶ್ಯರಿಗೂ ವಿಹಿತ. ಶುದ್ಧಿಯನ್ನು ಬಯಸುವವನು ಈ ಶೌಚದಲ್ಲಿ ಹೆಚ್ಚು ಕಡಿಮೆ ಮಾಡಕೂಡದು. ಮಾಡಿದರೆ ಪ್ರಾಯಶ್ಚಿತ್ತ ಮಾಡಬೇಕಾಗುವುದು.

ಶೌಚಕ್ಕೆ ಉಪಯೋಗಿಸುವ ಮೃತ್ತಿಕೆ ಶುದ್ಧವಾಗಿರಬೇಕು. ಹುತ್ತದ ಮಣ್ಣು ಇಲಿ ತೋಡಿದ ಮಣ್ಣು, ನೀರೊಳಗಿನ ಮಣ್ಣು, ಒಮ್ಮೆ ಶೌಚಕ್ಕೆ ಉಪಯೋಗಿಸಿರುವ ಮಣ್ಣು, ಮನೆಯ ನೆಲದ ಅಥವಾ ಗೋಡೆಯ ಮಣ್ಣು, ಮಲಗುವ ಸ್ಥಳ, ನಾಲ್ಕು ದಾರಿ ಸೇರುವ ಸ್ಥಳ, ದನಗಳ ಕೊಟ್ಟಿಗೆ, ಗೋಪಾದ, ಹೊಲ ಉದ್ಯಾನಗಳ ಮಣ್ಣು, ಕ್ರಿಮಿಯುಕ್ತವಾದ ಮಣ್ಣು, ನೇಗಿಲಿಂದ ಎತ್ತಿದ ಮಣ್ಣು ದರ್ಭೆ ದೂರ್ವೆ ಅಶ್ವತ್ಥಗಳ ಬುಡದ ಮಣ್ಣು ಶೌಚಕ್ಕೆ ನಿಷಿದ್ಧ.

ಸ್ನಾನ ಮಾಡಲಿ ಬಿಡಲಿ ಮೃತ್ತಿಕಾಶೌಚವಾದರೆ ಬ್ರಾಹ್ಮಣ ಶುದ್ಧನಾಗುವನು. ಮೃತ್ತಿಕಾಶೌಚವಿಲ್ಲದವ ಎಲ್ಲ ಕರ್ಮಗಳಲ್ಲಿಯೂ ಅನರ್ಹ.

ಮೃತ್ತಿಕಾಶೌಚವಾದ ಬಳಿಕ ಮುಖಪ್ರಕ್ಷಾಲನ, ಹದಿನಾರು ಬಾರಿ ಬಾಯಿ ಮುಕ್ಕಳಿಸಿ ಹಲ್ಲುಜ್ಜುವ ಕಡ್ಡಿಯಿಂದ ಹಲ್ಲು ತಿಕ್ಕಬೇಕು. ತಿರುಗಿ ಹದಿನಾರು ಬಾರಿ ಬಾಯಿ ಮುಕ್ಕಳಿಸಬೇಕು. ಹಲ್ಲುಜ್ಜುವ ಕಡ್ಡಿ ಹೇಗಿರಬೇಕೆಂಬುದನ್ನು ಸಾಮವೇದದ ಆಹ್ನಿಕ ಕ್ರಮದಲ್ಲಿ ಹರಿ ಹೇಳಿದ್ದಾನೆ. ಉತ್ತರಣೆ, ಲಕ್ಕಿಗಿಡ, ಮಾವು, ಕಣಗಿಲೆ, ಕಗ್ಗಲಿಗಿಡ, ಬಾಗೆ, ಜಾಜಿ, ಪುನ್ನಾಗ, ಶಾಲಕ, ಅಶೋಕ, ಅರ್ಜುನ ಕ್ಷೀರಿವೃಕ್ಷ, ಕದಂಬ, ನೇರಳೆ, ಪಗಡೆ, ಗರಿಕೆ, ಮುತ್ತುಗ, ಯಗಚಿ, ದೇವದಾರು, ಪಾರಿಜಾತ, ಬೂರುಗ ಗಿಡಗಳ ಕಡ್ಡಿ ಅಥವಾ ಎಲೆ ಹಲ್ಲು ಉಜ್ಜಲು ವಿಹಿತ. ಮುಳ್ಳಿನ ಮರಗಿಡ ಬಳ್ಳಿಗಳು ಅಳಲೆ ಮೊರಟೆ ಹುಣಸೆ ತಾಳೆ ಖರ್ಜೂರ ತೆಂಗು ಗಿಡಗಳು ವರ್ಜ್ಯ. ಹಲ್ಲು ಉಜ್ಜದವನು ಯಾವ ಶೌಚದಿಂದಲೂ ಶುಚಿಯಾಗುವುದಿಲ್ಲ. ಯಾವ ಕರ್ಮಕ್ಕೂ ಅರ್ಹನಾಗುವುದಿಲ್ಲ.

ಸ್ನಾನ ಮಾಡಿ ಬಿಳಿ ಬಟ್ಟೆ ಉಟ್ಟು ಕಾಲು ತೊಳೆದುಕೊಂಡು ಆಚಮನ ಮಾಡಿ ಪ್ರಾತಃ ಸಂಧ್ಯಾವಂದನೆ ಮಾಡಬೇಕು. ತ್ರಿಕಾಲ ಸಂಧ್ಯಾವಂದನೆ ಮಾಡಿದರೆ ಸರ್ವತೀರ್ಥಸ್ನಾನದ ಫಲ. ಮಾಡದಿದ್ದರೆ ಎಲ್ಲ ಕರ್ಮಗಳಲ್ಲಿ ಅನರ್ಹನೆನಿಸುತ್ತಾನೆ.

**ನೋಪತಿಷ್ಠತಿ ಯಃ ಪೂರ್ವಾಂ ನೋಪಾಸ್ತೇ ಯಸ್ತು ಪಶ್ಚಿಮಾಂ ।**
**ಸ ಶೂದ್ರವದ್ ಬಹಿಷ್ಕಾರ್ಯಃ ಸರ್ವಸ್ಮಾದ್ ದ್ವಿಜಕರ್ಮಣಃ ॥**

ಪ್ರಾತಃ ಸಾಯಂ ಸಂಧ್ಯಾವಂದನೆಗಳನ್ನು ಮಾಡದವ ಶೂದ್ರನಂತೆ ಸಕಲ ದ್ವಿಜಕರ್ಮಗಳಿಗೂ ಅನರ್ಹನೆನಿಸುತ್ತಾನೆ.

**ಪೂರ್ವಾಂ ಸಂಧ್ಯಾಂ ಪರಿತ್ಯಜ್ಯ ಮಧ್ಯಮಾಂ ಪಶ್ಚಿಮಾಂ ತಥಾ ।**
**ಬ್ರಹ್ಮಹತ್ಯಾಮಾತ್ಮಹತ್ಯಾಂ ಪ್ರತ್ಯಹಂ ಲಭತೇ ದ್ವಿಜಃ ॥**

ಪ್ರಾತಃ ಮಧ್ಯಾಹ್ನ ಸಾಯಂ ಸಂಧ್ಯಾವಂದನೆಗಳನ್ನು ಮಾಡದ ದ್ವಿಜನು ಪ್ರತಿದಿನ ಬ್ರಹ್ಮಹತ್ಯಾ ಆತ್ಮಹತ್ಯಾ ಪಾತಕಗಳನ್ನು ಹೊಂದುತ್ತಾನೆ.

ಏಕಾದಶೀವ್ರತವನ್ನೂ ಸಂಧ್ಯಾವಂದನೆಯನ್ನೂ ಮಾಡದ ಬ್ರಾಹ್ಮಣನು ಶೂದ್ರಸ್ತ್ರೀ ಸಂಗ ಮಾಡಿದ ಬ್ರಾಹ್ಮಣನಂತೆ ಕಲ್ಪಕಾಲ ಕಾಲಸೂತ್ರ ನರಕದಲ್ಲಿ ಬೀಳುವನು.

ಪ್ರಾತಃ ಸಂಧ್ಯಾವಂದನೆ ಮಾಡಿದ ಬಳಿಕ, ಗುರು ಇಷ್ಟದೈವ ಸೂರ್ಯ ಬ್ರಹ್ಮ ವಿಷ್ಣು ಮಹೇಶ್ವರ ಲಕ್ಷ್ಮಿ ಸರಸ್ವತಿ ಪಾರ್ವತಿಯರನ್ನು ಭಕ್ತಿಯಿಂದ ನಮಿಸಿ ತುಪ್ಪ ಕನ್ನಡಿ ಜೇನು ಚಿನ್ನಗಳನ್ನು ಸ್ಪರ್ಶ ಮಾಡಬೇಕು.

ಸ್ನಾನವನ್ನು ಸಕಾಲದಲ್ಲಿ ಮಾಡಬೇಕು. ಕೊಳ ಬಾವಿ ನದಿ ನದ ಕಾಲುವೆ ಪುಣ್ಯತೀರ್ಥಗಳಲ್ಲಿ ಸ್ನಾನ ಮಾಡುವಾಗ ಮೊದಲಿಗೆ ಮಲಸ್ನಾನ ಮಾಡಿ ಸಂಕಲ್ಪ

ಪೂರ್ವಕವಾಗಿ ಮತ್ತೆ ಸ್ನಾನ ಮಾಡಬೇಕು. ಅದರಿಂದ ಕೃಷ್ಣನ ಅನುಗ್ರಹವಾಗುವುದು, ಮಹಾತ್ಮರಾದ ಕೃಷ್ಣಭಕ್ತರ ಅನುಗ್ರಹವಾಗುವುದು. ಸಂಕಲ್ಪ ಸಕಲ ಪಾಪಪರಿಹಾರಕ. ಸಂಕಲ್ಪ ಮಾಡಿದ ಬಳಿಕ ಮೈಗೆ ಮೃತ್ತಿಕೆ ಲೇಪಿಸಿಕೊಳ್ಳಬೇಕು. ಆಗ ಈ ವೇದಮಂತ್ರವನ್ನು ಹೇಳಬೇಕು—

**ಅಶ್ವಕ್ರಾಂತೇ ರಥಕ್ರಾಂತೇ ವಿಷ್ಣುಕ್ರಾಂತೇ ವಸುಂಧರೇ**
**ಮೃತ್ತಿಕೇ ಹರ ಮೇ ಪಾಪಂ ಯನ್ಮಯಾ ದುಷ್ಕೃತಂ ಕೃತಂ ।**
**ಉದ್ಧೃತಾಸಿ ವರಾಹೇಣ ಕೃಷ್ಣೇನ ಶತಬಾಹುನಾ**
**ಆರುಹ್ಯ ಮಮ ಗಾತ್ರಾಣಿ ಸರ್ವಂ ಪಾಪಂ ಪ್ರಮೋಚಯ ॥**

**'ಪುಣ್ಯಂ ದೇಹಿ ಮಹಾಭಾಗೇ ಸ್ನಾನಾನುಜ್ಞಾಂ ಕುರುಷ್ವ ಮಾಂ ।**

ಅಶ್ವರಥಗಳಿಂದಲೂ ತ್ರಿವಿಕ್ರಮಾವತಾರಿ ವಿಷ್ಣುವಿನಿಂದಲೂ ಆಕ್ರಾಂತಳಾದ ವಸುಂಧರೆ ಎನಿಸಿದ ಮೃತ್ತಿಕೆಯೆ, ನಾನು ಮಾಡಿದ ದುಷ್ಕರ್ಮದ ಪಾಪವನ್ನು ಪರಿಹರಿಸು. ವರಾಹ ರೂಪಿ ಹರಿ ನೂರು ಬಾಹುಗಳಿಂದ ನಿನ್ನನ್ನೆತ್ತಿದ. ಅಂಥ ನೀನು ನನ್ನ ಶರೀರದ ಮೇಲೇರಿ ನನ್ನ ಎಲ್ಲ ಪಾಪವನ್ನೂ ದೂರಮಾಡು. ಪುಣ್ಯ ನೀಡು. ಸ್ನಾನಕ್ಕೆ ಅನುಜ್ಞೆ ನೀಡು.'

ಅನಂತರ ನಾಭಿ ಪರ್ಯಂತ ನೀರಿಗಿಳಿದು ಮಂತ್ರ ಪೂರ್ವಕ ನಾಲ್ಕು ಹಸ್ತಪ್ರಮಾಣದ ಮಂಡಲವನ್ನು ನೀರಲ್ಲಿ ಬರೆದು ಅದರೊಳಗೆ ಈ ಪುಣ್ಯ ತೀರ್ಥಾಭಿಮಾನಿ ದೇವತೆಗಳನ್ನು ಆವಾಹಿಸಬೇಕು- ಗಂಗೆ, ಯಮುನೆ, ಗೋದಾವರಿ, ಸರಸ್ವತಿ, ನರ್ಮದೆ, ಸಿಂಧು, ಕಾವೇರಿ, ನಲಿನಿ, ನಂದಿನಿ, ಸೀತೆ, ಮಾಲತಿ, ಮಹಾಪಗೆ, ವಿಷ್ಣುಪಾದಾಬ್ಜ ಸಂಭೂತೆ, ತ್ರಿಪಥಗಾಮಿನಿ, ಪದ್ಮಾವತಿ, ಭೋಗವತಿ, ಸ್ವರ್ಣರೇಖೆ, ಕೌಶಿಕಿ, ದಕ್ಷೆ, ಪೃಥ್ವಿ, ಸುಭಗೆ, ವಿಶ್ವಕಾಯೆ, ಶಿವೆ, ಅಮೃತೆ, ವಿದ್ಯಾಧರಿ, ಸುಪ್ರಸನ್ನೆ, ಲೋಕಪ್ರಸಾದಿನಿ, ಕ್ಷೇಮೆ, ವೈಷ್ಣವಿ, ಶಾಂತೆ, ಗೋಮತಿ, ಸತಿ, ಸಾವಿತ್ರಿ, ತುಲಸಿ, ದುರ್ಗೆ, ಮಹಾಲಕ್ಷ್ಮಿ, ರಾಧೆ, ಲೋಪಾಮುದ್ರೆ, ದಿತಿ, ರತಿ, ಅಹಲ್ಯೆ, ಅದಿತಿ, ಸಂಜ್ಞೆ, ಸ್ವಧೆ, ಸ್ವಾಹೆ, ಅರುಂಧತಿ, ಶತರೂಪೆ, ದೇವಹೂತಿ ಇತ್ಯಾದಿ.

ಸ್ನಾನಮಾಡಿ ಭುಜ ಹಣೆ ಕಂಠ ಎದೆಗಳಲ್ಲಿ ತಿಲಕ ಧರಿಸಬೇಕು. ಹಣೆಯಲ್ಲಿ ತಿಲಕವಿಡದಿದ್ದರೆ ಸ್ನಾನದಾನ ತಪಸ್ಸು ಹೋಮ ದೇವಕಾರ್ಯ ಪಿತೃಕಾರ್ಯವೆಲ್ಲ ನಿಷ್ಫಲ. ಬ್ರಾಹ್ಮಣ ತಿಲಕ ಧರಿಸಿ ಸಂಧ್ಯಾವಂದನೆ ತರ್ಪಣ ಮಾಡಿ ದೇವತೆಗಳಿಗೆ ನಮಿಸಿ ಮನೆಗೆ ಹೋಗಬೇಕು. ಕಾಲು ತೊಳೆದು ಶುಭ್ರವಸ್ತ್ರಗಳನ್ನು ಧರಿಸಿ ದೇವರ ಮನೆಯನ್ನು ಪ್ರವೇಶಿಸಬೇಕು. ಸ್ನಾನ ಮಾಡಿ ಬಂದಿದ್ದರೂ ಕಾಲು ತೊಳೆಯದೆ ದೇವರ ಮನೆಯನ್ನು ಪ್ರವೇಶಿಸಿದರೆ ಅವನು ಮಾಡಿದ ಸ್ನಾನಾದಿಗಳೆಲ್ಲ

ವ್ಯರ್ಥವಾಗುವುದು. ಜಪ ಹೋಮ ತರ್ಪಣ ಬಲಿ ವೈಶ್ವದೇವವೆಲ್ಲವೂ ವ್ಯರ್ಥವಾಗುವುದು. ಒದ್ದೆ ಬಟ್ಟೆಯುಟ್ಟು ದೇವರಮನೆ ಪ್ರವೇಶಿಸಿದರೆ ಲಕ್ಷ್ಮಿ ಶಾಪಕೊಟ್ಟು ಮನೆಯನ್ನು ಬಿಟ್ಟು ಹೋಗುತ್ತಾಳೆ.

ದೇವರ ಮನೆಯಲ್ಲಿ ಆಸನದಲ್ಲಿ ಕುಳಿತು ಆಚಮನ ಮಾಡಿ ವೇದೋಕ್ತಕ್ರಮದಿಂದ ಭಕ್ತಿಪೂರ್ವಕ ದೇವಪೂಜೆ ಮಾಡಬೇಕು. ಶಾಲಗ್ರಾಮ ಮಣಿ ಮಂತ್ರ ಪ್ರತಿಮಾ ಜಲ ಸ್ಥಲ ಗೋಪೃಷ್ಠ ಗುರು ವಿಪ್ರರಲ್ಲಿ ಹರಿಯ ಅರ್ಚನೆ ಮಾಡಬಹುದು. ಇವೆಲ್ಲವುಗಳಲ್ಲಿ ಶಾಲಗ್ರಾಮಪೂಜೆ ಶ್ರೇಷ್ಠ. ಎಲ್ಲ ದೇವತೆಗಳೂ ಶಾಲಗ್ರಾಮದಲ್ಲಿ ಸನ್ನಿಹಿತರಾಗಿರುತ್ತಾರೆ. ಶಾಲಗ್ರಾಮತೀರ್ಥ ತಲೆಗೆ ಪ್ರೋಕ್ಷಿಸಿಕೊಂಡರೆ ಸಕಲ ತೀರ್ಥಸ್ನಾನ ಫಲ, ಸರ್ವಯಜ್ಞಫಲ. ಶಾಲಗ್ರಾಮ ತೀರ್ಥವನ್ನು ಭಕ್ತಿಯಿಂದ ಪಾನ ಮಾಡುವವ ಜೀವನ್ಮುಕ್ತನಾಗುವನು, ವಿಷ್ಣುಲೋಕಸೇರುವನು. ಶಾಲಿಗ್ರಾಮ ಶಿಲಾ ಚಕ್ರವಿರುವಲ್ಲಿ ಚಕ್ರಧಾರಿ ಹರಿ ಇರುತ್ತಾನೆ. ಸರ್ವತೀರ್ಥದೇವತೆಗಳಿರುತ್ತಾರೆ. ಆ ಸ್ಥಳದಲ್ಲಿ ಸತ್ತವನು ರತ್ನಖಚಿತ ದಿವ್ಯವಿಮಾನವೇರಿ ವಿಷ್ಣುಲೋಕ ಸೇರುತ್ತಾನೆ. ಶಾಲಗ್ರಾಮದಲ್ಲಿ ಹೊರತು ಬೇರೆ ಎಲ್ಲಿಯೂ ಹರಿಯ ಪೂಜೆ ಪೂರ್ಣಫಲಪ್ರದವಲ್ಲ.

ಪೂಜಾಕ್ರಮ ಹೀಗೆ— ಕೆಲವರು ಷೋಡಶೋಪಚಾರಗಳನ್ನೂ ಕೆಲವರು ದ್ವಾದಶೋಪಚಾರಗಳನ್ನೂ ಇನ್ನು ಕೆಲವರು ಪಂಚೋಪಚಾರಗಳನ್ನೂ ಹರಿಗೆ ಅರ್ಪಿಸುವುದುಂಟು. ಉಪಚಾರವೆಷ್ಟೇ ಇರಲಿ, ಯಥಾಶಕ್ತಿ ಭಕ್ತಿಪೂರ್ವಕ ಅರ್ಪಿಸಬೇಕು.

ಷೋಡಶೋಪಚಾರಗಳು ಇವು— ಆಸನ, ಪಾದ್ಯ, ಅರ್ಘ್ಯ, ಆಚಮನ, ಸ್ನಾನ, ವಸ್ತ್ರ, ಗಂಧ, ಪುಷ್ಪ, ಧೂಪ, ದೀಪ, ನೈವೇದ್ಯ, ಜಲ, ತಾಂಬೂಲ, ಸುವರ್ಣಪುಷ್ಪ, ನೀರಾಜನ ಮತ್ತು ಶಯ್ಯಾ. ಗಂಧ ನೈವೇದ್ಯ ತಾಂಬೂಲ ಶಯ್ಯೆಗಳನ್ನು ಬಿಟ್ಟು ಉಳಿದುವು ದ್ವಾದಶೋಪಚಾರಗಳು. ಪಾದ್ಯ ಅರ್ಘ್ಯ ಸ್ನಾನ ನೈವೇದ್ಯ ಪುಷ್ಪ ಇವು ಪಂಚೋಪಚಾರಗಳು. ಇವೆಲ್ಲವನ್ನೂ ಮೂಲಮಂತ್ರದಿಂದ ಅರ್ಪಿಸಬೇಕು. ಗುರುಗಳು ಉಪದೇಶಿಸುವ ಮೂಲ ಮಂತ್ರವೆ ಪ್ರಶಸ್ತ.

ಮೊದಲಿಗೆ ಭೂತೋಚ್ಚಾಟನೆ ಪ್ರಾಣಾಯಾಮಗಳನ್ನು ಮಾಡಿ ಅಂಗ ಪ್ರತ್ಯಂಗಗಳಲ್ಲಿ ತತ್ವನ್ಯಾಸ ಮಾತೃಕಾನ್ಯಾಸ ಮಾಡಿ ಕಲಶ ಪೂಜೆ ಮಾಡಬೇಕು. ತ್ರಿಕೋಣ ಮಂಡಲದಲ್ಲಿ ಕೂರ್ಮನನ್ನು ಪೂಜಿಸಬೇಕು. ಶಂಖವನ್ನು ನೀರಿನಿಂದ ತುಂಬಿಸಿ ಆ ಮಂಡಲದಲ್ಲಿರಿಸಿ ವಿಧಿವತ್ತಾಗಿ ಸಕಲ ತೀರ್ಥಗಳನ್ನು ಅಲ್ಲಿ ಆವಾಹಿಸಬೇಕು. ಆ ಜಲದಿಂದ ಪೂಜಾಸಾಮಗ್ರಿಗಳನ್ನು ತೊಳೆದು ಯೋಗಾಸನದಲ್ಲಿ ಕುಳಿತು ಪುಷ್ಪವನ್ನು ಕೈಯಲ್ಲಿ ಹಿಡಿದು ಗುರೂಪದೇಶಾನುಸಾರ ಕೃಷ್ಣನನ್ನು ಧ್ಯಾನಿಸಬೇಕು. ಆಗ ಮೂಲಮಂತ್ರದಿಂದ ಆಸನ ಪಾದ್ಯಾದಿ ಉಪಚಾರಗಳನ್ನು ನೀಡಬೇಕು. ಬಳಿಕ

ವಿಗ್ರಹಕ್ಕೆ ತತ್ವನ್ಯಾಸ ಮಾತೃಕಾನ್ಯಾಸ ಮಾಡಿ ಪಂಚರಾತ್ರಾನುಸಾರ ಹರಿಯನ್ನು ಪೂಜಿಸಬೇಕು. ಮೂಲಮಂತ್ರವನ್ನು ಯಥಾಶಕ್ತಿ ಜಪಿಸುತ್ತ ನೈವೇದ್ಯ ಸಮರ್ಪಿಸ-ಬೇಕು. ಅಪರಾಧ ಕ್ಷಮಾಯಾಚನೆ ಮಾಡಿ ಶಿರಸಾಷ್ಟಾಂಗ ನಮಿಸಬೇಕು.

ದೇವಪೂಜೆ ಮುಗಿಸಿ ಶ್ರೌತಸ್ಮಾರ್ತ ಅಗ್ನಿಗಳಲ್ಲಿ ಯಜ್ಞ ಮಾಡಿ ಬ್ರಹ್ಮಯಜ್ಞ ವೈಶ್ವದೇವ ಬಲಿಗಳನ್ನೂ ಅರ್ಪಿಸಬೇಕು. ದೇವರ್ಷಿ ಪಿತೃತರ್ಪಣ ನೀಡಿ ಯಥಾಶಕ್ತಿ ಅನ್ನದಾನ ಮಾಡಬೇಕು. ಧನ್ಯವಾದ ಗೃಹಸ್ಥಾಶ್ರಮದ ಸುಖ ಅನುಭವಿಸಬೇಕು. ಇದು ವೇದೋಕ್ತ ಕ್ರಮ. ಹೀಗೆ ದ್ವಿಜರಿಗೆ ವೇದ ವಿಹಿತವಾದ ಆಹ್ನಿಕ ಕ್ರಮ ಹೇಳಿದ್ದೇನೆ. ಇನ್ನೇನು ಕೇಳಬಯಸುವಿ ?

**ಇಲ್ಲಿಗೆ ಶ್ರೀ ಬ್ರಹ್ಮವೈವರ್ತ ಮಹಾಪುರಾಣದ ಸೌತಿ ಶೌನಕ ಸಂವಾದದಲ್ಲಿ ಶಿವನಾರದ ಸಂವಾದದಲ್ಲಿ ಆಹ್ನಿಕ ನಿರೂಪಣವೆಂಬ ಇಪ್ಪತ್ತಾರನೆ ಅಧ್ಯಾಯ ಮುಗಿಯಿತು.**

## ಭಕ್ಷ್ಯಾಭಕ್ಷ್ಯ ವಿವರಣ

**ಅಧ್ಯಾಯ-೨೭**

ನಾರದ ಕೇಳಿದ, 'ಸರ್ವಜ್ಞ ಸರ್ವೇಶ್ವರನಾದ ಶಿವನೆ, ಸಾಮಾನ್ಯವಾಗಿ ವೈಷ್ಣವರಾದ ದ್ವಿಜರೆಲ್ಲರ ಮತ್ತು ಗೃಹಸ್ಥ ಸನ್ಯಾಸಿ ಬ್ರಹ್ಮಚಾರಿಗಳ ಕರ್ತವ್ಯ ಅಕರ್ತವ್ಯಗಳನ್ನೂ ಭೋಜ್ಯ ಅಭೋಜ್ಯಗಳನ್ನೂ ವರ್ಣಿಸು.'

ಶಿವ ನುಡಿದ, 'ತಪಸ್ವಿಗಳಲ್ಲಿ ಕೆಲವರು ನಿರಾಹಾರಿಗಳು, ಕೆಲವರು ವಾಯ್ವಾಹಾರಿಗಳು, ಇನ್ನು ಕೆಲವರು ಫಲಾಹಾರಿಗಳು. ಪತ್ನೀ ಸಮೇತನಾದ ಗೃಹಸ್ಥ ಅನ್ನಾಹಾರಿ. ಆದ್ದರಿಂದ ಬ್ರಾಹ್ಮಣ ಗೃಹಸ್ಥನಿಗೆ ಸದಾ ಹವಿಷ್ಯಾನ್ನ ವಿಹಿತ.

**ನಾರಾಯಣೋಚ್ಛಿಷ್ಟಮಿಷ್ಟಂ ಅಭಕ್ಷ್ಯಮನಿವೇದಿತಂ ।**
**ಅನ್ನಂ ವಿಷ್ಠಾ ಜಲಂ ಮೂತ್ರಂ ಯದ್ ವಿಷ್ಣೋರನಿವೇದಿತಂ ॥**

ನಾರಾಯಣನಿಗೆ ನಿವೇದಿತವಾದ ಅನ್ನವನ್ನೇ ಉಣಬೇಕು. ಅನಿವೇದಿತ-ವಾದುದನ್ನು ಉಣಕೂಡದು. ವಿಷ್ಣುವಿಗೆ ಅನಿವೇದಿತವಾದ ಅನ್ನ ಮಲಕ್ಕೆ ಸಮಾನ, ಜಲ ಮೂತ್ರಕ್ಕೆ ಸಮಾನ. ಹರಿದಿನದಲ್ಲಿ ಅವು ಸರ್ವಥಾ ಮಲಮೂತ್ರಸಮಾನ.

ಹರಿದಿನದಲ್ಲಿ ಬ್ರಾಹ್ಮಣ ಜಿಹ್ವಾಚಾಪಲ್ಯದಿಂದ ಅನ್ನ ಉಂಡರೆ ಮೂಲೋಕದ ಜೀವಿಗಳು ಮಾಡುವ ಪಾಪದ ಫಲವನ್ನೆಲ್ಲ ಅವನೊಬ್ಬನೆ ಉಣಬೇಕಾಗುತ್ತದೆ.

ಆದ್ದರಿಂದ ಹರಿದಿನದಲ್ಲಿ ಬ್ರಾಹ್ಮಣ ಗೃಹಸ್ಥ ಉಣಬಾರದು, ಉಣಬಾರದು, ಉಣಬಾರದು.

**ಗೃಹೀ ಶೈವಶ್ಚ ಶಾಕ್ತಶ್ಚ ಬ್ರಾಹ್ಮಣೋ ಜ್ಞಾನದುರ್ಬಲಃ ।**
**ಪ್ರಯಾತಿ ಕಾಲಸೂತ್ರಂ ಚ ಭುಕ್ತ್ವಾ ಚ ಹರಿವಾಸರೇ ॥**

ಬ್ರಾಹ್ಮಣ ಗೃಹಸ್ಥ ಶೈವನಾದರೂ ಸರಿಯೆ, ಶಾಕ್ತನಾದರೂ ಸರಿಯೆ, ಹರಿದಿನದಲ್ಲಿ ಉಂಡರೆ ಕಾಲಸೂತ್ರ ನರಕಕ್ಕೆ ಹೋಗುತ್ತಾನೆ.

ಹರಿದಿನದಲ್ಲಿ ಉಣ್ಣುವವನು ಎಷ್ಟು ಅನ್ನದ ಅಗಳು ನುಂಗುವನೋ ಅಷ್ಟು ಸಂಖ್ಯೆಯಲ್ಲಿ ಕ್ರಿಮಿಗಳು ಹದಿನಾಲ್ಕು ಇಂದ್ರರ ಕಾಲ ನರಕದಲ್ಲಿ ಅವನನ್ನು ಭಕ್ಷಿಸುವುವು. ಜನ್ಮಾಷ್ಟಮೀ ರಾಮನವಮೀ ಶಿವರಾತ್ರಿಗಳಲ್ಲಿ ಉಂಡರೂ ದ್ವಿಗುಣ ಪಾಪ. ಉಪವಾಸದಲ್ಲಿ ಅಶಕ್ತರಾಗಿದ್ದರೆ ಮಾತ್ರ ಹಣ್ಣು ಗಡ್ಡೆ ನೀರು ಸೇವಿಸಬಹುದು. ಶಕ್ತರಾಗಿದ್ದೂ ಅವುಗಳನ್ನು ಸೇವಿಸಿದರೆ ಆತ್ಮವಂಚನೆಯಾಗುತ್ತದೆ. ಇದೆಲ್ಲವೂ ಶೈವ-ರಾಗಲಿ ಶಾಕ್ತರಾಗಲಿ ಎಲ್ಲರೂ ಅನುಸರಿಸಬೇಕಾದ ನಿಯಮ.

ಇನ್ನು ವೈಷ್ಣವರು ಯತಿಗಳು ಬ್ರಹ್ಮಚಾರಿಗಳು ವಿಶೇಷವಾಗಿ ಅನುಸರಿಸಬೇಕಾದ ನಿಯಮಗಳು ಇವು— ನಿತ್ಯ ವಿಷ್ಣು ನೈವೇದ್ಯವನ್ನೇ ಸೇವಿಸಬೇಕು. ಅದರಿಂದ ನಿತ್ಯ ನೂರು ಉಪವಾಸದ ಫಲ. ಅವನ ಪವಿತ್ರ ಸ್ಪರ್ಶ ಸಂಭಾಷಣ ದರ್ಶನಗಳನ್ನು ಸಕಲ ತೀರ್ಥಾಭಿಮಾನಿದೇವತೆಗಳೂ ಬಯಸುತ್ತಾರೆ. ಕೆಲವು ದೇಶಗಳಲ್ಲಿ ಅವಲಕ್ಕಿಯನ್ನು ನೈವೇದ್ಯಕ್ಕೂ ಭಕ್ಷಣಕ್ಕೂ ಉಪಯೋಗಿಸುವುದುಂಟು. ಅದು ಪ್ರಶಸ್ತವಲ್ಲ. ಯತಿ ವಿಧವಾ ಬ್ರಾಹ್ಮಚಾರಿಗಳಿಗಂತೂ ಅದು ತಾಂಬೂಲದಂತೆಯೇ ನಿಷಿದ್ಧ. ತಾಂಬೂಲ ಗೋಮಾಂಸದಂತೆ ನಿಷಿದ್ಧ. ಎಲ್ಲ ಬ್ರಾಹ್ಮಣರಿಗೂ ಅಭೋಜ್ಯವಾದ ಪದಾರ್ಥಗಳನ್ನು ಹರಿ ಸಾಮವೇದದ ಆಹ್ನಿಕ ಪ್ರಕರಣದಲ್ಲಿ ಹೀಗೆ ಹೇಳಿದ್ದಾನೆ. ತಾಮ್ರ ಪಾತ್ರದಲ್ಲಿಟ್ಟ ಹಾಲು, ಎಂಜಲೆಲೆಗೆ ಹಾಕಿದ ತುಪ್ಪ, ಉಪ್ಪು ಬೆರೆಸಿದ ಹಾಲು, ಇವು ಗೋಮಾಂಸಕ್ಕೆ ಸಮಾನ. ಕಂಚಿನ ಪಾತ್ರೆಯಲ್ಲಿ ಎಳನೀರು, ತಾಮ್ರಪಾತ್ರೆಯಲ್ಲಿ ಲಾಮಂಚದ ನೀರು ಪಾನಕಗಳನ್ನು ಕುಡಿಯುವುದು ಸುರಾಪಾನಕ್ಕೆ ಸಮಾನ.

**ಉತ್ಥಾಯ ವಾಮ ಹಸ್ತೇನ ಯಸ್ತೋಯಂ ಪಿಬತಿ ದ್ವಿಜಃ ।**
**ಸುರಾಪೀ ಚ ಸ ವಿಜ್ಞೇಯಃ ಸರ್ವಧರ್ಮ ಬಹಿಷ್ಕೃತಃ ॥**

ನಿಂತು ಎಡಗೈಯಿಂದ ನೀರು ಕುಡಿಯುವ ದ್ವಿಜ ಮದ್ಯಪಾಯಿ ಎನಿಸುತ್ತಾನೆ. ಸರ್ವಧರ್ಮ ಬಹಿಷ್ಕೃತನಾಗುತ್ತಾನೆ.

ಒಮ್ಮೆ ತಿಂದುಳಿದ ಅನ್ನ, ಕುಡಿದುಳಿದ ನೀರು ಗೋಮಾಂಸಕ್ಕೆ ಸಮಾನ. ಅದನ್ನು ಹರಿಗೆ ನಿವೇದಿಸಲಾಗದು. ಕಾರ್ತಿಕ ಮಾಸದಲ್ಲಿ ಕಡವೆಕಾಯಿ, ಮಾಘದಲ್ಲಿ

ಮೂಲಂಗಿ, ಚಾತುರ್ಮಾಸ್ಯದಲ್ಲಿ ಕದಂಬಫಲ ಗೋಮಾಂಸ ಸಮಾನ. ಬಿಳಿ ತಾಳೆಹಣ್ಣು, ಕಾಡು ಕಡಲೆ ಮತ್ತು ಮೀನು ಎಲ್ಲ ದ್ವಿಜರಿಗೂ ಎಲ್ಲ ದೇಶದಲ್ಲಿಯೂ ತ್ಯಾಜ್ಯ. ಮೀನು ತಿಂದರೆ ಮೂರುದಿನ ಉಪವಾಸ ಮಾಡಿ ಪ್ರಾಯಶ್ಚಿತ್ತ ಮಾಡಿಕೊಳ್ಳಬೇಕು. ಪಾಡ್ಯದಿನ ಕುಂಬಳಕಾಯಿ ತಿಂದರೆ ಧನನಾಶ. ಬಿದಿಗೆ ಹೆಗ್ಗುಳ್ಳ ಹರಿಭಕ್ತಿ ನಾಶಕ. ತದಿಗೆ ಪಡುವಲಕಾಯಿ ಶತ್ರುವೃದ್ಧಿಗೆ ಕಾರಣ. ಚೌತಿ ಮೂಲಂಗಿ ಧನನಾಶಕ. ಪಂಚಮಿ ಬಿಲ್ವಫಲ ಅಪಕೀರ್ತಿಕರ. ಷಷ್ಠಿ ಬೇವು ಮೂಕಪ್ರಾಣಿಯ ಜನ್ಮಕ್ಕೆ ಕಾರಣ. ಸಪ್ತಮಿ ತಾಳೆಹಣ್ಣು ರೋಗ ವೃದ್ಧಿಕಾರಣ, ಶರೀರನಾಶಕರ. ಅಷ್ಟಮಿ ತೆಂಗಿನಕಾಯಿ ಬುದ್ಧಿನಾಶಕರ. ನವಮಿ ಸೋರೆಕಾಯಿ ಮತ್ತು ದಶಮಿ ಕಡವೆಕಾಯಿ ಗೋಮಾಂಸ ತುಲ್ಯ. ಏಕಾದಶಿ ಶಿಂಬಿ, ದ್ವಾದಶಿ ಪೂತಿಕಾ, ತ್ರಯೋದಶಿ ಬದನೆಕಾಯಿ, ಪುತ್ರನಾಶಕ್ಕೆ ಕಾರಣ. ಚತುರ್ದಶಿ ಉದ್ದಿನ ಭಕ್ಷ್ಯ ಮಹಾಪಾಪಕರ. ಹುಣ್ಣಿಮೆ ಅಮಾವಾಸ್ಯೆಗಳಲ್ಲಿ ಮಾಂಸ ಮಹಾಪಾಪಕರ. ಬೇರೆ ದಿನಗಳಲ್ಲಿ ಮಾತ್ರ ಕ್ಷತ್ರಿಯರು ಮುಂತಾದವರು ಯಜ್ಞಶೇಷ ಮಾಂಸವನ್ನು ಭಕ್ಷಿಸಬಹುದು. ಪ್ರಾತಃ ಸ್ನಾನದಲ್ಲಿಯೂ ಶ್ರಾದ್ಧ ಪರ್ವದಿನಗಳಲ್ಲಿಯೂ ಸಾಸಿವೆ ಎಣ್ಣೆ ಅಥವಾ ಬೇರೆ ಬೇಯಿಸಿದ ಎಣ್ಣೆ ಪ್ರಶಸ್ತ. ಅಮಾವಾಸ್ಯೆ, ಹುಣ್ಣಿಮೆ, ಸಂಕ್ರಮಣ, ಚತುರ್ದಶಿ, ಅಷ್ಟಮಿ ಭಾನುವಾರ ಶ್ರಾದ್ಧ ವ್ರತ ದಿನಗಳಲ್ಲಿ ಸ್ತ್ರೀಸಂಗನಿಷಿದ್ಧ ಮತ್ತು ಎಳ್ಳೆಣ್ಣೆ ಮಾಂಸ, ಕೆಂಪು ಬಣ್ಣದ ತರಕಾರಿ ಕಂಚಿನ ಪಾತ್ರೆಯಲ್ಲಿ ಊಟಗಳೂ ನಿಷಿದ್ಧ. ಚಾತುರ್ಮಾಸ್ಯದಲ್ಲಿ ಆಮೆಯ ಮಾಂಸ ನಿಷಿದ್ಧ. ಹಗಲು ಮಡದಿಯ ಸಂಗ ಎಲ್ಲ ವರ್ಣದವರಿಗೂ ನಿಷಿದ್ಧ. ರಾತ್ರಿ ಮೊಸರನ್ನ ಉಣ್ಣುವುದು, ಹಗಲಿನಲ್ಲಿಯೂ ಪ್ರಾತಃ ಸಾಯಂ ಸಂಧ್ಯೆಗಳಲ್ಲಿಯೂ ಮಲಗುವುದು, ಮುಟ್ಟಾದ ಸ್ತ್ರೀಯ ಸಂಗ ಮಾಡುವುದು ಇವೆಲ್ಲವೂ ನರಕಕ್ಕೆ ಕಾರಣ. ಮುಟ್ಟಾದವಳು, ಪತಿಪುತ್ರರಿಲ್ಲದವಳು, ವ್ಯಭಿಚಾರಿ ಸ್ತ್ರೀ, ಶೂದ್ರ, ಶೂದ್ರನಿಂದ ಯಾಗ ಮಾಡಿಸುವವನು, ಶೂದ್ರಸ್ತ್ರೀ ಸಂಪರ್ಕ ಮಾಡುವವನು, ಹಣ ಸಾಲಕೊಟ್ಟು ಬಡ್ಡಿಯಿಂದ ಜೀವಿಸುವವನು, ಲೆಕ್ಕಿಗ, ಚಿಕಿತ್ಸಕ ಇವರ ಅನ್ನ ನಿಷಿದ್ಧ. ಮೂಲಾ, ಮೃಗಶಿರ, ಪೂರ್ವಾಭಾದ್ರಾ, ಉತ್ತರಾಭಾದ್ರಾ ನಕ್ಷತ್ರಗಳಲ್ಲಿ ಮಾಂಸ ಗೋಮಾಂಸ-ತುಲ್ಯ. ಅಮಾವಾಸ್ಯೆ ಕೃತ್ತಿಕಾ ನಕ್ಷತ್ರಗಳಲ್ಲಿ ಕ್ಷೌರ ನಿಷಿದ್ಧ. ಸ್ತ್ರೀಸಂಗ ಅಥವಾ ಕ್ಷೌರ ಮಾಡಿಕೊಂಡು ದೇವತೆಗಳಿಗೆ ಪಿತೃಗಳಿಗೆ ತರ್ಪಣವಿತ್ತರೆ ಅದು ನೆತ್ತರಿಗೆ ಸಮವಾಗುವುದು. ತರ್ಪಣ ಕೊಡುವವ ನರಕ ಭಾಗಿಯಾಗುತ್ತಾನೆ.

ನಾರದ, ಕರ್ತವ್ಯ ಅಕರ್ತವ್ಯಗಳನ್ನೂ ಭೋಜ್ಯ ಅಭೋಜ್ಯಗಳನ್ನೂ ಹೇಳಿದ್ದೇನೆ. ಇನ್ನೇನು ಕೇಳಲು ಬಯಸುವಿ?

**ಇಲ್ಲಿಗೆ ಶ್ರೀ ಬ್ರಹ್ಮವೈವರ್ತ ಮಹಾಪುರಾಣದ ಸೌತಿ ಶೌನಕ ಸಂವಾದದಲ್ಲಿ ಶಿವನಾರದ ಸಂವಾದದಲ್ಲಿ ಭಕ್ಷ್ಯಾಭಕ್ಷ್ಯ ವಿವರಣವೆಂಬ ಇಪ್ಪತ್ತೇಳನೆ ಅಧ್ಯಾಯ ಮುಗಿಯಿತು.**

# ಬ್ರಹ್ಮಸ್ವರೂಪ ವೈಕುಂಠಾದಿ ವರ್ಣನ

## ಅಧ್ಯಾಯ-೨೮

ನಾರದ ಶಿವನಲ್ಲಿ ಬೇಡಿದ. 'ಜಗದ್ಗುರು, ನಿನ್ನ ಅನುಗ್ರಹದಿಂದ ಆಹ್ನಿಕ ಕ್ರಮ ಭಕ್ಷ್ಯಾಭಕ್ಷ್ಯ ವಿವೇಚನೆ ಮುಂತಾದುವನ್ನೆಲ್ಲ ತಿಳಿದುದಾಯಿತು. ಇನ್ನು ಮುಂದೆ ಪರಬ್ರಹ್ಮಸ್ವರೂಪವನ್ನು ಉಪದೇಶಿಸು. ಪರಬ್ರಹ್ಮ ಸಾಕಾರನೆ, ನಿರಾಕಾರನೆ ? ಸಗುಣನೆ, ನಿರ್ಗುಣನೆ ? ಜ್ಞೇಯನೆ, ಅಜ್ಞೇಯನೆ ? ಪ್ರಕೃತಿಯ ಲಕ್ಷಣವೇನು ? ಸೃಷ್ಟಿಕಾರ್ಯದಲ್ಲಿ ಪ್ರಕೃತಿ ಪರಬ್ರಹ್ಮರೊಳಗೆ ಯಾರು ಪ್ರಧಾನ ? ಇವೆಲ್ಲವನ್ನೂ ಹೇಳು.'

ಶಿವ ನಕ್ಕು ಹೇಳತೊಡಗಿದ— 'ನಾರದ, ನೀನು ಬಹು ರಹಸ್ಯವಾದ ವಿಷಯವನ್ನು ಕೇಳುತ್ತಿರುವೆ. ಇದು ವೇದ ಪುರಾಣಗಳಲ್ಲಿಯೂ ದುರ್ಲಭ. ನಾನು, ಬ್ರಹ್ಮ, ವಿಷ್ಣು, ಶೇಷ, ಧರ್ಮ, ವಿರಾಟ್ ಇವರೆಲ್ಲರೂ ವೇದದ ಮೂಲಕ ಪರಬ್ರಹ್ಮನನ್ನು ತಿಳಿದಿದ್ದೇವೆ. ಅವನು ಸಗುಣ ಜ್ಞೇಯನೆಂದೂ ತಿಳಿದಿದ್ದೇವೆ. ಈ ವಿಷಯದಲ್ಲಿ ಧರ್ಮ ವೈಕುಂಠದಲ್ಲಿ ಹರಿಯನ್ನು ಕೇಳಿದಾಗ ಆತ ಹೇಳಿದುದನ್ನೆ ನಾನು ನಿನಗೆ ಸ್ವಲ್ಪ ಹೇಳುತ್ತೇನೆ, ಕೇಳು. ಇದು ಅತ್ಯಂತ ಶ್ರೇಷ್ಠವಾದ ಉಪದೇಶ, ಅಜ್ಞಾನಾಂಧರಿಗೆ ಕಣ್ಣಿನಂತೆ ದಾರಿತೋರುವುದು. ಸಂಶಯ ಭ್ರಮಗಳೆಂಬ ಕತ್ತಲನ್ನು ನಾಶಮಾಡುವ ಉಜ್ವಲ ದೀಪವಿದು.

ಪರಮಾತ್ಮನೆ ಪರಬ್ರಹ್ಮ. ಅವನು ಸನಾತನ. ಎಲ್ಲರ ದೇಹದಲ್ಲಿದ್ದು ಅವರ ಕರ್ಮಗಳಿಗೆ ಸಾಕ್ಷಿಯಾಗಿದ್ದಾನೆ. ಜೀವರ ಪಂಚಪ್ರಾಣಗಳು ವಿಷ್ಣುವಿಗೂ ಮನಸ್ಸು ಬ್ರಹ್ಮನಿಗೂ, ಜ್ಞಾನ ನನಗೂ, ಶಕ್ತಿ ಪ್ರಕೃತಿಗೂ ಅಧೀನ. ನಾವೆಲ್ಲ ಪರಮಾತ್ಮನಿಗೆ ಅಧೀನ. ಜೀವರ ಶರೀರದಲ್ಲಿ ಅವನಿದ್ದರೆ ನಾವಿರುತ್ತೇವೆ. ಅವನು ಹೋದರೆ ನಾವೂ ಹೋಗುತ್ತೇವೆ. ರಾಜನಿದ್ದರೆ ಪರಿವಾರವಿರುತ್ತದೆ. ಅವನು ಹೋದರೆ ಪರಿವಾರವೂ ಹೋಗುವುದಿಲ್ಲವೆ ? ಹಾಗೆ.

ಜೀವ ಪರಮಾತ್ಮನಿಗೆ ಪ್ರತಿಬಿಂಬದಂತೆ ಪೂರ್ಣ ಅಧೀನವಾಗಿ ಕರ್ಮಫಲ ಉಣ್ಣುತ್ತಾನೆ. ಪರಮಾತ್ಮ ನಿರ್ಲೇಪ. ನೀರು ತುಂಬಿದ ಗಡಿಗೆಗಳಲ್ಲಿ ಸೂರ್ಯ-ಚಂದ್ರರ ಪ್ರತಿಬಿಂಬ ಹೇಗೋ ಹಾಗೆ. ಆ ಪ್ರತಿಬಿಂಬಗಳು ಸೂರ್ಯ ಚಂದ್ರರಿಗೆ ಅಧೀನ. ಗಡಿಗೆ ಒಡೆದರೆ ಅವು ಸೂರ್ಯಚಂದ್ರರಲ್ಲಿ ಲಯ ಹೊಂದುವಂತೆ ಜೀವರ ಲಿಂಗ ಶರೀರ ಭಂಗವಾದಾಗ ಜೀವರು ಪರಮಾತ್ಮನಲ್ಲಿ ಲಯ ಹೊಂದುತ್ತಾರೆ. ನಾವೂ ಕೂಡ ನಮ್ಮ ಭವಬಂಧನ ಕಳೆದಾಗ ಪರಮಾತ್ಮನಲ್ಲಿ ಲೀನರಾಗುವೆವು.

ಪರಮಾತ್ಮನಲ್ಲಿಯೆ ಈ ಎಲ್ಲ ಚರಾಚರ ಪ್ರಪಂಚವಿದೆ. ಅವನು ಜ್ಯೋತಿರ್ಮಂಡಲಾಕಾರನಾಗಿ ಗ್ರೀಷ್ಮಕಾಲದ ಕೋಟಿ ಮಧ್ಯಾಹ್ನ ಸೂರ್ಯನಂತೆ

ಹೊಳೆಯುತ್ತಾನೆ. ಆಕಾಶದಂತೆ ಎಲ್ಲೆಡೆ ಇರುತ್ತಾನೆ. ಚಂದ್ರಬಿಂಬದಂತೆ ಆಹ್ಲಾದ-ಕರನೂ ಆಗಿರುತ್ತಾನೆ. ಅವನನ್ನು ಯೋಗಿಗಳೆ ಕಾಣಬಲ್ಲರು.

ಕೆಲವರು ಹೇಳುತ್ತಾರೆ— ಯೋಗಿಗಳು ಹಗಲು ರಾತ್ರಿ ಧ್ಯಾನಿಸುವ ಆ ಪರಮಾತ್ಮ ಇಚ್ಛಾರಹಿತ ನಿರಾಕಾರ. ಸ್ವೇಚ್ಛಾಮಯ ಸ್ವತಂತ್ರ ಆದಿಕಾರಣ ಪರಮಾನಂದ ರೂಪ. ಪರಮಾನಂದ ಕಾರಣ ನಿರ್ಗುಣ ಪುರುಷರೂಪ. ಪ್ರಕೃತಿಗೆ ಅತೀತ. ಲಯದಲ್ಲಿ ಪ್ರಕೃತಿ ಅವನಲ್ಲಿಯೆ ಲೀನಳಾಗುತ್ತಾಳೆ. ಅಗ್ನಿಯಲ್ಲಿ ದಾಹಶಕ್ತಿ, ಸೂರ್ಯನಲ್ಲಿ ಪ್ರಕಾಶ, ಹಾಲಲ್ಲಿ ಬಿಳುಪು, ನೀರಲ್ಲಿ ತಂಪು, ಬಾನಲ್ಲಿ ಶಬ್ದ, ಮಣ್ಣಲ್ಲಿ ಗಂಧ, ಹೇಗೋ ಹಾಗೆ ನಿರ್ಗುಣ ಬ್ರಹ್ಮನಲ್ಲಿ ನಿರ್ಗುಣ. ಪ್ರಕೃತಿ ಲೀನಳಾಗಿರುತ್ತಾಳೆ. ಪರಬ್ರಹ್ಮ ಸೃಷ್ಟಿಗೆ ಹೊರಟಾಗ ಆತ ಒಂದು ಅಂಶದಿಂದ ಪುರುಷನಾಗುತ್ತಾನೆ. ಅವನು ಸಗುಣ. ಪ್ರಕೃತಿ ಸಂಬಂಧ ಉಳ್ಳವ. ವಿಷಯ ಭೋಗಿಸುವವ. ಗುಣತ್ರಯ ಉಳ್ಳ ಪ್ರಕೃತಿ ಅವನಿಗೆ ನೆರಳಿನಂತಿರುತ್ತಾಳೆ. ಮಣ್ಣಿದ್ದರೇ ಕುಂಬಾರ ಗಡಿಗೆ ಮಾಡಬಲ್ಲ. ಹಾಗೇ ಪರಬ್ರಹ್ಮನೂ ಪ್ರಕೃತಿ ಇದ್ದರೇ ಪ್ರಪಂಚ ಸೃಷ್ಟಿ ಮಾಡಬಲ್ಲ. ಕುಂಬಾರ ಮಣ್ಣನ್ನು ನಿರ್ಮಿಸುವುದಿಲ್ಲ. ಅದುನಿತ್ಯ. ಚಿನಿವಾರನೂ ಚಿನ್ನವನ್ನು ನಿರ್ಮಿಸು-ವುದಿಲ್ಲ. ಅದು ನಿತ್ಯ. ಹಾಗೇ ಪ್ರಕೃತಿ ನಿತ್ಯ. ಪರಬ್ರಹ್ಮ ಹೇಗೆ ನಿತ್ಯನೋ ಹಾಗೆ ಪ್ರಕೃತಿಯೂ ನಿತ್ಯ. ಎರಡೂ ಸಮಪ್ರಧಾನ.

ಈ ವಿವರಣೆಯನ್ನು ಇನ್ನು ಕೆಲವರು ಸಹಿಸುವುದಿಲ್ಲ. ಕುಂಬಾರ ಮಣ್ಣು ತರುತ್ತಾನೆ. ಚಿನಿವಾರ ಚಿನ್ನ ತರುತ್ತಾನೆ. ಮಣ್ಣು ಚಿನ್ನ ಕುಂಬಾರ ಚಿನಿವಾರರನ್ನು ತರಲಾರವು. ಅದರಿಂದ ಪ್ರಕೃತಿಗಿಂತ ಪರಬ್ರಹ್ಮ ಶ್ರೇಷ್ಠ. ಆದರೂ ಇಬ್ಬರೂ ನಿತ್ಯರು ಎಂದು ಅವರು ಹೇಳುತ್ತಾರೆ.

ಕೆಲವರು ಬ್ರಹ್ಮನೆ ಪ್ರಕೃತಿ ರೂಪನೂ ಪುರುಷ ರೂಪನೂ ಆಗುತ್ತಾನೆ ಎನ್ನುತ್ತಾರೆ.

ಇನ್ನು ಕೆಲವರು ಬ್ರಹ್ಮ ಬೇರೆ ಪ್ರಕೃತಿ ಬೇರೆ ಎನ್ನುತ್ತಾರೆ. ಮತ್ತು ಅವರಿಬ್ಬರ ಲಕ್ಷಣಗಳನ್ನು ಹೀಗೆ ಹೇಳುತ್ತಾರೆ— 'ಬ್ರಹ್ಮ ಸರ್ವಜಗತ್ಕಾರಣಗಳಿಗೆ ಕಾರಣ. ಎಲ್ಲರ ಆತ್ಮವೂ ಅವನೆ. ನಿರ್ಲಿಪ್ತ ಸಾಕ್ಷಿರೂಪ ಸರ್ವವ್ಯಾಪಿ ಸರ್ವಾದಿ. ಇದು ಶ್ರುತ್ಯುಕ್ತವಾದ ಬ್ರಹ್ಮಲಕ್ಷಣ. ಆ ಬ್ರಹ್ಮನ ಶಕ್ತಿಯೆ ಪ್ರಕೃತಿ. ಎಲ್ಲ ಜಗತ್ತಿಗೆ ಬೀಜಸ್ವರೂಪಳು. ಈ ಶಕ್ತಿ ಉಳ್ಳವನು ಬ್ರಹ್ಮ. ಇದು ಪ್ರಕೃತಿಯ ಲಕ್ಷಣ. ಬ್ರಹ್ಮನನ್ನು ತೇಜೋರೂಪನೆಂದು ಯೋಗಿಗಳು ಧ್ಯಾನಿಸುತ್ತಾರೆ' ಎಂದು.

ನನ್ನ ಭಕ್ತರಾದ ವೈಷ್ಣವರು ಮೇಲಿನ ವಾದಗಳನ್ನು ಒಪ್ಪುವುದಿಲ್ಲ. ಅವರು ಸೂಕ್ಷ್ಮಬುದ್ಧಿ ಉಳ್ಳವರು. ಪುರುಷಾಕಾರವಿಲ್ಲದೆ ಕೇವಲ ತೇಜಸ್ಸನ್ನು ಯೋಗಿಗಳು ಧ್ಯಾನಿಸುತ್ತಾರೆ ಎಂದರೆ ಆಶ್ಚರ್ಯವೆ ಸರಿ. ಕಾರಣವಿಲ್ಲದೆ ಕಾರ್ಯ

ಉಂಟಾಗುವುದೆ ? ಪುರುಷನಿಲ್ಲದೆ ತೇಜಸ್ಸು ಎಲ್ಲಿಂದ ? ಆದರಿಂದ ಸ್ವೇಚ್ಛೆಯಿಂದ ನಾನಾ ರೂಪ ತೋರುವ ಸಾಕಾರನಾದ ಪುರುಷನ ಮನೋಹರ ರೂಪವನ್ನು ವೈಷ್ಣವರು ಸದಾ ಧ್ಯಾನಿಸುತ್ತಾರೆ. ಅವನ ಕೋಟಿ ಸೂರ್ಯ ಸಮಾನವಾದ ತೇಜೋ ಮಂಡಲ ಗೋಲೋಕವನ್ನೆಲ್ಲ ವ್ಯಾಪಿಸುತ್ತದೆ.

ಗೋಲೋಕ ಲಕ್ಷ ಕೋಟಿ ಯೋಜನ ವಿಸ್ತಾರವಾಗಿ ಎಲ್ಲೆಡೆ ಮನೋಹರವಾಗಿದೆ. ರತ್ನಮಯವಾಗಿದೆ. ಚಂದ್ರಮಂಡಲದಂತೆ ವರ್ತುಲಾಕಾರವಾಗಿದೆ. ಏನೂ ಆಧಾರ-ವಿಲ್ಲದೆ ಕೃಷ್ಣನ ಇಚ್ಛೆಯಿಂದಲೆ ನಿಂತಿದೆ. ವೈಕುಂಠಕ್ಕಿಂತ ಐವತ್ತು ಕೋಟಿ ಯೋಜನ-ದಷ್ಟು ಮೇಲೆ ಇದೆ. ಗೋಪಗೋಪಿಯರಿಂದ ತುಂಬಿದೆ. ಕಲ್ಪವೃಕ್ಷ ಕಾಮಧೇನು-ಗಳಿಂದ ರಾಸಮಂಡಲ ವೃಂದಾವನ ವನಗಳಿಂದ ಯುಕ್ತವಾಗಿದೆ. ಸುತ್ತಲೂ ವಿರಜಾ-ನದಿ ಹರಿಯುತ್ತದೆ.

ಚಿನ್ನದ ಶತಶೃಂಗ ಪರ್ವತದಲ್ಲಿ ಲಕ್ಷಕೋಟಿ ಪಟ್ಟಣಗಳಿವೆ. ಆ ಪಟ್ಟಣಗಳು ನೂರಾರು ಮನೆಗಳಿಂದ ಕಂಗೊಳಿಸುತ್ತವೆ. ಸುತ್ತಲೂ ಕೋಟೆ ಕಂದಕಗಳಿವೆ; ಪಾರಿಜಾತ ವನಗಳಿವೆ. ರತ್ನ ದೀಪಗಳಿಂದ ಬೆಳಗುವ ಹದಿನಾರು ಹೆಬ್ಬಾಗಿಲುಗಳಿವೆ. ಅಂಥ ಗೋಲೋಕದಲ್ಲಿ ವಿಚಿತ್ರ ರತ್ನ ಸಿಂಹಾಸನದಲ್ಲಿ ಮೇಘಶ್ಯಾಮ ಬಾಲರೂಪಿ ಕೃಷ್ಣ ಕುಳಿತಿದ್ದಾನೆ. ಶರತ್ಕಾಲದ ಮಧ್ಯಾಹ್ನ ಸೂರ್ಯನ ಕಾಂತಿಯನ್ನು ಧಿಕ್ಕರಿಸುತ್ತಾನೆ. ಶರತ್ಕಾಲದ ಹುಣ್ಣಿಮೆ ಚಂದ್ರನಂಥ ಮುಖ ಅವನದು. ಕೋಟಿ ಮನ್ಮಥರ ಲಾವಣ್ಯ. ಆದರಿಂದಲೆ ಆತ ಲೀಲೆಯಿಂದ ಮನ್ಮಥನನ್ನು ಹುಟ್ಟಿಸಿದ. ಅವನ ಶರೀರ ಕೋಟಿ ಚಂದ್ರರ ಕಾಂತಿಯಿಂದ ಕೂಡಿದೆ. ನಗುಮೊಗ, ಕೈಯಲ್ಲಿ ಕೊಳಲು, ಪೀತಾಂಬರ ಧರಿಸಿ ಮೈಯೆಲ್ಲ ಶ್ರೀಗಂಧ ಲೇಪಿಸಿಕೊಂಡಿದ್ದಾನೆ. ಎದೆಯಲ್ಲಿ ಕೌಸ್ತುಭಹಾರ. ಮೊಣಕಾಲವರೆಗೆ ಬರುವ ಜಾಜಿಯ ವನಮಾಲೆ ಧರಿಸಿ ತ್ರಿಭಂಗಿಯಿಂದ ನಿಲ್ಲುತ್ತಾನೆ. ರತ್ನಕಿರೀಟ ನವಿಲುಗರಿಗಳು, ರತ್ನದ ತೋಳುಬಳೆ, ರತ್ನದ ಕಿರುಗೆಜ್ಜೆ, ರತ್ನಕುಂಡಲ-ಗಳು ಇವುಗಳಿಂದ ಅಲಂಕೃತನಾಗಿರುತ್ತಾನೆ. ಮುತ್ತಿನಂಥ ಹಲ್ಲುಗಳು ತೊಂಡೆ ಹಣ್ಣಿನಂಥ ತುಟಿ, ಉನ್ನತ ನಾಸಿಕೆ. ಇಂಥ ಕೃಷ್ಣನ ಸುತ್ತಲೂ ಗೋಪಿಯರು. ಮಂದಹಾಸಯುಕ್ತರಾಗಿ ವೀಕ್ಷಿಸುತ್ತಿದ್ದಾರೆ. ಸ್ಥಿರಯೌವನಶಾಲಿನಿಯರು, ರತ್ನಾಭರಣ ಭೂಷಿತೆಯರು.

ದೇವತೆಗಳು ಮುನಿಗಳು ಬ್ರಹ್ಮ ವಿಷ್ಣು ಶಿವ ಶೇಷ ಧರ್ಮ ಮುಂತಾದವರೆಲ್ಲರೂ ಈ ಕೃಷ್ಣನನ್ನೆ ವಂದಿಸುವರು. ಆತ ಭಕ್ತಪ್ರಿಯ, ಭಕ್ತನಾಥ, ಭಕ್ತಾನುಗ್ರಹಕಾರಕ. ರಾಸಲೀಲಾ ರಸಿಕ, ರಾಧಾಲಿಂಗನ ನಿರತ. ಪ್ರಾಕೃತ ರೂಪರಹಿತ. ಅಪ್ರಾಕೃತ ಸುಂದರರೂಪ. ಇಂಥ ಕೃಷ್ಣನನ್ನು ವೈಷ್ಣವರು ಧ್ಯಾನಿಸುವರು. ಈ ಪರಮಾತ್ಮನೆ ನಮಗೆ ಸತತ ಧ್ಯೇಯ. ಅವನೆ ಪರಬ್ರಹ್ಮ. ಅವಿನಾಶಿ, ಸನಾತನ ಸ್ವೇಚ್ಛಾಮಯ, ಪ್ರಾಕೃತ-

ಗುಣರಹಿತ. ಪೂರ್ಣಕಾಮನಾದ್ದರಿಂದ ಇಚ್ಛಾರಹಿತ. ಪ್ರಕೃತಿ ಬಂಧನದಿಂದಾಚೆ ಇರುವವ. ಸರ್ವಾಧಾರ. ಸರ್ವಕಾರಣ, ಸರ್ವಜ್ಞ, ಸರ್ವೇಶ್ವರ ಸರ್ವಪೂಜ್ಯ ಸರ್ವಸಿದ್ಧಿದಾಯಕ. ದ್ವಿಭುಜನಾಗಿ ಗೋಲೋಕದಲ್ಲಿ ಗೋಪವೇಷದ ಪಾರ್ಷದ-ರಿಂದ ಪರಿವೃತನಾಗಿರುವವ. ಪೂರ್ಣತಮ, ಸರ್ವಾಂತರಾತ್ಮ ಸರ್ವವ್ಯಾಪಿ.

**ಕೃಷಿಶ್ಚ ಸರ್ವವಚನೋ ನ ಕಾರಶ್ಚಾತ್ಮವಾಚಕಃ ।**
**ಸರ್ವಾತ್ಮಾ ಚ ಪರಂಬ್ರಹ್ಮ ತೇನ ಕೃಷ್ಣಃ ಪ್ರಕೀರ್ತಿತಃ ॥**

'ಕೃಷ್ಣ' ಎಂಬಲ್ಲಿ 'ಕೃಷ್' ಎಂದರೆ ಸರ್ವಜಗತ್ತು. 'ನ' ಎಂದರೆ ಸ್ವಾಮಿ. ಸರ್ವ-ಜಗತ್ತಿಗೂ ಸ್ವಾಮಿಯಾದ್ದರಿಂದ ಕೃಷ್ಣನೆಂದು ಅವನಿಗೆ ಹೆಸರು.

**ಕೃಷಿಶ್ಚ ಸರ್ವವಚನೋ ನಕಾರಶ್ಚಾದಿವಾಚಕಃ ।**
**ಸರ್ವಾದಿಪುರುಷೋ ವ್ಯಾಪೀ ತೇನ ಕೃಷ್ಣಃ ಪ್ರಕೀರ್ತಿತಃ ॥**

ಕೃಷ್ ಎಂದರೆ ಸರ್ವಜಗತ್ತು. ನ ಎಂದರೆ ಕಾರಣ. ಸರ್ವಜಗತ್ತಿಗೆ ಕಾರಣ-ನಾದ್ದರಿಂದ 'ಕೃಷ್ಣ' ಎನಿಸಿದ್ದಾನೆ.

ಕೃಷ್ಣನೆ ಒಂದು ಅಂಶದಿಂದ ಚತುರ್ಭುಜನಾಗಿ ಚತುರ್ಭುಜರಾದ ಪಾರ್ಷದರಿಂದ ಕೂಡಿ ಲಕ್ಷ್ಮಿಯೊಡನೆ ವೈಕುಂಠದಲ್ಲಿದ್ದಾನೆ. ಜಗತ್ತನ್ನು ಪಾಲಿಸುತ್ತಿದ್ದಾನೆ. ಇನ್ನೊಂದು ಅಂಶದಿಂದ ಚತುರ್ಭುಜನಾಗಿ ಲಕ್ಷ್ಮಿಯೊಡನೆ ಶ್ವೇತ ದ್ವೀಪದಲ್ಲಿದ್ದಾನೆ.

ನಾರದ, ಪರಬ್ರಹ್ಮ ಸ್ವರೂಪವನ್ನು ಇದುವರೆಗೆ ಹೇಳಿದ್ದೇನೆ. ನಮಗೆಲ್ಲ ಇದೇ ಉಪಾಸ್ಯ, ಸೇವ್ಯ, ವಂದ್ಯ ಮತ್ತು ಅಭೀಷ್ಟ.'

ಹೀಗೆ ಹೇಳಿ ಶಿವ ಸುಮ್ಮನಾದ. ನಾರದ ಗಂಧರ್ವರಾಜನಾಗಿದ್ದಾಗ ಕಲಿತಿದ್ದ ಸ್ತೋತ್ರದಿಂದಲೆ ಶಿವನನ್ನು ಸ್ತುತಿಸಿ ಸಂತೋಷಗೊಳಿಸಿದ. ಶಿವನಿಂದ ಇಷ್ಟವಾದ ಜ್ಞಾನೋಪದೇಶವೆಲ್ಲ ಪಡೆದು ನಮಿಸಿ ಅವನಾಜ್ಞೆ ಪಡೆದು ಬದರಿಕಾಶ್ರಮಕ್ಕೆ ತೆರಳಿದ.

**ಇಲ್ಲಿಗೆ ಶ್ರೀ ಬ್ರಹ್ಮವೈವರ್ತ ಮಹಾಪುರಾಣದ ಬ್ರಹ್ಮಖಂಡದಲ್ಲಿ ಸೌತಿ ಶೌನಕ ಸಂವಾದದಲ್ಲಿ ಬ್ರಹ್ಮಸ್ವರೂಪ ವೈಕುಂಠಾದಿ ವರ್ಣನ ನಾರದಗಮನವೆಂಬ ಇಪ್ಪತ್ತೆಂಟನೆ ಅಧ್ಯಾಯ ಮುಗಿಯಿತು.**

## ನಾರಾಯಣನ ಬಳಿ ನಾರದನ ಪ್ರಶ್ನೆ

ಅಧ್ಯಾಯ-೨೯

ದೇವರ್ಷಿ ನಾರದ ನಾರಾಯಣನ ಬದರಿಕಾಶ್ರಮವನ್ನು ಕಂಡ. ಆ ಆಶ್ರಮ ನಾನಾ ವೃಕ್ಷ ಫಲಗಳಿಂದ ತುಂಬಿದೆ. ಗಂಡು ಕೋಗಿಲೆಗಳ ಧ್ವನಿಯಿಂದ ಯುಕ್ತವಾಗಿದೆ. ಸಿಂಹ ಶರಭಗಳಿದ್ದರೂ ನಾರಾಯಣನ ಪ್ರಭಾವದಿಂದ ಹಿಂಸಾಭಯರಹಿತವಾಗಿದೆ. ಮಹಾರಣ್ಯವಾದ್ದರಿಂದ ದುರ್ಗಮವೆ. ಆದರೆ ಸ್ವರ್ಗಕ್ಕಿಂತ ಮನೋಹರ. ಮೂರು ಕೋಟಿ ಸಿದ್ಧರು ಮುನೀಶ್ವರರುಗಳ ಆಶ್ರಮಗಳು ಅಲ್ಲಿ ಇವೆ. ಸುತ್ತಲೂ ಶ್ರೀಗಂಧದ ಪಾರಿಜಾತದ ವನಗಳು. ಸಭಾಮಧ್ಯದ ರತ್ನಸಿಂಹಾಸನದಲ್ಲಿ ಯೋಗಿಗಳಿಗೆ ಗುರು-ವಾದ ನಾರಾಯಣ ಮುನಿ ಕುಳಿತಿದ್ದಾನೆ. ತನ್ನದೆ ಆದ ಪರಬ್ರಹ್ಮ ಕೃಷ್ಣರೂಪವನ್ನು ಧ್ಯಾನಿಸುತ್ತಿದ್ದಾನೆ. ಅವನನ್ನು ನಾರದ ಕಂಡ. ಒಡನೆ ನಾರಾಯಣನೆದ್ದು ನಾರದನನ್ನು ಆಲಿಂಗಿಸಿ ಆಶೀರ್ವದಿಸಿದ. ಕುಶಲ ಪ್ರಶ್ನೆಮಾಡಿ ಅತಿಥಿ ಸತ್ಕಾರಗೈದ. ರತ್ನ ಸಿಂಹಾಸನವಿತ್ತ.

ನಾರದ ನುಡಿದ 'ನಾನು ತಂದೆಯಾದ ಬ್ರಹ್ಮನಲ್ಲಿ ಸಕಲ ವೇದಗಳನ್ನು ಓದಿದೆ. ಶಿವನಿಂದ ಜ್ಞಾನೋಪದೇಶ ಮಂತ್ರೋಪದೇಶಗಳನ್ನೂ ಪಡೆದೆ. ಆದರೂ ನನ್ನ ಮನಸ್ಸಿಗೆ ತೃಪ್ತಿಯಿಲ್ಲ. ನಿನ್ನ ಪಾದಕಮಲ ದರ್ಶನ ಮಾಡುವ ಬಯಕೆ ಮೂಡಿತು. ನಿನ್ನಿಂದ ಕೃಷ್ಣನ ಗುಣಗಳ ಬಗ್ಗೆ ಇನ್ನೂ ಹೆಚ್ಚಿನ ಉಪದೇಶ ಪಡೆಯಲು ಬಯಸಿದ್ದೇನೆ. ಬ್ರಹ್ಮ ವಿಷ್ಣು ಶಿವ ಮುಂತಾದವರೂ ಎಲ್ಲ ದೇವತೆಗಳೂ ಮುನಿಗಳೂ ಮನುಗಳೂ ಯಾರನ್ನು ಧ್ಯಾನಿಸುತ್ತಾರೆ ? ಯಾರಿಂದ ಜಗತ್ತು ಹುಟ್ಟುತ್ತದೆ ? ಯಾರಲ್ಲಿ ಲಯ ಹೊಂದುತ್ತದೆ. ಸರ್ವೇಶ್ವರನೂ ಸರ್ವಾದಿಕಾರಣನೂ ಆದ ಆ ವಿಷ್ಣುವಿನ ರೂಪಗಳನ್ನೂ ಕರ್ಮಗಳೂನ್ನ ನನಗೆ ಉಪದೇಶಿಸು.'

ನಾರದನ ಮಾತನ್ನು ಕೇಳಿ ನಕ್ಕು ನಾರಾಯಣ ಮುನಿ ಲೋಕಪಾವನವಾದ ಪುಣ್ಯಕರವಾದ ಉಪದೇಶ ನೀಡಿದ.

**ಇಲ್ಲಿಗೆ ಶ್ರೀ ಬ್ರಹ್ಮವೈವರ್ತ ಮಹಾಪುರಾಣದ ಬ್ರಹ್ಮಖಂಡದಲ್ಲಿ ಸೌತಿ ಶೌನಕ ಸಂವಾದದಲ್ಲಿ ನಾರಾಯಣನ ಬಳಿ ನಾರದನ ಪ್ರಶ್ನೆ ಎಂಬ ಇಪತ್ತೊಂಬತ್ತನೆ ಅಧ್ಯಾಯ ಮುಗಿಯಿತು.**

# ಭಗವತ್‌ಸ್ತುತಿ, ಭಗವತ್ ಸ್ವರೂಪ, ಮಾಯಾ ಸ್ವರೂಪವರ್ಣನ

## ಅಧ್ಯಾಯ-೩೦

ಗಣೇಶ ಬ್ರಹ್ಮವಿಷ್ಣು ಮಹೇಶ್ವರ ಮುಂತಾದ ದೇವತೆಗಳು ಮನುಗಳು ಮುನಿಗಳು ಸರಸ್ವತಿ ಪಾರ್ವತಿ ಗಂಗೆ ಲಕ್ಷ್ಮಿ ಮುಂತಾದವರೆಲ್ಲರೂ ಭಗವಂತನ ಚರಣಾರವಿಂದವನ್ನು ಧ್ಯಾನಿಸುವರು.

**ಸಂಸಾರ ಸಾಗರಮತೀವ ಗಭೀರ ಘೋರಂ**
**ದಾವಾಗ್ನಿ ಸರ್ಪಪರಿವೇಷ್ಟಿತ ಚೇಷ್ಟಿತಾಂಗಂ ।**
**ಸಂಲಂಘ್ಯ ಗಂತುಮಭಿವಾಂಛತಿ ಯೋ ಹಿ ದಾಸ್ಯಂ**
**ಸಂಚಿಂತಯೇದ್ ಭಗವತಶ್ಚರಣಾರವಿಂದಂ ॥**

ಕಾಳ್ಗಿಚ್ಚಿನಿಂದ ಅಥವಾ ಹಾವಿಂದ ಸುತ್ತುವರಿಯಲ್ಪಟ್ಟವನಂತೆ ಜೀವನು ಅತಿಗಹನ ಭೀಕರ ಸಂಸಾರ ಸಾಗರದಲ್ಲಿ ಜೀವನಕ್ಕಾಗಿ ಹೋರಾಡುತ್ತಿದ್ದಾನೆ. ಇಂಥ ಸಂಸಾರ ಸಾಗರವನ್ನು ದಾಟಿ ಭಗವಂತನ ದಾಸ್ಯವನ್ನು ಹೊಂದಲು ಬಯಸುವವನು ಭಗವಂತನ ಪಾದಕಮಲವನ್ನೇ ಧ್ಯಾನಿಸಬೇಕು.

ಒಂದು ಕಿರುಬೆರಳಿನಿಂದ ಗೋವರ್ಧನ ಪರ್ವತವನ್ನೆತ್ತಿದ ಕೀರ್ತಿ ಅವನದು. ಕೋರೆದಾಡೆಯ ತುದಿಯಿಂದ ಭೂಮಿಯನ್ನೇ ಧರಿಸಿದವ ಆತ. ಅವನ ರೋಮಕೂಪಗಳಲ್ಲಿ ಬ್ರಹ್ಮಾಂಡಗಳು ಅಡಗುತ್ತವೆ. ಅವನ ಮುಖದಿಂದಲೆ ವೇದ ವೇದಾಂಗಗಳೆಲ್ಲವೂ ಹೊರಟು ಬಂದುವು. ವೃಂದಾವನದಲ್ಲಿ ಗೋಪಾಂಗನೆಯರ ವದನ ಕಮಲಗಳಲ್ಲಿ ದುಂಬಿಯಂತೆ ಆಸಕ್ತನಾಗಿ ರಾಸಲೀಲೆ ನಡೆಸುವ ಆತ ಒಮ್ಮೆ ಕಣ್ಣುಮುಚ್ಚಿದರೆ ಜಗತ್ತಿನ ಸೃಷ್ಟಿಕರ್ತನಾದ ಬ್ರಹ್ಮನಿಗೆ ಲಯ. ಇಂಥ ಪರಮಾತ್ಮನ ಮಹಿಮೆಯನ್ನು ವರ್ಣಿಸಲು ಯಾರು ಸಮರ್ಥ ? ನಾರದ, ನೀನು ಪರಮಾದರದಿಂದ ಅವನ ಪಾದಕಮಲವನ್ನೆ ಧ್ಯಾನಿಸು.

ನೀನು ನಾವೆಲ್ಲ ಅವನ ಅಂಶರು. ಮನುಗಳು ಮುನಿಗಳು ರುದ್ರಾದಿ ದೇವತೆಗಳು ವಿರಾಟ್ ಎಲ್ಲರೂ ಅವನ ಅಂಶರು. ಅವನೆ ಸಹಸ್ರ ಶೀರ್ಷನಾಗಿ ತಲೆಯ ಮೇಲೆ ಸಾಸಿವೆ ಕಾಳಿನಂತೆ ಪ್ರಪಂಚವನ್ನು ಹೊರುತ್ತಾನೆ. ಕೂರ್ಮನ ಮೇಲೆ ಶೇಷ ನಿಂತಂತೆ, ಆನೆಯ ಮೇಲೆ ನೊಣ ಕುಳಿತಂತೆ ಅವನಲ್ಲಿ ಜಗತ್ತು ನಿಂತಿದೆ. ಅವನ ಮಹಿಮೆ ವೇದ ಪುರಾಣಗಳಲ್ಲಿಯೂ ಪೂರ್ಣ ವರ್ಣಿತವಾಗದು. ಬ್ರಹ್ಮಾದಿ ದೇವತೆಗಳಾರೂ ಪೂರ್ಣ ಹೇಳಲು ಸಮರ್ಥರಾಗಲಾರರು. ಬ್ರಹ್ಮನು ಮಾಡುವ ಸೃಷ್ಟಿಯನ್ನೂ ವಸ್ತುತಃ ಅವನೇ ಪ್ರಕೃತಿಯಿಂದ ಸ್ವತಂತ್ರವಾಗಿ ಮಾಡುತ್ತಿದ್ದಾನೆ. ಬ್ರಹ್ಮಾದಿಗಳೆಲ್ಲ ಪ್ರಕೃತಿಗೆ ಅಧೀನರು. ಅವರಿಗೆ ಕೃಷ್ಣಭಕ್ತಿ ನೀಡುವವಳು ಪ್ರಕೃತಿಯೆ. ಅವಳು ಭಗವಂತನ ಸ್ವರೂಪ-

ಭೂತಳಲ್ಲ, ಭಿನ್ನಳೇ. ಅವಳನ್ನು ಸೃಷ್ಟಿಕಾರ್ಯದಲ್ಲಿ ಕೃಷ್ಣ ಬಳಸಿಕೊಳ್ಳುತ್ತಾನಷ್ಟೆ. ಅವಳು ಎಲ್ಲರನ್ನೂ ಮೋಹದಲ್ಲಿ ಕೆಡಹುವವಳು. ಪರಮಪುರುಷ ನಾರಾಯಣನ ಪರಮಪ್ರಿಯೆ. ಸ್ವತಂತ್ರನಾದ ಆತ ಶಕ್ತನಾಗಿದ್ದರೂ ಪ್ರೀತಿಯಿಂದ ಅವಳಿಲ್ಲದೆ ಸೃಷ್ಟಿ ಮಾಡಲು ಅಶಕ್ತನಂತೆ ತೋರಿಕೊಳ್ಳುತ್ತಾನೆ. ನಾರದ, ನೀನೀಗ ಹೋಗು, ಮದುವೆ-ಯಾಗು, ತಂದೆಯ ಆಜ್ಞೆಯಂತೆ ನಡೆ. ಅದರಿಂದ ನಿನಗೆ ಎಲ್ಲೆಡೆ ಪೂಜ್ಯತೆ-ಯುಂಟಾಗುತ್ತದೆ. ವಿಜಯ ಲಭಿಸುತ್ತದೆ.

**ಸ್ವಪತ್ನೀಂ ಪೂಜಯೇದ್ ಯೋಹಿ ವಸ್ತ್ರಾಲಂಕಾರ ಚಂದನೈಃ ।**
**ಪ್ರಕೃತಿಸ್ತಸ್ಯ ಸಂತುಷ್ಟಾ ಯಥಾ ಕೃಷ್ಣೋ ದ್ವಿಜಾರ್ಚನೇ ॥**

ತನ್ನ ಪತ್ನಿಯನ್ನು ವಸ್ತ್ರ ಅಲಂಕಾರ ಗಂಧಗಳಿಂದ ಸಂತೋಷಗೊಳಿಸುವವನಿಗೆ ಪ್ರಕೃತಿದೇವಿ ಒಲಿಯುವಳು, ಬ್ರಾಹ್ಮಣನ ಆರಾಧನೆ ಮಾಡಿದಾಗ ಕೃಷ್ಣ ಸಂತುಷ್ಟನಾಗುವಂತೆ.

ಮೂಲ ಪ್ರಕೃತಿ ಎನಿಸಿದ ಆ ದೇವಿ ಕೃಷ್ಣನ ಪ್ರಾಣಪ್ರಿಯೆಯಾದ ರಾಧೆ, ನಾರಾಯಣನ ಪ್ರಿಯೆಯಾದ ಸರ್ವಸಂಪತ್ ಸ್ವರೂಪಿಣಿಯಾದ ಲಕ್ಷ್ಮಿ ಮತ್ತು ವಾಗ್ದೇವಿ ಸರಸ್ವತಿ, ಬ್ರಹ್ಮಪ್ರಿಯೆಯಾದ ವೇದಮಾತೆಯೆನಿಸಿದ ಸಾವಿತ್ರಿ, ಶಂಕರಪ್ರಿಯೆಯಾದ ಗಣೇಶಮಾತೆ ದುರ್ಗೆ ಈ ಐದು ಬೇರೆ ಬೇರೆ ರೂಪಗಳಿಂದ ಐದು ವಿಧದಿಂದಿರುವಳು.

**ಇಲ್ಲಿಗೆ ಶ್ರೀ ಬ್ರಹ್ಮವೈವರ್ತ ಮಹಾಪುರಾಣದ ಬ್ರಹ್ಮಖಂಡದಲ್ಲಿ ಸೌತಿ ಶೌನಕ ಸಂವಾದದಲ್ಲಿ ಭಗವತ್‌ಸ್ತುತಿ, ಭಗವತ್ ಸ್ವರೂಪ, ಮಾಯಾ ಸ್ವರೂಪವರ್ಣನವೆಂಬ ಮೂವತ್ತನೆ ಅಧ್ಯಾಯ ಮುಗಿಯಿತು.**

## ಬ್ರಹ್ಮಖಂಡ ಸಂಪೂರ್ಣ

ಮಹರ್ಷಿ ವೇದವ್ಯಾಸ ಪ್ರಣೀತ

# ಬ್ರಹ್ಮವೈವರ್ತ ಮಹಾಪುರಾಣ

# ಪ್ರಕೃತಿ ಖಂಡ

# ಪ್ರಕೃತಿ ಖಂಡ

## ಪ್ರಕೃತಿಯ ಸ್ವರೂಪ ಮತ್ತು ವಿಭಾಗ

**ಅಧ್ಯಾಯ-೧**

ನಾರದ— ಮಹರ್ಷಿಗಳೆ, ಗಣೇಶನ ಜನನಿಯಾದ ದುರ್ಗೆ ರಾಧೆ ಲಕ್ಷ್ಮಿ ಸರಸ್ವತಿ ಮತ್ತು ಸಾವಿತ್ರಿಯರು ಸೃಷ್ಟಿಕಾರ್ಯದಲ್ಲಿ ಪ್ರವೃತ್ತಿ ಮಾಡುವವರು ಪ್ರಕೃತಿಯ ಐದು ರೂಪಗಳೆ ಎಂದು ಹೇಳಿರುವಿರಿ. ಸರ್ವಜ್ಞಳಾದ ಅವಳು ಯಾರಿಂದ ಅವತರಿಸಿದಳು, ಅವಳ ಲಕ್ಷಣವೇನು. ಹೇಗೆ ಐದು ರೂಪ ತಳೆದಳು, ಅವರೆಲ್ಲರ ಚರಿತ್ರೆ ಪೂಜಾ-ವಿಧಾನಗಳೇನು ? ಯಾರ ಅವತಾರ ಎಲ್ಲಿ ನಡೆಯಿತು ಇವೆಲ್ಲವನ್ನೂ ವರ್ಣಿಸಿರಿ.

ನಾರಾಯಣ ಮಹರ್ಷಿ— ವತ್ಸ ನಾರದ, ಪ್ರಕೃತಿಯ ಲಕ್ಷಣವನ್ನು ಯಾರಿಂದ ತಾನೆ ಹೇಳಲು ಸಾಧ್ಯ ? ಆದ್ದರೂ ಧರ್ಮಪುರುಷನಿಂದ ಕೇಳಿ ತಿಳಿದುದನ್ನು ಒಂದಿಷ್ಟು ಹೇಳುತ್ತೇನೆ.

> ಪ್ರಕೃಷ್ಟ ವಾಚಕಃ ಪ್ರಶ್ಚ ಕೃತಿಶ್ಚ ಸೃಷ್ಟಿವಾಚಕಃ ।
> ಸೃಷ್ಟೌ ಪ್ರಕೃಷ್ಟಾ ಯಾ ದೇವೀ ಪ್ರಕೃತಿಃ ಸಾ ಪ್ರಕೀರ್ತಿತಾ ॥

'ಪ್ರಕೃತಿ' ಎಂಬಲ್ಲಿ 'ಪ್ರ' ಎಂದರೆ ಉತ್ತಮ 'ಕೃತಿ' ಎಂದರೆ ಸೃಷ್ಟಿ. ಆದ್ದರಿಂದ ಸೃಷ್ಟಿಕಾರ್ಯದಲ್ಲಿ ಉತ್ತಮಳಾದ ದೇವಿ ಪ್ರಕೃತಿ ಎಂದೆನಿಸಿದಳು.

> ಗುಣೇ ಪ್ರಕೃಷ್ಟ ಸತ್ವೇ ಚ ಪ್ರಶಬ್ದೋ ವರ್ತತೇ ಶ್ರುತೌ ।
> ಮಧ್ಯಮೇ ಕೃಶ್ಚ ರಜಸಿ ತಿಶಬ್ದಸ್ತಮಸಿ ಸ್ಥಿತಃ ॥
>
> ತ್ರಿಗುಣಾತ್ಮ ಸ್ವರೂಪಾ ಯಾ ಸರ್ವಶಕ್ತಿ ಸಮನ್ವಿತಾ ।
> ಪ್ರಧಾನಾ ಸೃಷ್ಟಿಕರಣೇ ಪ್ರಕೃತಿಸ್ತೇನ ಕಥ್ಯತೇ ॥
>
> ಪ್ರಥಮೇ ವರ್ತತೇ ಪ್ರಶ್ಚ ಕೃತಿಃ ಸ್ಯಾತ್ ಸೃಷ್ಟಿವಾಚಕಃ
> ಸೃಷ್ಟೇರಾದ್ಯಾ ಚ ಯಾ ದೇವೀ ಪ್ರಕೃತಿಃ ಸಾ ಪ್ರಕೀರ್ತಿತಾ ॥

'ಪ್ರ' ಎಂದರೆ ಸತ್ವರಜಸ್ತಮೋ ಗುಣಗಳಲ್ಲಿ ಶ್ರೇಷ್ಠವಾದ ಸತ್ವಗುಣ. 'ಕೃ' ಎಂದರೆ ಮಧ್ಯಮವಾದ ರಜೋಗುಣ. 'ತಿ' ಎಂದರೆ ಅಧಮವಾದ ತಮೋಗುಣ. ತ್ರಿಗುಣಾತ್ಮಕವಾದ ಜಡಪ್ರಕೃತಿಗೆ ಅಭಿಮಾನಿಯಾದ್ದರಿಂದ 'ಪ್ರಕೃತಿನಿಸುವಳು.' 'ಪ್ರ' ಎಂದರೆ ಶ್ರೇಷ್ಠವಾದ್ದ 'ಕೃತಿ' ಸೃಷ್ಟಿಮಾಡುವ ಶಕ್ತಿ ಉಳ್ಳವಳಾದ್ದರಿಂದ ಸರ್ವಶಕ್ತಳಾದ ದೇವಿ ಪ್ರಕೃತಿ ಎನಿಸುವಳು. 'ಪ್ರ' ಎಂದರೆ ಪ್ರಧಾನಳು. 'ಕೃತಿ' ಎಂದರೆ ಸೃಷ್ಟಿ. ಸೃಷ್ಟಿಕಾರ್ಯದಲ್ಲಿ ಪ್ರಧಾನಳಾದ್ದರಿಂದಲೂ ಪ್ರಕೃತಿ ಎನಿಸುವಳು. 'ಪ್ರ' ಎಂದರೆ

ಪ್ರಥಮ 'ಕೃತಿ' ಎಂದರೆ ಸೃಷ್ಟಿ. ಸೃಷ್ಟಿಯಲ್ಲಿ ಮೊದಲಿಗೆ ಆವಿರ್ಭವಿಸಿದ್ದರಿಂದ ಪ್ರಕೃತಿ ಎನಿಸುವಳು.

ಸೃಷ್ಟಿಯ ಆದಿಯಲ್ಲಿ ಕೃಷ್ಣ ಅರ್ಧನಾರೀ ನರರೂಪನಾಗಿದ್ದ. ಬಲಭಾಗ ಪುರುಷ. ಎಡಭಾಗ ಪ್ರಕೃತಿ. ಆ ಪ್ರಕೃತಿ ಪುರುಷನೊಂದಿಗೆ ಒಂದಾಗಿ ಅಗ್ನಿಯಲ್ಲಿ ದಾಹಶಕ್ತಿ-ಯಂತೆ ನಿತ್ಯ ಇರುವಳು. ಆದರಿಂದಲೇ ಯೋಗಿಗಳು ಪರಮಾತ್ಮ ಸ್ವರೂಪದಲ್ಲಿ ಸ್ತ್ರೀಪುರುಷ ಭೇದವನ್ನು ಪರಿಗಣಿಸುವುದಿಲ್ಲ. ಅವನ ಎಲ್ಲ ರೂಪಗಳೂ ಪರಬ್ರಹ್ಮ ಸ್ವರೂಪವೆಂದೆ ಕಾಣುತ್ತಾರೆ.

ಕೃಷ್ಣ ಪ್ರಪಂಚ ಸೃಷ್ಟಿ ಮಾಡಲು ಬಯಸಿದಾಗ ಆ ಮೂಲಪ್ರಕೃತಿ ಹೊರಗೆ ಆವಿರ್ಭವಿಸಿದಳು. ಅವಳ ಆಜ್ಞೆಯಂತೆ ಅಥವಾ ಭಕ್ತರ ಕೋರಿಕೆಯಂತೆ ಐದು ರೂಪದ ಪ್ರಕೃತಿ ಆವಿರ್ಭವಿಸಿದಳು. ಐದು ರೂಪಗಳಲ್ಲಿ ಮೊದಲನೆಯದು ಗಣೇಶ ಮಾತೆಯಾದ ದುರ್ಗೆ. ಇವಳು ಶಿವನ ಪತ್ನಿ. ನಾರಾಯಣನಿಗೆ ಪ್ರಿಯಳು. ವಿಷ್ಣು ಮಾಯೆ ಎನಿಸಿದವಳು. ಪೂರ್ಣಬ್ರಹ್ಮಸ್ವರೂಪಳು. ಬ್ರಹ್ಮಾದಿದೇವತೆಗಳಿಗೂ ಮನು-ಗಳಿಗೂ ಮುನಿಗಳಿಗೂ ಪೂಜ್ಯಳು. ಸರ್ವ ಜಗತ್ತಿಗೆ ಒಡತಿ ಸನಾತನ ಬ್ರಹ್ಮ ಸ್ವರೂಪಳು. ಭಕ್ತರಿಗೆ ಯಶಸ್ಸು, ಶುಭ, ಧರ್ಮ, ಸಂಪತ್ತು, ಸತ್ಯ, ಪುಣ್ಯ, ಮೋಕ್ಷಾನಂದಗಳನ್ನು ಕೊಡುತ್ತ ಶೋಕ ದುಃಖಗಳನ್ನು ಕಳೆವವಳು. ಶರಣಾಗತರಾದ ದೀನರನ್ನು ದುಃಖಿತರನ್ನು ರಕ್ಷಿಸುವವಳು, ಪ್ರಕಾಶಸ್ವರೂಪಳು. ಸಿದ್ಧಿದಾಯಕಳು, ಸಿದ್ಧಿದಾಯಕರಿಗೂ ಒಡತಿಯಾಗಿರುವವಳು. ಬುದ್ಧಿ, ನಿದ್ದೆ, ಹಸಿವು ಬಾಯಾರಿಕೆ, ಆಲಸ್ಯ, ದಯೆ, ಸ್ಮರಣೆ, ಜನನ, ಕ್ಷಮೆ, ಶಾಂತಿ, ಶಾಂತಿ, ಭ್ರಾಂತಿ, ಚೈತನ್ಯ, ಸಂತೋಷ, ಪುಷ್ಟಿ, ಸಂಪತ್ತು, ಜೀವನ, ಜನನಿ ಎಲ್ಲವೂ ಅವಳೆ, ಅವಳಿಂದಲೆ. ಕೃಷ್ಣಪರಮಾತ್ಮನ ಅಧೀನಳಾಗಿರುವ ಶಕ್ತಿಸ್ವರೂಪಿಣಿ ಅವಳು. ವೇದಗಳಲ್ಲಿ ಹೇಳಿದ ಅವಳ ಮಹಿಮೆಗಳಲ್ಲಿ ಕೆಲವನ್ನು ಮಾತ್ರ ಸ್ವಲ್ಪ ಹೇಳಿದ್ದೇನೆ. ಅನಂತಳಾದ ಆಕೆಯ ಗುಣವೂ ಅನಂತ.

ಕೃಷ್ಣಪರಮಾತ್ಮನ ಇನ್ನೊಬ್ಬಳು ಶಕ್ತಿ ಮಹಾಲಕ್ಷ್ಮಿ. ಶುದ್ಧಸತ್ವ ಸ್ವರೂಪಳು. ಸರ್ವಸಂಪತ್‌ಸ್ವರೂಪಳು. ಸಂಪತ್ತಿಗೆ ಒಡತಿ. ಮನೋಹರಳು, ಇಂದ್ರಿಯ ನಿಗ್ರಹ ವಿಷ್ಣುಭಕ್ತಿ ಶೀಲ ಮಂಗಲ ಉಳ್ಳವಳು. ಕಾಮಕ್ರೋಧಾದಿ ವರ್ಜಿತಳು. ಪತಿಯಲ್ಲಿ ಅನುರಾಗ ಉಳ್ಳವಳು, ಪತಿವ್ರತೆ. ಭಗವಂತನ ಪ್ರೇಮಪಾತ್ರಳು ಪ್ರಾಣ ಸಮಾನಳು. ಸದಾಪ್ರಿಯವನ್ನೆ ನುಡಿವವಳು. ಸರ್ವಸಸ್ಯ ಸ್ವರೂಪಳು. ಸರ್ವರಿಗೂ ಜೀವನೋ-ಪಾಯರೂಪಳು, ವೈಕುಂಠದಲ್ಲಿ ಮಹಾಲಕ್ಷ್ಮಿಯಾಗಿ ಪತಿಸೇವೆ ಮಾಡುವವಳು ಸ್ವರ್ಗದಲ್ಲಿ ಸ್ವರ್ಗಲಕ್ಷ್ಮಿಯಾಗಿ, ರಾಜರಲ್ಲಿ ರಾಜಲಕ್ಷ್ಮಿಯಾಗಿ, ಗೃಹದಲ್ಲಿ ಗೃಹಲಕ್ಷ್ಮಿ-ಯಾಗಿ ಎಲ್ಲ ಪ್ರಾಣಿಗಳಲ್ಲಿ ಮನೋಹರ ಶೋಭಾರೂಪಳಾಗಿ ಪುಣ್ಯವಂತರಲ್ಲಿ

ಸುಖರೂಪಳಾಗಿ ರಾಜರಲ್ಲಿ ಪ್ರಭಾರೂಪಳಾಗಿ ವರ್ತಕರಲ್ಲಿ ವಾಣಿಜ್ಯರೂಪಳಾಗಿ ಪಾಪಿಗಳಲ್ಲಿ ಕಲಹ ಕಾರಣೆಯಾಗಿ ಭಕ್ತರಲ್ಲಿ ದಯಾಮಯಿಯಾಗಿ ತಾಯಿಯಾಗಿ ಅನುಗ್ರಹಕಾರಿಣಿಯಾಗಿ, ಚಪಲರಲ್ಲಿ ಚಪಲೆಯಾಗಿ, ಭಕ್ತರಲ್ಲಿ ಸಂಪದ್‌ರಕ್ಷಕಳಾಗಿ ಇರುವವಳು ಅವಳೆ. ಅವಳಿಲ್ಲದಿದ್ದರೆ ಜಗತ್ತೆಲ್ಲ ಬದುಕ್ಕಿದ್ದರೂ ಸತ್ತಂತೆಯೆ.

ಭಗವಂತನ ಇನ್ನೊಬ್ಬಳು ಶಕ್ತಿ ಸರಸ್ವತಿ. ವಾಕ್ ಬುದ್ಧಿ ವಿದ್ಯೆ ಜ್ಞಾನಗಳಿಗೆ ಅವಳೆ ಅಧಿದೇವತೆ. ಸುಬುದ್ಧಿ, ಕವಿತೆ, ಮೇಧ, ಪ್ರತಿಭೆ, ಸ್ಮೃತಿ ನಾನಾ ಪ್ರಕಾರದ ಸಿದ್ಧಾಂತಗಳ ಅರ್ಥಜ್ಞಾನ, ವ್ಯಾಖ್ಯಾನಶಕ್ತಿ, ಬೋಧನಾಶಕ್ತಿಗಳನ್ನಿತ್ತು ಎಲ್ಲ ಸಂದೇಹ-ಗಳನ್ನು ಕಳೆದು ವಿಚಾರ ಮಾಡುವ ಗ್ರಂಥರಚನೆ ಮಾಡುವ ಶಕ್ತಿಸ್ವರೂಪಳು. ಎಲ್ಲ ಸಂಗೀತ ತಾಲಲಯಜ್ಞಾನ ನೀಡುವವಳು. ವಿಷಯವನ್ನು ತಿಳಿದು ಹೇಳುವ ಶಕ್ತಿ ಅವಳ ಅಧೀನ. ಅವಳಿಲ್ಲದೆ ಪ್ರಪಂಚ ಮೂಕವಾಗಿ ಸತ್ತಂತೇ ಇದ್ದೀತು. ಕೈಯಲ್ಲಿ ವ್ಯಾಖ್ಯಾನಮುದ್ರೆಯನ್ನು ವೀಣೆ ಪುಸ್ತಕಗಳನ್ನೂ ಹಿಡಿದವಳು. ಶುದ್ಧ ಸತ್ವ ಸ್ವರೂಪಳು. ಸುಶೀಲೆ, ಶ್ರೀಹರಿಪ್ರಿಯಳು. ಹಿಮ, ಚಂದನ, ಮೊಲ್ಲೆಹೂ, ಚಂದ್ರಕಮಲಗಳಂಥ ಶುಭ್ರ ಮೈಯವಳು. ರತ್ನಮಾಲೆ ಹಿಡಿದು ಶ್ರೀಕೃಷ್ಣಪರಮಾತ್ಮನನ್ನು ಜಪಿಸುವ ತಪಃಸ್ವರೂಪಳು, ತಪಸ್ಸುಗಳಿಗೆ ಫಲನೀಡುವಳು, ತಪಸ್ಸು ಮಾಡುವವಳು. ಸಿದ್ಧಿ ವಿದ್ಯಾಸ್ವರೂಪಳು, ಸರ್ವಸಿದ್ಧಿದಾಯಕಳು, ಸರ್ವಸಂಪದ್ಯುಕ್ತಳಾದ ಜಗನ್ಮಾತೆ ಅವಳು.

ಬ್ರಹ್ಮಪ್ರಿಯೆಯಾದ ಸಾವಿತ್ರಿ ನಾಲ್ಕನೆಯವಳು. ನಾಲ್ಕು ವೇದಗಳಿಗೂ ವೇದಾಂಗ ಛಂದಸ್ಸುಗಳಿಗೂ ಮಾತೆ. ಸಂಧ್ಯಾವಂದನ ಮಂತ್ರ ತಂತ್ರ ವಿಚಕ್ಷಣೆ, ದ್ವಿಜರಿಗೆ ದ್ವಿಜತ್ವಜಾತಿ ಕೊಡುವವಳು. ಜಪಸ್ವರೂಪಳು, ತಪೋಬ್ರಹ್ಮತೇಜಃ ಸ್ವರೂಪಳು. ಎಲ್ಲ ಸಂಸ್ಕಾರಗಳಿಗೆ ಕಾರಣಳು, ಪವಿತ್ರಳು. ಪವಿತ್ರ ತೀರ್ಥಗಳು ತಮ್ಮ ಪಾವಿತ್ರ್ಯಕ್ಕಾಗಿ ಅವಳ ದರ್ಶನ ಸ್ಪರ್ಶಗಳನ್ನು ಬಯಸುವುವು. ಶುದ್ಧಸ್ಫಟಿಕ ಬಣ್ಣದವಳು ಶುದ್ಧ ಸತ್ವಸ್ವರೂಪಳು ಪರಮಾನಂದ ರೂಪಳು, ಪರಬ್ರಹ್ಮಮಯಳು, ಮೋಕ್ಷದಾಯಕಳು, ಅವಳ ಪಾದಧೂಳಿಯಿಂದ ಇಡಿ ಜಗತ್ತು ಪಾವನವಾಗುವುದು.

ಐದನೆ ದೇವಿ ರಾಧೆ. ಪ್ರೇಮಸ್ವರೂಪನಾದ ಕೃಷ್ಣನ ಪ್ರಾಣಪ್ರಿಯೆ. ಸುಂದರಿ-ಯರಲ್ಲೆಲ್ಲ ಮೊದಲಿಗಳು. ಸರ್ವಸೌಭಾಗ್ಯವತಿ. ಕೃಷ್ಣನ ವಾಮಾರ್ಧಾಂಗ ಸ್ವರೂಪಳು. ಸದ್ಗುಣ ಉಳ್ಳವಳು. ಲೋಕಮಾತೆ, ಪರಮಾನಂದ ರೂಪಳು, ಕೃಷ್ಣ ಪರಮಾತ್ಮನ ರಾಸಕ್ರೀಡಾಧಿದೇವತೆ. ರಾಸಮಂಡಲದಲ್ಲಿ ಪ್ರಾದುರ್ಭವಿಸಿ ರಾಸಕ್ಕೆ ಶೋಭೆ ನೀಡುವ ರಸಿಕಳು. ಗೋಪಿಯ ವೇಷದಿಂದ ಗೋಲೋಕದಲ್ಲಿರುವ ಪರಮಾಹ್ಲಾದರೂಪಳು. ಗುಣತ್ರಯ ರಹಿತಳು, ಪ್ರಾಕೃತರೂಪರಹಿತಳು. ಕರ್ಮಲೇಪ-ವಿಲ್ಲದವಳು, ಭಕ್ತರನ್ನು ಅನುಗ್ರಹಿಸುವವಳು. ವೇದಾನುಸಾರ ಧ್ಯಾನದಿಂದಲೆ ತಿಳಿಯಬಹುದಾದವಳು. ಅಗ್ನಿಯಂತೆ ಶುದ್ಧವಾದ ವಸ್ತ್ರಧರಿಸಿ ರತ್ನಾಲಂಕಾರ

ಭೂಷಿತಳಾಗಿ ಕೋಟಿ ಚಂದ್ರರ ಕಾಂತಿಯಿಂದ ಹೊಳೆವವಳು. ಕೃಷ್ಣಭಕ್ತರಿಗೆ ಮಾತ್ರ ತನ್ನ ದಾಸ್ಯ ನೀಡುವವಳು ಸರ್ವಸಂಪದ್ದಾಯಕಳು. ಶ್ವೇತವರಾಹಕಲ್ಪದಲ್ಲಿ ವೃಷಭಾನುವಿನ ಮಗಳಾಗಿ ಅವತರಿಸುವವಳು. ಅವಳ ಪಾದ ಕಮಲ ಸ್ಪರ್ಶದಿಂದ ಭೂಮಿ ಪವಿತ್ರಳಾಗುತ್ತಾಳೆ. ಬ್ರಹ್ಮಾದಿ ದೇವತೆಗಳೂ ಅವಳ ದರ್ಶನ ಮಾಡಲು ಶಕ್ತರಲ್ಲ. ಆದರೆ ಭಾರತ ದೇಶದಲ್ಲಿ ಎಲ್ಲೆಡೆ ಪ್ರಸಿದ್ಧಳು. ಸ್ತ್ರೀರತ್ನಗಳಲ್ಲೆಲ್ಲ ಶ್ರೇಷ್ಠಳು. ಕೃಷ್ಣನ ವಕ್ಷಃಸ್ಥಲದಲ್ಲಿರುವವಳು. ಮೋಡದ ನಡುವೆ ಮಿಂಚಿನಂತೆ ಕೃಷ್ಣನ ಎದೆಯಲ್ಲಿ ಹೊಳೆಯುವವಳು. ಅವಳ ಪಾದಕಮಲದ ಒಂದು ಉಗುರನ್ನು ಕಾಣಲು ಆತ್ಮಶುದ್ಧಿಗಾಗಿ ಬ್ರಹ್ಮ ಅರವತ್ತು ಸಾವಿರವರ್ಷ ತಪಸ್ಸು ಮಾಡಬೇಕಾಯಿತು. ತಪಸ್ಸು ಮಾಡದೆ ಅವಳ ದರ್ಶನ ಸ್ವಪ್ನದಲ್ಲಿಯೂ ಅವನಿಗೆ ಅಸಾಧ್ಯ. ಪ್ರತ್ಯಕ್ಷದಲ್ಲಿ ಇನ್ನೇನು ? ಕೊನೆಗೆ ವೃಂದಾವನದಲ್ಲಿ ಅವಳ ದರ್ಶನ ಲಭಿಸಿತು.

ಇನ್ನು ಪ್ರಕೃತಿಯ ಮುಖ್ಯ ಅಂಶ ಸ್ವರೂಪರಾದ ದೇವಿಯರ ಬಗ್ಗೆ ಹೇಳುತ್ತೇನೆ. ಮೊದಲಿಗೆ ಲೋಕಪಾವನೆಯಾದ ಗಂಗೆ. ವಿಷ್ಣುವಿನ ಪಾದಕಮಲದಿಂದ ಉದ್ಭವಿಸಿದವಳು. ಪಾಪಿಗಳ ಪಾಪವೆಂಬ ಸೌದೆಯನ್ನು ಸುಡಬಲ್ಲ ಉರಿಯುತ್ತಿರುವ ಕೊಳ್ಳಿ ಅವಳು. ದರ್ಶನ ಸ್ಪರ್ಶನ ಪಾನಗಳಿಂದ ಮೋಕ್ಷದಾಯಕಳು ಗೋಲೋಕಕ್ಕೆ ಏರಲು ಸೋಪಾನದಂತಿರುವವಳು. ಪವಿತ್ರಳು, ಪವಿತ್ರ ನದಿಗಳಲ್ಲೆಲ್ಲ ಶ್ರೇಷ್ಠಳು. ಶಿವನ ಜಟಾಜೂಟಕ್ಕೆ ಮುತ್ತಿನ ಹಾರದಂತಿರುವವಳು ಭಾರತದಲ್ಲಿ ತಪಸ್ಸು ಮಾಡುವವರಿಗೆ ಸಿದ್ಧಿಯನ್ನು ಬೇಗನೆ ತಂದುಕೊಡುವವಳು, ಶಂಖ ಕಮಲ ಹಾಲುಗಳಂತೆ ಬಿಳಿಯಾಗಿದ್ದು ಶುದ್ಧಸತ್ವಸ್ವರೂಪಳಾಗಿದ್ದಾಳೆ. ನಿರ್ಮಲ, ನಿರಹಂಕಾರಳು, ಪತಿವ್ರತೆ, ನಾರಾಯಣನಿಗೆ ಪ್ರಿಯಳು.

ಇನ್ನೊಬ್ಬಳು ಪ್ರಕೃತಿಯ ಪ್ರಧಾನ ಅಂಶಸ್ವರೂಪಳು ತುಲಸಿ ವಿಷ್ಣುವಿನ ಮಡದಿ. ವಿಷ್ಣುವಿಗೆ ಅಲಂಕಾರ ರೂಪಳು. ಅವನ ಪಾದದಲ್ಲಿರುವವಳು. ತಪಸ್ಸು ಪೂಜೆಗಳಿಗೆ ಬೇಗನೆ ಸಿದ್ಧಿತಂದುಕೊಡುವವಳು. ಪುಷ್ಪಗಳಲ್ಲೆಲ್ಲ ಶ್ರೇಷ್ಠಳು, ದರ್ಶನ ಸ್ಪರ್ಶನಗಳಿಂದ ಬೇಗನೆ ಮೋಕ್ಷದಾಯಕಳು. ಕಲಿಯುಗದಲ್ಲಿ ಪಾಪದ ಸೌದೆಯನ್ನು ದಹಿಸುವ ಅಗ್ನಿಜ್ವಾಲೆ ಅವಳು. ಅವಳ ಪಾದ ಸ್ಪರ್ಶದಿಂದ ಭೂಮಿ ಪವಿತ್ರವಾಗುವುದು. ಪವಿತ್ರ ತೀರ್ಥಗಳೂ ಅವಳ ದರ್ಶನ ಸ್ಪರ್ಶನಗಳಿಂದ ತಾವು ಇನ್ನೂ ಪವಿತ್ರವೆನಿಸಬೇಕೆಂದು ಬಯಸುವುವು. ಅವಳಿಲ್ಲದ ಎಲ್ಲ ಕರ್ಮವೂ ನಿಷ್ಫಲವಾಗುವುದು. ಮುಮುಕ್ಷುಗಳಿಗೆ ಮುಕ್ತಿ ಕೊಡುತ್ತಾಳೆ, ವಿಷಯೇಚ್ಛುಗಳಿಗೆ ವಿಷಯಸುಖ ನೀಡುತ್ತಾಳೆ, ಕಲ್ಪವೃಕ್ಷದಂತಿರುವ ವೃಕ್ಷರೂಪಿಣಿ ತುಲಸಿ.

ಕಶ್ಯಪಮುನಿಯ ಮಗಳು ಮನಸಾದೇವಿಯೂ ಪ್ರಕೃತಿಯ ಪ್ರಧಾನ ಅಂಶರೂಪಳು. ಶಂಕರನ ಪ್ರಿಯಶಿಷ್ಯಳು. ಮಹಾಜ್ಞಾನ ವಿಶಾರದೆ. ನಾಗರಾಜ ವಾಸುಕಿಯ

ಸೋದರಿ, ಜರತ್ಕಾರು ಮುನಿಯ ಮಡದಿ. ನಾಗರಿಗೆಲ್ಲ ಪೂಜ್ಯಳು, ನಾಗಮಾತೆ, ನಾಗಭೂಷಣ ಭೂಷಿತೆ, ವಿಷ್ಣುಭಕ್ತಿ, ವಿಷ್ಣುಪೂಜಾಪರಾಯಣೆ, ತಪಸ್ವಿನಿ, ತಪಸ್ಸು-ಗಳಿಗೆ ಫಲದಾತ್ರಿ. ಮೂರು ಲಕ್ಷ ದಿವ್ಯವರ್ಷಗಳ ಕಾಲ ಹರಿಯನ್ನು ಕುರಿತು ತಪಸ್ಸು ಮಾಡಿ ತಪಸ್ಸು ಮಾಡುವವರೆಲ್ಲ ಪೂಜ್ಯಳೆನಿಸಿದಳು. ಬ್ರಹ್ಮವರ್ಚಸ್ಸಿನಿಂದ ಜ್ವಲಿಸು-ವವಳು. ಸರ್ಪಮಂತ್ರದ ಅಧಿದೇವತೆ, ಶ್ರೇಷ್ಠ ತಪಸ್ವಿಯೆನಿಸಿದ ಆಸ್ತೀಕ ಮುನಿಯನ್ನು ಹಡೆದ ಮಾತೆ.

ಷಣ್ಮುಖನ ಪತ್ನಿ ದೇವಸೇನೆಯೂ ಪ್ರಕೃತಿಯ ಪ್ರಧಾನ ಅಂಶ ಸ್ವರೂಪಳು. ಷಷ್ಠೀದೇವಿಯೂ ಅವಳೆ. ಪ್ರಕೃತಿಯ ಷಷ್ಠಾಂಶರೂಪಳಾದ್ದರಿಂದ ಆ ಹೆಸರು ಸಪ್ತ-ಮಾತೃಕೆಯರಲ್ಲಿ ಒಬ್ಬಳಾಗಿದ್ದು ಪ್ರಪಂಚದ ಶಿಶುಗಳೆಲ್ಲವನ್ನೂ ಸಂರಕ್ಷಿಸುವವಳು. ಪುತ್ರಪೌತ್ರಾದಿ ಸಂತತಿ ನೀಡುವವಳು. ಜಗತ್ತಿಗೆ ಪೋಷಕಳು. ಹನ್ನೆರಡು ತಿಂಗಳಲ್ಲೂ ಅವಳ ಪೂಜೆ ವಿಹಿತವಾಗಿದೆ. ಹೆರಿಗೆ ಮನೆಯಲ್ಲಿ ಮಗುವಿನ ಆರನೇ ದಿನದಲ್ಲಿಯೂ ಇಪ್ಪತ್ತೊಂದನೆ ದಿನದಲ್ಲಿಯೂ ಅವಳ ಪೂಜೆ ಮಾಡಿದರೆ ಮಂಗಳ ಉಂಟಾಗುವುದು. ನೆಲದಲ್ಲಿಯೂ ನೀರಲ್ಲಿಯೂ ಅಂತರಿಕ್ಷದಲ್ಲಿಯೂ ಶಿಶುಗಳನ್ನು ರಕ್ಷಿಸುವವಳು ಅವಳು. ವಿಷ್ಣುಭಕ್ತಳಾಗಿದ್ದು ತಪಸ್ಸು ಮಾಡುತ್ತಾಳೆ.

ಸೃಷ್ಟಿಯಲ್ಲಿ ಮಂಗಳ ಚಂಡಿಕಾದೇವಿಯೂ ಪ್ರಕೃತಿಯ ಪ್ರಧಾನಾಂಶ ರೂಪಳು. ಸೃಷ್ಟಿಯಲ್ಲಿ ಸರ್ವಮಂಗಳ ದಾಯಕಳು. ಪ್ರಳಯದಲ್ಲಿ ಕೋಪರೂಪಿಣಿಯಾಗುವಳು. ಅದರಿಂದ ಮಂಗಳಚಂಡಿಕೆ ಎಂದು ಹೆಸರು. ಪ್ರತಿ ಮಂಗಳವಾರದಲ್ಲಿ ಅವಳ ಪೂಜೆ ಎಲ್ಲೆಡೆ ನಡೆಯುವುದು. ಗಂಧಪುಷ್ಪಧೂಪ ದೀಪ ನೈವೇದ್ಯವೆಂಬ ಪಂಚೋಪ-ಚಾರಗಳಿಂದ ಪೂಜಿಸುವ ಸ್ತ್ರೀಯರಿಗೆ ಪುತ್ರಪೌತ್ರಾದಿ ಸಂತತಿ, ಧನಸಂಪತ್ತು ಕೀರ್ತಿ ಮಂಗಳಗಳನ್ನು ನೀಡುವಳು. ಶೋಕ ಸಂತಾಪ ಪಾಪ ದುಃಖ ದಾರಿದ್ರ್ಯಗಳನ್ನು ಕಳೆವಳು. ಸಕಲಾಭೀಷ್ಟಗಳನ್ನು ನೀಡುವಳು. ಕೋಪಗೊಂಡಾಗ ಕ್ಷಣದಲ್ಲಿ ಪ್ರಪಂಚ-ವನ್ನು ನಾಶಮಾಡಬಲ್ಲಳು.

ಕಮಲದಂಥ ಕಣ್ಣಿನ ಕಾಳಿಯೂ ಪ್ರಕೃತಿಯ ಪ್ರಧಾನಾಂಶಳು. ದುರ್ಗೆಯ ಹಣೆಯಿಂದ ಪ್ರಾದುರ್ಭವಿಸಿ ಅವಳ ಅರ್ಧಾಂಶ ಸ್ವರೂಪಳಾಗಿರುವಳು. ಗುಣ-ಗಳಲ್ಲಿಯೂ ತೇಜಸ್ಸಿನಲ್ಲಿಯೂ ಸಮಾನಳು. ಕೋಟಿಸೂರ್ಯರಂತೆ ಹೊಳೆವ ಸುಂದರ ಶರೀರದವಳು. ಸರ್ವಸಿದ್ಧಿದಾಯಕಳು, ಸಿದ್ಧಯೋಗಿನಿ, ಕೃಷ್ಣಭಕ್ತಳು. ಕೃಷ್ಣನನ್ನೆ ಸದಾ ಧ್ಯಾನಿಸುತ್ತ ಕೃಷ್ಣವರ್ಣದವಳಾಗಿರುವಳು. ನಿಃಶ್ವಾಸಮಾತ್ರದಿಂದ ಇಡಿ ಬ್ರಹ್ಮಾಂಡವನ್ನು ಲಯಮಾಡಬಲ್ಲಳು. ಲೋಕರಕ್ಷಣೆಗಾಗಿ ದೈತ್ಯರೊಡನೆ ಯುದ್ಧ ಮಾಡುವುದು ಅವಳಿಗೆ ಆಟಕ್ಕೆ ಸಮಾನ. ಚೆನ್ನಾಗಿ ಪೂಜಿಸಿದರೆ ಧರ್ಮ ಅರ್ಥ ಕಾಮ

ಮೋಕ್ಷಗಳನ್ನು ಕೊಡಬಲ್ಲಳು. ಆದರಿಂದ ಬ್ರಹ್ಮಾದಿ ದೇವತೆಗಳೂ ಮನುಗಳೂ ಮುನಿಗಳೂ ಮಾನವರೂ ಅವಳನ್ನು ಸ್ತೋತ್ರ ಮಾಡುವರು.

ಎಲ್ಲಕ್ಕೂ ಆಧಾರಳಾದ ಭೂದೇವಿಯೂ ಪ್ರಕೃತಿಯ ಪ್ರಧಾನಾಂಶ ಸ್ವರೂಪಳು. ಸರ್ವಸಸ್ಯಗಳಿಗೂ ಉತ್ಪತ್ತಿಕಾರಣಳು, ರತ್ನಾಕರಳು, ಸರ್ವವಂದ್ಯಳು, ಸರ್ವ-ಸಂಪತ್ತನ್ನೂ ಉಂಟುಮಾಡುವವಳು, ಅವಳಿಲ್ಲದಿದ್ದರೆ ಚರಾಚರಜಗತ್ತೆಲ್ಲವೂ ನಿರಾಧಾರವಾಗುತ್ತಿತ್ತು.

ಪ್ರಕೃತಿಯ ಕಲಾಸ್ವರೂಪರಾಗಿದ್ದು ದೇವತೆಗಳಿಗೆ ಪತ್ನಿಯರಾಗಿರುವ ದೇವಿಯರ ಬಗ್ಗೆ ಹೇಳುತ್ತೇನೆ. ಸ್ವಾಹಾದೇವಿ ಅಗ್ನಿದೇವನ ಪತ್ನಿ. ಮೂರುಲೋಕದಲ್ಲಿ ಪೂಜಿತಳು. ಆಕೆಯನ್ನು ಬಿಟ್ಟು ಅಗ್ನಿಗೆ ಹೋಮ ಮಾಡಿದರೆ ಆ ಹವಿಸ್ಸನ್ನು ದೇವತೆಗಳು ಸ್ವೀಕರಿಸುವುದಿಲ್ಲ.

ದಕ್ಷಿಣಾದೇವಿ ಯಜ್ಞದೇವನ ಪತ್ನಿ. ಅವಳಿಲ್ಲದ ಕರ್ಮವೆಲ್ಲ ವ್ಯರ್ಥ. ಸ್ವಧಾದೇವಿ ಪಿತೃದೇವತೆಗಳ ಪತ್ನಿ. ಮುನಿಗಳಿಂದಲೂ ಮನುಗಳಿಂದಲೂ ಮಾನವರಿಂದಲೂ ಪೂಜಿಸಲ್ಪಡುವಳು. ಅವಳನ್ನು ಬಿಟ್ಟು ಪಿತೃಗಳಿಗೆ ನೀಡುವ ದಾನವೆಲ್ಲವೂ ವ್ಯರ್ಥ.

ಸ್ವಸ್ತಿದೇವಿ ವಾಯುದೇವನ ಪತ್ನಿ. ಸಕಲರಿಂದ ಪೂಜಿತಳು. ಅವಳನ್ನು ಬಿಟ್ಟು ಮಾಡಿದ ದಾನ ಪ್ರತಿಗ್ರಹವೆಲ್ಲ ವ್ಯರ್ಥ.

ಪುಷ್ಟಿದೇವಿ ಗಣಪತಿಯ ಪತ್ನಿ. ಅವಳಿಲ್ಲದಿದ್ದರೆ ಸ್ತ್ರೀಪುರುಷರೆಲ್ಲರೂ ಕ್ಷೀಣರಾಗುವರು.

ತುಷ್ಟಿದೇವಿ ಶೇಷದೇವನ ಪತ್ನಿ. ಲೋಕಪೂಜ್ಯಳು. ಅವಳಿಲ್ಲದಿದ್ದರೆ ಲೋಕದಲ್ಲಿ ಯಾರಿಗೂ ಸಂತೋಷವಿರಲಾರದು.

ಸಂಪತ್ತಿದೇವಿ ಈಶಾನದೇವನ ಪತ್ನಿ. ದೇವತೆಗಳಿಂದಲೂ ಮನುಷ್ಯರಿಂದಲೂ ಪೂಜ್ಯಳು. ಅವಳಿಲ್ಲದಿದ್ದರೆ ಲೋಕವೆಲ್ಲ ದಾರಿದ್ರ್ಯದಿಂದ ಬಳಲುವುದು.

ಧೃತಿದೇವಿ ಕಪಿಲ ಮುನಿಯ ಪತ್ನಿ. ಸರ್ವಪೂಜ್ಯಳು. ಅವಳಿಲ್ಲದಿದ್ದರೆ ಲೋಕದಲ್ಲಿ ಎಲ್ಲರೂ ಅಧೀರರಾಗುತ್ತಿದ್ದರು.

ಕ್ಷಮಾದೇವಿ ಯಮನ ಪತ್ನಿ, ಪತಿವ್ರತೆ, ಸುಶೀಲೆ, ಸರ್ವಪೂಜ್ಯೆ. ಅವಳಿಲ್ಲ-ದಿರುತ್ತಿದ್ದರೆ ಲೋಕದಲ್ಲಿ ಎಲ್ಲರೂ ಉನ್ಮತ್ತರೂ ಭಯಂಕರರೂ ಆಗುತ್ತಿದ್ದರು.

ರತಿದೇವಿ ಮನ್ಮಥನ ಪತ್ನಿ. ಕ್ರೀಡೆಗಳಿಗೆ ಅಧಿಷ್ಠಾತ್ರಿಯಾದ ದೇವಿ ಅವಳಿಲ್ಲದೆ ಇರುತ್ತಿದ್ದರೆ ಲೋಕವೆಲ್ಲ ಕ್ರೀಡೆಗಳಲ್ಲಿ ಉತ್ಸಾಹವಿಲ್ಲದವರಾಗುತ್ತಿದ್ದರು.

ಮುಕ್ತಿದೇವಿ ಸತ್ಯನ ಪತ್ನಿ, ಪತಿವ್ರತೆ, ಜಗತ್ಪೂಜ್ಯಳು. ಅವಳಿಲ್ಲದಿರುತ್ತಿದ್ದರೆ ಲೋಕದಲ್ಲಿ ಬಂಧುತ್ವವೆಂಬುದಿಲ್ಲವಾಗುತ್ತಿತ್ತು.

ದಯಾದೇವಿ ಮೋಹನ ಪತ್ನಿ. ಪತಿವ್ರತೆ, ಮೂಲೋಕ ಪೂಜಿತಳು. ಅವಳಿಲ್ಲ-ದಿರುತ್ತಿದ್ದರೆ ಲೋಕದಲ್ಲಿ ಎಲ್ಲರೂ ನಿಷ್ಠುರಿಗಳಾಗುತ್ತಿದ್ದರು.

ಪ್ರತಿಷ್ಠಾದೇವಿ ಪುಣ್ಯನ ಪತ್ನಿ. ಪುಣ್ಯರೂಪಳು, ಅವಳಿಲ್ಲದ ಲೋಕ ಬದುಕಿದ್ದೂ ಸತ್ತಂತೆಯೆ.

ಕೀರ್ತಿದೇವಿ ಸುಕರ್ಮನ ಪತ್ನಿ, ಧನ್ಯೆ, ಮಾನ್ಯೆ, ಅವಳಿಲ್ಲದಿರುತ್ತಿದ್ದರೂ ಲೋಕ ಯಶೋಹೀನವಾಗಿ ಸತ್ತಂತೆ ಇರುತ್ತಿತ್ತು.

ಕ್ರಿಯಾದೇವಿ ಉದ್ಯೋಗನ ಪತ್ನಿ. ಅವಳಿಲ್ಲದಿರುತ್ತಿದ್ದರೆ, ಜಗತ್ತು ನಾಶವಾದಂತೆಯೆ.

ಮಿಥ್ಯೆ ಅಧರ್ಮನ ಪತ್ನಿ. ವಂಚಕರೆಲ್ಲರೂ ಅವಳನ್ನೇ ಪೂಜಿಸುತ್ತಾರೆ. ಅವಳಿಂದ ತುಂಬಿಹೋದರೆ ಬ್ರಹ್ಮನಿರ್ಮಿತವಾದ ಜಗತ್ತೆಲ್ಲ ನಾಶವಾಗುತ್ತದೆ. ಅವಳು ಸತ್ಯಯುಗದಲ್ಲಿ ಕಣ್ಣಿಗೆ ಕಾಣದಂತಿರುತ್ತಾಳೆ. ತ್ರೇತಾಯುಗದಲ್ಲಿ ಸೂಕ್ಷ್ಮರೂಪಳಾಗಿ ಕಂಡುಬರುತ್ತಾಳೆ. ದ್ವಾಪರದಲ್ಲಿ ನಾಚಿಕೆಯಿಂದ ಅರೆಬರೆಯಾಗಿ ಮೈತೋರುತ್ತಾಳೆ. ಕಲಿಯುಗದಲ್ಲಿ ನಾಚಿಕೆ ಬಿಟ್ಟು ಎಲ್ಲೆಡೆ ವ್ಯಾಪಿಸಿ ಕಾಣಿಸಿಕೊಳ್ಳುತ್ತಾಳೆ. ಈಕೆಯ ಸೋದರನೆ ಕಪಟ. ಅವನೊಂದಿಗೆ ಈಕೆ ಮನೆಮನೆಗಳಲ್ಲಿ ಸಂಚರಿಸುತ್ತಾಳೆ.

ಶಾಂತಿ ಲಜ್ಜೆಯರು ಸುಶೀಲನ ಇಬ್ಬರು ಪತ್ನಿಯರು. ಅವಳಿಲ್ಲದಿರುತ್ತಿದ್ದರೆ ಜಗತ್ತು ಉನ್ಮತ್ತವಾದಂತಿರುತ್ತಿತ್ತು.

ಬುದ್ಧಿ ಮೇಧಾ ಸ್ಮೃತಿ ಈ ಮೂವರು ಜ್ಞಾನಪತ್ನಿಯರು. ಅವರಿಲ್ಲದಿದ್ದರೆ ಜಗತ್ತು ಮೂಢತನದಿಂದಾಗಿ ಸತ್ತಂತೇ ಇದ್ದೀತು.

ಮೂರ್ತಿದೇವಿ ಕಾಲಾಗ್ನಿ ರುದ್ರನ ಪತ್ನಿ. ಅವಳು ರಾತ್ರಿ ಸಮಸ್ತಲೋಕವನ್ನಾಚ್ಛಾದಿಸುತ್ತಾಳೆ. ಸಂಧ್ಯಾ ರಾತ್ರಿ ದಿನ ಈ ಮೂವರು ಕಾಲನ ಪತ್ನಿಯರು. ಅವರಿಲ್ಲದೆ ಇದ್ದರೆ ಬ್ರಹ್ಮನಿಗೂ ಕಾಲಗಣನೆ ಅಸಾಧ್ಯ.

ಕ್ಷುತ್ ಪಿಪಾಸೆಗಳು ಲೋಭನ ಮಡದಿಯರು. ಅವರಿಂದ ಜಗತ್ತು ತುಂಬಿದರೆ ಕ್ಷೋಭೆಗೊಂಡು ಚಿಂತಾಜನಕವಾದೀತು.

ಪ್ರಭಾ ದಾಹಿಕಾ ಎಂದು ತೇಜಸ್ಸಿನ ಇಬ್ಬರು ಮಡದಿಯರಿಲ್ಲದಿರುತ್ತಿದ್ದರೆ ಬ್ರಹ್ಮನಿಗೂ ಜಗತ್‌ಸೃಷ್ಟಿ ಅಸಾಧ್ಯವಾಗುತ್ತಿತ್ತು.

ಮೃತ್ಯು ಜರೆ ಇವರಿಬ್ಬರು ಕಾಲದ ಮಕ್ಕಳು. ಪ್ರಜ್ವರನ ಹೆಂಡತಿಯರು. ಅವರಿಬ್ಬರು ಬ್ರಹ್ಮನಿರ್ಮಿತವಾದ ಇಡೀ ಜಗತ್ತನ್ನು ನಾಶಗೊಳಿಸುತ್ತಾರೆ.

ನಿದ್ರಾಕನ್ಯೆಯಾದ ತಂದ್ರೆಯೂ ಪ್ರೀತಿಯೂ ಸುಖಪತ್ನಿಯರು. ಅವರಿಬ್ಬರೂ ಜಗತ್ತೆಲ್ಲ ವ್ಯಾಪಿಸಿದ್ದಾರೆ.

ಶ್ರದ್ಧಾ ಭಕ್ತಿ ಇವರಿಬ್ಬರೂ ವೈರಾಗ್ಯ ಪತ್ನಿಯರು. ಅವರಿಂದ ಜಗತ್ತು ಜೀವನ್ಮುಕ್ತಿ ಪಡೆಯಬಲ್ಲುದು.

ದೇವಮಾತೆಯಾದ ಅದಿತಿ, ಗೋಮಾತೆ ಸುರಭಿ, ದೈತ್ಯರ ಜನನಿ ದಿತಿ, ಕದ್ರು, ವಿನತೆ, ದನು ಮುಂತಾದವರೆಲ್ಲರೂ ಪ್ರಕೃತಿಯ ಕಲಾ ಸ್ವರೂಪರು. ಸೃಷ್ಟಿಯಲ್ಲಿ ಉಪಯುಕ್ತರಾದವರು. ಚಂದ್ರಪತ್ನಿ ರೋಹಿಣಿ, ಸೂರ್ಯಪತ್ನಿ ಸಂಜ್ಞೆ, ಮನುಪತ್ನಿ ಶತರೂಪೆ, ಇಂದ್ರಪತ್ನಿ ಶಚಿ, ಬೃಹಸ್ಪತಿ ಪತ್ನಿ ತಾರೆ, ವಸಿಷ್ಠ ಪತ್ನಿ ಅರುಂಧತಿ, ಗೌತಮ ಪತ್ನಿ ಅಹಲ್ಯೆ, ಅತ್ರಿಪತ್ನಿ ಅನಸೂಯೆ, ಕರ್ದಮ ಪತ್ನಿ ದೇವಹೂತಿ, ದಕ್ಷಪತ್ನಿ ಪ್ರಸೂತಿ, ಪಿತೃಗಳ ಮಾನಸ ಪುತ್ರಿಯೂ ಪಾರ್ವತಿಯ ಜನನಿಯೂ ಆದ ಮೇನಕೆ. ಆಕೂತಿ, ಕುಬೇರ ಪತ್ನಿ, ವರುಣಪತ್ನಿ, ಯಮಪತ್ನಿ, ಬಲಿಚಕ್ರವರ್ತಿಯ ಪತ್ನಿಯಾದ ವಿಂಧ್ಯಾವಳಿ, ಕುಂತಿ, ದಮಯಂತಿ, ಯಶೋದೆ, ದೇವಕಿ, ಗಾಂಧಾರಿ, ದ್ರೌಪದಿ, ಸಾವಿತ್ರಿ, ವೃಷಭಾನುವಿನ ಪತ್ನಿಯೂ ರಾಧೆಯ ಮಾತೆಯೂ ಆದ ಕಲಾವತಿ, ಮಂಡೋದರಿ, ಕೌಸಲ್ಯೆ, ಸುಭದ್ರೆ, ಕೈಕಯಿ, ರೇವತಿ, ಸತ್ಯಭಾಮೆ, ಕಾಲಿಂದಿ, ಲಕ್ಷ್ಮಣೆ, ಮಿತ್ರವಿಂದೆ, ನಾಗ್ನಜಿತಿ, ಜಾಂಬವತಿ, ರುಕ್ಮಿಣಿ, ಸ್ವಯಂ ಲಕ್ಷ್ಮೀ ಸ್ವರೂಪಳಾದ ಸೀತೆ, ವೇದವ್ಯಾಸರ ಮಾತೆಯಾದ ಯೋಜನಗಂಧೆ, ಬಾಣಪುತ್ರಿ-ಯಾದ ಉಷೆ, ಅವಳ ಸಖಿಯಾದ ಚಿತ್ರಲೇಖೆ, ಪ್ರಭಾವತಿ, ಬಾನುಮತಿ, ಮಾಯಾವತಿ; ಪರಶುರಾಮನ ಜನನಿಯಾದ ರೇಣುಕೆ, ಬಲರಾಮನ ಮಾತೆಯಾದ ರೋಹಿಣಿ, ಕೃಷ್ಣನ ತಂಗಿಯಾದ ದುರ್ಗೆ ಎಂದು ಮುಂತಾಗಿ ಪ್ರಕೃತಿಯ ಕಲಾಸ್ವರೂಪರು ಬಹು ಮಂದಿ ಇದ್ದಾರೆ. ಗ್ರಾಮದೇವಿಯರೆಲ್ಲ ಪ್ರಕೃತಿಯ ಕಲಾಸ್ವರೂಪರೆ.

**ಕಲಾಂಶಾಂಶ ಸಮುದ್ಭೂತಾಃ ಪ್ರತಿ ವಿಶ್ವೇಷು ಯೋಷಿತಃ ।**
**ಯೋಷಿತಾಮಪಮಾನೇನ ಪ್ರಕೃತೇಶ್ಚ ಪರಾಭವಃ ॥**

ಜಗತ್ತಿನ ಎಲ್ಲ ಸ್ತ್ರೀಯರೂ ಪ್ರಕೃತಿಯ ಕಲೆಯ ಅಂಶಾಂಶಗಳಿಂದ ಉತ್ಪನ್ನ ರಾಗಿರುತ್ತಾರೆ. ಅದರಿಂದ ಸ್ತ್ರೀಯರನ್ನು ಅವಮಾನಿಸಿದರೆ ಪ್ರಕೃತಿಗೇ ಅವಮಾನ.

ಪತಿಪುತ್ರವತಿಯೂ ಪತಿವ್ರತೆಯೂ ಆದ ಬ್ರಾಹ್ಮಣಸ್ತ್ರೀಯನ್ನು ವಸ್ತ್ರಾಭರಣ ಸುಗಂಧ ದ್ರವ್ಯಗಳಿಂದ ಸತ್ಕರಿಸಿದರೆ ಪ್ರಕೃತಿಯನ್ನು ಪೂಜಿಸಿದಂತಾಗುವುದು. ಎಂಟು-

ವರ್ಷದ ವಿಪ್ರಕನ್ಯೆಯನ್ನು ವಸ್ತ್ರಅಲಂಕಾರ ಸುಗಂಧದ್ರವ್ಯಗಳಿಂದ ಪೂಜಿಸಿದರೆ ಪ್ರಕೃತಿಯನ್ನೇ ಪೂಜಿಸಿದಂತಾಗುವುದು.

ಉತ್ತಮ ಮಧ್ಯಮ ಅಧಮರಾದ ಸ್ತ್ರೀಯರೆಲ್ಲರೂ ಪ್ರಕೃತಿಯಿಂದಲೆ ಹುಟ್ಟಿರುತ್ತಾರೆ. ಅವರಲ್ಲಿ ಉತ್ತಮಸ್ತ್ರೀಯರು ಪ್ರಕೃತಿಯ ಸತ್ವಗುಣದಿಂದ ಹುಟ್ಟಿ-ದವರು. ಅವರು ಸುಶೀಲೆಯರು, ಪತಿವ್ರತೆಯರು, ಮಧ್ಯಮಸ್ತ್ರೀಯರು ರಜೋ-ಗುಣದಿಂದ ಹುಟ್ಟಿದವರು. ಅವರು ಭೋಗನಿರತರು, ಪತಿಗೂ ಸುಖ ನೀಡುವರು. ಅಧಮಸ್ತ್ರೀಯರು ತಮೋಗುಣದಿಂದ ಹುಟ್ಟಿದವರು. ಒಳ್ಳೆಯ ಕುಲದಿಂದ ಬಂದವರಲ್ಲ. ಕೆಟ್ಟಮಾತು ವಂಚನೆ ಸ್ವಚ್ಛಂದ ಪ್ರವೃತ್ತಿ ಜಗಳವಾಡುವ ಸ್ವಭಾವಗಳು ಅವರ ಲಕ್ಷಣ. ಭೂಲೋಕದಲ್ಲಿ ವೇಶ್ಯೆಯರು ಸ್ವರ್ಗದಲ್ಲಿ ಅಪ್ಸರೆಯರು ಇಂಥವರು.

ಪಂಚಪ್ರಕೃತಿಯರಲ್ಲಿ ಒಬ್ಬಳಾದ ದುರ್ಗೆಯನ್ನು ಮೊದಲಿಗೆ ಸುರಥರಾಜ ಪೂಜಿಸಿದ. ಅನಂತರ ರಾವಣವಧೆಗಾಗಿ ರಾಮ ಪೂಜಿಸಿದ. ಬಳಿಕ ಅವಳು ಮೂಲೊಕದಲ್ಲಿ ಪೂಜ್ಯಳೆನಿಸಿದಳು. ಮೊದಲಿಗೆ ಅವಳು ದಕ್ಷಪತ್ನಿಯಲ್ಲಿ ಸತಿಯಾಗಿ ಜನಿಸಿದಳು. ಪತಿನಿಂದೆ ಕೇಳಿ ಸಹಿಸದೆ ಶರೀರತ್ಯಾಗ ಮಾಡಿ ಹಿಮಾಲಯನ ಪತ್ನಿಯಲ್ಲಿ ಪಾರ್ವತಿಯಾಗಿ ಜನಿಸಿ ಶಿವನನ್ನು ವರಿಸಿದಳು. ಅವಳಿಗೆ ಕೃಷ್ಣಸ್ವರೂಪನಾದ ಗಣೇಶ ಮತ್ತು ವಿಷ್ಣುವಿನ ಅಂಶಸಂಭೂತನಾದ ಸ್ಕಂದ ಮಕ್ಕಳಾಗಿ ಜನಿಸಿದರು.

ಎರಡನೆಯವಳಾದ ಲಕ್ಷ್ಮಿಯನ್ನು ಮೊದಲಿಗೆ ಮಂಗಲರಾಜ ಪೂಜಿಸಿದ. ಅನಂತರ ಮೂಲೋಕದ ದೇವತೆಗಳು ಮುನಿಗಳು ಮಾನವರು ಎಲ್ಲರೂ ಪೂಜಿಸತೊಡಗಿದರು. ಸಾವಿತ್ರಿ ಮೊದಲಿಗೆ ವೈರಾಗ್ಯ ಪತ್ನಿಯಾದ ಭಕ್ತಿದೇವಿಯಿಂದ ಪೂಜಿತಳಾದಳು. ಬಳಿಕ ಮೂಲೋಕದ ದೇವತೆಗಳು ಮುನಿಗಳು ಮಾನವರಿಂದ ಪೂಜ್ಯಳೆನಿಸಿದಳು.

ಸರಸ್ವತಿ ಮೊದಲಿಗೆ ಬ್ರಹ್ಮನಿಂದ ಪೂಜಿತಳಾದಳು. ಬಳಿಕ ಮೂಲೋಕದ ದೇವತೆಗಳು ಮುನಿಗಳು ಮಾನವರಿಂದ ಪೂಜಿಸಲ್ಪಟ್ಟಳು.

ರಾಧೆ ಮೊದಲಿಗೆ ಗೋಲೊಕದಲ್ಲಿ ರಾಸಮಂಡಲದಲ್ಲಿ ಕಾರ್ತಿಕ ಹುಣ್ಣಿಮೆಯಂದು ಕೃಷ್ಣಪರಮಾತ್ಮನಿಂದ ಪೂಜಿಸಲ್ಪಟ್ಟಳು. ಬಳಿಕ ಗೋಪಗೋಪಿಯ-ರಿಂದಲೂ ಬಾಲಕ ಬಾಲಿಕೆಯರಿಂದಲೂ ಗೋವುಗಳಿಂದಲೂ ದೇವತೆಗಳಿಂದಲೂ ಪೂಜ್ಯಳೆನಿಸಿದಳು. ಆಗ ಬ್ರಹ್ಮಾದಿ ದೇವತೆಗಳೂ ಮುನಿಗಳೂ ಮನುಗಳೂ ಅವಳನ್ನು ಪುಷ್ಪಧೂಪಾದಿಗಳಿಂದ ಭಕ್ತಿಯಿಂದ ಪೂಜಿಸಲ್ಪಟ್ಟಳು. ಭೂಲೋಕದಲ್ಲಿ ಮೊದಲಿಗೆ ಭಾರತದ ಪುಣ್ಯಕ್ಷೇತ್ರದಲ್ಲಿ ಶಂಕರನ ಉಪದೇಶದಿಂದ ಸುಯಜ್ಞ ಅವಳನ್ನು ಪೂಜಿಸಿದ. ಬಳಿಕ ಪರಮಾತ್ಮನ ಆಜ್ಞೆಯಂತೆ ದೇವತೆಗಳೂ ಮುನಿಗಳೂ ಪುಷ್ಪ ಧೂಪಾದಿಗಳಿಂದ ಭಕ್ತಿಪೂರ್ವಕ ಪೂಜಿಸಿದರು.

ಪ್ರಕೃತಿಯ ಕಲೆಯಿಂದ ಅವತರಿಸಿದ ದೇವಿಯರೂ ಹೀಗೇ ಗ್ರಾಮ ನಗರಗಳಲ್ಲಿ ಪೂಜ್ಯರಾದರು.

ಪ್ರಕೃತಿಯ ಚರಿತ್ರೆಯನ್ನು ಹೀಗೆ ವರ್ಣಿಸಿದ್ದಾಯಿತು. ಇನ್ನೇನು ಕೇಳಬಯಸುವಿ ?

**ಇಲ್ಲಿಗೆ ಶ್ರೀ ಬ್ರಹ್ಮವೈವರ್ತ ಮಹಾಪುರಾಣದಲ್ಲಿ ಎರಡನೆಯದಾದ ಪ್ರಕೃತಿಖಂಡದಲ್ಲಿ ನಾರಾಯಣ ನಾರದ ಸಂವಾದದಲ್ಲಿ ಪ್ರಕೃತಿಯ ಸ್ವರೂಪ ಮತ್ತು ವಿಭಾಗ ವರ್ಣನೆಯೆಂಬ ಒಂದನೆ ಅಧ್ಯಾಯ ಮುಗಿಯಿತು.**

## ದೇವದೇವಿಯರ ಉತ್ಪತ್ತಿ

## ಅಧ್ಯಾಯ-೨

ನಾರದ— ದೇವಿಯರ ಚರಿತ್ರೆಯೆಲ್ಲವನ್ನೂ ಸಂಕ್ಷೇಪವಾಗಿ ತಿಳಿದಂತಾಯಿತು. ಈಗ ವಿಸ್ತಾರವಾಗಿಯೂ ಕೇಳಬಯಸುತ್ತೇನೆ, ಹೇಳು. ಸೃಷ್ಟಿಯ ಆದಿಕಾರಣಗಳಾದ ಪ್ರಕೃತಿ ಸೃಷ್ಟಿಯಲ್ಲಿ ಹೇಗೆ ಆವಿರ್ಭವಿಸಿದಳು ? ಹೇಗೆ ಐದು ರೂಪ ಧರಿಸಿದಳು ? ಅವಳ ಕಲೆಯಿಂದ ಉದ್ಭವಿಸಿದವರ ಚರಿತ್ರೆಯನ್ನೂ ವಿಸ್ತಾರವಾಗಿ ತಿಳಿಯಬಯಸುತ್ತೇನೆ. ದೇವಿಯರ ಉತ್ಪತ್ತಿ ಧ್ಯಾನ ಪೂಜಾವಿಧಿ ಸ್ತೋತ್ರ ಕವಚ ಮುಂತಾದವುಗಳನ್ನು ಅವರ ಐಶ್ವರ್ಯ ಶೌರ್ಯಗಳನ್ನೂ ವರ್ಣಿಸು.

ಶ್ರೀ ನಾರಾಯಣ— ಆತ್ಮ, ಆಕಾಶ, ಕಾಲ, ದಿಕ್ಕುಗಳಂತೆ ಗೋಕುಲವೂ ಗೋಲೋಕವೂ ಗೋಲೋಕದ ಒಂದು ಭಾಗವಾದ ವೈಕುಂಠವೂ ನಿತ್ಯ. ಹಾಗೆ ಪ್ರಕೃತಿಯೂ ನಿತ್ಯಳೆ. ಅಗ್ನಿಯಲ್ಲಿ ದಾಹಕ ಶಕ್ತಿಯಂತೆ, ಚಂದ್ರ ಪದ್ಮಗಳಲ್ಲಿ ಕಾಂತಿ- ಯಂತೆ, ಸೂರ್ಯನಲ್ಲಿ ಪ್ರಕಾಶದಂತೆ ಪರಮಾತ್ಮನಲ್ಲಿ ಪ್ರಕೃತಿ ಸದಾ ಒಂದಾಗಿರುತ್ತಾಳೆ. ಅಕ್ಕಸಾಲಿ ಚಿನ್ನವಿಲ್ಲದೆ ಕುಂಡಲ ಮಾಡಲಾರ. ಕುಂಬಾರ ಮಣ್ಣಿಲ್ಲದೆ ಗಡಿಗೆ ಮಾಡಲಾರ. ಹಾಗೆ ಪರಮಾತ್ಮನೂ ಪ್ರಕೃತಿಯಿಲ್ಲದೆ ಸೃಷ್ಟಿ ಮಾಡಲಾರ. ಸರ್ವಶಕ್ತಿ ಸ್ವರೂಪಳು ಪ್ರಕೃತಿ. ಪ್ರಕೃತಿಗೆ ಒಡೆಯನಾದ್ದರಿಂದ ಪರಮಾತ್ಮ ಶಕ್ತಿಮಾನ್ ಎನಿಸುತ್ತಾನೆ. 'ಶಕ್ತಿ' ಎಂಬಲ್ಲಿ 'ಶಕ' ಎಂದರೆ ಸಾಮರ್ಥ್ಯ, 'ತಿ' ಎಂದರೆ ಪರಾಕ್ರಮ. ಎರಡನ್ನೂ ಕೊಡುವುದರಿಂದ ಪ್ರಕೃತಿ ಶಕ್ತಿ ಎನಿಸುವಳು.

ಪ್ರಕೃತಿ ಭಗವತಿ ಎನಿಸುತ್ತಾಳೆ. ಪರಮಾತ್ಮ ಭಗವಾನ್ ಎನಿಸುತ್ತಾನೆ.

ಏಕೆಂದರೆ ಭಗ ಎಂಬುದು ಸಮೃದ್ಧಿ ಬುದ್ಧಿ ಸಂಪತ್ತು ಯಶಸ್ಸುಗಳಿಗೆ ಹೆಸರು. ಆ ಗುಣಗಳನ್ನು ಹೊಂದಿರುವುದರಿಂದ ಪ್ರಕೃತಿ ಭಗವತಿ. ಭಗಸ್ವರೂಪಳಾದ ಪ್ರಕೃತಿಯಿಂದ ಕೂಡಿರುವುದರಿಂದ ಪರಮಾತ್ಮ ಭಗವಾನ್.

ಪರಮಾತ್ಮ ಸಾಕಾರನೂ ನಿರಾಕಾರನೂ ಆಗಿದ್ದು ಸ್ವತಂತ್ರನಾಗಿದ್ದಾನೆ. ಅವನು ಎಲ್ಲವನ್ನೂ ನೋಡುತ್ತಾನೆ. ಅವನನ್ನು ಯಾರೂ ನೋಡಲಾರರು. ಅರೂಪಿಯಾದರೂ ಸರ್ವರೂಪನೂ ಆಗಿದ್ದಾನೆ. ನಿರಾಕಾರ ತೇಜೋರೂಪನಾಗಿದ್ದಾನೆ ಎಂದು ಯೋಗಿಗಳು ಧ್ಯಾನಿಸಿದರೂ ವಿಷ್ಣುಭಕ್ತರು ಸೂಕ್ಷ್ಮಮತಿಗಳಾದ್ದರಿಂದ ಹಾಗೆ ಒಪ್ಪುವುದಿಲ್ಲ. ತೇಜಸ್ವಿ ಒಬ್ಬನಿಲ್ಲದಿದ್ದರೆ ಆ ತೇಜಸ್ಸು ಯಾರದು ಎಂದು ಅವರು ಆಕ್ಷೇಪಿಸುತ್ತಾರೆ. ಆದ್ದರಿಂದ ಸ್ವೇಚ್ಛಾಮಯ, ಸರ್ವರೂಪ, ಸರ್ವಕಾರಣ ಕಾರಣ, ಪರಾತ್ಪರನಾದ ಆ ಪರಮಾತ್ಮ ತೇಜೋಮಂಡಲದ ಮಧ್ಯದಲ್ಲಿ ಮನೋಹರ ಬಾಲರೂಪಿಯಾಗಿ ನವಮೇಘಶ್ಯಾಮವರ್ಣದಿಂದ ಹೊಳೆಯುತ್ತಾನೆ. ಕಮಲದ ಕಾಂತಿಯನ್ನು ಧಿಕ್ಕರಿಸುವ ಕಣ್ಣು, ಮುತ್ತಿನಂತೆ ಬಿಳಿಯಾದ ಹಲ್ಲು, ಉನ್ನತ ನಾಸಿಕೆ, ತಲೆಯ ಮೇಲೆ ನವಿಲಗರಿ, ಕೊರಳಲ್ಲಿ ಜಾಜಿಯ ಮಾಲೆ, ಪೀತಾಂಬರ ಉಟ್ಟಿದ್ದಾನೆ. ಮಂದ ಹಾಸದಿಂದ ಭಕ್ತರಿಗೆ ಅನುಗ್ರಹ ಮಾಡುತ್ತಾನೆ. ಸರ್ವಾಧಾರ ಸರ್ವಶಕ್ತಿಯುಕ್ತ ಸರ್ವೇಶ ವಿಶ್ವವ್ಯಾಪಿ ಸರ್ವಮಂಗಳ ಸ್ವರೂಪ ಪರಿಪೂರ್ಣನಾದ ಆ ಪರಮಾತ್ಮ ಕೈಯಲ್ಲಿ ಕೊಳಲು ಹಿಡಿದಿದ್ದಾನೆ. ರತ್ನಾಭರಣ ಭೂಷಿತನಾಗಿದ್ದಾನೆ. ಸ್ವತಂತ್ರನೂ ಸರ್ವಮಂಗಳ ಸ್ವರೂಪನೂ ಆಗಿದ್ದು ಸರ್ವಾಭೀಷ್ಟದಾಯಕನಾಗಿದ್ದಾನೆ. ಜನ್ಮ ಮರಣ ಮುಪ್ಪು ವ್ಯಾಧಿ ಶೋಕ ಭಯ ಪರಿಹಾರಕನಾಗಿದ್ದಾನೆ.

ಚತುರ್ಮುಖ ಬ್ರಹ್ಮನ ಜೀವಿತ ಕಾಲವನ್ನೂ ಕೂಡ ಪರಮಾತ್ಮನು ಒಮ್ಮೆ ರೆಪ್ಪೆ ಹೊಡೆಯುವ ಕಾಲವೆಂದು ಔಪಚಾರಿಕವಾಗಿ ಹೇಳುವುದುಂಟು. ಅಂಥ ಪರಮಾತ್ಮನ ಹೆಸರು ಕೃಷ್ಣ ಎಂದು.

> ಕೃಷಿಸ್ತದ್ಭಕ್ತಿ ವಚನೋ ನಶ್ಚ ತದ್ದಾಸ್ಯಕಾರಕಃ ।
> ಭಕ್ತಿದಾಸ್ಯ ಪ್ರದಾತಾ ಯಃ ಸ ಕೃಷ್ಣಃ ಪರಿಕೀರ್ತಿತಃ ॥
>
> ಕೃಷಿಶ್ಚ ಸರ್ವವಚನೋ ನಕಾರೋ ಬೀಜವಾಚಕಃ ।
> ಸರ್ವಬೀಜಂ ಪರಂಬ್ರಹ್ಮ ಕೃಷ್ಣ ಇತ್ಯಭಿಧೀಯತೇ ॥

'ಕೃಷ್ಣ' ಎಂಬಲ್ಲಿ 'ಕೃಷ್' ಎಂದರೆ ಪರಮಾತ್ಮನಲ್ಲಿ ಭಕ್ತಿ. 'ನ' ಎಂದರೆ ಪರಮಾತ್ಮನ ದಾಸ್ಯ. ಭಕ್ತಿ ದಾಸ್ಯಗಳನ್ನು ಕೊಡುವುದರಿಂದ ಕೃಷ್ಣನೆನಿಸುತ್ತಾನೆ. 'ಕೃಷ್' ಎಂದರೆ ಸರ್ವ. 'ನ' ಎಂದರೆ ಕಾರಣ. ಸರ್ವಕಾರಣನಾದ್ದರಿಂದ ಕೃಷ್ಣನೆನಿಸುತ್ತಾನೆ.

ಅಸಂಖ್ಯಾತ ಬ್ರಹ್ಮರ ಜೀವಿತಕಾಲ ಕಳೆದರೂ ಆ ಕೃಷ್ಣನ ಗುಣಗಳು ನಶಿಸಲಾರವು. ಗುಣದಲ್ಲಿ ಅವನಿಗೆ ಸಮಾನರು ಯಾರೂ ಇಲ್ಲ. ಸೃಷ್ಟಿಯ ಆದಿಯಲ್ಲಿ ಕೃಷ್ಣ

ಸ್ವೇಚ್ಛೆಯಿಂದ ಇಬ್ಭಾಗವಾದ. ಎಡಭಾಗ ಸ್ತ್ರೀಯಾಯಿತು. ಬಲಭಾಗ ಪುರುಷರೂಪವಾಯಿತು. ಆ ಪುರುಷ ಆಸ್ತ್ರೀಯನ್ನು ನೋಡಿದ. ಸ್ತ್ರೀಯೂ ಪುರುಷನ ಸೌಂದರ್ಯವನ್ನು ಕಣ್ಣಿಂದ ಕುಡಿವಳೊ ಎಂಬಂತೆ ಆಸೆಯಿಂದ ನೋಡಿದಳು. ಮೂರ್ತಿವೆತ್ತ ಶೃಂಗಾರದಂತಿದ್ದ ಆ ಪುರುಷ ಬ್ರಹ್ಮನ ಜೀವಿತ ಕಾಲದಷ್ಟು ಕಾಲ ಅವಳೊಂದಿಗೆ ಏಕಾಂತದಲ್ಲಿ ರಾಸಕ್ರೀಡೆಯಾಡಿದ. ಅವಳು ಗರ್ಭಧರಿಸಿದಳು. ಅವಳ ಮೈಬೆವರಿನ ನೀರೂ ನಿಃಶ್ವಾಸವಾಯುವೂ ಎಲ್ಲೆಡೆ ತುಂಬಿತು. ನಿಃಶ್ವಾಸ ವಾಯು ಎಲ್ಲ ಜೀವಿಗಳಿಗೂ ಜೀವನಾಧಾರವಾದ ಪ್ರಾಣವಾಯುವೆನಿಸಿತು. ವಾಯುದೇವನ ಎಡಭಾಗದಿಂದ ಅವನ ಮಡದಿ ಪ್ರಾದುರ್ಭವಿಸಿದಳು. ಈ ದಂಪತಿಗಳ ಮಕ್ಕಳೆ ಪ್ರಾಣ ಅಪಾನ ವ್ಯಾನ ಉದಾನ ಸಮಾನರೆಂಬ ಪಂಚಪ್ರಾಣರು. ಬೆವರ ನೀರಿನ ಅಧಿದೇವತೆ ವರುಣ. ಅವನ ಎಡಭಾಗದಿಂದ ಅವನ ಮಡದಿ ಪ್ರಾದುರ್ಭವಿಸಿದಳು.

ಕೃಷ್ಣನ ಶಕ್ತಿರೂಪಿಣಿಯಾದ ದೇವಿ ಕೃಷ್ಣನಿಂದ ಪಡೆದ ಬ್ರಹ್ಮಾಂಡವನ್ನು ಪ್ರಸವಿಸಿದಳು. ಒಡನೆ ಅದನ್ನು ನೀರಲ್ಲಿ ಬಿಟ್ಟಳು. ಕೃಷ್ಣ ಕೋಪದಿಂದ ಶಪಿಸಿದ, 'ಇನ್ನು ಮುಂದೆ ನಿನ್ನ ಹೊಟ್ಟೆಯಲ್ಲಿ ಮಕ್ಕಳಾಗದಿರಲಿ' ಎಂದು.

ದೇವಿ ನಾಲಗೆಯ ತುದಿಯಿಂದ ಸರಸ್ವತಿಗೆ ಜನ್ಮವಿತ್ತಳು. ಸರಸ್ವತಿ ಸ್ಫಟಿಕದಂತೆ ಹೊಳೆವ ಬಿಳಿ ಬಣ್ಣದವಳು. ಪೀತಾಂಬರ ಉಟ್ಟು ರತ್ನಾಭರಣ ಭೂಷಿತಳಾಗಿ ವೀಣಾಪುಸ್ತಕಧಾರಿಣಿಯಾಗೇ ಅವಳು ಆವಿರ್ಭವಿಸಿದ್ದಳು.

ಮುಂದೆ ದೇವಿ ತಾನೆ ಇಬ್ಭಾಗವಾದಳು. ಎಡಭಾಗವೆ ಲಕ್ಷ್ಮಿ. ಬಲಭಾಗ ರಾಧೆ. ಕೃಷ್ಣನೂ ಇಬ್ಭಾಗವಾದ. ಬಲಭಾಗದಿಂದ ದ್ವಿಭುಜನಾಗಿ ಕೃಷ್ಣನೆನಿಸಿದ. ಎಡಭಾಗದಿಂದ ಚತುರ್ಭುಜನಾಗಿ ವಿಷ್ಣು ಎನಿಸಿದ. ಕೃಷ್ಣ ಸರಸ್ವತಿಲಕ್ಷ್ಮಿಯರನ್ನು ನಾರಾಯಣನ ಪತ್ನಿಯರಾಗುವಂತೆ ಹೇಳಿ ರಾಧೆಯನ್ನು ತನ್ನ ಬಳಿ ಇರಿಸಿಕೊಂಡ. ನಾರಾಯಣ ಲಕ್ಷ್ಮಿ ಸರಸ್ವತಿಯರ ಜೊತೆಗೆ ವೈಕುಂಠಕ್ಕೆ ತೆರಳಿದ. ಆ ದೇವಿಯರಿಬ್ಬರೂ ರಾಧೆಯ ಅಂಶ ಸಂಭೂತರಾದ್ದರಿಂದ ಅವರ ಹೊಟ್ಟೆಯಲ್ಲಿ ಕೃಷ್ಣನ ಶಾಪದಂತೆ ಮಕ್ಕಳೇ ಆಗಲಿಲ್ಲ.

ಮುಂದೆ ನಾರಾಯಣನ ಅಂಗಗಳಿಂದ ತೇಜಸ್ಸು ವಯಸ್ಸು ರೂಪ ಗುಣಗಳಲ್ಲಿ ಅವನಂತೆ ಇರುವ ಚತುರ್ಭುಜರಾದ ಪಾರ್ಷದರು ಹುಟ್ಟಿದರು. ಲಕ್ಷ್ಮಿಯ ಅಂಗಗಳಿಂದಲೂ ಅವಳಂತೆಯೆ ಇರುವ ಕೋಟಿಗಟ್ಟಲೆ ದಾಸಿಯರು ಉದಿಸಿದರು.

ಹಾಗೆಯೆ ಗೋಲೋಕಾಧಿಪತಿ ಕೃಷ್ಣನ ರೋಮಕೂಪಗಳಿಂದ ವಯಸ್ಸು ತೇಜಸ್ಸುಗಳಲ್ಲಿ ರೂಪಗುಣ ವೇಷ ವಿಕ್ರಮಗಳಲ್ಲಿ ಅವನಂತೆಯೆ ಇದ್ದು ಅವನಿಗೆ ಪ್ರಾಣಪ್ರಿಯರಾದ ಅಸಂಖ್ಯ ಪಾರ್ಷದ ಗೋಪಾಲಕರು ಜನಿಸಿದರು. ರಾಧೆಯ ರೋಮಕೂಪಗಳಿಂದಲೂ ರಾಧೆಯಂತೆ ಕಾಣುವ ಸ್ಥಿರಯೌವನವತಿಯರಾದ

ರತ್ನಾಭರಣ ಭೂಷಿತರಾದ ಗೋಪಕನ್ನೆಯರು ಜನಿಸಿದರು. ಈ ಗೋಪಕನ್ನೆಯರೂ ಕೃಷ್ಣ ಶಾಪದಿಂದ ಮಕ್ಕಳಿಲ್ಲದವರೆ ಆದರು.

ಕೃಷ್ಣನ ಶರೀರದಿಂದ ವಿಷ್ಣುಮಾಯೆ ದೇವಿ ದುರ್ಗೆ ಆವಿರ್ಭವಿಸಿದಳು. ಅವಳೆ ಬುದ್ಧ್ಯಧಿಷ್ಠಾತೃದೇವತೆ. ಎಲ್ಲ ದೇವಿಯರಿಗೆ ಮೂಲರೂಪಳು. ಮೂಲಪ್ರಕೃತಿಗೆ, ಆದರೆ ತ್ರಿಗುಣಗಳಿಗೆ ಅಭಿಮಾನಿನಿ. ಪುಟಕ್ಕಿಟ್ಟ ಚಿನ್ನದಂತೆ ಹೊಳೆವವಳು. ಕೋಟಿ ಸೂರ್ಯರ ಕಾಂತಿ ಉಳ್ಳವಳು. ಸಾವಿರ ತೋಳಿನವಳು. ನಾನಾ ಶಸ್ತ್ರಾಸ್ತ್ರ ಧರಿಸಿದವಳು. ಮೂರು ಕಣ್ಣುಳ್ಳವಳು. ಮಂದಹಾಸಯುಕ್ತ ಪ್ರಸನ್ನ ಮುಖದವಳು. ಅವಳ ಅಂಶಾಂಶ ಕಲಾ ಸಂಭೂತೆಯರೆ ಪ್ರಪಂಚದ ಎಲ್ಲ ಸ್ತ್ರೀಯರು. ವಿಷ್ಣು ಮಾಯಾ ರೂಪಳಾದ್ದರಿಂದ ಲೋಕದ ಜನರೆಲ್ಲ ಅವಳಿಂದ ಮೋಹ ಹೊಂದುವರು.

ಐಶ್ವರ್ಯ ಬಯಸುವವರಿಗೆ ಐಶ್ವರ್ಯ, ವಿಷ್ಣುಭಕ್ತಿ ಬಯಸುವವರಿಗೆ ವಿಷ್ಣುಭಕ್ತಿ, ಮೋಕ್ಷ ಬಯಸುವವರಿಗೆ ಮೋಕ್ಷ, ಸುಖ ಬಯಸುವವರಿಗೆ ಸುಖ ದೇವಿ ದುರ್ಗೆಯಿಂದ ಲಭಿಸುವುದು.

ಸ್ವರ್ಗದಲ್ಲಿ ಸ್ವರ್ಗಲಕ್ಷ್ಮಿ ಅವಳೆ. ಗೃಹಗಳಲ್ಲಿ ಗೃಹಲಕ್ಷ್ಮಿ ಅವಳೆ. ತಪಸ್ವಿಗಳ ತಪಸ್ಸು, ರಾಜರ ಸಂಪತ್ತು, ಅಗ್ನಿಯ ದಾಹಶಕ್ತಿ, ಸೂರ್ಯನ ತಾಪಶಕ್ತಿ, ಚಂದ್ರನ ಶೋಭೆ, ಪದ್ಮಗಳ ಕಾಂತಿ, ಎಲ್ಲವೂ ಕೃಷ್ಣನ ಶಕ್ತಿರೂಪಳಾದ ದುರ್ಗೆಯೆ.

ಅವಳಿರುವುದರಿಂದ ಪರಮಾತ್ಮ ಶಕ್ತಿಯುತನೆನಿಸಿದ್ದಾನೆ. ಅವಳಿರುವುದರಿಂದಲೆ ಜಗತ್ತು ಶಕ್ತಿಯುತವೆನಿಸಿದೆ. ಅವಳಿಲ್ಲದಿದ್ದರೆ ಜಗತ್ತು ಜೀವನ್ಮೃತವೆಂಬಂತೆ ಇದ್ದೀತು.

ಆ ದೇವಿಯೆ ಜಗದ್ವೃಕ್ಷಕ್ಕೆ ಬೀಜ ರೂಪಳೂ ಸ್ಥಿತಿರೂಪಳೂ ಫಲರೂಪಳೂ ಆಗಿರುವಳು. ಪ್ರಪಂಚದ ಎಲ್ಲ ಜೀವಿಗಳಲ್ಲೂ ಇರುವ ಹಸಿವು ನೀರಡಿಕೆ ದಯೆ ಶ್ರದ್ಧೆ ನಿದ್ದೆ ತಂದ್ರಾ ಕ್ಷಮಾ ಧೃತಿ ಶಾಂತಿ ಲಜ್ಜಾ ತುಷ್ಟಿ ಪುಷ್ಟಿ ಭ್ರಾಂತಿ ಶಾಂತಿ ಮುಂತಾದು-ವೆಲ್ಲಕ್ಕೂ ದೇವಿ ಅಭಿಮಾನಿನಿ. ಅವಳು ಕೃಷ್ಣನನ್ನು ಸ್ತುತಿಸಿ ಅವನ ಮುಂದೆ ಕುಳಿತಳು.

ಈ ಸಮಯದಲ್ಲಿ ಪರಮಾತ್ಮನ ನಾಭಿಕಮಲದಿಂದ ಬ್ರಹ್ಮ ಸರಸ್ವತಿಯರು ಜನಿಸಿದರು. ಅವರಿಬ್ಬರೂ ಪರಮಾತ್ಮನನ್ನು ಸ್ತುತಿಸಿ ಅವನೆದುರಿಗೆ ಕುಳಿತರು. ಬಳಿಕ ಕೃಷ್ಣ ಇಬ್ಭಾಗವಾಗಿ ಎಡಭಾಗದಿಂದ ಮಹಾದೇವನೂ ಬಲಭಾಗದಿಂದ ಗೋಪೀ-ರಮಣನೂ ಆದ. ಶುದ್ಧಸ್ಫಟಿಕದಂತೆ ಹೊಳೆಯುತ್ತ ನೂರುಕೋಟಿ ಸೂರ್ಯನಂಥ ತೇಜಸ್ಸು. ಪಟ್ಟಿಶ ತ್ರಿಶೂಲಗಳಿಂದ ಶೋಭಿಸುವ ಬಾಹುಗಳು. ಹುಲಿಚರ್ಮ ಉಟ್ಟಿದ್ದಾನೆ. ಚಿನ್ನದಂತೆ ಹೊಳೆವ ಜಟೆ. ಭಸ್ಮಲಿಪ್ತನಾಗಿದ್ದಾನೆ. ಚಂದ್ರಶೇಖರ-ನಾಗಿದ್ದಾನೆ. ಸರ್ಪಭೂಷಣನಾದ ಪಂಚಮುಖನಾದ ಆತ ಪರಬ್ರಹ್ಮ ಶ್ರೀಕೃಷ್ಣನ ನಾಮ ಜಪಿಸುತ್ತಿದ್ದಾನೆ. ಕೃಷ್ಣ ಕಾರಣಗಳಿಗೂ ಕಾರಣ. ಮಂಗಲಗಳಿಗೆ ಮಂಗಲ.

**ಜನನ ಮರಣ ಜರೆ ವ್ಯಾಧಿ ಶೋಕ ಭಯಪರಿಹಾರಕ. ಮೃತ್ಯುವಿಗೆ ಮೃತ್ಯು. ಇಂಥ ಕೃಷ್ಣನ ನಾಮ ಜಪದ ಬಲದಿಂದ ಮಹಾದೇವ ಮೃತ್ಯುಂಜಯನೆನಿಸಿದ. ಕೃಷ್ಣನನ್ನು ಸ್ತುತಿಸಿ ಅವನ ಮುಂದೆ ಕುಳಿತ ಮೃತ್ಯುಂಜಯ.**

**ಇಲ್ಲಿಗೆ ಶ್ರೀ ಬ್ರಹ್ಮವೈವರ್ತಮಹಾಪುರಾಣದಲ್ಲಿ ಎರಡನೆಯದಾದ ಪ್ರಕೃತಿಖಂಡದಲ್ಲಿ ನಾರಾಯಣ ನಾರದ ಸಂವಾದದಲ್ಲಿ ದೇವದೇವಿ ಉತ್ಪತ್ತಿ ಎಂಬ ಎರಡನೆ ಅಧ್ಯಾಯ ಮುಗಿಯಿತು.**

## ವಿಶ್ವಬ್ರಹ್ಮಾಂಡ ವರ್ಣನೆ

**ಅಧ್ಯಾಯ-೩**

ನಾರಾಯಣ ಮಹರ್ಷಿ ಹೇಳಿದರು— ನಾರದ, ಕೇಳು. ರಾಧೆ ಪ್ರಸವಿಸಿದ ಬ್ರಹ್ಮಾಂಡ ಬ್ರಹ್ಮನ ಆಯಷ್ಯದಷ್ಟು ದೀರ್ಘಕಾಲ ನೀರಲ್ಲಿಯೆ ಇದ್ದಿತು. ಬಳಿಕ ಇಬ್ಭಾಗವಾಯಿತು. ನಡುವೆ ನೂರುಕೋಟಿ ಸೂರ್ಯನ ಪ್ರಭೆ ಉಳ್ಳ ಒಂದು ಶಿಶುಪ್ರಾದುರ್ಭವಿಸಿ ಹಸಿವಿಂದ ಅಳತೊಡಗಿತು. ಮಾತಾಪಿತೃಗಳಿಂದ ಪರಿತ್ಯಕ್ತವಾದ ತೇಜಸ್ಸಿನಲ್ಲಿ ಕೃಷ್ಣನ ಹದಿನಾರನೆ ಒಂದಂಶವೆನಿಸಿದ ಆ ಶಿಶುವೆ ದೇವಾಧಿಪತಿಯಾದ ಮಹಾವಿಷ್ಣು. ಪರಮಾಣು ಹೇಗೆ ಸೂಕ್ಷ್ಮಕ್ಕಿಂತ ಸೂಕ್ಷ್ಮವೋ ಹಾಗೆ ಈ ಮಹಾವಿಷ್ಣು ಸ್ಥೂಲಕ್ಕಿಂತ ಸ್ಥೂಲ. ಅವನ ರೋಮಕೂಪಗಳಲ್ಲಿ ಅಸಂಖ್ಯ ವಿಶ್ವಗಳೆ ಅಡಗಬಲ್ಲುವು. ಆದರಿಂದ ಅವನಿಗೆ 'ಮಹಾವಿರಾಟ್' ಎಂದೇ ಹೆಸರಾಯಿತು. ಪ್ರಪಂಚದಲ್ಲಿರುವ ಧೂಳಿನ ಕಣಗಳನ್ನು ಎಣಿಸಲು ಹೇಗೆ ಅಶಕ್ಯವೋ ಹಾಗೆ ಪ್ರತಿ ವಿಶ್ವದಲ್ಲಿರುವ ಬ್ರಹ್ಮವಿಷ್ಣು- ಶಿವರನ್ನೂ ಎಣಿಸಲಾಗದು.

ಪಾತಾಲದಿಂದ ಬ್ರಹ್ಮಲೋಕದವರೆಗೆ ಬ್ರಹ್ಮಾಂಡವಿದೆ. ಅದರ ಮೇಲೆ ವೈಕುಂಠ. ಅದರ ಮೇಲೆ ಗೋಲೋಕ. ಪೃಥ್ವಿಯಲ್ಲಿ ಸಪ್ತ ದ್ವೀಪಗಳಿವೆ. ಸಪ್ತಸಾಗರಗಳಿವೆ. ನಲವತ್ತೊಂಬತ್ತು ಉಪದ್ವೀಪಗಳೂ ಇವೆ. ಮೇಲಿನ ಲೋಕಗಳು ಏಳು, ಕೆಳಗಿನ ಲೋಕಗಳು ಏಳು ಹೀಗೆ ಹದಿನಾಲ್ಕು ಲೋಕಗಳು ಬ್ರಹ್ಮಾಂಡದಲ್ಲಿ ಇವೆ.

ಭೂರ್ಲೋಕ ಭುವರ್ಲೋಕ ಸ್ವರ್ಲೋಕ ಮಹರ್ಲೋಕ ಜನೋಲೋಕ ತಪೋಲೋಕ ಬ್ರಹ್ಮಲೋಕ -ಇವೇ ಊರ್ಧ್ವಲೋಕಗಳು ಬ್ರಹ್ಮಾಂಡ ನಾಶವಾದಾಗ ಇವೂ ನಾಶವಾಗುವುವು. ಗೋಲೋಕ ವೈಕುಂಠ ಲೋಕಗಳು ಮಾತ್ರ ನಿತ್ಯ ಸತ್ಯ.

ಇಂಥ ಪ್ರತಿಯೊಂದು ಬ್ರಹ್ಮಾಂಡದಲ್ಲಿಯೂ ಬ್ರಹ್ಮವಿಷ್ಣುಶಿವಾದಿ ಮೂರು ಕೋಟಿ ದೇವತೆಗಳು ಇರುವರು. ಅಷ್ಟದಿಕ್ಪಾಲಕರು ನವಗ್ರಹರು ನಕ್ಷತ್ರಗಳು ಬ್ರಾಹ್ಮಣಾದಿ ಚತುರ್ವರ್ಣದವರು ಅಧೋಲೋಕದ ನಾಗರು ಇರುವರು.

ಶಿಶುರೂಪದ ವಿರಾಟ್‌ಪುರುಷ ತಾನೊಬ್ಬನೆ ಇರುವುದನ್ನು ಕಂಡು ಹಸಿವಿಂದ ಮೇಲೆ ನೋಡಿ ಅತ್ತು ಶ್ರೀಕೃಷ್ಣನನ್ನು ಧ್ಯಾನಿಸಿದ. ಆಗ ಕೊಳಲು ಹಿಡಿದುನಿಂತ ದ್ವಿಭುಜ ಪಿತಾಂಬರಧಾರಿ ನೀಲಮೇಘಶ್ಯಾಮ ಶ್ರೀಕೃಷ್ಣಮೂರ್ತಿಯನ್ನು ಕಂಡು ಆನಂದದಿಂದ ನಕ್ಕ. ಕೃಷ್ಣ ಅವನಿಗೆ ವರವಿತ್ತ, 'ನನ್ನಂತೆ ಜ್ಞಾನಯುಕ್ತನಾಗಿ ಹಸಿವು ಬಾಯಾರಿಕೆ ಇಲ್ಲದವನಾಗಿ ಪ್ರಳಯಕಾಲದವರೆಗೂ ಅಸಂಖ್ಯ ಬ್ರಹ್ಮಾಂಡಾಧಾರ-ನಾಗಿರು. ಕಾಮ ಭಯ ರೋಗ ಮೃತ್ಯು ಜರಾ ಶೋಕಾದಿ ಪೀಡಾರಹಿತನಾಗಿದ್ದು ನಿರ್ಭಯನಾಗಿದ್ದು ಎಲ್ಲರಿಗೂ ವರದಾಯಕನಾಗಿರು.' ಹೀಗೆ ವರನೀಡಿ ಬಲಗಿವಿ-ಯಲ್ಲಿ ಒಂದು ಷಡಕ್ಷರ ಮಂತ್ರವನ್ನು ಮೂರು ಬಾರಿ ಉಪದೇಶಿಸಿದ. ಆ ಮಂತ್ರದ ಆದಿಯಲ್ಲಿ ಪ್ರಣವವಿದೆ. ನಡುವೆ ಚತುರ್ಥ್ಯಂತವಾದ ಕೃಷ್ಣಶಬ್ದವಿದೆ. ಕೊನೆಯಲ್ಲಿ ಸ್ವಾಹಾಕಾರವಿದೆ. ಈ ಮಂತ್ರವನ್ನು ಉಪದೇಶಿಸಿ ಆಹಾರವನ್ನೂ ಕ್ಲುಪ್ತಗೊಳಿಸಿದ, ಕೃಷ್ಣ- 'ಪ್ರತಿವಿಶ್ವದಲ್ಲಿಯೂ ವಿಷ್ಣುಭಕ್ತರು ನೀಡುವ ನೈವೇದ್ಯ ನಿನ್ನದಾಗಲಿ' ಎಂದು. ನೈವೇದ್ಯದಿಂದ ವಿಷ್ಣುವಿಗೆ ಏನೂ ಪ್ರಯೋಜನವಿಲ್ಲ. ಆದರೂ ಜನರು ಯಾವ ದೇವತೆಗೆ ನೈವೇದ್ಯ ಸಮರ್ಪಿಸಿದರೂ ಅದನ್ನು ವಿಷ್ಣುವೆ ಉಣ್ಣುವನು.

ಮಂತ್ರೋಪದೇಶ ಮಾಡಿದ ಬಳಿಕ ನಿನಗಿನ್ನೇನು ವರ ಬೇಕು ಕೇಳು ಎಂದ ಕೃಷ್ಣ. ಶಿಶುವಾದ ಮಹಾವಿಷ್ಣು ಹೇಳಿದ. ನನಗೆ ನಿನ್ನ ಪಾದಕಮಲದಲ್ಲಿ ಸದಾ ಸ್ಥಿರವಾದ ಭಕ್ತಿ ಇರಲಿ. ನಿನ್ನಲ್ಲಿ ಭಕ್ತಿ ಉಳ್ಳವ ಲೋಕದಲ್ಲಿ ಜೀವನ್ಮುಕ್ತನೆನಿಸುತ್ತಾನೆ. ನಿನ್ನಲ್ಲಿ ಭಕ್ತಿ ಇಲ್ಲದವ ಮೂರ್ಖ. ಜೀವನ್ಮೃತ. ಅವನು ಮಾಡುವ ಜಪ ಯಜ್ಞ ಯಾಗ ವ್ರತ ಉಪವಾಸ ಪುಣ್ಯತೀರ್ಥಸ್ನಾನ. ಎಲ್ಲವೂ ವ್ಯರ್ಥ. ಅವನ ಜೀವನವೆ ವ್ಯರ್ಥ. ಯಾರಿಂದ ಜೀವಿಸುತ್ತಿದ್ದಾನೆ. ಅವನನ್ನೆ ಮರೆಯುವುದುಂಟೆ ? ಶರೀರದಲ್ಲಿ ಆತ್ಮನಿರುವಷ್ಟು ಕಾಲ ಶಕ್ತಿ ಇರುತ್ತದೆ. ಅವನು ಹೋದರೆ ಶಕ್ತಿ ಹೋಗುತ್ತಿದೆ. ಹೀಗೆ ಶಕ್ತಿ ಅಸ್ವತಂತ್ರ. ನೀನು ಎಲ್ಲ ಆತ್ಮರಿಗೆ ಆತ್ಮದಂತಿರುವವ. ಅದರಿಂದ ಎಲ್ಲರ ಶಕ್ತಿ ನಿನ್ನ ಅಧೀನ. ನೀನು ಪ್ರಕೃತಿಯಿಂದ ಆಚೆ ಇರುವವ.'

ಹೀಗೆ ಹೇಳಿ ಬಾಲಕ ಸುಮ್ಮನಾದ. ಶ್ರೀಕೃಷ್ಣ ಹೇಳಿದ- ನೀನು ನನ್ನಂತೆಯೆ ಚಿರಕಾಲವಿರು. ಅಸಂಖ್ಯ ಬ್ರಹ್ಮರು ಲಯ ಹೊಂದಿದರೂ ನಿನಗೆ ಲಯವಿಲ್ಲದಿರಲಿ. ಪ್ರತಿ ಬ್ರಹ್ಮಾಂಡದಲ್ಲಿಯೂ ನೀನು ವಿರಾಟ್‌ಪುರುಷನಾಗು. ನಿನ್ನ ನಾಭಿಕಮಲದಲ್ಲಿ ಸೃಷ್ಟಿಕರ್ತನಾದ ಬ್ರಹ್ಮ ಪ್ರಾದುರ್ಭವಿಸುವನು. ಬ್ರಹ್ಮನ ಹಣೆಯಿಂದ ಶಿವಾಂಶರಾದ ಏಕಾದಶ ರುದ್ರರು ಜನಿಸುವರು. ಅವರಲ್ಲಿ ಒಬ್ಬನಾದ ಕಾಲಾಗ್ನಿ ರುದ್ರ ಲಯಕಾರಕ-ನಾಗುತ್ತಾನೆ. ನಿನ್ನ ಅಂಶದಿಂದ ಪಾಲಕನಾದ ವಿಷ್ಣುವೂ ಉದಿಸುತ್ತಾನೆ. ನೀನು ನನ್ನಲ್ಲಿ ನೋಡುವಿ. ನನ್ನ ವಕ್ಷಃಸ್ಥಳದಲ್ಲಿ ವಾಸಮಾಡುವ ನಿನ್ನ ಮಾತೆಯನ್ನೂ ನೋಡುವಿ. ನಾನಿನ್ನು ನನ್ನ ಲೋಕಕ್ಕೆ ಹೋಗುವೆನು' ಎನ್ನುತ್ತ ಕೃಷ್ಣ ಅಂತರ್ಧಾನ ಹೊಂದಿದ.

ಬಳಿಕ ಕೃಷ್ಣ ಸ್ವರ್ಗಕ್ಕೆ ಹೋಗಿ ಬ್ರಹ್ಮರುದ್ರರಿಗೆ ಹೀಗೆ ಹೇಳಿದ- "ಬ್ರಹ್ಮ, ಲೋಕಸೃಷ್ಟಿ ಮಾಡುವುದಕ್ಕಾಗಿ ಮಹಾವಿಷ್ಣುವಿನ ನಾಭಿಕಮಲದಲ್ಲಿ ಜನಿಸು. ರುದ್ರ, ನೀನೂ ಒಂದು ಅಂಶದಿಂದ ಆ ಬ್ರಹ್ಮನ ಹಣೆಯಿಂದ ಉದಿಸು. ಇನ್ನೊಂದು ಅಂಶದಿಂದ ಚಿರಕಾಲ ತಪಸ್ಸು ಮಾಡು." ಹೀಗೆ ಹೇಳಿ ಕೃಷ್ಣ ಸುಮ್ಮನಾದ.

ಇತ್ತ ಮಹಾವಿರಾಟ್ ಪುರುಷನಿಂದ ಅವನ ಅಂಶಭೂತನಾದ ಇನ್ನೊಬ್ಬ ಕ್ಷುದ್ರ ವಿರಾಟ್ ಪುರುಷ ಜನಿಸಿದ. ಅವನು ಶ್ಯಾಮವರ್ಣದ ತರುಣ, ಪೀತಾಂಬರ ಉಟ್ಟು ಜಲತಲ್ಪದಲ್ಲಿ ನಗುಮೊಗದಿಂದ ಮಲಗಿದ ಆ ಜನಾರ್ದನನ ನಾಭಿಕಮಲದಲ್ಲಿ ಬ್ರಹ್ಮನಾಗಿ ಜನಿಸಿ ಕಮಲದ ನಾಳದಲ್ಲಿ ಲಕ್ಷಯುಗಗಳ ಕಾಲ ಸಂಚರಿಸಿದ. ನಾಳದ ಕೊನೆಯರಿಯಲಾರದೆ ಹಿಂತಿರುಗಿ ಬಂದು ಕೃಷ್ಣನನ್ನು ಧ್ಯಾನಿಸಿದ ಕ್ಷುದ್ರವಿರಾಟ್ ಪುರುಷನನ್ನೂ ಧ್ಯಾನಿಸಿ ದಿವ್ಯ ದೃಷ್ಟಿಯಿಂದ ಅವನನ್ನು ಕಂಡು ವರ ಪಡೆದು ಸೃಷ್ಟಿಗೆ ತೊಡಗಿದ.

ಬ್ರಹ್ಮನಿಂದ ಮೊದಲಿಗೆ ಸನಕಾದಿ ಮಾನಸ ಪುತ್ರರು ಜನಿಸಿದರು. ಹಣೆಯಿಂದ ಶಿವಾಂಶಭೂತರಾದ ಏಕಾದಶ ರುದ್ರರು ಜನಿಸಿದರು. ಕ್ಷುದ್ರವಿರಾಟ್‌ಪುರುಷನ ವಾಮಭಾಗದಿಂದ ಪಾಲಕನಾದ ಚತುರ್ಭುಜ ವಿಷ್ಣು ಪ್ರಾದುರ್ಭವಿಸಿದ. ಅವನು ಶ್ವೇತದ್ವೀಪದಲ್ಲಿ ನೆಲೆಸಿದ. ಬ್ರಹ್ಮನು ಮುಂದೆ ನಾಭಿಕಮಲದಲ್ಲಿದ್ದು ಸ್ವರ್ಗ ಮರ್ತ್ಯ ಪಾತಾಳಗಳೆಂಬ ಮೂರು ಲೋಕಗಳನ್ನೂ ಚರಾಚರ ವಸ್ತುಗಳನ್ನೂ ಸೃಷ್ಟಿಸಿದ. ಈ ಎಲ್ಲ ಸೃಷ್ಟಿ ವಿರಾಟ್ ಪುರುಷನ ರೋಮಕೂಪಗಳಲ್ಲಿ ಅಡಗಿದೆ.

ವತ್ಸ ನಾರದ, ಮೋಕ್ಷದಾಯಕವಾದ ಕೃಷ್ಣನ ಮಹಿಮೆಯನ್ನು ಹೀಗೆ ಹೇಳಿದ್ದೇನೆ. ಇನ್ನೇನು ಕೇಳಬಯಸುವೆ ?

ಇಲ್ಲಿಗೆ ಶ್ರೀ ಬ್ರಹ್ಮವೈವರ್ತ ಮಹಾಪುರಾಣದ ಪ್ರಕೃತಿಖಂಡದಲ್ಲಿ ನಾರದ ನಾರಾಯಣ ಸಂವಾದದಲ್ಲಿ ವಿಶ್ವಬ್ರಹ್ಮಾಂಡ ವರ್ಣನವೆಂಬ ಮೂರನೆ ಅಧ್ಯಾಯ ಮುಗಿಯಿತು.

## ಸರಸ್ವತೀ ಕವಚ

**ಅಧ್ಯಾಯ-೪**

ನಾರದ ಹೇಳಿದ— 'ಪ್ರಭು, ಅಮೃತದಂತಿರುವ ವಿಶ್ವಬ್ರಹ್ಮಾಂಡ ವರ್ಣನೆಯನ್ನು ಕೇಳಿದೆವು. ಈಗ ಪ್ರಕೃತಿಯ ಚರಿತ್ರೆಯನ್ನು ವಿಸ್ತಾರವಾಗಿ ಹೇಳು, ಯಾರು ಯಾವ ದೇವಿಯನ್ನು ಪೂಜಿಸಿದರು ? ಅದು ಮರ್ತ್ಯಲೋಕದಲ್ಲಿ ಹೇಗೆ ಪ್ರಸಿದ್ಧಿ ಪಡೆಯಿತು ? ಕವಚ ಸ್ತೋತ್ರ ಧ್ಯಾನ ಪ್ರಭಾವ ಚರಿತ್ರೆಗಳನ್ನೂ ಯಾವ ದೇವಿಯರು ಯಾರಿಗೆ ವರವಿತ್ತರೆಂಬುದನ್ನೂ ವಿವರಿಸಿ ಹೇಳು.

ನಾರಾಯಣ ಮಹರ್ಷಿ ಹೇಳಿದ— 'ಸೃಷ್ಟಿಗೆ ಪ್ರಾರಂಭದಲ್ಲಿ ಪ್ರಕೃತಿ' ಗಣೇಶ ಜನನಿ ಪಾರ್ವತಿ, ರಾಧೆ, ಲಕ್ಷ್ಮಿ, ಸರಸ್ವತಿ, ಸಾವಿತ್ರಿ ಎಂದು ಐದು ರೂಪ ಧರಿಸಿದಳು. ಪೂಜ್ಯಳಾದಳು. ಅವಳ ಚರಿತ್ರೆ ಅಮೃತದಂತಿದೆ. ಸರ್ವಮಂಗಲದಾಯಕವಾಗಿದೆ. ಪ್ರಕೃತಿಯ ಅಂಶಗಳಿಂದ ಕಲೆಗಳಿಂದ ಉದಿಸಿದ ದೇವಿಯರ ಚರಿತ್ರೆಯನ್ನೂ ಹೇಳುತ್ತೇನೆ, ಮನಸ್ಸಿಟ್ಟು ಕೇಳು.

ವಾಣಿ ವಸುಂಧರೆ ಗಂಗೆ ಷಷ್ಠೀ ಮಂಗಲಚಂಡಿಕೆ, ತುಲಸಿ, ಮಾನಸಿ, ನಿದ್ರೆ ಸ್ವಧೆ ಸ್ವಾಹೆ ದಕ್ಷಿಣೆ -ಇವರೆಲ್ಲರೂ ತೇಜಸ್ಸು ರೂಪ ಗುಣಗಳಲ್ಲಿ ನನಗೆ ಸಮಾನರು. ಅವರ ಸಂಕ್ಷಿಪ್ತ ಚರಿತ್ರೆ ಶ್ರವಣಮನೋಹರ ಪುಣ್ಯಕರ. ಜೀವರ ಕರ್ಮ ಪರಿಪಾಕ ಹೊಂದಲು ಕಾರಣ. ದುರ್ಗೆ ಮತ್ತು ರಾಧೆಯರ ವಿಸ್ತಾರವಾದ ಚರಿತ್ರೆಯನ್ನೂ ಅನಂತರ ಹೇಳುತ್ತೇನೆ.

ಮೊದಲಿಗೆ ಸರಸ್ವತೀ ಪೂಜೆಯನ್ನು ಶ್ರೀಕೃಷ್ಣ ವಿಧಿಸಿದ. ಅವಳ ಅನುಗ್ರಹದಿಂದ ಮೂರ್ಖನೂ ಪಂಡಿತನಾಗುತ್ತಾನೆ. ಅವಳು ರಾಧೆಯ ಮುಖದಿಂದ ಉದಿಸಿದೊಡನೆ ಕೃಷ್ಣನನ್ನು ಕಾಮಿಸಿದಳು. ಅದನ್ನು ತಿಳಿದು ಸರ್ವಜ್ಞ ಪರಮಾತ್ಮ ಅವಳಿಗೆ ಹೇಳಿದ- ನೀನು ನನ್ನ ಅಂಶ ಸಂಭೂತನಾದ ಚತುರ್ಭುಜ ನಾರಾಯಣನನ್ನು ಸೇರು. ಅವನು ಸುಂದರ ಯೌವನಶಾಲಿ ಸರ್ವಗುಣ ಸಂಪನ್ನ. ನನಗೆ ಸರಿಸಮಾನ. ಕೋಟಿ ಕಂದರ್ಪ ಲಾವಣ್ಯ ಉಳ್ಳವ. ನೀನು ನನ್ನನ್ನು ಸೇರಿದರೆ ನಿನಗಿಂತ ಬಲಿಷ್ಠಳಾದ ರಾಧೆಯಿಂದ ನಿನಗೆ ಕ್ಷೇಮವಿಲ್ಲ. ನಾನೂ ರಾಧೆಯನ್ನು ತಡೆಯಲಾರೆ. ಅವಳು ನನ್ನ ಪ್ರಾಣೇಶ್ವರಿ. ಅವಳನ್ನು ಬಿಡಲಾರೆ. ಪ್ರಾಣವನ್ನು ಯಾರಾದರೂ ಬಿಡುವರೇನು ? ಪ್ರಾಣಕ್ಕಿಂತ ಪ್ರಿಯ ಇನ್ನಾವುದು ? ಆದ್ದರಿಂದ ನೀನು ವೈಕುಂಠಕ್ಕೆ ಹೋಗು. ನಿನಗೆ ಒಳ್ಳೆಯ-ದಾಗುವುದು. ನಾರಾಯಣನನ್ನು ವರಿಸಿ ಸದಾ ಸುಖವಾಗಿರು. ತೇಜಸ್ಸು ರೂಪ-ಗುಣಗಳಲ್ಲಿ ಲಕ್ಷ್ಮಿ ನಿನಗೆ ಸಮಾನಳು. ನೀನು ಅವಳೊಂದಿಗೆ ಪ್ರೀತಿಯಿಂದ ಸುಖವಾಗಿ ಕಾಲಕಳೆಯಬಹುದು. ಪತಿಯೂ ಅವಳಷ್ಟೇ ಆದರ ನಿನಗೂ ಮಾಡುವನು. ಪ್ರತಿವಿಶ್ವದಲ್ಲಿಯೂ ನಿನಗೆ ಮಾಘಶುದ್ಧ ಪಂಚಮೀ ದಿನದಲ್ಲಿಯೂ

ವಿದ್ಯಾರಂಭಗಳಲ್ಲಿಯೂ ಮಾನವರು ಮನುಗಳು ದೇವತೆಗಳು ಋಷಿಗಳು ಸಿದ್ಧರು ನಾಗರು ಗಂಧರ್ವರು ಕಿಂನರರು ಮುಂತಾದವರೆಲ್ಲರೂ ಭಕ್ತಿಯಿಂದ ನಿನ್ನ ಪೂಜೆ ಮಾಡುವರು. ನಿನಗೆ ಷೋಡಶೋಪಚಾರಗಳನ್ನು ಕಾಣ್ವಶಾಖೋಕ್ತ ವಿಧಿಯಿಂದ ನೀಡುವರು. ಧ್ಯಾನ ಸ್ತೋತ್ರಗಳನ್ನರ್ಪಿಸುವರು. ಪುಸ್ತಕ ಕಲಶಗಳಲ್ಲಿ ನಿನ್ನನ್ನು ಆವಾಹಿಸಿ ಪೂಜಿಸುವರು. ನಿನ್ನ ಕವಚವನ್ನು ಚಂದನಲಿಪ್ತವಾದ ಚಿನ್ನದ ತಾಯಿತ-ದಲ್ಲಿಟ್ಟು ಕಂಠದಲ್ಲಿ ಅಥವಾ ಬಲತೋಳಲ್ಲಿ ಕಟ್ಟಿಕೊಳ್ಳುವರು. ಪೂಜಾಕಾಲದಲ್ಲಿ ಕವಚವನ್ನು ವಿದ್ವಾಂಸರು ಪಠಿಸುವರು.' ಹೀಗೆ ಹೇಳಿ ಸರ್ವಪೂಜಿತನಾದ ಕೃಷ್ಣ ಅವಳನ್ನು ಪೂಜಿಸಿದ. ಬ್ರಹ್ಮವಿಷ್ಣುಮಹೇಶ್ವರರೂ ಪೂಜಿಸಿದರು. ಅನಂತರ ಧರ್ಮರೂ ಸನಕಾದಿ ಮುನಿಗಳೂ ಎಲ್ಲ ದೇವತೆಗಳೂ ಮನುಗಳೂ ಚಕ್ರವರ್ತಿಗಳೂ ಮಾನವಾದಿಗಳೂ ಪೂಜಿಸಿದರು.

ನಾರದ— ಪ್ರಭು, ಸರಸ್ವತಿಯ ಪೂಜಾವಿಧಾನ ಸ್ತೋತ್ರ ಧ್ಯಾನ ಕವಚ ಪೂಜೋಪಯುಕ್ತ ನೈವೇದ್ಯ ಪುಷ್ಪ ಚಂದನಾದಿಗಳ ಬಗ್ಗೆ ಹೇಳು. ಶ್ರವಣ ಮನೋಹರವಾಗಿದೆ, ಕುತೂಹಲ ಉಂಟುಮಾಡುತ್ತಿದೆ.

ನಾರಾಯಣ— ನಾರದ, ಕಾಣ್ವ ಶಾಖೋಕ್ತರೀತಿಯಿಂದ ಜಗನ್ಮಾತೆ ಸರಸ್ವತಿ-ಯನ್ನು ಪೂಜಿಸುವ ವಿಧಾನವನ್ನು ಹೇಳುತ್ತೇನೆ ಕೇಳು. ಮಾಘಶುದ್ಧ ಪಂಚಮಿ ಅಥವಾ ವಿದ್ಯಾರಂಭದಿವಸ ಪೂರ್ವಾಹ್ಣದಲ್ಲಿ ಸ್ನಾನ ನಿತ್ಯಕರ್ಮಗಳನ್ನು ಮುಗಿಸಿ ಕಲಶಸ್ಥಾಪನ ಮಾಡಿ ಗಣೇಶ ಸೂರ್ಯ ಅಗ್ನಿ ವಿಷ್ಣು ಶಿವ ಪಾರ್ವತಿಯರನ್ನು ನೈವೇದ್ಯಾದಿಗಳಿಂದ ಪೂಜಿಸಿ ಸರಸ್ವತೀಪೂಜೆಯನ್ನಾರಂಭಿಸಬೇಕು. ದೇವಿಯನ್ನು ಕಲಶದಲ್ಲಿ ಆವಾಹಿಸಿ ಧ್ಯಾನಾದಿ ಷೋಡಶೋಪಚಾರ ಸಲ್ಲಿಸಬೇಕು. ಹಾಲು ಮೊಸರು ಬೆಣ್ಣೆ ಅರಳು ಎಳ್ಳುಂಡೆ ಕಬ್ಬು ಹಾಲು ಬೆಲ್ಲ ಜೇನು ಸಕ್ಕರೆ ಅವಲಕ್ಕಿ ಕಡುಬು ತುಪ್ಪ ಉಪ್ಪು ವ್ಯಂಜನ ಪದಾರ್ಥಗಳು, ಯವ ಗೋಧಿ ಹಿಟ್ಟು ತುಪ್ಪಗಳಿಂದ ಮಾಡಿದ ಭಕ್ಷ್ಯಗಳು, ಬಾಳೆಹಣ್ಣು ತುಪ್ಪ ಬೆರೆಸಿದ ಪಾಯಸ, ಮಿಷ್ಟಾನ್ನಗಳು, ತೆಂಗಿನಕಾಯಿ, ಎಳನೀರು, ಕೇಸರಿ, ಹಸಿಶುಂಠಿ, ಬೇಲದ ಹಣ್ಣು, ಬೋರೆಹಣ್ಣು, ಆಯಾ ದೇಶ ಕಾಲಗಳಲ್ಲಿ ಸಿಗುವ ಬಿಳಿಯಾದ ಹಣ್ಣುಗಳು, ಸುವಾಸನೆ ಇರುವ ಬಿಳಿ ಹೂಗಳು ಬಿಳಿಯಾದ ಶ್ರೀಗಂಧ, ಹೊಸ ಬಿಳಿ ಬಟ್ಟೆ, ಶಂಖ, ಬಿಳಿ ಹೂಮಾಲೆ ಮುತ್ತುವಜ್ರಗಳ ಆಭರಣಗಳು ಇವುಗಳನ್ನು ದೇವಿಗೆ ಸಮರ್ಪಿಸಬೇಕು. ಆ ದೇವಿಯ ಧ್ಯೇಯ ಮೂರ್ತಿ ಹೀಗಿದೆ-

'ಬಿಳಿ ಬಣ್ಣದವಳು, ನಗುಮೊಗದವಳು, ಮನೋಹರ ರೂಪಿನವಳು, ರತ್ನಾಭರಣ ಭೂಷಿತಳು, ಕೋಟಿಚಂದ್ರರ ಕಾಂತಿಯಿಂದ ಬೆಳಗುವವಳು. ಬ್ರಹ್ಮ-ವಿಷ್ಣುಶಿವಾದಿ ಪೂಜಿತಳು. ಮುನಿಗಳು ಮನುಗಳು ಮತ್ತು ಮಾನವರುಗಳಿಗೆ ವಂದ್ಯಳು

'ಹೀಗೆ ಧ್ಯಾನಿಸಿ ಮೂಲಮಂತ್ರದಿಂದ ಷೋಡಶೋಪಚಾರಗಳನ್ನು ಸಲ್ಲಿಸಿ ಸ್ತೋತ್ರ ಮಾಡಿ ಕವಚವನ್ನು ಧರಿಸಿ ದಂಡ ಪ್ರಣಾಮ ಮಾಡಬೇಕು. ಇದರಿಂದ ನಿತ್ಯಮಂಗಳ ಮೂಲಮಂತ್ರದಲ್ಲಿ ಮೊದಲಿಗೆ ಶ್ರೀಂ ಹ್ರೀಂ ಎಂಬ ಪದಗಳೂ ಬಳಿಕ ಚತುರ್ಥ್ಯಂತ ಸರಸ್ವತೀ ಪದವೂ ಕೊನೆಯಲ್ಲಿ ಸ್ವಾಹಾಕಾರವೂ ಇದ್ದು ಅಷ್ಟಾಕ್ಷರ ಮಂತ್ರವಾಗಿದೆ. ಕಲ್ಪವೃಕ್ಷದಂತೆ ಬೇಡಿದ ಇಷ್ಟಾರ್ಥ ಕೊಡುವುದು.

ಹಿಂದೆ ನಾರಾಯಣ ವಾಲ್ಮೀಕಿ ಮುನಿಗೆ ಗಂಗಾ ತೀರದಲ್ಲಿ ಈ ಮಂತ್ರವನ್ನೆ ಉಪದೇಶಿಸಿದ್ದ. ಪುಷ್ಕರಕ್ಷೇತ್ರದಲ್ಲಿ ಸೂರ್ಯಗ್ರಹಣ ದಿನದಲ್ಲಿ ಭೃಗುಮುನಿ ಶುಕ್ರಾಚಾರ್ಯನಿಗೂ ಚಂದ್ರಗ್ರಹಣ ದಿನದಲ್ಲಿ ಕಶ್ಯಪನು ಬೃಹಸ್ಪತಿಗೂ ಈ ಮಂತ್ರ ಉಪದೇಶಿಸಿದ್ದ. ಬದರಿಕಾಶ್ರಮದಲ್ಲಿ ಬ್ರಹ್ಮ ಭೃಗುಮುನಿಗೂ, ಕ್ಷೀರಸಮುದ್ರ ತೀರ-ದಲ್ಲಿ ಜರತ್ಕಾರು ಆಸ್ತೀಕ ಮುನಿಗೂ, ಮೇರು ಪರ್ವತದಲ್ಲಿ ವಿಭಾಂಡಕನು ಋಷ್ಯಶೃಂಗನಿಗೂ, ಶಿವ ಕಣಾದ ಗೌತಮರಿಗೂ, ಸೂರ್ಯ ಯಾಜ್ಞವಲ್ಕ್ಯ ಕಾತ್ಯಾಯನರಿಗೂ ಸುತಲ ಲೋಕದಲ್ಲಿ ಬಲಿಚಕ್ರವರ್ತಿಯ ಆಸ್ಥಾನದಲ್ಲಿ ಶೇಷದೇವ ಪಾಣಿನಿಗೂ ಭರದ್ವಾಜನಿಗೂ ಶಾಕಟಾಯನನಿಗೂ ಈ ಮಂತ್ರ ಉಪದೇಶಿಸಿದರು. ನಾಲ್ಕು ಲಕ್ಷ ಜಪಮಾಡಿದರೆ ಮಾನವರಿಗೆ ಈ ಮಂತ್ರಸಿದ್ಧಿಯಾಗುವುದು. ಮಂತ್ರ-ಸಿದ್ಧಿಯಾದರೆ ಬೃಹಸ್ಪತಿಗೆ ಸಮನಾಗುವರು.

ಇನ್ನು ಮುಂದೆ ಬ್ರಹ್ಮನು ಗಂಧಮಾದನದಲ್ಲಿ ಭೃಗುಮುನಿಗೆ ಉಪದೇಶಿಸಿದ ಸರ್ವಜಯಪ್ರದವಾದ ಸರಸ್ವತೀಕವಚವನ್ನು ಹೇಳುತ್ತೇನೆ ಕೇಳು. ಭೃಗುಮುನಿ ಬ್ರಹ್ಮ-ನಲ್ಲಿ ಪ್ರಾರ್ಥಿಸಿದ- 'ಸರ್ವಜ್ಞ, ಸರ್ವಜನಕನಾದ ಬ್ರಹ್ಮದೇವ, ಸರ್ವಜಯಪ್ರದವಾದ ಸರಸ್ವತೀ ಕವಚ ಮಂತ್ರವನ್ನು ನನಗೆ ಉಪದೇಶಿಸು. ಅದರೊಳಗೆ ಯಾತಯಾಮ-ವಾಗಿರದ ವೀರ್ಯವತ್ತಾದ ಮಂತ್ರ ಸಮೂಹವೆ ತುಂಬಿದೆ.' ಬ್ರಹ್ಮದೇವ ಹೇಳಿದ, 'ವತ್ಸ, ವೇದೋಕ್ತವೂ ವೇದ ಸಾರವೂ ಆದ ಕವಚಮಂತ್ರವನ್ನು ಹೇಳುತ್ತೇನೆ. ಅದನ್ನು ಶ್ರೀಕೃಷ್ಣ ಗೋಲೋಕದಲ್ಲಿ ವೃಂದಾವನದ ರಾಸಮಂಡಲದಲ್ಲಿ ನನಗೆ ಉಪದೇಶಿಸಿದ. ಅತ್ಯಂತ ಗೋಪ್ಯ ಕಲ್ಪವೃಕ್ಷದಂತಿದೆ. ಅಶ್ರುತ ಅದ್ಭುತ ಅದ್ಭುತ ಮಂತ್ರಗಳ ಸಮೂಹವೆ ಅದರಲ್ಲಿ ತುಂಬಿದೆ. ಅದನ್ನು ಜಪಿಸಿ ಬೃಹಸ್ಪತಿ ಬುದ್ಧಿವಂತ-ನಾದ, ಶುಕ್ರ ದೈತ್ಯರಿಗೆ ಗುರುವಾದ, ವಾಲ್ಮೀಕಿ ಕವೀಶ್ವರನಾದ. ಸ್ವಾಯಂಭುವ ಮನು ಸರ್ವಪೂಜ್ಯನಾದ. ಕಣಾದ ಗೌತಮ ಕಣ್ವ ಪಾಣಿನಿ ಶಾಕಟಾಯನ ದಕ್ಷ ಕಾತ್ಯಾಯನ ಇವರೆಲ್ಲ ಗ್ರಂಥಕಾರರಾದರು. ಕೃಷ್ಣದ್ವೈಪಾಯನನೂ ವೇದವಿಭಾಗ ಮಾಡಿ ಎಲ್ಲ ಪುರಾಣಗಳನ್ನೂ ರಚಿಸಿದ. ಶಾತಾತಪ ಸಂವರ್ತ ವಸಿಷ್ಠ ಪರಾಶರ ಯಾಜ್ಞವಲ್ಕ್ಯ ಇವರೂ ಗ್ರಂಥಕಾರರಾದರು. ಋಷ್ಯಶೃಂಗ ಭರದ್ವಾಜ ಆಸ್ತಿಕ ದೇವಲ ಜೈಗೀಷವ್ಯ ಜಾಬಾಲಿ ಇವರೆಲ್ಲ ಸರ್ವಪೂಜ್ಯರಾದರು.

ಈ ಕವಚ ಮಂತ್ರಕ್ಕೆ ಪ್ರಜಾಪತಿ ಋಷಿ. ಬೃಹತಿ ಛಂದಸ್ಸು ರಾಸೇಶ್ವರ ಕೃಷ್ಣದೇವ ದೇವತೆ. ಸರ್ವಜ್ಞತ್ವ. ಸರ್ವಾರ್ಥಸಿದ್ಧಿ, ಕವಿತ್ವ ಶಕ್ತಿಗಳಿಗಾಗಿ ಈ ಮಂತ್ರ ಜಪ ವಿಹಿತವಾಗಿದೆ-

'ಓಂ ಹ್ರೀಂ ಸರಸ್ವತ್ಯೈ ಸ್ವಾಹಾ' ಎಂಬ ಮಂತ್ರ ನನ್ನ ಶಿರಸ್ಸನ್ನು ರಕ್ಷಿಸಲಿ.

'ಓಂ ವಾಗ್ದೇವತಾಯ್ಯೆ ಸ್ವಾಹಾ' ಎಂಬ ಮಂತ್ರ ಹಣೆಯನ್ನು ರಕ್ಷಿಸಲಿ.

'ಓಂ ಸರಸ್ವತ್ಯೈ ಸ್ವಾಹಾ' ಎಂಬ ಮಂತ್ರ ಕಿವಿಗಳನ್ನು ರಕ್ಷಿಸಲಿ.

'ಓಂ ಶ್ರೀಂ ಹ್ರೀಂ ಭಾರತ್ಯೈ ಸ್ವಾಹಾ' ಎಂಬ ಮಂತ್ರ ಕಣ್ಣುಗಳನ್ನು ರಕ್ಷಿಸಲಿ.

'ಓಂ ಹ್ರೀಂ ವಾಗ್ವಾದಿನ್ಯೈ ಸ್ವಾಹಾ' ಎಂಬ ಮಂತ್ರ ಮೂಗನ್ನು ರಕ್ಷಿಸಲಿ.

'ಹ್ರೀಂ ವಿದ್ಯಾಧಿಷ್ಠಾತೃದೇವ್ಯೈ ಸ್ವಾಹಾ' ಎಂಬ ಮಂತ್ರ ಕಿವಿಯನ್ನು ರಕ್ಷಿಸಲಿ.

'ಓಂ ಶ್ರೀಂ ಹ್ರೀಂ ಬ್ರಾಹ್ಮ್ಯೈ ಸ್ವಾಹಾ' ಎಂಬ ಮಂತ್ರ ದಂತಪಂಕ್ತಿಯನ್ನು ರಕ್ಷಿಸಲಿ.

'ಓಂ ಐಂ' ಎಂಬ ಏಕಾಕ್ಷರ ಮಂತ್ರ ಕಂಠವನ್ನು ರಕ್ಷಿಸಲಿ.

'ಓಂ ಶ್ರೀಂ ಹ್ರೀಂ' ಎಂಬ ಮಂತ್ರ ಕುತ್ತಿಗೆಯನ್ನು ರಕ್ಷಿಸಲಿ.

'ಓಂ ಶ್ರೀಂ' ಎಂಬ ಮಂತ್ರ ಹೆಗಲನ್ನು ರಕ್ಷಿಸಲಿ.

'ಓಂ ಶ್ರೀಂ ವಿದ್ಯಾಧಿಷ್ಠಾತೃದೇವ್ಯೈ ಸ್ವಾಹಾ' ಎಂಬ ಮಂತ್ರ ಎದೆಯನ್ನು ರಕ್ಷಿಸಲಿ.

'ಓಂ ಹ್ರೀಂ ವಿದ್ಯಾ ಸ್ವರೂಪಾಯ್ಯೆ ಸ್ವಾಹಾ' ಎಂಬ ಮಂತ್ರ ನಾಭಿಯನ್ನು ರಕ್ಷಿಸಲಿ.

'ಓಂ ಹ್ರೀಂ ಕ್ಲೀಂ ವಾಣ್ಯೈ ಸ್ವಾಹಾ' ಎಂಬ ಮಂತ್ರ ಬೆನ್ನನ್ನು ರಕ್ಷಿಸಲಿ.

'ಓಂ ಸರ್ವವರ್ಣಾತ್ಮಿಕಾಯ್ಯೆ ಸ್ವಾಹಾ' ಎಂಬ ಮಂತ್ರ ಪಾದಗಳನ್ನು ರಕ್ಷಿಸಲಿ.

'ಓಂ ವಾಗಧಿಷ್ಠಾತೃದೇವ್ಯೈ ಸ್ವಾಹಾ' ಎಂಬ ಮಂತ್ರ ಸರ್ವಾಂಗಗಳನ್ನು ರಕ್ಷಿಸಲಿ.

'ಓಂ ಸರ್ವಕಂಠ ವಾಸಿನ್ಯೈ ಸ್ವಾಹಾ' ಎಂಬ ಮಂತ್ರ ಪೂರ್ವದಿಕ್ಕಿನಲ್ಲಿ ನನ್ನನ್ನು ರಕ್ಷಿಸಲಿ.

'ಓಂ ಹ್ರೀಂ ಜಿಹ್ವಾಗ್ರವಾಸಿನ್ಯೈ ಸ್ವಾಹಾ' ಎಂಬ ಮಂತ್ರ ಆಗ್ನೇಯದಲ್ಲಿ ರಕ್ಷಿಸಲಿ.

'ಓಂ ಐಂ ಶ್ರೀಂ ಹ್ರೀಂ ಸರಸ್ವತ್ಯೈ ಬುಧಜನನ್ಯೈ ಸ್ವಾಹಾ' ಎಂಬ ಮಂತ್ರ ದಕ್ಷಿಣ ದಿಕ್ಕಿನಲ್ಲಿ ನನ್ನನ್ನು ರಕ್ಷಿಸಲಿ.

'ಓಂ ಹ್ರೀಂ ಶ್ರೀಂ' ಎಂಬ ಮಂತ್ರ ನೈಋತ್ಯ ದಿಕ್ಕಿನಲ್ಲಿ ನನ್ನನ್ನು ರಕ್ಷಿಸಲಿ.

'ಓಂ ಕವಿಜಿಹ್ವಾಗ್ರ ವಾಸಿನ್ಯೈ ಸ್ವಾಹಾ' ಎಂಬ ಮಂತ್ರ ಪಶ್ಚಿಮ ದಿಕ್ಕಿನಲ್ಲಿ ನನ್ನ ಸುರಕ್ಷಿಸಲಿ.

'ಓಂ ಸದಂಬಿಕಾಯ್ಯೆ ಸ್ವಾಹಾ' ಎಂಬ ಮಂತ್ರ ವಾಯವ್ಯದಲ್ಲಿ ನನ್ನನ್ನು ರಕ್ಷಿಸಲಿ.

'ಓಂ ಗದ್ಯಪದ್ಯ ವಾಸಿನ್ಯೈ ಸ್ವಾಹಾ' ಎಂಬ ಮಂತ್ರ ಉತ್ತರದಲ್ಲಿ ನನ್ನನ್ನು ರಕ್ಷಿಸಲಿ.

'ಓಂ ಸರ್ವಶಾಸ್ತ್ರ ವಾಸಿನ್ಯೈ ಸ್ವಾಹಾ' ಎಂಬ ಮಂತ್ರ ಈಶಾನ್ಯದಲ್ಲಿ ನನ್ನನ್ನು ರಕ್ಷಿಸಲಿ. 'ಓಂ ಹ್ರೀಂ ಸರ್ವಪೂಜಿತಾಯೈ ಸ್ವಾಹಾ' ಎಂಬ ಮಂತ್ರ ಊರ್ಧ್ವದಿಕ್ಕಿನಲ್ಲಿ ರಕ್ಷಿಸಲಿ. 'ಓಂ ಐಂ ಹ್ರೀಂ ಪುಸ್ತಕವಾಸಿನ್ಯೈ ಸ್ವಾಹಾ' ಎಂಬ ಮಂತ್ರ ಅಧೋದಿಕ್ಕಿನಲ್ಲಿ ರಕ್ಷಿಸಲಿ. 'ಓಂ ಗ್ರಂಥ ಬೀಜ ರೂಪಾಯೈ ಸ್ವಾಹಾ' ಎಂಬ ಮಂತ್ರ ಎಲ್ಲ ದಿಕ್ಕಿನಲ್ಲೂ ನನ್ನನ್ನು ರಕ್ಷಿಸಲಿ.

ಇದು 'ವಿಶ್ವಜಯ' ಎಂದು ಪ್ರಸಿದ್ಧವಾದ ಸರ್ವಮಂತ್ರ ಸಮೂಹಯುಕ್ತವಾದ ಕವಚ ಮಂತ್ರ. ಹಿಂದೆ ಗಂಧಮಾದನದಲ್ಲಿ ಧರ್ಮನಿಂದ ನಾನು ಉಪದೇಶ ಪಡೆದೆ. ನಿನ್ನ ಮೇಲಿನ ಪ್ರೀತಿಯಿಂದ ನಿನಗೆ ಉಪದೇಶಿಸಿದ್ದೇನೆ. ಯಾರಿಗೂ ಹೇಳಬೇಡ. ಗುರುವನ್ನು ವಿದ್ಯುಕ್ತವಾಗಿ ವಸ್ತ್ರಾಭರಣ ಗಂಧಗಳಿಂದ ಸತ್ಕರಿಸಿ ದಂಡಪ್ರಣಾಮ ಮಾಡಿ ಇದನ್ನು ಉಪದೇಶ ಪಡೆಯಬೇಕು. ಐದು ಲಕ್ಷ ಜಪ ಮಾಡಿದರೆ ಸಿದ್ಧಿಯಾಗುವುದು. ಸಿದ್ಧಿಯಾದರೆ ಬೃಹಸ್ಪತಿಗೆ ಸಮನೆನಿಸುತ್ತಾನೆ. ಮಹಾವಾಗ್ಮಿಯೂ ಶ್ರೇಷ್ಠ ಕವಿಯೂ ತ್ರಿಲೋಕ ವಿಜಯಿಯೂ ಆಗುತ್ತಾನೆ. ಇವು ಕಾಣ್ವಶಾಖೆಯಲ್ಲಿ ಉಕ್ತವಾದ ಕವಚಮಂತ್ರ ಸ್ತೋತ್ರ ಪೂಜಾವಿಧಾನ ಧ್ಯಾನ ವಂದನೆಗಳು.

**ಇಲ್ಲಿಗೆ ಶ್ರೀ ಬ್ರಹ್ಮವೈವರ್ತ ಮಹಾಪುರಾಣದಲ್ಲಿ ಎರಡನೆಯದಾದ ಪ್ರಕೃತಿಖಂಡದ ನಾರಾಯಣ ನಾರದ ಸಂವಾದದಲ್ಲಿ ಸರಸ್ವತೀ ಕವಚವೆಂಬ ನಾಲ್ಕನೆ ಅಧ್ಯಾಯ ಮುಗಿಯಿತು.**

## ವಾಣೀಸ್ತವನ

## ಅಧ್ಯಾಯ-೫

ನಾರಾಯಣ ಮಹರ್ಷಿ ನಾರದನಿಗೆ ಹೇಳಿದ— 'ಸರಸ್ವತೀ ಸ್ತೋತ್ರವನ್ನೂ ಹೇಳುತ್ತೇನೆ ಕೇಳು. ಮಹಾಮುನಿ ಯಾಜ್ಞವಲ್ಕ್ಯ ಈ ಸ್ತೋತ್ರದಿಂದಲೆ ದೇವಿಯನ್ನು ಸ್ತುತಿಸಿದ. ಆ ಮುನಿ ಗುರುಶಾಪದಿಂದ ಕಲಿತ ವಿದ್ಯೆಯನ್ನು ಕಳೆದುಕೊಂಡು ದುಃಖಾರ್ತನಾಗಿ ಸೂರ್ಯನನ್ನು ಕೋಣಾರ್ಕದಲ್ಲಿ ತಪಸ್ಸಿನಿಂದ ಒಲಿಸಿಕೊಂಡ. ಸೂರ್ಯದೇವ ದೃಷ್ಟಿಗೋಚರನಾದಾಗ ಅವನನ್ನು ದೈನ್ಯದಿಂದ ಸ್ತುತಿಸಿ ದುಃಖದಿಂದ ಕಣ್ಣೀರು ಕರೆದ. ಸೂರ್ಯ ಅವನಿಗೆ ವೇದ ವೇದಾಂಗಗಳನ್ನು ಉಪದೇಶಿಸಿ 'ಸ್ಮರಣಶಕ್ತಿಗಾಗಿ ವಾಗ್ದೇವಿಯನ್ನು ಭಕ್ತಿಯಿಂದ ಸ್ತುತಿಸು' ಎಂದು ಹೇಳಿ ಅಂತರ್ಧಾನನಾದ. ಮುನಿ ಸ್ನಾನ ಮಾಡಿ ಭಕ್ತಿಯಿಂದ ದೇವಿಯನ್ನು ಸ್ತುತಿಸಿದ- ಜಗನ್ಮಾತೆ, ನನ್ನಲ್ಲಿ ದಯೆದೋರು. ಗುರುಶಾಪದಿಂದ ನನ್ನ ಸ್ಮರಣಶಕ್ತಿಯೆಲ್ಲ ನಷ್ಟವಾಗಿದೆ. ವಿದ್ಯೆ ಎಲ್ಲ

ನಾಶವಾಗಿದೆ. ನನಗೆ ಜ್ಞಾನ ನೀಡು ಸ್ಮರಣೆ ನೀಡು, ವಿದ್ಯೆ ನೀಡು ಕವಿತ್ವಶಕ್ತಿ ಶಿಷ್ಯಬೋಧನ ಶಕ್ತಿಗಳನ್ನು ನೀಡು. ಗ್ರಂಥ ನಿರ್ಮಾಣಶಕ್ತಿ ನೀಡು. ಒಳ್ಳೆಯ ಶಿಷ್ಯ ಸಂಪತ್ತು ನೀಡು. ಸಜ್ಜನರ ಸಭೆಗಳಲ್ಲಿ ವಿಚಾರ ಸಾಮರ್ಥ್ಯ ನೀಡು. ದೈವವಶದಿಂದ ಲುಪ್ತವಾದ ನನ್ನೆಲ್ಲ ಗುಣಸಂಪತ್ತನ್ನೂ ಭಗವಂತನು ಯೋಗಮಾಯೆಯಿಂದ ಬೀಜವನ್ನು ಅಂಕುರಿಸುವಂತೆ ಅಂಕುರಿಸು.

ವೇದಾಭಿಮಾನಿನಿ ಸರ್ವವಿದ್ಯಾಧಿದೇವಿಗೆ ನಮೋನಮಃ! ಯಾರ ಅನುಗ್ರಹ-ವಿಲ್ಲದಿದ್ದರೆ ಈ ಎಲ್ಲ ಜಗತ್ತು ಮೃತಪ್ರಾಯವೋ ಅಂಥ ಜ್ಞಾನಾಧಿದೇವಿ ಸರಸ್ವತಿಗೆ ನಮೋ ನಮಃ. ಯಾರಿಲ್ಲದಿದ್ದರೆ ಜಗತ್ತು ಮೂಕನಂತೆ ಉನ್ಮತ್ತನಂತಾದೀತೋ ಅಂಥ ವಾಗಧಿಷ್ಠಾತ್ರಿ ವಾಣಿಗೆ ನಮೋನಮಃ ಹಿಮ ಚಂದನ ಕುಂದ ಇಂದು ಕುಮುದಗಳಂತೆ ಹೊಳೆವ ವರ್ಣಾಧಿದೇವಿಗೆ ನಮೋನಮಃ ವಿಸರ್ಗ ಬಿಂದು ಮಾತ್ರೆಗಳಿಗೆ ಅಧಿಷ್ಠಾನ ರೂಪಳಾದ ಭಾರತಿಗೆ ನಮೋ ನಮಃ ಯಾರಿಲ್ಲದಿದ್ದರೆ ಗಣಕನು ಗಣನೆ ಮಾಡಲಾರನೋ ಅಂಥ ಕಾಲ ಸಂಖ್ಯಾಭಿಮಾನಿನಿಗೆ ನಮೋನಮಃ ವ್ಯಾಖ್ಯಾಭಿ-ಮಾನಿನಿಯಾಗಿದ್ದು ವ್ಯಾಖ್ಯಾನಗಳಿಗೆ ಅಧಿಷ್ಠಾತ್ರಿಯಾಗಿದ್ದು ಭ್ರಮಗಳನ್ನು ಪರಿಹರಿ-ಸುವ ಸಿದ್ಧಾಂತಗಳನ್ನು ನಿರೂಪಿಸುವ ದೇವಿಗೆ ನಮೋ ನಮಃ! ಸ್ಮೃತಿ ಜ್ಞಾನ ಬುದ್ಧಿ ಪ್ರತಿಭೆ ಕಲ್ಪನೆಗಳಿಗೆ ಪ್ರೇರಕ ಶಕ್ತಿಯೆನಿಸುವ ದೇವಿಗೆ ನಮೋ ನಮಃ!

ಸನತ್ಕುಮಾರ ಬ್ರಹ್ಮನನ್ನು ಜ್ಞಾನೋಪದೇಶ ನೀಡಲು ಪ್ರಾರ್ಥಿಸಿದಾಗ ಬ್ರಹ್ಮ ಜಡನಂತೆ ಅಸಮರ್ಥನಾಗಿ ಶ್ರೀಕೃಷ್ಣನ ಆಜ್ಞೆಯಂತೆ ನಿನ್ನ ಸ್ತೋತ್ರ ಮಾಡಿ ನಿನ್ನ ಅನುಗ್ರಹದಿಂದ ಸಿದ್ಧಾಂತವನ್ನು ಉಪದೇಶಿಸಿದ. ಭೂದೇವಿ ಶೇಷದೇವನಲ್ಲಿ ಉತ್ತಮ ಜ್ಞಾನವನ್ನು ಬೇಡಿದಾಗ ಅವನೂ ಮೂಕನಂತಾಗಿ ಅಸಮರ್ಥನಾಗಿ ಕಶ್ಯಪನ ಆಜ್ಞೆ-ಯಂತೆ ನಿನ್ನನ್ನು ಸ್ತುತಿಸಿಯೇ ಭ್ರಮನಿವಾರಕ ನಿರ್ಮಲ ಜ್ಞಾನೋಪದೇಶ ನೀಡಿದ. ವ್ಯಾಸನೂ ಪುರಾಣ ಹಾಗೂ ಸೂತ್ರಗಳನ್ನು ಕುರಿತು ವಾಲ್ಮೀಕಿಯನ್ನು ಕೇಳಿದಾಗ ವಾಲ್ಮೀಕಿ ಮೂಕನಂತಾಗಿ ಜಗನ್ಮಾತೆಯಾದ ನಿನ್ನನ್ನೇ ಸ್ಮರಿಸಿದ. ನಿನ್ನ ವರದಿಂದ ನಿರ್ಮಲ ಜ್ಞಾನ ಪಡೆದು ಗ್ರಂಥರಚನೆ ಮಾಡಿದ. ವ್ಯಾಸ ಅದನ್ನು ಕೇಳಿ ಪುಷ್ಕರದಲ್ಲಿ ನೂರು ವರ್ಷ ನಿನ್ನನ್ನು ಆರಾಧಿಸಿ ನಿನ್ನವರದಿಂದ ಶ್ರೇಷ್ಠ ಕವಿಯಾಗಿ ವೇದ ವಿಭಾಗ ಮಾಡಿದ. ಪುರಾಣಗಳನ್ನೂ ರಚಿಸಿದ. ಮಹೇಂದ್ರ ಪರ್ವತದಲ್ಲಿ ಪಾರ್ವತಿ ಶಿವನನ್ನು ತತ್ತ್ವೋಪದೇಶ ನೀಡೆಂದು ಬೇಡಿದಾಗ ಶಿವ ನಿನ್ನನ್ನು ಧ್ಯಾನಿಸಿ ದೇವಿಗೆ ಉಪದೇಶ ನೀಡಿದ. ದೇವೇಂದ್ರ ಬೃಹಸ್ಪತಿಯಲ್ಲಿ ವ್ಯಾಕರಣ ಶಾಸ್ತ್ರ ಉಪದೇಶಿಸಲು ಬೇಡಿದಾಗ ಬೃಹಸ್ಪತಿಯೂ ದಿವ್ಯವಾದ ಸಾವಿರ ವರ್ಷಕಾಲ ಪುಷ್ಕರದಲ್ಲಿ ನಿನ್ನನ್ನು ಧ್ಯಾನಿಸಿ ವರ ಪಡೆದು ವ್ಯಾಕರಣ ಉಪದೇಶಿಸಿದ. ಇಂದಿಗೂ ಯಾರು ಯಾರು ಅಧ್ಯಾಪನ ಕಾರ್ಯ ಮಾಡುವರೋ ಯಾರು ಯಾರು ಅಧ್ಯಯನ ಮಾಡುವರೋ ಆ ಎಲ್ಲ ಮುನಿಗಳೂ

ನಿನ್ನನ್ನು ಧ್ಯಾನಿಸಿಯೇ ತಮ್ಮ ಕಾರ್ಯಗಳಲ್ಲಿ ತೊಡಗುತ್ತಾರೆ. ಮುನಿಗಳು ಮನುಗಳು ಮಾನವರು ದೈತ್ಯರು ದೇವತೆಗಳು ಬ್ರಹ್ಮವಿಷ್ಣುಶಿವಾದಿಗಳು ಎಲ್ಲರೂ ನಿನ್ನನ್ನು ಸ್ತುತಿಸುತ್ತಾರೆ, ಪೂಜಿಸುತ್ತಾರೆ. ಸಾವಿರ ಮುಖದ ಶೇಷನೂ ಐದು ಮುಖದ ಶಿವನೂ ನಾಲ್ಕು ಮುಖದ ಬ್ರಹ್ಮನೂ ಯಾರನ್ನು ಸ್ತುತಿಸತೊಡಗಿ ಜಡರಾಗುವರೋ ಅಂಥ ನಿನ್ನನ್ನು ಒಂದು ಮುಖದ ನಾನು ಏನೆಂದು ಹೊಗಳಲಿ ?' ಹೀಗೆ ಹೇಳಿ ಯಾಜ್ಞಾ-ವಲ್ಕ್ಯ ಭಕ್ತಿಯಿಂದ ನಮಿಸಿ ಕಣ್ಣೀರು ಸುರಿಸಿದ. ಆಗ ಜ್ಯೋತಿಃಸ್ವರೂಪಳಾದ ಸರಸ್ವತಿ ಅದೃಶ್ಯಳಾಗಿ ನಿಂತು ಒಳ್ಳೆಯ ಜ್ಞಾನಿಯಾಗೆಂದು ವರವಿತ್ತು ವೈಕುಂಠಕ್ಕೆ ತೆರಳಿದಳು.

ಯಾಜ್ಞವಲ್ಕ್ಯ ರಚಿತವಾದ ಸರಸ್ವತೀ ಸ್ತೋತ್ರವನ್ನು ಯಾರು ಭಕ್ತಿಯಿಂದ ಪಠಿಸುವನೋ ಬೃಹಸ್ಪತಿಯಂತೆ ಶ್ರೇಷ್ಠ ಕವಿಯೂ ವಾಗ್ಮಿಯೂ ಆಗುವನು. ಮಹಾಮೂರ್ಖನೂ ಮಂದ ಬುದ್ಧಿಯೂ ಒಂದು ವರ್ಷ ಈ ಸ್ತೋತ್ರ ಪಠಿಸಿದರೆ ಅವನು ಪಂಡಿತ ಮೇಧಾವಿ ಕವಿ ಎನಿಸುವುದು ನಿಶ್ಚಯ.

**ಇಲ್ಲಿಗೆ ಶ್ರೀ ಬ್ರಹ್ಮವೈವರ್ತ ಮಹಾಪುರಾಣದಲ್ಲಿ ಎರಡನೆಯದಾದ ಪ್ರಕೃತಿಖಂಡದ ನಾರದನಾರಾಯಣ ಸಂವಾದದಲ್ಲಿ ಯಾಜ್ಞವಲ್ಕ್ಯ ಪ್ರಣೀತವಾದ ವಾಣೀಸ್ತವನವೆಂಬ ಐದನೆಯ ಅಧ್ಯಾಯ ಮುಗಿಯಿತು.**

## ಸರಸ್ವತೀ ಉಪಾಖ್ಯಾನ

**ಅಧ್ಯಾಯ-೬**

ನಾರಾಯಣ ಮಹರ್ಷಿ ನಾರದನಿಗೆ ಹೇಳಿದ— 'ಸರಸ್ವತಿ ವೈಕುಂಠದಲ್ಲಿ ನಾರಾಯಣನ ಬಳಿ ಇದ್ದಾಗ ಗಂಗೆಯ ಶಾಪದಿಂದ ಒಂದು ಅಂಶದಲ್ಲಿ ಭಾರತ ದೇಶದಲ್ಲಿ ಸರಸ್ವತೀ ನದಿಯಾಗಿ ಹರಿದಳು. ಈ ನದಿ ಪುಣ್ಯತೀರ್ಥರೂಪಳು ಪುಣ್ಯವಂತರಿಗೆ ಮಾತ್ರ ಲಭ್ಯಳು ತಪಸ್ವಿಗಳಿಗೆ ತಪಸ್ಸಿನ ಫಲವಾಗಿರುವವಳು, ಪಾಪದ ಕಟ್ಟಿಗೆ ಸುಡುವ ಅಗ್ನಿರೂಪಳು. ಸ್ನಾನ ಮಾಡಿದರೆ ಜ್ಞಾನಪಡೆದು ಮಾನವರು ವೈಕುಂಠವನ್ನು ಸೇರುವರು. ಚತುರ್ದಶೀ ಹುಣ್ಣಿಮೆ ಗ್ರಹಣ ವ್ಯತೀಪಾತ ಮುಂತಾದ ಪುಣ್ಯದಿನಗಳಲ್ಲಿ ಭಕ್ತಿಯಿರಲಿ ಇಲ್ಲದಿರಲಿ ಸ್ನಾನಮಾಡಿದರೆ ಹರಿಯ ಸಾರೂಪ್ಯ ಹೊಂದಿ ವೈಕುಂಠವನ್ನು ಸೇರುತ್ತಾರೆ. ಸರಸ್ವತೀ ಮಂತ್ರ ಒಂದು ತಿಂಗಳು ಜಪಿಸಿದರೂ ಮಹಾಮೂರ್ಖ ಶ್ರೇಷ್ಠ ಕವಿಯಾಗುತ್ತಾನೆ, ಸಂಶಯವಿಲ್ಲ. ನಿತ್ಯ ಸರಸ್ವತೀ ಜಲದಲ್ಲಿ ಸ್ನಾನ ಮುಂಡನಗಳನ್ನು ಮಾಡಿಕೊಳ್ಳುವವ ತಿರುಗಿ ತಾಯಿಗರ್ಭದಲ್ಲಿ ಜನಿಸುವುದಿಲ್ಲ.

ಹೀಗೆ ಮೋಕ್ಷದಾಯಕವಾದ ಸರಸ್ವತೀ ಮಹಿಮೆಯನ್ನು ಕಿಂಚಿತ್ತಾಗಿ ಹೇಳಿದ್ದೇನೆ, ಇನ್ನೇನು ಕೇಳಬಯಸುವೆ.

ನಾರದ ಕೇಳಿದ— 'ಸರಸ್ವತಿ ಗಂಗೆಯ ಶಾಪದಿಂದ ನದಿಯಾದುದು ಹೇಗೆ ? ಅಮೃತದಂಥ ಕಥೆಗಳನ್ನು ಎಷ್ಟು ಕೇಳಿದರೂ ತೃಪ್ತಿಯಾಗುತ್ತಿಲ್ಲ. ಶ್ರೇಯಸ್ಸು ಯಾರಿಗೆ ಸಾಕೆನಿಸುತ್ತದೆ ? ಆದ್ದರಿಂದ ಶಾಂತಸ್ವರೂಪಳೂ ಮಾನವರಿಗೆ ಸದಾ ಪುಣ್ಯ-ದಾಯಕಳೂ ಆದ ಗಂಗೆ ಪೂಜಾರ್ಹಳಾದ ಸರಸ್ವತಿಗೆ ಹೇಗೆ ಶಪಿಸಿದಳು, ಅವರಿಬ್ಬ-ರೊಳಗೆ ಕಲಹ ಉಂಟಾಗಲು ಕಾರಣವೇನು ಎಂದು ಹೇಳು. ಇದು ಪುರಾಣಗಳಲ್ಲಿ ಸಿಗುವುದಿಲ್ಲ. ಆದರಿಂದ ನೀನೆ ಹೇಳಬೇಕು.'

ನಾರಾಯಣ ಹೇಳಿದ— 'ನಾರದ, ಕೇಳು, ಪುರಾತನ ಕಥೆ ಇದು. ಸ್ಮರಣಮಾತ್ರದಿಂದ ಸರ್ವಪಾಪದಿಂದ ಮುಕ್ತಿಯಾಗುವುದು. ಲಕ್ಷ್ಮೀ ಸರಸ್ವತೀ ಗಂಗಾ ಈ ಮೂವರೂ ಹರಿಯ ಮೂವರು ಪತ್ನಿಯರು. ಪ್ರೇಮದಿಂದ ಮೂವರೂ ಸಮಾನರಾಗಿ ಸದಾ ಹರಿಯ ಬಳಿಯಲ್ಲಿ ಇರುವವರು. ಒಮ್ಮೆ ಗಂಗೆ ಹರಿಯ ಮುಖವನ್ನು ಅನುರಾಗದಿಂದ ನೋಡಿ ಮಂದಹಾಸ ಬೀರಿದಳು. ಹರಿಯೂ ಸಂತೋಷದಿಂದ ಅವಳ ಮುಖ ನೋಡಿ ನಕ್ಕ. ಅದನ್ನು ನೋಡಿ ಲಕ್ಷ್ಮಿ ಸಹಿಸಿಕೊಂಡಳು. ಸರಸ್ವತಿಗೆ ಸಹನೆಯಾಗಲಿಲ್ಲ. ಲಕ್ಷ್ಮಿ ನಗುತ್ತ ಅವಳನ್ನು ಸಮಾಧಾನ ಮಾಡಲು ಯತ್ನಿಸಿದಳು. ಆದರೆ ಅವಳ ಕೋಪ ಶಾಂತವಾಗಲಿಲ್ಲ. ಕೋಪಗೊಂಡು ನಡುಗುತ್ತ ಕೆಂಗಣ್ಣಿಂದ ನೋಡುತ್ತ ಅದುರುವ ತುಟಿಗಳಿಂದ ಹರಿಯನ್ನು ಆಕ್ಷೇಪಿಸಿ ನುಡಿದಳು- 'ಒಳ್ಳೆಯ ಪತಿ ಹೆಂಡಂದಿರಲ್ಲಿ ಸಮಾನವಾಗಿ ಪ್ರೀತಿಮಾಡುತ್ತಾನೆ. ನೀನು ಮಾತ್ರ ಗಂಗೆಯಲ್ಲಿಯೂ ಲಕ್ಷ್ಮಿಯಲ್ಲಿಯೂ ಹೆಚ್ಚು ಪ್ರೀತಿ ಮಾಡುತ್ತಿ. ನನ್ನಲ್ಲಿ ಏನೂ ಪ್ರೀತಿ ತೋರುವುದಿಲ್ಲ. ಅವರಿಬ್ಬರಲ್ಲಿ ನೀನು ಸಮಾನ ಪ್ರೀತಿ ಮಾಡುವುದರಿಂದ ಇಬ್ಬರೂ ಅನ್ಯೋನ್ಯವಾಗಿದ್ದಾರೆ. ಆದರಿಂದ ಲಕ್ಷ್ಮಿ ನಿನ್ನ ಈ ವಿಪರೀತ ವರ್ತನೆಯನ್ನು ಸಹಿಸುತ್ತಿದ್ದಾಳೆ. ಆದರೆ ನಾನು ಸಹಿಸಲಾರೆ. ಪತಿಪ್ರೇಮದಿಂದ ವಂಚಿತಳಾದ ನಾನು ಬದುಕಿದ್ದೇನು ಫಲ ? ನೀನು ಸತ್ವ ಸ್ವಭಾವದವನೆಂದು ಹೇಳುವವರು ಮೂರ್ಖರು. ಅವರು ನಿನ್ನ ಬುದ್ಧಿಯನ್ನು ತಿಳಿದಿಲ್ಲ.'

ಸರಸ್ವತಿಯ ಮಾತುಕೇಳಿ ಹರಿ ಒಂದು ಕ್ಷಣ ಮನಸ್ಸಿನಲ್ಲಿ ಆಲೋಚಿಸಿ ಅಲ್ಲಿಂದ ಹೊರಟುಹೋದ. ಆಗ ಸರಸ್ವತಿ ಕೋಪದಿಂದ ಗಂಗೆಯನ್ನು ಆಕ್ಷೇಪಿಸಿ ನುಡಿದಳು, 'ಗಂಗೆ, ಪತಿಪ್ರೇಮ ತನ್ನಲ್ಲಿ ಹೆಚ್ಚೆಂದು ಅಹಂಕಾರ ಪಡುತ್ತಿ. ನಿನ್ನ ಅಹಂಕಾರವನ್ನು ನಾನು ಮುರಿಯುತ್ತೇನೆ. ನಿನ್ನ ಪತಿ ನನ್ನನ್ನೇನು ಮಾಡುತ್ತಾನೆ, ನೋಡೋಣ' ಹೀಗೆ ಹೇಳಿ ಗಂಗೆಯ ತಲೆಗೂದಲನ್ನು ಹಿಡಿಯಲು ಹೊರಟಳು. ಆಗ ಲಕ್ಷ್ಮಿ ನಡುವೆ ಬಂದು ತಡೆದಳು. ಸರಸ್ವತಿ ಕೋಪದಿಂದ 'ಲಕ್ಷ್ಮಿ, ನೀನು ಈ ವಿಪರೀತವನ್ನು

ನೋಡಿಯೂ, ವೃಕ್ಷ ನದಿಗಳಂತೆ ಸುಮ್ಮನಿದ್ದೆ. ಆದರಿಂದ ನೀನು ವೃಕ್ಷವೂ ನದಿಯೂ ಆಗು' ಎಂದು ಶಪಿಸಿದಳು. ಆದರೂ ಲಕ್ಷ್ಮಿ ಕೋಪಿಸದೆ ಪ್ರತಿಶಾಪ ನೀಡದೆ ದುಃಖದಿಂದ ಸರಸ್ವತಿಯ ಕೈಹಿಡಿದು ಹಾಗೇ ನಿಂತಳು.

ಗಂಗೆಗೆ ಇದನ್ನು ನೋಡಿ ಕೋಪ ತಡೆಯದಾಯಿತು. 'ಲಕ್ಷ್ಮಿ, ಬಿಡು ಅವಳನ್ನು. ಅವಳು ನನ್ನನ್ನೇನು ಮಾಡಿಯಾಳು ? ವಾಗಧಿದೇವತೆಯಂತೆ! ಎಂಥ ಕೆಟ್ಟ ಮಾತನ್ನಾಡುತ್ತಾಳೆ! ಎಂಥ ಕಲಹ ಬಯಸುತ್ತಾಳೆ! ಇವಳಿಗೆ ಎಷ್ಟು ಶಕ್ತಿ ಸಾಮರ್ಥ್ಯವಿದೆಯೋ ಅಷ್ಟು ನನ್ನೊಡನೆ ಕಲಹದ ಮಾತನ್ನಾಡಲಿ. ತನ್ನ ಬಲವೆಷ್ಟು ನನ್ನ ಬಲವೆಷ್ಟು ಎಂದು ತಿಳಿಯಲಿ. ಎಲ್ಲರೂ ನಮ್ಮಿಬ್ಬರ ಶಕ್ತಿಯನ್ನು ನೋಡಲಿ.' ಹೀಗೆ ಹೇಳಿ ಗಂಗೆ ಸರಸ್ವತಿಗೆ ಶಾಪವಿತ್ತಳು 'ಲಕ್ಷ್ಮಿ, ನಿನ್ನನ್ನು ನದಿಯಾಗೆಂದು ಶಪಿಸಿದ ಈಕೆಯೂ ನದಿಯಾಗಲಿ. ಮರ್ತ್ಯಲೋಕದಿಂದಲೂ ಕೆಳಗೆ ಇಳಿದು ಪಾಪಿಗಳ ಲೋಕದಲ್ಲಿ ಹರಿದು ಅವರ ಪಾಪಗಳ ಒಂದೊಂದು ಅಂಶವನ್ನು ಹೊರಲಿ.' ಈ ಶಾಪವನ್ನು ಕೇಳಿ ಸರಸ್ವತಿಯೂ ಗಂಗೆಯನ್ನು ಶಪಿಸಿದಳು- 'ನೀನೂ ಭೂಲೋಕದಲ್ಲಿ ಹರಿದು ಪಾಪಿಗಳ ಪಾಪವನ್ನು ಹೊರುವೆ' ಅಷ್ಟರಲ್ಲಿ ಭಗವಂತ ಅಲ್ಲಿಗೆ ಬಂದು ಸರಸ್ವತಿಯ ಕೈಹಿಡಿದು ಆಲಿಂಗಿಸಿ ಸಂತೈಸಿದ. ನಡೆದುಹೋದ ಕಲಹ ಶಾಪಗಳ ವೃತ್ತಾಂತವನ್ನೆಲ್ಲ ಕೇಳಿ ದುಃಖದಿಂದ ನುಡಿದ, 'ಲಕ್ಷ್ಮಿ, ನೀನು ಒಂದು ಅಂಶದಿಂದ ಭೂಲೋಕದಲ್ಲಿ ಅಯೋನಿಜೆಯಾಗಿ ಪ್ರಾದುರ್ಭವಿಸಿ ಧರ್ಮಧ್ವಜ ರಾಜನ ಕನ್ಯೆಯಾಗು. ಆಗಲೆ ದುರ್ದೈವದಿಂದ ನೀನು ವೃಕ್ಷವಾಗುವೆ. ನನ್ನ ಅಂಶಭೂತನಾದ ಶಂಖಚೂಡಾಸುರನ ಮಡದಿಯಾಗಿದ್ದು ಅನಂತರ ನನ್ನ ಪತ್ನಿಯಾಗುವೆ. ತ್ರೈಲೋಕ್ಯಪಾವನಿ ತುಲಸಿ ಎನಿಸುವೆ. ಇನ್ನೊಂದು ಅಂಶದಿಂದ ಸರಸ್ವತಿಯ ಶಾಪದಂತೆ ನದಿಯಾಗಿ ಪದ್ಮಾವತಿ ಎಂಬ ಹೆಸರಿನಿಂದ ಕರೆಸಿಕೊಳ್ಳುವೆ. ಗಂಗೆ, ನೀನೂ ಸರಸ್ವತಿಯ ಶಾಪದಿಂದ ಲೋಕಪಾವನೆ ಎನಿಸುವೆ. ಭಗೀರಥನ ದುಷ್ಕರವಾದ ತಪಸ್ಸಿನಿಂದಾಗಿ ಭೂಮಿಗಿಳಿಯುವುದರಿಂದ ಭೂಮಿಯಲ್ಲಿ ನೀನು ಭಾಗೀರಥಿ ಎನಿಸುವೆ. ನನ್ನ ಅಂಶಭೂತನಾದ ಸಮುದ್ರರಾಜನ ಮಡದಿಯಾಗುವೆ. ನನ್ನ ಅಂಶಭೂತನಾದ ಶಂತನುರಾಜನ ಮಡದಿಯಾಗುವೆ. ಸರಸ್ವತಿ, ನೀನೂ ಗಂಗೆಯ ಶಾಪದಿಂದ ಭಾರತ ಭೂಮಿಯಲ್ಲಿ ನದಿಯಾಗಿ ಹುಟ್ಟಿ ಸವತಿಯರೊಡನೆ ಕಲಹ ಮಾಡಿದುದರ ಫಲ ಅನುಭವಿಸು. ಬ್ರಹ್ಮಲೋಕಕ್ಕೆ ಹೋಗಿ ಬ್ರಹ್ಮನ ಪತ್ನಿಯಾಗು. ಗಂಗೆ ಶಿವಲೋಕಕ್ಕೆ ಹೋಗಲಿ. ಇಲ್ಲಿ ಲಕ್ಷ್ಮಿ ಮಾತ್ರವಿರಲಿ. ಅವಳು ಶಾಂತಳು. ಕ್ರೋಧವಿಲ್ಲದವಳು. ನನ್ನ ಭಕ್ತೆ, ಮಹಾಸಾಧ್ವಿ, ಅವಳ ಅಂಶವಿರುವುದರಿಂದ ಎಲ್ಲ ಪತಿವ್ರತೆಯರೂ ತಮ್ಮ ಧರ್ಮದಲ್ಲಿರುತ್ತಾರೆ. ಮೂವರು ಪತ್ನಿಯರು, ಮೂವರು ಭಾವಮೈದುನರು, ಮೂವರು ಸೇವಕರು, ಮೂವರು ನೆಂಟರು ಎಂದರೆ ಇದು ವೇದ ವಿರುದ್ಧ, ಮಂಗಲಪ್ರದವಲ್ಲ.

ಯಾರ ಮನೆಯಲ್ಲಿ ಹೆಂಗಸು ಗಂಡಸಿನಂತೆ ನಡೆಯುವಳೋ, ಗಂಡಸು ಹೆಂಗಸಿಗೆ ವಶನಾಗಿರುವನೊ ಅವರ ಜನ್ಮ ವ್ಯರ್ಥ. ಅವರಿಗೆ ಪದೇ ಪದೇ ಅನಿಷ್ಟ ಪ್ರಾಪ್ತಿ-ಯಾಗುವುದು. ಯಾರ ಪತ್ನಿ ಕಟುಮಾತುಗಳನ್ನಾಡುತ್ತ ಕಲಹ ಮಾಡುತ್ತ ವ್ಯಭಿಚಾರ ನಿರತಳಾಗಿರುವಳೊ ಅವನು ಮನೆಯಲ್ಲಿರುವುದಕ್ಕಿಂತ ಕಾಡಿಗೆ ಹೋಗುವುದು ಲೇಸು. ಅಲ್ಲಿ ಅವರಿಗೆ ಕುಡಿಯಲು ನೀರು ಇರಲು ಸ್ಥಳವಾದರೂ ಸಿಕ್ಕೀತು. ಮನೆಯಲ್ಲಿ ಅದೂ ಸಿಗದು. ನೀತಿಗೆಟ್ಟ ಹೆಂಡತಿಯ ಬಳಿ ಇರುವುದಕ್ಕಿಂತ ಬೆಂಕಿಗೆ ಬೀಳುವುದು ಒಳ್ಳೆಯದು. ಕ್ರೂರ ಮೃಗಗಳ ಬಾಯಿಗೆ ಬೀಳುವುದು ಒಳ್ಳೆಯದು. ವ್ಯಾಧಿ-ದುಃಖವಾಗಲಿ ವಿಷದ ಉರಿಯಾಗಲಿ ಬೇಕು, ಕೆಟ್ಟ ಹೆಂಡತಿಯ ಕಟುಮಾತುಬೇಡ. ಹೆಂಡತಿಗೆ ಅಧೀನನಾದ ಮನುಷ್ಯನ ಬಾಳು ನಿಷ್ಫಲ. ಅವನ ಕರ್ಮ ಯಾವುದೂ ಸಫಲವಾಗುವುದಿಲ್ಲ. ಅವನು ಇಹದಲ್ಲಿ ನಿಂದಾಪಾತ್ರ, ಪರದಲ್ಲಿ ನರಕ ಭಾಜನ-ನಾಗುತ್ತಾನೆ. ಯಶಸ್ಸು ಕೀರ್ತಿಗಳನ್ನು ಗಳಿಸದ ಆತ ಜೀವನ್ಮೃತನೆ ಸರಿ.

ಯಾರ ಮಡದಿ ಅನುಕೂಲಳೂ ಸುಶೀಲೆಯೂ ಪತಿವ್ರತೆಯೂ ಆಗಿರುವಳೊ ಅವನಿಗೆ ಇಹದಲ್ಲಿಯೆ ಸ್ವರ್ಗಸುಖ. ಪರದಲ್ಲಿ ಧರ್ಮಮೋಕ್ಷಗಳು. ಯಾರ ಪತ್ನಿ ಪತಿವ್ರತೆಯಾಗಿರುವಳೋ ಅವನು ಮುಕ್ತ ಶುಚಿ ಸುಖಿಯಾಗುತ್ತಾನೆ. ಯಾರ ಪತ್ನಿ ದುಃಶೀಲೆಯೋ ಅವನು ಜೀವನ್ಮೃತ ಅಶುಚಿ ದುಃಖಿ ಎನಿಸುತ್ತಾನೆ ? ಹೀಗೆ ಹೇಳಿ ಜಗನ್ನಾಥ ಸುಮ್ಮನಾದ.

ಮೂವರೂ ದೇವಿಯರು ಅನ್ಯೋನ್ಯ ಆಲಿಂಗಿಸಿಕೊಂಡು ಅತ್ತರು. ಚೆನ್ನಾಗಿ ಆಲೋಚಿಸಿ ಭಗವಂತನಲ್ಲಿ ಬೇಡಿದರು.

ಸರಸ್ವತಿ ಹೇಳಿದಳು— 'ನಾಥ, ನಾನು ದಾರಿತಪ್ಪಿದ್ದಕ್ಕೆ ಸರಿಯಾದ ಪ್ರಾಯಶ್ಚಿತ್ತ ನೀಡು. ಪತಿಯಿಂದ ಪರಿತ್ಯಕ್ತಳಾದ ಸ್ತ್ರೀ ಎಲ್ಲಿ ಬದುಕಬೇಕು? ಆದ್ದರಿಂದ ಯೋಗದಿಂದ ಶರೀರತ್ಯಾಗ ಮಾಡುತ್ತೇನೆ.'

ಗಂಗೆ ಹೇಳಿದಳು— 'ಜಗನ್ನಾಥ, ನನ್ನನ್ನೇಕೆ ಪರಿತ್ಯಜಿಸಿದೆ ? ನಾನೇನು ತಪ್ಪುಮಾಡಿದೆ ? ನೋಡು ನಾನು ಶರೀರತ್ಯಾಗ ಮಾಡುತ್ತೇನೆ. ನಿರ್ದೋಷಳಾದ ನನ್ನನ್ನು ಕೊಂದ ಪಾಪ ನಿನಗೆ ಬರುತ್ತದೆ. ನಿರ್ದೋಷಳಾದ ಸತಿಯನ್ನು ತೊರೆದವ ನರಕಕ್ಕೆ ಹೋಗುತ್ತಾನೆ.'

ಲಕ್ಷ್ಮಿ ಹೇಳಿದಳು, 'ನಾಥ, ಸತ್ವಸ್ವಭಾವದ ನಿನಗೆ ಕೋಪ ಹೇಗೆ ? ಪ್ರಸನ್ನನಾಗು. ಸರಸ್ವತಿಯ ಶಾಪದಿಂದ ಭಾರತ ಭೂಮಿಗೆ ಒಂದಂಶದಿಂದ ನಾನು ಹೋಗುವೆ. ಆದರೆ ಎಷ್ಟು ಕಾಲ ನಾನು ಅಲ್ಲಿ ಇರಬೇಕು ? ಎಂದು ನಿನ್ನ ಪಾದಗಳನ್ನು ಕಾಣುವೆನು ? ಪಾಪಿಗಳು ನನ್ನ ಜಲದಲ್ಲಿ ಮಿಂದು ನನಗೆ ತಮ್ಮ ಪಾಪವನ್ನು

ತಗುಲಿಸುವರು. ಅದರಿಂದ ನಾನು ಹೇಗೆ ಮುಕ್ತಳಾಗಿ ನಿನ್ನನ್ನು ಸೇರುವೆನು ? ತುಲಸಿಯಾಗಿ ಧರ್ಮಧ್ವಜನ ಕನ್ಯೆಯಾದಾಗ ನಿನ್ನ ಪಾದಕಮಲ ಎಂದು ಲಭಿಸುವುದು ? ಸರಸ್ವತೀ ಶಾಪದಿಂದ ಗಂಗೆ ಭಾರತಕ್ಕೆ ಹೋದರೆ ಎಂದು ಶಾಪಮುಕ್ತಳಾಗಿ ನಿನ್ನನ್ನು ಸೇರುವಳು ? ಗಂಗಾಶಾಪದಿಂದ ಸರಸ್ವತಿ ಭಾರತಕ್ಕೆ ಹೋದರೆ ಎಂದು ಶಾಪ ಮುಕ್ತಳಾಗಿ ನಿನ್ನನ್ನು ಹೊಂದುವಳು ? ಸರಸ್ವತಿಯನ್ನು ಬ್ರಹ್ಮಲೋಕಕ್ಕೂ ಗಂಗೆಯನು ಶಿವಲೋಕಕ್ಕೂ ಹೋಗಲು ಆಜ್ಞಾಪಿಸುತ್ತಿರುವಿ. ನಾಥ, ಆ ನಿನ್ನ ಮಾತನ್ನು ಹಿಂತೆಗೆದುಕೋ.'

ಹೀಗೆ ಹೇಳಿ ಲಕ್ಷ್ಮಿ ಹರಿಯ ಪಾದಗಳನ್ನು ಹಿಡಿದು ನಮಿಸಿ ತನ್ನ ಕೇಶಪಾಶದಿಂದ ಸುತ್ತಿ ಕಣ್ಣೀರು ಗರೆದಳು. ಹರಿ ಅವಳನ್ನು ಎದೆಗೆ ಆಲಿಂಗಿಸಿಕೊಂಡು ಮುಗುಳುನಕ್ಕು ನುಡಿದ—

'ಲಕ್ಷ್ಮಿ, ನಿನ್ನ ಮಾತನ್ನು ನಡೆಸುತ್ತೇನೆ. ನನ್ನ ಮಾತನ್ನೂ ನಡೆಸುತ್ತೇನೆ. ಎರಡೂ ವ್ಯರ್ಥವಾಗದಂತೆ ಸಮತೆಯನ್ನು ಮಾಡುತ್ತೇನೆ. ಹೇಗೆಂದು ಕೇಳು. ಸರಸ್ವತಿ ಒಂದು ಅಂಶದಿಂದ ಭಾರತ ಭೂಮಿಗೂ ಒಂದು ಅಂಶದಿಂದ ಬ್ರಹ್ಮಲೋಕಕ್ಕೂ ಹೋಗಲಿ ಮೂಲರೂಪದಿಂದ ನನ್ನ ಬಳಿಯೆ ಇರಲಿ. ಭಗೀರಥನ ಯತ್ನದಿಂದ ಗಂಗೆ ಭಾರತಕ್ಕೆ ಒಂದಂಶದಿಂದ ಹೋಗಿ ಮೂಲೋಕವನ್ನು ಪವಿತ್ರಗೊಳಿಸಲಿ. ಸ್ವಯಂ ನನ್ನ ಬಳಿ ಇರಲಿ. ಒಂದು ಅಂಶದಿಂದ ಶಿವನ ಶಿರಸ್ಸಿನಲ್ಲಿ ಸ್ವಭಾವತಃ ಪವಿತ್ರಳಾದ ಅವಳು ಅತ್ಯಂತ ಪವಿತ್ರಳೆನಿಸುತ್ತಾಳೆ. ನೀನು ಭಾರತ ಭೂಮಿಯಲ್ಲಿ ಅಂಶದಿಂದ ಪದ್ಮಾವತೀ ನದಿಯಾಗಿಯೂ ತುಲಸೀವೃಕ್ಷವಾಗಿಯೂ ಇರು. ನದೀರೂಪದಿಂದಿರುವ ನಿಮಗೆ ಮೂವರಿಗೂ ಕಲಿಯುಗದಲ್ಲಿ ಐದು ಸಾವಿರ ವರ್ಷಗಳು ಕಳೆದಾಗ ಶಾಪಮೋಕ್ಷವಾಗುವುದು, ಆಗ ನನ್ನ ಬಳಿಗೆ ಬರುವಿರಿ.

**ಸಂಪದಾಂ ಹೇತುಭೂತಾ ಚ ವಿಪತ್ತಿಃ ಸರ್ವದೇಹಿನಾಂ ।**
**ವಿನಾ ವಿಪತ್ತೇರ್ಮಹಿಮಾ ಕೇಷಾಂ ಪದ್ಮೇ ಭವೇದ್ ಭವೇ ॥**

ಆಪತ್ತು ಎಲ್ಲರಿಗೂ ಸಂಪತ್ತುಗಳಿಗೆ ಕಾರಣವಾಗುತ್ತದೆ. ಆಪತ್ತಿಗೆ ಸಿಲುಕದೆ ಯಾರಿಗೆ ತಮ್ಮ ಸಾಮರ್ಥ್ಯದ ಅರಿವಾಗುತ್ತದೆ ?

ಪಾಪಿಗಳ ಸ್ಪರ್ಶದಿಂದ ಬರುವ ಪಾಪ ನನ್ನ ಮಂತ್ರ ಜಪಿಸುವ ಸಜ್ಜನರು ಮೀಯುವುದರಿಂದ ಪರಿಹಾರವಾಗುತ್ತದೆ. ನನ್ನ ಭಕ್ತರ ಸ್ಪರ್ಶದಿಂದ ದರ್ಶನದಿಂದ ಭೂಮಿಯಲ್ಲಿರುವ ಎಲ್ಲ ಅಸಂಖ್ಯ ತೀರ್ಥಗಳು ಪಾವನವಾಗುತ್ತವೆ. ನನ್ನ ಮಂತ್ರದ ಉಪಾಸಕರು ಭಾರತದಲ್ಲಿ ಸಂಚರಿಸುವುದು ಭಾರತವನ್ನು ಮಾತ್ರವಲ್ಲದೆ ಸಮಸ್ತ ಭೂಮಂಡಲವನ್ನು ಪವಿತ್ರಗೊಳಿಸುವುದಕ್ಕಾಗಿ. ನನ್ನ ಭಕ್ತರು ನಿಲ್ಲುವ ಪಾದ ತೊಳೆವ

ಸ್ಥಳವೂ ಪವಿತ್ರ ಮಹಾತೀರ್ಥವಾಗುತ್ತದೆ. ನನ್ನ ಭಕ್ತರ ದರ್ಶನದಿಂದ ಸ್ತ್ರೀಹತ್ಯೆ ಗೋಹತ್ಯೆ ಕೃತಘ್ನತೆ ಬ್ರಹ್ಮಹತ್ಯೆ ಗುರುತಲ್ಪಗಮನಾದಿ ಪಾಪ ಮಾಡಿದವನೂ ಪುನೀತನಾಗಿ ಜೀವನ್ಮುಕ್ತನಾಗುತ್ತಾನೆ. ಏಕಾದಶೀ ವ್ರತಮಾಡದವ ಸಂಧ್ಯಾವಂದನೆ ಮಾಡದವ ನಾಸ್ತಿಕ ನರಹತ್ಯಾಪಾತಕಿ ಇವರೆಲ್ಲರೂ ನನ್ನ ಭಕ್ತರ ಸ್ಪರ್ಶನ ದರ್ಶನಗಳಿಂದ ಪುನೀತರಾಗುತ್ತಾರೆ.

ವಿಶ್ವಾಸ ಘಾತಕ, ವಿಚಿತ್ರ ಘಾತಕ, ಸುಳ್ಳುಸಾಕ್ಷಿ ನೀಡುವವ, ನ್ಯಾಸವಾಗಿಟ್ಟ ಧನವನ್ನು ಅಪಹರಿಸುವವ, ಸಾಲಗಾರ, ಬಡ್ಡಿಯಿಂದ ಜೀವಿಸುವವ, ವ್ಯಭಿಚಾರದಿಂದ ಹುಟ್ಟಿದವ, ಪರಸ್ತ್ರೀ ಸಂಗಮಾಡುವವ, ಶೂದ್ರರಿಗೆ ಅಡಿಗೆ ಮಡುವವ, ದೇವರ ಹಣದಿಂದ ಜೀವಿಸುವವ, ಗ್ರಾಮಕ್ಕೆ ಪುರೋಹಿತನಾದವ, ವೈಷ್ಣವ ದೀಕ್ಷೆ ಇಲ್ಲದವ, ಅರಳಿಮರ ಕಡಿವವ, ನನ್ನ ಭಕ್ತರನ್ನು ನಿಂದಿಸುವವ, ಪರಮಾತ್ಮನಿಗೆ ನಿವೇದಿಸದ ಅನ್ನ ಉಣ್ಣುವವ, ತಾಯಿತಂದೆ ಹೆಂಡತಿಮಕ್ಕಳು ಸೋದರಬಾಂಧವರು ಗುರುಹಿರಿಯರು ಸೋದರಿ, ಅತ್ತೆಮಾವಂದಿರು ಮುಂತಾದವರನ್ನು ರಕ್ಷಣೆ ಮಾಡದ ಪಾಪಿ, ದೇವ-ಬ್ರಾಹ್ಮಣರ ದ್ರವ್ಯ ಅಪಹರಿಸುವವ, ಅರಗು ಲೋಹ ಉಪ್ಪು ಬೆಲ ಹಾಲು ಮೊಸರು ಮುಂತಾದುವನ್ನು ಮಾರುವವನು, ಮಗಳನ್ನು ಹಣಕ್ಕೆ ಮಾರುವವ ಮುಂತಾದ, ಪಾಪಿಗಳೆಲ್ಲರೂ ನನ್ನ ಭಕ್ತರ ದರ್ಶನ ಸ್ಪರ್ಶನಗಳಿಂದ ಪುನೀತರಾಗುವರು.'

ಲಕ್ಷ್ಮಿ ಹೇಳಿದಳು— 'ನಾಥ, ನಿನ್ನ ಭಕ್ತರ ಲಕ್ಷಣವನ್ನು ತಿಳಿಸು. ಹರಿಭಕ್ತಿಹೀನರೂ ಮಹಾ ಅಹಂಕಾರಿಗಳೂ ಆತ್ಮಶ್ಲಾಘನೆ ಮಾಡಿಕೊಳ್ಳುವವರೂ ಧೂರ್ತರೂ ಸಜ್ಜನರನ್ನು ನಿಂದಿಸುವವರೂ ಹರಿಭಕ್ತರ ದರ್ಶನ ಸ್ಪರ್ಶನಗಳಿಂದ ಪುನೀತರಾಗುವರು ಹರಿಭಕ್ತರ ಸ್ನಾನಮಾತ್ರದಿಂದ ಎಲ್ಲ ತೀರ್ಥಗಳೂ ಪವಿತ್ರವಾಗುವುವು. ಹರಿಭಕ್ತರ ಪಾದಧೂಳಿಯಿಂದ ಪಾದೋದಕದಿಂದ ಭೂಮಿ ಪವಿತ್ರವಾಗುವುದು. ಹರಿಭಕ್ತರ ದರ್ಶನ ಸ್ಪರ್ಶನಗಳನ್ನು ಭಾರತದೇಶದಲ್ಲಿ ಹೊಂದಲು ದೇವತೆಗಳೂ ಬಯಸುವರು. ವೈಷ್ಣವರೊಡನೆ ಸಮಾಗಮವೆಂದರೆ ಎಲ್ಲರಿಗೂ ಒಂದು ಪರಮಲಾಭ.

ನ ಹ್ಯಮ್ಮಯಾನಿ ತೀರ್ಥಾನಿ ನ ದೇವಾ ಮೃಚ್ಛಿಲಾಮಯಾಃ ।
ತೇ ಪುನಂತ್ಯುರುಕಾಲೇನ ವಿಷ್ಣುಭಕ್ತಾಃ ಕ್ಷಣಾದಹೋ ॥

ನೀರು ತೀರ್ಥವಲ್ಲ, ಮಣ್ಣುಕಲ್ಲು ದೇವರಲ್ಲ. ಅವು ಪಾವಿತ್ರ್ಯ ತಂದುಕೊಡಲು ಬಹಳ ಕಾಲ ಬೇಕಾಗುವುದು. ವಿಷ್ಣುಭಕ್ತರು ಒಂದುಕ್ಷಣದಲ್ಲಿ ಆ ಕಾರ್ಯ ಮಾಡುವರು.

ಮಹಾಲಕ್ಷ್ಮಿಯ ಈ ಮತುಕೇಳಿ ನಾರಾಯಣ ಹೇಳತೊಡಗಿದ- ''ಶ್ರುತಿಪುರಾಣ-ಗಳಲ್ಲಿ ನಿಗೂಢವಾಗಿ ಹುದುಗಿರುವ ಭಕ್ತರ ಲಕ್ಷಣಗಳನ್ನು ಹೇಳುತ್ತೇನೆ.

ಪುಣ್ಯದಾಯಕ ಪಾಪಪರಿಹಾರಕ ಭುಕ್ತಿಮುಕ್ತಿಪ್ರದ ಸುಖದಾಯಕ ಸಾರಭೂತ ಗೋಪ್ಯವಾದ ಈ ವಿಷಯವನ್ನು ದುಷ್ಟರ ಮುಂದೆ ಹೇಳಬಾರದು. ನೀನು ಪವಿತ್ರಳು, ನನಗೆ ಪ್ರಾಣಸಮಾನಳು. ಆದರಿಂದ ಹೇಳುತ್ತೇನೆ, ಕೇಳು.

ಗುರುಮುಖದಿಂದ ವಿಷ್ಣುಮಂತ್ರವನ್ನು ರಹಸ್ಯವಾಗಿ ಕಿವಿಯಲ್ಲಿ ಕೇಳಿ ಪವಿತ್ರನಾದ ಮನುಷ್ಯೋತ್ತಮನೆ ವೇದ ವೇದಾಂಗಗಳಲ್ಲಿ ಪ್ರಸಿದ್ಧನಾದ ವಿಷ್ಣುಭಕ್ತ. ಅವನ ಹಿಂದಿನ ನೂರುಮಂದಿ ಪೂರ್ವಿಕರು ಅವನಿಂದಾಗಿ ಪವಿತ್ರರಾಗುತ್ತಾರೆ. ಸ್ವರ್ಗ-ದಲ್ಲಿರಲಿ ನರಕದಲ್ಲೆ ಇರಲಿ ಕ್ಷಣದಲ್ಲಿ ಮುಕ್ತಿಹೊಂದುತ್ತಾರೆ. ಯಾವ ಯೋನಿಯಲ್ಲೇ ಹುಟ್ಟಿರಲಿ, ತಕ್ಷಣ ಜೀವನ್ಮುಕ್ತರಾಗಿ ಮೋಕ್ಷ ಹೊಂದುತ್ತಾರೆ.

ನನ್ನ ಭಕ್ತ ನನ್ನನ್ನೆ ಆರಾಧಿಸುತ್ತಾನೆ, ನನ್ನನ್ನೆ ಹೊಗಳುತ್ತಾನೆ. ನನ್ನನ್ನೆ ಸದಾ ಧ್ಯಾನಿಸುತ್ತಾನೆ. ನನ್ನ ಗುಣ ಕೀರ್ತನೆಯನ್ನು ಕೇಳಿದೊಡನೆ ಆನಂದದಿಂದ ಪುಲಕಿತ-ನಾಗುತ್ತಾನೆ. ಅವನ ಕಂಠ ಗದ್ಗದವಾಗುತ್ತದೆ. ಕಣ್ಣಿಂದ ಆನಂದ ಬಾಷ್ಪ ಹರಿಯುತ್ತದೆ. ಪರವಶತೆ ಉಂಟಾಗುತ್ತದೆ. ಅವನು ಸಾಲೋಕ್ಯಾದಿ ನಾಲ್ಕು ಬಗೆಯ ಮುಕ್ತಿಯನ್ನೂ ಬಯಸಲಾರ. ಬ್ರಹ್ಮತ್ವ ಅಮರತ್ವಗಳನ್ನೂ ಬಯಸಲಾರ. ಇಂದ್ರತ್ವ ಮನುತ್ವ ದೇವತ್ವ ಸ್ವರ್ಗ ರಾಜ್ಯಾದಿ ಭೋಗಗಳನ್ನು ಕನಸಿನಲ್ಲಿಯೂ ಬಯಸಲಾರ.

ಬ್ರಹ್ಮಾಂಡಗಳು ನಾಶ ಹೊಂದುವುವು. ಬ್ರಹ್ಮಾದಿ ದೇವತೆಗಳೂ ನಾಶ ಹೊಂದುವರು. ಮಂಗಳಕರವಾದ ನನ್ನ ಭಕ್ತಿ ಉಳ್ಳವನಿಗೆ ಎಂದೂ ನಾಶವಿಲ್ಲ. ಭಾರತ ಭೂಮಿಯಲ್ಲಿ ದುರ್ಲಭವಾದ ಜನ್ಮ ಪಡೆದು ಸಂಚರಿಸುವ ನನ್ನ ಭಕ್ತರು ಇಡೀ ಭೂಮಿಯನ್ನು ಪವಿತ್ರಗೊಳಿಸಿ ನನ್ನ ಮಂದಿರಕ್ಕೆ ಬರುತ್ತಾರೆ. ಲಕ್ಷ್ಮಿ, ನೀನು ಕೇಳಿದ ಭಕ್ತಲಕ್ಷಣಗಳನ್ನು ಹೇಳಿದ್ದೇನೆ. ಇನ್ನು ನೀನು ಉಚಿತ ರೀತಿಯಿಂದ ವರ್ತಿಸು.'

ಹರಿಯ ಆಜ್ಞೆಯಂತೆ ಆ ಮೂವರೂ ನಡೆದರು. ಹರಿ ಸುಖಾಸನದಲ್ಲಿ ಮಂಡಿಸಿದ.

**ಇಲ್ಲಿಗೆ ಶ್ರೀ ಬ್ರಹ್ಮವೈವರ್ತ ಮಹಾಪುರಾಣದಲ್ಲಿ ಎರಡನೆಯದಾದ ಪ್ರಕೃತಿಖಂಡದ ನಾರದನಾರಾಯಣ ಸಂವಾದದಲ್ಲಿ ಸರಸ್ವತ್ಯುಪಾಖ್ಯಾನವೆಂಬ ಆರನೆ ಅಧ್ಯಾಯ ಮುಗಿಯಿತು.**

# ಯುಗತನ್ಮಾಹಾತ್ಮ್ಯ, ಮನ್ವಂತರ ಕಾಲ, ಈಶ್ವರಗುಣ ನಿರೂಪಣ

## ಅಧ್ಯಾಯ-೭

ಗಂಗೆಯ ಶಾಪದಿಂದ ಸರಸ್ವತಿ ಒಂದಂಶದಿಂದ ಭಾರತ ಭೂಮಿಗಿಳಿದಳು. ಒಂದಂಶದಿಂದ ಸ್ವಯಂ ನಾರಾಯಣನ ಬಳಿಯೆ ಇದ್ದಳು. ಭಾರತದಲ್ಲಿ ನದಿಯಾಗಿ ಹರಿದುದರಿಂದ ಭಾರತಿ ಎಂದೂ ಬ್ರಹ್ಮನ ಪತ್ನಿಯಾದುದರಿಂದ ಬ್ರಾಹ್ಮೀ ಎಂದೂ ವಾಗಭಿಮಾನಿನಿ ಆದುದರಿಂದ ವಾಣಿ ಎಂದೂ ಆಕೆಗೆ ಹೆಸರಾಯಿತು.

ಸರಸತೀ ನದಿ ಅತ್ಯಂತ ಪವಿತ್ರ. ಪಾಪಿಗಳ ಪಾಪವನ್ನು ಸುಡುವ ಬೆಂಕಿ. ಮುಂದೆ ಗಂಗೆಯೂ ಸರಸ್ವತೀ ಶಾಪದಿಂದ ಭಗೀರಥನಿಂದಾಗಿ ಭೂಮಿಗಿಳಿದು ಭಾಗೀರಥೀ ಎನಿಸಿದಳು. ಅವಳ ವೇಗವನ್ನು ಭೂಮಿ ಸಹಿಸಲು ಅಶಕ್ತಳಾದ್ದರಿಂದ ಶಿವ ಅವಳನ್ನು ತಲೆಯಲ್ಲಿ ಧರಿಸಿದ. ಲಕ್ಷ್ಮಿಯೂ ಸರಸ್ವತೀ ಶಾಪದಿಂದ ಪದ್ಮಾವತೀ ನದಿಯಾಗಿ ಒಂದಂಶದಿಂದ ಭಾರತ ಭೂಮಿಯಲ್ಲಿ ಹರಿದಳು. ಸ್ವತಃ ಹರಿಯ ಬಳಿಯಲ್ಲಿಯೂ ಇದ್ದಳು. ಇನ್ನೊಂದು ಅಂಶದಿಂದ ಭಾರತದಲ್ಲಿ ಧರ್ಮಧ್ವಜನ ಮಗಳಾಗಿ ತುಲಸಿ ಎಂದು ಪ್ರಸಿದ್ಧಳಾದಳು. ಮೊದಲಿಗೆ ಸರಸ್ವತೀಶಾಪ. ಬಳಿಕ ಹರಿಶಾಪ. ಅದರಿಂದ ಅವಳು ವೃಕ್ಷ ರೂಪಹೊಂದಿದಳು. ಹೀಗೆ ಮೂವರೂ ನದಿಗಳಾಗಿ ಭಾರತದಲ್ಲಿ ಐದು ಸಾವಿರ ವರ್ಷಗಳಿದ್ದು ಅನಂತರ ಹರಿಮಂದಿರವನ್ನು ಸೇರುತ್ತಾರೆ. ಆಗಲೆ ಕಾಶಿ ವೃಂದಾವನಗಳೆರಡನ್ನು ಹೊರತು ಉಳಿದೆಲ್ಲ ತೀರ್ಥಕ್ಷೇತ್ರಗಳೂ ಹರಿಯಾಜ್ಞೆಯಂತೆ ದೇವಿಯರೊಡನೆ ವೈಕುಂಠಕ್ಕೇ ಹೋಗುವುವು. ಹಾಗೇ ಕಲಿಯುಗದಲ್ಲಿ ಹತ್ತುಸಾವಿರ ವರ್ಷಗಳು ಕಳೆದಂತೆ ಶಾಲಿಗ್ರಾಮದಲ್ಲಿರುವ ಹರಿಮೂರ್ತಿಯೂ ಪುರಿಯ ಜಗನ್ನಾಥನೂ ಭಾರತವನ್ನು ತೊರೆದು ವೈಕುಂಠಕ್ಕೆ ಹೋಗುವರು. ವೈಷ್ಣವ ಪುರಾಣಗಳೂ ಶಂಖಗಳೂ ಶ್ರಾದ್ಧತರ್ಪಣಗಳೂ ವೇದೋಕ್ತ ಕರ್ಮಗಳೂ ಜೊತೆಗೇ ಹೋಗುವುವು. ಹರಿಪೂಜೆ, ಹರಿನಾಮ ಸಂಕೀರ್ತನೆ ವೇದಾಂಗಗಳು ಶಾಸ್ತ್ರಗಳು ವೇದಗಳು ಸತ್ಯಧರ್ಮಗಳು ಗ್ರಾಮದೇವತೆಗಳು, ವ್ರತ ತಪಸ್ಸು ಉಪವಾಸಗಳು ಎಲ್ಲವೂ ಜೊತೆಗೆ ಹೊರಟು ಹೋಗುವುವು.

ಎಲ್ಲ ಜನರೂ ವಾಮಾಚಾರದಲ್ಲಿ ಆಸಕ್ತರಾಗುವರು, ಸುಳ್ಳು ಕಪಟಗಳನ್ನು ಆಶ್ರಯಿಸುವರು. ತುಲಸಿ ಇಲ್ಲದೆ ಪೂಜೆ ಮಾಡುವರು. ಏಕಾದಶೀ ವ್ರತವನ್ನು ತೊರೆಯುವರು. ಎಲ್ಲ ಧರ್ಮಾಚರಣೆಗಳನ್ನು ಬಿಡುವರು. ಹರಿಕಥೆಗಳನ್ನೂ ಬಿಡುವರು. ವಂಚಕರು ಕ್ರೂರರು ಡಾಂಭಿಕರು ಮಹಾ ಅಹಂಕಾರಯುಕ್ತರು ಚೋರರು ಹಂತಕರಾಗಿ ಎಲ್ಲ ಜನರೂ ಹರಿಯ ಉಪಾಸನೆಯನ್ನು ಮರೆತು ಬಿಡುವರು. ಹೆಣ್ಣುಗಂಡು ಎಂಬ ಭೇದವಿಲ್ಲ, ವಿವಾಹವೆಂಬ ಸಂಸ್ಕಾರವೆ ಇಲ್ಲ, ವಾದಗಳಿಗೆ ನಿರ್ಣಯವಿಲ್ಲ, ಸ್ವಾಮಿ ಭೃತ್ಯರೆಂಬ ಭೇದವಿಲ್ಲ ಎಂದಾಗುತ್ತದೆ.

ಪುರುಷರೆಲ್ಲ ಸ್ತ್ರೀವಶರಾಗುತ್ತಾರೆ. ಸ್ತ್ರೀಯರು ವ್ಯಭಿಚಾರನಿರತರಾಗುತ್ತಾರೆ. ಪತಿಗಳನ್ನು ಹೆದರಿಸಿ ಬೆದರಿಸಿ ಹೊಡೆದು ಮನೆಯೊಡತಿಯರೆನಿಸುತ್ತಾರೆ. ಪತಿಗಳು ಕೆಲಸದಾಳು-ಗಳಿಗಿಂತ ಕಡಿಮೆಯವರಾಗುತ್ತಾರೆ. ಅತ್ತೆ ಮಾವಂದಿರು ದಾಸದಾಸಿಯರಿಗೆ ಸಮನಾಗುವರು. ಮನೆಯಲ್ಲಿ ರಕ್ತಸಂಬಂಧಿಗಳದೆ ಮೇಲುಗೈ. ವಿದ್ಯಾಸಂಬಂಧಿ-ಗಳೊದನೆ ಮಾತುಕಥೆಯೂ ಇರಲಾರದು. ರಕ್ತಸಂಬಂಧಿಗಳಲ್ಲಿಯೂ ಪತಿಯ ಕಡೆಯವರೆಂದರೆ ಅಪರಿಚಿತರ ಹಾಗೆ. ಪತಿಗಳು ಸತಿಯರ ಅಪ್ಪಣೆ ಇಲ್ಲದೆ ಯಾವ ಕೆಲಸವನ್ನೂ ಮಾಡಲಾರರು. ಬ್ರಾಹ್ಮಣಾದಿ ವರ್ಣಾಚಾರ ನಿರ್ಣಯವಾಗಲಿ, ಸಂಧ್ಯೋಪಾಸನೆಯಾಗಲಿ ಇಲ್ಲ. ಯಜ್ಞೋಪವೀತ ಧಾರಣೆಯೆ ಇಲ್ಲ. ಎಲ್ಲರೂ ಮ್ಲೇಚರಂತೆ ಆಚರಿಸುವರು. ತಮ್ಮ ಶಾಸ್ತ್ರಗಳನ್ನು ತೊರೆದು ಮೇಚ್ಛರ ಗ್ರಂಥಗಳನ್ನು ಓದುತ್ತಾರೆ. ಜನರು ಸತ್ಯಹೀನರಾಗುತ್ತಾರೆ. ಭೂಮಿ ಸಸ್ಯ ಹೀನವಾಗುತ್ತದೆ. ಮರಗಳು ಫಲಹೀನವಾಗುತ್ತವೆ. ಸ್ತ್ರೀಯರು ಸಂತತಿ ಹೀನರಾಗುತ್ತಾರೆ. ಗೋವುಗಳು ಕ್ಷೀರಹೀನವಾಗುತ್ತವೆ. ಕ್ಷೀರವೂ ಘೃತಹೀನವಾಗುತ್ತದೆ. ದಂಪತಿಗಳು ಪ್ರೀತಿಹೀನ-ರಾಗುತ್ತಾರೆ. ಗೃಹಸ್ಥರು ಸುಖಹೀನರಾಗುತ್ತಾರೆ. ರಾಜರು ಪ್ರತಾಪಹೀನರಾಗುತ್ತಾರೆ. ಪ್ರಜೆಗಳು ಕರ ಕೊಡಲು ಸಾಮರ್ಥ್ಯಹೀನರಾಗುತ್ತಾರೆ. ನದಿಗಳು ಜಲಹೀನ-ವಾಗುತ್ತವೆ. ನಾಲ್ಕು ವರ್ಣದವರೂ ಧರ್ಮಹೀನರೂ ಪುಣ್ಯಹೀನರೂ ಆಗುತ್ತಾರೆ. ಪುಣ್ಯವಂತ ಲಕ್ಷಕ್ಕೊಬ್ಬನೂ ಸಿಗಲಾರ.

ಪಾಪಿಗಳೆ ಪುಣ್ಯವಂತರೆನಿಸುವರು, ಅಸಭ್ಯರೆ ಸಭ್ಯರು. ಲಂಪಟರೆ ಜಿತೇಂದ್ರಿಯರು. ನೀತಿಗೆಟ್ಟವರೆ ಪತಿವ್ರತೆಯರು. ಪಾತಕಿಗಳ ತಪಸ್ವಿಗಳು. ಅವೈಷ್ಣವರೆ ವಿಷ್ಣುಭಕ್ತರು. ಹಿಂಸಕರೆ ದಯಾವಂತರು. ನರಘಾತಿಗಳೆ ಶೂರರು. ಆದ್ದರಿಂದ ಧೂರ್ತರು ಸನ್ಯಾಸಿ ವೇಷಧರಿಸಿ ಸಜ್ಜನರನ್ನು ನಿಂದಿಸುತ್ತಾರೆ, ಅಪಹಾಸ ಮಾಡುತ್ತಾರೆ. ಭೂತಪ್ರೇತಾದಿ-ಗಳ ಆರಾಧಕರು ಜನರಿಗೆ ಸಂತೋಷ ಉಂಟುಮಾಡುತ್ತಾರೆ.

ಜನರು ಜ್ಞಾನಹೀನರಾಗುತ್ತಾರೆ. ವ್ಯಾಧಿಯುಕ್ತರಾಗಿ ಅಲ್ಪಾಯುಷಿಗಳಾಗುತ್ತಾರೆ. ಹದಿನಾರಕ್ಕೆ ತಲೆ ನೆರೆಯುವುದು ಇಪ್ಪತ್ತಕ್ಕೆ ಮಹಾವೃದ್ಧರಾಗುತ್ತಾರೆ. ಎಂಟುವರ್ಷಕ್ಕೆ ಹೆಣ್ಣು ಮೈ ನೆರೆಯುತ್ತಾಳೆ. ಗರ್ಭ ಧರಿಸುತ್ತಾಳೆ. ಹದಿನಾರಕ್ಕೆ ಮುದುಕಿಯಾಗುತ್ತಾಳೆ. ವರ್ಣಾಶ್ರಮಧರ್ಮಲುಪ್ತವಾಗಿ ಎಲ್ಲರೂ ಮ್ಲೇಚ್ಛರಾಗುವರು. ಕಲಿಯುಗದಲ್ಲಿ ಈ ರೀತಿಯಾಗಿ ಪ್ರಪಂಚವೆಲ್ಲ ಮ್ಲೇಚ್ಛಮಯವಾದಾಗ ಮರ ಒಂದು ಮೊಳದಷ್ಟು ಮಾತ್ರ ಬೆಳೆಯುತ್ತದೆ. ಮಾನವ ಹೆಬ್ಬೆಟ್ಟಿನಷ್ಟೆ ಬೆಳೆಯುತ್ತಾನೆ. ಆಗ ವಿಷ್ಣುಯಶನೆಂಬ ಬ್ರಾಹ್ಮಣನ ಮಗನಾಗಿ ನಾರಾಯಣನ ಅಂಶಭೂತನಾದ ಕಲ್ಕಿ ಅವತರಿಸಿ ಅತ್ಯಂತ ಬಲಿಷ್ಠನಾಗುತ್ತಾನೆ. ದೊಡ್ಡ ಖಡ್ಗ ಹಿಡಿದು ದೊಡ್ಡ ಕುದುರೆ ಏರಿ ಮೂರು ದಿನಗಳೊಳಗೆ ಭೂಮಿಯ ಮೇಲೆ ಮ್ಲೇಚ್ಛರಿಲ್ಲದಂತೆ ಮಾಡುತ್ತಾನೆ. ಬಳಿಕ ಅಂತರ್ಧಾನನಾಗುತ್ತಾನೆ.

ಭೂಮಿ ಅರಾಜಕವಾಗುತ್ತದೆ. ಎಲ್ಲೆಲ್ಲೂ ಕಳ್ಳಕಾಕರ ಪೀಡೆ. ಆರು ದಿನ ಬಿಡದೆ ಧಾರಾಕಾರ ಮಳೆ ಸುರಿದು ಭೂಮಿಯನ್ನು ಜಲಮಯ ಮಾಡುತ್ತದೆ. ಜನಗಳು ಮನೆ ಮಠಗಳು ಗಿಡಮರಗಳೆಲ್ಲ ನಾಶವಾಗುವುವು. ಆಗ ದ್ವಾದಶಾದಿತ್ಯರು ಒಮ್ಮೆಲೆ ಉದಿಸುತ್ತಾರೆ. ಭೂಮಿ ಒಣಗುತ್ತದೆ. ಕಲಿಯುಗ ಮುಗಿದು ಕೃತಯುಗ ಪ್ರಾರಂಭ-ವಾಗುತ್ತದೆ. ತಪಸ್ಸು ಸತ್ಯಧರ್ಮಗಳು ಪೂರ್ಣವಾಗಿ ನೆಲೆ ನಿಲ್ಲುತ್ತವೆ.

ಬ್ರಾಹ್ಮಣರು ತಪಸ್ವಿಗಳೂ ಧರ್ಮಿಷ್ಠರೂ ವೇದಜ್ಞರೂ ಆಗುತ್ತಾರೆ. ಸ್ತ್ರೀಯರೂ ಧರ್ಮಿಷ್ಠರಾಗಿ ಪತಿವ್ರತೆಯರಾಗಿ ಮನೆ ಮನೆಗಳನ್ನು ಬೆಳಗುತ್ತಾರೆ. ರಾಜರೂ ಕ್ಷತ್ರಿಯರೂ ಸ್ವದರ್ಮದಲ್ಲಿದ್ದು ಬ್ರಾಹ್ಮಣರಲ್ಲಿ ಭಕ್ತಿ ಉಳ್ಳವರಾಗಿರುತ್ತಾರೆ. ಪ್ರತಾಪ-ಶಾಲಿಗಳಾಗಿದ್ದು ಪುಣ್ಯಕರ್ಮಗಳನ್ನು ಮಾಡುತ್ತಾರೆ. ವೈಶ್ಯರು ಧರ್ಮಿಷ್ಠರಾಗಿದ್ದು ವ್ಯಾಪಾರ ನಿರತರಾಗುತ್ತಾರೆ. ಬ್ರಾಹ್ಮಣರಲ್ಲಿ ಭಕ್ತಿ ಇಟ್ಟಿರುತ್ತಾರೆ. ಶೂದ್ರರೂ ಧರ್ಮಿಷ್ಠರಾಗಿದ್ದು ಪುಣ್ಯನಿರತರಾಗುತ್ತಾರೆ. ದ್ವಿಜರ ಸೇವೆ ಮಾಡುತ್ತಾರೆ. ಎಲ್ಲ ಬ್ರಾಹ್ಮಣ ಕ್ಷತ್ರಿಯ ವೈಶ್ಯರೂ ವಿಷ್ಣುಭಕ್ತರಾಗಿ ವಿಷ್ಣುಮಂತ್ರ ಉಪಾಸನೆ ಮಾಡುವರು. ಶ್ರುತಿ ಸ್ಮೃತಿ ಪುರಾಣಗಳನ್ನು ತಿಳಿದು ಧರ್ಮಜ್ಞರಾಗುತ್ತಾರೆ. ಅಧರ್ಮ ಒಂದಿಷ್ಟೂ ಇರುವುದಿಲ್ಲ. ಹೀಗೆ ಕೃತಯುಗದಲ್ಲಿ ಧರ್ಮಪೂರ್ಣವಾಗಿರುತ್ತದೆ.

ತ್ರೇತಾಯುಗದಲ್ಲಿ ಧರ್ಮ ಮೂರು ಪಾದಗಳಿಂದ ಇರುತ್ತದೆ. ದ್ವಾಪರದಲ್ಲಿ ಎರಡು ಪಾದಗಳಿಂದ, ಕಲಿಯುಗದಲ್ಲಿ ಒಂದೇ ಪಾದದಿಂದ ಇದ್ದು ಕೊನೆಯಲ್ಲಿ ಪೂರ್ಣನಾಶ ಹೊಂದುತ್ತದೆ.

ನಾರದ, ಒಂದು ವಾರದಲ್ಲಿ ಏಳು ದಿನಗಳು, ತಿಥಿಗಳು ಒಟ್ಟು ಹದಿನಾರು. ಮಾಸಗಳು ಹನ್ನೆರಡು, ಋತುಗಳು ಆರು. ಪಕ್ಷಗಳು ಎರಡು. ಅಯನಗಳು ಎರಡು. ನಾಲ್ಕು ಪ್ರಹರಗಳಿಂದ ಒಂದು ಹಗಲಾಗುತ್ತದೆ. ಹಾಗೇ ನಾಲ್ಕು ಪ್ರಹರಗಳಿಂದ ಒಂದು ರಾತ್ರಿಯಾಗುತ್ತದೆ. ಹೀಗೆ ಮೂವತ್ತು ದಿನಗಳಿಂದ ಒಂದು ಮಾಸ. ಮೂನ್ನೂರ ಆರವತ್ತು ದಿನಗಳು ಮಾನವರಿಗೆ ಒಂದು ವರ್ಷ. ಹಾಗೆಯೆ ಮಾನವರ ಮುನ್ನೂರ ಅರವತ್ತು ಯುಗಗಳು ದೇವತೆಗಳಿಗೆ ಒಂದು ಯುಗ. ನಾಲ್ಕು ದಿವ್ಯಯುಗಗಳು ಒಂದು ದಿವ್ಯ ಮಹಾಯುಗ. ಎಪ್ಪತ್ತೊಂದು ದಿವ್ಯ ಮಹಾಯುಗ ಒಂದು ಮನ್ವಂತರ. ಅದು ಒಂದು ಇಂದ್ರನ ಅಧಿಕಾರ ಕಾಲ. ಇಂಥ ಇಪ್ಪತ್ತೆಂಟು ಇಂದ್ರಕಾಲ ಪೂರ್ಣವಾದಾಗ ಬ್ರಹ್ಮನಿಗೆ ಒಂದು ದಿನ. ಬ್ರಹ್ಮನ ನೂರೆಂಟು ವರ್ಷಗಳು ಪೂರ್ಣವಾದಾಗ ಅವನಿಗೆ ಲಯವಾಗುತ್ತದೆ. ಇದು ಪ್ರಾಕೃತ ಪ್ರಳಯ. ಆಗ ಬ್ರಹ್ಮಾಂಡ ನಾಶವಾಗುವುದು. ಬ್ರಹ್ಮಾದಿ ದೇವತೆಗಳೂ ಮುನಿಗಳೂ ಎಲ್ಲ ಜೀವಿಗಳೂ ಕೃಷ್ಣನ ಉದರದಲ್ಲಿ ಲೀನರಾಗುವರು. ಪ್ರಕೃತಿಯೂ ಕೃಷ್ಣನಲ್ಲಿ ಲೀನ-ಳಾಗುವುದರಿಂದ ಇದು ಪ್ರಾಕೃತಿಕ ಲಯವೆನಿಸುವುದು. ಈ ಪ್ರಾಕೃತಿಕ ಲಯಕಾಲ ಕೃಷ್ಣನಿಗೆ ಒಂದು ನಿಮಿಷ ಮಾತ್ರ.

ಪ್ರಾಕೃತಿಕ ಲಯದಲ್ಲಿ ಸಮಸ್ತ ಬ್ರಹ್ಮಾಂಡ ಲಯವಾದರೂ ಗೋಲೋಕ ವೈಕುಂಠಗಳು ಮಾತ್ರ ಅವಿನಾಶಿಯಾಗಿರುವುವು. ಈ ಪ್ರಳಯದ ಅನಂತರ ಪುನಃ ಸೃಷ್ಟಿಯಾಗುವುದು. ಹೀಗೆ ಸೃಷ್ಟಿ ಪ್ರಳಯ ಅನಾದಿಯಿಂದ ಅನಂತ ಕಾಲದವರೆಗೂ ಎಷ್ಟುಸಾರಿ ಆಗುವುದೊ ಎಂಬುದನ್ನು ಲೆಕ್ಕಿಸಲು ಯಾರಿಂದಲೂ ಶಕ್ಯವಿಲ್ಲ. ಆ ಎಲ್ಲ ಸೃಷ್ಟಿಗಳ ಬ್ರಹ್ಮಾಂಡಗಳಿಗೂ ಕೃಷ್ಣನೊಬ್ಬನೆ ಅಧಿಪತಿ, ಸರ್ವಾಂತರ್ಯಾಮಿ. ಬ್ರಹ್ಮವಿಷ್ಣು ಮಹೇಶ್ವರ ಮಹಾವಿರಾಟ್ ಪುರುಷ ಕ್ಷುದ್ರ ವಿರಾಟ್ ಪುರುಷ ಇವರೆಲ್ಲ ಕೃಷ್ಣನ ಅಂಶಭೂತರು.

ಕೃಷ್ಣನ ಅನುಗ್ರಹದಿಂದಲೆ ಬ್ರಹ್ಮ ಸೃಷ್ಟಿ ಮಾಡುತ್ತಾನೆ. ಶಿವನು ಸಂಹಾರ ಮಾಡುತ್ತಾನೆ. ಪ್ರಕೃತಿ ಸರ್ವಶಕ್ತಳಾಗಿರುವುದು, ಸಾವಿತ್ರಿ ವೇದಾಧಿದೇವತೆಯಾಗಿರುವುದು, ಸರಸ್ವತಿ ವಿದ್ಯಾಧಿದೇವತೆಯಾಗಿರುವುದು, ಮಹಾಲಕ್ಷ್ಮಿ ಧನಾಧಿ ದೇವತೆಯಾಗಿರುವುದು, ದುರ್ಗೆ ಸರ್ವಜ್ಞಳಾಗಿ ಸರ್ವವಂದ್ಯೆಯಾಗಿರುವುದು, ರಾಧೆ ಕೃಷ್ಣನ ಪ್ರೇಮಾಧಿ ದೇವತೆಯಾಗಿರುವುದು ಮತ್ತು ಸರ್ವಾಧಿಕ ರೂಪ ಸೌಭಾಗ್ಯ ಶಾಲಿನಿಯಾಗಿ ಕೃಷ್ಣನ ವಕ್ಷಃಸ್ಥಳವನ್ನಾಶ್ರಯಿಸಿದುದು ಎಲ್ಲವೂ ಕೃಷ್ಣನ ಸೇವೆಯ ಫಲ. ರಾಧೆ ಹಿಂದೆ ಶತಶೃಂಗ ಪರ್ವತದಲ್ಲಿ ಆಹಾರವಿಲ್ಲದೆ ದಿವ್ಯ ಸಹಸ್ರ ಯುಗಗಳ ಕಾಲ ತಪಸ್ಸು ಮಾಡಿದ್ದಳು. ದುರ್ಗೆಯೂ ಹಿಮಾಲಯ ಪರ್ವತದಲ್ಲಿ ದಿವ್ಯ ಸಹಸ್ರ ವರ್ಷಕಾಲ ತಪಸ್ಸು ಮಾಡಿ ಸರ್ವಪೂಜ್ಯಳೆನಿಸಿದಳು. ಸರಸ್ವತಿ ಗಂಧ ಮಾದನ ಪರ್ವತದಲ್ಲಿ ದಿವ್ಯ ಲಕ್ಷವರ್ಷಕಾಲ ತಪಸ್ಸು ಮಾಡಿ ಸರ್ವವಂದ್ಯಳೆನಿಸಿದಳು. ಲಕ್ಷ್ಮಿ ನೂರು ದಿವ್ಯ ಯುಗಕಾಲ ಪುಷ್ಕರದಲ್ಲಿ ತಪಸ್ಸುಮಾಡಿ ಸರ್ವಸಂಪದ್ದಾತ್ರಿ ಎನಿಸಿದಳು. ಸಾವಿತ್ರಿ ಮಲಯ ಪರ್ವತದಲ್ಲಿ ಅರವತ್ತು ಸಾವಿರ ದಿವ್ಯವರ್ಷಕಾಲ ತಪಸ್ಸು ಮಾಡಿ ದ್ವಿಜರಿಗೆ ವಂದ್ಯಳಾದಳು. ಶಿವನೂ ಬ್ರಹ್ಮನೂ ತಮ್ಮ ತಮ್ಮ ಪದವಿಯನ್ನು ಹೊಂದಲು ನೂರು ಮನ್ವಂತರಗಳ ಕಾಲ ತಪಸ್ಸು ಮಾಡಿದ್ದರು. ಹಾಗೆಯೆ ವಿಷ್ಣುವೂ ಧರ್ಮನೂ ನೂರು ಮನ್ವಂತರ ತಪಸ್ಸು ಮಾಡಿದರು. ಆದಿಶೇಷ ದೇವೇಂದ್ರ ಸೂರ್ಯಚಂದ್ರ ಬೃಹಸ್ಪತಿಗಳೂ ಒಂದು ಮನ್ವಂತರಕಾಲ ತಪಸ್ಸು ಮಾಡಿದ್ದರು. ವಾಯುವೂ ನೂರು ದಿವ್ಯಯುಗಗಳ ಕಾಲ ತಪಸ್ಸು ಮಾಡಿಯೆ ಸರ್ವಪ್ರಾಣ ಸ್ವರೂಪನಾದ. ಹೀಗೆಯೆ ಎಲ್ಲ ದೇವತೆಗಳೂ ಮುನಿಗಳೂ ಮಾನವರೂ ತಪಸ್ಸು ಮಾಡಿಯೆ ಪೂಜ್ಯರೆನಿಸಿದರು.

ನಾರದ, ನಾನು ಗುರುಮುಖದಿಂದ ತಿಳಿದ ಪುರಾಣವನ್ನು ನಿನಗೆ ಉಪದೇಶಿದ್ದೇನೆ. ಇನ್ನೇನು ಕೇಳಬಯಸುವಿ ?

**ಇಲ್ಲಿಗೆ ಶ್ರೀ ಬ್ರಹ್ಮವೈವರ್ತ ಮಹಾಪುರಾಣದಲ್ಲಿ ಎರಡನೆಯದಾದ ಪ್ರಕೃತಿಖಂಡದ ನಾರದನಾರಾಯಣ ಸಂವಾದದಲ್ಲಿ ಯುಗತನ್ಮಾಹಾತ್ಮ್ಯ-ಮನ್ವಂತರ ಕಾಲ-ಈಶ್ವರಗುಣ ನಿರೂಪಣವೆಂಬ ಏಳನೆ ಅಧ್ಯಾಯ ಮುಗಿಯಿತು.**

## ಪೃಥಿವೀ ಉಪಾಖ್ಯಾನ ಪೃಥಿವೀ ಸ್ತೋತ್ರ

ಅಧ್ಯಾಯ-೮

ನಾರದ— ಪ್ರಭು, ಹರಿಯು ಒಮ್ಮೆ ರೆಪ್ಪೆ ಹೊಡೆಯುವಷ್ಟು ಕಾಲದಲ್ಲಿ ಬ್ರಹ್ಮನಿಗೆ ಲಯವಾಗುವುದು, ಇದು ಪ್ರಾಕೃತಿಕ ಲಯ. ಇದರಲ್ಲಿ ವಿಶ್ವವೆಲ್ಲ ಕೃಷ್ಣನಲ್ಲಿ ಲೀನವಾಗುವುದು, ವಸುಂಧರೆ ಕಣ್ಮರೆಯಾಗುವವಳು ಎಂದೆಯಲ್ಲ ? ಕಣ್ಮರೆಯಾದ ಆ ದೇವಿ ವಸುಂಧರೆ ಲಯಕಾಲದಲ್ಲಿ ಎಲ್ಲಿ ಇರುವಳು ? ಸೃಷ್ಟಿಕಾಲದಲ್ಲಿ ಹೇಗೆ ಆವಿರ್ಭವಿಸುವಳು ?

ನಾರಾಯಣ— ಆದಿಸೃಷ್ಟಿಯಲ್ಲಿ ಸಮಸ್ತವೂ ಕೃಷ್ಣನಿಂದಲೆ ಸೃಷ್ಟವಾಯಿತೆಂದು ಶ್ರುತಿ ಹೇಳುತ್ತಿದೆ. ಈಗ ಅತ್ಯಂತ ಮಂಗಳಕರವಾದ ಭೂದೇವಿಯ ಉತ್ಪತ್ತಿಯ ಬಗ್ಗೆ ಹೇಳುತ್ತೇನೆ.

ಭೂಮಿ ಮಧುಕೈಟಭರ ಮೇದಸ್ಸಿನಿಂದಾಯಿತೆಂದು ಕೆಲವರು ಹೇಳುತ್ತಾರೆ. ಇದು ಆಶ್ಚರ್ಯ. ಏಕೆಂದರೆ ಮಧುಕೈಟಭರು ಯುದ್ಧಪರಾಕ್ರಮದಿಂದ ವಿಷ್ಣುವನ್ನು ಸಂತೋಷಗೊಳಿಸಿ 'ಭೂಮಿ ನೀರಿನಿಂದ ಆವೃತವಾಗದಿರುವೆಡೆ ನೀನು ನಮ್ಮನ್ನು ಕೊಲ್ಲಬಹುದು' ಎಂದರಂತೆ. ಹಾಗಾದರೆ ಅವರಿಬ್ಬರು ಬದುಕಿದ್ದ ಕಾಲದಲ್ಲಿಯೆ ಭೂಮಿದೇವಿ ಇದ್ದಳೆಂಬುದು ಸ್ಪಷ್ಟ. ಅವರಿಬ್ಬರ ಮರಣಾನಂತರ ಸಿಗುವ ಅವರ ಮೇದಸ್ಸಿನಿಂದ ಭೂಮಿಯ ಉತ್ಪತ್ತಿ ಹೇಗೆ ಸಾಧ್ಯ ? ಮೇದಸ್ಸಿನಿಂದ ಜನಿಸಿದ ಕಾರಣ ಮೇದಿನಿ ಎಂದು ಭೂಮಿಗೆ ಹೆಸರು ಎನ್ನುವುದೂ ಹೇಗೆ ಸಾಧ್ಯ ? ಆದ್ದರಿಂದ ಪ್ರಳಯ ಜಲದಿಂದ ತೊಯ್ದು ಕೃಶಳಾಗಿದ್ದ ಭೂಮಿ ಮಧುಕೈಟಭರ ಮೇದಸ್ಸಿನಿಂದ ತಿರುಗಿ ಪುಷ್ಟಳಾಗಿ ಮೇದಿನಿ ಎನಿಸಿದಳೆಂದೇ ಹೇಳಬೇಕು. ಆ ಭೂಮಿಯ ಜನ್ಮವೃತ್ತಾಂತವನ್ನು ನಾನು ಹೇಳುತ್ತೇನೆ. ಧರ್ಮಪುರುಷನ ಮುಖದಿಂದ ಪುಷ್ಕರ ಕ್ಷೇತ್ರದಲ್ಲಿ ನಾನು ಕೇಳಿದ ಸರ್ವಸಮ್ಮತವಾದ ಆವೃತ್ತಾಂತವನ್ನು ಈಗ ಹೇಳುತ್ತೇನೆ.

ಮಹಾವಿರಾಟ್ ಪುರುಷ ಜಲದಲ್ಲಿ ಬಹುಕಾಲವಿದ್ದಾಗ ಅವನ ಮೈಯ ರೋಮಕೂಪಗಳಲ್ಲಿ ಮಲದಂತಿದ್ದು ಹಿಂದೆ ಜಲದಲ್ಲಿ ತಿರೋಭೂತವಾಗಿದ್ದ ವಸುಂಧರೆ ಈಗ ಆವಿರ್ಭೂತಳಾದಳು. ಸಪ್ತಸಾಗರ ಸಪ್ತದ್ವೀಪಗಳಿಂದ ಶೈಲ ಕಾನನ-ಗಳಿಂದ ಹಿಮಾಲಯ ಮೇರು ಪರ್ವತಗಳಿಂದ ಚಂದ್ರಸೂರ್ಯಗ್ರಹಗಳಿಂದ ಪುಣ್ಯ ತೀರ್ಥಯುಕ್ತವಾದ ಭಾರತ ಭೂಮಿಯಿಂದ ಸ್ವರ್ಣಭೂಮಿಯಿಂದ ಏಳು ಪಾತಾಳ-ಲೋಕಗಳಿಂದ ಏಳು ಊರ್ಧ್ವಲೋಕಗಳಿಂದ ಧ್ರುವಲೋಕದಿಂದ ಯುಕ್ತವಾಗಿದ್ದು ಬ್ರಹ್ಮವಿಷ್ಣು ಶಿವಾದಿಗಳಿಂದಲೂ ಪ್ರಶಂಸಿಸಲ್ಪಡುವ ವಸುಂಧರೆ ಆವಿರ್ಭೂತಳಾದಳು. ವರಾಹರೂಪಿ ಹರಿಗೆ ಪತ್ನಿಯಾದಳು. ಇದು ಶ್ರುತಿಸಮ್ಮತವಾದ ವೃತ್ತಾಂತ. ವರಾಹಕಲ್ಪದಲ್ಲಿ ದೇವಿ, ದೇವ ಋಷಿ ಮನು ಗಂಧರ್ವಾದಿಗಳಿಂದ ಪೂಜಿತಳಾದಳು. ಆದಿವರಾಹನಿಂದ ಮಂಗಳನೆಂಬ ಪುತ್ರನನ್ನೂ ಪಡೆದಳು.

ನಾರದ— ಪ್ರಭು, ದೇವಿ ವಸುಂಧರೆಯನ್ನು ದೇವತೆಗಳು ಹೇಗೆ ಪೂಜಿಸಿದರು ? ಪೂಜಾವಿಧಾನವೇನು ? ಮತ್ತು ಮಂಗಲನ ಜನ್ಮವೃತ್ತಾಂತವೇನು, ಹೇಳು.

ನಾರಾಯಣ— ವರಾಹಕಲ್ಪದಲ್ಲಿ ಬ್ರಹ್ಮನ ಪ್ರಾರ್ಥನೆಯಂತೆ ವರಾಹರೂಪಿ ಹರಿ ಹಿರಣ್ಯಾಕ್ಷನನ್ನು ವಧಿಸಿ ರಸಾತಲದಲ್ಲಿ ಅಡಗಿದ್ದ ಭೂಮಿಯನ್ನು ಮೇಲೆತ್ತಿದ್ದ. ಆಗ ಬ್ರಹ್ಮಾಂಡ ಜಲದಿಂದಾವೃತವಾಗಿತ್ತು. ನೀರಮೇಲೆ ತೇಲುವ ತಾವರೆ ಎಲೆಯಂತೆ ಭೂಮಿಯನ್ನು ಆ ಜಲದ ಮೇಲೆ ತೇಲಿ ಬಿಟ್ಟ. ಅನಂತರ ಬ್ರಹ್ಮ ಆ ಭೂಮಿಯ ಮೇಲೆ ಎಲ್ಲವನ್ನೂ ಸೃಷ್ಟಿಸಿದ. ಭೂದೇವಿ ತನ್ನನ್ನು ಮೇಲೆತ್ತಿದ್ದ ವರಾಹ ಮೂರ್ತಿ-ಯನ್ನು ಕಾಮಿಸಿದಳು. ಕೋಟಿ ಸೂರ್ಯ ಸಮಪ್ರಭನಾದ ವರಾಹಮೂರ್ತಿ ಮನೋಹರ ರೂಪುತಳೆದು ಮನೋಹರವಾದ ಶಯ್ಯೆಯನ್ನೂ ಸಿದ್ಧಪಡಿಸಿ ದೇವಿ-ಯೊಂದಿಗೆ ಒಂದು ದಿವ್ಯ ವರ್ಷ ಹಗಲು ರಾತ್ರಿ ಎನ್ನದೆ ನಿರಂತರವಾಗಿ ರಮಿಸಿದ. ಪರಮಾತ್ಮನ ಶರೀರದ ಸುಖಸ್ಪರ್ಶದಿಂದ ದೇವಿ ಮೂರ್ಛೆಗೊಂಡಳು. ಒಂದು ವರ್ಷಕಳೆದಾಗ ಹರಿ ಪೂರ್ವರೂಪ ತಳೆದು ದೇವಿಯನ್ನು ಧೂಪ ದೀಪ ನೈವೇದ್ಯ ಸಿಂದೂರ ಗಂಧವಸ್ತ್ರ ಪುಷ್ಪಾದಿಗಳಿಂದ ಪೂಜಿಸಿದ. ಹೀಗೆ ವರವನ್ನೂ ಕೊಟ್ಟ- 'ದೇವಿ, ನೀನು ಸರ್ವಾಧಾರಳೆನಿಸು. ಸರ್ವರಿಂದ ಪೂಜಿತಳಾಗು. ಕಾಲುವೆಗಳಿಂದ ನೀರು ಬಿಟ್ಟುಕೊಳ್ಳುವಾಗ, ಮನೆ ಕಟ್ಟಲು ಆರಂಭಿಸುವಾಗ, ಗೃಹಪ್ರವೇಶ ಮಾಡುವಾಗ, ಕೆರೆಬಾವಿ ಕಟ್ಟಲು ಆರಂಭಿಸುವಾಗ ಕೃಷಿಕರ್ಮದ ಪ್ರಾರಂಭದಲ್ಲಿ ನಿನ್ನ ಪೂಜೆಯನ್ನು ದೇವತೆಗಳು ಮುಂತಾದವರೆಲ್ಲ ಮಾಡುವರು. ಮಾಡದಿರುವ ಮೂಢರು ನರಕ ಭಾಗಿಗಳಾಗುವರು.

ಭೂದೇವಿ— ನಿನ್ನಾಜ್ಞೆಯಂತೆ ನಾನು ಲೀಲಾಮಾತ್ರದಿಂಧ ಸಮಸ್ತ ಚರಾಚರ ವಿಶ್ವವನ್ನು ಧರಿಸುವೆನು. ಆದರೆ ಮುತ್ತು, ಮುತ್ತಿನ ಚಿಪ್ಪು, ಹರಿಯ ವಿಗ್ರಹ, ಶಿವಲಿಂಗ, ಶಂಖ, ದೀಪ, ರತ್ನ, ಮಾಣಿಕ್ಯ, ವಜ್ರ, ಯಜ್ಞೋಪವೀತ, ಪುಷ್ಪ, ಪುಸ್ತಕ, ತುಲಸೀದಲ, ಜಪಮಾಲೆ, ಹೂಮಾಲೆ, ಕರ್ಪೂರ, ಬಂಗಾರ, ಗೋರೋಚನ, ಚಂದನ ಶಾಲಿ, ಗ್ರಾಮತೀರ್ಥ ಇವಿಷ್ಟನ್ನು ಮಾತ್ರ ಧರಿಸಲು ನಾನು ಅಶಕ್ತಳು.

ವರಾಹ— ಈ ವಸ್ತುಗಳನ್ನು ಬರಿ ನೆಲದ ಮೇಲಿಡುವ ಮೂಢರು ನೂರುದಿವ್ಯವರ್ಷಕಾಲ ಕಾಲಸೂತ್ರನರಕದಲ್ಲಿ ಬಿದ್ದು ತೊಳಲುವರು.

ಭಗವಂತನು ಹೀಗೆ ಹೇಳಿ ಸುಮ್ಮನಾದ. ಭೂದೇವಿಯ ಗರ್ಭದಿಂದ ಮಂಗಳಗ್ರಹ ಜನಿಸಿದ. ದೇವತೆಗಳೆಲ್ಲರೂ ಹರಿಯಾಜ್ಞೆಯಂತೆ ಕಣ್ವ ಶಾಖೋಕ್ತ ಕ್ರಮದಿಂದ ಭೂದೇವಿಯನ್ನು ಸ್ತುತಿಸಿದರು. ಮೂಲಮಂತ್ರದಿಂದ ನೈವೇದ್ಯಾದಿ-ಗಳನ್ನು ಅರ್ಪಿಸಿದರು. ಅಂದಿನಿಂದ ದೇವಿ ಮೂಲೋಕದಲ್ಲಿ ಪೂಜ್ಯಳೆನಿಸಿದಳು.

ನಾರದ— ಭೂದೇವಿಯ ಧ್ಯಾನ ಸ್ತೋತ್ರ ಮೂಲಮಂತ್ರಗಳೆಲ್ಲ ಪುರಾಣಗಳಲ್ಲಿ ನಿಗೂಢವಾಗಿವೆ. ಅವನ್ನು ಕೇಳಬೇಕೆಂದು ನನಗೆ ಆಸೆಯಾಗಿದೆ.

ನಾರಾಯಣ— ಮೊದಲಿಗೆ ದೇವಿಯನ್ನು ವರಾಹ ಪೂಜಿಸಿದ. ಬಳಿಕ ಬ್ರಹ್ಮ ಪೂಜಿಸಿದ. ಪೃಥುಚಕ್ರವರ್ತಿ ಮುನಿಗಳು ಮನುಗಳು ಪೂಜಿಸಿದರು. ಧ್ಯಾನ ಸ್ತೋತ್ರ ಮಂತ್ರಗಳನ್ನು ಹೇಳುತ್ತೇನೆ ಕೇಳು.

'ಓಂ ಹ್ರೀಂ ಕ್ಲೀಂ ಶ್ರೀಂ ವಾಂ ವಸುಧಾಯ್ಯೆ ಸ್ವಾಹಾ' ಎಂಬ ಮಂತ್ರದಿಂದ ವರಾಹ ಭೂದೇವಿಯನ್ನು ಪೂಜಿಸಿದ.

**ಶ್ವೇತ ಚಂಪಕ ವರ್ಣಾಭಾಂ ಶತಚಂದ್ರಸಮಪ್ರಭಾಂ ।**
**ಚಂದನೋಕ್ಷಿತ ಸರ್ವಾಂಗೀಂ ಸರ್ವಭೂಷಣ ಭೂಷಿತಾಂ ॥**

**ರತ್ನಾಧಾರಾಂ ರತ್ನಗರ್ಭಾಂ ರತ್ನಾಕರ ಸಮನ್ವಿತಾಂ ।**
**ವಹ್ನಿಶುದ್ಧಾಂಶುಕಾಧಾನಾಂ ಸ್ಮಿತಾಂ ವಂದಿತಾಂ ಭಜೇ ॥**

ಬಿಳಿ ಸಂಪಿಗೆಯಂಥ ಮೈಬಣ್ಣ, ನೂರು ಚಂದ್ರರ ಕಾಂತಿ, ಚಂದನ ಲಿಪ್ತ ಅಂಗಾಂಗಗಳು ಎಲ್ಲ ಬಗೆಯ ಆಭರಣಗಳ ಅಲಂಕಾರ ಇವುಗಳಿಂದ ಕೂಡಿದ್ದು ಬೆಂಕಿಯಂತೆ ಶುದ್ಧವಾದ ಬಟ್ಟೆ ಉಟ್ಟುಕೊಂಡು ನಗುಮೊಗದಿಂದಿರುವ ಭೂದೇವಿ ರತ್ನಗಳಿಗೆ ಆಧಾರಳು, ರತ್ನಗರ್ಭಳು, ರತ್ನಾಕರನಾದ ಸಮುದ್ರದಿಂದ ಕೂಡಿದವಳು ಎಲ್ಲರಿಂದ ವಂದಿತಳು. ಅವಳನ್ನು ನಾನು ಭಜಿಸುವೆನು.

ಹೀಗೆ ಧ್ಯಾನ ಮಾಡಿ ಎಲ್ಲರೂ ಭೂದೇವಿಯನ್ನು ಪೂಜಿಸಬೇಕು. ಕಣ್ವಶಾಖೋಕ್ತವಾದ ಸ್ತೋತ್ರವನ್ನೂ ಹೇಳುತ್ತೇನೆ ಕೇಳು-

ವಿಷ್ಣುರುವಾಚ-

**ಯಜ್ಞಸೂಕರ ಜಾಯಾ ತ್ವಂ ಜಯಂ ದೇಹಿ ಜಯಾವಹೇ ।**
**ಜಯೇ ಜಯೇ ಜಯಾಧಾರೇ ಜಯಶೀಲೇ ಜಯಪ್ರದೇ ।**
**ಸರ್ವಾಧಾರೇ ಸರ್ವಬೀಜೇ ಸರ್ವಶಕ್ತಿ ಸಮನ್ವಿತೇ ।**
**ಸರ್ವಕಾಮಪ್ರದೇ ದೇವಿ ಸರ್ವೇಷ್ಟಂ ದೇಹಿ ಮೇ ಸ್ಥಿರೇ ।**
**ಸರ್ವಸಸ್ಯಾಲಯೇ ಸರ್ವ ಸಸ್ಯಾಢ್ಯೇ ಸರ್ವಸಸ್ಯದೇ ।**
**ಸರ್ವಸಸ್ಯ ಹರೇ ಕಾಲೇ ಸರ್ವಸಸ್ಯಾತ್ಮಿಕೇ ಕ್ಷಿತೇ ।**
**ಮಂಗಲೇ ಮಂಗಲಾಧಾರೇ ಮಾಂಗಲ್ಯೇ ಮಂಗಲಪ್ರದೇ ।**
**ಮಂಗಲಾರ್ಥೇ ಮಂಗಲಾಂಶೇ ಮಂಗಲಂ ದೇಹಿ ಮೇ ಪರಂ ।**
**ಭೂಮೇ ಭೂಮಿಪ ಸರ್ವಸ್ವೇ ಭೂಮಿಪಾಲ ಪರಾಯಣೇ**
**ಭೂಮಿಪಾಹಂಕಾರರೂಪೇ ಭೂಮಿಂ ದೇಹಿ ವಸುಂಧರೇ ॥**

'ಯಜ್ಞವರಾಹನ ಪತ್ನಿ ನೀನು ನನಗೆ ಜಯನೀಡು. ನೀನು ಜಯಕಾರಣಳು ಜಯ ಪಡೆದವಳು, ಪರಾಜಯ ವಿಲ್ಲದವಳು, ಜಯಕ್ಕೆ ಆಧಾರಳು, ಜಯ ಹೊಂದುವ ಸ್ವಭಾವದವಳು, ಜಯ ನೀಡುವವಳು.

ಸರ್ವಾಧಾರಳು, ಸರ್ವಕಾರಣಳು, ಸರ್ವಶಕ್ತಳು, ಸರ್ವಾಭೀಷ್ಟದಾಯಕಳು. ಇಂಥ ದೇವಿ ನೀನು ನನಗೆ ಸರ್ವಾಭೀಷ್ಟ ನೀಡು.

ಸರ್ವಸಸ್ಯಾಧಾರಳು ಸರ್ವಸಸ್ಯ ಸಂಪನ್ನಳು ಸರ್ವಸಸ್ಯದಾಯಕಳು ಅಧರ್ಮ-ಕಾಲದಲ್ಲಿ ಸಸ್ಯಗಳನ್ನೆಲ್ಲ ನುಂಗುವವಳು ಸರ್ವಸಸ್ಯಾಧಿದೇವತೆ, ಇಂಥ ನೀನು ನನಗೆ ಸರ್ವಾಭೀಷ್ಟ ನೀಡು.

ಮಂಗಲ ಸ್ವರೂಪಳು, ಮಂಗಳಾಧಾರಳು, ಮಂಗಲಯೋಗ್ಯಳು, ಮಂಗಲ-ಪ್ರದಳು, ಮಂಗಲಕರ ಸಂಪತ್ತುಳ್ಳವಳು, ಮಂಗಲಾಂಗಿ, ಇಂಥ ನೀನು ನನಗೆ ಮಂಗಳವನ್ನು ನೀಡು.

ರಾಜರುಗಳ ಸರ್ವಸ್ವ ನೀನು. ರಾಜರನ್ನಾಶ್ರಯಿಸುವವಳು, ರಾಜರ ಹೆಮ್ಮೆಯ ವಸ್ತು, ರತ್ನಧಾರಕಳು, ನೀನು ನನಗೆ ಭೂಮಿ ನೀಡು.'

-ಈ ಸ್ತೋತ್ರ ಮಹಾಪುಣ್ಯಕರ. ಭೂದೇವಿಯನ್ನು ಪೂಜಿಸಿ ಈ ಸ್ತೋತ್ರ ಪಠಿಸುವವನಿಗೆ ಕೋಟಿಜನ್ಮಗಳಲ್ಲಿ ಭೂಪತಿತ್ವ ಲಭಿಸುವುದು. ಕೇವಲ ಪಠನದಿಂದ ಭೂಮಿದಾನ ಮಾಡಿದ ಪುಣ್ಯ. ದತ್ತಾಪಹಾರದ ಪಾಪದಿಂದ ಮುಕ್ತಿ. ಆರ್ದ್ರಾ-ನಕ್ಷತ್ರದಲ್ಲಿ ಸೂರ್ಯನಿರುವಾಗ ನೆಲ ಅಗೆದ ಪಾಪ, ಅನ್ಯರ ಬಾವಿಯಲ್ಲಿ ಸ್ನಾನಮಾಡಿದ ಪಾಪ, ಅನ್ಯರ ಭೂಮಿಯಲ್ಲಿ ಶ್ರಾದ್ಧ ಮಾಡಿದ ಪಾಪ, ಭೂಮಿಯಲ್ಲಿ ವೀರ್ಯತ್ಯಾಗ ಮಾಡಿದ ಪಾಪ, ದೀಪವನ್ನು ನೆಲದ ಮೇಲಿಟ್ಟ ಪಾಪ -ಈ ಎಲ್ಲ ಪಾಪಗಳೂ ಪರಿಹಾರವಾಗುತ್ತವೆ. ನೂರು ಅಶ್ವಮೇಧ ಯಾಗ ಮಾಡಿದ ಪುಣ್ಯವೂ ಲಭಿಸುತ್ತದೆ.

**ಇಲ್ಲಿಗೆ ಶ್ರೀ ಬ್ರಹ್ಮವೈವರ್ತ ಮಹಾಪುರಾಣದಲ್ಲಿ ಎರಡನೆಯದಾದ ಪ್ರಕೃತಿಖಂಡದ ನಾರದನಾರಾಯಣ ಸಂವಾದದಲ್ಲಿ ಪೃಥಿವ್ಯುಪಾಖ್ಯಾನದಲ್ಲಿ ಪೃಥೀಸ್ತೋತ್ರವೆಂಬ ಎಂಟನೆ ಅಧ್ಯಾಯ ಮುಗಿಯಿತು.**

## ಭೂದಾನದ ಮಹಿಮೆ ಭೂದೇವಿಯ ಹೆಸರುಗಳ ಅರ್ಥ ವಿವರಣೆ

**ಅಧ್ಯಾಯ-೯**

**ನಾರದ—** ಭೂಮಿ-ದಾನದಿಂದ-ಬರುವ ಪುಣ್ಯದ-ಬಗ್ಗೆ ಹೇಳು. ಭೂಮಿಯನ್ನು ಅಪಹಾರ ಮಾಡುವುದು ಅನ್ಯರ ಭೂಮಿಯಲ್ಲಿ ಶ್ರಾದ್ಧ ಮಾಡುವುದು, ಅನ್ಯರ ಬಾವಿಯಲ್ಲಿ ಸ್ನಾನ ಮಾಡುವುದು ಆರ್ದ್ರಾನಕ್ಷತ್ರದಲ್ಲಿ ಸೂರ್ಯನಿರುವಾಗ ನೆಲ ಅಗೆಯುವುದು ನೆಲದ ಮೇಲೆ ವೀರ್ಯತ್ಯಾಗ ಮಾಡುವುದು. ದೀಪಾದಿ-ಗಳನ್ನಿಡುವುದು ಇತ್ಯಾದಿ ಪಾಪಗಳು ಮತ್ತು ಅವುಗಳ ಪರಿಹಾರ ಕ್ರಮಗಳನ್ನು ಹೇಳು.

**ನಾರಾಯಣ—** ಒಂದು ಗೇಣು ನೆಲವನ್ನಾದರೂ ಭಾರತ ಭೂಮಿಯಲ್ಲಿ ಸಂಧ್ಯಾವಂದನದಿಂದ ಪವಿತ್ರನಾದ ವಿಪ್ರನಿಗಿತ್ತರೆ ವಿಷ್ಣುಲೋಕ ದೊರಕುವುದು. ಸಸ್ಯಪೂರ್ಣವಾದ ಹೊಲವನ್ನು ದಾನ ಮಾಡಿದರೆ ಆ ನೆಲದಲ್ಲಿ ಎಷ್ಟು ದೂಳಿನ ಕಣಗಳಿವೆಯೋ ಅಷ್ಟುವರ್ಷ ವಿಷ್ಣುಲೋಕ ವಾಸ ಲಭಿಸುವುದು. ಗ್ರಾಮ ಭೂಮಿ ಧಾನ್ಯಗಳನ್ನು ಕೊಡುವವನೂ ಕೊಳ್ಳುವವನೂ ವೈಕುಂಠವನ್ನು ಹೊಂದುವರು. ಭೂಮಿದಾನವನ್ನು ಅನುಮೋದಿಸುವ ಸಜ್ಜನನೂ ಬಂಧು ಮಿತ್ರರ ಸಹಿತನಾಗಿ ವೈಕುಂಠಕ್ಕೆ ಹೋಗುವನು. ತನ್ನಿಂದ ಅಥವಾ ಇನ್ನೊಬ್ಬರಿಂದ ದತ್ತವಾದ ಬ್ರಹ್ಮಸ್ವವನ್ನು ಅಪಹರಿಸಿದರೆ ಚಂದ್ರಸೂರ್ಯರಿರುವಷ್ಟು ಕಾಲ ಕಾಲಸೂತ್ರನರಕವಾಸ. ಮತ್ತು ಅವನ ಮಕ್ಕಳು ಮೊಮ್ಮಕ್ಕಳು ಮುಂತಾದವರೂ ಭೂಮಿ ಇಲ್ಲದವರಾಗಿ ದರಿದ್ರರಾಗಿ ಸುಖಹೀನರಾಗುವರು, ಕೊನೆಯಲ್ಲಿ ರೌರವ ನರಕಕ್ಕೆ ಹೋಗುವರು. ಹಸುಗಳು ಮೇಯುವ ಗೋಮಾಳಗಳಲ್ಲಿ ಉತ್ತು ಬೆಳೆ ಮಾಡುವವ ನೂರು ದಿವ್ಯ ವರ್ಷಕಾಲ ಕುಂಭೀಪಾಕದಲ್ಲಿ ಬೀಳುತ್ತಾನೆ. ದವಗಳ ಕೊಟ್ಟಿಗೆ ಕೆರೆಯಂಗಳ ಮಾರ್ಗಗಳಲ್ಲಿ ಉತ್ತು ಬೆಳೆ ಮಾಡುವವ ಹದಿನಾಲ್ಕು ಇಂದ್ರರ ಕಾಲ ಅಸಿಪತ್ರ ನರಕದಲ್ಲಿ ಬೀಳುವನು. ಐದು ಹಿಡಿ ಮಣ್ಣನ್ನು ಎತ್ತದೆ ಮತ್ತೊಬ್ಬರ ಬಾವಿಯಲ್ಲಿ ಸ್ನಾನ-ಮಾಡಿದರೆ ನರಕ ಮಾತ್ರವಲ್ಲದೆ ಸ್ನಾನಫಲವೂ ತಪ್ಪಿಹೋಗುವುದು. ಕಾಮುಕನಾಗಿ ನೆಲದ ಮೇಲೆ ವೀರ್ಯತ್ಯಾಗ ಮಾಡಿದರೆ ಆ ಪ್ರದೇಶದಲ್ಲಿ ಎಷ್ಟು ದೂಳುಗಳಿವೆಯೋ ಅಷ್ಟುವರ್ಷ ರೌರವ ನರಕವಾಸ. ಆರ್ದ್ರಾನಕ್ಷತ್ರದಲ್ಲಿ ಸೂರ್ಯನಿರುವಾಗ ನೆಲ ಅಗೆಯುವವನಿಗೆ ನಾಲ್ಕು ಯುಗಕಾಲ ಕೃಮಿದಂಶ ನರಕವಾಸ. ಇನ್ನೊಬ್ಬರ ಹಾಳುಬಾವಿಯಲ್ಲಿ ಬಾವಿಕಟ್ಟಿಸುವವ ಬತ್ತಿದ ಕೆರೆಯಲ್ಲಿ ಕೆರೆ ಕಟ್ಟಿಸುವವ ಅದರ ಫಲವನ್ನು ಇನ್ನೊಬ್ಬರಿಗಿತ್ತು ತಾನು ಹದಿನಾಲ್ಕು ಇಂದ್ರರ ಕಾಲ ತಪ್ತೋರ್ಮಿ-ನರಕದಲ್ಲಿರುತ್ತಾನೆ.

ಇನ್ನೊಬ್ಬರ ಕೆರೆಯಲ್ಲಿ ಕೆಸರು ಎತ್ತುವವ ಅದರಲ್ಲಿ ಎಷ್ಟು ದೂಳು ಇವೆಯೋ ಅಷ್ಟು ವರ್ಷ ಬ್ರಹ್ಮಲೋಕದಲ್ಲಿರುತ್ತಾನೆ. ಭೂಮಿಕೊಟ್ಟವನ ಪಿತೃಗಳಿಗೆ ಪಿಂಡ ನೀಡದೆ ಶ್ರಾದ್ಧ ಮಾಡಿದರೆ ನರಕ. ನೆಲದ ಮೇಲೆ ದೀಪವಿಡುವವನಿಗೆ ಜನ್ಮಾಂತರದಲ್ಲಿ ಕೃಷ್ಣರೋಗ. ಮುತ್ತುಮಾಣಿಕ್ಯ ವಜ್ರ ಚಿನ್ನ ಮುಂತಾದುವನ್ನು ನೆಲದ ಮೇಲಿಟ್ಟರೆ ಏಳು ಜನ್ಮಗಳಲ್ಲಿ ದಾರಿದ್ರ್ಯ. ಶಿವಲಿಂಗ ಭಗವಂತನ ವಿಗ್ರಹಗಳನ್ನು ನೆಲದ ಮೇಲಿಟ್ಟರೆ ನೂರು ಮನ್ವಂತರ ಕಾಲ ಕೃಮಿಭಕ್ಷ ನರಕ. ಮುತ್ತಿನ ಚಿಪ್ಪು ಶಾಲಿಗ್ರಾಮತೀರ್ಥ ಹೂ ತುಲಸೀದಲಗಳನ್ನು ನೆಲದ ಮೇಲಿಟ್ಟರೆ ಯುಗಕಾಲ ನರಕವಾಸ. ಜಪಮಾಲೆ ಪುಷ್ಪಮಾಲೆ ಕರ್ಪೂರ ಗೋರೋಚನಗಳನ್ನು ನೆಲದಲ್ಲಿಟ್ಟರೆ ನರಕ. ಗಂಧದ ಕೊರಡು ರುದ್ರಾಕ್ಷ ದರ್ಭೆಗಳನ್ನು ನೆಲದಲ್ಲಿಟ್ಟರೆ ಮನ್ವಂತರಕಾಲ ನರಕವಾಸ. ಪುಸ್ತಕ ಯಜ್ಞೋಪವೀತಗಳನ್ನು ನೆಲದ ಮೇಲಿಟ್ಟರೆ ಮುಂದೆ ಬ್ರಾಹ್ಮಣ ಜನ್ಮ ಸಿಗಲಾರದು. ಬ್ರಹ್ಮಗಂಟಿನಿಂದ ಕೂಡಿದ ಯಜ್ಞೋಪವೀತವನ್ನು ಎಲ್ಲ ವರ್ಣದವರೂ ಪೂಜಿಸಬೇಕು. ಅದನ್ನು ನೆಲದಲ್ಲಿಟ್ಟರೆ ಬ್ರಹ್ಮಹತ್ಯಾಪಾಪ ತಗಲು-ವುದು. ಯಜ್ಞ ಮಾಡಿದ ಸ್ಥಳವನ್ನು ಹಾಲಿನಿಂದ ಪ್ರೋಕ್ಷಿಸದಿದ್ದರೆ ತಪ್ತೋರ್ಮಿನರಕ. ಭೂಕಂಪ ಗ್ರಹಣಕಾಲಗಳಲ್ಲಿ ನೆಲವನ್ನು ಅಗೆದರೆ ಜನ್ಮಾಂತರದಲ್ಲಿ ಅಂಗ ವೈಕಲ್ಯ ಪ್ರಾಪ್ತಿ.

ಎಲ್ಲರ ಉತ್ಪತ್ತಿಗೆ ಸ್ಥಾನವಾದ್ದರಿಂದ ಭೂದೇವಿ ಭೂಮಿ ಎನಿಸಿರುವಳು. ವಸು ಎಂದರೆ ರತ್ನ. ರತ್ನಗಳನ್ನು ಧರಿಸುವುದರಿಂದ ವಸುಧಾ ವಸುಂಧರಾ ಎಂದು ಹೆಸರುಗಳು. ಹರಿಯ ಊರು ಅಂದರೆ ತೊಡೆಯಲ್ಲಿ ಹುಟ್ಟಿದ್ದರಿಂದ ಉರ್ವೀ. ಎಲ್ಲರನ್ನೂ ಹೊರುವುದರಿಂದ ಧರಾ ಧರಿತ್ರೀ ಧರಣೀ ಎಂದು ಹೆಸರುಗಳು. ಯಾಗ-ಗಳಿಗೆ ಆಧಾರಳಾದ್ದರಿಂದ ಇಜ್ಯಾ. ಲಯದಲ್ಲಿ ಲಯ ಹೊಂದುವುದರಿಂದ ಕ್ಷೋಣೀ. ಮಹಾ ಪ್ರಳಯದಲ್ಲಿ ಕ್ಷಯಹೊಂದುವುದರಿಂದ ಕ್ಷಿತಿ. ಕಶ್ಯಪನ ಮಗಳಾದ್ದರಿಂದ ಕಾಶ್ಯಪಿ. ಸ್ಥಿರಳಾಗಿರುವುದರಿಂದ ಅಚಲಾ. ವಿಶ್ವವನ್ನು ಹೊರುವುದರಿಂದ ವಿಶ್ವಂಭರಾ. ಅನಂತ ರೂಪಳಾದ್ದರಿಂದ ಅನಂತಾ. ಪೃಥುಚಕ್ರವರ್ತಿಯ ಮಗಳಾದ್ದರಿಂದ ಮತ್ತು ವಿಸ್ತಾರವಾಗಿರುವುದರಿಂದ ಪೃಥ್ವೀ. ವಿಸ್ತಾರವಾಗಿರುವುದರಿಂದಲೆ ಮಹೀ ಎಂದೂ ಕರೆಸಿಕೊಳ್ಳುತ್ತಾಳೆ.

**ಇಲ್ಲಿಗೆ ಶ್ರೀ ಬ್ರಹ್ಮವೈವರ್ತ ಮಹಾಪುರಾಣದಲ್ಲಿ ಎರಡನೆಯದಾದ ಪ್ರಕೃತಿಖಂಡದ ನಾರದನಾರಾಯಣ ಸಂವಾದದಲ್ಲಿ ಪೃಥಿವ್ಯಾಖ್ಯಾನವೆಂಬ ಒಂಬತ್ತನೆ ಅಧ್ಯಾಯ ಮುಗಿಯಿತು.**

## ಗಂಗೆಯ ಉಪಾಖ್ಯಾನ

## ಅಧ್ಯಾಯ-೧೦

ನಾರದ— ಪ್ರಭು, ಪೃಥಿವಿಯ ಉಪಾಖ್ಯಾನವನ್ನು ಕೇಳಿದೆ. ಇನ್ನು ಗಂಗೆಯ ಉಪಾಖ್ಯಾನವನ್ನು ಹೇಳು. ಸರಸ್ವತೀ ಶಾಪದಿಂದ ವಿಷ್ಣುಪಾದೋದ್ಭವೆಯಾದ ಗಂಗೆ ಯಾರಿಂದ ಯಾವಾಗ ಹೇಗೆ ಪ್ರಾರ್ಥಿತಳಾದಳು, ಹೇಗೆ ಭಾರತ ಭೂಮಿಗಿಳಿದು ಬಂದಳು ಎನ್ನುವುದನ್ನು ಕೇಳಬಯಸುತ್ತೇನೆ.

ನಾರಾಯಣ— ಸೂರ್ಯವಂಶಜನಾದ ಸಗರ ರಾಜರಾಜೇಶ್ವರನಾಗಿದ್ದ. ಅವನಿಗೆ ಇಬ್ಬರು ಹೆಂಡಂದಿರು- ವೈದರ್ಭಿ ಶೈಬ್ಯೆ ಎಂದು. ಶೈಬ್ಯೆಗೆ ಒಬ್ಬಳು ಮಗಳು ಮತ್ತು ಅಸಮಂಜ ಎಂಬ ಒಬ್ಬ ಮಗ ಜನಿಸಿದ. ವೈದರ್ಭಿ ಶಿವನನ್ನು ಕುರಿತು ಪುತ್ರ ಪ್ರಾಪ್ತಿಗಾಗಿ ತಪಸ್ಸು ಮಾಡಿದಳು. ಶಿವ ವರವಿತ್ತ. ಆದರೆ ನೂರುವರ್ಷ ಕಳೆದ ಮೇಲೆ ಒಂದು ಮಾಂಸ ಪಿಂಡವನ್ನು ಹಡೆದಳು. ಅದನ್ನು ನೋಡಿ ಶಿವನನ್ನು ನೆನೆದು ಗಟ್ಟಿಯಾಗಿ ಅತ್ತಳು. ಶಿವ ಬ್ರಾಹ್ಮಣ ರೂಪದಿಂದ ಬಂದು ಆ ಮಾಂಸಪಿಂಡವನ್ನು ಅರವತ್ತುಸಾವಿರ ಭಾಗಗಳಾಗಿ ವಿಭಾಗಿಸಿ ಕೊಟ್ಟ. ಅರವತ್ತು ಸಾವಿರ ಮಂದಿ ಮಹಾಬಲ ಪರಾಕ್ರಮಿಗಳಾದ ಮಕ್ಕಳಾದರು. ಅವರು ಮುಂದೆ ಕಪಿಲ ಮಹರ್ಷಿಯ ಕೋಪದ ಕಣ್ಣಿಗೆ ಆಹುತಿಯಾಗಿ ಬೂದಿಯಾದರು. ರಾಜ ಅತ್ತು ಮರಣ ಹೊಂದಿದ. ಅಸಮಂಜ ಸೋದರ ಉದ್ಧಾರಕ್ಕೆ ಗಂಗೆಯನ್ನು ತರುವುದಕ್ಕಾಗಿ ಲಕ್ಷವರ್ಷಕಾಲ ತಪಸ್ಸು ಮಾಡಿದ. ಕಾಲಯೋಗದಿಂದ ಮರಣ ಹೊಂದಿದ. ಮುಂದೆ ಅಂಶುಮಂತ ಲಕ್ಷವರ್ಷ ಕಾಲ ತಪಸ್ಸು ಮಾಡಿ ಲೋಕಾಂತರ ವೈದಿದ. ಭಗೀರಥ ಮಹಾವಿಷ್ಣುಭಕ್ತ. ಲಕ್ಷವರ್ಷಕಾಲ ತಪಸ್ಸು ಮಾಡಿ ಕೃಷ್ಣನನ್ನು ಕಂಡ. ಕೃಷ್ಣ ದ್ವಿಭುಜ ಮುರಲೀ ಹಸ್ತನಾಗಿ ಗೋಪ ಬಾಲಕ ದಿವ್ಯರೂಪದಿಂದ ಪ್ರಕಟನಾದ. ರಾಜ ಸ್ತೋತ್ರಮಾಡಿ ಭಗವಂತನಿಂದ ವಂಶೋದ್ಧಾರದ ವರವನ್ನು ಪಡೆದ. ಗಂಗೆ ಭಗವಂತನ ಮುಂದೆ ಬಂದು ನಿಂತಳು. 'ಗಂಗೆ,' ಸರಸ್ವತೀ ಶಾಪದಿಂದ ನೀನು ಭೂಮಿಗೆ ಇಳಿಯಬೇಕು. ಸಗರಪುತ್ರರನ್ನು ಪುನೀತರನ್ನಾಗಿಸಬೇಕು. ಅವರು ಪವಿತ್ರಿತರಾಗಿ ನನ್ನ ಮಂದಿರವನ್ನು ಸೇರಲಿ. ನನ್ನ ಪಾರ್ಷದರಾಗಲಿ.

ಗಂಗೆಯ ಸ್ಪರ್ಶವಾಯುವಿನಿಂದಲೆ ಸಮಸ್ತಪಾಪ ಪರಿಹಾರವಾಗುವುದು. ದರ್ಶನಕ್ಕಿಂತ ಸ್ಪರ್ಶನ ಹತ್ತುಪಾಲು ಹೆಚ್ಚು ಪುಣ್ಯಕರ. ಸಾಮಾನ್ಯದಿನಗಳಲ್ಲಿ ಮೌಸವ ಸ್ನಾನ ಮಾಡಿದ ಮಾತ್ರದಿಂದ ಕೋಟಿ ಜನ್ಮದ ಪಾಪ ನಾಶವಾಗುವುದು. ಬ್ರಹ್ಮಹತ್ಯಾದಿ ಪಾಪಗಳನ್ನು ಅದು ಪರಿಹರಿಸುವುದು. ಪುಣ್ಯಾಹ ಸ್ನಾನದ ಪುಣ್ಯವನ್ನು ವೇದಗಳೂ ವರ್ಣಿಸಲಾರವು. ಸಾಮಾನ್ಯ ದಿನದಲ್ಲಿ ಸಂಕಲ್ಪ ಪೂರ್ವಕ ಸ್ನಾನ ಮಾಡಿದರೆ ಮೌಸಲ ಸ್ನಾನಕ್ಕಿಂತ ಹತ್ತುಪಾಲು ಹೆಚ್ಚು ಪುಣ್ಯಬರುವುದು. ಅದಕ್ಕಿಂತ ಮೂವತ್ತು ಪಾಲು ಹೆಚ್ಚು ಸಂಕ್ರಮಣ ಸ್ನಾನದಿಂದ. ಅಮಾವಾಸ್ಯ ಸ್ನಾನದಿಂದಲೂ ಅಷ್ಟೇ ಪುಣ್ಯ.

ಅದಕ್ಕಿಂತ ಎರಡರಷ್ಟು ದಕ್ಷಿಣಾಯನ ಪುಣ್ಯಕಾಲಸ್ನಾನದಿಂದ. ಉತ್ತರಾಯಣ ಪುಣ್ಯಕಾಲ ಸ್ನಾನದಿಂದ ಇನ್ನೂ ಹತ್ತರಷ್ಟು ಪುಣ್ಯ. ಚಾತುರ್ಮಾಸ್ಯದಲ್ಲಿ, ಹುಣ್ಣಿಮೆ-ಯಲ್ಲಿ ಅನಂತ ಪುಣ್ಯ.

ಸಾಮಾನ್ಯದಿನಗಳಲ್ಲಿ ಗಂಗಾಧ್ಯಾನಕ್ಕಿಂತ ಸ್ನಾನ ಹತ್ತುಪಾಲು ಹೆಚ್ಚು ಪುಣ್ಯಕರ. ಮನ್ವಂತರಾದಿ ಯುಗಾದಿ ರಥಸಪ್ತಮೀ ಭೀಷಾಷ್ಟಮಿ ಅಶೋಕಾಷ್ಟಮಿ ರಾಮನವಮಿ ಇವುಗಳಲ್ಲಿ ಸ್ನಾನ ಮಾಡಿದರೆ ಅನಂತಫಲ. ಪಾಡ್ಯ ಷಷ್ಠೀ ಏಕಾದಶೀ ದಿನಗಳಲ್ಲಿ ಸ್ನಾನದಿಂದ ಎರಡರಷ್ಟು ಪುಣ್ಯ. ವಿಜಯದಶಮೀ ದಿನ ಅನಂತ ಫಲ.

ವಿಷ್ಣುಭಕ್ತನ ಪಾದೋದಕ ಬಿದ್ದ ಸ್ಥಳವೆಲ್ಲ ಪುಣ್ಯತೀರ್ಥವೆನಿಸುವುದು. ಅವನ ಪಾದದೂಳಿಯಿಂದ ಭೂಮಿ ತಕ್ಷಣವೆ ಪವಿತ್ರವಾಗುವುದು.

ವಿಷ್ಣುವಿಗೆ ನಿವೇದಿತವಲ್ಲದ ಅನ್ನ ಮಲಸದೃಶ, ನೀರು ಮೂತ್ರಸದೃಶ, ಅದನ್ನು ವಿಷ್ಣುಭಕ್ತರು ಸ್ವೀಕರಿಸುವುದಿಲ್ಲ. ವಿಷ್ಣುವಿಗೆ ನಿವೇದಿತವಾದ ಅನ್ನವನ್ನೇ ಉಣ್ಣುವ ಮಾನವರ ಸ್ಪರ್ಶಮಾತ್ರದಿಂದ ಎಲ್ಲ ತೀರ್ಥಗಳೂ ಪವಿತ್ರವಾಗುವುವು.

ವಿಷ್ಣುಪಾದೋದಕವನ್ನು ಪ್ರಾಶನ ಮಾಡುವವರಿಗೆ ಪಾಪಗಳು ಹೆದರಿ ಗರುಡನಿಗೆ ಹೆದರಿದ ಹಾವುಗಳಂತೆ ದೂರ ಓಡುವುವು. ಅವರ ದರ್ಶನ ಮಾತ್ರದಿಂದ ಭೂಲೋಕ ಪಾವನವಾಗುತ್ತದೆ. ಅವರಿಗೆ ಸದಾ ವಿಷ್ಣುವಿನ ಸುದರ್ಶನ ಚಕ್ರದಿಂದ ರಕ್ಷಣೆಸಿಗುತ್ತದೆ.

ನನ್ನ ಗುಣಶ್ರವಣ ಮಾತ್ರದಿಂದ ಯಾರ ಮೈನವಿರೇಳುವುದೋ ಕಣ್ಣಲ್ಲಿ ಆನಂದ ಬಾಷ್ಪ ಹರಿಯುವುದೋ ಕಂಠ ಗದ್ಗದವಾಗುವುದೋ ಅವರು ಉತ್ತಮ ವೈಷ್ಣವರು. ಮಗನಿಗಿಂತ ಹೆಚ್ಚು ಪ್ರೀತಿ ಯಾರಿಗೆ ಭಗವಂತನಲ್ಲಿಯೆ ಇರುವುದೋ, ಮನೆಮಠ ಸಂಪತ್ತುಗಳೆಲ್ಲದರ ಭಾರವನ್ನು ಭಗವಂತನಲ್ಲಿಯೆ ಯಾರು ಇರಿಸಿರುವರೋ "ಬ್ರಹ್ಮನಿಂದ ಒಂದು ಹುಲ್ಲುಗರಿಯವರೆಗಿನ ಪ್ರತಿಯೊಂದು ಹರಿಯ ಸೃಷ್ಟಿ, ಎಲ್ಲಕ್ಕೂ ಹರಿಯೆ ಸ್ವಾಮಿ, ಅಸಂಖ್ಯ ಕೋಟಿ ಬ್ರಹ್ಮಾಂಡಗಳೂ ಬ್ರಹ್ಮವಿಷ್ಣುಶಿವಾದಿ-ಗಳೂ ಪ್ರಳಯದಲ್ಲಿ ಹರಿಯಲ್ಲಿಯೆ ಲೀನವಾಗುವುವು, ಹರಿ ಚಿನ್ಮಯರೂಪಿ, ಭಕ್ತ-ರನ್ನು ಅನುಗ್ರಹಿಸುವುದಕ್ಕಾಗಿ ಸ್ವೇಚ್ಛೆಯಿಂದ ಅಪ್ರಾಕೃತ ರೂಪದಿಂದ ವ್ಯಕ್ತನಾಗುವನು, ಪ್ರಾಕೃತಿಕ ವಸ್ತುಗಳೆಲ್ಲ ಹರಿಯಿಂದಲೆ ಆವಿರ್ಭೂತವಾಗಿ ಹರಿಯಲ್ಲಿಯೆ ಅಡಗಿ ಹೋಗುವುವು ಎಂದು ಯಾರು ತಿಳಿಯುವರೋ ಅವರೆ ಉತ್ತಮ ವೈಷ್ಣವರು."

ಹೀಗೆ ಹೇಳಿ ಕೃಷ್ಣ ಸುಮ್ಮನಾದ. ಗಂಗೆ ಹೇಳಿದಳು- 'ನಾಥ, ಸರಸ್ವತಿಯ ಶಾಪದಿಂದ, ನಿನ್ನಾಜ್ಞೆಯಿಂದ, ಮತ್ತು ಭಗೀರಥನ ತಪಸ್ಸಿನಿಂದ ನಾನೀಗ ಭಾರತ ಭೂಮಿಯಲ್ಲಿ ಹರಿಯ ತೊಡಗಿದರೆ ಪಾಪಿಗಳು ನನ್ನಲ್ಲಿ ಬಿಡುವ ಪಾಪಗಳನ್ನು

ನಾಶಮಾಡುವ ಬಗೆ ಹೇಗೆ ? ಎಷ್ಟುಕಾಲ ನಾನು ಭಾರತದಲ್ಲಿ ಹರಿಯುತ್ತಿರಬೇಕು ? ಎಂದು ನಾನು ನಿನ್ನ ಸನ್ನಿಧಿಗೆ ಹಿಂತಿರುಗಿ ಬರುವೆ ? ನನ್ನ ಬೇರೆ ಅಭೀಷ್ಟಗಳನ್ನೂ ಸರ್ವಜ್ಞನಾದ ನೀನು ತಿಳಿದಿರುವಿ. ಅವುಗಳಿಗೆ ಏನು ಉಪಾಯ ಎಂಬುದನ್ನೂ ಹೇಳು.''

ಶ್ರೀಕೃಷ್ಣ ನುಡಿದ— 'ಗಂಗೆ, ನಿನ್ನ ಅಭೀಷ್ಟಗಳನ್ನೆಲ್ಲ ನಾನು ಬಲ್ಲೆ. ನಿನಗೆ ಸಮುದ್ರ ರಾಜ ಪತಿಯಾಗುವನು. ಏಕೆಂದರೆ ನೀನು ಲಕ್ಷ್ಮಿಯ ಅಂಶ ಉಳ್ಳವಳು. ಸಮುದ್ರ ನನ್ನ ಅಂಶ. ಪ್ರೌಢೆಯಾದ ಹೆಣ್ಣು ಪ್ರೌಢನಾದ ಗಂಡನ ಜೊತೆ ಸೇರುವುದೆ ಪ್ರಶಸ್ತ. ಭಾರತದಲ್ಲಿ ಸಮುದ್ರವನ್ನು ಸೇರುವ ಸರಸ್ವತೀ ಮುಂತಾದ ನದಿಗಳೆಷ್ಟಿದ್ದರೂ ಅವರೆಲ್ಲರಲ್ಲ ನಿನಗೇ ಹೆಚ್ಚಿನ ಪತಿಸೌಭಾಗ್ಯ. ಇಂದಿನಿಂದ ಕಲಿಯುಗದಲ್ಲಿ ಐದುಸಾವಿರ ವರ್ಷಗಳವರೆಗೆ ನೀನು ಭಾರತ ಭೂಮಿಯಲ್ಲಿ ಹರಿಯುತ್ತ, ನಿತ್ಯವೂ ಸಮುದ್ರ ರಾಜನೊಡನೆ ಏಕಾಂತದಲ್ಲಿ ರಮಿಸುವಿ. ನೀನು ರಸಿಕಳು. ಅವನೂ ಉತ್ತಮ ರಸಿಕ.

ಭಗೀರಥನು ಮಾಡಿದ ನಿನ್ನ ಸ್ತೋತ್ರದಿಂದ ಭಾರತದ ಜನರೆಲ್ಲ ನಿನ್ನನ್ನು ಭಕ್ತಿಯಿಂದ ಸ್ತುತಿಸಿ ಸಂತೋಷಗೊಳಿಸುವರು. ಕೌಥುಮಶಾಖೋಕ್ತ ಕ್ರಮದಿಂದ ನಿನ್ನನ್ನು ಧ್ಯಾನಿಸಿ ಪೂಜಿಸಿ ನಮಿಸುವವನಿಗೆ ಅಶ್ವಮೇಧದ ಫಲ ಲಭಿಸುವುದು.

**ಗಂಗಾ ಗಂಗೇತಿ ಯೋ ಬ್ರೂಯಾದ್ ಯೋಜನಾನಾಂ ಶತೈರಪಿ ।**
**ಮುಚ್ಯತೇ ಸರ್ವಪಾಪೇಭ್ಯೋ ವಿಷ್ಣುಲೋಕಂ ಸ ಗಚ್ಛತಿ ॥**

'ನೂರು ಯೋಜನ ದೂರದಿಂದಲೂ 'ಗಂಗೇ ಗಂಗೇ' ಎಂದು ಹೇಳುವವ, ಸಕಲ ಪಾಪಗಳಿಂದ ಮುಕ್ತನಾಗುವನು ವಿಷ್ಣುಲೋಕವನ್ನೂ ಸೇರುವನು.' ನಿನ್ನಲ್ಲಿ ಸಾವಿರ ಪಾಪಿಗಳು ಸ್ನಾನಮಾಡಿ ಬಿಟ್ಟು ಹೋಗುವ ಪಾಪವೂ ಒಬ್ಬ ವಿಷ್ಣುಭಕ್ತನ ದರ್ಶನದಿಂದ ತಕ್ಷಣ ನಾಶಹೊಂದುವುದು. ಸಾವಿರ ಪಾಪಿಗಳ ಶವ ಸ್ಪರ್ಶದಿಂದ ನಿನ್ನಲ್ಲಿ ಬಂದು ಸೇರುವ ಪಾಪವೂ ವಿಷ್ಣು ಮಂತ್ರೋಪಾಸಕನ ಸ್ನಾನದಿಂದ ನಶಿಸುವುದು. ಎಲ್ಲೆಲ್ಲಿ ನನ್ನ ನಾಮ ಸಂಕೀರ್ತನೆ ನಡೆಯುವುದೋ ಅಲ್ಲೆಲ್ಲ ನೀನು ಸನ್ನಿಹಿತಳಾಗಿ ಪಾಪಪರಿಹರಿಸುವಿ. ಎಲ್ಲಿ ನನ್ನ ಗುಣಕೀರ್ತನ ನಡೆಯುವುದೋ ಆ ಪ್ರದೇಶ ಸರಸ್ವತ್ಯಾದಿ ಸಕಲ ತೀರ್ಥ ಸನ್ನಿಧಾನದಿಂದ ಸ್ವಯಂ ತೀರ್ಥವೆನಿಸುವುದು. ಜ್ಞಾನಪೂರ್ವಕವಾಗಿ ನನ್ನ ನಾಮೋಚ್ಚಾರಣ ಮಾಡುತ್ತ ನಿನ್ನಲ್ಲಿ ಪ್ರಾಣತ್ಯಾಗ ಮಾಡುವವರು ಹರಿಪದವನ್ನೈದುವರು. ಹರಿಯ ಪಾರ್ಷದರಾಗುವರು. ಅಸಂಖ್ಯ ಪ್ರಾಕೃತಿಕಲಯವನ್ನು ಕಾಣುವರು. ಮೃತನ ಶರೀರವನ್ನು ಅವನ ಪುಣ್ಯವಶದಿಂದ ನಿನ್ನಲ್ಲಿ ಎಸೆದರೆ ಅವನು ನಿನ್ನಲ್ಲಿ ಅಸ್ಥಿಗಳಿರುವಷ್ಟು ಕಾಲ ವೈಕುಂಠದಲ್ಲಿರುವನು. ಅವನು ಕಾಯವ್ಯೂಹದಿಂದ ಪ್ರಾರಬ್ಧ ತೀರಿಸಿಕೊಂಡು ನನ್ನ ಸಾರೂಪ್ಯ ಪಡೆಯುವನು. ಅಜ್ಞಾನಿ ನಿನ್ನ ನೀರಲ್ಲಿ ಪ್ರಾಣತ್ಯಾಗ ಮಾಡಿದರೂ ಅವನಿಗೆ ತತ್ವಜ್ಞಾನ ನೀಡಿ ಆ

ಮೂಲಕ ಸಾರೂಪ್ಯ ನೀಡುವೆನು, ನನ್ನ ಪಾರ್ಷದನನ್ನಾಗಿ ಮಾಡಿಕೊಳ್ಳುವೆನು. ಬೇರೆಕಡೆ ಪ್ರಾಣತ್ಯಾಗ ಮಾಡುವವನೂ ನಿನ್ನ ನಾಮಸ್ಮರಣ ಪೂರ್ವಕ ಪ್ರಾಣತ್ಯಾಗ ಮಾಡಿದರೆ ಸಾಲೋಕ್ಯ ನೀಡುವೆನು.

ವಿಷ್ಣುಮಂತ್ರೋಪಾಸಕರಾಗಿ ನಿತ್ಯವೂ ವಿಷ್ಣು ನೈವೇದ್ಯವನ್ನೆ ಭುಂಜಿಸುವವರಿಗೆ ಪುಣ್ಯಕ್ಷೇತ್ರ ಮರಣವಾಗಲಿ ಅನ್ಯತ್ರ ಮರಣವಾಗಲಿ ವಿಶೇಷವಿಲ್ಲ. ಅವರು ಸ್ವಯಂ ಮೂಲೋಕವನ್ನು ಪವಿತ್ರಗೊಳಿಸಬಲ್ಲರು. ಆದ್ದರಿಂದ ಅವರು ರತ್ನ ಖಚಿತ ವಿಮಾನವೇರಿ ಗೋಲೋಕಕ್ಕೇ ಹೋಗುವರು. ನನ್ನ ಭಕ್ತರ ಬಾಂಧವರೂ ಕೂಡ ತತ್ವಜ್ಞಾನ ಸಂಪಾದಿಸಿ ಗೋಲೋಕ ಪಡೆಯುವರು.

ಹೀಗೆ ಹೇಳಿ ಹರಿ ಭಗೀರಥನನ್ನು ಆಜ್ಞಾಪಿಸಿದ— 'ಗಂಗೆಯನ್ನು ಭಕ್ತಿಯಿಂದ ಪೂಜಿಸಿ ಸ್ತೋತ್ರಮಾಡು.' ಭಗೀರಥ ಕೌಥುಮಶಾಖೋಕ್ತ ಕ್ರಮದಿಂದ ಗಂಗೆಯನ್ನು ಪೂಜಿಸಿ ಸ್ತೋತ್ರಮಾಡಿ ಕೃಷ್ಣನನ್ನು ನಮಿಸಿದ. ಕೃಷ್ಣ ಅಂತರ್ಧಾನ ಹೊಂದಿದ.

ನಾರದ— ಪ್ರಭು, ಭಗೀರಥರಾಜ ಯಾವ ಸ್ತೋತ್ರದಿಂದ ಧ್ಯಾನದಿಂದ ಮತ್ತು ಪೂಜೆಯಿಂದ ಗಂಗೆಯನ್ನು ಮೆಚ್ಚಿಸಿದನೆಂದು ಹೇಳು.

ನಾರಾಯಣ— ಭಗೀರಥ ಸ್ನಾನ ನಿತ್ಯಾಹ್ನಿಕಗಳನ್ನು ತೀರಿಸಿ ಮಡಿಯುಟ್ಟು ಕಾಲು ತೊಳೆದು ಆಚಮನ ಮಾಡಿ ಭಕ್ತಿಯಿಂದ ಗಣೇಶ ಸೂರ್ಯ ಅಗ್ನಿವಿಷ್ಣು ಶಿವ-ಪಾರ್ವತಿಯರನ್ನು ಪೂಜಿಸಿದ. ವಿಘ್ನಪರಿಹಾರಕ್ಕಾಗಿ ಗಣೇಶನ ಪೂಜೆ ಬೇಕು. ಪಾಪ-ಪರಿಹಾರಕ್ಕೆ ಸೂರ್ಯಪೂಜೆ. ಆತ್ಮಶುದ್ಧಿಗಾಗಿ ಅಗ್ನಿಪೂಜೆ. ಮುಕ್ತಿಲಾಭಕ್ಕಾಗಿ ವಿಷ್ಣುಪೂಜೆ. ಜ್ಞಾನಲಾಭಕ್ಕಾಗಿ ಶಿವಪೂಜೆ. ಬುದ್ಧಿವೃದ್ಧಿಗಾಗಿ ಪಾರ್ವತಿಯ ಪೂಜೆ. ಈ ಪೂಜೆಗಳನ್ನು ಮಾಡದಿದ್ದರೆ ವಿಪರೀತ ಫಲ ಉಂಟಾಗುವುದು.

**ಗಣೇಶಂ ವಿಘ್ನನಾಶಾಯ ನಿಷ್ಪಾಪಾಯ ದಿವಾಕರಂ ।**
**ವಹ್ನಿಂ ಸ್ವಶುದ್ಧಯೇ ವಿಷ್ಣುಂ ಮುಕ್ತಯೇ ಪೂಜಯೇನ್ನರಃ ॥**

**ಶಿವಂ ಜ್ಞಾನಾಯ ಜ್ಞಾನೇಶಂ ಶಿವಾಂ ಬುದ್ಧಿ ವಿವೃದ್ಧಯೇ ।**
**ಸಂಪೂಜ್ಯೈತಲ್ಲಭೇತ್ ಪ್ರಾಜ್ಞೋ ವಿಪರೀತಮತೋಽನ್ಯಥಾ ॥**

ಭಗೀರಥ ಗಂಗೆಯನ್ನು ಧ್ಯಾನಿಸಿದ ಕ್ರಮ ಕೌಥುಮಶಾಖೋಕ್ತವಾಗಿದ್ದು ಸರ್ವಪಾಪ ಪರಿಹಾರಕವಾಗಿದೆ. ಅದು ಹೀಗಿದೆ-

'ಬಿಳಿ ಸಂಪಿಗೆಯಂಥ ಮೈಬಣ್ಣದವಳು, ಕೃಷ್ಣನ ಮೈಯಿಂದ ಆವಿರ್ಭವಿಸಿದವಳು, ಕೃಷ್ಣನಂತೆಯೆ ಪಾಪಪರಿಹಾರಕಳು, ಅವನಿಗೆ ಅನುರೂಪಳಾದ ಸತಿ. ವಹ್ನಿಯಂತೆ ಶುದ್ಧವಾದ ಬಟ್ಟೆ ಉಟ್ಟು ರತ್ನಾಲಂಕಾರ ಭೂಷಿತವಾದ ನೂರು ಶರಚ್ಚಂದ್ರರ

ಕಾಂತಿಯಿಂದ ಹೊಳೆವ ಶರೀರ, ಪ್ರಸನ್ನವಾದ ನಗುಮೊಗ, ಜಾಜಿ ಹೂ ಮುಡಿದ ಕೇಶಪಾಶ, ಚಂದನ ಮತ್ತು ಸಿಂದೂರದ ಬೊಟ್ಟುಗಳಿಂದ ಶೋಭಿಸುವ ಹಣೆ, ಕಸ್ತೂರೀ ಪತ್ರ ಹಾಗೂ ನಾನಾ ಚಿತ್ರಗಳಿಂದ ಕೂಡಿದ ಕಪೋಲ, ತೊಂಡೆಹಣ್ಣಿನಂಥ ತುಟಿಗಳು, ಮುತ್ತಿನಂಥ ಹಲ್ಲುಗಳು, ಬಿಲ್ವಫಲದಂಥ ಸ್ತನಗಳು, ಕಮಲದಂಥ ಪಾದಗಳು ಇವುಗಳಿಂದ ಶೋಭಿಸುವ ಗಂಗೆ ದೇವತೆಗಳಿಂದ ವಂದ್ಯಳು. ದೇವಋಷಿ ಮುಂತಾದವರು ಅವಳಿಗೆ ಅರ್ಘ್ಯ ನೀಡುತ್ತಾರೆ. ಮಣಿವ ತಪಸ್ವಿಗಳ ತಲೆಗಳು ದೇವಿಯ ಪಾದಕಮಲಗಳಲ್ಲಿ ದುಂಬಿಗಳಂತೆ ಕಾಣುತ್ತವೆ. ಭಕ್ತರಿಗೆ ಅನುಗ್ರಹ ಮಾಡಲು ಕಾತರಳಾಗಿರುವ ಈ ದೇವಿಯನ್ನು ಭಜಿಸುವೆನು.'

ಹೀಗೆ ಧ್ಯಾನಮಾಡಿ ದೇವಿಗೆ ಆಸನ ಪಾದ್ಯ ಸ್ನಾನ ಅನುಲೇಪನ ಧೂಪ ದೀಪ ಅರ್ಘ್ಯ ನೈವೇದ್ಯ ತಾಂಬೂಲ ಶೀತೋದಕ ವಸ್ತ್ರ ಆಭರಣ ಮಾಲ್ಯ ಗಂಧ ಆಚಮನ ಶಯ್ಯೆ ಈ ಹದಿನಾರು ಉಪಚಾರಗಳನ್ನು ಸಲ್ಲಿಸಬೇಕು. ಕೈಮುಗಿದು ಸ್ತೋತ್ರಮಾಡಿ ಪ್ರಣಾಮ ಸಲ್ಲಿಸಬೇಕು. ಅದರಿಂದ ಅಶ್ವಮೇಧಯಾಗದ ಫಲ ಲಭಿಸುವುದು.

ಗಂಗಾಸ್ತೋತ್ರವನ್ನು ಕೌಥುಮಶಾಖೋಕ್ತರೀತಿಯಿಂದ ವಿಷ್ಣು ಬ್ರಹ್ಮನಿಗೆ ಹಿಂದೆ ಉಪದೇಶಿಸಿದ. ಪಾಪಪರಿಹಾರಕವೂ ಪುಣ್ಯಪ್ರದವೂ ಆದ ಆ ಸ್ತೋತ್ರವನ್ನು ಹೇಳುತ್ತೇನೆ.

ಶಿವನ ಸಂಗೀತಕ್ಕೆ ಮುಗ್ಧರಾದ ಕೃಷ್ಣರಾಧೆಯರ ಮೈಯಿಂದ ಹರಿದು ಬಂದವಳು ಗಂಗೆ. ಗೋಲೋಕದಲ್ಲಿ ಸೃಷ್ಟಿಗೆ ಆದಿಯಲ್ಲಿ ಗೋಪಗೋಪಿಯರು ಆಡಿದ ರಾಸದ ನಡುವೆ ಕಾರ್ತಿಕ ಪೂರ್ಣಿಮೆಯ ದಿನ ಆವಿರ್ಭವಿಸಿದವಳು ಗಂಗೆ. ಕೋಟಿಯೋಜನ ಅಗಲವೂ ಅದಕ್ಕೆ ಲಕ್ಷದಷ್ಟು ಅಧಿಕ ದೀರ್ಘವೂ ಆಗಿ ಗೋಲೋಕವನ್ನು ಸುತ್ತು-ವರಿದವಳು ಗಂಗೆ. ಅರವತ್ತು ಲಕ್ಷ ಯೋಜನ ಅಗಲವೂ ಅದಕ್ಕೆ ನಾಲ್ಕರಷ್ಟು ದೀರ್ಘವೂ ಆಗಿ ವೈಕುಂಠವನ್ನು ಸುತ್ತುವರಿದವಳು ಗಂಗೆ. ಇಪ್ಪತ್ತು ಲಕ್ಷ ಯೋಜನ ಅಗಲ ಅದಕ್ಕೆ ನಾಲ್ಕರಷ್ಟು ದೀರ್ಘವಾಗಿ ಬ್ರಹ್ಮಲೋಕವನ್ನು ಸುತುವರಿದವಳು ಗಂಗೆ. ಮೂವತ್ತು ಲಕ್ಷ ಯೋಜನ ಅಗಲ, ಅದಕ್ಕೆ ಐದರಷ್ಟು ದೀರ್ಘವಾಗಿ ಶಿವಲೋಕವನ್ನು ಸುತ್ತುವರಿದವಳು ಗಂಗೆ. ಆರು ಯೋಜನ ಅಗಲ ಅದಕ್ಕೆ ಹತ್ತರಷ್ಟು ದೀರ್ಘವಾಗಿ ಇಂದ್ರಲೋಕವನ್ನು ಸುತ್ತುವರಿದವಳು ಗಂಗೆ. ಲಕ್ಷಯೋಜನ ಅಗಲವೂ ಅದಕ್ಕೆ ಏಳರಷ್ಟು ದೀರ್ಘವೂ ಆಗಿ ಧ್ರುವಲೋಕವನ್ನು ಸುತ್ತುವರಿದವಳು ಗಂಗೆ. ಲಕ್ಷ-ಯೋಜನ ಅಗಲ, ಅದಕ್ಕೆ ಆರರಷ್ಟು ದೀರ್ಘವಾಗಿ ಚಂದ್ರಲೋಕವನ್ನು ಸುತ್ತುವರಿದವಳು ಗಂಗೆ. ಅರವತ್ತು ಸಾವಿರ ಯೋಜನ ಅಗಲ ಅದಕ್ಕೆ ಹತ್ತರಷ್ಟು ದೀರ್ಘವಾಗಿ ಸೂರ್ಯಲೋಕವನ್ನು ಸುತ್ತುವರಿದವಳು ಗಂಗೆ. ಲಕ್ಷಯೋಜನ ಅಗಲ ಅದಕ್ಕೆ ಆರರಷ್ಟು ದೀರ್ಘವಾಗಿ ಸತ್ಯಲೋಕವನ್ನು ಸುತ್ತುವರಿದವಳು ಗಂಗೆ. ಹತ್ತು

ಲಕ್ಷಯೋಜನ ಅಗಲ, ಅದಕ್ಕೆ ಐದರಷ್ಟು ದೀರ್ಘವಾಗಿ ತಪೋಲೋಕವನ್ನು ಸುತ್ತುವರಿದವಳು ಗಂಗೆ. ಸಾವಿರ ಯೋಜನ ಅಗಲ, ಅದಕ್ಕೆ ಏಳರಷ್ಟು ದೀರ್ಘವಾಗಿ ಜನಲೋಕವನ್ನು ಸುತ್ತುವರಿದವಳು ಗಂಗೆ. ಸಾವಿರಯೋಗನ ಅಗಲ, ಅದಕ್ಕೆ ಏಳರಷ್ಟು ದೀರ್ಘವಾಗಿ ಕೈಲಾಸವನ್ನು ಸುತ್ತುವರಿದವಳು ಗಂಗೆ. ಹತ್ತುಯೋಜನ ಅಗಲ, ನೂರು ಯೋಜನ ದೀರ್ಘವಾಗಿ ಪಾತಾಳವನ್ನು ಸುತ್ತುವರಿದಿರುವ ಭೋಗವತಿ ಗಂಗೆ. ಒಂದು ಹರದಾರಿಯಷ್ಟು ಅಗಲವಾಗಿದ್ದು ಅದಕ್ಕಿಂತ ಕಡಿಮೆಯಿಲ್ಲದಂತೆ ಭೂಮಿಯಲ್ಲಿ ಹರಿವ ಅಲಕನಂದೆ ಗಂಗೆ. ಸತ್ಯಯುಗದಲ್ಲಿ ಹಾಲಿನಂತೆ, ತ್ರೇತೆಯಲ್ಲಿ ಚಂದ್ರನಂತೆ, ದ್ವಾಪರದಲ್ಲಿ ಶ್ರೀಗಂಧದಂತೆ ಕಲಿಯುಗದಲ್ಲಿ ನೀರಿನಂತೆ ಶೋಭಿಸುವವಳು ಗಂಗೆ. ಇದು ಪೃಥಿವಿಯಲ್ಲಿ ಮಾತ್ರ. ಸ್ವರ್ಗದಲ್ಲಿ ಎಲ್ಲ ಯುಗಗಳಲ್ಲಿಯೂ ಹಾಲಿನಂತೇ ಇರುತ್ತಾಳೆ. ಅವಳ ಪ್ರಭಾವ ಅತುಲ. ಪುರಾಣಗಳಲ್ಲಿ ಇದು ವರ್ಣಿತವಾಗಿದೆ. ಅವಳ ನೀರಿನ ಒಂದು ಕಣದ ಸ್ಪರ್ಶವೂ ಪಾಪಿಗಳ ಕೋಟಿ ಜನ್ಮಾರ್ಜಿತ ಬ್ರಹ್ಮಹತ್ಯಾದಿ ಪಾತಕಗಳನ್ನು ಸುಡಬಲ್ಲುದು. ಇಂಥ ಗಂಗೆಗೆ ನನ್ನ ಪ್ರಣಾಮಗಳು. ಇಪ್ಪತ್ತೊಂದು ಪದ್ಯಗಳಲ್ಲಿ ಮೂಡಿಬಂದ ಈ ಗಂಗಾ ಸ್ತೋತ್ರ ಪರಮ ಪಾವನ, ಪುಣ್ಯಕರ. ನಿತ್ಯ ಗಂಗೆಯನ್ನು ಪೂಜಿಸಿ ಭಕ್ತಿಯಿಂದ ಈ ಸ್ತೋತ್ರ ಪಠಿಸುವವನಿಗೆ ಅಶ್ವಮೇಧ ಯಾಗಮಾಡಿದಷ್ಟು ಫಲ ಅನಾಯಾಸವಾಗಿ ಲಭಿಸುತ್ತದೆ. ಸಂಶಯವಿಲ್ಲ. ಪುತ್ರರಿಲ್ಲದವರಿಗೆ ಪುತ್ರಲಾಭ. ಪತ್ನಿ ಇಲ್ಲದವರಿಗೆ ಪತ್ನೀಲಾಭ. ರೋಗಿಗಳಿಗೆ ರೋಗ ಪರಿಹಾರ, ಬದ್ಧರಿಗೆ ಬಂಧನದಿಂದ ಬಿಡುಗಡೆ. ಕೀರ್ತಿ ಇಲ್ಲದವರಿಗೆ ಕೀರ್ತಿ. ಮೂರ್ಖರಿಗೆ ಪಾಂಡಿತ್ಯ. ಬೆಳಿಗ್ಗೆ ಎದ್ದು ಈ ಗಂಗಾ-ಸ್ತೋತ್ರ ಪಠಿಸಿದರೆ ದುಃಸ್ವಪ್ನ ಶುಭವಾಗುವುದು. ಗಂಗಾಸ್ನಾನ ಫಲ ಲಭಿಸುವುದು.

ನಾರದ, ಭಗೀರಥ ಈ ಸ್ತೋತ್ರದಿಂದ ಗಂಗೆಯನ್ನು ಕೊಂಡಾಡಿ ಅವಳನ್ನು ಕರೆದುಕೊಂಡು ಸಗರಪುತ್ರರು ನಾಶವಾದ ಸ್ಥಳಕ್ಕೊಯ್ದ. ಗಂಗೆಯ ಸ್ಪರ್ಶವಾಯು-ವಿನಿಂದಲೆ ಸಗರಪುತ್ರರು ಪುನೀತರಾಗಿ ವೈಕುಂಠವನ್ನು ಸೇರಿದರು.

ಹೀಗೆ ಭಗೀರಥ ಗಂಗೆಯನ್ನು ಭೂಮಿಗೆ ತಂದುದರಿಂದ ಗಂಗೆ ಭಾಗೀರಥಿ ಎನಿಸಿದಳು.

ಇದು ಪುಣ್ಯಕರವಾದ ಮೋಕ್ಷದಾಯಕವಾದ ಉತ್ತಮವಾದ ಗಂಗೋಪಾಖ್ಯಾನ. ಮುಂದೆ ಏನು ಕೇಳಬಯಸುವಿ ?

ನಾರದ— ಶಿವನ ಸಂಗೀತಕ್ಕೆ ಮುಗ್ಧರಾದ ಕೃಷ್ಣರಾಧೆಯರ ದ್ರವಿಸಿದಾಗ ಏನಾಯಿತು ? ಅಲ್ಲಿದ್ದ ಜನರೆಲ್ಲ ಏನು ಮಾಡಿದರು ? ಎಲ್ಲವನ್ನೂ ವಿಸ್ತಾರವಾಗಿ ಹೇಳು.

ನಾರಾಯಣ— ಕಾರ್ತಿಕದ ಹುಣ್ಣಿಮೆಯಂದು ರಾಧಾ ಮಹೋತ್ಸವದಲ್ಲಿ ಕೃಷ್ಣ ರಾಧೆಯನ್ನು ಪೂಜಿಸಿ ರಾಸಮಂಡಲದಲ್ಲಿ ಕುಳಿತ. ಬ್ರಹ್ಮಾದಿಗಳೂ ಸನಕಾದಿಗಳೂ

ಎಲ್ಲರೂ ರಾಧೆಯನ್ನು ಪೂಜಿಸಿದರು. ಆಗ ಸರಸ್ವತಿ ವೀಣೆ ನುಡಿಸುತ್ತ ಮಧುರವಾಗಿ ಕೃಷ್ಣ ಸಂಗೀತವನ್ನು ಹಾಡಿದಳು. ಬ್ರಹ್ಮ ಸಂತುಷ್ಟನಾಗಿ ಉತ್ತಮವಾದ ರತ್ನಹಾರವನ್ನೂ ಇಡೀ ಬ್ರಹ್ಮಾಂಡದಲ್ಲಿಯೆ ದುರ್ಲಭವಾದ ಒಂದು ಶಿರೋರತ್ನವನ್ನೂ ಬಹುಮಾನವಾಗಿ ನೀಡಿದ. ಕೃಷ್ಣ ಎಲ್ಲ ರತ್ನಗಳಿಗಿಂತ ಶ್ರೇಷ್ಠವಾದ ಕೌಸ್ತುಭರತ್ನವನ್ನಿತ್ತ. ರಾಧೆ ಅಮೂಲ್ಯ ರತ್ನಖಚಿತವಾದ ಹಾರವನ್ನಿತ್ತಳು. ಭಗವಾನ್ ನಾರಾಯಣ ಮನೋಹರವಾದ ವನಮಾಲೆ ಇತ್ತ. ಲಕ್ಷ್ಮಿಯೂ ಅಮೂಲ್ಯ ರತ್ನಖಚಿತ ಕರ್ಣಕುಂಡಲ ನೀಡಿದಳು. ಭಗವತಿ ವಿಷ್ಣುಮಾಯೆ ವಿಷ್ಣುಭಕ್ತಿಯನ್ನು ಅನುಗ್ರಹಿಸಿದಳು. ಧರ್ಮ ಧರ್ಮಬುದ್ಧಿಯನ್ನು ನೀಡಿದ. ಯಶಸ್ಸನ್ನೂ ನೀಡಿದ. ವಹ್ನಿ ಶುದ್ಧವಾದ ಬಟ್ಟೆಯನ್ನಿತ್ತ. ವಾಯು ಮಣಿನೂಪುರವನ್ನಿತ್ತ.

ಈ ಸಂದರ್ಭದಲ್ಲಿ ಬ್ರಹ್ಮನ ಪ್ರೇರಣೆಯಿಂದ ಶಿವನೂ ರಾಸೋಲ್ಲಾಸದಿಂದ ಕೃಷ್ಣ ಸಂಗೀತವನ್ನು ಹಾಡಿದ. ಅದನ್ನು ಕೇಳಿ ದೇವತೆಗಳೆಲ್ಲ ಮೈಮರೆತು ಚಿತ್ರದಲ್ಲಿ ಬರೆದ ಬೊಂಬೆಗಳಂತಾದರು. ಅವರು ಎಚ್ಚೆತ್ತು ನೋಡಿದಾಗ ರಾಸಮಂಡಲ ಜಲಮಯವಾಗಿತ್ತು. ರಾಧೆಯಾಗಲಿ ಕೃಷ್ಣನಾಗಲಿ ಕಾಣಿಸುತ್ತಿರಲಿಲ್ಲ. ಗೋಪಗೋಪಿಯರು ದೇವತೆಗಳು ಮುನಿಗಳು ಎಲ್ಲರೂ ಗಟ್ಟಿಯಾಗಿ ಅತ್ತರು. ಬ್ರಹ್ಮ ಧ್ಯಾನದೃಷ್ಟಿಯಿಂದ ನೋಡಿದಾಗ ತಿಳಿಯಿತು. ರಾಧಾಕೃಷ್ಣರು ದ್ರವರೂಪರಾದರೆಂದು. ಒಡನೆ ಬ್ರಹ್ಮಾದಿಗಳೆಲ್ಲರೂ ಕೃಷ್ಣ ತನ್ನ ನಿಜರೂಪ ತೋರಲೆಂದು ಬೇಡಿಕೊಂಡರು. ಆಗ ಅಶರೀರವಾಣಿ ಕೇಳಿಸಿತು. 'ದೇವತೆಗಳೆ, ನನಗೆ ಎಲ್ಲ ರೂಪಗಳೂ ಇವೆ. ರಾಧೆಗೂ ಹಾಗೇ ಎಲ್ಲ ರೂಪಗಳಿವೆ. ಭಕ್ತರಿಗೆ ಅನುಗ್ರಹ ಮಾಡುವುದಕ್ಕಾಗಿ ಆಯಾ ರೂಪಗಳನ್ನು ತೋರುತ್ತೇವೆ. ನಮಗೆ ಆಯಾ ರೂಪಧಾರಣೆಯಿಂದ ಏನೂ ಪ್ರಯೋಜನವಿಲ್ಲ. ಮನುಗಳು ಮಾನವರು ಮುನಿಗಳು ಎಲ್ಲ ವೈಷ್ಣವರೂ ನನ್ನ ಮಂತ್ರದಿಂದ ಪವಿತ್ರರಾಗಿ ನಮ್ಮನ್ನು ನೋಡಲು ಬರುತ್ತಾರೆ. ಅವರಿಗೆ ಯೋಗ್ಯವಾದ ರೂಪದಿಂದ ನಾವು ವ್ಯಕ್ತರಾಗುತ್ತೇವೆ. ಈಗ ನಮ್ಮ ರಾಧಾಕೃಷ್ಣ ರೂಪಗಳನ್ನೆ ನೋಡಬೇಕೆಂದರೆ ಶಿವ ನನ್ನ ಒಂದು ಮಾತನ್ನು ನಡೆಸಿಕೊಡಬೇಕು. ಬ್ರಹ್ಮ, ನೀನು ಶಿವನಿಗೆ ಮನೋಹರವಾದ ಒಂದು ಮೋಹಕ ಶಾಸ್ತ್ರ ರಚಿಸಲು ಆಜ್ಞಾಪಿಸು. ಅದರಲ್ಲಿ ಅಪೂರ್ವ ಮಂತ್ರಗಳಿರಬೇಕು. ಸ್ತೋತ್ರ ಕವಚ ಧ್ಯಾನ ಪೂಜಾವಿಧಿ ಕ್ರಮಗಳಿರಬೇಕು. ಅವುಗಳಿಂದ ನನ್ನ ಮಂತ್ರಕವಚ ಸ್ತೋತ್ರಗಳನ್ನು ಯತ್ನದಿಂದ ಗೋಪ್ಯವಾಗಿಡಬೇಕು. ಸಾಮಾನ್ಯ ಜನರು ನನಗೆ ವಿಮುಖರಾಗಬೇಕು. ಸಾವಿರಕ್ಕೋ ನೂರಕ್ಕೋ ಒಬ್ಬ ಮಾತ್ರ ನನ್ನ ಮಂತ್ರ ಉಪಾಸನೆ ಮಾಡುವಂತಾಗಬೇಕು. ಇಲ್ಲದಿದ್ದರೆ ಎಲ್ಲ ಜನರೂ ಗೋಲೋಕವನ್ನೆ ಸೇರಿದರೆ ಬೇರೆ ಲೋಕಗಳು ಬರಿದಾಗುವುವು. ಜನರು ಐದು ಬಗೆಯಾಗಿರುತ್ತಾರೆ ಅವರಿಗೆ ಬೇರೆ ಬೇರೇ ಲೋಕಗಳು ಸಿಗಬೇಕು. ಕೆಲವರು ಭೂಲೋಕದಲ್ಲಿ, ಕೆಲವರು ಸ್ವರ್ಗದಲ್ಲಿ, ಕೆಲವರು ನರಕದಲ್ಲಿ, ಕೆಲವರು ಬ್ರಹ್ಮಲೋಕದಲ್ಲಿ, ಇನ್ನು

ಕೆಲವರು ನನ್ನ ಲೋಕದಲ್ಲಿ ವಾಸ ಮಾಡುವವರು. ಆದ್ದರಿಂದ ನನ್ನ ಮಾತನ್ನು ನಡೆಸುವ ಪ್ರತಿಜ್ಞೆಯನ್ನು ಶಿವ ಈ ದೇವತೆಗಳ ಸಭೆಯಲ್ಲಿ ದೃಢವಾಗಿ ಮಾಡಲಿ. ಆಗ ನಾನು ಕೃಷ್ಣರೂಪದಲ್ಲಿ ಮೈದೋರುವೆನು.'

ಹೀಗೆ ಹೇಳಿ ಅಶರೀರವಾಣಿ ಸುಮ್ಮನಾಯಿತು. ಬ್ರಹ್ಮ ಶಿವನಿಗೆ ಆಜ್ಞಾಪಿಸಿದ. ಶಿವ ಗಂಗಾಜಲವನ್ನು ಕೈಯಲ್ಲಿ ಹಿಡಿದು ಪ್ರತಿಜ್ಞೆ ಮಾಡಿದ, 'ವಿಷ್ಣುಮಾಯಾದಿ ಮಂತ್ರ-ಯುಕ್ತವಾದ ಉತ್ತಮ ಶಾಸ್ತ್ರವನ್ನು ಕೃಷ್ಣನಾಜ್ಞೆಯಂತೆ ರಚಿಸುವೆನು. ಗಂಗಾಜಲವನ್ನು ಮುಟ್ಟಿ ಸುಳ್ಳು ಪ್ರತಿಜ್ಞೆ ಮಾಡಿದವನು ಬ್ರಹ್ಮನ ಆಯುಷ್ಯದಷ್ಟು ಕಾಲ ಕಾಲಸೂತ್ರ-ನರಕದಲ್ಲಿ ಬೀಳುತ್ತಾನೆ.'

ಈಗ ರಾಧಾಕೃಷ್ಣರು ಮೈದೋರಿದರು. ದೇವತೆಗಳು ಹರ್ಷಗೊಂಡರು. ಪರಮಾನಂದದಿಂದ ಪುನಃ ರಾಸೋತ್ಸವ ಮಾಡಿದರು.

ಕೆಲಕಾಲದ ಬಳಿಕ ಶಿವ ಕೃಷ್ಣನಾಜ್ಞೆಯಂತೆ ಶಾಸ್ತ್ರ ರಚಿಸಿದ. ರಾಧಾಕೃಷ್ಣರ ಮೈಯಿಂದ ಆಗ ಹರಿದ ಜಲವೆ ಗಂಗೆ. ಹೀಗೆ ಮೊದಲಿಗೆ ಗೋಲೋಕದಲ್ಲಿ ಜನಿಸಿ ಕೃಷ್ಣನ ಆಜ್ಞೆ-ಯಂತೆ ಬೇರೆ ಬೇರೆ ಸ್ಥಾನಗಳನ್ನು ಗಂಗೆ ಸೇರಿದಳು, ಸರ್ವರಿಂದಲೂ ಪೂಜ್ಯಳೆನಿಸಿದಳು.

**ಇಲ್ಲಿಗೆ ಶ್ರೀ ಬ್ರಹ್ಮವೈವರ್ತ ಮಹಾಪುರಾಣದಲ್ಲಿ ಎರಡನೆಯದಾದ ಪ್ರಕೃತಿಖಂಡದ ನಾರದನಾರಾಯಣ ಸಂವಾದದಲ್ಲಿಗಂಗೋಪಾಖ್ಯಾನವೆಂಬ ಹತ್ತನೆ ಅಧ್ಯಾಯ ಮುಗಿಯಿತು.**

## ಗಂಗಾಪ್ರಾದುರ್ಭಾವ

**ಅಧ್ಯಾಯ-೧೧**

ನಾರದ— ಕಲಿಯುಗದಲ್ಲಿ ಐದುಸಾವಿರ ವರ್ಷಗಳು ಕಳೆದಾಗ ಗಂಗೆ ಎಲ್ಲಿಗೆ ಹೋಗುವಳು ?

ನಾರಾಯಣ— ಗಂಗೆ ಸರಸ್ವತಿ ಲಕ್ಷ್ಮಿ ಮೂವರೂ ಭಾರತ ದೇಶವನ್ನು ತೊರೆದು ವೈಕುಂಠವನ್ನು ಸೇರುವರು. ಗಂಗೆ ಸರಸ್ವತಿ ಲಕ್ಷ್ಮಿ ತುಲಸಿ ಈ ನಾಲ್ವರು ಹರಿಗೆ ಅತ್ಯಂತ ಪ್ರಿಯರು.

ನಾರದ- ಗಂಗೆ ಬ್ರಹ್ಮನ ಕಮಂಡಲುವನ್ನು ಹೇಗೆ ಸೇರಿದಳು ? ಶಂಕರನ ಶಿರಸ್ಸನ್ನು ಹೇಗೆ ಸೇರಿದಳು ? ಹೇಗೆ ಹರಿಗೆ ಪ್ರಿಯೆಯೆನಿಸಿದಳು ?

**ನಾರಾಯಣ—** ಮೊದಲಿಗೆ ಗಂಗೆ ಗೋಲೋಕದಲ್ಲಿ ರಾಧಾಕೃಷ್ಣರ ಮೈಯಿಂದ ಹರಿದು ಬಂದಳು. ಒಡನೆ ಅಸದೃಶ ರೂಪದಿಂದ ಕೂಡಿದ ರತ್ನಾಲಂಕಾರ ಭೂಷಿತಳಾದ ನವಯುವತಿಯ ರೂಪದಿಂದ ಕೃಷ್ಣನ ಪಕ್ಕದಲ್ಲಿ ಬಂದು ನಿಂತಳು. ಕಮಲದಂಥ ಕಣ್ಣುಗಳಿಂದ ಎವೆಯಿಕ್ಕದೆ ಕೃಷ್ಣನನ್ನೆ ನೋಡುತ್ತ ಅವನ ಸಂಗ ಬಯಸಿ ಆ ಸುಖದ ಕಲ್ಪನೆಯಲ್ಲಿ ರೋಮಾಂಚಿತಳಾಗಿ ಮೂರ್ಛೆ ಹೊಂದಿದಳು. ರಾಸ-ಮಂಡಲದಲ್ಲೆ ಇದ್ದ ರಾಧೆಯ ಮುಖ ಕೋಪದಿಂದ ಕೆಂಪಾಯಿತು. ತುಟಿ ಅದುರಿತು. ಲಾಕ್ಷಾರಸ ರಂಜಿತ ಕೋಮಲ ಪಾದಕಮಲಗಳನ್ನು ಮೆಲ್ಲಗೆ ಇಡುತ್ತ ಪಾರಿಜಾತ ಮುಂತಾದ ಮೃದುವಾದ ಹೂಗಳ ಮಾಲೆ ಮುಡಿದು ಸುಂದರವಾದ ಜಡೆಯನ್ನು ಬಳುಕಿಸುತ್ತ ನಡೆದುಬಂದಳು. ಕೃಷ್ಣನ ಬಳಿಯ ರತ್ನ ಸಿಂಹಾಸನದಲ್ಲಿ ಕುಳಿತಳು. ಸಖಿಯರು ಸುತ್ತಲೂ ಬಂದು ಸೇರಿದರು. ಕೃಷ್ಣ ಕುಪಿತಳಾದ ರಾಧೆಯನ್ನು ಕಂಡು ಸಂಭ್ರಮದಿಂದ ಎದ್ದು ಮೃದುಮಧುರವಾಗಿ ಮಾತನಾಡಿಸಲು ಯತ್ನಿಸಿದ. ದೇವತೆ-ಗಳೆಲ್ಲ ಭಯಗೊಂಡು ತಲೆತಗ್ಗಿಸಿ ನಿಂತು ಕೃಷ್ಣನನ್ನು ಸ್ತೋತ್ರಮಾಡಿದರು. ಗಂಗೆ ಒಡನೆ ಎದ್ದು ರಾಧೆಯ ಬಳಿಗೆ ಬಂದು ಭಯದಿಂದ, ವಿನಯದಿಂದ ಕುಶಲ ಪ್ರಶ್ನೆ ಮಾಡಿದಳು. ಭಯದಿಂದ ಅವಳ ತುಟಿ ನಾಲಿಗೆ ಒಣಗಿದುವು. ತಲೆ ತಗ್ಗಿಸಿ ಕುಳಿತಳು ಧ್ಯಾನದಲ್ಲಿ ಕೃಷ್ಣನ ಪಾದಕಮಲಗಳನ್ನು ಮೊರೆ ಹೊಕ್ಕಳು. ಹೃದಯಕಮಲದಲ್ಲೆ ಇದ್ದ ಕೃಷ್ಣ ಅಲ್ಲಿಯೆ ಅವಳಿಗೆ ಅಭಯ ನೀಡಿದ. ಈಗ ಅವಳು ಸಮಾಧಾನ ಚಿತ್ತಳಾದಳು. ಎತ್ತರದ ಸಿಂಹಾಸನವನ್ನು ಮಂಡಿಸಿದ್ದ ಬ್ರಹ್ಮತೇಜಸ್ಸಿನಿಂದ ಜ್ವಲಿಸುತ್ತಿದ್ದ ರಾಧೆಯನ್ನು ಕಂಡಳು. ಅಸಂಖ್ಯ ಬ್ರಹ್ಮರಿಗಿಂತಲೂ ಹಿಂದೆ ಇದ್ದು ಆದಿಯಲ್ಲೆ ಸೃಷ್ಟಳಾಗಿರುವ ಸನಾತನ ಕನ್ಯೆ, ರಾಧೆ. ಆದರೂ ಹನ್ನೆರಡು ವಯಸ್ಸಿನವಳಂತಿದ್ದಳು. ತೇಜಸ್ಸು ಕಾಂತಿ ವಯಸ್ಸುಗಳಲ್ಲಿ ಕೃಷ್ಣನಿಗೆ ಅನುರೂಪಳಾದ ಪತ್ನಿ. ಗಂಗೆ ಎವೆಯಿಕ್ಕದೆ ನೋಡಿದಳು. ಎಷ್ಟು ನೋಡಿದರೂ ತೃಪ್ತಿಯಾಗಲಿಲ್ಲ. ಬೊಗಸೆಗಣ್ಣುಗಳಿಂದೆತ್ತಿ ಕುಡಿವಂತೆ ನೋಡಿದಳು.

ರಾಧೆ ಕೃಷ್ಣನನ್ನು ಕೇಳಿದಳು— 'ಪ್ರಾಣೇಶ್ವರ, ಈಕೆ ಯಾರು ? ನಿನ್ನನ್ನೇ ಆಸೆ ತುಂಬಿದ ಕಣ್ಣುಗಳಿಂದ ನೋಡುತ್ತಿದ್ದಾಳೆ! ಸೆರಗಿಂದ ಮುಖವನ್ನು ಮರೆ ಮಾಡಿ-ಕೊಂಡು ಪುನಃ ಪುನಃ ನಿನ್ನನ್ನು ನೋಡಿ ರೋಮಾಂಚಿತಳಾಗಿ ಮೂರ್ಛೆ ಹೋಗುತ್ತಿದ್ದಾಳೆ! ನೀನೂ ಈಕೆಯನ್ನು ನೋಡಿ ಅನುರಾಗದ ಮಂದಹಾಸ ಬೀರುತ್ತಿರುವೆ! ನಾನು ಬದುಕಿದ್ದಂತೆ ನೀನು ಈ ರೀತಿಯಲ್ಲಿ ಅಪರಾಧ ಗೈಯುತ್ತಿರುವೆ. ಬಾರಿಬಾರಿಗೂ ನೀನು ಇಂಥ ಅಪರಾಧ ಗೈಯುತ್ತಿದ್ದರೂ ಪ್ರೇಮ-ದಿಂದ ನಾನಿದುವರೆಗೂ ಸಹಿಸಿದ್ದೇನೆ. ಸ್ತ್ರೀಜಾತಿಯೆ ಅಂಥದ್ದು. ಮನಸ್ಸು ಪ್ರೇಮ-ದಿಂದ ಮೃದುವಾಗಿರುತ್ತದೆ. ಇನ್ನು ನಾನು ಸಹಿಸಲಾರೆ. ನೀನೀಕೆಯನ್ನು ಕಟ್ಟಿಕೊಂಡು ಈ ಗೋಲೋಕವನ್ನು ಬಿಟ್ಟು ಹೋಗು.

ಹಿಂದೊಮ್ಮೆ ಚಂದನವನದಲ್ಲಿ ವಿರಜೆಯೊಂದಿಗೆ ನೀನಿದ್ದುದನ್ನು ನಾನು ಕಂಡೆ. ಸಖಿಯರ ಮಾತಿನಿಂದ ನಾನು ಅದನ್ನು ಕ್ಷಮಿಸಿದೆ. ನೀನೂ ನನ್ನ ಶಬ್ದ ಕೇಳಿದ ಮಾತ್ರಕ್ಕೆ ಮರೆಯಾದೆ. ವಿರಜೆಯೂ ನದೀರೂಪಳಾಗಿ ಹರಿದಳು. ಕೋಟಿ ಯೋಜನ ಅಗಲ, ಅದಕ್ಕೆ ನಾಲ್ಕರಷ್ಟು ದೀರ್ಘವಾಗಿ ಇಂದಿಗೂ ವೈಕುಂಠದ ಸುತ್ತ ಹರಿಯುತ್ತಿದ್ದಾಳೆ. ನಾನು ಹಿಂತಿರುಗಿದ ಬಳಿಕ ನೀನು ಪುನಃ ವಿರಜಾನದಿಯ ಬಳಿಗೆ ಹೋಗಿ ವಿರಜೆ! ವಿರಜೆ! ಎಂದು ದೈನ್ಯದಿಂದ ಗಟ್ಟಿಯಾಗಿ ಅಳತೊಡಗಿದೆ. ಆಗ ವಿರಜೆ ಯೋಜಶಕ್ತಿಯಿಂದ ಅಲಂಕೃತ ದಿವ್ಯರೂಪದಿಂದ ಬಂದು ಮೈದೋರಿದಳು. ನೀನು ಅವಳನ್ನು ಆಲಿಂಗಿಸಿ ಗರ್ಭಾಧಾನ ಮಾಡಿದೆ. ಆಗರ್ಭದಿಂದ ಬಂದವುಗಳೆ ಸಪ್ತ ಸಮುದ್ರಗಳು.

ಇನ್ನೊಮ್ಮೆ ಚಂಪಕವನದಲ್ಲಿ ಶೋಭೆ ಎಂಬ ಗೋಪಿಯೊಡನೆ ನೀನಿದ್ದುದನ್ನು ನಾನು ಕಂಡೆ. ನನ್ನ ಶಬ್ದ ಕೇಳಿದೊಡನೆ ನೀನು ಅಂತರ್ಧಾನನಾದೆ. ಶೋಭೆ ಶರೀರ-ತ್ಯಾಗ ಮಾಡಿ ಚಂದ್ರಮಂಡಲವನ್ನು ಹೊಕ್ಕಳು. ಅವಳ ಶರೀರ ಸುಂದರ ಸೌಮ್ಯ ತೇಜೋರೂಪವಾಯಿತು. ನೀನು ವಿಷಣ್ಣನಾಗಿ ಆ ತೇಜೋಮಯ ಶರೀರವನ್ನು ವಿಭಾಗ ಮಾಡಿ ರತ್ನ ಚಿನ್ನಗಳಿಗೂ ಸ್ತ್ರೀಯರ ಮುಖಕಮಲಗಳಿಗೂ ರಾಜರಿಗೂ ಉತ್ತಮವಸ್ತ್ರ ಬೆಳ್ಳಿ ಚಂದನಗಂಧ ತಿಳಿನೀರು ಚಿಗುರು ಹೂ ಸಸ್ಯ ಫಲಗಳಿಗೂ ಸಂಸ್ಕೃತವಾದ ರಾಜಗೃಹ ದೇವಗೃಹಗಳಿಗೂ ಹಂಚಿದೆ.

ಇನ್ನೊಮ್ಮೆ ನೀನು ವೃಂದಾವನದಲ್ಲಿ ಪ್ರಭೆಯೆಂಬ ಗೋಪಿಯೊಡನೆ ಇದ್ದುದನ್ನು ನಾನು ಕಂಡೆ. ನನ್ನ ಶಬ್ದ ಕೇಳಿದೊಡನೆ ನೀನು ಮರೆಯಾದೆ. ಪ್ರಭೆ ಶರೀರತ್ಯಾಗ ಮಾಡಿ ಸೂರ್ಯಮಂಡಲವನ್ನು ಸೇರಿದಳು. ಅವಳ ಶರೀರ ತೀಕ್ಷ್ಣ ತೇಜೋ-ರೂಪವಾಯಿತು. ನೀನು ದುಃಖದಿಂದ ಅದನ್ನು ವಿಭಾಗಮಾಡಿ ಅಗ್ನಿ ರಾಜರು ಜನಸಮೂಹ ದೇವತೆಗಳು ಕಳ್ಳರ ಗುಂಪು ನಾಗರು ಬ್ರಾಹ್ಮಣರು ಮುನಿಗಳು ತಪಸ್ವಿ-ಗಳು ಪತಿಸೌಭಾಗ್ಯ ಉಳ್ಳ ಸ್ತ್ರೀಯರು ಯಶಸ್ವಿಜನರು ಇವರಿಗೆ ಹಂಚಿದೆ.

ಇನ್ನೊಮ್ಮೆ ನೀನು ರಾಸಮಂಡಲದಲ್ಲಿ ಶಾಂತಿ ಎಂಬ ಗೋಪಿಯೊಡನೆ ಇದ್ದುದು ನನಗೆ ಗೋಚರವಾಯಿತು. ನನ್ನ ಶಬ್ದ ಕೇಳಿದೊಡನೆ ನೀನು ಅಂತರ್ಧಾನನಾದೆ. ಶಾಂತಿ ಭಯದಿಂದ ದೇಹತ್ಯಾಗ ಮಾಡಿ ನಿನ್ನಲ್ಲಿ ಲೀನಳಾದಳು. ಅವಳ ಶರೀರ ಶಾಂತಿಗುಣರೂಪವಾಯಿತು. ನೀನು ಅದನ್ನು ವಿಭಾಗಿಸಿ ವಿಷ್ಣು ಲಕ್ಷ್ಮಿ ವೈಷ್ಣವರು ತಪಸ್ವಿಗಳು ಧರ್ಮ ಧರ್ಮಿಷ್ಠರಿಗೆ ಹಂಚಿದೆ.

ಇನ್ನೊಮ್ಮೆ ನೀನು ಕ್ಷಮೆ ಎಂಬ ಗೋಪಿಯೊಡನೆ ನನ್ನ ಕಣ್ಣಿಗೆ ಗೋಚರವಾದೆ. ನೀನು ಗಂಧಮಾಲ್ಯ ಭೂಷಿತನಾಗಿ ಪುಷ್ಪಚಂದನಯುಕ್ತವಾದ ಶಯ್ಯೆಯಲ್ಲಿ ಅವಳೊಂದಿಗೆ ಸುಖವಾಗಿ ಮಲಗಿ ಮೈಮರೆತೆ. ಬಳಿಕ ಸುಖನಿದ್ರೆ ಮಾಡುತ್ತಿದ್ದೆ. ಆಗ

ನಾನು ನಿಮ್ಮಿಬ್ಬರನ್ನು ಎಚ್ಚರಿಸಿದೆ. ನಿನ್ನ ಪೀತಾಂಬರ ಕೊಳಲು ವನಮಾಲೆ ಕೌಸ್ತುಭ ಅಮೂಲ್ಯ ರತ್ನಕುಂಡಲ ಇವೆಲ್ಲವನ್ನು ನೀನು ತೆಗೆದಿಟ್ಟುಕೊಂಡೆ. ಕೊನೆಗೆ ನಿನ್ನ ಮೇಲಿನ ಪ್ರೀತಿಯಿಂದ ಮತ್ತು ಸಖಿಯರ ಮಾತಿನಿಂದ ನಿನಗೆ ಹಿಂತಿರುಗಿ ಕೊಟ್ಟೆ. ಆಗ ಲಜ್ಜೆಯಿಂದ ವಿವರ್ಣನಾದ ನೀನು ಇಂದಿಗೂ ಹಾಗೇ ಕೃಷ್ಣವರ್ಣನಾಗೇ ಇರುವೆ. ಕ್ಷಮೆ ಲಜ್ಜೆಯಿಂದ ದೇಹತ್ಯಾಗ ಮಾಡಿ ಪೃಥಿವಿಯನ್ನು ಪ್ರವೇಶಿಸಿದಳು. ಅವಳ ಶರೀರ ಕ್ಷಮಾಗುಣರೂಪವಾಯಿತು. ಅದನ್ನು ನೀನು ವಿಭಾಗಿಸಿ ವಿಷ್ಣು ವೈಷ್ಣವರು ಧರ್ಮ ಧರ್ಮಿಷ್ಠರು ದುರ್ಬಲರು ತಪಸ್ವಿಗಳು ದೇವತೆಗಳು ಪಂಡಿತರು ಇವರಿಗೆ ಹಂಚಿದೆ. ಹೀಗೇ ಇನ್ನೆಷ್ಟು ಅಪರಾಧಗಳನ್ನು ಇಂದಿನವರೆಗೆ ನೀನು ಮಾಡಿರುವೆ ಎಂದು ವರ್ಣಿಸಬೇಕು, ಹೇಳು.'

ರಾಧೆ ಕೃಷ್ಣನನ್ನು ಹೀಗೆ ಆಕ್ಷೇಪಿಸಿ ಗಂಗೆಯನ್ನೂ ಆಕ್ಷೇಪಿಸಲು ತೊಡಗಿದಳು. ಗಂಗೆ ಯೋಗ ಸಾಮರ್ಥ್ಯದಿಂದ ಇದನ್ನು ಮೊದಲೇ ತಿಳಿದು ಅಲ್ಲಿಂದ ಮರೆಯಾಗಿ ತನ್ನ ನೀರನ್ನು ಪ್ರವೇಶಿಸಿದಳು. ರಾಧೆಯೂ ಯೋಗಶಕ್ತಿಯಿಂದ ಇದನ್ನು ತಿಳಿದು ಎಲ್ಲೆಡೆ ಇರುವ ಗಂಗಾಜಲವನ್ನೆಲ್ಲ ಕುಡಿಯ ತೊಡಗಿದಳು. ಗಂಗೆ ಒಡನೆ ಶ್ರೀಕೃಷ್ಣನ ಪಾದಕಮಲವನ್ನೆ ಶರಣು ಹೊಂದಿದಳು. ಈಗ ರಾಧೆ ಗಂಗೆಯನ್ನು ಎಲ್ಲಿಯೂ ಕಾಣದಾದಳು. ಗೋಲೋಕ ವೈಕುಂಠ ಬ್ರಹ್ಮಲೋಕಾದಿಗಳಲ್ಲಿ ಎಲ್ಲಿಯೂ ಆಕೆ ಸಿಗಲಿಲ್ಲ. ಜಗತ್ತೇ ಜಲ ಶೂನ್ಯವಾಯಿತು. ಜಲಜಂತುಗಳೆಲ್ಲ ಸತ್ತು ಎಲ್ಲೆಡೆ ಅವುಗಳ ಮೃತದೇಹಗಳೆ ಕಂಡುಬಂದುವು. ಬ್ರಹ್ಮವಿಷ್ಣು ಶಿವ ಶೇಷ ಧರ್ಮ ಇಂದ್ರ ಚಂದ್ರ ಸೂರ್ಯ ಮುಂತಾದ ಎಲ್ಲ ದೇವತೆಗಳೂ ಮನುಗಳೂ ಮಾನವರೂ ಸಿದ್ಧರೂ ಗೋಲೋಕಕ್ಕೆ ಬಂದರು. ಎಲ್ಲರ ನಾಲಿಗೆ ತುಟಿಗಳು ಒಣಗಿದ್ದುವು. ಸರ್ವೇಶ್ವರನಾದ ಸರ್ವಾಭೀಷ್ಟಪ್ರದಾಯಕನಾದ ಕೃಷ್ಣಪರಮಾತ್ಮನನ್ನು ಎಲ್ಲರೂ ಭಕ್ತಿಯಿಂದ ಸ್ತುತಿಸಿ ನಮಿಸಿದರು. ಮೈರೋಮಾಂಚಗೊಂಡು ಕಣ್ಣೀರು ಸುರಿಸಿ ಗದ್ಗದ ಕಂಠದಿಂದ ಪ್ರಾರ್ಥಿಸಿದರು. ರಾಧಾಸಮೇತನಾದ ಆಬಾಲಗೋಪಾಲ ಮೈದೋರಿದ. ಎಲ್ಲರೂ ಹರ್ಷಗೊಂಡು ಪರಸ್ಪರ ಸಮಾಲೋಚನೆ ಮಾಡಿ ತಮ್ಮ ಇಂಗಿತವನ್ನು ನಿವೇದಿಸಲು ಬ್ರಹ್ಮನನ್ನು ಕೇಳಿಕೊಂಡರು. ಬ್ರಹ್ಮ ಅವರ ಮಾತಿಗೆ ಒಪ್ಪಿ ಶಿವ ವಿಷ್ಣುಗಳ ನಡುವೆ ಗೋಪಗೋಪಿಯರಿಂದ ಪರಿವೃತನಾದ ಮೇಘಶ್ಯಾಮನಾದ ಹನ್ನೆರಡು ವಯಸ್ಸಿನ ಬಾಲಗೋಪಾಲ ರೂಪಿ ಕೃಷ್ಣ ರಾಧೆಯನ್ನಾಲಂಗಿಸಿಕೊಂಡು ತಾಂಬೂಲ ಮೆಲ್ಲುವ ದೃಶ್ಯವನ್ನು ಕಂಡ. ಆದರೆ ಆಶ್ಚರ್ಯ! ಒಮ್ಮೆ ಕೃಷ್ಣನೊಬ್ಬನೆ ಕಾಣುವನು. ಇನ್ನೊಮ್ಮೆ ರಾಧೆಯ ಜೊತೆಗೆ ಕಾಣುವನು. ಒಮ್ಮೆ ಬೇರೆ ಬೇರೆ ಸಿಂಹಾಸನಗಳಲ್ಲಿ ಇಬ್ಬರೂ ಕಾಣುವರು. ಮತ್ತೊಮ್ಮೆ ಒಂದೇ ಸಿಂಹಾಸನದಲ್ಲಿ, ಕೃಷ್ಣ ರಾಧೆಯಾಗುತ್ತಾನೆ. ರಾಧೆ ಕೃಷ್ಣನಾಗುತ್ತಾಳೆ. ಯಾರು ಗಂಡು ಯಾರು ಹೆಣ್ಣು ಎಂದು ತಿಳಿಯದು. ಬ್ರಹ್ಮ ಕಣ್ಣುಮುಚ್ಚಿ ಮನಸಿನಲ್ಲಿ ಕೃಷ್ಣನನ್ನು ಧ್ಯಾನಿಸಿ ಸ್ತೋತ್ರಮಾಡಿದ. ಭಕ್ತಿಯಿಂದ

ನಮಿಸಿದ. ಅವನ ಅನುಜ್ಞೆ ಪಡೆದು ಕಣ್ಣು ತೆರೆದಾಗ ಗೋಪಿಯರಿಂದ ಪರಿವೃತನಾದ ರಾಧಾ ಸಮೇತನಾದ ಕೃಷ್ಣನನ್ನು ಕಂಡ. ಬ್ರಹ್ಮನ ಅಭಿಪ್ರಾಯ ತಿಳಿದು ಕೃಷ್ಣನೆ ಹೇಳಿದ- 'ಬ್ರಹ್ಮ, ಶಿವ, ಎಲ್ಲ ದೇವತೆಗಳೆ, ನಿಮಗೆ ಒಳ್ಳೆಯದಾಗಲಿ. ನೀವೇಕೆ ಇಲ್ಲಿಗೆ ಬಂದಿರಿ ಎನ್ನುವುದು ನನಗೆ ಗೊತ್ತು. ಗಂಗೆಯನ್ನು ಕರೆದೊಯ್ಯಲು ಬಂದಿರುವಿರಿ. ಆದರೆ ಅವಳು ರಾಧೆಯ ಭಯದಿಂದ ನನ್ನ ಪಾದಕಮಲದಲ್ಲಿ ಲೀನಳಾಗಿರುವಳು. ಅವಳನ್ನು ಹೊರಗೆ ತಂದರೆ ಸಾಕು, ಕುಡಿದು ಬಿಡುತ್ತಾಳೆ, ರಾಧೆ. ಅದಕ್ಕಾಗಿ ಕಾದಿದ್ದಾಳೆ. ಆದರಿಂದ ನಾನು ನಿಮ್ಮ ಅಪೇಕ್ಷೆಯಂತೆ ಗಂಗೆಯನ್ನು ಹೊರಗೆ ತಂದು ನಿಮಗೆ ಒಪ್ಪಿಸುತ್ತೇನೆ. ರಾಧೆಯ ಭಯವನ್ನು ಪರಿಹರಿಸುವುದು ನಿಮಗೇ ಸೇರಿದುದು.'

ಕೃಷ್ಣನ ಮಾತುಕೇಳಿ ಬ್ರಹ್ಮ ರಾಧೆಯನ್ನು ಒಲಿಸಿಕೊಳ್ಳುವುದಕ್ಕಾಗಿ ನಾಲ್ಕು ಮುಖಗಳಿಂದ ಸ್ತೋತ್ರ ಮಾಡಿದ—

'ಶಿವನ ಸಂಗೀತಕ್ಕೆ ಮುಗ್ಧರಾದ ನಿನ್ನ ಮತ್ತು ಕೃಷ್ಣನ ಮೈಯಿಂದಲೆ ದ್ರವರೂಪದಿಂದ ಹರಿದು ಬಂದವಳು ಗಂಗೆ. ನಿಮ್ಮ ಅಂಶಭೂತಳು, ನಿಮ್ಮ ಪ್ರೀತಿಯ ಮಗಳು. ನಿಮ್ಮ ಮಂತ್ರವನ್ನು ಉಪಾಸನೆ ಮಾಡುವವಳು. ವೈಕುಂಠ-ಪತಿಯಾದ ಚತುರ್ಭುಜ ನಾರಾಯಣ ಅವಳಿಗೆ ಪತಿಯಾಗಲಿದ್ದಾನೆ. ಒಂದಂಶದಿಂದ ಭೂಮಿಗೆ ಇಳಿದಾಗ ಸಮುದ್ರರಾಜ ಪತಿಯಾಗಲಿದ್ದಾನೆ. ಅವಳಿಂದ ನಿನಗೆ ಏತರ ಭಯ ? ಪ್ರಸನ್ನಳಾಗು.' ರಾಧೆ ನಕ್ಕು ಅಭಯನೀಡಿದಳು. ಗಂಗೆ ಕೃಷ್ಣನ ಪಾದದ ಉಗುರಿನ ತುದಿಯಿಂದ ಆವಿರ್ಭೂತಳಾದಳು. ಆ ನೀರನ್ನು ಸ್ವಲ್ಪ ತನ್ನ ಕಮಂಡಲು-ವಿನಲ್ಲಿ ಇಟ್ಟುಕೊಂಡ ಬ್ರಹ್ಮ. ಶಿವನೂ ಸ್ವಲ್ಪ ನೀರನ್ನು ತಲೆಯಲ್ಲಿ ಧರಿಸಿದ. ಬ್ರಹ್ಮ ಗಂಗೆಗೆ ರಾಧಿಕಾಮಂತ್ರ ಸ್ತೋತ್ರ ಕವಚ ಪೂಜಾವಿಧಾನ ಧ್ಯಾನ್ಯಗಳನ್ನೂ ಸಾಮ-ವೇದೋಕ್ತವಾದ ಆ ಮಂತ್ರದ ಪುರಶ್ಚರಣ ಕ್ರಮವನ್ನೂ ಉಪದೇಶಿಸಿದ. ಗಂಗೆ ರಾಧೆಯನ್ನು ಪೂಜಿಸಿ ವೈಕುಂಠಕ್ಕೆ ಹೋದಳು. ನಾರಾಯಣನ ಸತಿಯಾದಳು.

ಕೃಷ್ಣ ಗಂಗೆಯನ್ನು ಬ್ರಹ್ಮಶಿವರ ವಶಕ್ಕೆ ಒಪ್ಪಿಸಿ ನುಡಿದ- 'ದೇವತೆಗಳೆ, ಇನ್ನು ನೀವು ಇಲ್ಲಿಂದ ಹೊರಡಬಹುದು. ಆದರೆ ನೀನು ಇಲ್ಲಿಗೆ ಬಂದಮೇಲೆ ಅತ್ತ ಪ್ರಪಂಚದ ಸ್ಥಿತಿ ಏನಾಗಿದೆ ಎಂಬುದನ್ನು ಹೇಳುತ್ತೇನೆ, ಕೇಳಿ. ನೀವೆಲ್ಲರೂ ಕಾಲ ಪ್ರಭಾವಕ್ಕೆ ಸಿಲುಕದ ಈ ಗೋಲೋಕಕ್ಕೆ ಬಂದಿರುವುದರಿಂದ ಇನ್ನೂ ಬದುಕಿದ್ದೀರಿ. ಹೊರಗಿನ ಪ್ರಪಂಚವೆಲ್ಲ ಪ್ರಾಕೃತ ಪ್ರಳಯಕ್ಕೊಳಗಾಗಿ ಜಲಮಯವಾಗಿದೆ. ನಾನು ಒಮ್ಮೆ ಕಣ್ಣು-ಮುಚ್ಚಿದರೆ ಬ್ರಹ್ಮಾಂಡಲಯವಾಗುತ್ತದೆ. ಬ್ರಹ್ಮ, ನೀನೀಗ ಇನ್ನೊಮ್ಮೆ ಸೃಷ್ಟಿಮಾಡು. ಆಗ ಗಂಗೆ ಆ ಪ್ರಪಂಚಕ್ಕೆ ಬರುವಳು.'

ಬ್ರಹ್ಮಾದಿಗಳೆಲ್ಲ ಗೋಲೋಕದಿಂದ ಹೊರಟರು. ಪುನಃ ಪ್ರಪಂಚ ಸೃಷ್ಟಿ-ಯಾಯಿತು. ಗಂಗೆ ಆ ಪ್ರಪಂಚಕ್ಕೆ ಇಳಿದಳು. ಹೀಗೆ ವಿಷ್ಣುವಿನ ಪಾದಕಮಲದಿಂದ

ಬಂದುದರಿಂದ ಗಂಗೆ ವಿಷ್ಣುಪದಿ ಎನಿಸಿದಳು. ಸುಖಕರವೂ ಮೋಕ್ಷದಾಯಕವೂ ಆದ ಗಂಗೆಯ ಈ ಉಪಾಖ್ಯಾನವನ್ನು ಹೇಳಿದ್ದೇನೆ. ನಾರದ, ಇನ್ನೇನು ಕೇಳಬಯಸುವೆ ?

**ಇಲ್ಲಿಗೆ ಶ್ರೀ ಬ್ರಹ್ಮವೈವರ್ತ ಮಹಾಪುರಾಣದಲ್ಲಿ ಎರಡನೆಯದಾದ ಪ್ರಕೃತಿಖಂಡದ ನಾರದನಾರಾಯಣ ಸಂವಾದದಲ್ಲಿ ಗಂಗೋಪಾಖ್ಯಾನವೆಂಬ ಹನ್ನೊಂದನೆ ಅಧ್ಯಾಯ ಮುಗಿಯಿತು.**

## ಗಂಗೋಪಾಖ್ಯಾನ

## ಅಧ್ಯಾಯ-೧೨

ನಾರದ— ಪ್ರಭು, ಗಂಗೆ ಹೇಗೆ ವೈಕುಂಠಕ್ಕೆ ಹೋಗಿ ನಾರಾಯಣನ ಪತ್ನಿಯಾದಳು ?

ನಾರಾಯಣ— ಗಂಗೆಯನ್ನು ಮುಂದೆ ಮಾಡಿಕೊಂಡು ಬ್ರಹ್ಮ ವೈಕುಂಠಕ್ಕೆ ಹೋಗಿ ಜಗನ್ನಾಥನನ್ನು ಕಂಡು ನಮಿಸಿ ನುಡಿದ, 'ಈ ಗಂಗೆ ರಾಧಾಕೃಷ್ಣರ ಮೈಯಿಂದ ಉದಿಸಿ ಬಂದವಳು. ಸುಂದರಿ, ನವಯೌವನಪತಿ, ಸುಶೀಲೆ, ಕ್ರೋಧ ಅಹಂಕಾರವರ್ಜಿತಳು. ಯಾರ ಮೈಯಿಂದ ಬಂದಿರುವಳೋ ಅವನನ್ನು ಹೊರತು ಬೇರೆ ಯಾರನ್ನೂ ಅವಳು ವರಿಸುವುದಿಲ್ಲ. ಆದರೆ ಅಲ್ಲಿ ರಾಧೆ ಬಿಡುತ್ತಿಲ್ಲ. ಅವಳು ಗಂಗೆಯನ್ನು ಕುಡಿಯಲು ಉದ್ಯುಕ್ತಳಾದಳು. ಗಂಗೆ ಹೆದರಿ ಕೃಷ್ಣನ ಪಾದಕಮಲಗಳನ್ನು ಸೇರಿದಳು. ಪ್ರಪಂಚ ನೀರಿಲ್ಲದೆ ಒಣಗಿದ್ದನ್ನು ನೋಡಿ ಎಲ್ಲ ವೃತ್ತಾಂತ ತಿಳಿಯುವುದಕ್ಕಾಗಿ ನಾನು ಗೋಲೋಕಕ್ಕೆ ಹೋದೆ. ಸರ್ವಾಂತರಾತ್ಮನಾದ ಕೃಷ್ಣ ನಮ್ಮ ಅಭೀಷ್ಟವನ್ನು ತಿಳಿದು ಗಂಗೆಯನ್ನು ತನ್ನ ಪಾದನಖಾಗ್ರದಿಂದ ಹೊರತಂದು ನನ್ನ ಬಳಿಗೆ ಕಳಿಸಿದ. ನಾನು ಗಂಗೆಗೆ ರಾಧಾಮಂತ್ರವಿತ್ತು ಕೃಷ್ಣನ ಅನುಮತಿಯಿಂದ ಇಲ್ಲಿಗೆ ಕರೆತಂದಿದ್ದೇನೆ. ಗಾಂಧರ್ವ ವಿವಾಹದಿಂದ ನೀನು ಇವಳನ್ನು ಸ್ವೀಕರಿಸು. ನೀನು ಪುರುಷರಲ್ಲೆಲ್ಲ ಪುರುಷರತ್ನ. ಇವಳೂ ಸ್ತ್ರೀಯರಲ್ಲೆಲ್ಲ ಸ್ತ್ರೀರತ್ನ. ನೀನು ರಸಿಕ. ಇವಳೂ ರಸಿಕಳು. ನೀನು ಪ್ರೌಢ ಇವಳೂ ಪ್ರೌಢೆ. ನಿಮ್ಮಿಬ್ಬರ ಸಮಾಗಮ ಅತ್ಯಂತ ಪ್ರಶಸ್ತ. ತನಗೆ ಒದಗಿ ಬಂದ ಕನ್ಯೆಯನ್ನು ವರ ಬಿಡಲಾಗದು. ಬಿಟ್ಟರೆ ಲಕ್ಷ್ಮಿ ಕುಪಿತಳಾಗಿ ದೂರ ಹೋಗುವಳು. ಪುರುಷರೆಲ್ಲ ಪ್ರಕೃತಿಗೆ ಅಧೀನರು. ಸ್ತ್ರೀಯರು ಪ್ರಕೃತಿಯ ಅಂಶಭೂತರು.

ನಾರಾಯಣ, ನೀನೆ ಭಗವಂತ. ಪ್ರಕೃತಿಬಂಧರಹಿತ. ನಿನ್ನ ಒಂದು ಅರ್ಧಾಂಶ ದ್ವಿಭುಜನಾದ ಕೃಷ್ಣ. ಇನ್ನೊಂದು ಅರ್ಧಾಂಶ ಚತುರ್ಭುಜನಾದ ನೀನೆ. ಕೃಷ್ಣನ

ಎಡಭಾಗದಿಂದ ರಾಧೆ ಜನಿಸಿದಂತೆ ಬಲಭಾಗದಿಂದ ಅವನೆ ಚತುರ್ಭುಜನಾದ ನಿನ್ನ ರೂಪದಿಂದ ಪ್ರಕಟನಾದ, ರಾಧೆಯೂ ಎಡಭಾಗದಿಂದ ತಾನೆ ಲಕ್ಷ್ಮಿಯಾಗಿ ಜನಿಸಿದಂತೆ. ಆದ್ದರಿಂದ ಗಂಗೆ ನಿನ್ನ ಶರೀರದಿಂದಲೆ ಬಂದವಳಾದ್ದರಿಂದ ನಿನ್ನನ್ನೆ ವರಿಸುವುದು ಸ್ವಾಭಾವಿಕ. ಏಕೆಂದರೆ ಸ್ತ್ರೀಪುರುಷರು ಪ್ರಕೃತಿ ಪುರುಷರಂತೆ ಒಂದಾಗಬೇಕು.' ಹೀಗೆ ಹೇಳಿ ಬ್ರಹ್ಮ ಗಂಗೆಯನ್ನು ಹರಿಗೆ ಸಮರ್ಪಿಸಿ ಹಿಂದಿರುಗಿದ. ಹರಿ ಗಂಗೆಯನ್ನು ಗಾಂಧರ್ವ ವಿಧಿಯಿಂದ ಮದುವೆಯಾದ. 'ಗಂ' ಅಂದರೆ ಭೂಮಿಗೆ 'ಗಾ' ಬಂದು ಹಾಗೇ ಹಿಂದಿರುಗಿದುದರಿಂದ 'ಗಂಗಾ' ಎಂದು ಹೆಸರು. ವಿಷ್ಣುವಿನ ಪಾದದಿಂದ ಹೊರಬಂದುದರಿಂದ 'ವಿಷ್ಣುಪದೀ' ಎಂದೂ ಹೆಸರು.

ಹೀಗೆ ಹರಿಗೆ ಸರಸ್ವತಿ ಲಕ್ಷ್ಮಿಯರ ಜೊತೆಗೆ ಗಂಗೆಯೂ ಸೇರಿ ಮೂರು ಮಂದಿ ಪತ್ನಿಯರಾದರು. ಮುಂದೆ ತುಲಸಿಯನ್ನೂ ಮದುವೆಯಾದುದರಿಂದ ಒಟ್ಟು ನಾಲ್ಕು ಮಂದಿ ಪತ್ನಿಯರಾದರು.

**ಇಲ್ಲಿಗೆ ಶ್ರೀ ಬ್ರಹ್ಮವೈವರ್ತ ಮಹಾಪುರಾಣದಲ್ಲಿ ಎರಡನೆಯದಾದ ಪ್ರಕೃತಿಖಂಡದ ನಾರದನಾರಾಯಣ ಸಂವಾದದಲ್ಲಿ ಗಂಗೋಪಾಖ್ಯಾನವೆಂಬ ಹನ್ನೆರಡನೆ ಅಧ್ಯಾಯ ಮುಗಿಯಿತು.**

## ತುಲಸೀ ಉಪಾಖ್ಯಾನ

**ಅಧ್ಯಾಯ-೧೩**

ನಾರದ— ತುಲಸಿ ನಾರಾಯಣನ ಪತ್ನಿಯಾದುದು ಹೇಗೆ ? ಅವಳು ಎಲ್ಲಿ ಎಲ್ಲಿ ಜನಿಸಿದಳು ? ಪೂರ್ವಜನ್ಮದಲ್ಲಿ ಅವಳು ಯಾರಾಗಿದ್ದಳು ? ಇಂಥ ಪುಣ್ಯವತಿ ವೃಕ್ಷರೂಪವನ್ನು ಪಡೆದುದೆಂತು ? ಆಕೆ ರಾಕ್ಷಸಗ್ರಸ್ತಳಾಗಲು ಕಾರಣವೇನು ? ಪ್ರಭು, ಎಲ್ಲರ ಸಂದೇಹಗಳನ್ನು ಕಳೆವವ ನೀನು. ನನ್ನ ಈ ಸಂದೇಹಗಳನ್ನೂ ಪರಿಹರಿಸು.

ನಾರಾಯಣ— ದಕ್ಷಸಾವರ್ಣಿ ಎಂಬ ಮನು ವಿಷ್ಣುವಿನ ಅಂಶದಿಂದ ಉದ್ಭವಿಸಿದವ, ವಿಷ್ಣುಭಕ್ತನಾಗಿ ಒಳ್ಳೆಯ ಯಶಸ್ಸು ಕೀರ್ತಿಗಳನ್ನು ಗಳಿಸಿದವ. ಅವನ ಪುತ್ರ ಧರ್ಮಸಾವರ್ಣಿ. ಅವನೂ ವಿಷ್ಣುಭಕ್ತ, ಧರ್ಮಿಷ್ಠ. ಅವನ ಪುತ್ರ ವಿಷ್ಣು ಸಾವರ್ಣಿ. ಅವನೂ ವಿಷ್ಣುಭಕ್ತ, ಇಂದ್ರಿಯ ನಿಗ್ರಹ ಉಳ್ಳವ. ಅವನ ಮಗ ದೇವಸಾವರ್ಣಿ. ಇವನೂ ವಿಷ್ಣುವ್ರತ ಪರಾಯಣ. ಅವನ ಮಗ ರಾಜಸಾವರ್ಣಿ ಮಹಾವಿಷ್ಣುವ್ರತ ಪರಾಯಣ. ಅವನ ಮಗ ವೃಷಧ್ವಜ. ಅವನು ವೃಷಧ್ವಜನಾದ ಶಿವನ ಭಕ್ತ. ಶಿವ ಅವನ ಆಶ್ರಮದಲ್ಲಿ ಮೂರು ದಿವ್ಯ ಯುಗಗಳ ಕಾಲ ಇದ್ದ.

ಅವನಿಗೆ ಮಗನಿಗಿಂತಲೂ ಹೆಚ್ಚಿನ ಪ್ರೀತಿ ಈ ರಾಜನಲ್ಲಿ. ಆದ್ದರಿಂದ ರಾಜ ನಾರಾಯಣನನ್ನಾಗಲಿ ಲಕ್ಷ್ಮಿ ಸರಸ್ವತಿಯರನ್ನಾಗಲಿ ಪೂಜಿಸುವುದನ್ನೆ ಬಿಟ್ಟ. ತಾನು ಶಿವಭಕ್ತನೆಂಬ ಅಹಂಕಾರದಿಂದ ಬೇರೆ ಎಲ್ಲ ದೇವತೆಗಳ ಪೂಜೆಯನ್ನೂ ತೊರೆದ. ಭಾದ್ರಪದ ಮಾಸದಲ್ಲಿ ಮಹಾಲಕ್ಷ್ಮೀ ಪೂಜೆ ಮಾಡುವುದನ್ನೂ ಬಿಟ್ಟ. ಮಾಘ-ಮಾಸದಲ್ಲಿ ಸರಸ್ವತೀ ಪೂಜೆಯನ್ನೂ ತೊರೆದ. ಯಜ್ಞಗಳನ್ನೂ ವಿಷ್ಣುಪೂಜೆಗಳನ್ನೂ ನಿಂದಿಸತೊಡಗಿದ. ಆದರೂ ದೇವತೆಗಳಾರೂ ಅವನನ್ನು ಶಿವಭಕ್ತನೆಂಬ ಕಾರಣ-ದಿಂದ ಶಪಿಸಲಿಲ್ಲ. ಸೂರ್ಯಮಾತ್ರ 'ರಾಜನ್, ನಿನ್ನ ಐಶ್ವರ್ಯ ನಶಿಸಲಿ' ಎಂದು ಶಪಿಸಿದ. ಆಗ ಶಿವ ಸ್ವತಃ ಶೂಲವನ್ನು ಹಿಡಿದು ಸೂರ್ಯನನ್ನು ನಿಗ್ರಹಿಸಲು ಹೊರಟ. ಸೂರ್ಯ ತನ್ನ ತಂದೆಯಾದ ಕಶ್ಯಪ ಮುನಿಯ ಮೊರೆಹೊಕ್ಕ. ತಂದೆ ಮಕ್ಕಳಿಬ್ಬರೂ ಬ್ರಹ್ಮನ ಮೊರೆ ಹೊಕ್ಕರು. ಶಿವ ಶೂಲಹಸ್ತನಾಗಿ ಬ್ರಹ್ಮಲೋಕಕ್ಕೂ ಬರುತ್ತಿರುವುದನ್ನು ಕಂಡು ಭಯದಿಂದ ಬ್ರಹ್ಮನೂ ಸೂರ್ಯನನ್ನು ಕಶ್ಯಪನನ್ನೂ ಕರೆದುಕೊಂಡು ವೈಕುಂಠಕ್ಕೆ ಧಾವಿಸಿದ. ಅಲ್ಲಿಗೂ ಶಿವ ಬಂದುದನ್ನು ಕಂಡು ಬ್ರಹ್ಮಕಶ್ಯಪ ಸೂರ್ಯರು ಮೂವರೂ ನಾರಾಯಣನನ್ನು ಮೊರೆಹೊಕ್ಕರು. ಅವರ ನಾಲಿಗೆ ಒಣಗಿತ್ತು. ಆದರೂ ಪುನಃ ಪುನಃ ಸ್ತೋತ್ರಮಾಡಿ ನಮಿಸಿದರು. ತಮ್ಮ ಭಯಕ್ಕೆ ಕಾರಣವನ್ನು ನಿವೇದಿಸಿಕೊಂಡರು. ನಾರಾಯಣ ಅಭಯನೀಡಿದ-

**ಸ್ಮರಂತಿ ಯೇ ಯತ್ರ ಯತ್ರ ಮಾಂ ವಿಪತ್ತೌ ಭಯಾನ್ವಿತಾಃ ।**
**ತಾಂಸ್ತತ್ರ ಗತ್ವಾ ರಕ್ಷಾಮಿ ಚಕ್ರಹಸ್ತಸ್ತ್ವರಾನ್ವಿತಃ ॥**

**ಪಾತಾಹಂ ಜಗತಾಂ ದೇವಃ ಕರ್ತಾಹಂ ಸತತಂ ಸದಾ ।**
**ಸ್ರಷ್ಟಾ ಚ ಬ್ರಹ್ಮರೂಪೇಣ ಸಂಹರ್ತಾ ಶಿವರೂಪತಃ ॥**

ಆಪತ್ಕಾಲದಲ್ಲಿ ಭಯದಿಂದ ಎಲ್ಲೆಲ್ಲಿ ಭಕ್ತರು ನನ್ನನ್ನು ಸ್ಮರಿಸುವರೋ ಅಲ್ಲೆಲ್ಲ ಚಕ್ರಧಾರಿಯಾಗಿ ನಾನು ಬೇಗನೆ ಬಂದು ಅವರನ್ನು ಕಾಪಾಡುವೆನು. ಲೋಕಗಳನ್ನು ರಕ್ಷಿಸುವ ದೇವ ನಾನು. ಲೋಕದ ಎಲ್ಲ ಕ್ರಿಯೆಗೂ ಚಾಲಕಶಕ್ತಿ ನಾನು. ನಾನೆ ಬ್ರಹ್ಮರೂಪದಿಂದ ಬ್ರಹ್ಮನಲ್ಲಿದ್ದು ಸೃಷ್ಟಿಮಾಡುತ್ತೇನೆ. ಶಿವರೂಪದಿಂದ ಶಿವನಲ್ಲಿದ್ದು ಲಯವನ್ನೂ ಮಾಡುತ್ತೇನೆ.

ಶಿವನಲ್ಲೂ ನಿನ್ನಲ್ಲೂ ನಾನು, ಸೂರ್ಯನಲ್ಲೂ ನಾನು, ತ್ರಿಗುಣಗಳಲ್ಲೂ ನಾನು ಅಂತರ್ಯಾಮಿಯಾಗಿದ್ದೇನೆ. ನಾನಾರೂಪ ಧರಿಸಿ ಸೃಷ್ಟ್ಯಾದಿ ಕ್ರಿಯೆಗಳನ್ನು ಎಲ್ಲರಿಂದ ಮಾಡಿಸುತ್ತೇನೆ. ನೀವಿನ್ನು ಹಿಂತಿರುಗಿ. ನಿಮಗೆ ಮಂಗಳವಾಗುತ್ತದೆ. ನಿಮಗೆ ಇನ್ನೆಲ್ಲಿಂದ ಭಯ ? ಇಂದಿನಿಂದ ನನ್ನ ವರಬಲದಿಂದ ನಿಮಗೆ ಶಿವನಿಂದ ಭಯವಿಲ್ಲ.

**ಆಶುತೋಷಃ ಸ ಭಗವಾನ್ ಶಂಕರಶ್ಚ ಸತಾಂ ಗತಿಃ ।**
**ಭಕ್ತಾಧೀನಶ್ಚ ಭಕ್ತೇಶೋ ಭಕ್ತಾತ್ಮಾ ಭಕ್ತವತ್ಸಲಃ ॥**

ಭಗವಾನ್ ಶಿವ ಬೇಗನೆ ಒಲಿಯುವವ. ಸಜ್ಜನರಿಗೆ ಸಜ್ಜನರಿಗೆ ಆಶ್ರಯ ನೀಡುವವ. ಭಕ್ತ ಪರಾಧೀನ. ಭಕ್ತರನ್ನು ಕಾಪಾಡಲು ಸಮರ್ಥ. ಸ್ವತಃ ನನ್ನ ಭಕ್ತ. ನನ್ನ ಭಕ್ತರೆಂದರೆ ಅವನಿಗೆ ಬಲುಪ್ರೀತಿ.

ನನಗೆ ನನ್ನ ಸುದರ್ಶನ ಚಕ್ರವೂ ಶಿವನೂ ಪ್ರಾಣಕ್ಕಿಂತ ಹೆಚ್ಚು ಪ್ರಿಯರು. ಇವರಿಬ್ಬರಿಗಿಂತ ಹೆಚ್ಚಿನ ಶಕ್ತಿಶಾಲಿಗಳು ಬ್ರಹ್ಮಾಂಡಗಳಲ್ಲಿಲ್ಲ. ಶೂಲಧಾರಿಯಾದ ಶಿವ ಕೋಟಿಸೂರ್ಯರನ್ನೂ ಕೋಟ ಬ್ರಹ್ಮರನ್ನೂ ಲೀಲಾಮಾತ್ರದಿಂದ ಸೃಜಿಸಬಲ್ಲ. ಅವನಿಗೆ ಅಸಾಧ್ಯವಾದುದು ಏನಿದೆ ? ನನ್ನನ್ನು ಹಗಲಿರುಳು ಧ್ಯಾನ ಮಾಡುತ್ತಿರುವಾಗ ಬಾಹ್ಯ ಪ್ರಪಂಚದ ಅರಿವೇ. ಅವನಿಗಿರುವುದಿಲ್ಲ. ಐದು ಮುಖಗಳಿಂದ ಸದಾ ನನ್ನ ನಾಮ ಗುಣಸಂಕೀರ್ತನ ಮಾಡುತ್ತಾನೆ. ಅಂಥ ಶಿವನ ಕಲ್ಯಾಣಕ್ಕಾಗಿ ನಾನು ಹಗಲಿರುಳು ಚಿಂತಿಸುತ್ತೇನೆ.

**ಯೇ ಯಥಾ ಮಾಂ ಪ್ರಪದ್ಯಂತೇ ತಾಂಸ್ತಥೈವ ಭಜಾಮ್ಯಹಂ ।**

ಯಾರು ನನ್ನನ್ನು ಯಾವ ಭಾವನೆಯಿಂದ ಆರಾಧಿಸುವರೋ ನಾನು ಆ ಭಾವನೆ-ಗನುಗುಣವಾಗಿ ಅವರನ್ನು ಕಾಪಾಡುವೆನು.

**ಶಿವಸ್ವರೂಪೋ ಭಗವಾನ್ ಶಿವಾಧಿಷ್ಠಾತೃದೇವತಾ ।**
**ಶಿವೋ ಭವತಿ ಯಸ್ಮಾಚ್ಚ ಶಿವಂ ತೇನ ವಿದುರ್ಬುಧಾಃ ॥**

ಭಗವಾನ್ ಶಿವ ಮಂಗಳ ಸ್ವರೂಪ. ಮಂಗಳಗಳಿಗೆ ಅಧಿದೇವತೆ. ಅವನ ಅನುಗ್ರಹದಿಂದ ಭಕ್ತ ಮಂಗಳಭಾಜನನಾಗುತ್ತಾನೆ. ಆದರಿಂದ ಅವನಿಗೆ 'ಶಿವ' ಎಂದು ಹೆಸರಾಯಿತು. ಏಕೆಂದರೆ 'ಶಿವ' ಎಂದರೆ ಮಂಗಳ.

ಅಷ್ಟರಲ್ಲಿ ಶಿವ ತಾನೆ ಅಲ್ಲಿಗೆ ಬಂದ. ಶೂಲಧರಿಸಿ ವೃಷಭಾರೂಢನಾಗಿ ಕೆಂಗಣ್ಣಿನಿಂದ ನೋಡುತ್ತ ಬಂದ. ಶಾಂತನಾದ ಲಕ್ಷ್ಮೀಕಾಂತನನ್ನು ನೋಡಿ ಬೇಗನೆ ವೃಷಭದಿಂದ ಕೆಳಗಿಳಿದು ಭಕ್ತಿಯಿಂದ ಬಾಗಿ ನಮಿಸಿದ. ಬ್ರಹ್ಮನನ್ನೂ ನಮಿಸಿದ. ಸೂರ್ಯ ಭಯದಿಂದ ಮತ್ತು ಭಕ್ತಿಯಿಂದ ಶಿವನಿಗೆ ನಮಿಸಿದ. ಕಶ್ಯಪನೂ ಮಹಾಭಕ್ತಿಯಿಂದ ಸ್ತೋತ್ರಮಾಡಿ ನಮಿಸಿದ. ಶಿವ ಹರಿಯನ್ನು ಸ್ತೋತ್ರಮಾಡಿ ಸುಖಾಸನದಲ್ಲಿ ಕುಳಿತ. ಹರಿ ನುಡಿದ-

'ಶಿವ, ಎಲ್ಲರಿಗೂ ಕುಶಲ ಉಂಟುಮಾಡುವುದರಿಂದ ಶಿವನೆನಿಸಿದ ನಿನಗೇ 'ಕುಶಲವೆ ?' ಎಂದು ಪ್ರಶ್ನೆ ಮಾಡುವುದು ಅತ್ಯಂತ ಉಪಹಾಸವೆನಿಸಬಹುದು.

ಆದರೂ ಕುಶಲ ಪ್ರಶ್ನೆ ಮಾಡುತ್ತೇನೆ. ಎಲ್ಲರ ತಪಸ್ಸಿಗೆ ಫಲ ನೀಡುವವ ಎಲ್ಲರಿಗೆ ಎಲ್ಲ ಸಂಪತ್ತನ್ನೂ ಕರುಣಿಸುವ ನಿನಗೆ 'ನಿನ್ನ ತಪಸ್ಸು ಸಂಪತ್ತು ವೃದ್ಧಿ ಹೊಂದುತ್ತಿರುವುದೆ' ? ಎಂದು ಪ್ರಶ್ನಿಸುವುದು ಉಚಿತವಲ್ಲ. ಆದರೂ ಪ್ರಶ್ನಿಸುತ್ತೇನೆ. ಜ್ಞಾನದ ಅಧಿದೇವತೆ, ಸರ್ವಜ್ಞನೆನಿಸಿದ ನೀನು. ನಿನಗೆ 'ಜ್ಞಾನ ಅವ್ಯಾಹತವಾಗಿ ಲಭಿಸುತ್ತಿದೆಯೆ?' ಎಂದು ಕೇಳುವುದು ಅನುಚಿತ. ಮೃತ್ಯುಂಜಯನೆನಿಸಿ ಆಪತ್ತನ್ನೆ ಕಂಡರಿಯದ ನಿನಗೆ 'ಏನು ಆಪತ್ತು ನಿನಗೆ ?' ಎಂದೂ ಕೇಳುವುದೂ ಅನುಚಿತವೆ. ಎಲ್ಲೆಡೆ ಸಂಚರಿಸಲು ಸ್ವತಂತ್ರನಾದ ನಿನಗೆ 'ಏಕೆ ಬಂದೆ ?' ಎಂದು ಕೇಳುವುದೂ ಅಯುಕ್ತ. ಅಂತೂ ಬಂದಿರುವೆ. ಕೋಪಕ್ಕೆ ಕಾರಣವೇನೆಂದು ಮಾತ್ರ ಕೇಳುತ್ತಿದ್ದೇನೆ.'

**ಶಿವ ನುಡಿದ—** 'ಜಗನ್ನಾಥ, ನನಗೆ ಪ್ರಾಣಕ್ಕಿಂತ ಹೆಚ್ಚು ಪ್ರಿಯನಾದ ನನ್ನ ಭಕ್ತ ವೃಷಧ್ವಜನನ್ನು ಸೂರ್ಯ ಶಪಿಸಿದ್ದಾನೆ. ಅದಕ್ಕೆ ಕೋಪಗೊಂಡು ಇಲ್ಲಿಗೆ ಬಂದೆ. ನಾನು ಸೂರ್ಯನನ್ನು ಶಿಕ್ಷಿಸಲು ಹೋದಾಗ ಆತ ಬ್ರಹ್ಮನನ್ನು ಮೊರೆ ಹೊಕ್ಕ. ಇಬ್ಬರೂ ನಿನ್ನನ್ನು ಶರಣು ಹೊಕ್ಕರು. ಮನಸಿನಿಂದಲಾಗಲಿ ಮಾತಿನಿಂದಾಗಲಿ ನಿನ್ನನ್ನು ಶರಣು ಹೊಂದಿದವರಿಗೆ ಆಪತ್ತಿಲ್ಲ, ಭಯವಿಲ್ಲ, ಜರೆ ಮರಣಗಳೂ ಅವರಿಗಿಲ್ಲವಾಗುತ್ತವೆ. ಇನ್ನು ಸಾಕ್ಷಾತ್ತಾಗಿಯೆ ನಿನ್ನನ್ನು ಶರಣು ಹೊಂದಿದರೆ ಅದರ ಸತ್ಫಲವನ್ನು ಏನೆಂದು ವರ್ಣಿಸಲಿ ?

**ಹರಿಸ್ಮೃತಿಶ್ಚಾಭಯದಾ ಸರ್ವಮಂಗಲದಾ ಸದಾ**

ಹರಿಸ್ಮರಣೆ ಸದಾ ಮಾಡಿದರೆ ಸದಾ ಭಯಪರಿಹಾರವಾಗಿ ಸರ್ವಮಂಗಲ ಲಭಿಸುತ್ತದೆ. ಇದು ಬ್ರಹ್ಮಸೂರ್ಯರಿಗೆ ಗೊತ್ತು. ಇನ್ನು ನನ್ನ ಭಕ್ತನ ಗತಿ ಏನು ಹೇಳು. ಸೂರ್ಯ ಶಾಪದಿಂದ ಅವನ ಸಂಪತ್ತು ನಾಶವಾಗುತ್ತಿದೆ.'

ಹರಿ ನುಡಿದ— ಶಿವ, ನೀನು ಬೇಗನೆ ಇಲ್ಲಿಂದ ಹೊರಡು. ನೀನು ಬಂದ ಅರ್ಧ ಘಳಿಗೆಯೊಳಗೆ ಅಲ್ಲಿ ಬಾಹ್ಯ ಪ್ರಪಂಚದಲ್ಲಿ ಇಪ್ಪತ್ತೊಂದು ಯುಗಗಳೆ ಸಂದಿವೆ. ನಿನ್ನ ವೃಷಧ್ವಜ ಈಗ ಇಲ್ಲ. ಅವನ ಮಗ ಹಂಸಧ್ವಜನೂ ಸಂಪತ್ತನ್ನು ಕಳೆದುಕೊಂಡು ಮೃತನಾದ. ಅವನ ಮಕ್ಕಳು ಧರ್ಮಧ್ವಜ ಕುಶಧ್ವಜರು ಪರಮ ವೈಷ್ಣವರು. ಅವರೂ ಸೂರ್ಯಶಾಪದಿಂದಲೆ ಸಂಪತ್ತನ್ನು ಕಳೆದುಕೊಂಡು ರಾಜ್ಯಭ್ರಷ್ಟರಾಗಿ ಲಕ್ಷ್ಮಿಯನ್ನು ಕುರಿತು ತಪಸ್ಸು ಮಾಡುತ್ತಿರುವರು. ಅವರ ಹೆಂಡಂದಿರಲ್ಲಿ ಲಕ್ಷ್ಮಿ ಒಂದೊಂದು ಅಂಶದಿಂದ ಅವತರಿಸಿತ್ತಾಳೆ. ಆಗ ಅವರು ಸಂಪದ್‌ಭರಿತರಾಗುತ್ತಾರೆ. ಅಂತೂ ವೃಷಧ್ವಜನಿಲ್ಲವೆಂದಮೇಲೆ ನಾವೀಗ ಮಾಡುವುದೇನೂ ಉಳಿದಿಲ್ಲ. ನೀವೆಲ್ಲ ಹೋಗಿರಿ.'

ಹೀಗೆ ಹೇಳಿ ಹರಿ ಎದ್ದು ತನ್ನ ಅಂತಃಪುರಕ್ಕೆ ನಡೆದ. ಬ್ರಹ್ಮ ಕಶ್ಯಪ ಸೂರ್ಯರು ಹಿಂತಿರುಗಿದರು. ಶಿವ ಎಂದಿನಂತೆಯೆ ತಪಸ್ಸು ಮಾಡಲು ಹೊರಟ.

**ಇಲ್ಲಿಗೆ ಶ್ರೀ ಬ್ರಹ್ಮವೈವರ್ತ ಮಹಾಪುರಾಣದಲ್ಲಿ ಎರಡನೆಯದಾದ ಪ್ರಕೃತಿಖಂಡದ ನಾರದನಾರಾಯಣ ಸಂವಾದದಲ್ಲಿ ತುಲಸ್ಯುಪಾಖ್ಯಾನವೆಂಬ ಹದಿಮೂರನೆ ಅಧ್ಯಾಯ ಮುಗಿಯಿತು.**

## ವೇದವತಿಯಿಂದ ತನ್ನನ್ನು ಬಲಾತ್ಕರಿಸಬಂದ ರಾವಣನಿಗೆ ಶಾಪ. ಅಗ್ನಿಪ್ರವೇಶ, ಸೀತಾ ರೂಪದಿಂದ ಮತ್ತೆ ಜನನ, ಅವಳ ಛಾಯೆಯಾದ ಮಾಯಾಸೀತೆ ದ್ರೌಪದಿಯಾಗಿ ಅವತರಿಸಿದ್ದು

**ಅಧ್ಯಾಯ-೧೪**

ನಾರಾಯಣ ಮಹರ್ಷಿ ನುಡಿದ— ನಾರದ, ಧರ್ಮ ಧ್ವಜ ಕುಶಧ್ವಜರಿಬ್ಬರೂ ಲಕ್ಷ್ಮೀದೇವಿಯನ್ನು ಉಗ್ರತಪಸ್ಸಿನಿಂದ ಒಲಿಸಿಕೊಂಡು ವರಪಡೆದು ಪುನಃ ರಾಜ್ಯಾಧಿ-ಪತಿಗಳೂ ಧನವಂತರೂ ಪುತ್ರವಂತರೂ ಆದರು. ಕೆಲಕಾಲದ ಬಳಿಕ ಕುಶಧ್ವಜನ ಧರ್ಮಪತ್ನಿ ಮಾಲಾವತಿ ಲಕ್ಷ್ಮಿಯ ಅಂಶಭೂತಳಾದ ವೇದವತಿಗೆ ಜನ್ಮವಿತ್ತಳು. ಭೂತಲಸ್ಪರ್ಶವಾಗುವಾಗಲೆ ಮಗು ಜ್ಞಾನಯುಕ್ತವಾಗಿತ್ತು. ವೇದಮಂತ್ರ ಉಚ್ಚರಿಸುತ್ತ ಹೆರಿಗೆ ಮನೆಯಿಂದ ಎದ್ದು ಬಂದವಳಾದ್ದರಿಂದ ವೇದವತಿ ಎಂದು ಹೆಸರಾಯಿತು. ಹುಟ್ಟಿದ ಮರುಕ್ಷಣವೆ ಸ್ನಾನ ಮಾಡಿ ತಪಸ್ಸಿಗೆ ಹೊರಟಳು ವೇದವತಿ. ಎಲ್ಲರೂ ತಡೆದರು. ಅದನ್ನು ಲೆಕ್ಕಿಸದೆ ಪುಷ್ಕರ ಕ್ಷೇತ್ರದಲ್ಲಿ ಅರಣ್ಯವನ್ನು ಪ್ರವೇಶಿಸಿ ಒಂದು ಮನ್ವಂತರ ಕಾಲ ಅತಿ ಉಗ್ರವಾದ ತಪಸ್ಸನ್ನು ಲೀಲಾಮಾತ್ರದಿಂದ ಮಾಡಿದಳು. ಶರೀರದಲ್ಲಿ ಕೃಶಳಾಗಲೆ ಇಲ್ಲ. ಪುಷ್ಟಳಾಗಿಯೆ ಇದ್ದಳು. ನವಯೌವನವತಿ-ಯಾಗಿದ್ದಳು. ಒಮ್ಮೆ ಆಕಾಶದಲ್ಲಿ ಅಶರೀರವಾಣಿ ಕೇಳಿಸಿತು. 'ಜನ್ಮಾಂತರದಲ್ಲಿ ಹರಿ ನಿನಗೆ ಪತಿಯಾಗುವನು. ಬ್ರಹ್ಮಾದಿ ದೇವತೆಗಳಿಂದೂಲ ಆರಾಧಿಸಿ ಒಲಿಸಿ-ಕೊಳ್ಳಲಾಗದ ಆ ಹರಿಯನ್ನು ಆಗ ಪತಿಯಾಗಿ ಪಡೆಯುವೆ.' ವೇದವತಿಗೆ ಕೋಪ-ಬಂದಿತು. ಪುನಃ ಗಂಧಮಾದನಕ್ಕೆ ಹೋಗಿ ಅತ್ಯಂತ ನಿರ್ಜನವಾದ ಸ್ಥಾನದಲ್ಲಿ ಬಹುಕಾಲ ತಪಸ್ಸು ಮಾಡಿದಳು. ಅಲ್ಲಿಗೆ ರಾವಣ ಬಂದ. ಅತಿಥಿ ಎಂದು ಬಗೆದು ವೇದವತಿ ಅವನಿಗೆ ಪಾದ್ಯವಿತ್ತು. ರುಚಿಯಾದ ಹಣ್ಣುಗಡ್ಡೆಗಳನ್ನೂ ತಂಪಾದ ನೀರನ್ನೂ ಕೊಟ್ಟಳು. ಪಾಪಿಷ್ಠನಾದ ರಾವಣ ಅದನ್ನು ಸೇವಿಸಿ ದೇವಿಯ

ಸಮೀಪದಲ್ಲಿ ಕುಳಿತ. 'ಸುಂದರಿ, ನೀನಾರು?' ಎಂದು ಮುಂತಾಗಿ ಕೇಳತೊಡಗಿದ. ಅವಳ ಶರೀರ ಲಾವಣ್ಯ ಕಂಡು ಕಾಮಪರವಶನಾಗಿ ಕೈಹಿಡಿದೆಳೆದ. ಒಡನೆ ಅವಳ ಕೋಪದ ದೃಷ್ಟಿಗೆ ಸ್ತಂಭಿತನಾದ. ಕೈಕಾಲುಗಳು ಅಲುಗಾಡದ ಹಾಗೆ ನಿಂತುವು. ಬಾಯಿಂದ ಮಾತೂ ಬಾರದಾಯಿತು. ಮನಸ್ಸಿನಲ್ಲಿಯೆ ಅವಳನ್ನು ದೈನ್ಯದಿಂದ ಬೇಡಿದ. ಒಡನೆ ದೇವಿ ಅವನನ್ನು ಸ್ತಂಭನದಿಂದ ಮುಕ್ತಗೊಳಿಸಿ 'ನನ್ನ ಸಲುವಾಗಿಯೆ ನೀನು ಬಂಧುಸಮೇತ ನಾಶ ಹೊಂದುವೆ' ಎಂದು ಶಪಿಸಿದಳು. 'ನೀನು ಕಾಮಪರವಶನಾಗಿ ನನ್ನನ್ನು ಮುಟ್ಟಿದಿ. ಅದರಿಂದ ನಾನು ಶರೀರತ್ಯಾಗ ಮಾಡುವೆನು, ನೋಡು' ಎನ್ನುತ್ತ ಯೋಗಸಾಮರ್ಥ್ಯದಿಂದ ಶರೀರತ್ಯಾಗ ಮಾಡಿದಳು. ರಾವಣ ಆ ಶರೀರವನ್ನು ಗಂಗೆಯಲ್ಲಿ ಬಿಟ್ಟು 'ಎಂಥ ಅದ್ಭುತವಿದು ! ನಾನು ಎಂಥ ದುಷ್ಕಾರ್ಯ ಮಾಡಿಬಿಟ್ಟೆ' ಎಂದು ಹೇಳಿ ಕೊಳ್ಳುತ್ತ ಹೊರಟು ಹೋದ.

ಮುಂದೆ ದೇವಿ ಜನಕರಾಜನ ಕುಮಾರಿಯಾಗಿ ಅವತರಿಸಿ ರಾಮನನ್ನು ವರಿಸಿದಳು. ರಾಮ ರಸಿಕ, ಸ್ತ್ರೀಯರನ್ನು ಆಕರ್ಷಿಸಬಲ್ಲ ಸ್ಫುರದ್ರೂಪಿ, ನವಯೌವನಶಾಲಿ. ಅವನೊಡನೆ ದೇವಿ ರಮಿಸುತ್ತ ಪೂರ್ವಜನ್ಮದಲ್ಲಿ ಮಾಡಿದ ತಪಸ್ಸಿನ ಕ್ಲೇಶವನ್ನೆಲ್ಲ ಮರೆತಳು. ಆದರೆ ರಾಮ ಪಿತೃವಾಕ್ಯ ಪರಿಪಾಲನೆಗಾಗಿ ವನವಾಸ ಕೈಗೊಂಡ. ಅಗ್ನಿ ಬ್ರಾಹ್ಮಣ ರೂಪದಿಂದ "ಕಾಲ ಸಮೀಪಿಸುತ್ತಿದೆ. ದೈವವನ್ನು ಯಾರೂ ತಡೆಯಲಾರರು. ನನ್ನ ತಾಯಿಯಾದ ಸೀತೆಯನ್ನು ನನ್ನ ರಕ್ಷಣೆಯಲ್ಲಿರಿಸಿ ಛಾಯಾಸೀತೆಯನ್ನು ನಿನ್ನ ಬಳಿ ಇಟ್ಟು ತಂದೊಪ್ಪಿಸುವೆನು. ಈ ಕಾರ್ಯಕ್ಕಾಗಿ ದೇವತೆಗಳು ನನ್ನನ್ನು ಕಳಿಸಿದರು. ನಾನು ಬ್ರಾಹ್ಮಣನಲ್ಲ, ಅಗ್ನಿ" ಎಂದು ವಿಜ್ಞಾಪಿಸಿದ.

ರಾಮ ಅಗ್ನಿಯ ಮಾತಿಗೆ ಒಪ್ಪಿದ. ಲಕ್ಷ್ಮಣನಿಗೆ ಇದೊಂದನ್ನೂ ತಿಳಿಯಗೊಡಲಿಲ್ಲ.

> ವಹ್ನಿರ್ಯೋಗೇನ ಸೀತಾವನ್ಮಾಯಾಸೀತಾಂ ಚಕಾರ ಹ ।
> ತತ್ತುಲ್ಯಗುಣರೂಪಾಂ ತಾಂ ದದೌ ರಾಮಾಯ ನಾರದ ।

ಅಗ್ನಿ ಯೋಗಸಾಮರ್ಥ್ಯದಿಂದ ಗುಣರೂಪಗಳಲ್ಲಿ ಸೀತೆಯನ್ನೆ ಹೋಲುವ ಮಾಯಾಸೀತೆಯನ್ನು ಸೃಷ್ಟಿಮಾಡಿ ಅವಳನ್ನು ರಾಮನಿಗೆ ಅರ್ಪಿಸಿದ.

> ಸೀತಾಂ ಗೃಹೀತ್ವಾ ಸ ಯಯೌ ಗೋಪ್ಯಂ ವಕ್ತುಂ ನಿಷೇಧ್ಯ ಚ ।
> ಲಕ್ಷ್ಮಣೋ ನೈವ ಬುಬುಧೇ ಗೋಪ್ಯಮನ್ಯಸ್ಯ ಕಾ ಕಥಾ ?

ಅಗ್ನಿ ನಿಜಸೀತೆಯನ್ನು ಕರೆದುಕೊಂಡು ಈ ವಿಷಯವನ್ನು ರಹಸ್ಯವಾಗಿಡಲು ರಾಮನನ್ನು ಪ್ರಾರ್ಥಿಸಿ ಹೊರಟುಹೋದ. ಇದರಿಂದ ಲಕ್ಷ್ಮಣನಿಗೂ ಈ ರಹಸ್ಯ ತಿಳಿಯದಾಯಿತು. ಇನ್ನುಳಿದವರ ಪಾಡೇನು ?

ಮುಂದೆ ರಾಮ ಬಂಗಾರದ ಜಿಂಕೆಯನ್ನು ಕಂಡ. ಸೀತೆ ಆ ಮೃಗವನ್ನು ಹಿಡಿದು ತಂದುಕೊಡಲು ರಾಮನನ್ನು ಬಹು ಯತ್ನದಿಂದ ಒಪ್ಪಿಸಿದಳು. ರಾಮ ಸೀತೆಯ ರಕ್ಷಣೆಗಾಗಿ ಲಕ್ಷ್ಮಣನನ್ನು ನಿಲ್ಲಿಸಿ ತಾನೇ ಹೊರಟ. ಹಿಡಿಯಲು ಸಿಗಲಿಲ್ಲ. ಕೊಲ್ಲಲು ಬಾಣ ಹೂಡಿದ. ಆಗ ಅದು 'ಹಾ ಲಕ್ಷ್ಮಣ' ಎಂದು ಕೂಗಿ ಪ್ರಾಣ ಬಿಟ್ಟಿತು. ಸಾಯುವ ಕ್ಷಣದಲ್ಲಿ ಕಣ್ಣಮುಂದೆ ರಾಮರೂಪಿಯಾದ ಹರಿಯನ್ನು ಕಂಡು ಅವನನ್ನು ಸ್ಮರಿಸುತ್ತ ಸತ್ತುದರಿಂದ ಮೃಗರೂಪ ಬಿಟ್ಟು ದಿವ್ಯರೂಪ ತಳೆದು ರತ್ನಖಚಿತವಾದ ವಿಮಾನವೇರಿ ವೈಕುಂಠಕ್ಕೆ ಹೋದ. ಆತ ವೈಕುಂಠದ ಮಹಾದ್ವಾರಪಾಲಕರಾದ ಜಯವಿಜಯರಲ್ಲಿ ಬಲಿಷ್ಠನಾದ ಜಯನೆ ಆಗಿದ್ದ. ಸನಕಾದಿಗಳ ಶಾಪದಿಂದ ರಾಕ್ಷಸನಾಗಿ ಜನಿಸಿ ಬಂಗಾರದ ಜಿಂಕೆಯ ರೂಪತಾಳಿದ್ದ. ಈಗ ಪುನಃ ಸ್ವಸ್ಥಾನ ಸೇರಿದ.

ಇತ್ತ 'ಹಾ ಲಕ್ಷ್ಮಣ' ಎಂಬ ಆರ್ತನಾದವನ್ನು ಕೇಳಿ ಸೀತೆ ಲಕ್ಷ್ಮಣನನ್ನು ರಾಮನ ಬಳಿಗೆ ಕಳಿಸಿದಳು. ಲಕ್ಷ್ಮಣ ಹೊರಟು ಹೋದೊಡನೆ ರಾವಣ ಸೀತೆಯನ್ನು ಎತ್ತಿಕೊಂಡು ಲಂಕೆಗೆ ಹೋದ. ಲಕ್ಷ್ಮಣ ತನ್ನ ಬಳಿಗೆ ಬಂದುದನ್ನು ರಾಮಕಂಡು ಆಶ್ರಮಕ್ಕೆ ಧಾವಿಸಿ ನೋಡಿದಾಗ ಸೀತೆಯನ್ನು ಕಾಣದೆ ಮೂರ್ಛಿತನಾದ, ದುಃಖಿಸಿದ, ವಿಲಾಪಗೈದ, ವಿಲಾಪಗೈದ. ಕಾಡಿನಲ್ಲಿ ಎಲ್ಲೆಡೆ ಅನ್ವೇಷಣೆ ಮಾಡುತ್ತ ಅಲೆದ. ಜಟಾಯುವಿನ ಮೂಲಕ ರಾವಣನ ವೃತ್ತಾಂತ ತಿಳಿದು ಕಪಿಗಳ ಸಹಾಯದಿಂದ ಸಮುದ್ರಕ್ಕೆ ಸೇತುಬಂಧನ ಮಾಡಿ ಲಂಕೆಗೆ ಹೋಗಿ ಬಂಧುಸಮೇತನಾದ ರಾವಣನನ್ನು ಕೊಂದ. ಸೀತೆಯನ್ನು ಅಗ್ನಿ ಪರೀಕ್ಷೆಗೆ ಒಳಪಡಿಸಿದ. ಆಗ ಅಗ್ನಿ ನಿಜವಾದ ಸೀತೆಯನ್ನು ರಾಮನಿಗೆ ತಂದೊಪ್ಪಿಸಿದ. ಮಾಯಾಸೀತೆ ಮುಂದೆ ತಾನೇನು ಮಾಡಬೇಕೆಂದು ರಾಮನನ್ನೂ ಅಗ್ನಿಯನ್ನೂ ವಿನಯದಿಂದ ಕೇಳಿದಳು.

'ದೇವಿ, ನೀನು ಪುಷ್ಕರ ಕ್ಷೇತ್ರದಲ್ಲಿ ತಪಸ್ಸು ಮಾಡು, ಸ್ವರ್ಗಲಕ್ಷ್ಮಿಯಾಗುವಿ' ಎಂದ ಅಗ್ನಿ. ಅದನ್ನು ಕೇಳಿ ಮೂರುಲಕ್ಷ ದಿವ್ಯ ವರ್ಷಗಳ ಕಾಲ ತಪಸ್ಸು ಮಾಡಿ ಸ್ವರ್ಗ ಲಕ್ಷ್ಮಿಯಾದಳು. ಮುಂದೆ ಯಜ್ಞಕುಂಡದಲ್ಲಿ ದ್ರೌಪದಿಯಾಗಿ ಜನಿಸಿ ದ್ರುಪದರಾಜನ ಕುಮಾರಿಯಾಗಿ ಪಾಂಡವರ ಪತ್ನಿಯಾದಳು.

ಹೀಗೆ ಕೃತಯುಗದಲ್ಲಿ ಲಕ್ಷ್ಮಿ ಕುಶಧ್ವಜನ ಮಗಳಾಗಿ ವೇದವತಿ ಎನಿಸಿದಳು. ತ್ರೇತಾಯುಗದಲ್ಲಿ ಜನಕಕುಮಾರಿ ಜಾನಕಿಯಾಗಿ ರಾಮನ ಪತ್ನಿಯಾದಳು. ಅವಳ ಛಾಯೆಯಾದ ಮಾಯಾಸೀತೆ ದ್ವಾಪರದಲ್ಲಿ ದ್ರೌಪದಿ ಎನಿಸಿದಳು. ಹೀಗೆ ಮೂರುಯುಗಗಳಲ್ಲಿ ಅವತರಿಸಿದುದರಿಂದ 'ತ್ರಿಹಾಯಣೀ' ಎನಿಸಿದಳು.

ನಾರದ— ಪ್ರಭು, ದ್ರೌಪದಿಗೆ ಐದುಮಂದಿ ಪಾಂಡವರು ಹೇಗೆ ಪತಿಗಳಾದರು ? ಈ ಸಂಶಯವನ್ನು ಪರಿಹರಿಸು.

**ನಾರಾಯಣ**— ವಾಸ್ತವ ಸೀತೆ ಲಂಕೆಯಲ್ಲಿ ರಾಮನನ್ನು ಸೇರಿದಳು. ರೂಪ ಯೌವನ ಸಂಪನ್ನಳಾದ ಛಾಯಾಸೀತೆ ರಾಮ ಅಗ್ನಿಗಳ ಆಜ್ಞೆಯಂತೆ ತಪಸ್ಸು ಮಾಡಿದಳು. ಶಿವ ಮೈದೋರಿದಾಗ ಪತಿಯನ್ನು ಬೇಡಿದಳು. ಪತಿಯಾಸೆಯಿಂದ ಪರವಶಳಾಗಿ ಪುನಃ ಪುನಃ ಬೇಡಿದಳು. 'ಪತಿಂ ದೇಹಿ' ಎಂದು ಐದು ಬಾರಿ ಬೇಡಿದುದನ್ನು ಕೇಳಿ ಮಹಾರಸಿಕನಾದ ಶಿವ ನಕ್ಕು 'ನಿನಗೆ ಐವರು ಪತಿಗಳಾಗುವರು' ಎಂದೇ ವರ ನೀಡಿದ. ಆದರಿಂದ ಅವಳು ಮುಂದೆ ಐದು ಮಂದಿ ಪಾಂಡವರಿಗೆ ಸತಿಯಾದಳು.

ಇತ್ತ ರಾಮ ಸೀತೆಯನ್ನು ಸ್ವೀಕರಿಸಿ ಲಂಕೆಯನ್ನು ವಿಭೀಷಣನಿಗಿತ್ತು. ಅಯೋಧ್ಯೆಗೆ ಹಿಂದಿರುಗಿದ. ಹನ್ನೊಂದು ಸಾವಿರ ವರ್ಷ ಭೂಮಿಯಲ್ಲಿ ರಾಜ್ಯಭಾರ ಮಾಡಿ ಸಮಸ್ತ ಪ್ರಜೆಗಳೊಂದಿಗೆ ವೈಕುಂಠಕ್ಕೆ ತೆರಳಿದ. ಲಕ್ಷ್ಮಿಯ ಅಂಶಭೂತಳಾದ ವೇದವತಿ ಲಕ್ಷ್ಮಿಯಲ್ಲಿಯೇ ಸೇರಿದಳು. ನಾಲ್ಕು ವೇದಗಳು ಮೂರ್ತಿಮತ್ತಾಗಿ ಸದಾ ನಾಲಿಗೆ ತುದಿಯಲ್ಲಿ ನರ್ತಿಸುತ್ತಿದ್ದುದರಿಂದ ಅವಳು ವೇದವತಿ ಎನಿಸಿದಳು.

ನಾರದ, ಕುಶಧ್ವಜನ ಮಗಳ ವೃತ್ತಾಂತವನ್ನು ಸಂಕ್ಷೇಪವಾಗಿ ತಿಳಿಸಿದ್ದೇನೆ. ಇನ್ನು ಮುಂದೆ ಧರ್ಮಧ್ವಜನ ಮಗಳ ವೃತ್ತಾಂತವನ್ನು ಹೇಳುತ್ತೇನೆ, ಕೇಳು.

**ಇಲ್ಲಿಗೆ ಶ್ರೀ ಬ್ರಹ್ಮವೈವರ್ತ ಮಹಾಪುರಾಣದಲ್ಲಿ ಎರಡನೆಯದಾದ ಪ್ರಕೃತಿಖಂಡದ ನಾರದನಾರಾಯಣ ಸಂವಾದದಲ್ಲಿ ವೇದವತಿಯ ಉಪಾಖ್ಯಾನವೆಂಬ ಹದಿನಾಲ್ಕನೆ ಅಧ್ಯಾಯ ಮುಗಿಯಿತು.**

## ತುಲಸೀವರಪ್ರದಾನ

**ಅಧ್ಯಾಯ-೧೫**

ನಾರಾಯಣ— ಧರ್ಮಧ್ವಜನ ಪತ್ನಿ ಮಾಧವಿ. ಅವಳು ಗಂಧಮಾದನದಲ್ಲಿ ಪತಿಯೊಂದಿಗೆ ವಿಹರಿಸಿದಳು. ಇಬ್ಬರೂ ಮಹಾರಸಿಕರು. ಹಗಲು ರಾತ್ರಿ ಎನ್ನದೆ ಸದಾ ರತಿ ಕೇಳಿಯಲ್ಲಿ ಆಸಕ್ತರಾಗಿದ್ದರು. ನೂರು ದಿವ್ಯ ವರ್ಷಗಳೆ ಉರುಳಿ ಹೋದುದು ಅವರ ಗಮನಕ್ಕೆ ಬರಲಿಲ್ಲ. ಬಳಿಕ ರಾಣಿ ರಜಸ್ವಲೆಯಾದಾಗ ಧರ್ಮಧ್ವಜ ರತಿಕ್ರೀಡೆಯನ್ನು ನಿಲ್ಲಿಸಿದ. ರಾಣಿಗೆ ಇನ್ನೂ ತೃಪ್ತಿಯಾಗಲಿಲ್ಲ. ಋತುಸ್ನಾತಳಾಗಿ ತಿರುಗಿ ಪತಿಯನ್ನು ಕೂಡಿದಳು. ಗರ್ಭಧಾರಣ ಮಾಡಿದಳು. ನೂರು ದಿವ್ಯವರ್ಷಗಳ ಕಾಲ ಗರ್ಭವನ್ನು ಹೊತ್ತು ಒಂದು ಶುಭದಿನದಲ್ಲಿ ಹೆಣ್ಣು ಶಿಶುವಿಗೆ ಜನ್ಮವಿತ್ತಳು.

ಅಂದು ಕಾರ್ತಿಕ ಹುಣ್ಣಿಮೆ, ಸೋಮವಾರ. ಐದು ಗ್ರಹಗಳು ಉಚ್ಚಸ್ಥಾನದಲ್ಲಿದ್ದು ಶುಭಯುತರಾಗಿದ್ದ ಶುಭ ಲಗ್ನ. ರಾಜರಾಜೇಶ್ವರಿ ಲಕ್ಷ್ಮಿ ಸಕಲ ಸೌಂದರ್ಯ ಲಕ್ಷಣಯುಕ್ತಳಾಗಿ ಜನಿಸಿದಳು. ಅವಳ ಮುಖ ಹುಣ್ಣಿಮೆ ಚಂದ್ರ. ಕಣ್ಣು ಶರತ್ಕಾಲದ ಕಮಲಗಳು, ತುಟಿಗಳು ತೊಂಡೆ ಹಣ್ಣುಗಳು, ಅಂಗೈ ಅಂಗಾಲುಗಳು ಕೆಂಪಗಿದ್ದುವು. ಸರ್ವಾಂಗಗಳೂ ಶೀತ ಕಾಲದಲ್ಲಿ ಬೆಚ್ಚಗೆ ಹಿತಕರವಾಗಿಯೂ ಉಷ್ಣಕಾಲದಲ್ಲಿ ತಂಪಾಗಿ ಹಿತಕರವಾಗಿಯೂ ಇದ್ದುವು. ಬಿಳಿ ಸಂಪಿಗೆಯಂತಹ ಮೈ ಬಣ್ಣ. ಸುಂದರಿಯರಲ್ಲೆಲ್ಲ ಅತ್ಯಂತ ಸುಂದರಿ ಆಕೆ.

**ನರಾ ನಾರ್ಯಶ್ಚ ತಾಂ ದೃಷ್ಟ್ವಾ ತುಲನಾಂ ದಾತುಮಕ್ಷಮಾಃ ।**
**ತೇನ ನಾಮ್ನಾ ಚ ತುಲಸೀಂ ತಾಂ ವದಂತಿ ಪುರಾವಿದಃ ॥**

ಅವಳನ್ನು ಕಂಡ ಸ್ತ್ರೀಪುರುಷರಾರಿಗೂ ಅವಳಿಗೊಂದು ಹೋಲಿಕೆ ಕೊಡಲು ಸಾಧ್ಯವಾಗಲಿಲ್ಲ. ಅದರಿಂದ 'ತುಲಸೀ' ಅಂದರೆ ಹೋಲಿಕೆ ಇಲ್ಲದ, ಅನುಪಮ ಸುಂದರಿ ಎಂದೇ ಹೆಸರಾಯಿತು.

ತುಲಸಿ ಭೂಮಿಯಲ್ಲಿ ಹುಟ್ಟಿದೊಡನೆ ಯಾರು ತಡೆದರೂ ಲೆಕ್ಕಿಸದೆ ತಪಸ್ಸಿಗಾಗಿ ಬದರಿಕಾಶ್ರಮಕ್ಕೆ ಹೋದಳು. ನಾರಾಯಣನನ್ನೆ ಪತಿಯಾಗಿ ಹೊಂದಲು ಒಂದು ಲಕ್ಷ ದಿವ್ಯ ವರ್ಷಗಳ ಕಾಲ ತಪಸ್ಸು ಮಾಡಿದಳು. ಗ್ರೀಷ್ಮದಲ್ಲಿ ಪಂಚಾಗ್ನಿಯ ಮಧ್ಯೆ ತಪಸ್ಸು, ಶಿಶಿರದಲ್ಲಿ ನೀರ ನಡುವೆ. ವರ್ಷ ಋತುವಿನಲ್ಲಿ ಮಳೆಯಲ್ಲಿ. ಮೊದಲಿಗೆ ಇಪ್ಪತ್ತು ಸಾವಿರ ವರ್ಷ ಹಣ್ಣು ಗಡ್ಡೆಗಳನ್ನು ಸೇವಿಸುತ್ತಿದ್ದಳು. ಮುಂದೆ ಮೂವತ್ತು ಸಾವಿರ ವರ್ಷ ಒಣಗಿದ ಎಲೆಗಳನ್ನು ಮಾತ್ರ ತಿಂದಳು. ನಲ್ವತ್ತು ಸಾವಿರ ವರ್ಷ ಬರಿ ಗಾಳಿ ಸೇವನೆ. ಕೊನೆಯ ಹತ್ತು ಸಾವಿರ ವರ್ಷ ಗಾಳಿ ಸೇವನೆಯನ್ನೂ ಬಿಟ್ಟಳು. ಒಂಟಿಕಾಲಲ್ಲಿ ನಿಂತು ತಪಸ್ಸು ಮಾಡುತ್ತಿದ್ದ ದೇವಿಗೆ ವರನೀಡಲು ಬ್ರಹ್ಮ ಬದರಿಕಾಶ್ರಮಕ್ಕೆ ಬಂದು, 'ತುಲಸಿ, ನಿನಗೇನು ವರ ಬೇಕು, ಹೇಳು, ಕೊಡುತ್ತೇನೆ. ಹರಿಭಕ್ತಿಯೆ, ಮುಕ್ತಿಯೆ, ಅಜರಾಮರತ್ವವೆ ?'

ತುಲಸಿ ಹೇಳಿದಳು, 'ಪಿತಾಮಹ, ಸರ್ವಜ್ಞ ನೀನು. ನಿನ್ನ ಮುಂದೆ ನನ್ನ ಮನದ ಅಭಿಲಾಷೆಯನ್ನು ತೆರೆದಿಡಲು ನಾನೇಕೆ ನಾಚಬೇಕು ? ಹೇಳುತ್ತೇನೆ, ಕೇಳು. ನಾನು ಹಿಂದೆ ಗೋಲೋಕದಲ್ಲಿ ತುಲಸಿ ಎಂಬ ಗೋಪಿ. ಕೃಷ್ಣನಿಗೆ ಪ್ರಿಯಳಾಗಿ ದಾಸಿಯಾಗಿ ಸಖಿಯಾಗಿದ್ದವಳು. ಅವನೊಡನೆ ರಮಿಸುತ್ತ ಒಮ್ಮೆ ನಾನು ಮೈಮರೆತಿದ್ದೆ. ಆಗ ರಾಧೆ ನನ್ನನ್ನು ನೋಡಿ ಶಪಿಸಿದಳು, 'ಮನುಷ್ಯಳಾಗಿ ಹುಟ್ಟು' ಎಂದು. ಕೃಷ್ಣ ಹೇಳಿದ, 'ನೀನು ಭಾರತದಲ್ಲಿ ತಪಸ್ಸು ಮಾಡು. ನನ್ನ ಅಂಶಭೂತನಾದ ನಾರಾಯಣ ನಿನಗೆ ಪತಿಯಾಗಿ ಲಭಿಸುತ್ತಾನೆ. ಹಾಗೆ ಬ್ರಹ್ಮ ನಿನಗೆ ವರನೀಡುತ್ತಾನೆ,' ಎಂದು. ಆದ್ದರಿಂದ, ಹೇ ಪಿತಾಮಹ, ನಾನು ನಾರಾಯಣನನ್ನು ಪತಿಯಾಗಿ ಹೊಂದಬೇಕು. ಹಾಗೆ ವರ ನೀಡು.'

ಬ್ರಹ್ಮ ನುಡಿದ, 'ಶ್ರೀಕೃಷ್ಣನ ಅಂಗದಿಂದ ಜನಿಸಿದ ಸುದಾಮನೆಂಬ ಗೋಪಾಲಕ ರಾಧೆಯ ಶಾಪದಿಂದ ಶಂಖಚೂಡನೆಂಬ ದಾನವನಾಗಿ ಭಾರತದಲ್ಲಿ ಜನಿಸಿದ್ದಾನೆ. ಹಿಂದೆ ಗೋಲೋಕದಲ್ಲಿ ನಿನ್ನನ್ನು ನೋಡಿ ಕಾಮಪರವಶನಾದರೂ ರಾಧೆಯ ಭಯ-ದಿಂದ ಅತಿಕ್ರಮ ಮಾಡಲಾಗಲಿಲ್ಲ. ಜಾತಿಸ್ಮರನಾದ ಅವನು ಈಗ ತಪಸ್ಸು ಮಾಡಿ ನಿನ್ನನ್ನೆ ಹೊಂದಲು ವರಪಡೆದಿದ್ದಾನೆ. ಜಾತಿಸ್ಮರಳಾದ ನೀನೂ ಇದನ್ನು ಬಲ್ಲೆ. ಆದ್ದರಿಂದ ನೀನು ಈಗ ಅವನಿಗೆ ಪತ್ನಿಯಾಗು. ಬಳಿಕ ನಾರಾಯಣನನ್ನು ಸೇರುವೆ. ನಾರಾಯಣನ ಶಾಪದಂತೆ ಒಂದು ಅಂಶದಿಂದ ವೃಕ್ಷರೂಪಳಾಗಿ ವಿಶ್ವವನ್ನು ಪಾವನ ಗೊಳಿಸುವೆ. ಎಲ್ಲ ಪುಷ್ಪಗಳಿಗಿಂತ ಶ್ರೇಷ್ಠಳಾಗಿ ವಿಷ್ಣುವಿಗೆ ಪ್ರಾಣಕ್ಕಿಂತ ಹೆಚ್ಚು ಪ್ರಿಯಳೆನಿಸುವೆ. ನೀನಿಲ್ಲದ ಪೂಜೆ ಎಲ್ಲ ವಿಫಲವಾಗುವುದು. ವೃಂದಾವನದಲ್ಲಿಯೂ ವೃಕ್ಷರೂಪಳಾಗಿ ವೃಂದಾವನಿ ಎನಿಸುವೆ. ನಿನ್ನ ಎಲೆಗಳಿಂದ ಗೋಪಗೋಪಿಯರು ಕೃಷ್ಣನನ್ನು ಪೂಜಿಸುವರು. ವೃಕ್ಷಾಧಿದೇವಿಯಾಗಿ ಗೋಪಾಲ ಕೃಷ್ಣನೊಡನೆ ಸ್ವಚ್ಛಂದ-ವಾಗಿ ವಿಹರಿಸುವೆ.'

ಈ ಮಾತನ್ನು ಕೇಳಿ ತುಲಸಿ ಹರ್ಷಗೊಂಡಳು, ಬ್ರಹ್ಮನನ್ನು ನಮಿಸಿ ನುಡಿದಳು, 'ನಾನು ನಿಜ ಹೇಳುತ್ತೇನೆ. ಶ್ಯಾಮಸುಂದರ ದ್ವಿಭುಜ ಕೃಷ್ಣನಲ್ಲಿರುವಷ್ಟು ಆಸೆ ನನಗೆ ಚತುರ್ಭುಜ ನಾರಾಯಣನಲ್ಲಿಲ್ಲ. ಕೃಷ್ಣನೊಡನೆ ನನ್ನ ಶೃಂಗಾರಾನುಭವಕ್ಕೆ ದೈವಾತ್ ವಿಘ್ನ ಬಂದುದರಿಂದ ನಾನು ಅತೃಪ್ತಳಾಗಿದ್ದು ನಾರಾಯಣನನ್ನು ಬಯಸುತ್ತಿದ್ದೇನೆ. ನಿನ್ನ ಅನುಗ್ರಹದಿಂದ ಪುನಃ ಆ ದುರ್ಲಭವಾದ ಕೃಷ್ಣನ ಸಾನ್ನಿಧ್ಯ ನನಗೆ ದೊರಕಬೇಕು ರಾಧೆಯ ಭೀತಿ ಕಳೆಯಬೇಕು.'

ಬ್ರಹ್ಮ ವರನೀಡಿದ— 'ನಾನು ನಿನಗೆ ಷೋಡಶಾಕ್ಷರದ ರಾಧಾಮಂತ್ರ ನೀಡುತ್ತೇನೆ. ಅದರಿಂದ ರಾಧೆಗೆ ನೀನು ಪ್ರಾಣಸಖಿಯಾಗುವಿ. ಕೃಷ್ಣನೊಡನೆ ನಿನ್ನ ರಹಸ್ಯ ಶೃಂಗಾರವನ್ನು ರಾಧೆ ಸಮ್ಮತಿಸುತ್ತಾಳೆ. ಆಗ ನೀನು ರಾಧೆಯಂತೆಯೆ ಕೃಷ್ಣನಿಗೆ ಪ್ರೀತಿಪಾತ್ರಳಾಗುವಿ.'

ಹೀಗೆ ಹೇಳಿ ರಾಧಾ ಷೋಡಶಾಕ್ಷರ ಮಂತ್ರವನ್ನು ಬ್ರಹ್ಮ ತುಲಸಿಗೆ ಉಪದೇಶಿ-ಸಿದ. ಸ್ತೋತ್ರ ಕವಚಗಳನ್ನೂ ಎಲ್ಲ ಪೂಜಾವಿಧಾನ ಪುರಶ್ಚರಣ ಕ್ರಮಗಳನ್ನೂ ಹೇಳಿ ಆಶೀರ್ವದಿಸಿ ಅಂತರ್ಧಾನನಾದ.

ಬ್ರಹ್ಮನ ಉಪದೇಶದಿಂದ ತುಲಸಿ ಬದರಿಕಾಶ್ರಮದಲ್ಲಿ ಮಹಾಮಂತ್ರವನ್ನು ಜಪಿಸಿದಳು. ಹನ್ನೆರಡು ದಿವ್ಯವರ್ಷಕಾಲ ಜಪಿಸಿ ಪೂಜೆಯನ್ನೂ ಮಾಡಿದಳು. ಮಂತ್ರಸಿದ್ಧಿ ಪಡೆದು ತನ್ನ ಅಭೀಷ್ಟವನ್ನು ಪೂರೈಸಿಕೊಂಡಳು. ತಪಸ್ಸಿನ ಶ್ರಮವನ್ನೆಲ್ಲ ಕಳೆದುಕೊಂಡು ಪ್ರಸನ್ನಳಾದಳು. ಶ್ರಮಕ್ಕೆ ತಕ್ಕಫಲ ದೊರೆತಾಗ ದುಃಖವೂ ಸುಖ-

ವಾಗುವುದು ತಾನೆ ? ಅನ್ನಪಾನಗಳಿಂದ ಸಂತುಷ್ಟಳಾಗಿ ಪುಷ್ಪಗಂಧಗಳಿಂದ ಸುವಾಸಿತವಾದ ಮನೋಜ್ಞವಾದ ಶಯ್ಯೆಯಲ್ಲಿ ಪವಡಿಸಿದಳು.

ಇಲ್ಲಿಗೆ ಶ್ರೀ ಬ್ರಹ್ಮವೈವರ್ತ ಮಹಾಪುರಾಣದಲ್ಲಿ ಎರಡನೆಯದಾದ ಪ್ರಕೃತಿಖಂಡದ ನಾರದನಾರಾಯಣ ಸಂವಾದದಲ್ಲಿ ತುಲಸ್ಯಾಖ್ಯಾನದ ತುಲಸೀವರಪ್ರದಾನವೆಂಬ ಹದಿನೈದನೆಯ ಅಧ್ಯಾಯ ಮುಗಿಯಿತು.

## ಬ್ರಹ್ಮನ ಆಜ್ಞೆಯಿಂದ ತುಲಸಿ ಹಾಗೂ ರಾಧೆಯ ಶಾಪದಿಂದ ದೈತ್ಯನಾಗಿ ಹುಟ್ಟಿದ ಶಂಖಚೂಡರ ಗಾಂಧರ್ವ ವಿವಾಹ. ಮಧುಚಂದ್ರವಿಹಾರ, ಶಂಖಚೂಡನಿಂದ ಪರಾಜಿತರ ದೇವತೆಗಳಿಗೆ ವಿಷ್ಣುವಿನ ಆಶ್ವಾಸನೆ

**ಅಧ್ಯಾಯ-೧೬**

ನಾರಾಯಣ ಮಹರ್ಷಿ ನುಡಿದ— 'ನಾರದ, ತುಲಸಿ ಸಂತುಷ್ಟಳಾಗಿ ಹೂವಿನ ಹಾಸಿಗೆಯಲ್ಲಿ ಮಲಗಿದಳು. ನವಯೌವನ ಸಂಪನ್ನಳಾದ ಆ ಸುಂದರಿಗೆ ಮನ್ಮಥ ಐದು ಹೂ ಬಾಣಗಳನ್ನೆಸೆದ. ಒಡನೆ ಅವಳಿಗೆ ಮೈ ನವಿರೆದ್ದಿತು. ಮೈ ಒಣಗಿದಂತಾಯಿತು. ಮೂರ್ಛೆ ಬಂದಿತು. ಎಚ್ಚರವಾಯಿತು. ಮನದಲ್ಲಿ ಏನೋ ಉದ್ವೇಗ. ಸುಖಕರವಾದ ಆಲಸ್ಯ, ಜಡತೆ, ಒಡನೆ ಮೈ ಬಿಸಿಯೇರುತ್ತದೆ. ಮನಸ್ಸು ಹುಚ್ಚಾಗುತ್ತದೆ. ತಿರುಗಿ ಚೈತನ್ಯಬರುತ್ತದೆ. ಪುನಃ ವಿಷಾದ. ಹಾಸಿಗೆಯಿಂದೆದ್ದು ಓಡಾಡುತ್ತಾಳೆ. ಉದ್ವೇಗದಿಂದ ಅತ್ತ ಇತ್ತ ಹೆಜ್ಜೆ ಹಾಕುತ್ತಾಳೆ. ಬಟ್ಟೆ ಬಿಚ್ಚಿಡುತ್ತಾಳೆ. ಉದ್ವಿಗ್ನತೆಯಿಂದ ಹಾಸಿಗೆಯಲ್ಲಿ ಮಲಗುತ್ತಾಳೆ. ಹೂವಿನ ಹಾಸಿಗೆ ಮುಳ್ಳಿನಂತಾಗುತ್ತದೆ. ಅಮೃತದಂಥ ಹಣ್ಣು ನೀರು ವಿಷದಂತಾಗುತ್ತದೆ. ನವುರಾದ ಬಟ್ಟೆಯೂ ಬೆಂಕಿಯಂತೆ. ಸಿಂದೂರದ ಪತ್ರವೂ ಕಪೋಲದಲ್ಲಿ ವ್ರಣದಂತೆ. ಒಂದು ಕ್ಷಣ ಆಲಸ್ಯದ ಅರ್ಧ ನಿದ್ದೆ ಬಂದಿತು. ಅದರಲ್ಲಿ ಒಂದು ಕನಸು. ದಿವ್ಯಾಭರಣ ಭೂಷಿತನಾದ ಸುಂದರ ಯುವಕ. ರಸಿಕ ಶಿಖಾಮಣಿ. ಸರ್ವಾಂಗ ಶ್ರೀಗಂಧ ಲೇಪಿಸಿಕೊಂಡು ದಿವ್ಯಮಾಲೆ ಧರಿಸಿ ತನ್ನ ಮುಖವನ್ನೆ ನೋಡುತ್ತ ಮುಗುಳು ನಗುತ್ತ ನಿಂತಂತೆ ಭಾಸವಾಯಿತು. ಒಡನೆ ಆತ ಹೂವಿನ ಹಾಸಿಗೆಯಲ್ಲಿ ತನ್ನನ್ನು ಗಾಢವಾಗಿ ಆಲಿಂಗಿಸಿ ಚುಂಬಿಸಿ ಏನೇನೋ ಪ್ರಣಯದ ಮಾತನ್ನಾಡಿದಂತೆ ಭಾಸವಾಯಿತು. ಒಮ್ಮೆ ಕಣ್ಮರೆಯಾಗುತ್ತಾನೆ, ಒಮ್ಮೆ ಗೋಚರನಾಗುತ್ತಾನೆ. 'ಪ್ರಾಣಕಾಂತ ನನ್ನನ್ನು ತೊರೆದು

ಎಲ್ಲಿಗೆ ಹೋಗುವೆ' ಎಂದು ಹೇಳುತ್ತ ಎಚ್ಚರಗೊಂಡು ನೋಡುತ್ತಾಳೆ, ಇದು ಬರಿ ಕನಸು. ತನ್ನ ಮನೋ ವಲ್ಲಭ ಬಳಿಯಲ್ಲಿಲ್ಲ ಎಂದು ಗೋಳಾಡುತ್ತಾಳೆ. ಹೀಗೆ ತುಳಸಿ ವಿರಹ ವ್ಯಥೆಯಿಂದ ಕಾಲ ಕಳೆಯುತ್ತಿದ್ದಳು.

ಅತ್ತ ಶಂಖಚೂಡನೂ ಸಹ ತುಲಸಿಯನ್ನು ಹೊಂದುವುದಕ್ಕಾಗಿಯೆ ಕೃಷ್ಣ-ಮಂತ್ರೋಪದೇಶ ಪಡೆದು ಪುಷ್ಕರದಲ್ಲಿ ಜಪಿಸಿ ಸಿದ್ಧಿಪಡೆದ. ಬ್ರಹ್ಮನಿಂದಲೂ ಶಿವನಿಂದಲೂ ವರಪಡೆದು ಬ್ರಹ್ಮನ ಅಪ್ಪಣೆಯಂತೆ ಬದರಿಕಾಶ್ರಮಕ್ಕೆ ಬಂದ. ಮನ್ಮಥನಂಥ ಸುಂದರ ನವಯುವಕ ಶಂಖಚೂಡ ತನ್ನ ಆಶ್ರಮಕ್ಕೆ ಬರುತ್ತಿರುವುದನ್ನು ತುಳಸಿ ಕಂಡಳು. ಬಿಳಿ ಸಂಪಿಗೆಯಂಥ ಮೈಬಣ್ಣ ಅವನದು. ಶರತ್ಕಾಲದ ಪೂರ್ಣ-ಚಂದ್ರನಂಥ ಮುಖ. ರತ್ನಕುಂಡಲಗಳಿಂದ ಶೋಭಿಸುವ ಕಪೋಲಗಲು. ಪಾರಿಜಾತದ ಮಾಲೆಯಿಂದ ಶೋಭಿಸುವ ಕಂಠ, ಹಣೆಯಲ್ಲಿ ಕಸ್ತೂರಿ ಕುಂಕುಮಗಳ ತಿಲಕ. ರತ್ನಾಭರಣಗಳಿಂದ ಅಲಂಕೃತನಾಗಿ ವ್ರಜ್ರ ವೈಡೂರ್ಯಾದಿ ಖಚಿತವಿಮಾನವೇರಿ ಹಸನ್ಮುಖನಾಗಿ ತನ್ನ ಬಳಿಯಲ್ಲೆ ಬಂದಿಳಿದ. ದೇವಿ ಲಜ್ಜೆಯಿಂದ ಮುಖವನ್ನು ಸೆರಗಿಂದ ಮುಚ್ಚಿ ಓರೆಗಣ್ಣಿಂದ ನೋಡಿ ಮಂದಹಾಸ ಬೀರಿದಳು. ಮೈಯೆಲ್ಲ ರೋಮಾಂಚಗೊಂಡಿತು. ಅವನ ಮುಖಕಮಲವನ್ನು ಕಣ್ಣುಗಳಿಂದ ಕುಡಿದು-ಬಿಡುವಂತೆ ಎವೆಯಿಕ್ಕದೆ ನೋಡಿದಳು.

ಶಂಖಚೂಡನೂ ತುಲಸಿಯನ್ನು ಏಕಾಕಿನಿಯಾಗಿ ತಪೋಪವನದಲ್ಲಿರುವುದನ್ನು ಕಂಡ. ಹೂವಿನ ಹಾಸಿಗೆಯಲ್ಲಿ ಕುಳಿತು ತನ್ನ ಮುಖವನ್ನೆ ನೋಡುತ್ತ ಮುಗುಳು ನಗುತ್ತಿರುವ ಅವಳ ಪುಟಕ್ಕಿಟ್ಟ ಚಿನ್ನದಂಥ ಶರೀರದ ಕಾಂತಿಯನ್ನು ಎಷ್ಟು ನೋಡಿದರೂ ಅವನಿಗೆ ತೃಪ್ತಿ ಇಲ್ಲವಾಯಿತು. ಬಳಿಯಲ್ಲಿ ಕುಳಿತು ಪ್ರಶ್ನಿಸಿದ,- 'ಮಂಗಳಾಂಗಿ, ನೀನಾರು ? ಯಾರ ಮಗಳು ? ಸ್ವರ್ಗಸುಖದ ಹೊಳೆಯಲ್ಲಿ ತೇಲಾಡುವ ಹೂವಿನಹಾರ ನೀನು. ಮುನಿಗಳಿಗೂ ಮೋಹ ತರಬಲ್ಲೆ. ಬಿಡು ಮೌನವನ್ನು. ಸುಂದರಿ, ಈ ದಾಸನೊಡನೆ ಮಾತನಾಡು.'

ಈ ಮಾತನ್ನು ಕೇಳಿ ತುಲಸಿ ನುಡಿದಳು, 'ನಾನು ಧರ್ಮಧ್ವಜ ರಾಜನ ಮಗಳು. ಇಲ್ಲಿ ತಪೋವನದಲ್ಲಿ ತಪಸ್ಸು ಮಾಡುತ್ತಿದ್ದೇನೆ. ನೀನಿನ್ನು ಹೊರಟುಹೋಗಬಹುದು. ಕುಲೀನೆಯಾದ ಹೆಣ್ಣನ್ನು ಕುಲೀನನಾದವನು ಏಕಾಂತದಲ್ಲಿ ಹೀಗೆ ಪ್ರಶ್ನಿಸುವುದು ಸಲ್ಲದು. ಹೀಗೆ ವೇದದಲ್ಲಿ ಹೇಳಿದೆ. ದುಷ್ಕುಲದಲ್ಲಿ ಹುಟ್ಟಿದವ ಧರ್ಮಶಾಸ್ತ್ರ ಮೀರಿ ನಡೆಯುತ್ತಾನೆ. ಲಂಪಟನಾಗಿ ಸ್ತ್ರೀಯನ್ನು ಬಯಸುತ್ತಾನೆ. ಸ್ತ್ರೀಯರು ಮಾತಿನಲ್ಲಿ ಮಧುರ, ಹೃದಯದಲ್ಲಿ ಕತ್ತಿಯ ಅಲುಗಿನಂತೆ. ತಮ್ಮ ಕಾರ್ಯ ಸಾಧಿಸಿಕೊಳ್ಳಲು ಏನು ಬೇಕಾದರೂ ಮಾಡಬಲ್ಲರು. ಮೇಲೆ ಅಮೃತ, ಒಳಗೆಲ್ಲ ವಿಷ ತುಂಬಿದ ಕೊಡ ಅವರು. ಮುಖದಲ್ಲಿ ಪ್ರಸನ್ನತೆ, ಒಳಗೆ ದ್ರೋಹ ಚಿಂತನೆ. ವೇದ ಪುರಾಣಗಳಿಗೂ

ಅವರ ಸ್ವಭಾವ ವರ್ಣನೆಗೆ ನಿಲುಕದುದು. ಅವರಲ್ಲಿ ವಿಶ್ವಾಸ ಕೂಡದು. ಅವರಿಗೆ ಯಾರು ಮಿತ್ರರು, ಯಾರು ಶತ್ರುಗಳು ? ಒಳ್ಳೆಯ ವೇಷ ಭೂಷಣಗಳಿರುವ ಯಾರಾದರೂ ಹೊಸ ಹೊಸ ಪುರುಷರು ಬೇಕು. ಹೊರಗೆ ಒಳ್ಳೆಯ ಪತಿವ್ರತೆಯಂತೆ ಕಾಣಿಸಿ ಕೊಳ್ಳುತ್ತಾರೆ. ಅಂತರಂಗದಲ್ಲಿ ಪರಪುರುಷರದೆ ಆಸೆ. ಹೊರಗೆ ಬಹು ಲಜ್ಜೆ. ಏಕಾಂತದಲ್ಲಿ ಪುರುಷನನ್ನು ನುಂಗಿ ಬಿಡುತ್ತಾರೆ. ಪುರುಷ ಸಶಕ್ತನಾದರೆ ತನ್ನ ಮಗನಿಗಿಂತಲೂ ಅವನಲ್ಲಿ ಹೆಚ್ಚು ಪ್ರೀತಿ. ಅಶಕ್ತನಾದರೆ ಶತ್ರುವಿನಂತೆ ಕಾಣುತ್ತಾರೆ. ಅವನೊಡನೆ ಸದಾ ಕೋಪ ಜಗಳ. ತಪೋಮಾರ್ಗಕ್ಕೆ ತಡೆಯೊಡ್ಡುವ ಅಗಳಿ, ಮುಕ್ತಿಮಂದಿರಕ್ಕೆ ಮುಚ್ಚಿದ ಬಾಗಿಲು, ಅವರು. ಸಂಸಾರದ ಕಾರಾಗಾರದಲ್ಲಿ ಬಂಧಿಸುವ ಸಂಕೋಲೆಯಂತಿರುವರು.'

ಶಂಖಚೂಡ ಹೇಳಿದ— ದೇವಿ, ನೀನು ಹೇಳುವುದೆಲ್ಲವೂ ಸುಳ್ಳಲ್ಲ. ಕೆಲವು ಸತ್ಯ, ಕೆಲವು ಸುಳ್ಳು, ನಾನು ಹೇಳುವುದನ್ನು ಸ್ವಲ್ಪ ಕೇಳು. ಬ್ರಹ್ಮನ ಸೃಷ್ಟಿಯಲ್ಲಿ ಎರಡು ಬಗೆಯ ಸ್ತ್ರೀಯರಿದ್ದಾರೆ. ಕೆಲವರು ಒಳ್ಳೆಯವರು, ಕೆಲವರು ಕೆಟ್ಟವರು. ಲಕ್ಷ್ಮೀ, ಸರಸ್ವತೀ, ದುರ್ಗಾ, ಸಾವಿತ್ರೀ, ರಾಧೆ, ಮುಂತಾದವರೂ ಇವರ ಅಂಶಭೂತರೂ ಆದ ಸ್ತ್ರೀಯರು ಒಳ್ಳೆಯವರು. ಯಶೋಭಾಜನರು, ಸರ್ವಮಂಗಳಗಳಿಗೆ ಕಾರಣರು. ಶತರೂಪಾ, ದೇವಹೂತಿ, ಸ್ವಧಾಸ್ವಾಹಾ ದಕ್ಷಿಣಾ ಛಾಯಾವತೀ ರೋಹಿಣೀ ವರುಣಾನೀ ಶಚೀ ಮನೋರಮಾ ವಾಯವೀ ದಿತಿ ಅದಿತಿ ಲೋಪಾಮುದ್ರಾ ಅನಸೂಯಾ ಕೈಟಭೀ ತುಲಸೀ ಅಹಲ್ಯಾ ಆರುಂಧತೀ ಮೇನಾ ತಾರಾ ಮಂದೋದರೀ ದಮಯಂತೀ ವೇದವತೀ ಗಂಗಾ ಯಮುನಾ ಪುಷ್ಟಿ ತುಷ್ಟಿ ಸ್ಮೃತಿ ಮೇಧಾ ಕಾಲಿಕಾ ವಸುಂಧರಾ ಷಷ್ಠೀ ಮಂಗಳ ಚಂಡೀ, ಮೂರ್ತಿ ಸ್ವಸ್ತಿ ಶ್ರದ್ಧಾ ಕಾಂತಿ ತುಷ್ಟಿ ಶಾಂತಿ ನಿದ್ರಾ ತಂದ್ರಾ ಕ್ಷುತ ಪಿಪಾಸಾ ಸಂಧ್ಯಾ ರಾತ್ರಿ ಸಂಪತ್ತಿ ವೃತ್ತಿ ಕೀರ್ತಿ ಕ್ರಿಯಾ ಶೋಭಾ ಪ್ರಭಾ ಮುಂತಾದ ಉತ್ತಮ ಸ್ತ್ರೀಯರೆಲ್ಲರೂ ಒಳ್ಳೆಯ ಸ್ವಭಾವದವರು. ದೇವವೇಶ್ಯೆಯರು ಮುಂತಾದವರು ಕೆಟ್ಟವರು. ಸತ್ವಗುಣದ ಸ್ತ್ರೀ-ಯರೆಲ್ಲ ಸ್ವಭಾವದಿಂದ ಒಳ್ಳೆಯವರು. ಉತ್ತಮರು, ಪತಿವ್ರತೆಯರು. ರಜೋಗುಣ ತಮೋಗುಣದವರು ಇಬ್ಬರೂ ಕೆಟ್ಟವರು.

**ಸ್ಥಾನಾಭಾವಾತ್ ಕ್ಷಣಾಭಾವಾತ್ ಮಧ್ಯವೃತ್ತೇರಭಾವತಃ**
**ದೇಹಕ್ಲೇಶೇನ ರೋಗೇಣ ಸತ್‌ಸಂಸರ್ಗೇಣ ಸುಂದರಿ ।**
**ಬಹುಗೋಷ್ಠ್ಯಾವೃತತ್ವೇನ ರಿಪುರಾಜಭಯೇನ ಚ**
**ರಜೋರೂಪಸ್ಯ ಸಾಧ್ವೀತ್ವ ಮೇತೇನೈವೋಪಜಾಯತೇ ॥**

ಸ್ಥಲಾವಕಾಶ ಸಿಗದಿರುವುದರಿಂದ ಕಾಲಾವಕಾಶವಿಲ್ಲದುದರಿಂದ ಮಧ್ಯವರ್ತಿಗಳ ಸಹಾಯ ದೊರೆಯದಿರುವುದರಿಂದ ದೇಹಾಲಸ್ಯದಿಂದ ರೋಗದಿಂದ ಸಜ್ಜನರು

ಜೊತೆಗಿರುವುದರಿಂದ, ಬಹು ಜನಗಳ ನಡುವೆ ವಾಸಮಾಡುತ್ತಿರುವುದರಿಂದ ಶತ್ರು-ಗಳ ಭಯದಿಂದ ರಾಜರ ಭಯದಿಂದ ಹೀಗೆ ಹಲವಾರು ಕಾರಣಗಳಿಂದ ರಜೋ-ಗುಣ ಸ್ವಭಾವದವರಾದ ಮಧ್ಯಮ ವರ್ಗದ ಸ್ತ್ರೀಯರು ನೀತಿ ಉಳ್ಳವರಾಗಿರುತ್ತಾರೆ.

ತಮೋಗುಣ ಸ್ವಭಾವದವರು ಅಧಮಸ್ತ್ರೀಯರು, ಯಾರ ಅಂಕೆಗೂ ಸಿಗದವರು. ಅಂಥವರನ್ನು ಸತ್ಕುಲ ಪ್ರಸೂತನಾದ ಜ್ಞಾನಿಯಾದ ಪುರುಷ ಏಕಾಂತದಲ್ಲಿ ಮಾತನಾಡಿಸಕೂಡದು. ನಾನು ಈಗ ಬ್ರಹ್ಮನ ಅಪ್ಪಣೆಯಂತೆ ನಿನ್ನನ್ನು ಗಾಂಧರ್ವ ವಿಧಿಯಿಂದ ವಿವಾಹವಾಗಲು ನಿನ್ನ ಬಳಿಗೆ ಬಂದಿದ್ದೇನೆ. ದೇವತೆಗಳಿಗೆ ಭಯಂಕರ-ನೆನಿಸಿದ ಶಂಖಚೂಡನೆಂದು ಪ್ರಸಿದ್ಧನಾದ ದಾನವ ನಾನೇ. ಹಿಂದೆ ಗೋಲೋಕದಲ್ಲಿ ಕೃಷ್ಣನ ಪಾರ್ಷದರಾದ ಎಂಟು ಮಂದಿ ಮುಖ್ಯ ಗೋಪಾಲಕರಲ್ಲಿ ಒಬ್ಬನಾದ ಸುದಾಮನಾಗಿದ್ದೆ. ನಿನ್ನನ್ನು ಬಯಸಿ ರಾಧೆಯ ಶಾಪದಿಂದ ದಾನವನಾಗಿ ಹುಟ್ಟಿದ್ದೇನೆ. ಕೃಷ್ಣಮಂತ್ರದ ಪ್ರಭಾವದಿಂದ ನನ್ನ ಪೂರ್ವಜನ್ಮ ವೃತ್ತಾಂತವನ್ನು ಸ್ಮರಿಸಬಲ್ಲ-ವನಾಗಿದ್ದೇನೆ. ನೀನೂ ಪೂರ್ವಜನ್ಮದಲ್ಲಿ ಹರಿಯಲ್ಲಿ ಅನುರಕ್ತಳಾಗಿ ರಾಧೆಯ ಶಾಪದಿಂದ ಭೂಮಿಯಲ್ಲಿ ಹುಟ್ಟಿದ ತುಲಸೀದೇವಿ. ನಿನಗೂ ನಿನ್ನ ಪೂರ್ವಜನ್ಮ ಸ್ಮರಣೆ ಇದೆ. ಈಗ ನಾನು ನಿರ್ಭೀತಿಯಿಂದ ನಿನ್ನೊಡನೆ ವಿಹರಿಸಲು ಬಂದಿರುವೆ. ಹಿಂದೆ ರಾಧೆಯ ಭಯದಿಂದ ನಿನ್ನನ್ನು ಸೇರಲಾಗಲಿಲ್ಲ.'

ತುಲಸಿ ಹೇಳಿದಳು, 'ನಿನ್ನಂಥ ಜ್ಞಾನಿಗಳನ್ನೇ ಜ್ಞಾನಿಗಳು ಪ್ರಶಂಸೆ ಮಾಡುತ್ತಾರೆ. ಸ್ತ್ರೀಯರೂ ನಿನ್ನಂಥ ಪುರುಷರನ್ನೇ ಬಯಸುತ್ತಾರೆ. ಅಜ್ಞಾನಿಗಳಾಗಿ ಸ್ತ್ರೀಯರಿಗಿಂತ ಕಡೆಯಾದ ಪುರುಷರನ್ನು ಪಿತೃಗಳು ದೇವತೆಗಳು ಬಾಂಧವರು ಎಲ್ಲರೂ ಅವಹೇಳನ ಮಾಡುತ್ತಾರೆ. ಅಂಥ ಪುರುಷರು ಸದಾ ಅಶುಚಿ. ಅವರ ಆಶೌಚಕ್ಕೆ ಶುದ್ಧಿಯೇ ಇಲ್ಲ. ಜಾತಾ ಶೌತ ಮೃತಾಶೌಚಗಳೂ ಬ್ರಾಹ್ಮಣನಿಗೆ ಹತ್ತುದಿನ, ಕ್ಷತ್ರಿಯನಿಗೆ ಹನ್ನೆರಡು ದಿನ, ವೈಶ್ಯನಿಗೆ ಹದಿನೈದು ದಿನ, ಶೂದ್ರನಿಗೆ ಒಂದು ತಿಂಗಳು ಮಾತ್ರವಿರುತ್ತವೆ. ಸ್ತ್ರೀಗಿಂತ ಕಡೆಯಾದ ಅಜ್ಞಾನಿಪುರುಷನ ಆಶೌಚ ಅವನ ಶವ ದಾಹಕಾಲದ ವರೆಗೂ ಇರುತ್ತದೆ. ಅವನ ಕೈಯಿಂದ ಪಿತೃಗಳು ಪಿಂಡತರ್ಪಣ ಸ್ವೀಕರಿಸರು. ದೇವತೆಗಳು ಹೂ ಹಣ್ಣು ನೀರು ಮುಂತಾದುವನ್ನು ಸ್ವೀಕರಿಸರು. ಅವನು ಎಷ್ಟು ವಿದ್ಯೆ ಕಲಿತರೇನು, ತಪಸ್ಸು ಮಾಡಿದರೇನು, ಜಪ ಹೋಮ ಪೂಜೆಗಳನ್ನು ಮಾಡಿದರೇನು ?

ನಾನು ನಿನ್ನ ಜ್ಞಾನದ ಮಟ್ಟವನ್ನು ಅಳೆಯಲೆಂದು ನಿನ್ನನ್ನು ಪರೀಕ್ಷಿಸಿದೆ. ಕನ್ಯೆ ವರನನ್ನು ಪರೀಕ್ಷಿಸಿಯೆ ವರಿಸಬೇಕು ತಾನೆ ? ಗುಣವಿಲ್ಲದವ, ಮುದುಕ, ಅಜ್ಞಾನಿ, ದರಿದ್ರ, ಮೂರ್ಖ, ರೋಗಿ, ದುಷ್ಟ, ಅತ್ಯಂತ ಕೋಪಿಷ್ಠ, ಅತ್ಯಂತ ಕೆಟ್ಟಮಾತಾಡು-ವವ, ಕುಂಟ, ಕುರುಡ, ಕಿವುಡ, ಅಂಗವಿಕಲ, ಜಡ, ಮೂಕ, ನಪುಂಸಕ, ಪಾತಕಿ -ಇಂಥ ವರನಿಗೆ ಕನ್ಯಾದಾನ ಮಾಡಿದರೆ ಬ್ರಹ್ಮಹತ್ಯಾದೋಷ. ಶಾಂತ ಸ್ವಭಾವದವ

ಗುಣವಂತ ಯೌವನಶಾಲಿ ಜ್ಞಾನಿ ವಿಷ್ಣುಭಕ್ತ -ಇಂಥ ವರನಿಗೆ ಕನ್ಯಾದಾನ ಮಾಡಿದರೆ ಹತ್ತು ಅಶ್ವಮೇಧ ಯಾಗದ ಫಲವಿದೆ-

**ಶಾಂತಾಯ ಗುಣಿನೇ ಚೈವ ಯೂನೇ ಚ ವಿದುಷೇಽಪಿ ಚ ।**
**ವೈಷ್ಣವಾಯ ಸುತಾಂ ದತ್ವಾ ದಶವಾಜಿಫಲಂ ಲಭೇತ್ ॥**

ಯಾವ ತಂದೆ ಕಷ್ಟದಲ್ಲಿ ಸಿಲುಕಿಯೋ ಹಣದ ಆಸೆಯಿಂದಲೊ ಅಯೋಗ್ಯನಾದ ವರನಿಗೆ ಕನ್ಯೆಯನ್ನು ಮಾರುವನೋ ಅವನು ಕುಂಭೀಪಾಕನರಕ ಹೊಂದುತ್ತಾನೆ. ಅಲ್ಲಿ ಕನ್ಯೆಯ ಮಲಮೂತ್ರಗಳನ್ನೆ ಆ ಪಾಪಿ ಭಕ್ಷಿಸಬೇಕಾಗುತ್ತದೆ. ಕ್ರಿಮಿಗಳಿಂದ ಕಾಗೆ-ಗಳಿಂದ ಕಚ್ಚಿಸಿಕೊಂಡು ಹದಿನಾಲ್ಕು ಇಂದ್ರರ ಕಾಲದವರೆಗೆ ಇರಬೇಕಾಗುತ್ತದೆ. ಕೊನೆಗೆ ಬೇಡನಾಗಿ ಹುಟ್ಟಿ ಮಾಂಸ ಭಾರವನ್ನು ಹೊತ್ತು ತಂದು ಮಾರಿ ಜೀವಿಸುತ್ತಾನೆ-

**ಯಃ ಕನ್ಯಾಪಾಲನಂ ಕೃತ್ವಾ ಕರೋತಿ ವಿಕ್ರಯಂ ಯದಿ ।**
**ವಿಪದಾ ಧನಲೋಭೇನ ಕುಂಭೀಪಾಕಂ ಸ ಗಚ್ಛತಿ ॥**

**ಕನ್ಯಾಮೂತ್ರ ಪುರೀಷಂ ಚ ತತ್ರ ಭಕ್ಷತಿ ಪಾತಕೀ ।**
**ಕೃಮಿಭಿರ್ದಂಶಿತಃ ಕಾಕೈರ್ಯಾವದಿಂದ್ರಾಶ್ಚತುರ್ದಶಃ ॥**

**ತದಂತೇ ವ್ಯಾಧಯೋನೌ ಚ ಲಭತೇ ಜನ್ಮ ನಿಶ್ಚಿತಂ ।**
**ವಿಕ್ರೀಣಾತಿ ಮಾಂಸಭಾರಂ ವಹತ್ಯೇವ ದಿವಾನಿಶಂ ॥**

ತುಲಸಿ ಇಷ್ಟು ಹೇಳಿ ಸುಮ್ಮನಾದಳು. ಆಗ ಬ್ರಹ್ಮ ಬಂದು 'ಶಂಖಚೂಡ, ನೀನು ಮಾತಿನಲ್ಲಿ ಕಾಲಕಳೆಯಬೇಡ. ಈಕೆಯನ್ನು ಗಾಂಧರ್ವವಿಧಿಯಿಂದ ಮದುವೆ-ಯಾಗು. ನೀನು ಪುರುಷ ರತ್ನ. ಈಕೆ ಸ್ತ್ರೀರತ್ನ. ಕುಶಲನಾದ ಪ್ರೌಢ ಪುರುಷ ಅಂಥ ಸ್ತ್ರೀಯನ್ನೆ ಸೇರಬೇಕು. ಅದು ಶೋಭಿಸುತ್ತದೆ-

**ವಿದಗ್ಧಾಯಾ ವಿದಗ್ಧೇನ ಸಂಗಮೋ ಗುಣವಾನ್ ಭವೇತ್ ।**

ಧರ್ಮಕ್ಕೆ ಅವಿರುದ್ಧವಾಗಿ ಲಭಿಸಿದ ದುರ್ಲಭವಾದ ಸುಖವನ್ನು ಯಾವ ವಿವೇಕಿ ತ್ಯಜಿಸುತ್ತಾನೆ ?

**ಯೋಽವಿರೋಧಸುಖತ್ಯಾಗೀ ಸ ಪಶುರ್ನಾತ್ರ ಸಂಶಯಃ ।**

ಧರ್ಮಕ್ಕೆ ಅವಿರುದ್ಧವಾಗಿ ಲಭಿಸಿದ ಸುಖವನ್ನು ಬಿಡುವವನು ಪಶುವೆ ಸರಿ, ಸಂಶಯವಿಲ್ಲ. ತುಲಸಿ, ನೀನೂ ಇಂಥ ಒಳ್ಳೆಯ ಪತಿಯನ್ನು ಬಿಡುವುದು ಯುಕ್ತವಲ್ಲ. ಈತ ದೇವ ಅಸುರ ದಾನವರನ್ನೆಲ್ಲ ಮರ್ದಿಸಬಲ್ಲ ಪರಾಕ್ರಮಿ. ಲಕ್ಷ್ಮಿನಾರಾಯಣನಲ್ಲಿ, ರಾಧೆ ಕೃಷ್ಣನಲ್ಲಿ, ಸಾವಿತ್ರಿ ನನ್ನಲ್ಲಿ, ಪಾರ್ವತಿ ಶಿವನಲ್ಲಿ,

ಭೂದೇವಿ ವರಾಹನಲ್ಲಿ, ಮೇನೆ ಹಿಮವಂತದಲ್ಲಿ, ಅನಸೂಯೆ ಅತ್ರಿಯಲ್ಲಿ, ದಮಯಂತಿ ನಳನಲ್ಲಿ, ರೋಹಿಣಿ ಚಂದ್ರನಲ್ಲಿ, ಅದಿತಿ ಕಶ್ಯಪನಲ್ಲಿ, ಅರುಂಧತಿ ವಸಿಷ್ಠನಲ್ಲಿ, ಅಹಲ್ಯೆ ಗೌತಮನಲ್ಲಿ, ದೇವಹೂತಿ ಕರ್ದಮನಲ್ಲಿ, ತಾರೆ ಬೃಹಸ್ಪತಿಯಲ್ಲಿ, ಶತರೂಪೆ ಸ್ವಾಯಂಭುವ ಮನುವಿನಲ್ಲಿ, ದಕ್ಷಿಣೆ ಯಜ್ಞನಲ್ಲಿ, ಸ್ವಾಹೆ ಅಗ್ನಿಯಲ್ಲಿ, ಶಚಿ ಇಂದ್ರನಲ್ಲಿ, ಪುಷ್ಟಿ ಗಣಪತಿಯಲ್ಲಿ, ದೇವಸೇನೆ ಷಣ್ಮುಖನಲ್ಲಿ, ಮೂರ್ತಿ ಧರ್ಮನಲ್ಲಿ ಅನುರಕ್ತನಾಗಿ ಸೌಭಾಗ್ಯವತಿಯರಾದಂತೆ ನೀನೂ ಶಂಖಚೂಡನಲ್ಲಿ ಸೇರಿ ಸುಖಿಸು. ಯಥೇಚ್ಛ ವಿಹರಿಸು. ಮುಂದೆ ಅವನ ಮರಣಾನಂತರ ಗೋಲೋಕದಲ್ಲಿ ಕೃಷ್ಣನನ್ನೂ ವೈಕುಂಠದಲ್ಲಿ ಹರಿಯನ್ನೂ ಹೊಂದುವೆ.' ಹೀಗೆ ಆಶೀರ್ವದಿಸಿ ಬ್ರಹ್ಮ ತನ್ನ ಲೋಕಕ್ಕೆ ತೆರಳಿದ.

ಶಂಖಚೂಡ ಗಾಂಧರ್ವ ವಿಧಿಯಿಂದ ತುಲಸಿಯನ್ನು ವಿವಾಹವಾದ. ದೇವತೆಗಳು ಅಭಿನಂದಿಸಿ ದುಂದುಭಿ ಮೊಳಗಿಸಿದರು, ಪುಷ್ಪವೃಷ್ಟಿ ಮಾಡಿಸಿದರು. ತುಲಸಿ ಶಂಖಚೂಡನೊಡನೆ ಏಕಾಂತದಲ್ಲಿ ರತಿಸುಖದ ಸಾಗರದಲ್ಲಿ ವಿಹರಿಸಿದಳು. ಆಕೆ, ರಸಿಕಳು. ಈತ, ರಸಿಕ. ರಸಿಕರಿಗೆ ಕಾಮಶಾಸ್ತ್ರ ತೋರಿದ ಅರವತ್ತನಾಲ್ಕು ಕಲೆಯನ್ನೂ ಅರವತ್ತನಾಲ್ಕು ರತಿವಿಧಿಯನ್ನೂ ತಿಳಿದವ. ಅತ್ಯಂತ ರಮ್ಯವಾದ ಪ್ರದೇಶಗಳಲ್ಲಿ ಏಕಾಂತದಲ್ಲಿ ಹೂವಿನ ಹಾಸಿಗೆಯನ್ನೇರಿ ಅವಳನ್ನು ರಮಿಸಿದ. ನದೀತೀರಗಳಲ್ಲಿ ಪುಷ್ಪೋದ್ಯಾನಗಳಲ್ಲಿ ವಿಹರಿಸಿದ. ರತಿಕಲಾನಿಪುಣರಾದ ಅವರ ರತಿಕೇಳಿಗಳಿಗೆ ಕೊನೆಯೆ ಇರಲಿಲ್ಲ. ಒಬ್ಬರು ಇನ್ನೊಬ್ಬರ ಮನಸ್ಸನ್ನು ಕದ್ದರು. ಪರಸ್ಪರ ಆಲಿಂಗನ ದಂತಕ್ಷತ ನಖಕ್ಷತಗಳನ್ನಿತ್ತರು. ಬಳಿಕ ಎದ್ದು ಆಕೆ ಈತನಿಗೆ ಕುಂಕುಮ ಶ್ರೀಗಂಧಗಳ ತಿಲಕವಿತ್ತಳು. ಸರ್ವಾಂಗಗಳಿಗೆ ಚಂದನ ಲೇಪಿಸಿದಳು ಗಮಗಮಿಸುವ ತಾಂಬೂಲ ನೀಡಿದಳು. ಶುದ್ಧ ವಸ್ತ್ರಗಳನ್ನು ಉಡಿಸಿದಳು. ಪಾರಿಜಾತದ ಹೂಮಾಲೆ ಹಾಕಿದಳು ಅಮೂಲ್ಯ ರತ್ನದುಂಗುರ ತೊಡಿಸಿದಳು. 'ನಾ ನಿನ್ನ ದಾಸಿ' ಎನ್ನುತ್ತ ಭಕ್ತಿಯಿಂದ ನಮಿಸಿದಳು. ಅವನ ನಗುಮೊಗವನ್ನು ಕಣ್ಣುಗಳಿಂದ ಕುಡಿದುಬಿಡುವಂತೆ ಎವೆಯಿಕ್ಕದೆ ನೋಡಿದಳು. ಆತ ಅವಳನ್ನು ಬರಸೆಳೆದು ಬಿಗಿಯಪ್ಪಿದ. ಸೆರಗಿಂದ ಮುಚ್ಚಿದ ಮುಖಕಮಲಕ್ಕೆ ಚುಂಬನವಿತ್ತ. ವರುಣನಿಂದ ತಂದ ಜೋಡಿವಸ್ತ್ರಗಳನ್ನೂ ಮೂಲೋಕ ಪ್ರಸಿದ್ಧವಾದ ರತ್ನಮಾಲೆಯನ್ನೂ ನೀಡಿದ. ಸ್ವಾಹೆಯಿಂದ ತಂದ ಮಣಿನೂಪುರುಗಳನ್ನು ಛಾಯೆಯಿಂದ ತಂದ ಜೋಡಿ ಬಾಹುಪುರಿಗಳನ್ನು ರೋಹಿಣಿಯಿಂದ ತಂದ ಕುಂಡಲಗಳನ್ನೂ ರತಿಯಿಂದ ತಂದ ರತ್ನದುಂಗುರಗಳನ್ನು ವಿಶ್ವಕರ್ಮನಿಂದ ತಂದ ಶಂಖದಾಭರಣವನ್ನೂ ಹಾಗೇ ಚಿತ್ರವಿಚಿತ್ರ ಆಭರಣಗಳು ಶಯ್ಯೆಪೀಠಗಳು ಮುಂತಾದುವನ್ನೂ ತುಲಸಿಗೆ ನೀಡಿದ. ತಲೆಗೆ ಹೂ ಮುಡಿಸಿದ. ಕಪೋಲಗಳಲ್ಲಿ ಮನ್ಮಥವಿಜಯದ ಲೇಖದಂತೆ ಮಕರಿಕಾದಿ ಪತ್ರಿಕೆಗಳನ್ನು ಬರೆದ. ಸಿಂದೂರದ ತಿಲಕವಿಟ್ಟ. ಅಂಗಾಲುಗಳಿಗೆ ಅಲಕ್ತಕ ಲೇಪಿಸಿದ. ಕೆಂಪಾದ

ತಾವರೆಯಿಂದ ಆ ಅಂಗಾಲುಗಳನ್ನು ತನ್ನೆದೆ ಮೇಲಿರಿಸಿಕೊಂಡು 'ದೇವಿ, ನಾ ನಿನ್ನ ದಾಸ,' ಎಂದ. ರತ್ನಖಚಿತವಾದ ವಿಮಾನದಲ್ಲಿ ಕೂಡಿಸಿ ತಬ್ಬಿಕೊಂಡ. ರಮ್ಯವಾದ ಪರ್ವತಗಳಲ್ಲಿ ವನಗಳಲ್ಲಿ ಹೂದೋಟಗಳಲ್ಲಿ ಪರ್ವತ ಗುಹೆಗಳಲ್ಲಿ ನದೀ ತೀರಗಳಲ್ಲಿ ವಿಹರಿಸಿದ. ದೇವತೆಗಳ ನಂದನ ವನದಲ್ಲಿ ಗಂಧಮಾದನದಲ್ಲಿ ದುಂಬಿ-ಗಳ ಧ್ವನಿಯಿಂದ ಮನೋಹರವಾದ ಅನೇಕ ವಸಂತಗಳನ್ನು ಕಳೆದ. ಚಂದನ ಸಂಪಿಗೆ ತಾಳೆ ಜಾಜಿ ಮೊಲ್ಲೆ ತಾವರೆ ಪಾರಿಜಾತಗಳ ವನಗಳಲ್ಲಿ ಸಂಚರಿಸಿದ. ಮನ ಬಂದಂತೆ ಪ್ರೇಯಸಿಯೊಡನೆ ಕ್ರೀಡಿಸಿದ. ಎಷ್ಟು ಕ್ರೀಡಿಸಿದರೂ ಹವಿಸ್ಸಿನಿಂದ ಅಗ್ನಿ ವರ್ಧಿಸು-ವಂತೆ ಅವನ ಕಾಮೇಚ್ಛೆ ವರ್ಧಿಸಿತೇ ಹೊರತು ತೃಪ್ತಿ ಹೊಂದಲಿಲ್ಲ. ಪುನಃ ತನ್ನ ಅರಮನೆಯಲ್ಲಿ ರಮ್ಯವಾದ ಕ್ರೀಡಾಮಂದಿರ ನಿರ್ಮಿಸಿ ಅದರಲ್ಲಿ ಕ್ರೀಡಿಸಿದ. ಹೀಗೆ ಒಂದು ಮನ್ವಂತರಕಾಲ ತುಲಸಿಯೊಡನೆ ಕೂಡಿದ್ದು ರಾಜ್ಯಭಾರ ನಡೆಸಿದ.

ದೇವತೆಗಳು ಅಸುರರು ದಾನವರು ಗಂಧರ್ವರು ಕಿನ್ನರರು ರಾಕ್ಷಸರು ಇವರೆಲ್ಲ-ರಿಗೂ ಈತನೆ ಶಾಸ್ತಿ ಮಾಡುತ್ತಿದ್ದ. ದೇವತೆಗಳು ತಮ್ಮ ತಮ್ಮ ಅಧಿಕಾರ ಕಳೆದು-ಕೊಂಡು ಭಿಕ್ಷುಕರಂತೆ ಅಲೆಯ ತೊಡಗಿದರು. ಅವರಿಗೆ ಸಲ್ಲುವ ಪೂಜೆ ಹೋಮಾದಿ-ಗಳನ್ನೂ ಈತ ತಡೆದ. ಅವರ ಸಿಂಹಾಸನ ಶಸ್ತ್ರಾಸ್ತ್ರಗಳು ಆಭರಣಗಳು ಮುಂತಾದು-ವನ್ನು ಕಿತ್ತುಕೊಂಡ. ದೇವತೆಗಳು ಈಗ ಏನೂ ಕೆಲಸವಿಲ್ಲದೆ ಚಿತ್ರದಲ್ಲಿ ಬರೆದಂತೇ ಗೊಂಬೆಗಳಂತೇ ಇದ್ದರು.

ಎಲ್ಲರೂ ದುಃಖದಿಂದ ಬ್ರಹ್ಮನ ಬಳಿಗೆ ಬಂದರು. ತಮ್ಮ ವೃತ್ತಾಂತವನ್ನು ಹೇಳಿ ಮರುಗಿದರು. ಬ್ರಹ್ಮ ಅವರನ್ನು ಕರೆದುಕೊಂಡು ಶಿವನ ಬಳಿಗೆ ಹೋಗಿ ಎಲ್ಲವನ್ನೂ ವಿವರಿಸಿದ. ಬ್ರಹ್ಮ ಶಿವರಿಬ್ಬರೂ ಎಲ್ಲರನ್ನೂ ಕರೆದುಕೊಂಡು ವೈಕುಂಠಕ್ಕೆ ಹೋದರು.

ವೈಕುಂಠ ಹರಿಯ ಧಾಮ. ಸುದುರ್ಲಭ. ಜರಾಮರಣಗಳು ಅಲ್ಲಿ ಇಲ್ಲ. ದ್ವಾರಗಳಲ್ಲಿ ಪೀತಾಂಬರ ಉಟ್ಟು ರತ್ನಭೂಷಣ ಭೂಷಿತರಾದ ರತ್ನ ಸಿಂಹಾಸನದಲ್ಲಿ ಮಂಡಿಸಿದ ದ್ವಾರ ಪಾಲಕರಿರುವರು. ನಾಲ್ಕು ಕೈಗಳ ಶ್ಯಾಮ ಸುಂದರ ಶರೀರ ಅವರದು. ಶಂಖಚಕ್ರಗದಾ ಪದ್ಮಗಳನ್ನು ಧರಿಸಿದ್ದಾರೆ, ವನಮಾಲೆ ತೊಟ್ಟಿದ್ದಾರೆ. ತಾವರೆಯಂತಹ ಮುಖ, ತಾವರೆಯಂತಹ ಕಣ್ಣುಗಳು. ನಗುಮೊಗದ ಆದ್ವಾರ ಪಾಲಕರಲ್ಲಿ ಬ್ರಹ್ಮ ತಮ್ಮ ಆಗಮನ ವೃತ್ತಾಂತ ತಿಳಿಸಿ ಅವರ ಅನುಜ್ಞೆ ಪಡೆದು ಅರಮನೆಯನ್ನು ಪ್ರವೇಶಿಸಿದ. ಹದಿನಾರು ಬಾಗಿಲುಗಳನ್ನು ದಾಟಿ ಹರಿಯ ಓಲಗ ಶಾಲೆಯನ್ನು ಪ್ರವೇಶಿಸಿದ. ಅಲ್ಲಿ ಎಲ್ಲೆಲ್ಲೂ ನಾರಾಯಣ ಸ್ವರೂಪರಾದ ಕೌಸ್ತುಭ ಭೂಷಿತರಾದ ಚತುರ್ಭುಜರಾದ ಪಾರ್ಷದರೇ ತುಂಬಿದ್ದರು.

ಆ ಸಭಾಭವನ ಚತುರಸ್ರಾಕಾರವಾಗಿದ್ದು ಮಣಿ ಖಚಿತವಾಗಿದೆ. ವಜ್ರ-ವೈಡೂರ್ಯಗಳಿಂದ ಅಲಂಕೃತವಾಗಿದೆ. ಮುತ್ತು ಮಾಣಿಕ್ಯಹಾರಗಳಿಂದ ಶೋಭಿಸುತ್ತಿದೆ.

ರತ್ನಕನ್ನಡಿಗಳಿಂದ, ಪದ್ಮರಾಗದ ಕೃತ್ರಿಮ ಕಮಲಗಳಿಂದ ಮಣಿನಿರ್ಮಿತ ಸೋಪಾನಗಳಿಂದ, ಇಂದ್ರನೀಲದ ಕಂಬಗಳಿಂದ, ರತ್ನಮಯ ಪೂರ್ಣಕುಂಭಗಳಿಂದ ಪಾರಿಜಾತ ಮಾಲೆಗಳಿಂದ ಕಸ್ತೂರಿ ಕುಂಕುಮ ಶ್ರೀಗಂಧ ರಸಗಳಿಂದ, ವಿದ್ಯಾಧರಿ-ಯರ ಕರ್ಣಾನಂದಕರವಾದ ಸಂಗೀತ ಧ್ವನಿಗಳಿಂದ ಶೋಭಿಸುವ ಆ ಭವನ ಸಹಸ್ರ ಯೋಜನ ದೀರ್ಘವಾಗಿದೆ.

ಬ್ರಹ್ಮ ಎಲ್ಲ ದೇವತೆಗಳೊಡನೆ ಬಂದು ಆ ಸಭಾಭವನದಲ್ಲಿ ನಡುವೆ ಕುಳಿತಿದ್ದ ಹರಿಯನ್ನು ಕಂಡ. ನಕ್ಷತ್ರಗಳ ಮಧ್ಯದಲ್ಲಿ ಚಂದ್ರನಂತೆ ಎಲ್ಲ ಸಭಾಸದರ ನಡುವೆ ರತ್ನಖಚಿತ ವಿಚಿತ್ರ ಸಿಂಹಾಸನದಲ್ಲಿ ಭಗವಂತನಿದ್ದ. ಕಿರೀಟ ಕುಂಡಲಗಳಿಂದ ವನಮಾಲೆಯಿಂದ ಭೂಷಿತನಾಗಿ ಚತುರ್ಭುಜಗಳಲ್ಲಿ ಶಂಖ ಚಕ್ರ ಗದಾಪದ್ಮಗಳನ್ನು ಧರಿಸಿ ಷಮೂಲ್ಯ ರತ್ನಾಭರಣಗಳನ್ನು ತೊಟ್ಟು ಸರ್ವಾಂಗಗಳಿಗೆ ಚಂದನ ಲೇಪಿಸಿ-ಕೊಂಡು ತಾಂಬೂಲ ಮೆಲ್ಲುತ್ತ ಕೈಯಲ್ಲಿ ಕ್ರೀಡಾ ಕಮಲವನ್ನು ಹಿಡಿದಿದ್ದ. ಮುಂದೆ ನಡೆಯುತ್ತಿದ್ದ ನೃತ್ಯ ಗೀತಾದಿಗಳನ್ನು ಸಂತೋಷದಿಂದ ಅನುಭವಿಸುತ್ತಿದ್ದ. ಲಕ್ಷ್ಮೀ ಸರಸ್ವತಿಯರು ಅವನ ಕಾಲುಗಳನ್ನು ಒತ್ತುತ್ತಿದ್ದರು. ಗಂಗೆ ಬಿಳಿಯಾದ ಚಾಮರ ಬೀಸುತ್ತಿದ್ದಳು. ಎಲ್ಲ ಭಕ್ತರೂ ಭಕ್ತಿಯಿಂದ ತಲೆಬಾಗಿ ಸ್ತೋತ್ರ ಮಾಡುತ್ತಿದ್ದರು.

ಬ್ರಹ್ಮಾದಿ ದೇವತೆಗಳು ಭಗವಂತನನ್ನು ಕಂಡು ರೋಮಾಂಚಿತರಾದರು. ಕಣ್ಣು-ಗಳಲ್ಲಿ ಆನಂದ ಬಾಷ್ಪ ಸುರಿಸಿದರು. ಗದ್ಗದ ಕಂಠದಿಂದ ಭಯ ಭಕ್ತಿ ಪೂರ್ವಕವಾಗಿ ತಲೆಬಾಗಿ ಸ್ತುತಿಸಿದರು. ಬಳಿಕ ಬ್ರಹ್ಮ ಕೈಮುಗಿದು ವಿನಯದಿಂದ ಹರಿಯ ಮುಂದೆ ತಮ್ಮ ಆಗಮನ ವೃತ್ತಾಂತವನ್ನು ನಿವೇದಿಸಿದ. ಸರ್ವಜ್ಞ, ಸರ್ವರ ಅಂತರಂಗವನ್ನು ಅರಿಯಬಲ್ಲವ. ಆದರೂ ಬ್ರಹ್ಮನ ಮಾತು ಕೇಳಿದ. ನಕ್ಕು ರಹಸ್ಯದಲ್ಲಿ ಹೇಳಿದ—

'ಬ್ರಹ್ಮ, ಶಂಖಚೂಡನ ವೃತ್ತಾಂತವನ್ನೆಲ್ಲ ನಾನು ಬಲ್ಲೆ. ಆತ ನನ್ನ ಭಕ್ತನಾದ ಗೋಪಾಲಕ, ಸುದಾಮನಾಗಿದ್ದ. ನಾನೊಮ್ಮೆ ರಾಧೆಯನ್ನು ಬಿಟ್ಟು ಒಬ್ಬನೆ ರಾಸ-ಮಂಡಲಕ್ಕೆ ಹೋದೆ. ವಿರಜಾದೇವಿಯೊಡನೆ ವಿಹರಿಸಿದೆ. ಇದನ್ನು ತಿಳಿದು ರಾಧೆ ಕುಪಿತಳಾಗಿ ಅಲ್ಲಿಗೆ ಬಂದಳು. ಆಗಲೆ ವಿರಜೆ ನದಿಯಾಗಿ ಹರಿಯ ತೊಡಗಿದ್ದಳು, ನಾನು ಅಂತರ್ಧಾನನಾಗಿದ್ದೆ. ರಾಧೆ ಹಿಂತಿರುಗಿದಳು. ಬಳಿಕ ಒಮ್ಮೆ ಸುದಾಮ-ನೊಂದಿಗೆ ನಾನಿದ್ದಾಗ ಆಕೆ ನನ್ನನ್ನು ಆಕ್ಷೇಪಿಸಿ ನುಡಿದಳು. ನಾನು ಸುಮ್ಮನಿದ್ದೆ. ಸುದಾಮನಿಗೆ ಕೋಪ ತಡೆಯಲಾಗಲಿಲ್ಲ. ಆತ ನನ್ನಿದಿರೇ ರಾಧೆಯನ್ನು ಆಕ್ಷೇಪಿಸಿದ. ರಾಧೆ ಕುಪಿತಳಾಗಿ ಅವನನ್ನು ಮಂದಿರದಿಂದ ಹೊರದೂಡಲು ಆಜ್ಞೆ ಮಾಡಿದಳು. ಒಡನೆ ಲಕ್ಷ ಸಖಿಯರು ಎದ್ದು ಅವನನ್ನು ಹೊರದೂಡಿದರು. ಆಗಲೂ ಆತ ಕೋಪದಿಂದ ಮನಬಂದಂತೆ ನುಡಿಯುತ್ತಿದ್ದುದನ್ನು ಕೇಳಿ ರಾಧೆ ಅಧಿಕ ಕೋಪದಿಂದ 'ದಾನವನಾಗಿ ಜನಿಸು' ಎಂದು ಕಠೋರವಾದ ಶಾಪವಿತ್ತಳು. ಸುದಾಮ ಅಳುತ್ತ

ನನಗೆ ವಂದಿಸಿ ಹೊರಗೆ ಹೊರಟ. ರಾಧೆ ಶಾಂತಳಾಗಿ ದಯೆಯಿಂದ 'ವತ್ಸ, ಸುದಾಮ, ನಿಲ್ಲು, ಎಲ್ಲಿಗೆ ಹೋಗುತ್ತಿರುವೆ ?' ಎಂದು ಹೇಳುತ್ತ ಅವನ ಹಿಂದೆ ಹಿಂದೆ ನಡೆದಳು. ಗೋಪ ಗೋಪಿಯರೆಲ್ಲ ದುಃಖದಿಂದ ಕಣ್ಣೀರು ಸುರಿಸಿದರು. ನಾನು ರಾಧೆಯನ್ನು ಸಂತೈಸುತ್ತ 'ದೇವಿ, ಆತ ಹೋಗಲಿ ಬಿಡು. ನಿನ್ನ ಶಾಪ ವಚನವನ್ನು ನಡೆಸಿಕೊಟ್ಟು ಅರೆಕ್ಷಣದಲ್ಲಿ ಹಿಂತಿರುಗಿ ಇಲ್ಲಿಗೇ ಬರುತ್ತಾನೆ,' ಎಂದೆ. ನನ್ನ ಮಾತು ಸುಳ್ಳಾಗುವುದಿಲ್ಲ. ಗೋಲೋಕದ ಅರೆಕ್ಷಣವೆಂದರೆ ಭೂಲೋಕಕ್ಕೆ ಒಂದು ಮನ್ವಂತರದಷ್ಟಾಗುತ್ತದೆ. ಆದ್ದರಿಂದ ಬ್ರಹ್ಮ, ಶಂಖ ಚೂಡ ಪುನಃ ಗೋಲೋಕಕ್ಕೆ ಹಿಂತಿರುಗುವ ಕಾಲವೀಗ ಪ್ರಾಪ್ತವಾಗಿದೆ. ನನ್ನ ಶೂಲವನ್ನು ಸಂಹರಿಸಲಿ. ಅವನು ಸರ್ವಮಂಗಳಕರವಾದ ನನ್ನ ಕವಚಮಂತ್ರವನ್ನು ಸರ್ವದಾ ಕಂಠದಲ್ಲಿ ಧರಿಸಿರುವುದರಿಂದ ಸದಾ ವಿಜಯಿ. ಅವನನ್ನು ಯಾರೂ ಕೊಲ್ಲಲಾರರು. ಅದರಿಂದ ನಾನೇ ಬ್ರಾಹ್ಮಣ ವೇಷ ಧರಿಸಿ ಆ ಕವಚ ಮಂತ್ರವನ್ನು ಯಾಚಿಸುವೆ. ಅವನ ಪತ್ನಿಯ ಪಾತಿವ್ರತ್ಯ ಭಂಗವಾದಾಗಲೆ ಅವನಿಗೆ ಮರಣವೆಂದು ನೀನೆ ಶಾಪನೀಡಿರುವೆ. ಆದ್ದರಿಂದ ನಾನು ಅವನ ಪತ್ನಿಯಲ್ಲಿ ಗರ್ಭಾಧಾನ ಮಾಡುವೆ. ಅದೇಕ್ಷಣದಲ್ಲಿ ಆತನಿಗೆ ಮರಣವಾಗುವುದು ನಿಶ್ಚಿತ. ಅನಂತರ ಆಕೆ ಶರೀರತ್ಯಾಗ ಮಾಡಿ ನನ್ನ ಪತ್ನಿಯಾಗುವಳು.

ಹೀಗೆ ಹೇಳಿ ಹರಿ ಶಿವನಿಗೆ ಶೂಲವನ್ನಿತ್ತ. ದೇವತೆಗಳೆಲ್ಲರೂ ಭಾರತ ಭೂಮಿಗೆ ಬಂದರು.

**ಇಲ್ಲಿಗೆ ಶ್ರೀ ಬ್ರಹ್ಮವೈವರ್ತ ಮಹಾಪುರಾಣದಲ್ಲಿ ಎರಡನೆಯದಾದ ಪ್ರಕೃತಿಖಂಡದ ನಾರದನಾರಾಯಣ ಸಂವಾದದಲ್ಲಿ ತುಲಸೀಶಂಖಚೂಡ ಸಂಭೋಗವರ್ಣನೆ ಎಂಬ ಹದಿನಾರನೆ ಅಧ್ಯಾಯ ಮುಗಿಯಿತು.**

# ಅಧ್ಯಾಯ-೧೭

# ಶಿವನಿಂದ ಶಂಖಚೂಡನ ಕಡೆಗೆ ಪುಷ್ಪದಂತನ ಪ್ರೇಷಣೆ. ಪುಷ್ಪದಂತನ ಬುದ್ಧಿವಾದ. ಅದನ್ನು ತಿರಸ್ಕರಿಸಿ ಶಂಖಚೂಡ ತುಲಸಿಯೊಂದಿಗೆ ವಿಹರಿಸಿದ್ದು

ನಾರಾಯಣ ಮಹರ್ಷಿ— ನಾರದ, ಶಂಖಚೂಡನ ಸಂಹಾರಕ್ಕೆ ಶಿವನನ್ನು ನೇಮಿಸಿ ಬ್ರಹ್ಮ ತನ್ನ ಲೋಕಕ್ಕೆ ತೆರಳಿದ. ಶಿವ ಚಂದ್ರಭಾಗಾ ನದೀತೀರದಲ್ಲಿ ಒಂದು ಆಲದ ಮರದ ಕೆಳಗೆ ಕುಳಿತು ದೇವತೆಗಳ ಕಷ್ಟನಿವಾರಣೆಗಾಗಿ ಚಿಂತಿಸಿದ. ಗಂಧರ್ವ ಶ್ರೇಷ್ಠನಾದ ಪುಷ್ಪದಂತನನ್ನು ಶಂಖಚೂಡನ ಬಳಿಗೆ ದೂತನನ್ನಾಗಿ ಕಳಿಸಿದ.

ಶಂಖಚೂಡನ ನಗರದ ಸೌಂದರ್ಯ ಇಂದ್ರನ ಅಮರಾವತಿಗಿಂತಲೂ ಕುಬೇರನ ಅಲಕಾನಗರಿಗೂ ಮಿಗಿಲಾಗಿದ್ದಿತ್ತು. ಹತ್ತು ಯೋಜನ ಉದ್ದ, ಐದು ಯೋಜನ ಅಗಲ. ಸುತ್ತಲೂ ದುರ್ಗಮವಾದ ಏಳು ಕಂದಕಗಳು. ಒಳಗೆ ನೂರು ಕೋಟಿ ಮನೆಗಳು. ನಡುವೆ ಶಂಖಚೂಡನ ಅರಮನೆ. ಅದು ವೃತ್ತಾಕಾರವಾಗಿದ್ದು ಸುತ್ತಲೂ ಉರಿವ ಬೆಂಕಿಯ ಜ್ವಾಲೆಗಳಿಂದ ಕೂಡಿದ ನಾಲ್ಕು ಕಂದಕಗಳು. ಶತ್ರುಗಳಿಗೆ ಬಲು ದುರ್ಗಮ. ಮಿತ್ರರಿಗೆ ಅಷ್ಟೇ ಸುಗಮ. ಅತ್ಯುನ್ನತ ಗಗನಚುಂಬಿ ಮಣಿಗೋಪುರ-ಗಳಿಂದ ಶೋಭಿಸುವ ಆ ಅರಮನೆಗೆ ಹನ್ನೆರಡು ದ್ವಾರಗಳು. ಒಳಗೆ ರತ್ನಖಚಿತವಾದ ಲಕ್ಷ ಮನೆಗಳು. ಸುತ್ತಲೂ ನೂರುಕೋಟಿ ದಾನವರು ರಕ್ಷಣೆಗಿದ್ದರು. ಪುಷ್ಪದಂತ ಮಹಾದ್ವಾರಕ್ಕೆ ಬಂದು ದ್ವಾರಪಾಲಕನನ್ನು ಕಂಡ. ಆತ ಕೆಂಬಣ್ಣದ ಶರೀರದವ. ಹೊಂಬಣ್ಣದ ಕಣ್ಣುಗಳು. ಕೈಯಲ್ಲಿ ತ್ರಿಶೂಲ. ಮುಖದಲ್ಲಿ ಮಂದಹಾಸವಿದ್ದರೂ ನೋಡಲು ಭಯಂಕರ. ಪುಷ್ಪದಂತ ತನ್ನ ಆಗಮನದ ಕಾರಣ ತಿಳಿಸಿ ಅವನ ಅನುಮತಿಯಿಂದ ಒಂಬತ್ತು ದ್ವಾರಗಳನ್ನು ದಾಟಿ ಒಳಗೆ ನಡೆದ. ದೂತನ ವೇಷ-ದಲ್ಲಿದ್ದುದರಿಂದ ಯಾವ ದ್ವಾರಪಾಲಕರೂ ಅವನನ್ನು ತಡೆಯಲಿಲ್ಲ. ಒಳ ಬಾಗಿಲಿನ ಸಮೀಪಕ್ಕೆ ಬಂದು ದ್ವಾರಪಾಲಕನ ಅನುಮತಿಯಿಂದ ಸಭಾಮಧ್ಯದಲ್ಲಿ ಸುವರ್ಣ-ಸಿಂಹಾಸನದಲ್ಲಿ ಸುವರ್ಣ ಛತ್ರದ ಕೆಳಗೆ ಕುಳಿತ ಶಂಖಚೂಡನನ್ನು ಕಂಡ. ಅವನ ಸುತ್ತಲೂ ಮೂರುಕೋಟಿ ದಾನವ ವೀರರು ಸೇರಿದ್ದರು. ನೂರು ಕೋಟಿ ಬೇರೆ ಶಸ್ತ್ರಧಾರಿಗಳೂ ಇದ್ದರು. ಪುಷ್ಪದಂತ ಶಿವನ ಸಂದೇಶವನ್ನು ನಿವೇದಿಸಿದ-

'ಮಹಾರಾಜ, ನಾನು ಪುಷ್ಪದಂತನೆಂಬ ಶಿವನ ದೂತ. ದೇವತೆಗಳ ರಾಜ್ಯವನ್ನು ಅವರಿಗೇ ಹಿಂದಿರುಗಿಸು. ಅವರು ದೇವೋತ್ತಮನಾದ ಶ್ರೀಹರಿಯನ್ನು ಮೊರೆ ಹೊಕ್ಕಿರುವರು. ಶ್ರೀಹರಿ ನಿನ್ನ ಸಂಹಾರಕ್ಕಾಗಿ ತ್ರಿಶೂಲವಿತ್ತು ಶಿವನನ್ನು ಕಳಿಸಿರುವನು. ಈಗ ಶಿವ ಚಂದ್ರಭಾಗಾ ನದೀತೀರದ ಒಂದು ಆಲದ ಮರದ ಬುಡದಲ್ಲಿ ಬಿಡಾರ ಮಾಡಿ ಕುಳಿತಿದ್ದಾನೆ. ದೇವತೆಗಳ ರಾಜ್ಯವನ್ನು ಅವರಿಗೆ ಬಿಟ್ಟುಕೊಡುವೆಯಾ ? ಅಥವಾ ಯುದ್ಧಕ್ಕೆ ಸಿದ್ಧನಾಗುವೆಯಾ ? ಶಿವನಿಗೆ ನಾನೇನು ಹೇಳಲಿ, ಹೇಳು.'

ಶಂಖಚೂಡ ನಕ್ಕು ಹೇಳಿದ, 'ಬೆಳಿಗ್ಗೆ ಬರುತ್ತೇನೆ, ನೀನು ಹೋಗು' ಎಂದ. ಪುಷ್ಪದಂತ ಹಿಂತಿರುಗಿ ಶಿವನಿಗೆ ಈ ವಿಷಯವನ್ನು ತಿಳಿಸಿದ. ಒಡನೆ ಶಿವನ ಬಳಿಗೆ ಅವನ ಪರಿವಾರದವರೆಲ್ಲ ಬಂದುಸೇರಿದರು. ಷಣ್ಮುಖ, ವೀರಭದ್ರ ನಂದಿ ಮಹಾಕಾಲ, ಸುಭದ್ರ, ವಿಶಾಲಾಕ್ಷ, ಬಾಣ, ಪಿಂಗಲಾಕ್ಷ, ವಿಕಂಪನ, ವಿರೂಪ, ವಿಕೃತಿ, ಮಣಿಭದ್ರ, ಬಾಷ್ಕಲ, ಕಪಿಲಾಕ್ಷ, ದೀರ್ಘದಂಷ್ಟ್ರ ವಿಕಟ, ತಾಮ್ರಲೋಚನ, ಕಾಲಕಂಠ, ಬಲೀಭದ್ರ, ಕಾಲಜಿಹ್ವ, ಕುಟೀಚರ, ಬಲೋನ್ಮತ್ತ, ರಣಶ್ಲಾಘೀ, ದುರ್ಜಯ, ದುರ್ಗಮ, ಅಷ್ಟಭೈರವರು, ಏಕಾದಶರುದ್ರರು, ಅಷ್ಟವಸುಗಳು, ದ್ವಾದಶ, ಆದಿತ್ಯರು, ಅಗ್ನಿ, ಚಂದ್ರ, ವಿಶ್ವಕರ್ಮ, ಅಶ್ವಿನೀಕುಮಾರರು, ಕುಬೇರ, ಯಮ, ಜಯಂತ, ನಲಕೂಬರ, ವಾಯು, ವರುಣ, ಬುಧ, ಮಂಗಲ, ಧರ್ಮ, ಶನಿ, ಈಶಾನ, ಮನ್ಮಥ ಇವರೆಲ್ಲ ಬಂದರು. ಉಗ್ರದಂಷ್ಟ್ರ ಉಗ್ರಚಂಡಾ ಕೋಟರೀ ಕೈಟಭೀ ಎಂಬ ದೇವಿಯರೂ ಬಂದರು.

ಸ್ವಯಂ ನೂರು ತೋಳುಗಳ ಭಯಂಕರ ರೂಪದ ಭದ್ರಕಾಳಿಯೂ ಬಂದಳು. ರತ್ನ ನಿರ್ಮಿತ ವಿಮಾನವೇರಿ ಕುಣಿಯುತ್ತ ನಗುತ್ತ ಹಾಡುತ್ತ ಕೆಂಪುಬಟ್ಟೆ, ಕೆಂಪುಮಾಲೆ, ಕೆಂಪು ಗಂಧ ಲೇಪನಗಳಿಂದ ಶತ್ರುಗಳಿಗೆ ಭಯ ಉಂಟುಮಾಡುತ್ತ, ಭಕ್ತರಿಗೆ ಅಭಯ ನೀಡುತ್ತ, ಸ್ವತಃ ನಿರ್ಭಯಳಾದ ದೇವಿ ಬಂದಳು. ಒಂದು ಯೋಜನ ಉದ್ದಕ್ಕೆ ಚಾಚಿ ಕುಣಿವ ಭಯಂಕರ ನಾಲಿಗೆ. ಯೋಜನ ದೀರ್ಘವಾದ ವರ್ತುಲಾಕಾರದ ಭಯಂಕರ ಕೋರೆದಾಡೆ. ಯೋಜನ ಉದ್ದದ ಶಕ್ತ್ಯಾಯುಧ, ಗಗನ ಸ್ಪರ್ಶಿಯಾದ ತ್ರಿಶೂಲ. ಶಂಖ, ಚಕ್ರ, ಗದಾ, ಪದ್ಮ, ಬಿಲ್ಲು, ಬಾಣ, ಮುದ್ಗರ, ಮುಸಲ, ವಜ್ರ, ಖಡ್ಗ, ಫಲಕಗಳನ್ನು ಕೈಗಳಲ್ಲಿ ಹಿಡಿದಿದ್ದಳು. ಇಷ್ಟೇ ಅಲ್ಲದೆ ವೈಷ್ಣವಾಸ್ತ್ರ ವಾರುಣಾಸ್ತ್ರ ಆಗ್ನೇಯಾಸ್ತ್ರ ನಾಗಪಾಶ, ನಾರಾಯಣಾಸ್ತ್ರ ಬ್ರಹ್ಮಾಸ್ತ್ರ ಗಂಧರ್ವಾಸ್ತ್ರ ಗರುಡಾಸ್ತ್ರ ಪರ್ಜನ್ಯಾಸ್ತ್ರ ಪಾಶುಪತಾಸ್ತ್ರ ಜೃಂಭಣಾಸ್ತ್ರ ಪರ್ವತಾಸ್ತ್ರ ಮಾಹೇಶ್ವರಾಸ್ತ್ರ ವಾಯವ್ಯಾಸ್ತ್ರ ದಂಡ, ಸಂಮೋಹನಾಸ್ತ್ರ ಹೀಗೆ ನಾನಾ ಬಗೆಯ ನೂರಾರು ಶಸ್ತ್ರಗಳನ್ನು ಹಿಡಿದಿದ್ದಳು. ಮೂರುಕೋಟಿ ಯೋಗಿನಿಯರು, ಮೂರುಕೋಟಿ ಡಾಕಿನಿಯರು, ಅವಳ ಪರಿವಾರದವರು.

ಸ್ಕಂದನ ಪರಿವಾರದವರು ಭೂತ, ಪ್ರೇತ, ಪಿಶಾಚ, ಕೂಷ್ಮಾಂಡ, ಬ್ರಹ್ಮರಾಕ್ಷಸ, ಬೇತಾಳ, ಯಕ್ಷ, ರಾಕ್ಷಸ, ಕಿನ್ನರರು. ಅವರೊಡನೆ ಸ್ಕಂದ ಆಗಮಿಸಿ ತಂದೆಯಾದ ಶಿವನ ಬಳಿ ಅವನಾಜ್ಞೆಯಂತೆ ಕುಳಿತ.

ಇತ್ತ ದೂತನನ್ನು ಕಳಿಸಿ ಶಂಖಚೂಡ ಅಂತಃಪುರವನ್ನು ಪ್ರವೇಶಿಸಿ ತುಲಸಿಗೆ ಈ ಯುದ್ಧದ ವೃತ್ತಾಂತ ತಿಳಿಸಿದ. ಅವಳು ಇದನ್ನು ಕೇಳಿದೊಡನೆ ವಿಷಾದಗೊಂಡು ಒಣಗಿದ ಗಂಟಲು ತುಟಿ ನಾಲಿಗೆಗಳಿಂದ ನುಡಿದಳು—

'ಓ ನನ್ನ ಪ್ರಾಣನಾಥ, ಒಂದು ಕ್ಷಣ ನನ್ನನ್ನು ತಬ್ಬಿಕೊಳ್ಳು, ಒಂದು ಕ್ಷಣ ನನ್ನ ಜೀವವನ್ನು ಕಾಪಾಡು. ಒಂದೇಕ್ಷಣ ನಿನ್ನನ್ನು ನೋಡಿ ನನ್ನ ಕಣ್ಣುಗಳ ದಾಹ ತಣಿಸುವೆನು. ನನ್ನ ಪ್ರಾಣವೀಗ ದೋಲಾಯಮಾನವಾಗಿದೆ. ಹೃದಯ ಸುಡುತ್ತಿದೆ. ಇಂದೆ ಮುಂಜಾವದಲ್ಲಿ ನಾನು ದುಃಸ್ವಪ್ನವನ್ನೂ ಕಂಡೆ.'

ಶಂಖಚೂಡ ಒಂದಿಷ್ಟೂ ಉದ್ವಿಗ್ನನಾಗದೆ ಯಥೇಚ್ಛ ಉಂಡು ಪಾನೀಯವನ್ನೂ ಸವಿದು ಹಿತವೂ ಸತ್ಯವೂ ಆದ ಮಾತುಗಳನ್ನಾಡಿದ, 'ದೇವಿ, ಶುಭ ಹರ್ಷ ಸುಖದುಃಖ ಭಯ ರೋಗ ಅಮಂಗಲಗಳೆಲ್ಲ ಕಾಲಾನುಸಾರ ಕರ್ಮವಶದಿಂದ ಬರಲೇಬೇಕು. ಗಿಡವು ಮರವಾಗುವುದು, ಕೊಂಬೆಗಳು ಮೂಡುವುದು, ಹೂವಾಗುವುದು ಕಾಯಾಗುವುದು ಹಣ್ಣಾಗುವುದು ಬಿದ್ದು ನಾಶವಾಗುವುದು ಎಲ್ಲವೂ ಕಾಲಾನುಸಾರ ನಡೆದೇ ತೀರುತ್ತದೆ ತಾನೆ ! ಅದೇ ರೀತಿ ಜೀವಿಗಳು ಕಾಲಾನುಸಾರ ಹುಟ್ಟುತ್ತಾರೆ. ಕಾಲಾನುಸಾರ ಸಾಯುತ್ತಾರೆ. ಬ್ರಹ್ಮಾಂಡಗಳು ಕಾಲಾನುಸಾರ ಉತ್ಪನ್ನವಾಗಿ ಕಾಲಾನುಸಾರ ಲಯ ಹೊಂದುತ್ತವೆ. ಕಾಲಬಂದಾಗ ಸೃಷ್ಟಿಕರ್ತ ಸೃಜಿಸುತ್ತಾನೆ. ಕಾಲ ಬಂದಾಗ ಪಾಲನಕರ್ತ ಪಾಲಿಸುತ್ತಾನೆ. ಕಾಲ ಬಂದಾಗ ಲಯಕರ್ತ ಲಯಗೈಯುತ್ತಾನೆ. ಬ್ರಹ್ಮ ವಿಷ್ಣು ಶಿವಾದಿಗಳಿಗೊಡೆಯನಾದ ಪ್ರಕೃತಿ-ಯಿಂದಾಚೆ ಇರುವ ಭಗವಂತನೆ ಕಾಲಾನುಗುಣವಾಗಿ ಸೃಷ್ಟಿ ಸ್ಥಿತಿ ಲಯಗಳನ್ನು ಮಾಡುತ್ತಾನೆ. ಕಾಲ ಬಂದಾಗ ಅವನೆ ಪ್ರಕೃತಿಯಿಂದ ಪ್ರಪಂಚ ಸೃಷ್ಟಿಮಾಡುತ್ತಾನೆ, ನಾಶ ಮಾಡುತ್ತಾನೆ. ಆದ್ದರಿಂದ ತುಲಸಿ, ತ್ರಿಗುಣಾತೀತನಾದ ಸರ್ವೇಶನಾದ ಪರಬ್ರಹ್ಮ ರಾಧಾರಮಣನನ್ನು ಭಜಿಸು. ಅವನಾಜ್ಞೆಯಂತೆಯೆ ವಾಯು ಬೀಸುತ್ತಾನೆ, ಸೂರ್ಯ ಬೆಳಗುತ್ತಾನೆ. ಇಂದ್ರ ಮಳೆಗರೆಯುತ್ತಾನೆ. ಮೃತ್ಯು ಜೀವಿಗಳ-ನ್ನೆಳೆದೊಯ್ಯಲು ಓಡುತ್ತಾನೆ. ಅಗ್ನಿ ಸುಡುತ್ತಾನೆ. ಚಂದ್ರ ಹೆದರಿ ತಿರುಗುತ್ತಾನೆ. ಆ ಭಗವಂತನೆ ಮೃತ್ಯುವಿಗೆ ಮೂಲ, ಕಾಲಕ್ಕೆ ಮೂಲ, ಯಮನಿಗೆ ಯಮ, ಸೃಷ್ಟಿಕರ್ತನಿಗೆ ಸೃಷ್ಟಿಕರ್ತ, ಪಾಲಕನಿಗೆ ಪಾಲಕ, ಸಂಹಾರಕನಿಗೆ ಸಂಹಾರಕ, ಅವನನ್ನೆ ಶರಣಾಗು, ಯಾರು ಯಾರಿಗೆ ತಾನೆ ಬಂಧುಗಳು ? ಸರ್ವಬಂಧುವಾದ ಅವನನ್ನೆ ಭಜಿಸು. ನಾನಾರು, ನೀನಾರು ? ಅದೃಷ್ಟ ನಮ್ಮನ್ನು ಒಂದು ಮಾಡಿತು. ಅದೇ ಅದೃಷ್ಟ ನಮ್ಮನ್ನು ಅಗಲಿಸುತ್ತಿದೆ. ದುಃಖ ಬಂದಾಗ ಆಪತ್ತಿನಲ್ಲಿ ಸಿಲುಕಿದಾಗ ಅಜ್ಞಾನಿ ಕಾತರನಾಗುತ್ತಾನೆ. ಜ್ಞಾನಿ ಹಾಗಾಗುವುದಿಲ್ಲ. ಏಕೆಂದರೆ ಸುಖಾನಂತರ ದುಃಖ, ದುಃಖಾನಂತರ ಸುಖ ಹೀಗೆ ಚಕ್ರಧಾರೆಯಂತೆ ಸುತ್ತುತ್ತಲೆ ಇರುತ್ತವೆ. ನೀನು ಮುಂದೆ ಸರ್ವೇಶ್ವರನಾದ ನಾರಾಯಣನನ್ನೆ ಪತಿಯಾಗಿ ಪಡೆಯುವೆ. ಅದಕ್ಕಾಗಿ ತಾನೆ ಬದರಿಕಾಶ್ರಮದಲ್ಲಿ ನೀನು ತಪಗೈದೆ ? ನೀನು ನನಗೆ ದೊರೆತುದು ಬ್ರಹ್ಮನ ವರದಿಂದ. ನೀನಾದರೊ ಹರಿಗಾಗಿ ತಪಸ್ಸು ಮಾಡಿದೆ. ಆದರಿಂದ ಹರಿಯನ್ನೆ ಪಡೆಯುವೆ. ಗೋಲೋಕದ ವೃಂದಾವನದಲ್ಲಿ ಕೃಷ್ಣನನ್ನೂ ಹೊಂದುವೆ. ಆಗ ನಾನೂ

ಈ ದಾನವ ಶರೀರವನ್ನು ತೊರೆದು ಆ ಲೋಕಕ್ಕೆ ಬರುವೆನು. ಅಲ್ಲಿ ನೀನು ನನ್ನನ್ನು ನಾನು ನಿನ್ನನ್ನು ಸದಾ ನೋಡಬಹುದು. ರಾಧೆಯ ಶಾಪದಿಂದ ಬಂದಿದ್ದೇನೆ. ಅದು ತೀರಿದಾಗ ಹಿಂತಿರುಗುತ್ತೇನೆ. ಇದರಲ್ಲಿ ಶೋಕ ಪಡುವುದೇನಿದೆ ? ನೀನೂ ನಿನ್ನ ಈ ಶರೀರವನ್ನು ತೊರೆದು ದಿವ್ಯರೂಪತಳೆದು ಹರಿಯನ್ನು ಹೊಂದುವೆ. ದುಃಖಿಸಬೇಡ,' ಹೀಗೆ ಹೇಳಿ ಹಿಂದೆ ಭಾಂಡೀರವನದಲ್ಲಿ ಕೃಷ್ಣ ನೀಡಿದ್ದ ದಿವ್ಯಜ್ಞಾನವನ್ನೂ ಉಪದೇಶಿಸಿ ತುಲಸಿಯನ್ನು ಶಂಖಚೂಡ ಸಂತೈಸಿದ. ಅಂದು ರಾತ್ರಿ ರತ್ನಮಂದಿರದಲ್ಲಿ ಹೂವಿನ ಹಾಸಿಗೆ ಮೇಲೆ ಅವಳೊಡನೆ ಮಲಗಿದ. ರತ್ನದೀಪಗಳ ನಡುವೆ ಈ ಸ್ತ್ರೀರತ್ನವನ್ನು ರಮಿಸುತ್ತ ನಾನಾ ಬಗೆಯ ರತಿಕ್ರೀಡೆಗಳಿಂದ ರಾತ್ರಿಯನ್ನೆಲ್ಲ ಕಳೆದ. ತುಲಸಿಯೂ ಶಂಖಚೂಡನ ಉಪದೇಶದಿಂದ ಜ್ಞಾನವನ್ನು ಪಡೆದು ಸರ್ವವನ್ನೂ ನಶ್ವರವೆಂದು ತಿಳಿದು ಶೋಕವನ್ನು ತ್ಯಜಿಸಿದಳು. ದಂಪತಿಗಳು ಸುಖಸಾಗರದಲ್ಲಿ ಮುಳುಗಿ ರೋಮಾಂಚಿತರಾಗಿ ಮೈಮರೆತರು. ಅಂಗ ಪ್ರತ್ಯಂಗಗಳೊಂದನ್ನೂ ಬಿಡದೆ ಗಾಢವಾಗಿ ಆಲಿಂಗಿಸಿಕೊಂಡರು. ಇಬ್ಬರಿಗೂ ಒಂದೇ ಶರೀರವೊ ಎಂಬಂತೆ, ಅರ್ಧನಾರೀಶ್ವರರಂತೆ ಕಂಡುಬಂದರು. ಸುಖಸಂಭೋಗದಿಂದ ನಿಶ್ಚೇಷ್ಟರಾಗಿ ಮಲಗಿದರು. ಬಳಿಕ ಎದ್ದು ಸರಸಸಲ್ಲಾಪಗೈದರು. ಒಬ್ಬರಿಗಿನ್ನೊಬ್ಬರು ತಾಂಬೂಲ-ವಿತ್ತರು, ಚಾಮರ ಬೀಸಿದರು. ತಿರುಗಿ ಮರುಕ್ಷಣದಲ್ಲಿ ಜೊತೆಗೂಡಿ ಮಲಗಿದರು. ರತಿಕ್ರೀಡೆಯಾಡಿದರು. ಈ ಕ್ರೀಡೆಗೆ ಕೊನೆಯೆ ಇರಲಿಲ್ಲ. ಕ್ರೀಡೆಯಲ್ಲಿ ಯಾರೂ ಯಾರಿಗೂ ಸೋಲಲೂ ಇಲ್ಲ.

**ಇಲ್ಲಿಗೆ ಶ್ರೀ ಬ್ರಹ್ಮವೈವರ್ತ ಮಹಾಪುರಾಣದಲ್ಲಿ ಎರಡನೆಯದಾದ ಪ್ರಕೃತಿಖಂಡದ ನಾರದನಾರಾಯಣ ಸಂವಾದದಲ್ಲಿ ತುಲಸ್ಯುಪಾಖ್ಯಾನದಲ್ಲಿ ಶಿವ ಕಳಿಸಿದ ಪುಷ್ಪದಂತನ ಸಲಹೆಯನ್ನು ಕೇಳದೆ ಶಂಖಚೂಡ ತುಲಸಿಯೊಡನೆ ವಿಹರಿಸಿದ ವರ್ಣನೆ ಹದಿನೇಳನೆಯ ಅಧ್ಯಾಯ ಮುಗಿಯಿತು.**

## ಶಿವಶಂಖಚೂಡ ಸಂವಾದ

**ಅಧ್ಯಾಯ-೧೮**

ನಾರಾಯಣ ಮಹರ್ಷಿ— ಮಹಾಕೃಷ್ಣಭಕ್ತನಾದ ಶಂಖಚೂಡ ಬ್ರಾಹ್ಮ-ಮುಹೂರ್ತದಲ್ಲಿ ಕೃಷ್ಣನನ್ನು ಧ್ಯಾನಿಸುತ್ತ ಹೂವಿನ ಹಾಸಿಗೆ ಬಿಟ್ಟೆದ್ದ. ರಾತ್ರಿ ಉಟ್ಟಿದ್ದ ಬಟ್ಟೆಯನ್ನು ಕಳೆದು ಮಂಗಲಸ್ನಾನ ಮಾಡಿ, ಶುಭ್ರವಾದ ವಸ್ತ್ರದ್ವಯವನ್ನು ಧರಿಸಿ, ಹಣೆಯಲ್ಲಿ ಉಜ್ವಲ ತಿಲಕವಿಟ್ಟು, ಆಹ್ನಿಕವನ್ನು ಇಷ್ಟದೇವತಾ ಗುರುವಂದನವನ್ನೂ ಮಾಡಿ, ಮೊಸರು ತುಪ್ಪ ಜೇನು ಅರಳು ಮುಂತಾದ ಮಂಗಳ ದ್ರವ್ಯಗಳನ್ನು ದರ್ಶನ ಮಾಡಿದ. ಶ್ರೇಷ್ಠವಾದ ಮಣಿ ರತ್ನ ಬಂಗಾರ ವಸ್ತ್ರಗಳನ್ನು ಎಂದಿನಂತೆ ಭಕ್ತಿಯಿಂದ ಬ್ರಾಹ್ಮಣರಿಗೆ ದಾನವಿತ್ತ. ಅಲ್ಲದೆ ಚೈತ್ರಯಾತ್ರೆಯ ಅಂಗವಾಗಿ ಮುತ್ತು ಮಾಣಿಕ್ಯ ವಜ್ರ ಮುಂತಾದ ಅಮೂಲ್ಯ ರತ್ನಗಳನ್ನೂ ಉತ್ತಮವಾದ ಆನೆ ಕುದುರೆ ಆಕಳುಗಳನ್ನೂ, ಸಾವಿರಾರು ಬೊಕ್ಕಸಗಳನ್ನು, ಲಕ್ಷಾಂತರ ನಗರಗಳನ್ನು, ಕೋಟಿ-ಗಟ್ಟಲೆ ಗ್ರಾಮಗಳನ್ನೂ, ವಿಪ್ರರಿಗೆ ದಾನಮಾಡಿದ. ತನ್ನ ಮಗನಾದ ಸುಚಂದ್ರನಿಗೆ ಪಟ್ಟಗಟ್ಟಿ ತನ್ನ ಪತ್ನಿಯನ್ನೂ ರಾಜ್ಯವನ್ನೂ ಸರ್ವಸಂಪತ್ತನ್ನೂ ಅವನ ವಶಕ್ಕೆ ಕೊಟ್ಟ.

ಧನುರ್ಬಾಣಗಳನ್ನು ಧರಿಸಿ ಯುದ್ಧಸನ್ನದ್ಧನಾದ ಶಂಖಚೂಡ. ಮೂರು ಲಕ್ಷ ಅಶ್ವಸೇನೆ, ಐದುಲಕ್ಷ ಗಜಸೇನೆ, ಹತ್ತು ಸಾವಿರ ರಥ ಸೇನೆ, ಮೂರುಕೋಟಿ ಪದಾತಿ ಸೇನೆಗಳನ್ನು ಸಂಘಟಿಸಿದ. ಮೂರು ಕೋಟಿ ಚರ್ಮಧಾರಿಗಳನ್ನೂ ಮೂರು ಕೋಟಿ ಶೂಲಧಾರಿಗಳನ್ನೂ ಸೇರಿಸಿದ. ಹೀಗೆ ಮೂರು ಲಕ್ಷ ಅಕ್ಷೌಹಿಣೀ ಸೇನೆಯನ್ನು ಸಿದ್ಧಪಡಿಸಿ ಯುದ್ಧಶಾಸ್ತ್ರ ವಿಶಾರದನಾದ ಒಬ್ಬ ಮಹಾರಥನನ್ನು ಸೇನಾಪತಿಯನ್ನಾಗಿ ಮಾಡಿದ. ರಣವಾದ್ಯ ಘೋಷಕ್ಕೆ ಮೂವತ್ತು ಅಕ್ಷೌಹಿಣೀ ಸೇನೆಯನ್ನು ನೇಮಿಸಿದ.

ಮನಸ್ಸಿನಲ್ಲಿ ಹರಿಯನ್ನು ನೆನೆದು ಶಿಬಿರದಿಂದ ಹೊರಬಂದು ಮಣಿಮಯ ವಿಮಾನವೇರಿ ಗುರುಹಿರಿಯರನ್ನು ಮುಂದೆ ಮಾಡಿಕೊಂಡು ಶಿವನ ಬಳಿಗೆ ಬಂದ.

ಪುಷ್ಪಭದ್ರಾ ನದೀತೀರದಲ್ಲಿ ಅಕ್ಷಯ ವಟವೃಕ್ಷವಿರುವ ಪ್ರದೇಶದಲ್ಲಿ ಸಿದ್ಧರಿಗೆ ಸಿದ್ಧಿಕ್ಷೇತ್ರವೆನಿಸಿದ ಸಿದ್ಧಾಶ್ರಮವಿದೆ. ಕಪಿಲಮಹರ್ಷಿ ತಪಸ್ಸು ಮಾಡಿದ ಸ್ಥಳ, ಪುಣ್ಯಕ್ಷೇತ್ರವಿದು. ಪಶ್ಚಿಮ ಸಮುದ್ರಕ್ಕೆ ಪೂರ್ವದಲ್ಲಿ ಮಲಯ ಪರ್ವತಕ್ಕೆ ಪಶ್ಚಿಮದಲ್ಲಿ ಶ್ರೀಶೈಲಕ್ಕೆ ಉತ್ತರದಲ್ಲಿ ಗಂಧ ಮಾದನಕ್ಕೆ ದಕ್ಷಿಣದಲ್ಲಿ ಪುಷ್ಪಭದ್ರಾನದಿ ಹರಿಯುತ್ತಿದೆ. ಐದು ಯೋಜನ ಅಗಲ ಅದರ ನೂರರಷ್ಟು ದೀರ್ಘವಾಗಿ ಹರಿವ ಈ ನದಿ ಸರ್ವದಾ ಜಲಪೂರ್ಣವಾಗಿರುತ್ತದೆ. ಹಿಮಾಲಯದಿಂದ ಉದ್ಭವಿಸಿ ಶರಾವತಿಯೊಂದಿಗೆ ಸೇರಿ ಗೋಮಂತಪರ್ವತವನ್ನು ಎಡಕ್ಕೆ ಬಿಟ್ಟು ಪಶ್ಚಿಮ ಸಮುದ್ರವನ್ನು ಸೇರುತ್ತದೆ.

ಶಂಖಚೂಡ ಈ ಪುಷ್ಪ ಭದ್ರಾತೀರದಲ್ಲಿ ವಟವೃಕ್ಷದ ಬುಡದಲ್ಲಿ ಬಿಡಾರ ಮಾಡಿರುವ ಶಿವನನ್ನು ಕಂಡ. ಕೋಟಿ ಸೂರ್ಯರಂತೆ ಬೆಳಗುವ ಶಿವ

ಯೋಗಾಸೀನನಾಗಿ ಕೈಯಲ್ಲಿ ಅಭಯ ಮುದ್ರೆ ಧರಿಸಿದ್ದ. ಮುಖದಲ್ಲಿ ಮಂದಹಾಸ. ಶುದ್ಧಸ್ಫಟಿಕ ಮಣಿಯಂಥ ದೇಹಕಾಂತಿ. ಪುಟಕ್ಕಿಟ್ಟ ಚಿನ್ನದಂತೆ ಹೊಳೆವ ಜಡೆ. ಹುಲಿದೊವಲನ್ನುಟ್ಟು ನಾಗಯಜ್ಞೋಪವೀತ ಧರಿಸಿ ಕೈಗಳಲ್ಲಿ ತ್ರಿಶೂಲ ಪಟ್ಟಿಶ ಮುಂತಾದ ಆಯುದ ಹಿಡಿದಿದ್ದ. ಪಂಚಮುಖ, ತ್ರಿನೇತ್ರ. ಮೃತ್ಯುಂಜಯನೆನಿಸಿ ಭಕ್ತರ ಮೃತ್ಯುಪರಿಹಾರ ಮಾಡುತ್ತಾನೆ. ಲಯಕಾಲದಲ್ಲಿ ಪ್ರಪಂಚಕ್ಕೆ ಮೃತ್ಯುವೆನಿಸುತ್ತಾನೆ. ತಪಸ್ಸಿಗೆ ಫಲ ನೀಡುತ್ತಾನೆ. ಬೇಗನೆ ಒಲಿದು ಅಪಾರ ಸಂಪತ್ತು ನೀಡುತ್ತಾನೆ. ಬ್ರಹ್ಮತೇಜಸ್ಸಿನಿಂದ ಜ್ವಲಿಸುತ್ತ ಜ್ಞಾನ ನೀಡುತ್ತಾನೆ. ನರಕಾರ್ಣವದಿಂದ ಪಾರು ಮಾಡುತ್ತಾನೆ. ಇಂಥ ಶಾಂತನಾದ ಮನೋಹರನಾದ ಗೌರೀಕಾಂತನಾದ ಶಂಕರನನ್ನು ಶಂಖಚೂಡ ಕಂಡ. ವಿಮಾನದಿಂದಿಳಿದು ಗುರುಹಿರಿಯರೊಂದಿಗೆ ಬಂದು ಭಕ್ತಿಯಿಂದ ತಲೆ ಬಾಗಿ ನಮಿಸಿದ. ಎಡದಲ್ಲಿದ್ದ ಭದ್ರಕಾಳಿಗೂ ಮುಂದೆ ಇದ್ದ ಸ್ಕಂದನಿಗೂ ನಮಿಸಿದ. ಮೂವರೂ ಅವನನ್ನು ಆಶೀರ್ವದಿಸಿದರು. ನಂದೀಶ್ವರ ಮುಂತಾದವರು ಎದ್ದುನಿಂತು ಅವನಿಗೆ ಗೌರವ ತೋರಿದರು. ಅನಂತರ ಪರಸ್ಪರ ಸಂಭಾಷಣೆಯಲ್ಲಿ ಶಿವ ಹೇಳಿದ- 'ಶಂಖಚೂಡ, ಬ್ರಹ್ಮಪುತ್ರನಾದ ಮರೀಚಿಯ ಪುತ್ರ ಕಶ್ಯಪ. ಅವನಿಗೆ ದಕ್ಷ ಹದಿಮೂರು ಹೆಣ್ಣುಮಕ್ಕಳನ್ನು ಮದುವೆ ಮಾಡಿಕೊಟ್ಟ. ಅವರಲ್ಲಿ ದನು ಹದಿನಾಲ್ಕು ಮಂದಿ ಮಹಾಪರಾಕ್ರಮಿಗಳಾದ ದಾನವರಿಗೆ ತಾಯಾದಳು. ಅವರಲ್ಲಿ ಮಹಾಬಲಶಾಲಿಯಾದ ವಿಪ್ರಚಿತ್ತಿಗೆ ವಿಷ್ಣುಭಕ್ತನೂ ಜಿತೇಂದ್ರಿಯನೂ ಆದ ದಂಭ ಮಗನಾಗಿ ಜನಿಸಿದ. ಅವನು ಗುರು ಶುಕ್ರಾಚಾರ್ಯರಿಂದ ಕೃಷ್ಣಮಂತ್ರ ಉಪದೇಶ ಪಡೆದು ಪುಷ್ಕರದಲ್ಲಿ ಲಕ್ಷವರ್ಷಕಾಲ ಜಪಿಸಿ ನಿನ್ನನ್ನು ಪುತ್ರನನ್ನಾಗಿ ಪಡೆದ.

ನೀನು ಕೃಷ್ಣಭಕ್ತ. ಪೂರ್ವಜನ್ಮದಲ್ಲಿಯೂ ಕೃಷ್ಣಭಕ್ತನಾಗಿದ್ದೆ. ಕೃಷ್ಣನ ಪಾರ್ಷದ-ರಾದ ಅಷ್ಟಗೋಪಾಲಕರಲ್ಲಿ ಒಬ್ಬನಾಗಿದ್ದು ಪರಮಧಾರ್ಮಿಕನಾಗಿದ್ದೆ. ರಾಧೆಯ ಶಾಪದಿಂದ ಈಗ ದಾನವನಾಗಿರುವೆ. ನಿನ್ನಂಥ ವಿಷ್ಣುಭಕ್ತ ಹೇಗಿರಬೇಕೆಂದರೆ,

ಸಾಲೋಕ್ಯ ಸಾರ್ಷ್ಟಿ ಸಾರೂಪ್ಯ ಸಾಮೀಪ್ಯೈಕ್ಯಂ ಹರೇರಪಿ ।
ದೀಯಮಾನಂ ನ ಗೃಹ್ಣಂತಿ ವೈಷ್ಣವಾಃ ಸೇವನಂ ವಿನಾ ॥

ವೈಷ್ಣವರು ವಿಷ್ಣುವಿನ ಸೇವೆ ಒಂದನ್ನು ಹೊರತು ಆದಿಲ್ಲದ ಅವನ ಸಾಲೋಕ್ಯ ಸಾರ್ಷ್ಟಿ, ಸಾರೂಪ್ಯ, ಸಾಮೀಪ್ಯ, ಸಾಯುಜ್ಯಗಳನ್ನು ಕೊಟ್ಟರೂ ಸ್ವೀಕರಿಸುವುದಿಲ್ಲ.

ಬ್ರಹ್ಮತ್ವ ದೇವತ್ವಗಳನ್ನೂ ಇಂದ್ರತ್ವ ಕುಬೇರತ್ವಗಳನ್ನೂ ವಿಷ್ಣುವಿನ ಸೇವೆಯ ಸುಖಕ್ಕೆ ಹೋಲಿಸಿದರೆ ತುಚ್ಛವೆಂದೆ ಪರಿಗಣಿಸುತ್ತಾನೆ ವೈಷ್ಣವ.

ನೀನು ಉತ್ತಮ ಕೃಷ್ಣಭಕ್ತನಾಗಿದ್ದೂ ದೇವತೆಗಳ ರಾಜ್ಯವನ್ನು ಏಕೆ ಅಪಹರಿಸಿದೆ ? ಆದರಲ್ಲಿ ಏನು ಸುಖ ಭ್ರಮೆ ನಿನಗೆ ? ಅವರ ರಾಜ್ಯ ಅವರಿಗೇ ಬಿಟ್ಟುಕೊಡು. ಆಗ

ನನಗೆ ಸಂತೋಷವಾಗುತ್ತದೆ. ನಿನ್ನ ರಾಜ್ಯದಲ್ಲಿ ನೀನು ಸುಖವಾಗಿರು. ಅವರ ರಾಜ್ಯದಲ್ಲಿ ಅವರು ಇರಲಿ. ಸೋದರಕಲಹ ಬೇಡ. ನೀವೆಲ್ಲರೂ ಕಶ್ಯಪವಂಶದವರು, ಬಂಧುಗಳು.

**ಯಾನಿ ಕಾನಿ ಚ ಪಾಪಾನಿ ಬ್ರಹ್ಮ ಹತ್ಯಾದಿಕಾನಿ ಚ ।**
**ಜ್ಞಾತಿದ್ರೋಹಸ್ಯ ಪಾಪಸ್ಯ ಕಲಾಂ ನಾರ್ಹಂತಿ ಷೋಡಶೀಂ ॥**

ಬ್ರಹ್ಮಹತ್ಯಾದಿ ಸಕಲ ಪಾಪಗಳೂ ಬಂಧುದ್ರೋಹ ಪಾಪಕ್ಕೆ ಹದಿನಾರನೆ ಒಂದಂಶಕ್ಕೂ ಸಮನಾಗಲಾರವು.

ದೇವರಾಜ್ಯವನ್ನು ಬಿಟ್ಟುಬಿಟ್ಟರೆ ಆ ದೊಡ್ಡ ಸಂಪತ್ತು ಇಲ್ಲವಾಗುವುದೆಂದು ಚಿಂತೆಯೆ ? ಯಾರಿಗೆ ತಾನೆ ಎಲ್ಲ ಕಾಲದಲ್ಲೂ ಒಂದೇ ಸ್ಥಿತಿ ಇರುತ್ತದೆ ? ಪ್ರಾಕೃತ ಲಯ ಬಂದಿತೆಂದರೆ ಬ್ರಹ್ಮನಿಗೂ ಲಯವಾಗುವುದು. ಭಗವಂತನ ಇಚ್ಛಾನುಸಾರ ತಿರುಗಿ ಎಲ್ಲ ಸೃಷ್ಟಿಯಾಗುವುದು. ಸತ್ಯದ ಆಶ್ರಯದಲ್ಲಿ ನಿಂತಿರುವ ಧರ್ಮ ಸತ್ಯ-ಯುಗದಲ್ಲಿ ಪೂರ್ಣವಾಗಿದ್ದರೂ ತ್ರೇತಾಯುಗದಲ್ಲಿ ಮೂರುಭಾಗ, ದ್ವಾಪರದಲ್ಲಿ ಎರಡೇ ಭಾಗ. ಕಲಿಯುಗದಲ್ಲಿ ಒಂದೇ ಭಾಗವಿರುವುದು. ಆ ಒಂದು ಭಾಗವೂ ಕಲಿಯುಗದ ಆದಿಯಲ್ಲಿ ಮಾತ್ರ ಪೂರ್ಣವಿದ್ದು ಕ್ರಮೇಣ ಚಂದ್ರನ ಕಲೆಗಳಂತೆ ನಶಿಸುತ್ತ ಕೊನೆಯಲ್ಲಿ ಹದಿನಾರನೆ ಒಂದಂಶ ಮಾತ್ರವಿರುತ್ತದೆ. ಸೂರ್ಯನ ತೇಜಸ್ಸೂ ಗ್ರೀಷ್ಮದಲ್ಲಿದ್ದಂತೆ ಶಿಶಿರದಲ್ಲಿ ಪ್ರಖರವಾಗಿರುವುದಿಲ್ಲ. ಗ್ರೀಷ್ಮದಲ್ಲಿಯೂ, ಮಧ್ಯಾಹ್ನದಷ್ಟು ಬೆಳಿಗ್ಗೆ ಸಂಜೆ ಪ್ರಖರವಾಗಿರುವುದಿಲ್ಲ. ಬೆಳಿಗ್ಗೆ ಉದಯಿಸಿ ಬಾಲ್ಯಾವಸ್ಥೆಯಿಂದ ಕ್ರಮವಾಗಿ ವೃದ್ಧಿ ಹೊಂದಿ ಮಧ್ಯಾಹ್ನ ಪ್ರಚಂಡನಾಗುತ್ತಾನೆ. ಪುನಃ ಕ್ರಮವಾಗಿ ಶಾಂತನಾಗಿ ಅಸ್ತನಾಗುತ್ತಾನೆ. ಬೇರೆ 'ದಿನ ಜ್ವಲಿಸುತ್ತಿದ್ದರೂ ಮೋಡ ಮುಚ್ಚಿದಾಗ ರಾಹುಗ್ರಹಣ ಸಂಭವಿಸಿದಾಗ ನಿಸ್ತೇಜನಾಗುತ್ತಾನೆ. ಅವುಗಳಿಂದ ಮುಕ್ತನಾದಾಗ ತಿರುಗಿ ಪ್ರಕಾಶಿಸುತ್ತಾನೆ. ಚಂದ್ರ ಹುಣ್ಣಿಮೆ ರಾತ್ರಿ ಪೂರ್ಣ ಬೆಳಗಿದರೂ ಅನಂತರ ದಿನೇ ದಿನೇ ಕ್ಷಯಿಸುತ್ತಾನೆ. ಪುನಃ ಅಮಾವಾಸ್ಯೆ ಕಳೆಯಿ-ತೆಂದರೆ ದಿನೇ ದಿನೇ ವೃದ್ಧಿಹೊಂದುತ್ತಾನೆ. ಹಾಗೇ ರಾಹುಗ್ರಹಣ ಕಾಲದಲ್ಲಿ ಕಾಂತಿ-ಹೀನನಾದರೂ ಗ್ರಹಣಮುಕ್ತನಾದಾಗ ಪುನಃ ಬೆಳಗುತ್ತಾನೆ. ಪೃಥಿವಿಯೂ ಸೃಷ್ಟಿ-ಕಾಲದಲ್ಲಿ ಸಸ್ಯಸಂಪದ್ಭರಿತವಾದರೂ ಲಯಕಾಲದಲ್ಲಿ ಜಲಾವೃತವಾಗಿ ನಾಶಹೊಂದುತ್ತದೆ.

ನಾನು ಮೃತ್ಯುಂಜಯನಾದ್ದರಿಂದ ಅಸಂಖ್ಯ ಪ್ರಾಕೃತ ಲಯಗಳನ್ನು ಕಂಡಿದ್ದೇನೆ. ಜನ್ಮಲಯವಿಲ್ಲದೆ ಒಂದೇ ರೀತಿ ಇರುವವ ಕೃಷ್ಣನೊಬ್ಬನೆ. ಅವನನ್ನು ಭಜಿಸುವವ ಜನ್ಮ ರೋಗ, ಜರೆ, ಮರಣ, ಭಯಗಳನ್ನು ಮೀರಿ ನಿಲ್ಲುತ್ತಾನೆ. ಅವನೆ ಬ್ರಹ್ಮನನ್ನು ಸೃಷ್ಟಿಗೂ ವಿಷ್ಣುವನ್ನು ಪಾಲನೆಗೂ ನನ್ನನ್ನು ಲಯಕ್ಕೂ ನೇಮಿಸಿದ್ದಾನೆ. ನಾನು

ಕಾಲಾಗ್ನಿರುದ್ರನನ್ನು ಲಯಕಾರ್ಯದಲ್ಲಿ ನೇಮಿಸಿ ಸತತ ಶ್ರೀಕೃಷ್ಣನ ನಾಮಸಂಕೀರ್ತನ ಮಾಡುತ್ತೇನೆ. ಆದರಿಂದ ಮೃತ್ಯುಂಜಯನಾಗಿ ನಿರ್ಭಯನಾಗಿದ್ದೇನೆ. ಮೃತ್ಯು ಗರುಡನನ್ನು ಕಂಡ ಹಾವಿನಂತೆ ನನ್ನಿಂದ ದೂರ ಓಡುತ್ತದೆ.'

ಹೀಗೆ ಹೇಳಿ ಶಿವ ಸುಮ್ಮನಾದ. ಶಂಖಚೂಡ ಈ ಮಾತುಗಳನ್ನು ಬಹಳ ಮೆಚ್ಚಿಕೊಂಡ. ಆದರೂ ವಿನಯದಿಂದ ನುಡಿದ-

'ಪ್ರಭು, ನೀನು ಹೇಳುವುದು ನಿಜ. ಸುಳ್ಳಲ್ಲ. ಆದರೂ ನಾನು ಹೇಳುವು-ದರಲ್ಲಿಯೂ ಸತ್ಯಾಂಶವಿದೆ. ಬಂಧುದ್ರೋಹ ಮಹಾಪಾಪವೆಂದು ನೀನು ಹೇಳುವಿ. ಹಾಗಿದ್ದರೆ ದೇವತೆಗಳು ಬಲಿಯ ಸರ್ವಸ್ವವನ್ನು ಅಪಹರಿಸಿ ಅವನನ್ನು ಏಕೆ ದೂರ ಕಳಿಸಿದರು ? ಬಲಿಯಿಂದ ಅವರು ಕಿತ್ತುಕೊಂಡ ಆ ಎಲ್ಲ ಸಂಪತ್ತನ್ನೇ ನಾನೀಗ ಪರಾಕ್ರಮದಿಂದ ಹಿಂತಿರುಗಿ ಪಡೆದಿದ್ದೇನೆ. ಹಿರಣ್ಯಾಕ್ಷ, ಹಿರಣ್ಯಕಶಿಪು, ಶುಂಭ ಮುಂತಾದ ಅಸುರರನ್ನು ದೇವತೆಗಳು ಹೇಗೆ ಕೊಂದರು ? ಹಿಂದೆ ಸಮುದ್ರ ಮಥನದಲ್ಲಿ ಶ್ರಮಪಟ್ಟವರು ನಾವು. ಅಮೃತವನ್ನು ಉಂಡು ಸರ್ವಫಲ-ಭಾಗಿಗಳಾದವರು ಅವರು. ಈ ವಿಶ್ವ ಕೃಷ್ಣನ ಆಟದ ಕುಡಿಕೆ. ಅದರಲ್ಲಿ ಅವನು ಯಾರಿಗೆ ಯಾವಾಗ ಐಶ್ವರ್ಯ ನೀಡುವನೋ ಆಗ ಆ ಐಶ್ವರ್ಯ ಅವರದು. ದೇವ ದಾನವರೊಳಗಿನ ವಿವಾದ ಯಾವಾಗಲೂ ಇದ್ದೇ ಇದೆ. ಒಮ್ಮೆ ಅವರಿಗೆ ಜಯ, ನಮಗೆ ಸೋಲಾದರೆ ಇನ್ನೊಮ್ಮೆ ನಮಗೆ ಜಯ, ಅವರಿಗೆ ಸೋಲು. ನಮ್ಮ ನಮ್ಮ ಜಗಳದ ನಡುವೆ ನೀನು ಬರುವುದು ಅರ್ಥಹೀನ. ನಿನಗೆ ನಾವಿಬ್ಬರೂ ಸಮಾನರಾಗಿ ಬಂಧುಗಳು. ಒಬ್ಬರ ಪಕ್ಷ ಹಿಡಿದು ಯುದ್ಧಕ್ಕೆ ನಿಲ್ಲುವುದು ನಿನಗೆ ನಾಚಿಕೆಗೇಡು. ಒಂದುವೇಳೆ ನೀನೇನಾದರೂ ಸೋತರೆ ನಿನಗೇ ಅಪಕೀರ್ತಿ.'

ಶಂಖಚೂಡನ ಮಾತು ಕೇಳಿ ಶಿವ ನಕ್ಕು ನುಡಿದ, 'ಬ್ರಹ್ಮನ ವಂಶಜರಾದ ನಮಗೆ ದಾನವರೊಡನೆ ಯುದ್ಧದಿಂದ ನಾಚಿಕೆ ಏಕೆ ? ಸೋತರೆ ಅಪಕೀರ್ತಿ ಹೇಗೆ ? ಮೊದಲಿಗೆ ಹರಿಯೆ ಮಧುಕೈಟಭರೊಡನೆ ಯುದ್ಧಮಾಡಿದ್ದಾನೆ. ಹಿರಣ್ಯಕಶಿಪು ಹಿರಣ್ಯಾಕ್ಷರೊಂದಿಗೆ ಯುದ್ಧ ಮಾಡಿದ್ದಾನೆ. ತ್ರಿಪುರರೊಂದಿಗೆ ನಾನು ಯುದ್ಧ ಮಾಡಿದ್ದೇನೆ. ಜಗನ್ಮಾತೆ ಪ್ರಕೃತಿಯೂ ಶುಂಭಾದಿ ದಾನವರೊಡನೆ ಅದ್ಭುತವಾದ ಯುದ್ಧ ಮಾಡಿದ್ದಾಳೆ. ಕೃಷ್ಣನ ಪಾರ್ಷದರಲ್ಲಿ ಒಬ್ಬನಾದ ನಿನಗೆ ಅವರಾರೂ ಸಮರಲ್ಲ. ಆದರೂ ಅವರೊಂದಿಗೆ ಯುದ್ಧ ಮಾಡಿದ್ದೇವೆ ಎಂದಮೇಲೆ ನಿನ್ನೊಡನೆ ಯುದ್ಧ ಮಾಡಲು ನಾನು ಏಕೆ ನಾಚಬೇಕು ? ಆದ್ದರಿಂದ ದೇವತೆಗಳ ರಾಜ್ಯವನ್ನು ಬಿಟ್ಟುಕೊಡು. ಹೆಚ್ಚು ಮಾತೇಕೆ ? ಯುದ್ಧದ ಆಲೋಚನೆಯನ್ನೇ ಬಿಟ್ಟುಬಿಡು. ಇದು ನನ್ನ ಖಚಿತವಾದ ಅಭಿಪ್ರಾಯ.'

ಹೀಗೆ ಹೇಳಿ ಶಿವ ಸುಮ್ಮನಾದ. ಶಂಖಚೂಡ ತನ್ನ ಮಂತ್ರಿಗಳೊಡನೆ ಅಲ್ಲಿಂದ ಎದ್ದು ಹೊರಟ.

**ಇಲ್ಲಿಗೆ ಶ್ರೀ ಬ್ರಹ್ಮವೈವರ್ತ ಮಹಾಪುರಾಣದಲ್ಲಿ ಎರಡನೆಯದಾದ ಪ್ರಕೃತಿಖಂಡದ ನಾರದನಾರಾಯಣ ಸಂವಾದದಲ್ಲಿ ತುಲಸ್ಯುಪಾಖ್ಯಾನದ ಶಿವಶಂಖಚೂಡ ಸಂವಾದವೆಂಬ ಹದಿನೆಂಟನೆ ಅಧ್ಯಾಯ ಮುಗಿಯಿತು.**

## ಕಾಳೀಶಂಖಚೂಡ ಸಂಗ್ರಾಮ

## ಅಧ್ಯಾಯ-೧೯

ನಾರಾಯಣ ಮಹರ್ಷಿ— ನಾರದ, ಶಂಖಚೂಡ ಶಿವನಿಗೆ ತಲೆಬಾಗಿ ನಮಿಸಿ ತನ್ನ ಮಂತ್ರಿಗಳೊಂದಿಗೆ ವಿಮಾನವೇರಿ ಯುದ್ಧವನ್ನು ಪ್ರಾರಂಭಿಸಿದ. ಮಂತ್ರಿಗಳು ಷಣ್ಮುಖನ ಪರಾಕ್ರಮ ನೋಡಿ ಕ್ಷೋಭಗೊಂಡರು. ಸ್ವರ್ಗದ ದುಂದುಭಿಗಳು ಮೊಳಗಿದುವು ಹೂಮಳೆಯಾಯಿತು.

ಷಣ್ಮುಖನ ಯುದ್ಧವೆಂದರೆ ಪ್ರಾಕೃತಿಕ ಪ್ರಳಯದಂತೆ ಭೀಕರ. ದಾನವರ ಕ್ಷಯ ನಿಶ್ಚಿತ. ಶಂಖಚೂಡ ವಿಮಾನದಿಂದ ಬಾಣಗಳ ಮಳೆಗರೆದ. ಮೋಡಗಳ ಮಳೆಯಾದಾಗ ಕತ್ತಲು ಆವರಿಸಿ ಮಿಂಚುಗಳು ಬೆಳಗುವಂತೆ ಈ ಬಾಣಗಳ ಮಳೆಯಲ್ಲಿಯೂ ಕತ್ತಲು ಆವರಿಸಿತು ಬೆಂಕಿಯ ಜ್ವಾಲೆಗಳೆದ್ದು ಬೆಳಗಿದುವು. ನಂದೀಶ್ವರ ಮುಂತಾದ ದೇವತೆಗಳೆಲ್ಲ ಓಡಿದರು. ಷಣ್ಮುಖನೊಬ್ಬ ನಿಂತ. ಅವನ ಮೇಲೆ ಶಂಖಚೂಡ ಪರ್ವತಗಳ ದೊಡ್ಡ ಬಂಡೆಗಲ್ಲುಗಳ ಮರಗಳ ಸರ್ಪಗಳ ಭಯಂಕರ ಮಳೆಯನ್ನೇ ಸುರಿಸಿದ. ಆ ಮಳೆಯಲ್ಲಿ ಮುಳುಗಿದ ಷಣ್ಮುಖ ಮೋಡಗಳಲ್ಲಿ ಮುಚ್ಚಿಹೋದ ಸೂರ್ಯನಂತಾದ.

ಶಂಖಚೂಡ ಷಣ್ಮುಖನ ಧನುಸ್ಸನ್ನೂ ರಥವನ್ನೂ ಕುದುರೆಗಳನ್ನೂ ನಾಶ ಪಡಿಸಿದ. ಧ್ವಜವಾದ ಮಯೂರವನ್ನು ಕತ್ತರಿಸಿ ಸೂರ್ಯನಂತೆ ಜ್ವಲಿಸುವ ಶಕ್ತ್ಯಾಯುಧವನ್ನು ಷಣ್ಮುಖನ ಎದೆಗೆ ಪ್ರಯೋಗಿಸಿದ. ಕ್ಷಣಕಾಲ ಷಣ್ಮುಖ ಮೂರ್ಛೆಗೊಂಡ. ಬಳಿಕ ಎದ್ದು ಇನ್ನೊಂದು ವೈಷ್ಣವ ಧನುಸ್ಸನ್ನು ಎತ್ತಿದ. ಇನ್ನೊಂದು ರಥವೇರಿ ಧನುಸ್ಸಿಗೆ ಬಾಣ ಹೂಡಿ ಅತಿ ಭಯಂಕರವಾದ ಯುದ್ಧ ಮಾಡಿದ. ಶಂಖಚೂಡನೆಸೆದ ಪರ್ವತಾಸ್ತ್ರ, ವೃಕ್ಷಾಸ್ತ್ರ, ಸರ್ಪಾಸ್ತ್ರಗಳನ್ನೆಲ್ಲ ಕತ್ತರಿಸಿದ. ಅವನ ಆಗ್ನೇಯಾಸ್ತ್ರವನ್ನೂ ವಾರುಣಾಸ್ತ್ರದಿಂದ ಶಮನಗೊಳಿಸಿ ಅವನ ರಥ ಅಶ್ವ

ಸಾರಥಿಗಳನ್ನೂ ಧನುಸ್ಸನ್ನೂ ಕಿರೀಟವನ್ನೂ ನಾಶಮಾಡಿ ಅವನೆದೆಗೆ ಶಕ್ತ್ಯಾಯುಧ-ವನ್ನೆಸೆದ. ಶಂಖಚೂಡ ಕ್ಷಣಕಾಲ ಮೂರ್ಛೆಗೊಂಡು ಎದ್ದು ಮತ್ತೊಂದು ರಥ-ವನ್ನೇರಿ ಧನುರ್ಬಾಣಗಳನ್ನು ಹಿಡಿದು ಮಾಯೆಯಿಂದ ಷಣ್ಮುಖನನ್ನು ಬಾಣಗಳಿಂದ ಮುಚ್ಚಿ ಶಕ್ತ್ಯಾಯುಧದಿಂದ ಘಾತಿಸಿದ. ಪ್ರಳಯಾಗ್ನಿ ಜ್ವಾಲೆಯಂತೆ ಜ್ವಲಿಸುವ ಆ ಶಕ್ತ್ಯಾಯುಧ ಮೈಗೆ ಬಿದ್ದಾಗ ಷಣ್ಮುಖ ಪೂರ್ಛಿತನಾದ. ಕಾಳಿ ಅವನನ್ನೆತ್ತಿ ಶಿವನ ಬಳಿ ತಂದು ತನ್ನ ಮಡಿಲಲ್ಲಿಟ್ಟುಕೊಂಡಳು. ಶಿವ ದೃಷ್ಟಿಮಾತ್ರದಿಂದ ಷಣ್ಮುಖನನ್ನು ಪುನರುಜ್ಜೀವನಗೊಳಿಸಿ ಅಪರಿಮಿತ ಬಲವನ್ನೂ ತುಂಬಿಸಿದ. ಒಡನೆ ಷಣ್ಮುಖನೆದ್ದು ಕುಳಿತ. ಈಗ ದೇವತೆಗಳೆಲ್ಲರೂ ಶಿವನಾಜ್ಞೆಯಂತೆ ರಣರಂಗಕ್ಕೆ ಇಳಿದರು.

ದೇವೇಂದ್ರ ವೃಷಪರ್ವನೊಡನೆ, ಸೂರ್ಯ ವಿಪ್ರಚಿತ್ತಿಯೊಡನೆ, ಚಂದ್ರ ದಂಭ-ನೊಡನೆ, ಕಾಲ ಕಾಲೇಶ್ವರನೊಡನೆ, ಅಗ್ನಿ ಗೋಕರ್ಣನೊಡನೆ, ಕುಬೇರ ಕಾಲಕೇಯನೊಡನೆ, ವಿಶ್ವಕರ್ಮ ಮಯನೊಡನೆ, ಮೃತ್ಯು ಭಯಂಕರನೊಡನೆ, ಯಮ ಸಂಹಾರನೊಡನೆ, ವರುಣ ಕಲವಿಂಕನೊಡನೆ, ವಾಯು ಚಂಚಲನೊಡನೆ, ಬುಧ ಘೃತಪುಷ್ಪನೊಡನೆ, ಶನಿ ರಕ್ತಾಕ್ಷನೊಡನೆ, ಜಯಂತ ರತ್ನಸಾರನೊಡನೆ, ವಸುಗಳು ವರ್ಚಸರೊಡನೆ, ಅಶ್ವಿನಿಗಳು ದೀಪ್ತಿಮಂತನೊಡನೆ, ನಲಕೂಬರ ಧೂಮ್ರನೊಡನೆ, ಧರ್ಮ ಧನುರ್ಧಾರಿಯೊಡನೆ, ಮಂಗಲ ಮಂಡೂಕಾಕ್ಷನೊಡನೆ, ಈಶಾನ ಶೋಭಾಕರನೊಡನೆ, ಮನ್ಮಥ ಪಿಠರನೊಡನೆ ಹೀಗೆ ದೇವದಾನವ ದ್ವಂದ್ವ ಯುದ್ಧ ಪ್ರಾರಂಭವಾಯಿತು.

ಉಲ್ಕಾಮುಖ, ಧೂಮ್ರ, ಖಡ್ಗ, ಧ್ವಜ, ಕಾಂಚೀಮುಖ, ಪಿಂಡ, ಧೂಮ್ರ, ನಂದಿ, ವಿಶ್ವ, ಪಲಾಶ ಇವರೊಡನೆ ಆದಿತ್ಯರು. ಏಕಾದಶ ಭಯಂಕರ ದಾನವ-ರೊಡನೆ ಏಕಾದಶ ರುದ್ರರು, ಉಗ್ರದಂಡಾದಿಗಳೊಡನೆ ಮಹಾಮಾರಿ, ಉಳಿದ ದಾನವರೊಡನೆ ನಂದೀಶ್ವರಾದಿ ಗಣಗಳು ಯುದ್ಧಕ್ಕೆ ಪ್ರಾರಂಭಿಸಿದರು. ಪ್ರಳಯದಂತೆ ಭಯಂಕರವಾದ ಯುದ್ಧ ನಡೆಯಿತು. ವಟಮೂಲದಲ್ಲಿ ಶಿವ ಕಾಳಿ ಷಣ್ಮುಖರು ಕುಳಿತಿದ್ದರು. 'ಅತ್ತ ಕೋಟಿ ದಾನವರೊಡನೆ ಶಂಖಚೂಡ ರತ್ನ ಸಿಂಹಾಸನದಲ್ಲಿ ಕುಳಿತಿದ್ದ.

ಶಿವನ ಕಡೆಯ ಯೋಧರು ಪರಾಜಿತರಾದರು. ಗಾಯಗೊಂಡು ಭಯದಿಂದ ಓಡಿದರು. ಷಣ್ಮುಖ ಕುಪಿತನಾಗಿ ದೇವತೆಗಳಿಗೆ ಅಭಯ ನೀಡಿ ಹುರಿದುಂಬಿಸಿದ. ಒಬ್ಬನೆ ಎಲ್ಲ ದಾನವರೊಡನೆ ಹೋರಾಡಲು ತೊಡಗಿದ. ನೂರು ಅಕ್ಷೌಹಿಣಿ ಸೈನ್ಯವನ್ನು ಸಂಹರಿಸಿದ.

ಕಾಳಿ ಎಷ್ಟೋ ದಾನವರ ರಕ್ತಪಾನ ಮಾಡಿದಳು. ಜೊತೆಗೆ ಹತ್ತುಲಕ್ಷ ಆನೆಗಳನ್ನು ನೂರಲಕ್ಷ ಕುದುರೆಗಳನ್ನು ಒಂದು ಕೈಯಿಂದೆತ್ತಿ ಲೀಲಾಜಾಲವಾಗಿ ನುಂಗಿದಳು.

ಸಾವಿರಾರು ಮುಂಡಗಳು ರಣರಂಗದಲ್ಲಿ ಕುಣಿದುವು. ಮಹಾಬಲಪರಾಕ್ರಮಿಗಳಾದ ದಾನವರೂ ಗಾಯಗೊಂಡು ಭಯದಿಂದ ಓಡಿದರು. ವೃಷಪರ್ವ, ವಿಪ್ರಚಿತ್ತಿ, ದಂಭ, ಏಕಂಪನರು ಒಟ್ಟಾಗಿ ಷಣ್ಮುಖನೊಡನೆ ಹೋರಾಡಿದರು. ಷಣ್ಮುಖನ ರಕ್ಷಣೆಗೆ ಕಾಳಿ ನಿಂತಳು. ಅವಳ ಹಿಂದೆ ನಂದೀಶ್ವರಾದಿ ಗಣಗಳೂ ಎಲ್ಲ ದೇವತೆಗಳೂ ಗಂಧರ್ವ ಯಕ್ಷರಾಕ್ಷಸ ಕಿಂನರರೂ ಹೋರಾಟಕ್ಕೆ ಇಳಿದರು.

ಕಾಳಿಯ ಸಿಂಹನಾದಕ್ಕೆ ದಾನವರೆಲ್ಲರೂ ಮೂರ್ಛಿತರಾದರು. ದೇವಿ ಪುನಃ ಪುನಃ ಅಟ್ಟಹಾಸ ಮಾಡುತ್ತ ಮಧುಪಾನ ಮಾಡುತ್ತ ನರ್ತನ ಮಾಡಿದಳು. ಉಗ್ರದಂಷ್ಟ್ರಾ ಉಗ್ರಚಂಡಾ, ಕೌಟರಿಯರೂ, ಯೋಗಿನೀ, ಡಾಕಿನಿಯರೂ ಮದ್ಯಪಾನ ಮಾಡಿದರು.

ದಾನವರು ಭಯಭೀತರಾದರು. ಅವರಿಗೆ ಅಭಯ ನೀಡುತ್ತ ಶಂಖಚೂಡ ಕಾಳಿಯೊಡನೆ ಯುದ್ಧಮಾಡಲು ಆರಂಭಿಸಿದ. ಕಾಳಿಯ ಆಗ್ನೇಯಾಸ್ತ್ರವನ್ನು ವಾರುಣಾಸ್ತ್ರದಿಂದ, ವಾರುಣಾಸ್ತ್ರವನ್ನು ಗಾಂಧರ್ವಾಸ್ತ್ರದಿಂದ, ಮಾಹೇಶ್ವರಾಸ್ತ್ರವನ್ನು ವೈಷ್ಣವಾಸ್ತ್ರದಿಂದ, ಶಮನಗೊಳಿಸಿದ. ಕಾಳಿ ನಾರಾಯಣಾಸ್ತ್ರವನ್ನು ಪ್ರಯೋಗಿಸಿದಾಗ ಶಂಖಚೂಡ ರಥದಿಂದ ಕೆಳಗೆ ಇಳಿದು ಅಸ್ತ್ರಕ್ಕೆ ತಲೆಬಾಗಿ ನಮಸ್ಕರಿಸಿದ. ನೆಲದ ಮೇಲೆ ದಂಡಪ್ರಣಾಮ ಮಾಡಿದ. ಅಸ್ತ್ರ ಪ್ರಳಯಾಗ್ನಿ ಜ್ವಾಲೆಯಂತೆ ಉರಿಯುತ್ತ ಆಕಾಶದಲ್ಲಿ ಮೇಲೆ ಹಾರಿ ಹೋಯಿತು. ಕಾಳಿ ಬ್ರಹ್ಮಾಸ್ತ್ರ ಪ್ರಯೋಗಿಸಿದಳು. ಶಂಖಚೂಡ ಪ್ರತಿಯಾಗಿ ಬ್ರಹ್ಮಾಸ್ತ್ರವನ್ನೆ ಪ್ರಯೋಗಿಸಿ ಅದನ್ನು ಶಮನಗೊಳಿಸಿದ. ಹೀಗೆ ಕಾಳಿಯ ಎಲ್ಲ ದಿವ್ಯಾಸ್ತ್ರಗಳನ್ನೂ ದಿವ್ಯಾಸ್ತ್ರಗಳಿಂದಲೆ ಶಂಖಚೂಡ ಇದಿರಿಸಿದ. ಕಾಳಿ ಯೋಜನ ಉದ್ದದ ಶಕ್ತ್ಯಾಯುಧವನ್ನು ಎಸೆದಳು. ಶಂಖಚೂಡ ಅದನ್ನೂ ನೂರಾಗಿ ಕತ್ತರಿಸಿದ. ಕೊನೆಗೆ ಕಾಳಿ ಪಾಶುಪತಾಸ್ತ್ರವನ್ನು ಪ್ರಯೋಗಿಸಿ ತೊಡಗಿದಾಗ ಅಶರೀರವಾಣಿ ಕೇಳಿಸಿತು-

'ಪಾಶುಪತಾಸ್ತ್ರದಿಂದಲೂ ಶಂಖಚೂಡನಿಗೆ ಮರಣವಿಲ್ಲ. ಏಕೆಂದರೆ ಅವನ ಕಂಠದಲ್ಲಿ ವಿಷ್ಣುಕವಚವಿರುವಷ್ಟುಕಾಲ, ಅವನ ಪತ್ನಿಯಲ್ಲಿ ಪಾತಿವ್ರತ್ಯವಿರುವಷ್ಟು ಕಾಲ ಅವನಿಗೆ ಜರಾಮರಣಗಳಿಲ್ಲವೆಂದು ಬ್ರಹ್ಮನ ವರವಿದೆ.'

ಇದನ್ನು ಕೇಳಿದ ಕಾಳಿ ಪಾಶುಪತಾಸ್ತ್ರ ಪ್ರಯೋಗಿಸಲಿಲ್ಲ. ನೂರು ಲಕ್ಷದಾನವರನ್ನು ಲೀಲಾಜಾಲವಾಗಿ ಎತ್ತಿ ನುಂಗಿದಳು. ಬಳಿಕ ಶಂಖಚೂಡನನ್ನು ನುಂಗಲು ವೇಗವಾಗಿ ಮುನ್ನಡೆದಳು. ಶಂಖಚೂಡ ದಿವ್ಯಾಸ್ತ್ರಗಳಿಂದ ಅವಳನ್ನು ತಡೆದ. ಅವಳು ಬೀಸಿದ ಖಡ್ಗವನ್ನೂ ದಿವ್ಯಾಸ್ತ್ರಗಳಿಂದ ಕತ್ತರಿಸಿದ. ಪುನಃ ಕಾಳಿ ನುಂಗಲು ಬಂದಾಗ ಯೋಗ-ಸಿದ್ಧಿಯ ಬಲದಿಂದ ಬೃಹದಾಕಾರವಾಗಿ ಬೆಳೆದ. ಕಾಳಿ ಅವನ ರಥವನ್ನೂ ಸಾರಥಿ-ಯನ್ನೂ ವೇಗದ ಮುಷ್ಟಿ ಪ್ರಯೋಗದಿಂದ ಪುಡಿಮಾಡಿದಳು. ಶೂಲವನ್ನೆಸೆದಳು.

ಶಂಖಚೂಡ ಅದನ್ನು ಎಡಗೈಯಿಂದ ಹಿಡಿದುಕೊಂಡ. ಆದರೆ ದೇವಿಯ ತೀವ್ರವಾದ ಮುಷ್ಟಿಯ ಆಘಾತಕ್ಕೆ ಮೂರ್ಛಿತನಾದ. ಮರುಕ್ಷಣವೆ ಎಚ್ಚರಗೊಂಡ.

ದೇವಿಯೊಡನೆ ಬಾಹು ಯುದ್ಧಕ್ಕೆ ಆತ ಒಪ್ಪಲಿಲ್ಲ. ಮಾತೃಭಾವನೆಯಿಂದ ನಮಸ್ಕರಿಸಿದ. ಅವಳ ಅಸ್ತ್ರಗಳನ್ನು ಪ್ರತ್ಯಸ್ತ್ರಗಳಿಂದ ಕತ್ತರಿಸಿದ ಅಥವಾ ಕೈಯಿಂದ ಹಿಡಿದುಕೊಂಡ. ಆದರೆ ಅವಳ ಮೇಲೆ ತಾನು ಅಸ್ತ್ರಪ್ರಯೋಗ ಮಾಡಲಿಲ್ಲ. ಮಾತೃಭಾವನೆಯಿಂದ ಅಷ್ಟು ಭಕ್ತಿ ಇರಿಸಿದ್ದ ಪರಮ ವೈಷ್ಣವನಾದ ಶಂಖಚೂಡ.

ದೇವಿ ಶಂಖಚೂಡನನ್ನು ಎತ್ತಿ ಹಿಡಿದು ವೇಗದಿಂದ ತಿರುಗಿಸಿ ಮೇಲಕ್ಕೆ ಎಸೆದರೂ ಆತ ಎತ್ತರದಿಂದ ಕೆಳಕ್ಕೆ ಬಿದ್ದು ಎದ್ದುನಿಂತು ನಮಸ್ಕರಿಸಿದ. ವಿಮಾನವೇರಿ ಕುಳಿತ. ಮಹಾಯುದ್ಧ ಮಾಡಿಯೂ ಆಯಾಸಗೊಳ್ಳಲಿಲ್ಲ. ಕೊನೆಗೆ ಭದ್ರಕಾಳಿ ದಾನವರ ರಕ್ತಮಾಂಸಗಳನ್ನು ಯಥೇಚ್ಛ ಉಂಡು ಶಿವನ ಬಳಿಗೆ ಬಂದಳು.

ಶಿವ ದಾನವರ ಸಂಹಾರ ವೃತ್ತಾಂತವನ್ನು ದೇವಿಯಿಂದ ತಿಳಿದು ಸಂತೋಷದಿಂದ ನಕ್ಕ. ದೇವಿ ಹೇಳಿದಳು- 'ಈಗ ರಣಾಂಗಣದಲ್ಲಿ ಒಂದು ಲಕ್ಷ ದಾನವ ವೀರರು ಶಂಖಚೂಡನ ಕಡೆಯಲ್ಲಿದ್ದಾರೆ. ಉಳಿದವರನ್ನೆಲ್ಲ ನಾನು ನುಂಗಿದ್ದೇನೆ. ಪಾಶು-ಪತಾಸ್ತ್ರದಿಂದ ಶಂಖಚೂಡನನ್ನು ಕೊಲ್ಲಲು ಹೋದಾಗ ಆತನಿಗೆ ಮರಣವಿಲ್ಲವೆಂದು ಅಶರೀರವಾಣಿ ನುಡಿಯಿತು. ಆತ ಮಹಾಜ್ಞಾನಿಯಾದ್ದರಿಂದ ನನ್ನ ಮೇಲೆ ಅಸ್ತ್ರ ಪ್ರಯೋಗಿಸಲಿಲ್ಲ. ಮಹಾ ಪರಾಕ್ರಮಿ ಯಾದ್ದರಿಂದ ನಾನೆಸೆದ ಅಸ್ತ್ರಗಳನ್ನೆಲ್ಲ ತುಂಡರಿಸಿದ.'

**ಇಲ್ಲಿಗೆ ಶ್ರೀ ಬ್ರಹ್ಮವೈವರ್ತ ಮಹಾಪುರಾಣದಲ್ಲಿ ಎರಡನೆಯದಾದ ಪ್ರಕೃತಿಖಂಡದ ನಾರದನಾರಾಯಣ ಸಂವಾದದಲ್ಲಿ ತುಲಸ್ಯುಪಾಖ್ಯಾನದಲ್ಲಿ ಕಾಲೀ ಶಂಖಚೂಡ ಯುದ್ಧಯೋಗವೆಂಬ ಹತ್ತೊಂಬತ್ತನೆ ಅಧ್ಯಾಯ ಮುಗಿಯಿತು.**

## ತುದಿಯಲ್ಲಿ ಹರಿಯಿದ್ದ ಶಿವನ ಶೂಲದಿಂದ ಶಂಖಚೂಡನ ಸಂಹಾರ

**ಅಧ್ಯಾಯ-೨೦**

ನಾರಾಯಣ ಮಹರ್ಷಿ— ಶಿವ ತನ್ನ ಪ್ರಮಥ ಗಣಗಳೊಡನೆ ತಾನೆ ರಣರಂಗಕ್ಕೆ ಇಳಿದ. ಶಂಖಚೂಡ ಶಿವನನ್ನು ಕಂಡು ವಿಮಾನದಿಂದಿಳಿದು ಪರಮಭಕ್ತಿಯಿಂದ ನೆಲದ ಮೇಲೆ ದಂಡಪ್ರಣಾಮಮಾಡಿ ಬೇಗನೆ ವಿಮಾನ ವೇರಿ ಬಿಲ್ಲನ್ನೆತ್ತಿಕೊಂಡ.

ಶಂಖಚೂಡ ಚಂದ್ರಚೂಡರು ಒಂದು ವರ್ಷ ಪೂರ್ತಿ ಯುದ್ಧಮಾಡಿದರು. ಯಾರೊಬ್ಬರೂ ಸೋಲಲಿಲ್ಲ, ಗೆಲ್ಲಲಿಲ್ಲ. ಇಬ್ಬರೂ ಶಸ್ತ್ರತ್ಯಾಗ ಮಾಡಿದರು.

ಮಹಾಮಾಯಾವಿಯಾದ ವಿಷ್ಣು ವೃದ್ಧ ಬ್ರಾಹ್ಮಣ ರೂಪದಿಂದ ಶಂಖಚೂಡನ ಬಳಿಗೆ ಬಂದು ನುಡಿದ- 'ಮಹಾರಾಜ, ನನಗೆ ಭಿಕ್ಷೆನೀಡು. ನಾನು ಬ್ರಾಹ್ಮಣ. ವೃದ್ಧನಾಗಿದ್ದೇನೆ, ರೋಗಗ್ರಸ್ತನಾಗಿದ್ದೇನೆ, ಹಸಿವು ಬಾಯಾರಿಕೆಗಳಿಂದ ಪೀಡಿತನಾಗಿದ್ದೇನೆ. ನೀನು ನನಗೆ ಬೇಡಿದುದನ್ನೆಲ್ಲ ಕೊಡಲು ಸಮರ್ಥ. ಆದ್ದರಿಂದ ಕೇಳುತ್ತಿದ್ದೇನೆ. ಮೊದಲಿಗೆ ಕೊಡುವೆನೆಂದು ಪ್ರತಿಜ್ಞೆಮಾಡು. ಆಮೇಲೆ ಏನೆಂದು ಹೇಳುತ್ತೇನೆ.'

ಶಂಖಚೂಡ ಕೊಡುವೆನೆಂದು ಪ್ರತಿಜ್ಞೆ ಮಾಡಿದ. ಬ್ರಾಹ್ಮಣ ಕವಚ ಬೇಡಿದ. ಅದನ್ನು ಪಡೆದು ಹೊರಟುಹೋದ. ಬಳಿಕ ಶಂಖಚೂಡನ ವೇಷ ಧರಿಸಿ ತುಳಸಿಯ ಬಳಿಗೆ ಹೋಗಿ ಅವಳಲ್ಲಿ ಗರ್ಭಾಧಾನ ಮಾಡಿದ. ಇತ್ತ ಶಿವ ಶಂಖಚೂಡನ ಮೇಲೆ ಶೂಲವನ್ನೆಸೆದ. ಶೂಲದ ತುದಿಯಲ್ಲಿ ನಾರಾಯಣನಿದ್ದ. ನಡುವೆ ಬ್ರಹ್ಮ. ಬುಡದಲ್ಲಿ ಶಿವ. ಅಲುಗಿನಲ್ಲಿ ಕಾಲ. ಪ್ರಳಯಾಗ್ನಿಯಂತೆ ತೀಕ್ಷ್ಣವಾದ ಜ್ವಾಲೆಗಳಿಂದ ವಿಷ್ಣುಚಕ್ರಕ್ಕೆ ಸದೃಶವಾದ ಆ ಶೂಲ ಶಿವ ಕೇಶವರಿಗೆ ಹೊರತು ಉಳಿದವರಿಗೆ ಧರಿಸಲು ಅಸಾಧ್ಯ. ಸಾವಿರ ಧನುಸ್ಸುಗಳಷ್ಟು ಉದ್ದ ನೂರು ಗಜ ದಪ್ಪ. ಇಡಿ ಬ್ರಹ್ಮಾಂಡವನ್ನು ನಾಶ ಮಾಡಲು ಅದೊಂದೇ ಸಾಕು. ಶಿವ ಅದನ್ನು ಪ್ರಯೋಗಿಸಿದಾಗ ಶಂಖಚೂಡ ಬಿಲ್ಲನ್ನು ಕೆಳಗಿಟ್ಟು ಯೋಗಾಸನದಲ್ಲಿ ಕುಳಿತು ಕೃಷ್ಣನನ್ನು ಧ್ಯಾನಿಸತೊಡಗಿದ. ಶೂಲ ಅವನ ಮೇಲೆರಗಿ ರಥಸಹಿತವಾಗಿ ಅವನನ್ನು ಸುಟ್ಟು ಬೂದಿ ಮಾಡಿತು.

ಮೃತನಾದ ಶಂಖಚೂಡ ಬಾಲಗೋಪಾಲರೂಪ ಧರಿಸಿ ಕೈಯಲ್ಲಿ ಕೊಳಲು ಹಿಡಿದು ರತ್ನಾಭರಣಭೂಷಿತವಾಗಿ ಅವನಂತೇ ಇರುವ ಕೋಟಿ ಗೋಪಾಲಕರೊಡನೆ ಗೋಲೋಕದಿಂದ ಬಂದ ವಿಮಾನವೇರಿ ಹೊರಟುಹೋದ. ಗೋಲೋಕದಲ್ಲಿ ರಾಧಾಮಾಧವರ ಪಾದಕಮಲಗಳಿಗೆ ಭಕ್ತಿಯಿಂದ ಮಣಿದ. ಅವರು ಪ್ರೀತಿಯಿಂದ ಅವನನ್ನು ಮಡಿಲಲ್ಲಿರಿಸಿಕೊಂಡರು.

ಇತ್ತ ಶೂಲ ಶಿವನ ಕೈಗೇ ಹಿಂತಿರುಗಿತು. ಆದರಿಂದ ಶಿವ ಶೂಲಪಾಣಿ ಎನಿಸಿದ. ಆ ಶೂಲದಿಂದಲೆ ಶಂಖಚೂಡನ ಮೂಳೆಗಳನ್ನು ಲವಣ ಸಮುದ್ರದಲ್ಲಿ ಎಸೆದ. ಮುಂದೆ ಶಂಖಚೂಡನ ಮೂಳೆಗಳಿಂದಲೆ ಸಮುದ್ರದಲ್ಲಿ ಶಂಖಗಳು ಉತ್ಪನ್ನವಾದುವು. ನಾನಾ ಜಾತಿಯ ಆ ಶಂಖಗಳು ಪವಿತ್ರವಾಗಿದ್ದು ದೇವತಾರ್ಚನೆಗಳಲ್ಲಿ ಪ್ರಶಸ್ತವೆನಿಸಿದುವು. ಪವಿತ್ರವಾದ ಶಂಖೋದಕ ಶಿವನನ್ನು ಹೊರತು ಬೇರೆ ಎಲ್ಲ ದೇವತೆಗಳಿಗೂ ಪ್ರಿಯವೆನಿಸಿತು.

**ಶಂಖಶಬ್ದೋ ಭವೇದ್ ಯತ್ರ ತತ್ರ ಲಕ್ಷ್ಮೀಶ್ಚ ಸುಸ್ಥಿರಾ ।**
**ಸ ಸ್ನಾತಃ ಸರ್ವತೀರ್ಥೇಷು ಯಃ ಸ್ನಾತಃ ಶಂಖವಾರಿಣಾ ॥**

ಶಂಖಧ್ವನಿಯಾಗುವ ಸ್ಥಳದಲ್ಲೆಲ್ಲ ಲಕ್ಷ್ಮಿ ಸ್ಥಿರವಾಗಿ ನೆಲೆಸುವಳು. ಶಂಖೋದಕದಿಂದ ಮಿಂದವನಿಗೆ ಸಕಲ ತೀರ್ಥಸ್ನಾನದ ಫಲ ಲಭಿಸುವುದು.

**ಶಂಖೋ ಹರೇರಧಿಷ್ಠಾನಂ ಯತ್ರ ಶಂಖಸ್ತತೋ ಹರಿಃ ।**
**ತತ್ರೈವ ಸತತಂ ಲಕ್ಷ್ಮೀ ದೂರೀಭೂತಮಮಂಗಲಂ ॥**

ಶಂಖ ಹರಿಯ ಸನ್ನಿಧಾನದಿಂದ ಕೂಡಿದೆ. ಎಲ್ಲಿ ಶಂಖವಿರುವುದೋ ಅಲ್ಲಿ ಹರಿ ಇರುತ್ತಾನೆ. ಅಲ್ಲಿಯೆ ಸದಾ ಲಕ್ಷ್ಮಿ ಇರುತ್ತಾಳೆ. ಅಮಂಗಳ ದೂರವಾಗಿರುತ್ತದೆ.

ಸ್ತ್ರೀ ಶೂದ್ರರು ಶಂಖ ಧ್ವನಿ ಮಾಡಿದರೆ ಲಕ್ಷ್ಮಿ ಭಯ ಕೋಪಗಳಿಂದ ದೂರ ಹೋಗುವಳು.

ಶಂಖಚೂಡನನ್ನು ವಧಿಸಿ ಶಿವಲೋಕಕ್ಕೆ ಗಣಗಳೊಂದಿಗೆ ಶಿವ ಹಿಂತಿರುಗಿದ. ದೇವತೆಗಳೂ ಸ್ವಸ್ಥಾನ ಸೇರಿದರು. ಸ್ವರ್ಗದಲ್ಲಿ ದುಂದುಭಿ ಮೊಳಗಿದುವು. ಗಂಧರ್ವ ಕಿನ್ನರರು ಹಾಡಿದರು. ಶಿವನ ಮೇಲೆ ಸತತವಾಗಿ ಹೂಮಳೆಯಾಯಿತು. ದೇವತೆಗಳು ಮುನಿಗಳು ಮುಂತಾದವರು ಶಿವನನ್ನು ಸ್ತುತಿಸಿದರು.

**ಇಲ್ಲಿಗೆ ಶ್ರೀ ಬ್ರಹ್ಮವೈವರ್ತ ಮಹಾಪುರಾಣದಲ್ಲಿ ಎರಡನೆಯದಾದ ಪ್ರಕೃತಿಖಂಡದ ನಾರದನಾರಾಯಣ ಸಂವಾದದಲ್ಲಿ ಶಂಖಚೂಡವಧದಲ್ಲಿ ಶಂಖ ಪ್ರಸ್ತಾವನವೆಂಬ ಇಪ್ಪತ್ತನೆ ಅಧ್ಯಾಯ ಮುಗಿಯಿತು.**

ಅಧ್ಯಾಯ-೨೧

# ಶಂಖಚೂಡನ ವೇಷದಿಂದ ತುಲಸಿಯೊಡನೆ ವಿಷ್ಣುವಿನ ಸಮಾಗಮ. ಪತಿವೇಷದಿಂದ ತನ್ನನ್ನು ವಂಚಿಸಿದ ಹರಿಗೆ ತುಲಸಿಯ ಶಾಪ, ಹರಿಯಿಂದ ತುಲಸಿಯ ಸಾಂತ್ವನ ಹಾಗೂ ತುಲಸೀಸಾಲಿಗ್ರಾಮಗಳ ಮಹಿಮಾಕೀರ್ತನ

ನಾರದ— ಪ್ರಭು, ನಾರಾಯಣ ಯಾವ ರೂಪದಿಂದ ತುಲಸಿಯಲ್ಲಿ ಗರ್ಭಾಧಾನ ಮಾಡಿದನೆಂಬುದನ್ನು ವಿವರವಾಗಿ ಹೇಳು.

ನಾರಾಯಣ ಮಹರ್ಷಿ— ಭಗವಾನ್ ನಾರಾಯಣ ಶಂಖಚೂಡನ ರೂಪದಿಂದ ತುಲಸಿಯೊಡನೆ ರಮಿಸಿದ. ಶಂಖಚೂಡನ ರೂಪತಳೆದು ಬಂದ ನಾರಾಯಣ ಮೊದಲಿಗೆ ಅರಮನೆಯ ದ್ವಾರದ ದುಂದುಭಿಯನ್ನು ಮೊಳಗಿಸಿದ. ಜಯಕಾರದಿಂದ ತುಲಸಿಗೆ ಎಚ್ಚರವಾಗುವಂತೆ ಮಾಡಿದ. ತುಲಸಿ ಎದ್ದು ಪತಿ ವಿಜಯಿಯಾಗಿ ಹಿಂತಿರುಗಿದನೆಂದು ಪರಮಾನಂದದಿಂದ ಕಿಟಕಿಯ ಮೂಲಕ ರಾಜಮಾರ್ಗವನ್ನು ವೀಕ್ಷಿಸಿದಳು. ಆದರದಿಂದ ಬ್ರಾಹ್ಮಣರಿಗೆ ದಾನ ನೀಡಿದಳು. ವಂದಿಮಾಗಧರಿಗೂ ಯಾಚಕರಿಗೂ ಧನವಿತ್ತಳು.

ಪತಿವೇಷದಿಂದ ಬಂದ ಹರಿಗೆ ಪಾದಪ್ರಕ್ಷಾಲನ ಪ್ರಣಾಮಗಳನ್ನು ಮಾಡಿ ಆನಂದಬಾಷ್ಪ ಸುರಿಸಿದಳು. ರತ್ನಸಿಂಹಾಸನದಲ್ಲಿ ಕುಳ್ಳಿರಿಸಿ ಪಚ್ಚಕರ್ಪೂರಾದಿಗಳಿಂದ ಗಮಗಮಿಸುವ ತಾಂಬೂಲ ನೀಡಿದಳು. 'ನನ್ನ ಜನ್ಮವಿಂದು ಸಫಲವಾಯಿತು. ನನ್ನ ಪ್ರಾಣೇಶ್ವರ ಯುದ್ಧರಂಗದಿಂದ ವಿಜಯಿಯಾಗಿ ಹಿಂತಿರುಗಿ ಬಂದುದನ್ನು ಕಣ್ಣಾರೆ ಕಂಡೆ' ಎನ್ನುತ್ತ ಮೈಯೆಲ್ಲ ರೋಮಾಂಚಗೊಂಡು ಅನುರಾಗದ ನೋಟ ಬೀರುತ್ತ ಸವಿನುಡಿಗಳಿಂದ ಯುದ್ಧವೃತ್ತಾಂತವನ್ನು ಕೇಳತೊಡಗಿದಳು—

'ಪ್ರಭು, ಲಯಕಾರಕನಾದ ಶಿವನೊಡನೆ ಇಂದಿನ ಯುದ್ಧದಲ್ಲಿ ನಿನಗೆ ಜಯ ಹೇಗೆ ಲಭಿಸಿತು, ಹೇಳು.'

ಹರಿ ನುಡಿದ, 'ನಮ್ಮ ಯುದ್ಧ ಪೂರ್ಣ ಒಂದು ವರ್ಷ ನಡೆಯಿತು. ಎಲ್ಲ ದಾನವರೂ ಮಡಿದರು. ಆದರೆ ನಡುವೆ ಬ್ರಹ್ಮ ಬಂದು ನಮ್ಮಿಬ್ಬರಿಗೆ ಸಂಧಾನ ಮಾಡಿಸಿದ. ಅವನ ಆಜ್ಞೆಯಂತೆ ನಾನು ದೇವತೆಗಳ ಅಧಿಕಾರವನ್ನು ದೇವತೆಗಳಿಗೇ ಕೊಟ್ಟೆ. ಶಿವ ಶಿವಲೋಕಕ್ಕೆ ತೆರಳಿದ, ನಾನು ಇಲ್ಲಿಗೆ ಬಂದೆ.' ಹೀಗೆ ಸುಳ್ಳು ಹೇಳಿ ತುಲಸಿಯೊಡನೆ ರಮಿಸಿದ. ಆದರೆ ರತಿಕ್ರೀಡೆಯಲ್ಲಿ ಏನೋ ವ್ಯತ್ಯಾಸ ಅವಳಿಗೆ ಗೋಚರವಾಯಿತು. ಸಂದೇಹಮೂಡಿತು. 'ಯಾರು ನೀನು ? ಯಾರೋ ಕಪಟಿ

ನೀನು. ಕಪಟದಿಂದ ನನ್ನೊಡನೆ ರಮಿಸಿರುವೆ. ನನ್ನ ಪಾತಿವ್ರತ್ಯಕ್ಕೆ ಭಂಗ ತಂದಿರುವೆ. ನೀನು ಯಾರು, ಹೇಳು. ಇಲ್ಲದಿದ್ದರೆ ಶಪಿಸುವೆನು,' ಎಂದಳು. ಹರಿ ಭಯದಿಂದ ನಿಜರೂಪ ತಾಳಿ ನಿಂತ. ನೀಲಮೇಘಶ್ಯಾಮ, ಕಮಲನಯನ, ಪೀತಾಂಬರ ಧಾರಿಯಾದ, ಕೋಟಿ ಮನ್ಮಥ ಸಮಾನಕಾಂತಿಯುಕ್ತನಾದ ಹರಿಯನ್ನು ಪ್ರತ್ಯಕ್ಷಕಂಡು ಮೋಹಗೊಂಡು ಮೂರ್ಛೆ ಹೊಂದಿದಳು ತುಲಸಿ. ಪುನಃ ಎಚ್ಚೆತ್ತು ಹೇಳಿದಳು-

'ಜಗನ್ನಾಥ, ನೀನು ನಿಷ್ಕರುಣಿ. ಕಲ್ಲಿನ ಹೃದಯದವ. ಮೋಸದಿಂದ ನನ್ನ ಪಾತಿವ್ರತ್ಯವನ್ನು ಕಳೆದು ನನ್ನ ಪತಿಗೆ ಸರ್ವನಾಶ ತಂದಿತ್ತೆ. ಕಲ್ಲಿನಂಥ ಹೃದಯದವನಾದ್ದರಿಂದ ನೀನು ಕಲ್ಲೇ ಆಗು. ನಿನ್ನನ್ನು ದಯಾಸಾಗರನೆಂದು ಕೊಂಡಾಡುವವರು ಭ್ರಾಂತರು. ಸಂಶಯವಿಲ್ಲ. ನಿರಪರಾಧಿಯಾದ ಭಕ್ತನನ್ನು ಇನ್ನೊಬ್ಬರಿಗಾಗಿ ಏಕೆ ನಾಶ ಮಾಡುವೆ ? ಸರ್ವಜ್ಞನಾಗಿದ್ದೂ ಇನ್ನೊಬ್ಬರ ವ್ಯಥೆಯನ್ನು ಅರಿಯದ ನೀನು ಒಂದು ಜನ್ಮದಲ್ಲಿ ನಿನ್ನನ್ನೇ ಮರೆತಿರುವಿ.'

ಹೀಗೆ ಶಪಿಸಿ ಹರಿಯ ಪಾದಗಳಿಗೆ ಬಿದ್ದು ತುಲಸಿ ಶೋಕಾರ್ತಳಾಗಿ ಅತ್ತಳು. ಅವಳ ದುಃಖ ನೋಡಿ ಕರುಣಾಸಾಗರನಾದ ಹರಿ ಸಂತೈಸುತ್ತ ನುಡಿದ-

'ತುಲಸಿ, ನೀನು ನನಗಾಗಿ ತಪಸ್ಸು ಮಾಡಿದ್ದರೂ ಶಂಖಚೂಡ ನಿನಗಾಗಿ ತಪಸ್ಸು ಮಾಡಿ ನಿನ್ನನ್ನು ಪಡೆದು ಚಿರಕಾಲ ವಿಹರಿಸಿದ. ಈಗ ನಿನ್ನ ತಪಸ್ಸಿಗೆ ನಾನು ಫಲ ಕೊಡುವುದು ಉಚಿತ. ಆದರಿಂದ ನೀನು ಈ ಶರೀರ ತೊರೆದು ದಿವ್ಯ ಶರೀರದಿಂದ ಲಕ್ಷ್ಮಿಯೊಡಗೂಡಿ ನನ್ನೊಡನೆ ರಮಿಸು. ನಿನ್ನ ಈ ಶರೀರ ಪವಿತ್ರವಾದ ಗಂಡಕೀ-ನದಿಯಾಗಿ ಭಾರತ ಭೂಮಿಯಲ್ಲಿ ಹರಿಯಲಿ. ನಿನ್ನ ತಲೆಗೂದಲುಗಳು ಪವಿತ್ರ ವೃಕ್ಷಗಳಾಗಿ ಜನಿಸಲಿ. ಹೀಗೆ ತುಲಸಿಯ ಕೇಶಗಳಿಂದ ಜನಿಸಿದ ಗಿಡಗಳು ತುಲಸಿ ಎಂದೇ ಪ್ರಸಿದ್ಧವಾಗಲಿ. ದೇವತಾರ್ಚನೆಯಲ್ಲಿ ಪ್ರಶಸ್ತವಾದ ಪುಷ್ಪ ಪತ್ರಗಳಲ್ಲಿ ತುಲಸಿಯೆ ಪ್ರಧಾನವೆನಿಸಲಿ. ಸ್ವರ್ಗಮರ್ತ್ಯ ಪಾತಾಳಗಳಲ್ಲಿ ವೈಕುಂಠದಲ್ಲಿ ಗೋ-ಲೋಕದ ವಿರಜಾ ತೀರದಲ್ಲಿರುವ ವೃಂದಾವನದಲ್ಲಿ, ಭಾಂಡೀರ ಚಂಪಕವನ ಚಂದನವನ ಮಾಧವೀ ಕೇತಕೀ ಕುಂದ ಮಲ್ಲಿಕಾ ಮಾಲತೀ ವನಗಳಲ್ಲಿ ಎಲ್ಲೆಡೆ ತುಲಸಿಗೆ ಆದ್ಯತೆ ಸಿಗಲಿ. ತುಲಸಿಯ ಬುಡದಲ್ಲಿ ಸರ್ವತೀರ್ಥಗಳು, ತುಲಸಿಯ ಎಲೆಗಳು ಉದುರುವ ಸ್ಥಳದಲ್ಲಿ ಎಲ್ಲ ದೇವತೆಗಳೂ ನೆಲೆಸುತ್ತಿರಲಿ.

ತುಲಸೀ ಪತ್ರಮಿಶ್ರಿತವಾದ ನೀರಲ್ಲಿ ಮಿಂದವನಿಗೆ ಸರ್ವತೀರ್ಥಯಾತ್ರೆಯ ಫಲ, ಸರ್ವಯಜ್ಞಗಳ ಫಲ ಸಿಗಲಿ.

ಮಾನವರು ನನಗೆ ತುಲಸೀದಳ ಸಮರ್ಪಿಸಿದರೆ ಸಾವಿರ ಅಮೃತ ಕಲಶ ಸಮರ್ಪಣೆಗಿಂತ ಅಧಿಕ ತೃಪ್ತಿ. ಒಂದು ತುಲಸೀದಲ ದಾನದಿಂದ ಹತ್ತು ಸಾವಿರ ಗೋದಾನಫಲ. ಮರಣಕಾಲದಲ್ಲಿ ತುಲಸೀದಲ ಮಿಶ್ರಿತ ಜಲಪಾನದಿಂದ

ಸರ್ವಪಾಪಗಳಿಂದ ಮುಕ್ತಿ ಮತ್ತು ವಿಷ್ಣುಲೋಕ ಪ್ರಾಪ್ತಿ. ನಿತ್ಯ ತುಲಸೀದಲ ಮಿಶ್ರಿತ ತೀರ್ಥವನ್ನು ಭಕ್ತಿಯಿಂದ ಪ್ರಾಶನ ಮಾಡುವವ ಗಂಗಾಸ್ನಾನ ಫಲವನ್ನು ಹೊಂದಿ ಜೀವನ್ಮುಕ್ತನಾಗುತ್ತಾನೆ. ತುಲಸೀದಲದಿಂದ ನನ್ನನ್ನು ಅರ್ಚಿಸಿದರೆ ಲಕ್ಷ ಅಶ್ವಮೇಧ-ಯಾಗದ ಫಲ. ತುಲಸೀ ಮಣಿಮಾಲೆಧರಿಸುವವನಿಗೆ ಹೆಜ್ಜೆಹೆಜ್ಜೆಗೂ ಅಶ್ವಮೇಧ-ಯಾಗದ ಫಲ. ತುಲಸೀದಲವನ್ನು ಕೈಯಲ್ಲಿ ಹಿಡಿದು ಶಪಥ ಮಾಡಿ ಅದನ್ನು ನಡೆಸದಿದ್ದರೆ ಸೂರ್ಯಚಂದ್ರರಿರುವಷ್ಟು ಕಾಲವೂ ಕಾಲಸೂತ್ರ ನರಕವಾಗುವುದು. ಹದಿನಾಲ್ಕು ಇಂದ್ರರ ಕಾಲ ಕುಂಭೀಪಾಕ ನರಕ ಉಂಟಾಗುವುದು. ಒಂದು ಹನಿ ತುಲಸೀಜಲವನ್ನು ಮರಣಕಾಲದಲ್ಲಿ ಕುಡಿದರೆ ರತ್ನವಿಮಾನವೇರಿ ವೈಕುಂಠಕ್ಕೆ ಪ್ರಯಾಣ ಮಾಡಬಹುದು.

ಹುಣ್ಣಿಮೆ, ಅಮಾವಾಸ್ಯೆ, ದ್ವಾದಶಿ, ಸಂಕ್ರಮಣ, ತೈಲಾಭ್ಯಂಗ ಮಾಡಿ ಸ್ನಾನ ಮಾಡುವುದಕ್ಕಿಂತ ಮುಂಚೆ, ಮಧ್ಯಾಹ್ನ, ರಾತ್ರಿ, ಸಂಧ್ಯೆಗಳಲ್ಲಿ, ಆಶೌಚಕಾಲ, ಅಶುಚಿಕಾಲ, ರಾತ್ರಿ ಉಟ್ಟ ಬಟ್ಟೆ ಬದಲಾಯಿಸದಿರುವಾಗ, ತುಲಸಿ ಕೊಯ್ದರೆ ಹರಿಯ ಶಿರಚ್ಛೇದ ಮಾಡಿದಂತೆ.

ಶ್ರಾದ್ಧ, ವ್ರತ, ದಾನ, ಪ್ರತಿಷ್ಠೆ, ದೇವತಾರ್ಚನೆಗಳಲ್ಲಿ ಮೂರುದಿವಸ ಹಳಸಿದ ತುಲಸೀದಳವೂ ಶುದ್ಧವೆ. ನೆಲಕ್ಕೆ ಅಥವಾ ನೀರಿಗೆ ಬಿದ್ದ ವಿಷ್ಣು ನಿರ್ಮಾಲ್ಯ ತುಳಸಿಯೂ ತೊಳೆದಾಗ ಬೇರೆ ಕರ್ಮಗಳಿಗೆ ಶುದ್ಧವೆನಿಸುವುದು. ತುಲಸೀಗಿಡದ ಅಭಿಮಾನಿನಿ ತುಲಸೀ ದೇವಿ ಶಾಶ್ವತವಾದ ಗೋಲೋಕದಲ್ಲಿ ಕೃಷ್ಣನೊಡನೆ ಏಕಾಂತ-ದಲ್ಲಿ ನಿತ್ಯ ಕ್ರೀಡಿಸುವಳು. ಗಂಡಕೀ ನದಿಗೆ ಅಭಿಮಾನಿನಿಯಾದ ದೇವಿ ಸಮುದ್ರ-ರಾಜನ ಮಡದಿಯಾಗುವಳು. ನೀನು ಸ್ವತಃ ವೈಕುಂಠದಲ್ಲಿ ಲಕ್ಷ್ಮಿಯೊಂದಿಗೆ ನನ್ನ ಬಳಿ ಇರುವೆ. ನಾನು ಗಂಡಕೀತೀರದಲ್ಲಿ ಶಾಲಿಗ್ರಾಮ ಶಿಲೆಯಾಗಿರುತ್ತೇನೆ. ವಜ್ರದ ಕೋರೆದಾಡೆ ಉಳ್ಳ ವಜ್ರಕೀಟಗಳು ಆ ಶಿಲೆಯನ್ನು ಕೊರೆದು ಒಳಗೆ ವಿಷ್ಣುಚಕ್ರವನ್ನು ರಚಿಸುವವು.

ಒಂದು ದ್ವಾರದಲ್ಲಿ ನಾಲ್ಕು ಚಕ್ರಗಳಿದ್ದು ವನಮಾಲಾ ಭೂಷಿತವಾಗಿರುವ ನವಘನಶ್ಯಾಮವಾದ ಶಿಲೆ ಲಕ್ಷ್ಮೀನಾರಾಯಣ ಎನಿಸುವುದು. ಅದೇ ಶಿಲೆ ವನಮಾಲಾ ರಹಿತವಾಗಿದ್ದರೆ ಲಕ್ಷ್ಮೀಜನಾರ್ದನ. ಎರಡು ದ್ವಾರಗಳು, ನಾಲ್ಕು ಚಕ್ರಗಳು, ಗೋಪಾದ ಚಿಹ್ನೆ ಇದ್ದರೆ ವನಮಾಲೆ ಇಲ್ಲದಿದ್ದರೆ ರಘುನಾಥ. ಎರಡು ಚಕ್ರಗಳಿದ್ದು ನವಘನಶ್ಯಾಮವಾದ ಸಣ್ಣಶಿಲೆ ದಧಿವಾಮನ. ಗೃಹಸ್ಥರಿಗೆ ಸುಖದಾಯಕ. ಎರಡು ಚಕ್ರಗಳಿದ್ದು ವನಮಾಲಾ ವಿಭೂಷಿತವಾದ ಸಣ್ಣಶಿಲೆ ಶ್ರೀಧರ. ಗೃಹಸ್ಥರಿಗೆ ಸಂಪತ್‌ಪ್ರದ. ಅತ್ಯಂತ ಸ್ಫುಟವಾದ ಎರಡು ಚಕ್ರಗಳು ವರ್ತುಲಾಕಾರದ ದೊಡ್ಡಶಿಲೆ, ವನಮಾಲೆ ಇಲ್ಲದುದು ದಾಮೋದರ. ಮಧ್ಯಮಗಾತ್ರ, ವರ್ತುಲಾಕಾರ, ಎರಡು

ಚಕ್ರಗಳು, ಬಾಣಕ್ಷತವಾಗಿದ್ದು ಬಾಣ ಬತ್ತಳಿಕೆಗಳಿಂದ ಕೂಡಿದ್ದರೆ ರಣರಾಮ. ಮಧ್ಯಮಗಾತ್ರ ಏಳು ಚಕ್ರಗಳು ಛತ್ರ, ಬತ್ತಳಿಕೆ ಯುಕ್ತವಾಗಿದ್ದರೆ ರಾಜರಾಜೇಶ್ವರ. ರಾಜ ಸಂಪತ್ತನ್ನು ಕೊಡುತ್ತದೆ. ಹದಿನಾಲ್ಕು ಚಕ್ರಗಳಿದ್ದು ನವಘನಶ್ಯಾಮವಾದ ದೊಡ್ಡದಾದ ಶಿಲೆ ಅನಂತ. ಚತುರ್ವರ್ಗ ಫಲದಾಯಕ. ನೀಲಮೇಘಶ್ಯಾಮ, ಎರಡು ಚಕ್ರಗಳು ಗೋಪಾದ ಚಿಹ್ನೆಗಳಿಂದ ಕೂಡಿದ್ದು ಚಕ್ರಾಕಾರವಾದ ಮಧ್ಯಮಗಾತ್ರದ ಶಿಲೆ ಮಧುಸೂದನ. ಒಂದೇ ಚಕ್ರವಿದ್ದರೆ ಸುದರ್ಶನ. ಚಕ್ರಗೂಢವಾಗಿದ್ದರೆ ಗದಾಧರ. ಎರಡು ಚಕ್ರಗಳಿದ್ದು ಕುದುರೆಯ ಮುಖದಂತಿದ್ದರೆ ಹಯಗ್ರೀವ. ಅತಿ ವಿಶಾಲವಾದ ದ್ವಾರ, ವಿಕಟಾಕಾರ, ಎರಡು ಚಕ್ರಗಳಿದ್ದರೆ ನರಸಿಂಹ. ಬೇಗನೆ ವೈರಾಗ್ಯ ನೀಡುವುದು. ದೊಡ್ಡ ದ್ವಾರ ಎರಡು ಚಕ್ರಗಳು ವನಮಾಲೆಯಿಂದ ಕೂಡಿದ್ದರೆ ಲಕ್ಷ್ಮೀನೃಸಿಂಹ. ಗೃಹಸ್ಥರಿಗೆ ಸುಖಪ್ರದ. ದ್ವಾರದೇಶದಲ್ಲಿ ಎರಡು ಚಕ್ರಗಳು ಸಮ ಮತ್ತು ಸ್ಫುಟವಾದ ಕಾಂತಿ ಉಳ್ಳ ಶಿಲೆ ವಾಸುದೇವ. ಸರ್ವಾಭೀಷ್ಟದಾಯಕ. ನವಘನಶ್ಯಾಮ ಸೂಕ್ಷ್ಮಚಕ್ರ-ಯುಕ್ತವಾಗಿದ್ದು ದ್ವಾರದೇಶದಲ್ಲಿ ಬಹು ಛಿದ್ರಗಳಿದ್ದರೆ ಪ್ರದ್ಯುಮ್ನ. ಗೃಹಸ್ಥರಿಗೆ ಸುಖಪ್ರದ. ಹಿಂಭಾಗದಲ್ಲಿ ಎರಡು ಚಕ್ರಗಳು ಸೇರಿದ್ದರೆ ಸಂಕರ್ಷಣ. ಗೃಹಸ್ಥರಿಗೆ ಸುಖಪ್ರದ. ಹಳದಿ ಬಣ್ಣ ವರ್ತುಲಾಕಾರದ ಸುಂದರವಾದ ಶಿಲೆ ಅನಿರುದ್ಧ. ಗೃಹಸ್ಥರಿಗೆ ಸುಖದಾಯಕ.

**ಶಾಲಗ್ರಾಮ ಶಿಲಾ ಯತ್ರ ತತ್ರ ಸನ್ನಿಹಿತೋ ಹರಿಃ ।**
**ತತ್ರೈವ ಲಕ್ಷ್ಮೀರ್ವಸತಿ ಸರ್ವತೀರ್ಥ ಸಮನ್ವಿತಾ ॥**

ಶಾಲಗ್ರಾಮಶಿಲೆ ಇರುವಲ್ಲೆಲ್ಲ ಹರಿಸನ್ನಿಧಾನವಿದೆ. ಅಲ್ಲಿಯೆ ಲಕ್ಷ್ಮಿ ವಾಸ-ವಾಗಿರುತ್ತಾಳೆ. ಸರ್ವತೀರ್ಥಗಳೂ ಇರುತ್ತವೆ.

**ಯಾನಿ ಕಾನಿ ಚ ಪಾಪಾನಿ ಬ್ರಹ್ಮಹತ್ಯಾದಿಕಾನಿ ಚ ।**
**ತಾನಿ ಸರ್ವಾಣಿ ನಶ್ಯಂತಿ ಶಾಲಗ್ರಾಮ ಶಿಲಾರ್ಚನಾತ್ ॥**

ಬ್ರಹ್ಮಹತ್ಯಾದಿ ಸಕಲಪಾಪಗಳೂ ಶಾಲಗ್ರಾಮ ಶಿಲಾರ್ಚನೆಯಿಂದ ನಾಶವಾಗುವುವು.

ಛತ್ರಾಕಾರದ ಶಿಲೆ ಇದ್ದರೆ ರಾಜ್ಯಲಾಭ. ವರ್ತುಲಾಕಾರದ್ದಿದ್ದರೆ ಸಂಪತ್ತು ಲಭಿಸುತ್ತದೆ. ಶಕಟಾಕಾರವಾಗಿದ್ದರೆ ದುಃಖಪ್ರದ. ಶೂಲಾಗ್ರದಂತಿದ್ದರೆ ಮರಣಕಾರಕ. ವಿಕಾರ ಮುಖದ ಶಿಲೆ ದಾರಿದ್ರ್ಯ ತರುತ್ತದೆ. ಕಂದುಬಣ್ಣದ್ದಿದ್ದರೆ ಹಾನಿ. ಚಕ್ರಗಳು ಒಂದಕ್ಕೊಂದು ತಾಗಿದ್ದರೆ ವ್ಯಾಧಿ. ಸೀಳಿಹೋದರೆ ಮರಣ.

**ವ್ರತಂ ದಾನಂ ಪ್ರತಿಷ್ಠಾ ಚ ಶ್ರಾದ್ಧಂ ಚ ದೇವಪೂಜನಂ ।**
**ಶಾಲಗ್ರಾಮ ಶಿಲಾಯಾಶ್ಚೈವಾಧಿಷ್ಠಾನಾತ್ ಪ್ರಶಸ್ತಕಂ ॥**

ವ್ರತ ದಾನ ಪ್ರತಿಷ್ಠೆ ಶ್ರಾದ್ಧ ದೇವತಾರ್ಚನೆಗಳನ್ನು ಶಾಲಗ್ರಾಮ ಸನ್ನಿಧಿಯಲ್ಲಿ ಮಾಡಿದರೆ ಮಾತ್ರ ಪ್ರಶಸ್ತ.

ಶಾಲಗ್ರಾಮ ತೀರ್ಥದಿಂದ ಸ್ನಾನ ಮಾಡುವವನಿಗೆ ಸರ್ವತೀರ್ಥಸ್ನಾನಫಲ, ಸರ್ವಯಾಗ ಮಾಡಿದ ಫಲ. ಸರ್ವದಾನ ಮಾಡಿದ ಫಲ. ಭೂಪ್ರದಕ್ಷಿಣ ಫಲ. ಸರ್ವವ್ರತೋಪವಾಸಗಳ ಫಲ. ಎಲ್ಲ ತೀರ್ಥಗಳೂ ಅವನ ಸ್ಪರ್ಶವನ್ನು ಬಯಸುವುವು. ಅವನು ಮಹಾ ಪವಿತ್ರನಾಗಿ ಜೀವನ್ಮುಕ್ತನೆನಿಸುವನು.

ಶಾಲಗ್ರಾಮ ಶಿಲಾರ್ಚನೆಯಿಂದ ನಾಲ್ಕು ವೇದ ಪಾರಾಯಣ ಫಲ. ತಪಸ್ಸು ಮಾಡಿದ ಫಲ. ನಿತ್ಯ ಶಾಲಗ್ರಾಮತೀರ್ಥ ಸೇವಿಸುವವ ಜನನ ಮರಣಾದಿ ದೂರನಾಗುವನು, ಅವನ ಸ್ಪರ್ಶವನ್ನು ಎಲ್ಲ ತೀರ್ಥಗಳು ಬಯಸುವುವು. ಮಹಾ-ಪವಿತ್ರನಾಗಿ ಜೀವನ್ಮುಕ್ತನಾಗಿ ವೈಕುಂಠಕ್ಕೆ ಹೋಗುತ್ತಾನೆ ಆತ. ಅಲ್ಲಿ ಅಸಂಖ್ಯ ಪ್ರಾಕೃತಲಯಗಳನ್ನು ಕಾಣುತ್ತ ಹರಿಯ ಸೇವೆ ಮಾಡುತ್ತಿರುವನು. ಅವನ ದರ್ಶನ ಮಾತ್ರದಿಂದ ಗರುಡನನ್ನು ಕಂಡ ಹಾವುಗಳಂತೆ ಬ್ರಹ್ಮಹತ್ಯಾದಿ ಪಾಪಗಳೆಲ್ಲ ಭಯದಿಂದ ಓಡುವುವು. ಅವನ ಪಾದಕಮಲದ ಧೂಳಿ ಬಿದ್ದಲ್ಲೆಲ್ಲ ನೆಲ ಪವಿತ್ರವಾಗುವುದು. ಅವನ ಕುಲದ ಲಕ್ಷಮಂದಿ ಪೂರ್ವಿಕರು ಸದ್ಗತಿ ಹೊಂದುವರು.

ಮರಣಕಾಲದಲ್ಲಿ ಸಾಲಗ್ರಾಮತೀರ್ಥ ಸೇವಿಸಿದರೆ ಸರ್ವಪಾಪ ಮುಕ್ತಿ. ವಿಷ್ಣುಲೋಕಪ್ರಾಪ್ತಿ. ವಿಷ್ಣುಪಾದದಲ್ಲಿ ಲೀನನಾಗುತ್ತಾನೆ. ಶಾಲಗ್ರಾಮಶಿಲೆಯನ್ನು ಹಿಡಿದು ಸುಳ್ಳು ಹೇಳಿದರೆ ಬ್ರಹ್ಮನ ಆಯುಸ್ಸಿನಷ್ಟು ಕಾಲ ಕೂರ್ಮದಂಷ್ಟ್ರ ನರಕ. ಸಾಲಗ್ರಾಮ ಶಿಲೆ ಮುಟ್ಟಿ ಹೇಳಿದ ಮಾತನ್ನು ನಡೆಸಿಕೊಡದಿದ್ದರೆ ಲಕ್ಷ ಮನ್ವಂತರ ಕಾಲ ಅಸಿಪತ್ರ ನರಕವಾಸ.

ಸಾಲಗ್ರಾಮಕ್ಕೆ ತುಲಸಿಯ ವಿಯೋಗ ಮಾಡಿದರೆ ಜನ್ಮಾಂತರದಲ್ಲಿ ಪತ್ನೀ-ವಿಯೋಗ. ಶಂಖಕ್ಕೆ ತುಲಸೀವಿಯೋಗ ಮಾಡಿದರೆ ಏಳು ಜನ್ಮಗಳಲ್ಲಿ ಭಾರ್ಯಾ-ಹೀನನಾಗುತ್ತಾನೆ. ಶಾಲಗ್ರಾಮ ತುಲಸಿ ಶಂಖಗಳನ್ನು ಏಕತ್ರ ಇರಿಸುವವನು ಮಹಾಜ್ಞಾನಿಯಾಗುತ್ತಾನೆ, ಹರಿಪ್ರಿಯನೆನಿಸುತ್ತಾನೆ.

ತುಲಸಿ, ಒಬ್ಬನು ಓರ್ವಸ್ತ್ರೀಯಲ್ಲಿ ಒಮ್ಮೆ ಗರ್ಭಾಧಾನ ಮಾಡಿದರೂ ಅವರ ವಿಯೋಗ ದುಃಖಕರವಾಗುವುದು. ನೀನು ಶಂಖಚೂಡನಿಗೆ ಒಂದು ಮನ್ವಂತರಕಾಲ ಪ್ರೇಯಸಿಯಾಗಿದ್ದೆ. ನಿಮ್ಮ ವಿಯೋಗ ದುಃಖಕರವೇ ಸರಿ.'

ಹೀಗೆ ಹೇಳಿ ಹರಿ ಸುಮ್ಮನಾದ. ತುಲಸಿ ಶರೀರತ್ಯಾಗ ಮಾಡಿ ದಿವ್ಯರೂಪ ಧರಿಸಿ ಹರಿಯ ವಕ್ಷಃಸ್ಥಲದಲ್ಲಿ ಲಕ್ಷ್ಮಿಯಂತೆ ಕುಳಿತಳು. ಅವಳೊಂದಿಗೆ ಹರಿ ವೈಕುಂಠಕ್ಕೆ ತೆರಳಿದ. ಹೀಗೆ ಲಕ್ಷ್ಮಿ, ಸರಸ್ವತಿ, ಗಂಗೆ, ತುಲಸಿ ಈ ನಾಲ್ವರು ಹರಿಗೆ ಪ್ರೇಯಸಿಯರೆನಿಸಿದರು.

ತುಲಸಿಯ ಶರೀರದಿಂದ ಗಂಡಕೀ ನದಿ ಪ್ರಾದುರ್ಭವಿಸಿತು. ಬಳಿಯಲ್ಲಿ ಶಿಲಾರೂಪದಿಂದ ಹರಿ ನೆಲೆಸಿದ. ಅಲ್ಲಿ ಕೀಟಗಳು ಶಿಲೆಗಳನ್ನು ಕೊರೆಯ ತೊಡಗಿದುವು. ನದೀ ನೀರಿನಲ್ಲಿ ಬಿದ್ದ ಶಿಲೆಗಳು ಮೋಡದಂತೆ ಕಪ್ಪಾದುವು. ನೆಲದಲ್ಲಿಯೆ ಇದ್ದ ಶಿಲೆಗಳು ಕಂದು ಬಣ್ಣದವುಗಳಾದುವು. ಏಕೆಂದರೆ ಹರಿಗೆ ಗಂಡಕೀ-ವಿಯೋಗದಿಂದ ಸಂತಾಪವಿರುತ್ತದೆ.

**ಇಲ್ಲಿಗೆ ಶ್ರೀ ಬ್ರಹ್ಮವೈವರ್ತ ಮಹಾಪುರಾಣದಲ್ಲಿ ಎರಡನೆಯದಾದ ಪ್ರಕೃತಿಖಂಡದ ನಾರದನಾರಾಯಣ ಸಂವಾದದಲ್ಲಿ ತುಲುಸ್ಯುಪಾಖ್ಯಾನದಲ್ಲಿ ಇಪ್ಪತ್ತೊಂದನೆ ಅಧ್ಯಾಯ ಮುಗಿಯಿತು.**

## ತುಲಸಿಯ ಪೂಜಾ ವಿಧಾನ ಹಾಗೂ ಸ್ತೋತ್ರ — ಅಧ್ಯಾಯ-೨೨

ನಾರದ— ಪ್ರಭು, ತುಲಸಿ ಜಗತ್ಪೂಜ್ಯಳು, ಪವಿತ್ರಳು, ನಾರಾಯಣನಿಗೆ ಪ್ರಿಯಳು. ಅವಳ ಪೂಜಾವಿಧಾನ ಸ್ತೋತ್ರಗಳನ್ನು ನಾನು ಕೇಳಿಲ್ಲ. ಯಾರು ಮೊದಲಿಗೆ ಪೂಜಿಸಿದರು ? ಯಾರು ಸ್ತೋತ್ರಮಾಡಿದರು ? ನಿನಗೆ ಅವಳು ಹೇಗೆ ಪೂಜ್ಯ- ಳಾದಳು, ಹೇಳು.

ನಾರಾಯಣ ಮಹರ್ಷಿ— ಹರಿ ತುಲಸಿಯನ್ನು ಪರಿಗ್ರಹಿಸಿ ಅವಳೊಡನೆಯೂ ಲಕ್ಷ್ಮಿಯೊಡನೆಯೂ ರಮಿಸಿದ. ಸೌಭಾಗ್ಯದಲ್ಲಿ ಅವಳನ್ನು ಲಕ್ಷ್ಮಿಗೆ ಸಮಾನಳನ್ನಾಗಿ ಮಾಡಿದ. ಲಕ್ಷ್ಮಿಗಂಗೆಯರಿಬ್ಬರೂ ಇದನ್ನು ಸಹಿಸಿದರು. ಸರಸ್ವತಿ ಮಾತ್ರ ಸಹಿಸಲಿಲ್ಲ. ಕುಪಿತಳಾದಳು. ಹರಿಯ ಎದುರಿನಲ್ಲಿಯೆ ತುಲಸಿಯೊಡನೆ ಕಲಹ ಮಾಡಿ ಹೊಡೆದಳು. ನಾಚಿಕೆಯಿಂದ ಅಪಮಾನದಿಂದ ತುಲಸಿ ಅಂತರ್ಧಾನಳಾದಳು. ನಾರಾಯಣ ವ್ಯಥೆಗೊಂಡು ಸರಸ್ವತಿಗೆ ಬುದ್ಧಿ ಹೇಳಿ ಅವಳ ಅನುಮತಿ ಪಡೆದು ತುಲಸೀ ವನಕ್ಕೆ ಹೋಗಿ ಸ್ನಾನಮಾಡಿ ತುಲಸಿಯನ್ನು ಪೂಜಿಸಿದ, ಸ್ತುತಿಸಿದ. ಲಕ್ಷ್ಮೀ, ಮಾಯಾ, ಕಾಮ, ವಾಣೀ ಬೀಜಾಕ್ಷರಗಳಾದ ಶ್ರೀಂ, ಹ್ರೀಂ, ಕ್ಲೀಂ, ಐಂ ಎಂಬ ಅಕ್ಷರಗಳ ಅನಂತರ ಚತುರ್ಥ್ಯಂತವಾದ ವೃಂದಾವನೀ ಶಬ್ದ. ಅದರ ಕೊನೆಯಲ್ಲಿ ಸ್ವಾಹಾ ಸೇರಿದಾಗ ದಶಾಕ್ಷರ ತುಲಸೀಮೂಲಮಂತ್ರವಾಗುತ್ತದೆ. ''ಶ್ರೀಂ, ಹ್ರೀಂ, ಕ್ಲೀಂ, ಐಂ, ವೃಂದಾವನ್ಯೈ ಸ್ವಾಹಾ'' ಎಂಬ ಈ ಮಂತ್ರದಿಂದ ಧೂಪದೀಪ, ಅರಸಿನ, ಕುಂಕುಮ, ಚಂದನಗಂಧ, ಪತ್ರ, ಪುಷ್ಪ, ಭಕ್ಷ ಭೋಜ್ಯಾದಿಗಳನ್ನಿತ್ತು ಹರಿ ತುಲಸಿಯನ್ನು ಪೂಜಿಸಿದಾಗ ದೇವಿ ಗಿಡದಿಂದ ಆವಿರ್ಭೂತಳಾಗಿ ಬಂದು ಹರಿಯ ಚರಣಕಮಲಗಳನ್ನು ಶರಣು ಹೊಕ್ಕಳು.

ಹರಿ ವರ ನೀಡಿದ— 'ನೀನು ಜಗತ್ಪೂಜ್ಯಳಾಗು, ನಿನ್ನನ್ನು ತಲೆಯ ಮೇಲೂ ವಕ್ಷಸ್ಥಲದಲ್ಲಿಯೂ ನಾನು ಧರಿಸುವೆನು. ದೇವತೆಗಳು ಮುಂತಾದವರೆಲ್ಲರೂ ನಿನ್ನನ್ನು ತಲೆಯಲ್ಲಿ ಧರಿಸುತ್ತಾರೆ.'

ನಾರದ— ತುಲಸಿಯ ಧ್ಯಾನ ಸ್ತೋತ್ರ ಪೂಜಾವಿಧಾನಗಳೇನು ?

ನಾರಾಯಣ ಮಹರ್ಷಿ- ತುಲಸಿ ಅಂತರ್ಧಾನಳಾದಾಗ ಹರಿ ತುಲಸೀವನಕ್ಕೆ ಹೋಗಿ ಅವಳನ್ನು ಪೂಜಿಸಿ ಹೀಗೆ ಸ್ತುತಿಸಿದ-

'ತುಲಸೀ ಗಿಡ ಪೊದೆಯಾಗಿ ಬೆಳೆಯುವುದರಿಂದ ವೃಂದಾ ಎಂದೂ, ಆದಿಯಲ್ಲಿ ವೃಂದಾವನದಲ್ಲಿ ಪ್ರಾದುರ್ಭವಿಸಿದ್ದರಿಂದ ವೃಂದಾವನೀ ಎಂದೂ ಜಗತ್ಪೂಜ್ಯ-ಳಾದ್ದರಿಂದ ವಿಶ್ವಪೂಜಿತಾ ಎಂದೂ, ಜಗತ್ತನ್ನು ಪವಿತ್ರಗೊಳಿಸುವುದರಿಂದ ವಿಶ್ವ-ಪಾವನೀ ಎಂದೂ, ದರ್ಶನಮಾತ್ರದಿಂದ ಭಕ್ತ್ಯಾನಂದ ಉಂಟುಮಾಡುವುದರಿಂದ ನಂದಿನೀ ಎಂದೂ ಒಂದು ದಳ ತುಲಸಿ ಇಲ್ಲದೆ ಇದ್ದರೆ ಒಂದು ರಾಶಿ ಹೂವೂ ದೇವತೆಗಳಿಗೆ ಮೆಚ್ಚಿಗೆಯಾಗದಿರುವುದರಿಂದ ಪುಷ್ಪಸಾರಾ ಎಂದೂ, 'ತುಲಾ, ಅಂದರೆ ಹೋಲಿಕೆ ಇಲ್ಲದವಳಾದ್ದರಿಂದ ತುಲಸೀ ಎಂದೂ, ಕೃಷ್ಣನಿಗೆ ಅತ್ಯಂತ ಪ್ರಿಯ-ಳಾದ್ದರಿಂದ ಅವನ ಜೀವನ ರೂಪಳಾಗಿದ್ದು ಕೃಷ್ಣಜೀವನೀ ಎಂದೂ ಪ್ರಸಿದ್ಧಳಾದ ತುಲಸಿಯನ್ನು ನಾನು ಭಜಿಸುವೆನು.'

ಹೀಗೆ ತುಲಸಿಯನ್ನು ಹರಿ ಸ್ತೋತ್ರಮಾಡಿದೊಡನೆ ತುಲಸಿ ಪ್ರಾದುರ್ಭೂತಳಾಗಿ ಹರಿಯ ಪಾದಕಮಲಗಳಿಗೆ ನಮಿಸಿದಳು. ಅಭಿಮಾನಕ್ಕೆ ಧಕ್ಕೆ ಬಂದಕಾರಣ ಅಳುತ್ತಿದ್ದ ದೇವಿಯನ್ನು ನೋಡಿ ಹರಿ ಬೇಗನೆ ಅವಳನ್ನು ತನ್ನೆದೆಯ ಮೇಲೆ ಇರಿಸಿಕೊಂಡ. ಸರಸ್ವತಿಯ ಸಮ್ಮತಿ ಪಡೆದು ಅವಳೊಂದಿಗೇ ತುಲಸಿಯನ್ನು ತನ್ನ ಅರಮನೆಗೆ ಕರೆತಂದು ಇಬ್ಬರಿಗೂ ಅನ್ಯೋನ್ಯ ಪ್ರೀತಿ ಉಂಟು ಮಾಡಿದ. 'ವಿಶ್ವಪೂಜ್ಯಳೆನಿಸು, ನನಗೂ ಎಲ್ಲರಿಗೂ ವಂದ್ಯಳಾಗು ಮಾನ್ಯಳಾಗು ಶಿರೋಧಾರ್ಯಳಾಗು' ಎಂದೂ ವರ ನೀಡಿದ. ತುಲಸಿ ಈಗ ಸಂತುಷ್ಟಳಾದಳು. ಸರಸ್ವತಿಯೂ ಅವಳನ್ನು ಆಲಿಂಗಿಸಿ ತನ್ನ ಬಳಿ ಇಟ್ಟುಕೊಂಡಳು. ಲಕ್ಷ್ಮಿ ಗಂಗೆಯರೂ ಅವಳನ್ನು ಆಲಿಂಗಿಸಿಕೊಂಡು ತಮ್ಮ ತಮ್ಮ ಅಂತಃ ಪುರದೊಳಗೆ ಕರೆದೊಯ್ದರು.

ವೃಂದಾಂ ವೃಂದಾವನೀಂ ವಿಶ್ವಪಾವನೀಂ ವಿಶ್ವಪೂಜಿತಾಂ ।
ಪುಷ್ಪಸಾರಾಂ ನಂದಿನೀಂ ಚ ತುಲಸೀಂ ಕೃಷ್ಣಜೀವನೀಂ ॥

ಏತನ್ನಾಮಾಷ್ಟಕಂ ಚೈತತ್ ಸ್ತೋತ್ರಂ ನಾಮಾರ್ಥ ಸಂಯುತಂ ।
ಯಃ ಪಠೇತ್ ತಾಂ ಚ ಸಂಪೂಜ್ಯ ಸೋಽಶ್ವಮೇಧ ಫಲಂ ಲಭೇತ್ ॥

ವೃಂದಾ, ವೃಂದಾವನೀ, ವಿಶ್ವಪಾವನೀ, ವಿಶ್ವಪೂಜಿತಾ, ಪುಷ್ಪಸಾರಾ, ನಂದಿನೀ, ತುಲಸೀ, ಕೃಷ್ಣಜೀವನೀ ಎಂಬ ಎಂಟು ಹೆಸರುಗಳನ್ನೂ, ಅವುಗಳ ಅರ್ಥವನ್ನು ಹೇಳುವ ಸ್ತೋತ್ರವನ್ನೂ, ತುಲಸಿಯನ್ನು ಪೂಜಿಸಿ ಪಠಿಸುವವನಿಗೆ ಅಶ್ವಮೇಧದ ಫಲ ಲಭಿಸುವುದು.

ಕಾರ್ತಿಕ ಹುಣ್ಣಿಮೆಯಂದು ತುಲಸಿಯ ಮಂಗಳಕರವಾದ ಜನ್ಮದಿನ. ಅಂದು ವಿಶೇಷ ಪೂಜೆಯನ್ನು ಹರಿ ವಿಧಿಸಿದ್ದಾನೆ. ಅಂದು ವಿಶ್ವಪಾವನಿಯಾದ ದೇವಿಯನ್ನು ಪೂಜಿಸುವವನು ಸರ್ವಪಾಪ ಮುಕ್ತನಾಗಿ ವಿಷ್ಣುಲೋಕ ಪಡೆಯುವನು. ಕಾರ್ತಿಕ ಮಾಸದಲ್ಲಿ ಹರಿಗೆ ಒಂದು ತುಲಸೀದಳವನ್ನು ಸಮರ್ಪಿಸಿದರೆ ಹತ್ತು ಸಾವಿರ ಗೋದಾನಫಲ. ಅಪುತ್ರರಿಗೆ ಪುತ್ರಪ್ರಾಪ್ತಿಯಾಗುವುದು. ಅವಿವಾಹಿತರಿಗೆ ವಿವಾಹ-ವಾಗುವುದು. ಬಂಧುವಿಯೋಗವಾದವರಿಗೆ ಬಂಧು ಸಮಾಗಮವಾಗುವುದು. ರೋಗಿಗಳು ರೋಗ ಮುಕ್ತರಾಗುವರು. ಬಂಧಿತರು ಬಿಡುಗಡೆ ಹೊಂದುವರು. ಭೀತರು ಭಯಮುಕ್ತರಾಗುವರು. ಪಾತಕಿಗಳು ಪಾಪಮುಕ್ತರಾಗುವರು.

ಇದು ತುಲಸಿಯ ಸ್ತೋತ್ರ. ಇನ್ನು ಧ್ಯಾನ ಪೂಜಾವಿಧಿಗಳು ಕಾಣ್ವಶಾಖೋಕ್ತ-ವಾದವುಗಳು ನಿನಗೇ ತಿಳಿದಿವೆ.

> **ತುಲಸೀಂ ಪುಷ್ಪಸಾರಾಂ ಚ ಸತೀಂ ಪೂಜ್ಯಾಂ ಮನೋಹರಾಂ ।**
> **ಕೃತ್ಸ್ನಪಾಪೇಧ್ಮದಾಹಾಯ ಜ್ವಲದಗ್ನಿಶಿಖೋಪಮಾಂ ॥**
>
> **ಶಿರೋಧಾರ್ಯಾಂ ಚ ಸರ್ವೇಷಾಂ ಈಪ್ಸಿತಾಂ ವಿಶ್ವಪಾವನೀಂ ।**
> **ಜೀವನ್ಮುಕ್ತಾಂ ಮುಕ್ತಿದಾಂ ಚ ಭಜೇ ತಾಂ ಹರಿಭಕ್ತಿದಾಂ ॥**

ಪುಷ್ಪಗಳಲ್ಲೆಲ್ಲ ಶ್ರೇಷ್ಠಳು, ಪತಿವ್ರತೆ, ಪೂಜ್ಯಳು, ಮನೋಹರಳು, ಎಲ್ಲ ಪಾಪ ಪರಿಹಾರಕ್ಕೆ ಜ್ವಲಿಸುವ ಅಗ್ನಿಜ್ವಾಲೆಯಂತಿರುವವಳು. ಎಲ್ಲರಿಗೂ ಶಿರೋಧಾರ್ಯಳು, ಎಲ್ಲರಿಗೂ ಅಪೇಕ್ಷಿತಳು, ವಿಶ್ವವನ್ನೆ ಪಾವನಗೊಳಿಸುವವಳು, ಜೀವನ್ಮುಕ್ತಳು, ಹರಿಭಕ್ತಿ ಮುಕ್ತಿದಾಯಕಳು. ಇಂಥ ತುಳಸಿಯನ್ನು ಭಜಿಸುವೆನು.

ಹೀಗೆ ಧ್ಯಾನಿಸಿ ಆವಾಹನೆ ಇಲ್ಲದೆ ಷೋಡಶೋಪಚಾರಗಳನ್ನು ಸಲ್ಲಿಸಿ ಸ್ತೋತ್ರ-ನಮನಗಳನ್ನು ಸಲ್ಲಿಸಬೇಕು.

ನಾರದ, ತುಲಸಿಯ ಉಪಾಖ್ಯಾನವನ್ನು ಹೇಳಿದ್ದೇನೆ. ಇನ್ನೇನು ಕೇಳಬಯಸುವಿ ?

**ಇಲ್ಲಿಗೆ ಶ್ರೀ ಬ್ರಹ್ಮವೈವರ್ತ ಮಹಾಪುರಾಣದಲ್ಲಿ ಎರಡನೆಯದಾದ ಪ್ರಕೃತಿಖಂಡದ ನಾರದನಾರಾಯಣ ಸಂವಾದದಲ್ಲಿ ತುಲಸ್ಯುಪಾಖ್ಯಾನವೆಂಬ ಇಪ್ಪತ್ತೆರಡನೆ ಅಧ್ಯಾಯ ಮುಗಿಯಿತು.**

## ಸಾವಿತ್ರೀ ಉಪಾಖ್ಯಾನ, ಸಾವಿತ್ರಿ ಸ್ತೋತ್ರ | ಅಧ್ಯಾಯ-೨೩

ನಾರದ— ಪ್ರಭು, ಅಮೃತದಂತೆ ಮಧುರವಾದ ತುಲಸಿಯ ಉಪಾಖ್ಯಾನವನ್ನು ಕೇಳಿದೆ. ಇನ್ನು ಮುಂದೆ ಸಾವಿತ್ರಿಯ ಉಪಾಖ್ಯಾನವನ್ನು ವರ್ಣಿಸು. ವೇದ-ಮಾತೆಯಾದ ಆ ದೇವಿ ಯಾರಿಂದ ಜನ್ಮತಳೆದಳು ? ಮೊದಲಿಗೆ ಯಾರು ಅವಳನ್ನು ಪೂಜಿಸಿದರು ? ಅನಂತರ ಯಾರು ಪೂಜಿಸಿದರು ?

ನಾರಾಯಣ ಮಹರ್ಷಿ— ಮೊದಲಿಗೆ ದೇವಿಯನ್ನು ಪೂಜಿಸಿದವ ಬ್ರಹ್ಮ. ಅನಂತರ ದೇವತೆಗಳೂ ಮುನಿಗಳೂ ಅರ್ಚಿಸಿದರು. ಭಾರತಭೂಮಿಯಲ್ಲಿ ಮೊದಲಿಗೆ ಅಶ್ವಪತಿ ಪೂಜಿಸಿದ. ಅನಂತರ ನಾಲ್ಕೂವರ್ಣದವರು ಪೂಜಿಸಿದರು.

ನಾರದ— ಅಶ್ವಪತಿ ಯಾರು ? ಅವನು ಸಾವಿತ್ರಿಯನ್ನು ಏಕೆ ಪೂಜಿಸಿದ ? ಅವಳು ಹೇಗೆ ಸರ್ವ ಪೂಜ್ಯಳೆನಿಸಿದಳು ?

ನಾರಾಯಣ ಮಹರ್ಷಿ— ಹಿಂದೆ ಮದ್ರದೇಶದ ದೊರೆ ಅಶ್ವಪತಿ ರಾಜನ ಪಟ್ಟಮಹಿಷಿ ಮಾಲತಿ ವಸಿಷ್ಠಮುನಿಯ ಆದೇಶದಂತೆ ಸಾವಿತ್ರಿಯನ್ನು ಆರಾಧಿಸಿದಳು. ಎಷ್ಟು ಆರಾಧಿಸಿದರೂ ದೇವಿ ಪ್ರತ್ಯಕ್ಷಳಾಗಲಿಲ್ಲ. ದುಃಖಿತಳಾದ ರಾಣಿಯನ್ನು ಸಮಾಧಾನ ಮಾಡಿ ಸ್ವತಃ ರಾಜನೆ ಪುಷ್ಕರ ಕ್ಷೇತ್ರಕ್ಕೆ ಹೋಗಿ ನೂರು ವರ್ಷ ತಪಸ್ಸು ಮಾಡಿದ. ಆದರೂ ದೇವಿ ಪ್ರತ್ಯಕ್ಷಳಾಗಲಿಲ್ಲ. ಒಂದು ಅಶರೀರವಾಣಿ ಹೇಳಿತು- 'ರಾಜನ್, ಹತ್ತುಲಕ್ಷ ಗಾಯತ್ರೀ ಮಂತ್ರ ಜಪಮಾಡು.'

ಅಷ್ಟರಲ್ಲಿ ಪರಾಶರ ಮುನಿ ರಾಜನ ಬಳಿಗೆ ಬಂದು ಗಾಯತ್ರಿ ಜಪಕ್ರಮವನ್ನು ಉಪದೇಶಿಸಿದ- 'ಗಾಯತ್ರಿಯನ್ನು ಒಮ್ಮೆ ಜಪಿಸಿದರೆ ಹಗಲು ಮಾಡಿದ ಪಾಪ ಪರಿಹಾರ. ಹತ್ತು ಬಾರಿ ಜಪಿಸಿದರೆ ಹಗಲು-ರಾತ್ರಿಗಳಲ್ಲಿ ಮಾಡಿದ ಪಾಪ ಪರಿಹಾರ. ನೂರುಬಾರಿ ಜಪಿಸಿದರೆ ಒಂದು ತಿಂಗಳ ಪಾಪಪರಿಹಾರ. ಸಾವಿರ ಜಪಿಸಿದರೆ ಒಂದು ವರ್ಷದ ಪಾಪ ಪರಿಹಾರ. ಒಂದು ಲಕ್ಷ ಜಪದಿಂದ ಒಂದು ಜನ್ಮದಲ್ಲಿ ಮಾಡಿದ ಪಾಪ ಪರಿಹಾರ. ಹತ್ತುಲಕ್ಷ ಜಪದಿಂದ ಮೂರುಜನ್ಮದ ಪಾಪ ಪರಿಹಾರ. ನೂರುಲಕ್ಷ ಜಪದಿಂದ ಎಲ್ಲ ಜನ್ಮಗಳ ಪಾಪಪರಿಹಾರ. ಅದಕ್ಕಿಂತ ಹತ್ತುಪಾಲು ಜಪಿಸಿದರೆ ಮುಕ್ತಿ ಕರಗತವಾಗುತ್ತದೆ.

ಪೂರ್ವಾಭಿಮುಖವಾಗಿ ಕುಳಿತು ಕೈಯನ್ನು ಹಾವಿನ ಹೆಡೆಯಂತೆ ಮೇಲು-ಮುಖವಾಗಿ ಮಾಡಿ, ಉಂಗುರದ ಬೆರಳಿನ ಮಧ್ಯಪರ್ವದಿಂದಾರಂಭಿಸಿ ತೋರು-ಬೆರಳಿನ ಬುಡದ ಪರ್ವದ ವರೆಗೆ ಎಣಿಸಿ ಜಪ ಮಾಡಬೇಕು. ಬಿಳಿ ಕಮಲದ ಬೀಜಗಳ ಅಥವಾ ಸ್ಫಟಿಕ ಮಣಿಗಳ ಮಾಲೆಯಿಂದಲೂ ಜಪಿಸಬಹುದು. ಆ ಮಾಲೆಯನ್ನು ಮೊದಲಿಗೆ ಏಳು ಅರಳಿ ಎಲೆಗಳಲ್ಲಿಟ್ಟು ಗೋರೋಚನವನ್ನು ಲೇಪಿಸಿ

ಗಾಯತ್ರೀ ಮಂತ್ರದಿಂದ ಪ್ರೋಕ್ಷಿಸಿ ನೂರು ಗಾಯತ್ರೀಜಪದಿಂದ ಅಭಿಮಂತ್ರಿಸಬೇಕು. ಅಥವಾ ಪಂಚಗವ್ಯ ಪ್ರೋಕ್ಷಣದಿಂದ ಸಂಸ್ಕರಿಸಬೇಕು. ಅಥವಾ ಗಂಗಾಜಲದಿಂದ ಪ್ರೋಕ್ಷಿಸಿದರೂ ಒಳ್ಳೆಯ ಸಂಸ್ಕಾರ ಉಂಟಾಗುತ್ತದೆ. ಹೀಗೆ ಹತ್ತುಲಕ್ಷ ಜಪಮಾಡು. ಮೂರು ಜನ್ಮದ ಪಾಪ ಕಳೆದುಕೊಂಡು ಸಾವಿತ್ರೀ ದೇವಿಯನ್ನು ಪ್ರತ್ಯಕ್ಷ ಕಾಣುವೆ. ನಿತ್ಯವೂ ಬೆಳಿಗ್ಗೆ ಮಧ್ಯಾಹ್ನ ಸಂಜೆ ಎಂಬ ಮೂರು ಸಂಧ್ಯೆಗಳಲ್ಲಿಯೂ ತಪ್ಪದೆ ಜಪಿಸು.

**ಸಂಧ್ಯಾಹೀನೋಽಶುಚಿರ್ನಿತ್ಯಂ ಅನರ್ಹಃ ಸರ್ವಕರ್ಮಸು ।**
**ಯದಹ್ನಾ ಕುರುತೇ ಕರ್ಮ ನ ತಸ್ಯ ಫಲಭಾಗ್ ಭವೇತ್ ॥**

ಸಂಧ್ಯಾವಂದನ ಮಾಡದವ ಅಶುಚಿ. ಯಾವುದೇ ಪುಣ್ಯಕರ್ಮ ಮಾಡಲು ಅವನು ಅನರ್ಹ. ಯಾವ ದಿನದಲ್ಲಿ ಸಂಧ್ಯಾವಂದನೆ ಮಾಡುವುದಿಲ್ಲವೋ ಆ ದಿನದಲ್ಲಿ ಮಾಡಿದ ಯಾವ ಸತ್ಕರ್ಮವೂ ಅವನಿಗೆ ಫಲ ನೀಡಲಾರದು.

**ನೋಪತಿಷ್ಠತಿ ಯಃ ಪೂರ್ವಾಂ ನೋಪಾಸ್ತೇ ಯಶ್ಚ ಪಶ್ಚಿಮಾಂ ।**
**ಸ ಶೂದ್ರವದ್ ಬಹಿಷ್ಕಾರ್ಯಃ ಸರ್ವಸ್ಮಾದ್ ದ್ವಿಜಕರ್ಮಣಃ ॥**

ಪ್ರಾತಃ ಸಾಯಂ ಸಂಧ್ಯಾವಂದನೆಗಳನ್ನು ಮಾಡದ ದ್ವಿಜನಿಗೆ ದ್ವಿಜಕರ್ಮದಲ್ಲಿ ಅರ್ಹತೆ ಇರುವುದಿಲ್ಲ. ಅವನು ಶೂದ್ರನಂತೆ ಬಹಿಷ್ಕೃತನಾಗುತ್ತಾನೆ.

ಬದುಕಿರುವಷ್ಟೂ ಕಾಲ ಮೂರು ಸಂಧ್ಯೆಗಳಲ್ಲಿಯೂ ಸಂಧ್ಯಾವಂದನೆ ಮಾಡುವ ವಿಪ್ರ ಸೂರ್ಯನಂತೆ ತೇಜಸ್ವಿಯೂ ತಪಸ್ವಿಯೂ ಆಗುವನು. ಅವನು ಜೀವನ್ಮುಕ್ತನೆನಿಸುತ್ತಾನೆ. ಅವನ ಪಾದಧೂಳಿ ಬಿದ್ದ ನೆಲ ಪವಿತ್ರವಾಗುವುದು. ಅವನ ಸ್ಪರ್ಶದಿಂದ ತೀರ್ಥಗಳೂ ಪವಿತ್ರವಾಗುವುವು. ಗರುಡನನ್ನು ಕಂಡ ಹಾವುಗಳಂತೆ ಪಾಪಗಳು ಭಯದಿಂದ ಓಡುವುವು.

**ನ ಗೃಹ್ಣಂತಿ ಸುರಾಃ ಪೂಜಾಂ ಪಿತರಃ ಪಿಂಡ ತರ್ಪಣಂ ।**
**ಸ್ವೇಚ್ಛಯಾ ಚ ದ್ವಿಜಾತೇಶ್ಚ ತ್ರಿಸಂಧ್ಯರಹಿತಸ್ಯ ಚ ॥**

ಸ್ವೇಚ್ಛೆಯಿಂದ ಮೂರು ಸಂಧ್ಯೆಗಳಲ್ಲಿ ಸಂಧ್ಯಾವಂದನೆ ಬಿಟ್ಟ ದ್ವಿಜನು ಪೂಜೆ ಮಾಡಿದರೆ ದೇವತೆಗಳು ಸ್ವೀಕರಿಸುವುದಿಲ್ಲ. ಪಿಂಡತರ್ಪಣ ನೀಡಿದರೆ ಪಿತೃಗಳು ಸ್ವೀಕರಿಸುವುದಿಲ್ಲ.

**ವಿಷ್ಣುಮಂತ್ರ ವಿಹೀನಶ್ಚ ತ್ರಿಸಂಧ್ಯರಹಿತೋ ದ್ವಿಜಃ ।**
**ಏಕಾದಶೀ ವಿಹೀನಶ್ಚ ವಿಷಹೀನೋ ಯಥೋರಗಃ ॥**

ವಿಷ್ಣುಮಂತ್ರ ಜಪಿಸದವ ಮೂರು ಹೊತ್ತು ಸಂಧ್ಯಾವಂದನ ಮಾಡದವ, ಏಕಾದಶೀ ವ್ರತ ಮಾಡದವ ಇವರೆಲ್ಲ ವಿಷವಿಲ್ಲದ ಹಾವನಿಂತೆ ಏನೂ ಸಾಧಿಸಿ-ಕೊಳ್ಳಲಾರರು.

ಹರಿಗೆ ಅರ್ಪಿಸದ ಅನ್ನ ಉಣ್ಣುವವ, ಅನ್ಯರ ಬಟ್ಟೆ ಒಗೆದು ಜೀವಿಸುವವ, ಎತ್ತಿನ ಮೇಲೆ ಸಂಚರಿಸುವ ಶೂದ್ರನ ಅನ್ನ ಉಣ್ಣುವವ ಇವರೆಲ್ಲರೂ ವಿಷವಿಲ್ಲದ ಹಾವುಗಳಂತಿರುತ್ತಾರೆ.

ಯಃ ಕನ್ಯಾವಿಕ್ರಯೀ ವಿಪ್ರೋ ಯೋ ಹರೇರ್ನಾಮವಿಕ್ರಯೀ ।
ಯೋ ವಿದ್ಯಾವಿಕ್ರಯೀ ಭೂಪ ವಿಷಹೀನೋ ಯಥೋರಗಃ ॥

ಹಣದಾಸೆಗೆ ಮಗಳನ್ನು ಮಾರುವವ, ಹರಿನಾಮ ಸಂಕೀರ್ತನೆ ಮಾರಿ ಬದುಕು-ವವ, ವಿದ್ಯೆಯನ್ನು ಹಣಕ್ಕೆ ಮಾರುವವ ವಿಷವಿಲ್ಲದ ಹಾವಿನಂತಿರುತ್ತಾನೆ.'' ಪರಾಶರ ಮುನಿ ಅಶ್ವಪತಿರಾಜನಿಗೆ ಹೀಗೆ ಹೇಳಿ ಸಾವಿತ್ರಿಯ ಧ್ಯಾನಾದಿಗಳನ್ನೂ ಉಪದೇಶಿಸಿದ. ರಾಜ ಅದರಂತೆ ದೇವಿಯನ್ನು ಪೂಜಿಸಿ ಪ್ರತ್ಯಕ್ಷ ಕಂಡು ವರಪಡೆದ.

ನಾರದ— ಸಾವಿತ್ರೀ ಧ್ಯಾನ ಪೂಜಾ ಸ್ತೋತ್ರ ಮಂತ್ರಗಳೇನು ? ರಾಜ ಹೇಗೆ ಪೂಜೆ ಮಾಡಿದ ? ಏನು ವರ ಪಡೆದ ?

ನಾರಾಯಣ ಮುನಿ— ಜ್ಯೇಷ್ಠ ಕೃಷ್ಣ ತ್ರಯೋದಶಿಯಂದು ಇಂದ್ರಿಯ ನಿಗ್ರಹದಿಂದ ನಿಯಮದಲ್ಲಿದ್ದು ಚತುರ್ದಶಿಯಂದು ಭಕ್ತಿಯಿಂದ ಸಾವಿತ್ರೀ ವ್ರತ ಪ್ರಾರಂಭಿಸಬೇಕು. ಹದಿನಾಲ್ಕು ವರ್ಷಕಾಲ ಮಾಡುವ ವ್ರತ ಇದು. ಪ್ರತಿದಿನ ಫಲ ಮತ್ತು ಶಾಖಾ ಸಹಿತವಾಗಿ ಮಂಗಲ ಕಲಶ ಸ್ಥಾಪನಮಾಡಿ ಗಣೇಶ, ಸೂರ್ಯ, ಅಗ್ನಿ, ವಿಷ್ಣು ಶಿವ, ಪಾರ್ವತಿಯರನ್ನು ಆವಾಹಿಸಿ ಪುಷ್ಪ ಧೂಪಾದಿಗಳು ವಸ್ತ್ರ ಯಜ್ಞೋಪವೀತಗಳಿಂದ ಪೂಜಿಸಬೇಕು. ಹದಿನಾಲ್ಕು ಬಗೆಯ ಫಲಗಳನ್ನು ಹದಿನಾಲ್ಕು ಬಗೆಯ ನೈವೇದ್ಯಗಳನ್ನೂ ಸಮರ್ಪಿಸಬೇಕು.

ಕಾಣ್ವಶಾಖೋಕ್ತವಾದ ಸಾವಿತ್ರೀ ಧ್ಯಾನವನ್ನೂ ಸ್ತೋತ್ರ ಪೂಜಾವಿಧಾನ ಮತ್ತು ಮಂತ್ರಗಳನ್ನೂ ಹೇಳುತ್ತೇನೆ ಕೇಳು-

'ಪುಟಕ್ಕೆ ಹಾಕಿದ ಚಿನ್ನದಂಥ ಶರೀರಕಾಂತಿಯಿಂದ, ಬ್ರಹ್ಮತೇಜಸ್ಸಿನಿಂದ, ಸಾವಿರ ಮಧ್ಯಾಹ್ನ ಸೂರ್ಯರ ಪ್ರಭೆಯಿಂದ ಬೆಳಗುತ್ತ ರತ್ನಾಭರಣಗಳಿಂದ ಶೋಭಿಸುವ, ಮಂದಹಾಸದಿಂದ ಪ್ರಸನ್ನವಾದ ಮುಖಮುದ್ರೆಯಿಂದ ಭಕ್ತರಲ್ಲಿ ಅನುಗ್ರಹ ಮಾಡುವ ಸರ್ವಸಂಪತ್‌ಪ್ರದಳಾದ ಬ್ರಹ್ಮನ ರಾಣಿ ವೇದಮಾತೆ ಸಾವಿತ್ರೀ-ದೇವಿಯನ್ನು ಭಜಿಸುತ್ತೇನೆ.'

ಹೀಗೆ ಧ್ಯಾನಿಸಿ ತನ್ನ ತಲೆಯ ಮೇಲೆ ಹೂವಿಟ್ಟುಕೊಂಡು ಪುನಃ ಧ್ಯಾನಿಸಿ ಕಲಶದಲ್ಲಿ ದೇವಿಯನ್ನು ಆವಾಹಿಸಬೇಕು. ವೇದೋಕ್ತ ಮಂತ್ರದಿಂದ ಷೋಡಶೋ-ಪಚಾರಗಳನ್ನು ಸಲ್ಲಿಸಿ ನಮಸ್ಕರಿಸಬೇಕು. ಷೋಡಶೋಪಚಾರಗಳು ಇವು-

**ಆಸನಂ ಪಾದ್ಯಮರ್ಘ್ಯಂ ಚ ಸ್ನಾನೀಯಂ ಚಾನುಲೇಪನಂ ।**
**ಧೂಪಂ ದೀಪಂ ಚ ನೈವೇದ್ಯಂ ತಾಂಬೂಲಂ ಶೀತಲಂ ಜಲಂ ॥**

**ವಸನಂ ಭೂಷಣಂ ಮಾಲ್ಯಂ ಗಂಧಮಾಚಮನೀಯಕಂ ।**
**ಮನೋಹರಂ ಸುತಲ್ಪಂ ಚ ದೇಯಾನ್ಯೇತಾನಿ ಷೋಡಶ ॥**

ಆಸನ, ಪಾದ್ಯ, ಅರ್ಘ್ಯ, ಸ್ನಾನಜಲ, ಲೇಪನ, ಧೂಪ, ದೀಪ, ನೈವೇದ್ಯ, ತಾಂಬೂಲ, ಶೀತಲೋದಕ, ವಸ್ತ್ರ ಭೂಷಣ, ಹೂಮಾಲೆ, ಗಂಧ, ಆಚಮನ ಜಲ, ಮನೋಹರವಾದ ಶಯ್ಯೆ ಈ ಹದಿನಾರು ಉಪಚಾರಗಳನ್ನು ನೀಡಬೇಕು- ''ದೇವಿ, ಉತ್ತಮವಾದ ಮರ ಚಿನ್ನ ಮುಂತಾದುದರಿಂದ ಮಾಡಿದ ಆಸನವನ್ನು ಅರ್ಪಿಸು-ತ್ತೇನೆ. ಶುದ್ಧಜಲದ ಪಾದ್ಯವನ್ನು ಸಮರ್ಪಿಸುತ್ತೇನೆ. ದೂರ್ವೆ ಪುಷ್ಪ ಅಕ್ಷತೆಗಳಿಂದ ಯುಕ್ತವಾದ ಶಂಖೋದಕವನ್ನು ಅರ್ಘ್ಯವಾಗಿ ನೀಡುತ್ತೇನೆ. ಸುಗಂಧ ಧಾತ್ರೀ ತೈಲದೊಂದಿಗೆ ಸ್ನಾನ ಜಲವನ್ನು ಅರ್ಪಿಸುತ್ತೇನೆ. ಮಲಯ ಪರ್ವತದಲ್ಲಿ ಬೆಳೆದ ಶ್ರೀಗಂಧದ ಲೇಪನವನ್ನು ಅರ್ಪಿಸುತ್ತೇನೆ. ಸುಗಂಧ ದ್ರವ್ಯದಿಂದ ಉದ್ಭವಿಸುವ ಧೂಪವನ್ನು ಅರ್ಪಿಸುತ್ತೇನೆ. ಸುಂದರವಾಗಿ ಬೆಳಗುತ್ತ ಕತ್ತಲನ್ನು ಧ್ವಂಸಮಾಡುವ ದೀಪವನ್ನು ಸಮರ್ಪಿಸುತ್ತೇನೆ. ತೃಪ್ತಿ ಪುಷ್ಟಿ ಆನಂದಗಳನ್ನು ನೀಡುವ, ಹಸಿವನ್ನು ಕಳೆವ ನೈವೇದ್ಯ ಸಮರ್ಪಿಸುತ್ತೇನೆ. ಕರ್ಪೂರಾದಿಗಳಿಂದ ಸುವಾಸಿತವಾದ, ತುಷ್ಟಿ ಪುಷ್ಟಿಗಳನ್ನು ನೀಡುವ ತಾಂಬೂಲವನ್ನು ನೀಡುವೆನು. ದಾಹವನ್ನು ತಣಿಸುವ ಸುವಾಸಿತ ಶೀತಲ ಜಲವನ್ನು ನೀಡುವೆನು. ಶರೀರ ಶೋಭೆಯನ್ನು ಹೆಚ್ಚಿಸುವ ಹತ್ತಿಯ ಅಥವಾ ರೇಶಿಮೆಯ ಜೋಡಿವಸ್ತ್ರ ನೀಡುವೆನು. ಸುವರ್ಣ ರತ್ನಾದಿ ನಿರ್ಮಿತ ಸುಂದರ ಆಭರಣ ನೀಡುತ್ತೇನೆ. ನಾನಾ ಹೂಗಳಿಂದ ಮಾಡಿದ ಬಹುಸುಂದರವಾದ ಮಾಲೆಯನ್ನು ಸಮರ್ಪಿಸುತ್ತೇನೆ. ಮಂಗಳಕರವಾದ ಸುವಾಸನೆ ಉಳ್ಳ ಗಂಧವನ್ನು ನೀಡುತ್ತೇನೆ. ಶುದ್ಧವಾದ ಶುದ್ಧಿದಾಯಕವಾದ ಆಚಮನೋದಕ ನೀಡುತ್ತೇನೆ. ರತ್ನಖಚಿತವಾದ, ಪುಷ್ಪ ಚಂದನಾದಿ ನಿರ್ಮಿತವಾದ ಸುಖಕರವಾದ ಶಯ್ಯೆಯನ್ನು ಸಮರ್ಪಿಸುತ್ತೇನೆ. ನಾನಾ ವೃಕ್ಷಗಳಲ್ಲಿ ಉಂಟಾದ ನಾನಾ ಆಕಾರದ ಫಲಗಳನ್ನು ಸಮರ್ಪಿಸುತ್ತೇನೆ. ಹಣೆಯ ಅಂದವನ್ನು ಹೆಚ್ಚಿಸುವ ಎಲ್ಲ ಭೂಷಣಗಳಿಗೂ ಭೂಷಣವೆನಿಸುವ ಸಿಂದೂರವನ್ನು ಅರ್ಪಿಸುತ್ತೇನೆ. ಪವಿತ್ರವಾದ ದಾರದಿಂದ ಮಾಡಿದ, ಶುದ್ಧಗ್ರಂಥಿಯುಕ್ತವಾದ, ವೇದಮಂತ್ರದಿಂದ ಪವಿತ್ರಿತವಾದ ಯಜ್ಞೋಪವೀತವನ್ನು ಸಮರ್ಪಿಸುತ್ತೇನೆ.

ಸಾವಿತ್ರೀಮೂಲಮಂತ್ರದಿಂದ ಈ ವಸ್ತುಗಳನ್ನು ಸಮರ್ಪಿಸಿ ದೇವಿಯ ಸ್ತೋತ್ರವನ್ನು ಪಠಿಸಬೇಕು.

ಲಕ್ಷ್ಮೀ, ಮಾಯಾ, ಕಾಮ ಬೀಜಗಳಾದ ಶ್ರೀಂ ಹ್ರೀಂ ಕ್ಲೀಂ ಎಂಬ ಅಕ್ಷರಗಳ ಅನಂತರ ಚತುರ್ಥ್ಯಂತ ಸಾವಿತ್ರೀಪದ, ಅದರ ಕೊನೆಯಲ್ಲಿ ಸ್ವಾಹಾ ಎಂಬ ಪದ. ಅಂದರೆ 'ಶ್ರೀಂ ಹ್ರೀಂ ಕ್ಲೀಂ ಸಾವಿತ್ರ್ಯೈ ಸ್ವಾಹಾ' ಎಂಬುದು ಸಾವಿತ್ರೀ ಮೂಲಮಂತ್ರ.

ಇನ್ನು ಸಾವಿತ್ರೀ ಸ್ತೋತ್ರವನ್ನು ಮಾಧ್ಯಂದಿನಶಾಖೋಕ್ತಕ್ರಮದಿಂದ ಹೇಳುತ್ತೇನೆ.

ನಾರದ, ಹಿಂದೆ ಶ್ರೀಕೃಷ್ಣ ಗೋಲೋಕದಲ್ಲಿ ಸಾವಿತ್ರಿಯನ್ನು ಬ್ರಹ್ಮನಿಗೆ ಅನುಗ್ರಹಿಸಿದ. ಆದರೆ ಸಾವಿತ್ರಿ ಬ್ರಹ್ಮಲೋಕಕ್ಕೆ ಹೋಗಲು ಒಪ್ಪಲಿಲ್ಲ. ಆಗ ಬ್ರಹ್ಮ ಕೃಷ್ಣನ ಆಜ್ಞೆಯಂತೆ ವೇದಮಾತೆಯಾದ ಸಾವಿತ್ರಿಯನ್ನು ಹೀಗೆ ಸ್ತುತಿಸಿ ಒಲಿಸಿಕೊಂಡ-

'ನಾರಾಯಣನಿಂದ ಉದ್ಭೂತಳಾದ ತೇಜೋರೂಪಳಾದ ಪರಮಾನಂದ ರೂಪಳಾದ ದ್ವಿಜರಿಗೆ ಎರಡನೆ ಜನ್ಮ ನೀಡುವ, ವಿಪ್ರರ ಪಾಪಗಳನ್ನು ಸುಡುವ ಬೆಂಕಿಯ ಜ್ವಾಲೆಯಂತಿರುವ, ಬ್ರಹ್ಮತೇಜಸ್ಸಿಗೆ ಕಾರಣಳಾದ ಸಾವಿತ್ರಿ, ಪ್ರಸನ್ನಳಾಗು. ನಿನ್ನ ಸ್ಮರಣಮಾತ್ರದಿಂದ ದ್ವಿಜರ ತ್ರಿಕರಣಜನ್ಯವಾದ ಪಾಪಗಳು ಭಸ್ಮವಾಗುವುವು.'

ಈ ಸ್ತೋತ್ರವನ್ನು ಕೇಳಿ ಪ್ರಸನ್ನಳಾದ ಸಾವಿತ್ರಿ ಬ್ರಹ್ಮನೊಡನೆ ಬ್ರಹ್ಮಲೋಕಕ್ಕೆ ಹೋದಳು. ಈ ಸ್ತೋತ್ರದ ಬಲದಿಂದಲೆ ಅಶ್ವಪತಿ ರಾಜ ಸಾವಿತ್ರಿಯನ್ನು ಪ್ರತ್ಯಕ್ಷವಾಗಿ ಕಂಡು ಅಭೀಷ್ಟವರವನ್ನು ಪಡೆದ. ಮೂರುಸಂಧ್ಯೆಗಳಲ್ಲಿ ಈ ಸ್ತೋತ್ರ ಪಠಿಸಿದರೆ ನಾಲ್ಕು ವೇದ ಪಾರಾಯಣ ಫಲ ಸಿಗುವುದರಲ್ಲಿ ಸಂಶಯವಿಲ್ಲ.

**ಇಲ್ಲಿಗೆ ಶ್ರೀ ಬ್ರಹ್ಮವೈವರ್ತ ಮಹಾಪುರಾಣದಲ್ಲಿ ಎರಡನೆಯದಾದ ಪ್ರಕೃತಿಖಂಡದ ನಾರದನಾರಾಯಣ ಸಂವಾದದಲ್ಲಿ ಸಾವಿತ್ರ್ಯುಪಾಖ್ಯಾನದಲ್ಲಿ ಸಾವಿತ್ರೀ ಸ್ತೋತ್ರ ಕಥನವೆಂಬ ಇಪ್ಪತ್ತಮೂರನೆ ಅಧ್ಯಾಯ ಮುಗಿಯಿತು.**

# ಬ್ರಹ್ಮಪತ್ನಿ ಸಾವಿತ್ರಿಯ ವರದಿಂದ ಅಶ್ವಪತಿ ರಾಜನಿಗೆ ಸಾವಿತ್ರಿ ಎಂಬ ಮಗಳ ಜನನ. ಸಾವಿತ್ರಿ-ಯಮ ಸಂವಾದ. ಯಮನಿಂದ ಕರ್ಮವಿಪಾಕ ನಿರೂಪಣೆ

**ಅಧ್ಯಾಯ-೨೪**

ನಾರಾಯಣ ಮಹರ್ಷಿ— ಅಶ್ವಪತಿರಾಜ ದೇವಿಸಾವಿತ್ರಿಯನ್ನು ಹೀಗೆ ಸ್ತೋತ್ರ ಮಾಡಿದಾಗ ದೇವಿ ಪ್ರತ್ಯಕ್ಷಳಾಗಿ ಪ್ರಸನ್ನಳಾಗಿ ನಗುಮೊಗದಿಂದ ತಾಯಿ ಮಗುವಿಗೆ ಹೇಳುವಂತೆ ಹೇಳಿದಳು- 'ಮಹಾರಾಜ, ನಿನ್ನ ಮತ್ತು ನಿನ್ನ ರಾಣಿಯ ಮನೋಽಭಿಲಾಷೆಗಳು ಏನೆಂಬುದು ನನಗೆ ತಿಳಿದಿದೆ. ಅವೆರಡನ್ನೂ ಕೊಡುತ್ತೇನೆ. ನಿನ್ನ ರಾಣಿಗೆ ಹೆಣ್ಣುಮಗು ಬೇಕು. ನಿನಗೆ ಗಂಡುಮಗು ಬೇಕು. ಎರಡೂ ಕ್ರಮವಾಗಿ ನಿನಗೆ ಲಭಿಸುತ್ತವೆ.'

ಹೀಗೆ ಹೇಳಿ ದೇವಿ ಬ್ರಹ್ಮಲೋಕಕ್ಕೆ ಹಿಂತಿರುಗಿದಳು.

ಇತ್ತ ರಾಣಿ ಮೊದಲಿಗೆ ಒಂದು ಹೆಣ್ಣು ಮಗುವಿಗೆ ಜನ್ಮವಿತ್ತಳು. ಸಾವಿತ್ರಿಯ ಆರಾಧನೆಯಿಂದ ಜನಿಸಿದ್ದರಿಂದ ಅವಳಿಗೆ ಸಾವಿತ್ರೀ ಎಂದೇ ಹೆಸರಿಟ್ಟ ರಾಜ. ಆ ಬಾಲೆ ಶುಕ್ಲಪಕ್ಷದ ಚಂದ್ರನಂತೆ ಬೆಳೆದುನಿಂತು ರೂಪಯೌವನ ಸಂಪನ್ನಳಾದಳು. ಸದ್ಗುಣ ಸಂಪನ್ನನಾದ ದ್ಯುಮತ್ಸೇನನ ಮಗನಾದ ಸತ್ಯವಂತನನ್ನು ತನಗೆ ಪತಿಯನ್ನಾಗಿ ವರಿಸಿದಳು. ರಾಜ ಅವರಿಬ್ಬರಿಗೆ ವಿವಾಹ ಮಾಡಿಸಿದ.

ಒಂದು ವರ್ಷ ಕಳೆಯಿತು. ಸತ್ಯವಂತ ತನ್ನ ತಂದೆಯ ಆಜ್ಞೆಯಂತೆ ಹಣ್ಣು ಮತ್ತು ಸಮಿತ್ತುಗಳನ್ನು ತರಲು ಕಾಡಿಗೆ ಹೊರಟಾಗ ಸಾವಿತ್ರಿಯೂ ದೈವಾತ್ ಅವನ ಜೊತೆಗೇ ಹೋದಳು. ಅಂದು ದೈವಾತ್ ಅವನು ಮರದಿಂದ ಬಿದ್ದು ಪ್ರಾಣತ್ಯಾಗ ಮಾಡಿದ. ಅವನ ಶರೀರದಿಂದ ಅಂಗುಷ್ಠಪರಿಮಾಣದ ಆತ್ಮನನ್ನು ಯಮ ಸೆಳೆದು-ಕೊಂಡು ಹೊರಟ. ಸಾವಿತ್ರಿ ಯಮನನ್ನೇ ಹಿಂಬಾಲಿಸಿ ನಡೆದಳು. ಯಮ ಅವಳನ್ನು ನೋಡಿ ನುಡಿದ-

'ಸಾವಿತ್ರಿ ನೀನೆಲ್ಲಿಗೆ ಹೊರಟೆ ? ಪತಿಯ ಜೊತೆಗೇ ಬರುವೆಯಾದರೆ ಮನುಷ್ಯ ಶರೀರವನ್ನು ಬಿಡಬೇಕಾಗುತ್ತದೆ. ನಶ್ವರ ಪಾಂಚಭೌತಿಕ ಶರೀರದಿಂದ ಮನುಷ್ಯ ಯಮಲೋಕಕ್ಕೆ ಬರುವಂತಿಲ್ಲ. ನಿನ್ನ ಪತಿಗೆ ಭಾರತ ಭೂಮಿಯಲ್ಲಿ ಜೀವಿಸಿರ-ಬೇಕಾಗಿದ್ದ ಕಾಲ ಪೂರ್ಣವಾಗಿದೆ. ಈಗ ಆತ ತನ್ನ ಕರ್ಮಫಲವನ್ನು ಉಣಲು ನನ್ನ ಲೋಕಕ್ಕೆ ಬರುತ್ತಿದ್ದಾನೆ.

ಕರ್ಮಣಾ ಜಾಯತೇ ಜಂತುಃ ಕರ್ಮಣ್ಯೇವ ಪ್ರಲೀಯತೇ ।<br>ಸುಖಂ ದುಃಖಂ ಭಯಂ ಶೋಕಂ ಕರ್ಮಣ್ಯೇವ ಪ್ರಪದ್ಯತೇ ॥

**ಜೀವ ಕರ್ಮದಿಂದಲೆ ಹುಟ್ಟುತ್ತಾನೆ ಕರ್ಮದಿಂದಲೆ ಪಡೆಯುತ್ತಾನೆ. ಸುಖ ದುಃಖ ಭಯ ಶೋಕ ಎಲ್ಲವನ್ನೂ ಕರ್ಮದಿಂದಲೆ ಹೊಂದುತ್ತಾನೆ.**

ಇಂದ್ರಪದವಿಯನ್ನೂ ಕರ್ಮದಿಂದಲೆ ಪಡೆಯುತ್ತಾನೆ. ಬ್ರಹ್ಮಪುತ್ರನೆನಿಸುವುದೂ ಕರ್ಮದಿಂದಲೇ. ಹರಿದಾಸ್ಯ ಲಭಿಸುವುದೂ ಕರ್ಮದಿಂದಲೆ. ಜನ್ಮಾದಿ ರಹಿತನೆನಿಸುವುದು ಕರ್ಮದಿಂದಲೆ. ವಿಷ್ಣುವಿನ ಸಾಲೋಕ್ಯಾದಿ ನಾಲ್ಕು ಬಗೆಯ ಮೋಕ್ಷವೂ ಕರ್ಮದಿಂದಲೆ. ದೇವತ್ವ, ಮನುಷ್ಯತ್ವ, ರಾಜತ್ವ, ಬ್ರಾಹ್ಮಣತ್ವ, ಮುನಿತ್ವ, ತಪಸ್ವಿತ್ವ, ಕ್ಷತ್ರಿಯತ್ವ, ವೈಶ್ಯತ್ವ, ಶೂದ್ರತ್ವ, ಅಂತ್ಯಜತ್ವ, ಮ್ಲೇಚ್ಛತ್ವ, ಜಂಗಮತ್ವ, ಸ್ಥಾವರತ್ವ, ಶೈಲತ್ವ, ವೃಕ್ಷತ್ವ, ಪಶುತ್ವ, ಪಕ್ಷಿತ್ವ ಮುಂತಾದ ಜನ್ಮಗಳೆಲ್ಲವೂ ಕರ್ಮದಿಂದಲೆ ಉಂಟಾಗುವುದು. ಸೌಂದರ್ಯ ಆರೋಗ್ಯಗಳೂ, ಅಂಗವೈಕಲ್ಯ ರೋಗಗಳೂ, ಸ್ವರ್ಗನರಕಗಳೂ, ಇಂದ್ರಾದಿ ಲೋಕಗಳೂ, ವೈಕುಂಠ ಗೋಲೋಕಗಳೂ ಕರ್ಮಾಧೀನನಾಗಿ ಸಿಗುವುವು. ಅಲ್ಪಾಯುವಾಗುವುದು ಚಿರಜೀವಿಯಾಗುವುದು, ಗರ್ಭದಲ್ಲಿಯೆ ಮರಣ ಹೊಂದುವುದು ಎಲ್ಲವೂ ಕರ್ಮಾಧೀನ. ಕರ್ಮಾಧೀನವಾಗಿಯೆ ನಿನ್ನಪತಿ ಮೃತನಾಗಿದ್ದಾನೆ. ನೀನು ಸುಮ್ಮನೆ ಹಿಂತಿರುಗು.

**ಇಲ್ಲಿಗೆ ಶ್ರೀ ಬ್ರಹ್ಮವೈವರ್ತ ಮಹಾಪುರಾಣದಲ್ಲಿ ಎರಡನೆಯದಾದ ಪ್ರಕೃತಿಖಂಡದ ನಾರದನಾರಾಯಣ ಸಂವಾದದಲ್ಲಿ ಕರ್ಮವಿಪಾಕದಲ್ಲಿ ಕರ್ಮಕ್ಕೆ ಸರ್ವಹೇತುತ್ವ ಪ್ರದರ್ಶನವೆಂಬ ಇಪ್ಪತ್ತನಾಲ್ಕನೆ ಅಧ್ಯಾಯ ಮುಗಿಯಿತು.**

## ಕರ್ಮವಿಪಾಕದಲ್ಲಿ ಯಮನಿಗೆ ಸಾವಿತ್ರಿಯ ಪ್ರಶ್ನೆ

**ಅಧ್ಯಾಯ-೨೫**

ಯಮನ ಮಾತನ್ನು ಕೇಳಿ ಪತಿವ್ರತೆಯಾದ ಸಾವಿತ್ರಿ ಭಕ್ತಿಯಿಂದ ನುಡಿದಳು-

'ಧರ್ಮರಾಜ, ಮನುಷ್ಯರ ಶುಭಾಶುಭ ಕರ್ಮಗಳಾವುವು ? ಆ ಕರ್ಮಗಳಿಂದ ಬಿಡುಗಡೆ ಹೊಂದುವ ಬಗೆ ಹೇಗೆ ? ಕರ್ಮಗಳಿಗೆ ಬೀಜಸ್ವರೂಪನಾರು ? ಕರ್ಮಫಲದಾತನಾರು ? ಕರ್ಮಸ್ವರೂಪವೇನು ? ಕರ್ಮದ ಉತ್ಪತ್ತಿ ಹೇಗೆ ? ಅದಕ್ಕೆ ಕಾರಣ ಯಾರು ? ಕರ್ಮಫಲಭೋಕ್ತನಾರು ? ಭೋಗಿಸದೆ ನಿರ್ಲಿಪ್ತನಾಗಿರುವವನಾರು ? ದೇಹಿ ಯಾರು ? ದೇಹ ಯಾವುದು ? ಇವುಗಳಲ್ಲಿ ಕರ್ಮಕಾರಕ ಯಾರು ? ಜ್ಞಾನ, ಮನಸ್ಸು, ಬುದ್ಧಿ, ಪ್ರಾಣ, ಇಂದ್ರಿಯಗಳು ಅವುಗಳ ದೇವತೆಗಳು

ಭೋಕ್ತಾ, ಭೋಜಕ, ಭೋಗ, ಅದಕ್ಕೆ ಪರಿಹಾರ, ಜೀವ, ಪರಮಾತ್ಮ ಇವೆಲ್ಲವುಗಳ ಲಕ್ಷಣ ಸ್ವರೂಪಗಳನ್ನು ನನಗೆ ಹೇಳು.'

ಯಮ ಹೇಳಿದ, ''ವೇದದಿಂದ ವಿಹಿತವಾದುದೆ ಕರ್ಮ. ಅದೇ ಮಂಗಳಕರ. ಅವೈದಿಕ ಕರ್ಮ ಅಮಂಗಳಕರ. ಫಲದ ಆಸೆ ಇಲ್ಲದೆ ವಿಷ್ಣುಸೇವಾ-ಮನೋಭಾವದಿಂದ ಸಜ್ಜನರು ಮಾಡುವ ಕರ್ಮ ಹರಿಭಕ್ತಿಗೆ ಕಾರಣವಾಗಿದ್ದು ಕರ್ಮಬಂಧ ಕಳೆಯಲು ಸಾಧನವಾಗುವುದು. ಹರಿಭಕ್ತನಾದ ಮಾನವ ಮುಕ್ತಿ ಭಾಗಿಯಾಗುತ್ತಾನೆ. ಜನ್ಮ ಮರಣ ಜರೆ ವ್ಯಾಧಿ ಶೋಕ ಭಯ ವರ್ಜಿತನಾಗುತ್ತಾನೆ.

ಮೋಕ್ಷ ದ್ವಿದಳಾತ್ಮಕವಾದುದು. ಒಂದು ಪ್ರಕೃತಿಯ ಬಂಧನದಿಂದ ಬಿಡುಗಡೆ. ಇನ್ನೊಂದು ಹರಿಭಕ್ತಿ ಮುಂತಾದ ಗುಣಗಳ ಆವಿಷ್ಕಾರ. ಉತ್ತಮರಾದ ವಿಷ್ಣುಭಕ್ತರು ವಿಷ್ಣುಭಕ್ತಿಯನ್ನು ವಿಶೇಷವಾಗಿ ಆವಿಷ್ಕಾರಗೊಳಿಸಲು ಬಯಸುತ್ತಾರೆ. ಉಳಿದವರು ಪ್ರಕೃತಿ ಬಂಧನ ಕಳೆದರೆ ಸಾಕೆನ್ನುತ್ತಾರೆ.

ಕರ್ಮದ ಬೀಜ ಸ್ವರೂಪನೂ, ಕರ್ಮಫಲ ದಾತನೂ, ಪ್ರಕೃತಿಯ ಆಚೆ ಇರುವ ಭಗವಂತನೆ. ಅವನೆ ಕರ್ಮಕಾರಣ. ಅವನ ಪ್ರೇರಣೆಯಿಂದಲೆ ಜೀವನಲ್ಲಿ ಕರ್ಮದ ಉತ್ಪತ್ತಿ. ಆದರಿಂದ ಕರ್ಮಕಾರಣ ಅವನೆ. ಕರ್ಮಫಲ ಭೋಕ್ತಾ ಜೀವ. ಪರಮಾತ್ಮ ನಿರ್ಲಿಪ್ತ. ಪರಮಾತ್ಮನ ಪ್ರತಿಬಿಂಬನಾದ ಜೀವನೆ ದೇಹಿ. ದೇಹವೆಂದರೆ ಪೃಥಿವೀ ವಾಯು, ಆಕಾಶ, ಜಲ, ತೇಜಸ್ಸುಗಳಿಂದ ನಿರ್ಮಿತವಾದ ಸ್ಥೂಲಶರೀರ. ಕರ್ಮ ಮಾಡುವವನೂ ಅದರ ಫಲವನ್ನು ಭೋಗಿಸುವವನೂ ದೇಹಿಯಾದ ಜೀವ. ಫಲ ಕೊಡುವವನು ಸ್ವತಂತ್ರನಾದ ಪರಮಾತ್ಮ. ಭೋಗವೆಂದರೆ ಸಂಪತ್ತನ್ನು ಅನುಭವಿಸು-ವುದು. ಅದಕ್ಕೆ ಪರಿಹಾರ ಮುಕ್ತಿ.

ಸದಸದ್ ವಿವೇಕವೆ ಜ್ಞಾನ. ಅಂಥ ಜ್ಞಾನಕ್ಕೆ ಕಾರಣವಾದ ಅಂತಃಕರಣವೆ ಬುದ್ಧಿ. ಜ್ಞಾನೇಂದ್ರಿಯ ಕರ್ಮೇಂದ್ರಿಯ ಪ್ರೇರಕವಾದುದು, ದೇಹಿಗಳಿಗೆ ನಿಗ್ರಹಿಸಲು ಕಷ್ಟ-ಸಾಧ್ಯವಾದುದು ಮನಸ್ಸು. ಇಂದ್ರಿಯವೆಂದರೆ ಲೋಚನ, ಶ್ರವಣ, ಘ್ರಾಣ, ತ್ವಕ್, ಜಿಹ್ವಾ, ವಾಕ್, ಪಾಣಿ, ಪಾದ, ಪಾಯು, ಉಪಸ್ಥ, ಮನಸ್ಸು ಹೀಗೆ ಹನ್ನೊಂದು ಇಂದ್ರಿಯಗಳು. ಅವು ಜೀವನಿಗೆ ಮಿತ್ರರಂತೆ ಸುಖ ನೀಡಬಲ್ಲುವು. ಶತ್ರುಗಳಂತೆ ದುಃಖವನ್ನೂ ನೀಡಬಲ್ಲುವು. ಸೂರ್ಯ, ವಾಯು, ಪೃಥ್ವಿ, ವಾಣಿ ಮುಂತಾದವರು ಇಂದ್ರಿಯಾಭಿಮಾನಿ ದೇವತೆಗಳು. ಜೀವನೆಂದರೆ ಪ್ರಾಣ, ದೇಹ, ಇಂದ್ರಿಯಾದಿ-ಗಳನ್ನು ಧರಿಸಿದವ. ಪ್ರಕೃತಿಯಿಂದ ಆಚೆಗಿದ್ದು ಸತ್ವಾದಿಗುಣರಹಿತನಾದ ಪರಬ್ರಹ್ಮನೆ ಪರಮಾತ್ಮ. ಅವನೆ ಕಾರಣಗಳಿಗೆ ಕಾರಣನಾದ ಭಗವಾನ್ ಶ್ರೀಕೃಷ್ಣ.

ಸಾವಿತ್ರಿ, ನೀನು ಕೇಳಿದ ಎಲ್ಲ ಪ್ರಶ್ನೆಗಳಿಗೂ ಶಾಸ್ತ್ರಾನುಸಾರ ಉತ್ತರ ಹೇಳಿದ್ದೇನೆ. ಇನ್ನು ನೀನು ಹಿಂತಿರುಗಬಹುದು.'

**ಸಾವಿತ್ರಿ ಹೇಳಿದಳು—** ನನ್ನ ಪತಿಯನ್ನಾಗಲಿ ಜ್ಞಾನಸಮುದ್ರನಾದ ನಿನ್ನನ್ನಾಗಲಿ ಬಿಟ್ಟು ನಾನೆಲ್ಲಿಗೆ ಹೋಗಲಿ ? ನಾನು ಇನ್ನೂ ನಿನ್ನಿಂದ ಕೇಳಬಯಸುತ್ತೇನೆ, ಹೇಳು.

ಜೀವ ಯಾವ ಯಾವ ಕರ್ಮದಿಂದ ಯಾವಯಾವ ಜನ್ಮ ಹೊಂದುವನು ? ಯಾವ ಕರ್ಮದಿಂದ ಸ್ವರ್ಗವನ್ನು ಯಾವ ಕರ್ಮದಿಂದ ನರಕವನ್ನು ಹೊಂದುತ್ತಾನೆ ? ಯಾವ ಕರ್ಮದಿಂದ ಮುಕ್ತಿ, ಯಾವಕರ್ಮದಿಂದ ಭಕ್ತಿ, ಯಾವಕರ್ಮದಿಂದ ರೋಗ, ಯಾವ ಕರ್ಮದಿಂದ ಆರೋಗ್ಯ ? ದೀರ್ಘಾಯುಷ್ಯ, ಅಲ್ಪಾಯುಷ್ಯ, ಸುಖ ದುಃಖಗಳಿಗೆ ಯಾವ ಕರ್ಮಕಾರಣ ? ಸಾಲೋಕ್ಯಾದಿ ಮುಕ್ತಿಗೆ ಬ್ರಾಹ್ಮಣತ್ವ, ತಪಸ್ವಿತ್ವ, ಸ್ವರ್ಗ ಭೋಗಾದಿಗಳಿಗೆ, ವೈಕುಂಠ ಪ್ರಾಪ್ತಿಗೆ, ಗೋಲೋಕ ಪ್ರಾಪ್ತಿಗೆ ಯಾವ ಕರ್ಮ ಮಾಡಬೇಕು ? ನರಕಗಳು ಎಷ್ಟು ವಿಧ ? ಅವುಗಳ ಹೆಸರು-ಗಳೇನು ? ನರಕಕ್ಕೆ ಯಾರು ಹೋಗುತ್ತಾನೆ ? ಎಷ್ಟುಕಾಲವಿರುತ್ತಾನೆ ? ಯಾವ ಕರ್ಮದಿಂದ ವ್ಯಾಧಿ ಉಂಟಾಗುತ್ತದೆ ? ಇದನ್ನೆಲ್ಲ ವಿವರಿಸಿ ಹೇಳು.

**ಇಲ್ಲಿಗೆ ಶ್ರೀ ಬ್ರಹ್ಮವೈವರ್ತ ಮಹಾಪುರಾಣದಲ್ಲಿ ಎರಡನೆಯದಾದ ಪ್ರಕೃತಿಖಂಡದ ನಾರದನಾರಾಯಣ ಸಂವಾದದಲ್ಲಿ ಕರ್ಮವಿಪಾಕದಲ್ಲಿ ಯಮನ ಉಪದೇಶವಾದ ಬಳಿಕ ಸಾವಿತ್ರಿ ಪುನಃ ಪ್ರಶ್ನಿಸುವ ಇಪ್ಪತ್ತೆಂದನೆ ಅಧ್ಯಾಯ ಮುಗಿಯಿತು.**

## ಯಮನಿಂದ ಸಾವಿತ್ರಿಗೆ ವರದಾನ ಮತ್ತು ಕರ್ಮಾನುರೂಪಸ್ಥಾನಗಮನ ನಿರೂಪಣೆ

**ಅಧ್ಯಾಯ-೨೬**

ನಾರಾಯಣ ಮಹರ್ಷಿ— ಸಾವಿತ್ರಿಯ ಪ್ರಶ್ನೆಗಳನ್ನು ಕೇಳಿ ಯಮ ಆಶ್ಚರ್ಯಗೊಂಡು ನಕ್ಕು ಹೇಳತೊಡಗಿದ- ''ಮಗು, ನೀನು ಹನ್ನೆರಡು ವಯಸ್ಸಿನ ಕನ್ಯೆ. ಆದರೂ ಜ್ಞಾನ ಪ್ರಾಚೀನ ಪಂಡಿತರದು. ಯೋಗಿಗಳದು, ಜ್ಞಾನಿಗಳದು.

ಸಾವಿತ್ರಿಯ ವರದಾನದಿಂದ ತಪಸ್ಸಿನಲ್ಲಿ ಅವಳಿಗೆ ಸಮಾನಳಾದ ನಿನ್ನನ್ನು ಮಗಳಾಗಿ ಪಡೆದ ಅಶ್ವಪತಿ ರಾಜ. ನಾನು ನಿನಗೆ ವರ ನೀಡುತ್ತೇನೆ- ನಾರಾಯಣ ಲಕ್ಷ್ಮಿಯನ್ನು ಶಂಕರ ಪಾರ್ವತಿಯನ್ನು, ಕೃಷ್ಣ ರಾಧೆಯನ್ನು, ಬ್ರಹ್ಮ ಸಾವಿತ್ರಿಯನ್ನು, ಧರ್ಮ ಮೂರ್ತಿಯನ್ನು, ಸ್ವಾಯಂಭುವಮನು ಶತರೂಪೆಯನ್ನು, ಕರ್ದಮ ದೇವ-ಹೂತಿಯನ್ನು, ವಸಿಷ್ಠ ಅರುಂಧತಿಯನ್ನು, ಕಶ್ಯಪ ಅದಿತಿಯನ್ನು, ಗೌತಮ ಅಹಲ್ಯೆ-ಯನ್ನು, ಇಂದ್ರ ಶಚಿಯನ್ನು, ಚಂದ್ರ ರೋಹಿಣಿಯನ್ನು, ಕಾಮ ರತಿಯನ್ನು, ಅಗ್ನಿ

ಸ್ವಾಹೆಯನ್ನು, ಪಿತೃಗಳು ಸ್ವಧೆಯನ್ನು, ಸೂರ್ಯ ಸಂಜ್ಞೆಯನ್ನು, ವರುಣ ವರುಣಾನಿ-ಯನ್ನು, ಯಜ್ಞ ದಕ್ಷಿಣೆಯನ್ನು, ವರಾಹ ಧರೆಯನ್ನು, ಷಣ್ಮುಖ ದೇವಸೇನೆಯನ್ನು ಹೇಗೆ ಪ್ರೀತಿಸುವರೋ ಹಾಗೆ ಸತ್ಯವಂತನೂ ನಿನ್ನನ್ನು ಸದಾ ಪ್ರೀತಿಸುತ್ತಿರಲಿ.

ದೇವಿ, ಇನ್ನೇನು ವರವನ್ನು ಬಯಸುವೆ ? ಹೇಳು, ನಾನು ಕೊಡುತ್ತೇನೆ.

ಸಾವಿತ್ರಿ ಹೇಳಿದಳು— ''ಸತ್ಯವಂತನ ಔರಸ ಪುತ್ರನಿಂದಲೆ ನನ್ನ ವಂಶದಲ್ಲಿ ನೂರು ಮಂದಿ ಮಕ್ಕಳು ಜನಿಸಲಿ. ನನ್ನ ತಂದೆಗೂ ನೂರು ಮಂದಿ ಪುತ್ರರು ಜನಿಸಲಿ. ನನ್ನ ಮಾವನಿಗೆ ಕಣ್ಣುಗಳು ಬರಲಿ. ಹೋದರಾಜ್ಯವೂ ತಿರುಗಿ ಬರಲಿ. ಲಕ್ಷವರ್ಷಗಳ ಬಳಿಕ ಸತ್ಯವಂತನ ಜೊತೆಗೇ ನನಗೆ ವಿಷ್ಣುಲೋಕ ದೊರಕಲಿ. ಮತ್ತು ಪ್ರಪಂಚ-ವಿಸ್ತಾರವಾಗಿ ಬೆಳೆಯಲು ಬೀಜರೂಪವಾದ ಜೀವರ ಕರ್ಮವಿಪಾಕದ ಬಗ್ಗೆ ನನಗೆ ಉಪದೇಶವನ್ನೂ ನೀಡು.'

ಯಮ ಹೇಳಿದ— ದೇವಿ, ನಿನ್ನ ಬಯಕೆಗಳನ್ನೆಲ್ಲ ಈಡೇರಿಸುತ್ತೇನೆ. ಜೀವಕರ್ಮ ವಿಪಾಕದ ಬಗ್ಗೆಯೂ ಹೇಳುತ್ತೇನೆ.

ಜೀವರಲ್ಲಿ ಪುಣ್ಯಪಾಪ ಕರ್ಮಗಳು ಜನಿಸುವುದು ಪುಣ್ಯಕ್ಷೇತ್ರವಾದ ಭಾರತದಲ್ಲಿ ಮಾತ್ರ. ಎಲ್ಲಕಡೆ ಅಲ್ಲ. ಬೇರೆ ದೇಶಗಳಲ್ಲಿ ಜನರು ಕರ್ಮಫಲ ಉಣ್ಣುತ್ತಾರಷ್ಟೆ. ದೇವತೆಗಳು ದೈತ್ಯರು ದಾನವರು ಗಂಧರ್ವರು ರಾಕ್ಷಸರು ಮುಂತಾದವರೂ ಮಾನವರೂ ಕರ್ಮಜನಕರು ಹೊರತು ಬೇರೆ ಸಾಮಾನ್ಯ ಜೀವಿಗಳು ಕರ್ಮಜನಕ-ರಲ್ಲ. ಶ್ರೇಷ್ಠ ಜೀವರು ಪುಣ್ಯಕರ್ಮವನ್ನೆ ಎಲ್ಲ ಜನ್ಮಗಳಲ್ಲಿಯೂ ಭೋಗಿಸುವರು. ಮಾನವರು ವಿಶೇಷವಾಗಿ ಬೇರೆ ಬೇರೆ ಜನ್ಮಗಳಲ್ಲಿ ಭ್ರಮಣ ಮಾಡುತ್ತಾರೆ. ಪೂರ್ವಾರ್ಜಿತವಾದ ಪುಣ್ಯಪಾಪಕರ್ಮಗಳಿಗನುಗುಣವಾಗಿ ಸುಖದುಃಖಗಳೆರಡನ್ನೂ ಅನುಭವಿಸುತ್ತಾರೆ. ಪುಣ್ಯಕರ್ಮದಿಂದ ಸ್ವರ್ಗಾದಿ ಲೋಕಗಳನ್ನು ಪಡೆಯುತ್ತಾರೆ. ಪಾಪಕರ್ಮದಿಂದ ನರಕಗಳಲ್ಲಿ ಬಳಲುತ್ತಾರೆ. ಈ ಕರ್ಮ ನಾಶವಾದರೆ ಮುಕ್ತಿ. ಅದು ಎರಡು ಬಗೆ- ನಿರ್ವಾಣ ಮತ್ತು ಕೃಷ್ಣಪರಮಾತ್ಮನ ಸೇವೆ ಎಂದು. ಪಾಪಕರ್ಮದಿಂದ ರೋಗ, ಪುಣ್ಯಕರ್ಮದಿಂದ ಆರೋಗ್ಯ, ದೀರ್ಘಾಯುಷ್ಯ, ಅಲ್ಪಾಯುಷ್ಯ, ಸುಖದುಃಖಗಳೂ, ಪುಣ್ಯಪಾಪಕರ್ಮಗಳಿಂದಲೆ. ಕುರುಡರು ಮುಂತಾದ ಅಂಗ-ವಿಕಲರು ಪಾಪ ಕರ್ಮದಿಂದ ಹಾಗೆ ಆಗಿರುತ್ತಾರೆ. ಒಳ್ಳೆಯ ಕರ್ಮದಿಂದ ಸಿದ್ಧಿಮುಂತಾದವು ಲಭಿಸುವುವು.

ಎಲ್ಲ ಜನ್ಮಗಳಲ್ಲಿಯೂ ಭಾರತ ದೇಶದಲ್ಲಿ ಮಾನವನಾಗಿ ಹುಟ್ಟುವುದೇ ದುರ್ಲಭ. ಬ್ರಾಹ್ಮಣನಾಗಿ ಹುಟ್ಟುವುದು ಇನ್ನೂ ಶ್ರೇಷ್ಠ. ಏಕೆಂದರೆ ಸರ್ವಕರ್ಮ-ಗಳಲ್ಲಿಯೂ ಅವನು ಅರ್ಹನಾಗಿರುತ್ತಾನೆ. ಬ್ರಾಹ್ಮಣನಾಗಿ ವಿಷ್ಣುಭಕ್ತನಾಗಿ

ಹುಟ್ಟುವುದು ಇನ್ನೂ ಹೆಚ್ಚು ಶ್ರೇಷ್ಠ. ವೈಷ್ಣವ ಬ್ರಾಹ್ಮಣರು ಎರಡು ಬಗೆಯಾಗಿರು-ತ್ತಾರೆ, ಸಕಾಮ ನಿಷ್ಕಾಮರೆಂದು. ಸಕಾಮರು ಕರ್ಮಫಲ ಭೋಗಿಸಬೇಕಾಗುತ್ತದೆ. ನಿಷ್ಕಾಮರಿಗೆ ಯಾವ ಉಪದ್ರವವೂ ಇಲ್ಲ. ಅವರು ದೇಹಬಂಧನ ತೊರೆದು ಶಾಶ್ವತವಾದ ವಿಷ್ಣುಲೋಕವನ್ನು ಹೊಂದುತ್ತಾರೆ. ಅವರು ಅಲ್ಲಿಂದ ತಿರುಗಿ ಸಂಸಾರಕ್ಕೆ ಬೀಳುವುದಿಲ್ಲ.

ದ್ವಿಭುಜನಾದ ಕೃಷ್ಣನನ್ನು ಭಜಿಸುವವರು ದಿವ್ಯರೂಪಧರಿಸಿ ಗೋಲೋಕಕ್ಕೂ ಚತುರ್ಭುಜನಾದ ನಾರಾಯಣನನ್ನು ಭಜಿಸುವವರು ದಿವ್ಯರೂಪದಿಂದ ವೈಕುಂಠಕ್ಕೂ ಹೋಗುತ್ತಾರೆ. ಸಕಾಮರು ವೈಕುಂಠ ಹೊರತಾಗಿ ಬೇರೆ ಸ್ವರ್ಗಾದಿಲೋಕಗಳಿಗೆ ಹೋಗಿ ಪುನಃ ಭಾರತದಲ್ಲಿ ದ್ವಿಜರಾಗಿ ಜನಿಸುತ್ತಾರೆ. ಕಾಲಕ್ರಮದಲ್ಲಿ ಅವರೂ ನಿಷ್ಕಾಮರಾಗಿ ನಿರ್ಮಲಭಕ್ತಿಯನ್ನು ಸಂಪಾದಿಸುತ್ತಾರೆ. ಸಕಾಮರು ಸ್ವಧರ್ಮನಿರತ-ರಾಗಿದ್ದು ಬ್ರಹ್ಮ, ಸೂರ್ಯ, ಶಿವ, ಇಂದ್ರ ಮುಂತಾದ ದೇವತೆಗಳನ್ನು ಭಜಿಸಿದರೆ ಕೆಲಕಾಲ ಸ್ವರ್ಗಾದಿ ಸುಖ ಅನುಭವಿಸಿ ತಿರುಗಿ ಭೂಮಿಗೆ ಬರುತ್ತಾರೆ. ನಿಷ್ಕಾಮರಾದ ಹರಿಭಕ್ತರು ವಿಷ್ಣುಲೋಕವನ್ನೇ ಸೇರುತ್ತಾರೆ. ಸ್ವಧರ್ಮವನ್ನು ಬಿಟ್ಟು ದೇವತೆಗಳಿಗಿಂತ ಬೇರೆಯವರನ್ನು ಸೇವಿಸುವವರು ದುರಾಚಾರಿಗಳು ಮಾಮಾಚಾರಿಗಳು ಎಲ್ಲರೂ ನರಕಕ್ಕೇ ಹೋಗುವರು.

ಸ್ವಧರ್ಮದಲ್ಲಿರುವ ವಿಪ್ರ ಸ್ವಧರ್ಮದಲ್ಲಿರುವ ವರನಿಗೆ ಕನ್ಯಾದಾನ ಮಾಡಿದರೆ ಚಂದ್ರಲೋಕ ಪ್ರಾಪ್ತಿ. ಹದಿನಾಲ್ಕು ಇಂದ್ರರ ಕಾಲ ಅಲ್ಲಿ ಅವನು ವಾಸಮಾಡುತ್ತಾನೆ. ಸಾಲಂಕೃತ ಕನ್ಯಾದಾನದಿಂದ ಫಲ ದ್ವಿಗುಣವಾಗುವುದು. ಸಕಾಮರು ಮಾತ್ರ ಹೀಗೆ ಚಂದ್ರಲೋಕಕ್ಕೆ ಹೋಗುತ್ತಾರೆ. ನಿಷ್ಕಾಮರಾದ ವೈಷ್ಣವರು ವಿಷ್ಣುಲೋಕಕ್ಕೇ ಹೋಗುತ್ತಾರೆ.

ಹಸುವಿನ ಹಾಲು ಮೊಸರು ಮುಂತಾದುವನ್ನೂ ರಜತಕನ್ಯೆ, ವಸ್ತ್ರ, ಸಸ್ಯ, ಫಲ, ಜಲಗಳನ್ನೂ ವಿಪ್ರರಿಗೆ ದಾನ ಮಾಡಿದರೆ ನಿಷ್ಕಾಮಿಗಳಾದ ವಿಷ್ಣುಭಕ್ತರು ವಿಷ್ಣು-ಲೋಕ ಸೇರುತ್ತಾರೆ.

ಸುವರ್ಣ, ಗೋವು, ತಾಮ್ರಾದಿ ದಾನಗಳಿಂದ ಸೂರ್ಯಲೋಕ ಪ್ರಾಪ್ತಿ. ಭೂಮಿ, ಧಾನ್ಯ, ಗೃಹ, ತಟಾಕಾದಿ ದಾನದಿಂದ ಸ್ವರ್ಗಲೋಕಪ್ರಾಪ್ತಿ. ದೇವರಿಗೆ ಗುಡಿ ಕಟ್ಟಿಸಿಕೊಟ್ಟರೆ ಗುಡಿಯಲ್ಲಿರುವ ಮಣ್ಣಿನ ಕಣಗಳೆಷ್ಟು ಸಂಖ್ಯೆಯಲ್ಲಿರುವುವೋ ಅಷ್ಟು ವರ್ಷ ಆಯಾ ದೇವರ ಲೋಕದಲ್ಲಿ ವಾಸ ಲಭ್ಯ.

ಎಲ್ಲ ಜೀವಿಗಳಿಗೂ ಉಪಕಾರವಾಗುವಂತೆ ಸಾರ್ವಜನಿಕ ಕೆರೆ ಕಟ್ಟಿಸಿಕೊಟ್ಟರೆ ಬಾವಿ ಅಣೆಕಟ್ಟುಗಳನ್ನು ಕಟ್ಟಿಸಿಕೊಟ್ಟರೆ ಹತ್ತುಸಾವಿರ ವರ್ಷಕಾಲ ಸ್ವರ್ಗಲೋಕಾದಿ ಪ್ರಾಪ್ತಿ.

ನಾಲ್ಕುಸಾವಿರ ಧನುಸ್ಸಿನಷ್ಟು ದೀರ್ಘ, ಅಷ್ಟೇ ಅಥವಾ ಅದಕ್ಕಿಂತ ಕಡಿಮೆ ಅಗಲದ ಜಲಾಶಯಕ್ಕೆ ವಾಪೀ ಅಂದರೆ ಬಾವಿ ಎನಿಸುವುದು.

**ಧನುಶ್ಚತುಃ ಸಹಸ್ರೇಣ ದೈರ್ಘ್ಯಮಾನೇನ ನಿಶ್ಚಿತಂ ।**
**ನ್ಯೂನಾ ವಾ ತಾವತೀ ಪ್ರಸ್ಥೇ ಸಾ ವಾಪೀ ಪರಿಕೀರ್ತಿತಾ॥**

ಸತ್ಪಾತ್ರದಲ್ಲಿ ಕನ್ಯಾದಾನ ಮಾಡಿದರೆ ಹತ್ತು ಬಾವಿಗಳನ್ನು ಕಟ್ಟಿಸಿಕೊಟ್ಟ ಪುಣ್ಯ. ಸಾಲಂಕೃತ ಕನ್ಯಾದಾನ ಮಾಡಿದರೆ ಅದಕ್ಕಿಂತ ಎರಡು ಪಾಲು ಹೆಚ್ಚು ಪುಣ್ಯ. ಅಷ್ಟೇ ಫಲ ಕೆರೆಯಲ್ಲಿ ಕೆಸರು ತೆಗೆಸಿದರೆ ಸಿಗುತ್ತದೆ. ಬಾವಿಯಲ್ಲಿ ಕೆಸರು ತೆಗೆಸಿಕೊಟ್ಟರೆ ಬಾವಿ ಕಟ್ಟಿಸಿಕೊಟ್ಟಷ್ಟು ಪುಣ್ಯ. ಅಶ್ವತ್ಥವೃಕ್ಷವನ್ನು ನೆಟ್ಟು ಪ್ರತಿಷ್ಠೆಮಾಡಿದರೆ ಹತ್ತು ಸಾವಿರವರ್ಷಕಾಲ ತಪೋಲೋಕ ಪ್ರಾಪ್ತಿ. ಹೂದೋಟ ಮಾಡಿಕೊಟ್ಟರೆ ಹತ್ತು ಸಾವಿರವರ್ಷಕಾಲ ಧ್ರುವಲೋಕವಾಸ. ವಿಷ್ಣುವಿಗೆ ಗುಡಿ ಕಟ್ಟಿಸಿಕೊಟ್ಟರೆ ಮನ್ವಂತರ-ಕಾಲ ವಿಷ್ಣುಲೋಕವಾಸ. ಗುಡಿ ವಿಶಾಲವಾಗಿದ್ದು ಚಿತ್ರಯುಕ್ತವಾಗಿದ್ದರೆ ನಾಲ್ಕರಷ್ಟು ಫಲ. ರಥ ಪಲ್ಲಕ್ಕಿ ನಿರ್ಮಿಸಿ ಕೊಟ್ಟರೂ ಅಷ್ಟು ಫಲವಿದೆ. ಉಯ್ಯಾಲೆ ಗುಡಿ ಕಟ್ಟಿಸಿಕೊಟ್ಟರೂ ಮನ್ವಂತರ ಕಾಲ ವಿಷ್ಣುಲೋಕವಾಸ. ಉಪ್ಪರಿಗೆ ಮನೆಗಳಿರುವ ರಾಜಮಾರ್ಗ ಮಾಡಿಸಿಕೊಟ್ಟರೆ ಹತ್ತು ಸಾವಿರವರ್ಷ ಸ್ವರ್ಗವಾಸ. ಇವುಗಳನ್ನು ಬ್ರಾಹ್ಮಣರಿಗೆ ದಾನ ಮಾಡಿದರೂ ಅಷ್ಟೇ ಫಲವಿದೆ. ಸ್ವರ್ಗಾದಿಫಲ ದೊರಕುತ್ತದೆ.

**ಯಚ್ಚ ದತ್ತಂ ಹಿ ಭೋಕ್ತುರ್ವೈ ನ ದತ್ತಂ ನೋಪತಿಷ್ಠತೇ ।**

ಹಿಂದೆ ದಾನ ಮಾಡಿದ್ದೇ ಈಗ ಭೋಗಿಸಲು ಸಿಗುತ್ತದೆ, ಹೊರತು ಬೇರೆಯಲ್ಲ.

**ಮಾ ಭುಕ್ತಂ ಕ್ಷೀಯತೇ ಕರ್ಮ ಕಲ್ಪಕೋಟಿ ಶತೈರಪಿ ।**
**ಅವಶ್ಯಮೇವ ಭೋಕ್ತವ್ಯಂ ಕಲ್ಪಕೋಟಿ ಶತೈರಪಿ ॥**

ಮಾಡಿದ ಕರ್ಮ ಉಣದೆ ನೂರು ಕೋಟಿ ಕಲ್ಪಕಳೆದರೂ ತೊಲಗದು. ನೂರು ಕೋಟಿ ಕಲ್ಪ ಕಳೆದ ಮೇಲಾದರೂ ಉಣಲೇ ಬೇಕು.

ಆದ್ದರಿಂದ ಮಾಡಿದ ಪ್ರಾರಬ್ಧಕರ್ಮ ಶುಭವಿರಲಿ ಅಶುಭವಿರಲಿ ಉಣಲೆ ಬೇಕು. ದೇವತಾರಾಧನೆಯಿಂದಲೋ ತೀರ್ಥಯಾತ್ರೆಯಿಂದಲೊ ಕಾಯವ್ಯೂಹ ಧರಿಸುವುದ-ರಿಂದಲೊ ಪ್ರಾರಬ್ಧವನ್ನು ಸವೆಯಿಸಬೇಕು.

ಸಾವಿತ್ರಿ, ನೀನು ಕೇಳಿದುದನ್ನೆಲ್ಲ ವರ್ಣಿಸಿದ್ದೇನೆ. ಇನ್ನೇನು ಕೇಳಬಯಸುವಿ ?

**ಇಲ್ಲಿಗೆ ಶ್ರೀ ಬ್ರಹ್ಮವೈವರ್ತ ಮಹಾಪುರಾಣದಲ್ಲಿ ಎರಡನೆಯದಾದ ಪ್ರಕೃತಿಖಂಡದ ನಾರದನಾರಾಯಣ ಸಂವಾದದಲ್ಲಿ ಸಾವಿತ್ರ್ಯುಪಾಖ್ಯಾನದಲ್ಲಿ ಕರ್ಮವಿಪಾಕದಲ್ಲಿ ಕರ್ಮಾನುರೂಪ ಸ್ಥಾನಗಮನವೆಂಬ ಇಪ್ಪತ್ತಾರನೆ ಅಧ್ಯಾಯ ಮುಗಿಯಿತು.**

## ಯಮನಿಂದ ಶುಭಕರ್ಮ ವಿಪಾಕ ಕಥನ

**ಅಧ್ಯಾಯ-೨೭**

**ಸಾವಿತ್ರಿ ಹೇಳಿದಳು—** ಯಾವ ಯಾವ ಕರ್ಮಗಳಿಂದ ಪುಣ್ಯವಂತ ಮಾನವರು ಸ್ವರ್ಗ ಪಡೆಯುತ್ತಾರೆ ಎಂಬುದನ್ನು ಇನ್ನೂ ವಿವರಿಸಿ ಹೇಳು.

ಯಮ ನುಡಿದ— ವಿಪ್ರರಿಗೆ ಅನ್ನದಾನ ಮಾಡಿದರೆ ಆ ಅನ್ನದಲ್ಲಿ ಎಷ್ಟು ಅಗುಳುಗಳೊ ಅಷ್ಟುವರ್ಷ ಸ್ವರ್ಗವಾಸ ಲಭಿಸುತ್ತದೆ.

**ಅನ್ನದಾನಾತ್ ಪರಂ ದಾನಂ ನ ಭೂತಂ ನ ಭವಿಷ್ಯತಿ ।**
**ನಾತ್ರ ಪಾತ್ರ ಪರೀಕ್ಷಾ ಸ್ಯಾನ್ನ ಕಾಲ ನಿಯಮಃ ಕ್ವಚಿತ್ ॥**

ಅನ್ನದಾನಕ್ಕೆ ಸಮನಾದ ದಾನ ಹಿಂದೆ ಎಂದೂ ಇರಲಿಲ್ಲ, ಮುಂದೆಯೂ ಎಂದೂ ಇರುವುದಿಲ್ಲ. ಇದರಲ್ಲಿ ಪಾತ್ರಪರೀಕ್ಷೆ ಬೇಡ. ಕಾಲ ನಿಯಮವೂ ಇಲ್ಲ.

ದೇವತೆಗಳಿಗೂ ಬ್ರಾಹ್ಮಣರಿಗೂ ಆಸನದಾನ ಮಾಡಿದರೆ ಹತ್ತುಸಾವಿರ ವರ್ಷಕಾಲ ಅಗ್ನಿಲೋಕವಾಸ. ಬ್ರಾಹ್ಮಣನಿಗೆ ಗೋದಾನ ಮಾಡಿದರೆ ಆ ಗೋವಿಗೆ ಎಷ್ಟು ಕೂದಲುಗಳೊ ಅಷ್ಟು ವರ್ಷ ವೈಕುಂಠವಾಸ. ಪುಣ್ಯದಿನದಲ್ಲಿ ಅದೇ ಗೋದಾನಕ್ಕೆ ನಾಲ್ಕರಷ್ಟು ಫಲ. ತೀರ್ಥಕ್ಷೇತ್ರದಲ್ಲಿ ನೂರರಷ್ಟು. ನಾರಾಯಣ ಕ್ಷೇತ್ರದಲ್ಲಿ ಕೋಟಿಪಾಲು ಅಧಿಕ. ವಸ್ತ್ರ ಶಾಲಿಗ್ರಾಮ ದಾನಗಳನ್ನಿತ್ತರೆ ಚಂದ್ರ ಸೂರ್ಯರಿರುವಷ್ಟುಕಾಲ ವೈಕುಂಠದಲ್ಲಿ ವಾಸ. ಛತ್ರದಾನವಿತ್ತರೆ ವರುಣಲೋಕದಲ್ಲಿ ಹತ್ತು ಸಾವಿರ ವರ್ಷಕಾಲ ವಾಸ. ಪಾದುಕಾದಾನದಿಂದ ವಾಯುಲೋಕ ವಾಸ. ಶಯ್ಯಾದಾನದಿಂದ ಚಂದ್ರಲೋಕವಾಸ. ದೀಪದಾನದಿಂದ ಬ್ರಹ್ಮಲೋಕವಾಸ. ಗಜದಾನದಿಂದ ದೇವಲೋಕವಾಸ. ಅಶ್ವದಾನದಿಂದ ವರುಣಲೋಕವಾಸ. ಶಿಬಿಕಾದಾನದಿಂದ ವಿಷ್ಣುಲೋಕವಾಸ. ವ್ಯಜನದಾನದಿಂದ ವಾಯುಲೋಕವಾಸ. ಧಾನ್ಯರಾಶಿ ದಾನದಿಂದ ವಿಷ್ಣುಲೋಕವಾಸ.

ಹರಿನಾಮವನ್ನು ಸತತ ಜಪಿಸುವವ ಚಿರಂಜೀವಿಯಾಗುತ್ತಾನೆ. ಮೃತ್ಯು ಅವನಿಂದ ದೂರ ಓಡುತ್ತದೆ. ಹುಣ್ಣಿಮೆ ರಾತ್ರಿ ಕೊನೆವರೆಗೂ ಹರಿಗೆ ದೋಲೋತ್ಸವ ಮಾಡಿಸಿದರೆ ಜೀವನ್ಮುಕ್ತಿ ಲಭಿಸುತ್ತದೆ. ಈ ಲೋಕದಲ್ಲಿ ಸುಖಿ. ಬಳಿಕ ನೂರು ಮನ್ವಂತರಕಾಲ ವಿಷ್ಣುಲೋಕವಾಸ. ಉತ್ತರಫಲ್ಗುನೀ ನಕ್ಷತ್ರದಲ್ಲಿ ದೋಲೋತ್ಸವ ಮಾಡಿಸಿದರೆ ಎರಡರಷ್ಟು ಫಲ. ಕಲ್ಪದ ಕೊನೆವರೆಗೂ ವಿಷ್ಣುಲೋಕವಾಸ.

ವಿಪ್ರನಿಗೆ ತಿಲದಾನ ಮಾಡಿದರೆ ವಿಷ್ಣುಲೋಕಪ್ರಾಪ್ತಿ. ತಾಮ್ರಪಾತ್ರದಲ್ಲಿ ತಿಲದಾನ ಮಾಡಿದರೆ ಎರಡರಷ್ಟು ಫಲ. ಸಾಲಂಕೃತ ಕನ್ಯಾದಾನ ಮಾಡಿದರೆ ಚಂದ್ರಲೋಕ ಪ್ರಾಪ್ತಿ. ವೃಕ್ಷದಾನದಿಂದ ಇಂದ್ರಲೋಕ ಪ್ರಾಪ್ತಿ. ಫಲದಾನದಿಂದಲೂ ಸ್ವರ್ಗವಾಸ. ಗೃಹದಾನದಿಂದ ಕುಬೇರಲೋಕ ಪ್ರಾಪ್ತಿ. ಭೂದಾನದಿಂದ ವೈಕುಂಠ ಪ್ರಾಪ್ತಿ. ಅಗ್ರಹಾರಗಳನ್ನಿತ್ತರೂ ವೈಕುಂಠ ಪ್ರಾಪ್ತಿ.

ಕಾರ್ತಿಕ ಮಾಸದಲ್ಲಿ ಶ್ರೀಹರಿಗೆ ತುಲಸಿಯನ್ನು ಸಮರ್ಪಿಸಿದರೆ ಎಷ್ಟು ದಳಗಳನ್ನು ಸಮರ್ಪಿಸುವನೋ ಅಷ್ಟು ಯುಗಗಳ ಕಾಲ ವಿಷ್ಣುಲೋಕವಾಸ. ಕಾರ್ತಿಕದಲ್ಲಿ ಹರಿಗೆ ತುಪ್ಪದ ದೀಪ ಬೆಳಗಿದರೂ ವಿಷ್ಣುಲೋಕವಾಸ. ಮಾಘಮಾಸದಲ್ಲಿ ಅರುಣೋದಯ ಕಾಲದಲ್ಲಿ ಗಂಗಾಸ್ನಾನ ಮಾಡಿದರೆ ಅರವತ್ತು ಸಾವಿರ ಯುಗಗಳ ಕಾಲ ವಿಷ್ಣುಲೋಕವಾಸ. ಮಾಘಮಾಸದ ಅರುಣೋದಯದಲ್ಲಿ ಪ್ರಯಾಗದಲ್ಲಿ ಗಂಗಾ ಸ್ನಾನಮಾಡಿದರೆ ಲಕ್ಷ ಮನ್ವಂತರಕಾಲ ವೈಕುಂಠವಾಸ. ನಿತ್ಯಗಂಗಾಸ್ನಾನ ಮಾಡುವವ ಸೂರ್ಯನಂತೆ ಪವಿತ್ರ. ಅವನಿಗೆ ಹೆಜ್ಜೆ ಹೆಜ್ಜೆಗೂ ಅಶ್ವಮೇಧ ಫಲ. ಅವನ ಪಾದದೂಳಿಯಿಂದ ಭೂಮಿ ಪವಿತ್ರವಾಗುವುದು. ಚಂದ್ರಸೂರ್ಯರಿರುವಷ್ಟು ಕಾಲ ಅವನಿಗೆ ವೈಕುಂಠವಾಸ.

ಮೀನ ಕರ್ಕಟ ಮಾಸಗಳಲ್ಲಿ ತೀಕ್ಷ್ಣ ಬಿಸಿಲಿನ ಕಾಲದಲ್ಲಿ ಜಲದಾನ ಮಾಡಿದರೆ ಹದಿನಾಲ್ಕು ಇಂದ್ರರ ಕಾಲ ವೈಕುಂಠ ವಾಸ. ವೈಶಾಖದಲ್ಲಿ ಹರಿಗೆ ಚಂದನ ಗಂಧ ಅರ್ಪಿಸಿದರೆ ಅರವತ್ತು ಸಾವಿರ ಯುಗಗಳ ಕಾಲ ವಿಷ್ಣುಲೋಕ ವಾಸ. ವೈಶಾಖದಲ್ಲಿ ವಿಪ್ರನಿಗೆ ಸಕ್ತುದಾನ ಮಾಡಿದರೆ ವಿಷ್ಣುಲೋಕ ಪ್ರಾಪ್ತಿ. ಕೃಷ್ಣ ಜನ್ಮಾಷ್ಟಮೀ ಆಚರಣೆ-ಯಿಂದ ನೂರು ಜನ್ಮಗಳ ಪಾಪ ಪರಿಹಾರ. ಹದಿನಾಲ್ಕು ಇಂದ್ರರ ಕಾಲ ವೈಕುಂಠ-ವಾಸ. ಕೃಷ್ಣಭಕ್ತಿಲಾಭ. ಶಿವರಾತ್ರಿ ಆಚರಿಸಿದರೆ ಶಿವಲೋಕ ಪ್ರಾಪ್ತಿ. ಏಳು ಮನ್ವಂತರ ಕಾಲ ಅಲ್ಲಿವಾಸ. ಶಿವರಾತ್ರಿ ಶಿವನಿಗೆ ಬಿಲ್ವಪತ್ರದಿಂದ ಅರ್ಚನೆ ಮಾಡಿದರೆ ಎಷ್ಟು ಪತ್ರಗಳಿಂದ ಅರ್ಚಿಸುವನೋ ಅಷ್ಟು ಯುಗಗಳ ಕಾಲ ಶಿವಲೋಕ ವಾಸ.

ಚೈತ್ರ ಅಥವಾ ಮಾಘಮಾಸದಲ್ಲಿ ಶಿವನನ್ನು ಅರ್ಚಿಸಿ ಹಗಲು ರಾತ್ರಿ ಶಿವನ ಮುಂದೆ ಕೈಯಲ್ಲಿ ಬೆತ್ತ ಹಿಡಿದು ನರ್ತನಸೇವೆ ಮಾಡುವವ ಶಿವಲೋಕ ಸೇರುತ್ತಾನೆ. ಒಂದು ತಿಂಗಳು ಅರ್ಧತಿಂಗಳು ಹತ್ತುದಿನ ಅಥವಾ ಏಳುದಿನವಾದರೂ ನರ್ತನ ಸೇವೆ ಮಾಡುವವ ಎಷ್ಟುದಿನ ಸೇವೆ ಮಾಡುವನೋ ಅಷ್ಟು ಯುಗಗಳ ಕಾಲ ಶಿವಲೋಕದಲ್ಲಿರುವನು.

ಶ್ರೀರಾಮನವಮಿಯನ್ನು ಆಚರಿಸುವವನು ಏಳು ಮನ್ವಂತರಕಾಲ ವಿಷ್ಣುಲೋಕ-ದಲ್ಲಿ ವಾಸ ಮಾಡುವನು. ಶರತ್ಕಾಲದಲ್ಲಿ ಪ್ರಕೃತಿದೇವಿಯನ್ನು ಆರಾಧಿಸುವವನು ಏಳು ಮನ್ವಂತರಕಾಲ ಶಿವಲೋಕದಲ್ಲಿ ವಾಸಮಾಡುವನು. ಭಾದ್ರಪದ ಶುಕ್ಲ ಅಷ್ಟಮೀದಿನ ಮಹಾಲಕ್ಷ್ಮಿಯನ್ನು ಪೂಜಿಸುವವನು ಚಂದ್ರ ಸೂರ್ಯರಿರುವಷ್ಟು ಕಾಲ ವೈಕುಂಠದಲ್ಲಿ ವಾಸ ಮಾಡುವನು. ಕಾರ್ತಿಕ ಹುಣ್ಣಿಮೆ ದಿನ ರಾಸಮಂಡಲದಲ್ಲಿ ನೂರು ಗೋಪಾಲಕರು ಮತ್ತು ನೂರು ಗೋಪಿಯರೊಡನೆ ರಾಧಾ ಸಮೇತನಾದ ಕೃಷ್ಣನನ್ನು ಪೂಜಿಸುವವನು ಬ್ರಹ್ಮನ ಆಯುಷ್ಯದಷ್ಟು ಕಾಲ ಗೋಲೋಕದಲ್ಲಿ ವಾಸ ಮಾಡುತ್ತಾನೆ.

ಶುಕ್ಲಪಕ್ಷದಲ್ಲಾಗಲಿ ಕೃಷ್ಣಪಕ್ಷದಲ್ಲಾಗಲಿ ಏಕಾದಶೀ ವ್ರತವನ್ನು ಆಚರಿಸುವವನು ಬ್ರಹ್ಮನ ಆಯುಷ್ಯದಷ್ಟು ಕಾಲ ವೈಕುಂಠದಲ್ಲಿ ವಾಸ ಮಾಡುವನು. ಭಾದ್ರಪದ ಶುಕ್ಲ ದ್ವಾದಶಿದಿನ ಇಂದ್ರನನ್ನು ಪೂಜಿಸುವವನು ಅರವತ್ತು ಸಾವಿರವರ್ಷ ಇಂದ್ರಲೋಕ-ದಲ್ಲಿ ವಾಸ ಮಾಡುವನು. ಭಾನುವಾರ, ಸೂರ್ಯಸಂಕ್ರಮಣ ಮತ್ತು ಶುಕ್ಲಪಕ್ಷದ ಸಪ್ತಮೀ ದಿನಗಳಲ್ಲಿ ಸೂರ್ಯನನ್ನು ಪೂಜಿಸುವವನು ಚಂದ್ರ ಸೂರ್ಯರಿರುವಷ್ಟು ಕಾಲ ಸೂರ್ಯಲೋಕದಲ್ಲಿರುತ್ತಾನೆ. ಜ್ಯೇಷ್ಠಶುಕ್ಲ ಚತುರ್ದಶಿ ಸಾವಿತ್ರೀ ಪೂಜೆಯಿಂದ ಏಳು ಮನ್ವಂತರ ಕಾಲ ಬ್ರಹ್ಮಲೋಕವಾಸ. ಮಾಘಶುಕ್ಲ ಪಂಚಮಿ ಸರಸ್ವತೀ ಪೂಜೆಯಿಂದ ಬ್ರಹ್ಮನ ಒಂದು ದಿನ ಪೂರ್ತಿ ವೈಕುಂಠವಾಸ.

ವಿಷ್ಣುನಾಮ ಮಂತ್ರವನ್ನು ಜಪಿಸುವವನು ಇತರರಿಗೆ ಉಪದೇಶಿಸುವವನೂ ಮಂತ್ರದಲ್ಲಿ ಎಷ್ಟು ಅಕ್ಷರಗಳಿವೆಯೋ ಅಷ್ಟು ಯುಗಗಳ ಕಾಲ ವಿಷ್ಣುಲೋಕ-ದಲ್ಲಿರುವನು. ನಾರಾಯಣ ಕ್ಷೇತ್ರದಲ್ಲಿ ಹೀಗೆ ಮಾಡಿದರೆ ಕೋಟಿಪಾಲು ಅಧಿಕಫಲ. ಹರಿನಾಮದ ಕೋಟಿ ಜಪದಿಂದ ಸರ್ವಪಾಪಕಳೆದುಕಂಡು ಜೀವನ್ಮುಕ್ತನಾಗಿ ವೈಕುಂಠ ಸೇರುವನು. ವಿಷ್ಣುವಿನ ಸಾರೂಪ್ಯ ಪಡೆಯುವನು. ಅವನು ಸಂಸಾರಕ್ಕೆ ಹಿಂತಿರುಗಿ ಬರುವುದಿಲ್ಲ.

ಬದುಕಿರುವಷ್ಟು ಕಾಲವೂ ಶಿವನ ಪಾರ್ಥಿವ ಲಿಂಗವನ್ನು ಪೂಜಿಸುವವನು ಆ ಲಿಂಗದಲ್ಲಿ ಮಣ್ಣಿನ ಕಣಗಳೆಷ್ಟಿವೆಯೋ ಅಷ್ಟು ವರ್ಷಕಾಲ ಶಿವಲೋಕವಾಸ ಲಭಿಸುವುದು. ಬಳಿಕ ಭಾರತ ಭೂಮಿಗೆ ಚಕ್ರವರ್ತಿಯಾಗಿ ಜನಿಸುವನು. ನಿತ್ಯವೂ ಶಾಲಗ್ರಾಮವನ್ನು ಅರ್ಚಿಸಿ ಶಾಲಗ್ರಾಮ ತೀರ್ಥವನ್ನು ಸೇವಿಸುವವನು ನೂರು ಬ್ರಹ್ಮರ ಆಯುಷ್ಯದಷ್ಟು ಕಾಲ ವೈಕುಂಠದಲ್ಲಿ ವಾಸಿಸುವನು.

ಭೂ ಪ್ರದಕ್ಷಿಣೆ ಮಾಡುತ್ತ ಸರ್ವತೀರ್ಥಗಳಲ್ಲಿ ಸ್ನಾನ ಮಾಡುವವನಿಗೆ ಮೋಕ್ಷ ದೊರಕುವುದು. ಅವನಿಗೆ ಭೂಮಿಯಲ್ಲಿ ಜನನವಿಲ್ಲ. ಪುಣ್ಯಕ್ಷೇತ್ರವಾದ ಭಾರತದಲ್ಲಿ ಅಶ್ವಮೇಧಯಾಗ ಮಾಡಿದರೆ ಆ ಅಶ್ವದ ಮೈಮೇಲೆ ಎಷ್ಟು ರೋಮಗಳಿವೆಯೋ ಅಷ್ಟು ವರ್ಷ ಇಂದ್ರನ ಅರ್ಧಾಸನ ದೊರೆಯುವುದು. ರಾಜಸೂಯ ಮಾಡಿದರೆ ಇನ್ನೂ ನಾಲ್ಕರಷ್ಟು ಹೆಚ್ಚುಫಲ. ನರಮೇಧ ಗೋಮೇಧಗಳಿಗೆ ಅಶ್ವಮೇಧದ ಅರ್ಧದಷ್ಟು ಫಲ. ಪುತ್ರೇಷ್ಟಿಗೆ ಅದರ ಅರ್ಧದಷ್ಟು ಫಲ. ಒಳ್ಳೆಯ ಪುತ್ರನನ್ನು ಪಡೆಯುತ್ತಾನೆ. ಲಾಂಗಲೇಷ್ಟಿಗೂ ಗೋಮೇಧದಷ್ಟು ಫಲ. ವಿಪ್ರೇಷ್ಟಿ ವೃದ್ಧಿಯಾಗ-ಗಳಿಗೂ ಅಷ್ಟೇ ಫಲ. ಪದ್ಮಯಜ್ಞಕ್ಕೆ ಅದರ ಅರ್ಧದಷ್ಟು ಫಲ. ವಿಶೋಕಯಾಗದಿಂದ ಪದ್ಮಯಾಗದ ಅರ್ಧದಷ್ಟು ಫಲ. ವಿಶೋಕವೆಂಬ ಸ್ವರ್ಗವನ್ನು ಪಡೆಯುತ್ತಾನೆ. ವಿಜಯಯಾಗದಿಂದ ಪದ್ಮಯಾಗಕ್ಕೆ ಸಮಾನವಾದ ಫಲ. ರಾಜ ವಿಜಯ ಪಡೆಯು-ತ್ತಾನೆ. ಪ್ರಾಜಾಪತ್ಯಯಾಗದಿಂದ ರಾಜರಿಗೆ ರಾಜ್ಯ ಬೆಳೆಯುತ್ತದೆ. ಪ್ರಜೆಗಳೂ

ಲಭಿಸುತ್ತಾರೆ. ರಾಜಲಕ್ಷ್ಮಿ ಮತ್ತು ಪದ್ಮಯಾಗದ ಅರ್ಧದಷ್ಟು ಸ್ವರ್ಗಸುಖ ಲಭಿಸು-ತ್ತದೆ. ಋದ್ಧಿಯಾಗದಿಂದ ಮಹಾ ಐಶ್ವರ್ಯ ಮತ್ತು ಪದ್ಮಯಾಗದಷ್ಟು ಸ್ವರ್ಗಸುಖ ಲಭಿಸುತ್ತದೆ.

ಸಾವಿತ್ರಿ, ಸಕಲ ಯಜ್ಞಗಳಲ್ಲಿಯೂ ವಿಷ್ಣುಯಜ್ಞ ಪ್ರಧಾನ. ಹಿಂದೆ ಎಲ್ಲ ಸಿದ್ಧತೆ-ಗಳೊಂದಿಗೆ ಒಂದು ವಿಷ್ಣುಯಜ್ಞವನ್ನು ಬ್ರಹ್ಮ ಮಾಡಿದ. ಆ ಯಜ್ಞದಲ್ಲಿಯೆ ದಕ್ಷನಿಗೂ ಶಿವನಿಗೂ ಕಲಹ ಉಂಟಾಯಿತು. ಮುನಿಗಳು ನಂದಿಯನ್ನೂ ನಂದಿ ಮುನಿಗಳನ್ನೂ ಕೋಪದಿಂದ ಶಪಿಸಿದರು. ಬಳಿಕ ದಕ್ಷಯಜ್ಞವನ್ನು ಶಿವ ನಾಶ ಮಾಡಿದ. ಹೀಗೆ ಮೊದಲಿಗೆ ದಕ್ಷ ಪ್ರಜಾಪತಿ, ಧರ್ಮ ಕಶ್ಯಪ, ಆದಿಶೇಷ, ಕರ್ದಮ, ಸ್ವಾಯಂಭುವ ಮನು, ಅವನ ಮಗನಾದ ಪ್ರಿಯವ್ರತ, ಶಿವ, ಸನತ್ಕುಮಾರ, ಕಪಿಲ, ಧ್ರುವ ಇವರೆಲ್ಲ ವಿಷ್ಣುಯಜ್ಞ ಮಾಡಿದರು. ಒಂದು ವಿಷ್ಣುಯಜ್ಞಕ್ಕೆ ಸಾವಿರ ರಾಜಸೂಯಯಾಗದ ಫಲವಿದೆ.

**ವಿಷ್ಣುಯಜ್ಞಾತ್ ಪರೋ ಯಜ್ಞೋ ನಾಸ್ತಿ ವೇದೇ ಫಲಪ್ರದಃ ।**

ವಿಷ್ಣುಯಜ್ಞಕ್ಕಿಂತ ಮೇಲಾದ ಫಲಪ್ರದವಾದ ಯಜ್ಞ ವೇದದಲ್ಲಿ ಬೇರೆ ಯಾವುದೂ ಇಲ್ಲ. ವಿಷ್ಣುಯಜ್ಞ ಮಾಡುವವ ಕಲ್ಪದವರೆಗೂ ಜೀವಿಸಿ ಜೀವನ್ಮುಕ್ತ-ನಾಗಿ ವಿಷ್ಣುವಿನ ಸಾರೂಪ್ಯ ರೂಪವಾದ ಮೋಕ್ಷ ಪಡೆಯುತ್ತಾನೆ. ದೇವತೆಗಳಲ್ಲಿ ವಿಷ್ಣು, ವಿಷ್ಣುಭಕ್ತರಲ್ಲಿ ಶಿವ, ಶಾಸ್ತ್ರಗಳಲ್ಲಿ ವೇದ, ವರ್ಣಗಳಲ್ಲಿ ಬ್ರಾಹ್ಮಣ, ತೀರ್ಥ-ಗಳಲ್ಲಿ ಗಂಗೆ, ಪವಿತ್ರರಲ್ಲಿ ವಿಷ್ಣುಭಕ್ತರು, ವ್ರತಗಳಲ್ಲಿ ಏಕಾದಶಿ, ಪುಷ್ಪಗಳಲ್ಲಿ ತುಳಸಿ, ನಕ್ಷತ್ರಗಳ ನಡುವೆ ಚಂದ್ರ, ಪಕ್ಷಿಗಳಲ್ಲಿ ಗರುಡ, ಸ್ತ್ರೀಯರಲ್ಲಿ ಪ್ರಕೃತಿ, ಆಧಾರಗಳಲ್ಲಿ ಭೂಮಿ, ಇಂದ್ರಿಯಗಳಲ್ಲಿ ಮನಸ್ಸು, ಪ್ರಜಾಪತಿಗಳಲ್ಲಿ ಬ್ರಹ್ಮ, ಪ್ರಜೇಶರಲ್ಲಿ ಪ್ರಜಾಪತಿ, ವನಗಳಲ್ಲಿ ವೃಂದಾವನ, ವರ್ಷಗಳಲ್ಲಿ ಭಾರತವರ್ಷ, ಶ್ರೀಮಂತರಲ್ಲಿ ಲಕ್ಷ್ಮಿ, ವಿದ್ವಾಂಸರಲ್ಲಿ ಸರಸ್ವತಿ, ಪತಿವ್ರತೆಯರಲ್ಲಿ ದುರ್ಗೆ, ಸೌಭಾಗ್ಯವತಿಯರಲ್ಲಿ ರಾಧೆ ಹೇಗೆ ಶ್ರೇಷ್ಠರೋ ಹಾಗೇ ಯಜ್ಞಗಳಲ್ಲಿ ವಿಷ್ಣುಯಜ್ಞ ಶ್ರೇಷ್ಠ.

ಸರ್ವತೀರ್ಥಗಳಲ್ಲಿ ಸ್ನಾನ ಮಾಡುವುದು, ಸರ್ವಯಜ್ಞಗಳಲ್ಲಿ ದೀಕ್ಷೆಗೊಳ್ಳುವುದು, ಸರ್ವವ್ರತ ತಪಸ್ಸುಗಳ ಅನುಷ್ಠಾನ, ನಾಲ್ಕು ವೇದಗಳ ಪಾರಾಯಣ, ಭೂಪ್ರದಕ್ಷಿಣೆ ಇವೆಲ್ಲಕ್ಕೂ ಫಲವೂ ಸಾಧನವೂ ಮುಕ್ತಿದಾಯಕವಾದ ವಿಷ್ಣುಸೇವೆಯೆ. ವೇದ ಇತಿಹಾಸ ಪುರಾಣಗಳಲ್ಲೆಲ್ಲ ಶ್ರೇಷ್ಠವಾದ ಕೃಷ್ಣಪಾದ ಪದ್ಮಾರಾಧನೆಯೆ ವಿಹಿತವಾಗಿದೆ. ಕೃಷ್ಣನ ವರ್ಣನ, ಧ್ಯಾನ, ನಾಮ ಸಂಕೀರ್ತನ, ಗುಣಗಾನ, ಸ್ತೋತ್ರ, ಸ್ಮರಣ, ವಂದನ, ಜಪ, ಪಾದೋದಕ ಪಾನ, ನೈವೇದ್ಯ ಭಕ್ಷಣ, ಇವನ್ನು ನಿತ್ಯ ಆಚರಿಸುವುದೇ ಸಕಲಶಾಸ್ತ್ರ ಸಮ್ಮತ, ಸರ್ವಾಭೀಷ್ಟಪ್ರದ.

ಮಗಳೆ, ಸಾವಿತ್ರಿ, ಸತ್ವಾದಿಗುಣತ್ರಯರಹಿತನಾದ ಪ್ರಕೃತಿಗಿಂತ ಶ್ರೇಷ್ಠನಾದ ಪರಬ್ರಹ್ಮನೆನಿಸಿದ. ಕೃಷ್ಣನನ್ನು ಭಜಿಸು. ನಿನ್ನ ಪತಿಯನ್ನು ಸ್ವೀಕರಿಸು. ಸುಖವಾಗಿ ನಿನ್ನ ಮನೆಗೆ ಹಿಂತಿರುಗು. ಕರ್ಮವಿಪಾಕವನ್ನೆಲ್ಲ ನಾನು ನಿನಗೆ ಹೇಳಿದ್ದೇನೆ. ಅದು ಸರ್ವಸಮ್ಮತ.

**ಇಲ್ಲಿಗೆ ಶ್ರೀ ಬ್ರಹ್ಮವೈವರ್ತ ಮಹಾಪುರಾಣದಲ್ಲಿ ಎರಡನೆಯದಾದ ಪ್ರಕೃತಿಖಂಡದ ನಾರದನಾರಾಯಣ ಸಂವಾದದಲ್ಲಿ ಸಾವಿತ್ರ್ಯುಪಾಖ್ಯಾನದ ಸಾವಿತ್ರೀಯಮ ಸಂವಾದದಲ್ಲಿ ಶುಭಕರ್ಮವಿಪಾಕ ಕಥನವೆಂಬ ಇಪ್ಪತ್ತೇಳನೆ ಅಧ್ಯಾಯ ಮುಗಿಯಿತು.**

## ಸಾವಿತ್ರೀಕೃತಯಮ ಸ್ತೋತ್ರ

**ಅಧ್ಯಾಯ-೨೮**

ನಾರಾಯಣ ಮಹರ್ಷಿ ಹೇಳಿದ— ಹರಿಯ ಮಹಿಮೆಯನ್ನು ಯಮನ ಮುಖದಿಂದ ಕೇಳಿದ ಸಾವಿತ್ರಿ ಆನಂದದಿಂದ ರೋಮಾಂಚಗೊಂಡು ಕಣ್ಣಲ್ಲಿ ನೀರು ತುಂಬಿಕೊಂಡು ಪುನಃ ಯಮನ ಮುಂದೆ ನುಡಿದಳು— 'ಹರಿಯ ಮಹಿಮೆಯನ್ನು ವರ್ಣಿಸುವುದರಿಂದ ಕುಲ ಉದ್ಧಾರವಾಗುವುದು. ಶ್ರೋತೃಗಳಿಗೂ ವಕ್ತೃಗಳಿಗೂ ಜನನ ಮರಣ ಜರೆಗಳನ್ನು ಪರಿಹರಿಸುವುದು.

ದಾನ, ವ್ರತ, ತಪಃಸಿದ್ಧಿ, ಯೋಗ, ವೇದಾಭ್ಯಾಸ ಇವೆಲ್ಲಕ್ಕೂ ಹರಿನಾಮ ಕೀರ್ತನೆಯೆ ಫಲರೂಪವಾಗಿದೆ. ಮುಕ್ತತ್ವ ಅಮರತ್ವ ಸರ್ವಸಿದ್ಧಿಗಳೆಲ್ಲ ಕೃಷ್ಣಸೇವೆಯ ಹದಿನಾರನೆ ಒಂದಂಶಕ್ಕೆ ಸಮಾನವಾಗಲಾರವು. ಆದ್ದರಿಂದ ಕೃಷ್ಣನನ್ನು ಸೇವಿಸುವ ವಿಧಾನವನ್ನು ಹೇಳು. ನಾನು ಅಬಲೆ, ಜ್ಞಾನಹೀನಳು. ನೀನು ವೇದವೇತ್ತರಲ್ಲಿ ಶ್ರೇಷ್ಠ. ಶುಭಕರ್ಮವಿಪಾಕವನ್ನು ನಿನ್ನ ಮುಖದಿಂದ ಕೇಳಿದೆ. ಇನ್ನು ಅಶುಭಕರ್ಮ-ವಿಪಾಕವನ್ನು ಹೇಳು.

ಹೀಗೆ ಹೇಳಿ ಸಾವಿತ್ರಿ ಭಕ್ತಿಯಿಂದ ತಲೆಬಾಗಿ ವೇದೋಕ್ತವಾದ ಸ್ತೋತ್ರದಿಂದ ಯಮನನ್ನು ಕೊಂಡಾಡಿದಳು-

**ತಪಸಾ ಧರ್ಮ ಮಾರಾಧ್ಯ ಪುಷ್ಕರೇ ಭಾಸ್ಕರಃ ಪುರಾ ।**
**ಧರ್ಮಾಂಶಂ ಯಂ ಸುತಂ ಪ್ರಾಪ ಧರ್ಮರಾಜಂ ನಮಾಮ್ಯಹಂ ॥**

ಹಿಂದೆ ಪುಷ್ಕರಕ್ಷೇತ್ರದಲ್ಲಿ ಸೂರ್ಯ ಧರ್ಮನನ್ನು ತಪಸ್ಸಿನಿಂದ ಆರಾಧಿಸಿ ಅವನ ಅಂಶಸಂಭೂತನಾದ ನಿನ್ನನ್ನು ಮಗನನ್ನಾಗಿ ಪಡೆದ. ಆದರಿಂದ ನೀನು ಧರ್ಮರಾಜ-ನೆನಿಸಿದಿ. ಅಂಥ ನಿನ್ನನ್ನು ನಮಿಸುವೆನು.

**ಸಮತಾ ಸರ್ವಭೂತೇಷು ಯಸ್ಯ ಸರ್ವಸ್ಯ ಸಾಕ್ಷಿಣಃ ।**
**ಅತೋ ಯನ್ನಾಮ ಶಮನಮಿತಿ ತಂ ಪ್ರಣಮಾಮ್ಯಹಂ ॥**

ಸರ್ವಸಾಕ್ಷಿಯಾದ ನೀನು ಎಲ್ಲ ಜೀವಿಗಳ ವಿಷಯದಲ್ಲಿಯೂ ಸಮನಾಗಿರುವುದರಿಂದ ಶಮನ ಎಂದು ಹೆಸರು. ಅಂಥ ನಿನಗೆ ನಮಸ್ಕಾರ.

**ಯೇನಾಂತಶ್ಚ ಕೃತೋ ವಿಶ್ವೇ ಸರ್ವೇಷಾಂ ಜೀವಿನಾಂ ಪರಂ ।**
**ಕರ್ಮಾನುರೂಪಕಾಲೇನ ತಂ ಕೃತಾಂತಂ ನಮಾಮ್ಯಹಂ ॥**

ಕಾಲಕರ್ಮಾನುಸಾರವಾಗಿ ವಿಶ್ವದಲ್ಲಿರುವ ಸಮಸ್ತ ಜೀವಿಗಳಿಗೂ ಅಂತಕನೆನಿಸುವುದರಿಂದ ಕೃತಾಂತನೆನಿಸಿದ ನಿನಗೆ ನಮಸ್ಕಾರ.

**ಬಿಭರ್ತಿ ದಂಡಂ ದಂಡ್ಯಾಯ ಪಾಪಿನಾಂ ಶುದ್ಧಿ ಹೇತವೇ ।**
**ನಮಾಮಿ ತಂ ದಂಡಧರಂ ಯಃ ಶಾಸ್ತಾ ಸರ್ವಕರ್ಮಣಾಂ ॥**

ಸರ್ವಕರ್ಮಗಳನ್ನೂ ನಿಯಮಿಸುವ ನೀನು ಪಾಪಿಗಳ ಶುದ್ಧಿಗಾಗಿ ದಂಡ್ಯರಿಗೆ ದಂಡ ವಿಧಿಸುವಿ. ಆದರಿಂದ ದಂಡಧರನೆನಿಸಿದ ನಿನಗೆ ನಮಸ್ಕಾರ.

**ವಿಶ್ವೇ ಯಃ ಕಲಯತ್ಯೇವ ಸರ್ವಾಯುಶ್ಚಾಪಿ ಸಂತತಂ ।**
**ಅತೀವ ದುರ್ನಿವಾರ್ಯಂ ಚ ತಂ ಕಾಲಂ ಪ್ರಣಮಾಮ್ಯಹಂ ॥**

ವಿಶ್ವದ ಸಮಸ್ತ ಜೀವಿಗಳ ಆಯುಸ್ಸನ್ನು ನಿಯಮಿಸುತ್ತ ಯಾರಿಗೂ ನಿವಾರಿಸಲಾಗದಂಥವನಾದ್ದರಿಂದ ಕಾಲನೆನಿಸಿದ ನಿನಗೆ ನಮಸ್ಕಾರ.

**ತಪಸ್ವೀ ವೈಷ್ಣವೋ ಧರ್ಮೀ ಸಂಯಮೀ ವಿಜಿತೇಂದ್ರಿಯಃ ।**
**ಜೀವಿನಾಂ ಕರ್ಮಫಲದಂ ತಂ ಯಮಂ ಪ್ರಣಮಾಮ್ಯಹಂ ॥**

ನೀನು ತಪಸ್ವಿ ವಿಷ್ಣುಭಕ್ತ ಧರ್ಮಪರ ಸಂಯಮಿ ಜಿತೇಂದ್ರಿಯ ಜೀವಿಗಳಿಗೆ ಕರ್ಮಫಲದಾಯಕ. ಆದರಿಂದ ಯಮನೆನಿಸಿದ ನಿನಗೆ ನಮಸ್ಕಾರ.

**ಸ್ವಾತ್ಮಾರಾಮಶ್ಚ ಸರ್ವಜ್ಞೋ ಮಿತ್ರಂ ಪುಣ್ಯಕೃತಾಂ ಭವೇತ್ ।**
**ಪಾಪಿನಾಂ ಕ್ಲೇಶದೋ ಯಶ್ಚ ಪುಣ್ಯಮಿತ್ರಂ ನಮಾಮ್ಯಹಂ ॥**

ಸ್ವಾತ್ಮಾರಾಮ, ಸರ್ವಜ್ಞ, ಪುಣ್ಯಕರ್ಮ ಮಾಡುವವರಿಗೆ ಮಿತ್ರ, ಪಾಪಿಗಳಿಗೆ ದುಃಖದಾಯಕ ನೀನು. ಆದರಿಂದ ಪುಣ್ಯಮಿತ್ರನೆನಿಸಿದ ನಿನಗೆ ನಮಸ್ಕಾರ.

**ಯಜ್ಜನ್ಮ ಬ್ರಹ್ಮಣೋ ವಂಶೇ ಜ್ವಲಂತಂ ಬ್ರಹ್ಮತೇಜಸಾ ।**
**ಯೋ ಧ್ಯಾಯತಿ ಪರಂ ಬ್ರಹ್ಮ ಬ್ರಹ್ಮವಂಶಂ ನಮಾಮ್ಯಹಂ ॥**

ಬ್ರಹ್ಮನ ವಂಶದಲ್ಲಿ ಜನಿಸಿ ಪರಬ್ರಹ್ಮನನ್ನು ಧ್ಯಾನಿಸುತ್ತ ಬ್ರಹ್ಮತೇಜಸ್ಸಿನಿಂದ ಜ್ವಲಿಸುವ ನೀನು ಬ್ರಹ್ಮವಂಶನೆನಿಸಿದಿ. ಅಂಥ ನಿನಗೆ ನಮಸ್ಕಾರ.

ಹೀಗೆ ಸಾವಿತ್ರಿ ಯಮನನ್ನು ಸ್ತುತಿಸಿ ನಮಿಸಿದಳು. ಯಮ ಅವಳಿಗೆ ವಿಷ್ಣು ಸೇವಾವಿಧಿಯನ್ನೂ ಅಶುಭ ಕರ್ಮವಿಪಾಕವನ್ನೂ ಬೋಧಿಸಿದ. ಯಮನನ್ನು ಸ್ತುತಿಸುವ ಈ ಎಂಟು ಶ್ಲೋಕಗಳನ್ನು ಪ್ರಾತಃಕಾಲದಲ್ಲಿ ಪಠಿಸುವವ ಸರ್ವಪಾಪ-ಮುಕ್ತನಾಗಿ ಯಮನ ಭಯದಿಂದಲೂ ಮುಕ್ತನಾಗುತ್ತಾನೆ. ಮಹಾಪಾಪಿಯೂ ಭಕ್ತಿಯಿಂದ ಪಠಿಸಿದರೆ ಯಮ ಅವನನ್ನು ಪರಿಶುದ್ಧನನ್ನಾಗಿ ಮಾಡುತ್ತಾನೆ.

**ಇಲ್ಲಿಗೆ ಶ್ರೀ ಬ್ರಹ್ಮವೈವರ್ತ ಮಹಾಪುರಾಣದಲ್ಲಿ ಎರಡನೆಯದಾದ ಪ್ರಕೃತಿಖಂಡದ ನಾರದನಾರಾಯಣ ಸಂವಾದದಲ್ಲಿ ಸಾವಿತ್ರೀಕೃತ ಯಮಸ್ತೋತ್ರವೆಂಬ ಇಪ್ಪತ್ತೆಂಟನೆ ಅಧ್ಯಾಯ ಮುಗಿಯಿತು.**

## ಯಮನಿಂದ ಸಾವಿತ್ರಿಗೆ ವಿಷ್ಣುಮಂತ್ರ ಉಪದೇಶ ಮತ್ತು ಎಂಬತ್ತಾರು ನರಕಗಳ ನಾಮಕಥನ

**ಅಧ್ಯಾಯ-೨೯**

ಯಮ ಸಾವಿತ್ರಿಗೆ ವಿಷ್ಣುಮಂತ್ರವನ್ನು ವಿದ್ಯುಕ್ತವಾಗಿ ಉಪದೇಶಿಸಿ ಅಶುಭ-ಕರ್ಮವಿಪಾಕದ ಬಗ್ಗೆಯೂ ಉಪದೇಶಿಸಿದ.

ಜೀವ ಸತ್ಕರ್ಮಗಳಿಂದ ನಾನಾ ಬಗೆಯ ಸ್ವರ್ಗವನ್ನು ಪಡೆವಂತೆ ದುಷ್ಕರ್ಮ-ಗಳಿಂದ ನಾನಾ ಬಗೆಯ ನರಕವನ್ನೂ ಪಡೆಯುತ್ತಾನೆ. ನಾನಾವಿಧ ನರಕಗಳು ಕ್ಲೇಶದಾಯಕ ಭಯಂಕರ ಘೋರವಾಗಿವೆ. ಸಂಯಮನಿಯಲ್ಲಿ ಎಂಬತ್ತಾರು ನರಕ-ಗಳಿವೆ. ಅವುಗಳ ಹೆಸರುಗಳು ಶ್ರುತಿ ಪ್ರಸಿದ್ಧವಾಗಿವೆ. ಅವು ಹೀಗಿವೆ-

ವಹ್ನಿಕುಂಡ, ತಪ್ತಕುಂಡ, ಕ್ಷಾರಕುಂಡ, ವಿಟ್‌ಕುಂಡ, ಮೂತ್ರಕುಂಡ, ಶ್ಲೇಷ್ಮ-ಕುಂಡ, ಗರಕುಂಡ, ನೇತ್ರಮಲಕುಂಡ, ವಸಾಕುಂಡ, ಶುಕ್ರಕುಂಡ, ಅಸೃಕ್‌ಕುಂಡ, ಅಶ್ರುಕುಂಡ, ಗಾತ್ರಮಲಕುಂಡ, ಕರ್ಣವಿಟ್‌ಕುಂಡ, ಮಜ್ಜಾಕುಂಡ, ಮಾಂಸಕುಂಡ, ನಖಕುಂಡ, ಲೋಮಕುಂಡ, ಕೇಶಕುಂಡ, ಅಸ್ಥಿಕುಂಡ, ತಪ್ತಸುರಾಕುಂಡ, ತಪ್ತತೈಲ-ಕುಂಡ, ದಂತಕುಂಡ, ಶಸ್ತ್ರಕುಂಡ, ಕುಂತಕುಂಡ, ಪೂಯಕುಂಡ, ಸರ್ಪಕುಂಡ, ಮಶಕಕುಂಡ, ದಂಶಕುಂಡ, ಗರಲ ಕುಂಡ, ವಜ್ರದಂಷ್ಟ್ರ ಕುಂಡ, ವೃಶ್ಚಿಕ ಕುಂಡ,

ಶರಕುಂಡ, ಶೂಲಕುಂಡ, ಖಡ್ಗಕುಂಡ, ಗೋಲಕುಂಡ, ನಕ್ರಕುಂಡ, ಕಾಕಕುಂಡ, ಸಂಚಾನಕುಂಡ, ವಾಜಕುಂಡ, ವಜ್ರಕುಂಡ, ತಪ್ತಪಾಷಾಣಕುಂಡ, ತೀಕ್ಷ್ಣ ಪಾಷಾಣ ಕುಂಡ, ಲಾಲಾಕುಂಡ, ಮಸೀಕುಂಡ, ಚೂರ್ಣಕುಂಡ, ಚಕ್ರಕುಂಡ, ವಕ್ರಕುಂಡ, ಕೂರ್ಮಕುಂಡ, ಜ್ವಾಲಾಕುಂಡ, ಭಸ್ಮಕುಂಡ, ತಪ್ತಸೂರ್ಮಿಕುಂಡ, ಅಸಿಪತ್ರಕುಂಡ, ಕ್ಷುರಧಾರಕುಂಡ, ಸೂಚೀಮುಖ ಕುಂಡ, ನಕ್ರಮುಖ ಕುಂಡ, ಗೋಧಾಮುಖ ಕುಂಡ, ಗಜದಂಶಕುಂಡ, ಗೋಮುಖಕುಂಡ, ಕುಂಭೀಪಾಕ, ಕಾಲಸೂತ್ರ, ಅವಟೋದ, ಅಹಂತುದ, ಪಾಂಸುಭೋಜ, ಪಾಶವೇಷ್ಟ, ಶೂಲಪ್ರೋತ, ಪ್ರಕಂಪನ, ಉಲ್ಕಾಮುಖ, ಅಂಧಕೂಪ, ವೇಧನ, ದಂಡತಾಡನ, ಜಾಲಬದ್ಧ, ದೇಹಚೂರ್ಣ, ದಲನ, ಶೋಷಣ, ಕಷ, ಶೂರ್ಪಮುಖ, ಜ್ವಾಲಾಮುಖ, ಜಿಹ್ಮ, ಧೂಮಾಂಧ, ನಾಗವೇಷ್ಟನ.

ಈ ಕುಂಡಗಳು ಪಾಪಿಗಳಿಗೆ ಕ್ಲೇಶದಾಯಕ. ಈ ಕುಂಡಗಳಲ್ಲಿ ನೇಮಿಸಲ್ಪಟ್ಟ ಕಿಂಕರರು ದಂಡ, ಶೂಲ, ಪಾಶ, ಶಕ್ತಿ, ಗದಾಪಾಣಿಗಳು. ಭಯಂಕರರು, ನಿರ್ದಯಿ-ಗಳು, ಕ್ರೂರರು, ಪರಾಕ್ರಮಿಗಳು. ಯಾರಿಗೂ ಅವರನ್ನು ತಡೆಯಲಾಗದು. ಯೋಗಸಿದ್ಧಿಯಿಂದ ನಾನಾರೂಪ ಧರಿಸಬಲ್ಲರು. ಎಲ್ಲ ಪಾಪಿಗಳೂ ಮರಣ ಕಾಲದಲ್ಲಿ ಅವರನ್ನು ಕಾಣುವರು. ಸ್ವಕರ್ಮನಿರತರಾದ ಶೈವ ಶಾಕ್ತ ಸೌರ ಗಾಣಪತರೂ ಯೋಗ ಸಿದ್ಧರೂ ಪುಣ್ಯಕರ್ಮ ಮಾಡಿದವರೂ ಸ್ವಪ್ನದಲ್ಲಾದರೂ ಭಗವಂತನನ್ನು ಕಂಡಿರುವ ವಿಷ್ಣುಭಕ್ತರೂ ಅವರನ್ನು ಕಾಣಲಾರರು.

ಸಾವಿತ್ರಿ, ನರಕ ಕುಂಡಗಳ ಸಂಖ್ಯೆಯ ಬಗ್ಗೆ ಹೇಳಿದ್ದೇನೆ. ಈ ಕುಂಡಗಳಲ್ಲಿ ವಾಸ ಮಾಡುವವರು ಯಾರೆಂಬುದನ್ನು ಹೇಳುತ್ತೇನೆ, ಕೇಳು.

**ಇಲ್ಲಿಗೆ ಶ್ರೀ ಬ್ರಹ್ಮವೈವರ್ತ ಮಹಾಪುರಾಣದಲ್ಲಿ ಎರಡನೆಯದಾದ ಪ್ರಕೃತಿಖಂಡದ ನಾರದನಾರಾಯಣ ಸಂವಾದದಲ್ಲಿ ಯಮಸಾವಿತ್ರೀ ಸಂವಾದದಲ್ಲಿ ನರಕಕುಂಡಸಂಖ್ಯಾನವೆಂಬ ಇಪ್ಪತ್ತೊಂಬತ್ತನೆ ಅಧ್ಯಾಯ ಮುಗಿಯಿತು.**

## ಕರ್ಮವಿಪಾಕದಲ್ಲಿ ಪಾಪಿಗಳ ನರಕ ನಿರೂಪಣ, ಬ್ರಹ್ಮಹತ್ಯಾದಿಪಾತಕ ನಿರೂಪಣ

## ಅಧ್ಯಾಯ-೩೦

ಯಮ ನುಡಿದ— ''ಹರಿಸೇವಾನಿರತ, ಶುದ್ಧ ಯೋಗಿ, ತಪಸ್ವಿ, ವ್ರತಾಚರಿಸುವವ ಬ್ರಹ್ಮಚಾರಿ ಇವರಾರೂ ನರಕ ಹೊಂದುವುದಿಲ್ಲ. ಬಲಿಷ್ಠನಾಗಿದ್ದು ಕೆಟ್ಟಮಾತಿನಿಂದ ದೌರ್ಜನ್ಯದಿಂದ ಬಂಧುಗಳನ್ನು ಸುಡುವವ ವಹ್ನಿಕುಂಡದಲ್ಲಿ ಬೀಳುತ್ತಾನೆ. ಶರೀರದಲ್ಲಿ ಎಷ್ಟು ರೋಮಗಳಿವೆಯೋ ಅಷ್ಟು ವರ್ಷಕಾಲ ಆ ನರಕಾಗ್ನಿಯಲ್ಲಿ ಬೆಂದು ಮೂರು ಜನ್ಮಗಳಲ್ಲಿ ಪಶುವಾಗಿ ಜನಿಸುವನು. ಹಸಿದು ಬಾಯರಿ ದಣಿದು ಬಂದ ವಿಪ್ರನಿಗೆ ಅನ್ನ ನೀಡದವ ತಪ್ತಕುಂಡದಲ್ಲಿ ಬೀಳುತ್ತಾನೆ. ಶರೀರರೋಮಗಳಷ್ಟು ವರ್ಷಕಾಲ ಆ ನರಕದಲ್ಲಿ ಬೆಂದು ಏಳು ಜನ್ಮಗಳಲ್ಲಿ ಹಕ್ಕಿಯಾಗಿ ಹುಟ್ಟುತ್ತಾನೆ.

ಭಾನುವಾರ, ಸೂರ್ಯಸಂಕ್ರಮಣ, ಅಮಾವಾಸ್ಯೆ ಮತ್ತು ಶ್ರಾದ್ಧದಿನಗಳಲ್ಲಿ ಬಟ್ಟೆಗಳಿಗೆ ಕ್ಷಾರವಸ್ತುಗಳನ್ನು ಹಾಕುವವನು ಆ ಬಟ್ಟೆಯಲ್ಲಿ ಎಷ್ಟು ದಾರಗಳಿವೆಯೋ ಅಷ್ಟುವರ್ಷ ಕ್ಷಾರಕುಂಡದಲ್ಲಿ ಬಿದ್ದಿರುತ್ತಾನೆ. ಬಳಿಕ ಏಳು ಜನ್ಮಗಳಲ್ಲಿ ಅಗಸನಾಗುತ್ತಾನೆ. ತಾನು ಅಥವಾ ಇತರರು ಕೊಟ್ಟಿರುವ ಬ್ರಾಹ್ಮಣನ ಜೀವನ ವೃತ್ತಿಯನ್ನು ಅಪಹರಿಸುವವನು ಅರವತ್ತು ಸಾವಿರವರ್ಷ ವಿಟ್‌ಕುಂಡದಲ್ಲಿ ವಾಸಮಾಡಿ ಪುನಃ ಭೂಮಿಯಲ್ಲಿ ವಿಟ್‌ಕ್ರಿಮಿಯಾಗಿ ಹುಟ್ಟುತ್ತಾನೆ.

ಇನ್ನೊಬ್ಬರ ಕೆರೆಯನ್ನು ತನ್ನದಾಗಿ ಮಾಡಿಕೊಂಡು ಇನ್ನೊಬ್ಬರಿಗೆ ದಾನ ಮಾಡಿದರೆ ಮೂತ್ರಕುಂಡ ನರಕ ಲಭಿಸುತ್ತದೆ. ಪುನಃ ಹಲ್ಲಿಯಾಗಿ ಹುಟ್ಟುತ್ತಾನೆ. ಇನ್ನೊಬ್ಬರಿಗೆ ಕೊಡದೆ ತಾನೊಬ್ಬನೆ ಮೃಷ್ಟಾನ್ನ ಉಣ್ಣುವವನು ನೂರು ವರ್ಷ ಶ್ಲೇಷ್ಮಕುಂಡದಲ್ಲಿದ್ದು, ನೂರು ವರ್ಷ ಪ್ರೇತನಾಗಿ ಶ್ಲೇಷ್ಮ, ಮೂತ್ರ, ವಿಷ, ಕೀವು, ಉಣ್ಣುತ್ತಾನೆ. ತಂದೆ, ತಾಯಿ, ಪತ್ನಿ, ಪುತ್ರಪುತ್ರಿಯರನ್ನೂ ಗುರುವನ್ನೂ ಪಾಲಿಸದೆ ಅನಾಥರನ್ನಾಗಿ ಮಾಡುವವ ಸಾವಿರ ವರ್ಷ ಗರಕುಂಡದಲ್ಲಿದ್ದು ನೂರುವರ್ಷ ಭೂತನಾಗಿರುವನು. ಅತಿಥಿಯನ್ನು ಕಂಡು ಮುಖ ಸೊಟ್ಟಗೆ ಮಾಡಿಕೊಳ್ಳುವ ಪಾಪಿಯಿಂದ ಪಿತೃದೇವತೆಗಳು ತಿಲೋದಕ ಸ್ವೀಕರಿಸಲಾರರು. ಬ್ರಹ್ಮಹತ್ಯಾದಿ ಸಕಲ ಪಾಪಗಳು ಅವನನ್ನು ಸೇರುತ್ತವೆ. ಅವನು ದೂಷಿಕಾಕುಂಡದಲ್ಲಿ ನೂರು ವರ್ಷ ಬಿದ್ದಿರುತ್ತಾನೆ. ಬಳಿಕ ಏಳು ಜನ್ಮಗಳಲ್ಲಿ ದರಿದ್ರನಾಗಿರುತ್ತಾನೆ. ಒಬ್ಬ ಬ್ರಾಹ್ಮಣನಿಗೆ ದಾನಮಾಡಿದ ವಸ್ತುವನ್ನೆ ಇನ್ನೊಬ್ಬನಿಗೆ ದಾನ ಮಾಡಿದರೆ ನೂರು ವರ್ಷ ವಸಾಕುಂಡವಾಸ. ಮೂರು ಜನ್ಮಗಳಲ್ಲಿ ಚಂಡಾಲನಾಗುತ್ತಾನೆ. ಸ್ತ್ರೀ ಪುರುಷನನ್ನು ಅಥವಾ ಪುರುಷ ಸ್ತ್ರೀಯನ್ನು ಬಲಾತ್ಕರಿಸಿ ಕೆಡಿಸಿದರೆ ನೂರುವರ್ಷ ಶುಕ್ರಕುಂಡವಾಸ.

ನೂರು ವರ್ಷ ಯೋನಿಕೃಮಿಯಾಗಿಯೂ ಹುಟ್ಟುತ್ತಾನೆ. ಗುರುವನ್ನೂ ಬ್ರಾಹ್ಮಣ-ನನ್ನೂ ಹೊಡೆದು ರಕ್ತಪಾತ ಮಾಡುವವ ನೂರುವರ್ಷ ರಕ್ತಕುಂಡದಲ್ಲಿ ವಾಸಮಾಡಿ ಬಳಿಕ ಏಳು ಜನ್ಮಗಳಲ್ಲಿ ಬೇಡನಾಗಿ ಜನಿಸುವನು.

ಶ್ರೀಕೃಷ್ಣನ ಗುಣಗಳನ್ನು ಗದ್ಗದ ಕಂಠದಿಂದ ಹಾಡಿ ಆನಂದ ಬಾಷ್ಪ ಸುರಿಸುವವನನ್ನು ಕಂಡು ಹಾಸ್ಯಮಾಡುವವ ಅಶ್ರುಕುಂಡದಲ್ಲಿ ನೂರುವರ್ಷವಿದ್ದು ಮೂರು ಜನ್ಮಗಳಲ್ಲಿ ಚಂಡಾಲನಾಗುತ್ತಾನೆ. ಮಲಿನ ಹೃದಯದವನಾಗಿ ದೌರ್ಜನ್ಯ-ವನ್ನು ಮಾಡುವವ ಹತ್ತುವರ್ಷ ಮಲಕುಂಡದಲ್ಲಿದ್ದು ಮೂರು ಜನ್ಮಗಳಲ್ಲಿ ಕತ್ತೆಯಾಗಿ ಮತ್ತೆ ಮೂರು ಜನ್ಮಗಳಲ್ಲಿ ನರಿಯಾಗಿ ಹುಟ್ಟುತ್ತಾನೆ. ಕಿವುಡನನ್ನು ಕಂಡು ಹಾಸ್ಯ ಮಾಡಿದರೆ ನಿಂದೆ ಮಾಡಿದರೆ ನೂರು ವರ್ಷ ಕರ್ಣಮಲಕುಂಡವಾಸ. ಬಳಿಕ ಏಳು ಜನ್ಮಗಳಲ್ಲಿ ಕಿವುಡುತನ ಮತ್ತು ಏಳುಜನ್ಮಗಳಲ್ಲಿ ಅಂಗವೈಕಲ್ಯ. ಲೋಭದಿಂದ ತನ್ನ ಜೀವನಕ್ಕಾಗಿ ಇತರ ಜೀವಿಗಳನ್ನು ಕೊಂದರೆ ಲಕ್ಷವರ್ಷ ಮಜ್ಜಾಕುಂಡದಲ್ಲಿದ್ದು ಏಳು ಜನ್ಮಗಳಲ್ಲಿ ಮೀನು, ಮೊಲ, ಜಿಂಕೆ, ಕುರಿ ಮುಂತಾದ ಪ್ರಾಣಿಗಳಾಗಿ ಹುಟ್ಟುತ್ತಾನೆ.

ದುಡ್ಡಿನಾಸೆಯಿಂದ ಮಗಳನ್ನು ಮಾರುವವ ಮಾಂಸಕುಂಡದಲ್ಲಿ ಬೀಳುತ್ತಾನೆ. ಕನ್ಯೆಯ ಮೈಯಲ್ಲಿ ಎಷ್ಟು ರೋಮಗಳಿವೆಯೋ ಅಷ್ಟು ವರ್ಷಕಾಲ ಯಮಕಿಂಕರ-ರಿಂದ ಹೊಡೆಸಿಕೊಂಡು ತಲೆಯ ಮೇಲೆ ಮಾಂಸಭಾರ ಹೊತ್ತು ಅದರಿಂದ ಹರಿಯುವ ರಕ್ತಧಾರೆಯನ್ನು ನೆಕ್ಕುತ್ತ ಇರುತ್ತಾನೆ. ಬಳಿಕ ಕನ್ಯೆಯ ಮಲದಲ್ಲಿ ಕೃಮಿಯಾಗಿ ಜನಿಸುತ್ತಾನೆ. ವ್ರತ, ಉಪವಾಸ, ಶ್ರಾದ್ಧಾದಿಗಳಲ್ಲಿ ಸಂಯಮದಿಂದ ದೀಕ್ಷಾಬದ್ಧನಾಗಿದ್ದು ಅನಂತರ ಕ್ಷೌರಮಾಡಿಸಿಕೊಳ್ಳದಿದ್ದರೆ ಯಾವ ಕರ್ಮಕ್ಕೂ ಅರ್ಹತೆ ಇರುವುದಿಲ್ಲ. ಅವನು ನಖಾದಿಕುಂಡಗಳಲ್ಲಿ ಬೀಳುತ್ತಾನೆ.

ಕೂದಲಿಂದ ಕೂಡಿದ ಮಣ್ಣಿನ ಲಿಂಗವನ್ನು ಪೂಜಿಸಿದರೆ ಆ ಮಣ್ಣಿನ ಕಣಗಳಷ್ಟು ವರ್ಷ ಕೇಶಕುಂಡವಾಸ. ಬಳಿಕ ನೂರುವರ್ಷ ಯವನ ಜನ್ಮ. ಪಿತೃಗಳಿಗೆ ವಿಷ್ಣು-ಪಾದದಲ್ಲಿ ಪಿಂಡ ನೀಡದವನು ತನ್ನ ಮೈಯಲ್ಲಿ ಎಷ್ಟು ರೋಮಗಳಿವೆಯೊ ಅಷ್ಟು ವರ್ಷ ಅಸ್ಥಿಕುಂಡದಲ್ಲಿ ಬಿದ್ದಿರುತ್ತಾನೆ. ಬಳಿಕ ಏಳು ಜನ್ಮಗಳಲ್ಲಿ ಕುಂಟನಾಗಿ ಮಹಾದರಿದ್ರನೆನಿಸುತ್ತಾನೆ. ಗರ್ಭಿಣಿಯಾದ ಹೆಂಡತಿಯೊಡನೆ ಭೋಗಿಸುವವ ನೂರುವರ್ಷ ತಪ್ತತಾಮ್ರಕುಂಡದಲ್ಲಿ ವಾಸಮಾಡುತ್ತಾನೆ.

ಮುಟ್ಟು ಸ್ನಾನಮಾಡದಿರುವ, ಪತಿ ಪುತ್ರರಿಲ್ಲದ ಸ್ತ್ರೀಯ ಅನ್ನ ಉಣ್ಣುವವನು ತಪ್ತ ಲೋಹಕುಂಡದಲ್ಲಿ ನೂರುವರ್ಷ ವಾಸ ಮಾಡುತ್ತಾನೆ. ಬಳಿಕ ಏಳು ಜನ್ಮಗಳಲ್ಲಿ ಅಗಸ ಅಥವಾ ಕಮ್ಮಾರನಾಗಿ ಹುಟ್ಟಿ ವ್ರಣರೋಗಿಯೂ ದರಿದ್ರನೂ ಆಗುತ್ತಾನೆ. ಬೆವರೊರೆಸಿಕೊಂಡ ಕೈ ತೊಳೆಯದೆ ದೇವರ ಪೂಜಾದ್ರವ್ಯವನ್ನು ಮುಟ್ಟುವವ ನೂರು ವರ್ಷಕಾಲ ಸ್ವೇದಕುಂಡದಲ್ಲಿ ಬೀಳುತ್ತಾನೆ. ಶೂದ್ರನ ಅನುಮತಿ ಪಡೆದು ಅವನ ಅನ್ನ

ಉಣ್ಣುವವ ತಪ್ತಸುರಾಕುಂಡದಲ್ಲಿ ನೂರುವರ್ಷವಿದ್ದು ಏಳುಜನ್ಮಗಳಲ್ಲಿ ಶೂದ್ರರಿಗೆ ಪೌರೋಹಿತ್ಯ ಮಾಡಿಸುವ ಅವನ ಅನ್ನ ಉಣ್ಣುವ ಬ್ರಾಹ್ಮಣನಾಗಿ ಹುಟ್ಟುತ್ತಾನೆ.

ಕೆಟ್ಟದಾಗಿ ಕಟುನುಡಿಗಳಿಂದ ಪತಿಯನ್ನು ಹಿಂಸಿಸುವವಳು ನಾಲ್ಕು ಯುಗಗಳ ಕಾಲ ತೀಕ್ಷ್ಣ ಕಂಟಕ ಕುಂಡದಲ್ಲಿ ಮುಳ್ಳುಗಳನ್ನು ತಿನ್ನುತ್ತಾಳೆ. ನಿರ್ದಯತೆಯಿಂದ ವಿಷಕೊಟ್ಟು ಜೀವಿಗಳನ್ನು ಕೊಲ್ಲುವವನು ಸಾವಿರ ವರ್ಷ ವಿಷಕುಂಡದಲ್ಲಿದ್ದು ಏಳು ಜನ್ಮಗಳಲ್ಲಿ ನರಘಾತಿಯಾಗಿ ವ್ರಣರೋಗಿಯಾಗಿದ್ದು ಪುನಃ ಏಳುಜನ್ಮ ಕುಷ್ಠರೋಗಿಯಾಗುತ್ತಾನೆ.

ಪುಣ್ಯಕ್ಷೇತ್ರವಾದ ಭಾರತದಲ್ಲಿ ಕೋಲಿಂದ ಎತ್ತಿಗೆ ಹೊಡೆಯುವವ ಮತ್ತು ಸೇವಕರ ಕೈಯಿಂದ ಹೊಡೆಸುವವ ತಪ್ತ ತೈಲಕುಂಡದಲ್ಲಿ ನಾಲ್ಕು ಯುಗಗಳ ಕಾಲ ಇದ್ದು, ಎತ್ತಿನ ಮೈಯಲ್ಲಿ ಎಷ್ಟು ರೋಮಗಳಿವೆಯೋ ಅಷ್ಟು ವರ್ಷಕಾಲ ಎತ್ತಾಗಿರುತ್ತಾನೆ. ಕಬ್ಬಿಣದ ಈಟಿಯಿಂದ ಅಥವಾ ಗಾಳದಿಂದ ಜೀವಹತ್ಯೆ ಮಾಡುವವ ಹತ್ತು ಸಾವಿರ ವರ್ಷಕಾಲ ಕುಂತಕುಂಡದಲ್ಲಿದ್ದು ಒಂದು ಜನ್ಮದಲ್ಲಿ ಉದರರೋಗಕ್ಕೆ ಬಲಿಯಾಗುತ್ತಾನೆ.

ಕಾರಣವಿಲ್ಲದೆ ಮಾಂಸ, ಮೀನು, ಹರಿಗೆ ಅನಿವೇದಿತವಾದ ಅನ್ನ ಉಣ್ಣುವವ ಕೃಮಿಕುಂಡಕ್ಕೆ ಬೀಳುತ್ತಾನೆ. ತನ್ನ ಮೈಯಲ್ಲಿ ಎಷ್ಟು ರೋಮಗಳಿವೆಯೋ ಅಷ್ಟುವರ್ಷ ಅಲ್ಲಿದ್ದು ಮೂರು ಜನ್ಮಗಳಲ್ಲಿ ಮ್ಲೇಚ್ಛವಾಗಿ ಹುಟ್ಟುತ್ತಾನೆ. ಶೂದ್ರರಿಂದ ಯಾಗ ಮಾಡಿಸುವವ ಅವರ ಶ್ರಾದ್ಧದ ಅನ್ನ ಉಣ್ಣುವವ ಅವರ ಶವದಾಹ ಮಾಡಿಸುವವ ಯಜಮಾನನ ಶರೀರದಲ್ಲಿ ಎಷ್ಟು ರೋಮಗಳಿವೆಯೋ ಅಷ್ಟು ವರ್ಷ ಪೂಯಕುಂಡದಲ್ಲಿದ್ದು ಏಳು ಜನ್ಮಗಳಲ್ಲಿ ಶೂದ್ರನಾಗಿ ಶೂಲರೋಗಿಯೂ ದರಿದ್ರನೂ ಆಗುವನು. ಕ್ರೂರವಾದ ಹಾವು ಚಿಕ್ಕದಿರಲಿ ದೊಡ್ಡದಿರಲಿ ಅದನ್ನು ಕೊಲ್ಲುವವ ತನ್ನ ಮೈಯ ರೋಮಗಳಷ್ಟು ವರ್ಷ ಸರ್ಪಕುಂಡದಲ್ಲಿದ್ದು ಬಳಿಕ ಹಾವಾಗಿ ಹುಟ್ಟುತ್ತಾನೆ. ಬಳಿಕ ಮಾನವನಾಗಿ ಹುಟ್ಟಿದರೂ ದದ್ದುರೋಗಿಯಾಗಿ ಅಲ್ಪಾಯುವಾಗಿ ಹಾವು ಕಚ್ಚಿಯೆ ಸಾಯುತ್ತಾನೆ. ವಿಧಿನಿಯಮವೆಂದು ಹೇಳಿ ಕ್ಷುದ್ರಜಂತುಗಳನ್ನು ಕೊಲ್ಲುವವ ದಂಶಕುಂಡ ಮಶಕಕುಂಡದಲ್ಲಿ ಬೀಳುತ್ತಾನೆ. ತಾನು ಎಷ್ಟು ದಿನ ಬದುಕಿದ್ದನೋ ಅಷ್ಟು ವರ್ಷಕಾಲ ಕ್ಷುದ್ರಜಂತುಗಳಿಂದ ಕಚ್ಚಿಸಿಕೊಂಡು ಯಮದೂತರಿಂದ ಹೊಡೆಸಿಕೊಂಡು ನಿರಾಹಾರದಿಂದ ಇದ್ದು ಬಳಿಕ ಎಲ್ಲ ಕ್ಷುದ್ರಜಂತು ಜನ್ಮಗಳನ್ನು ಅನುಭವಿಸಿ ಅಂಗವಿಕಲನಾದ ಮಾನವನಾಗಿ ಹುಟ್ಟುತ್ತಾನೆ.

ಜೇನುನೊಣಗಳನ್ನು ಕೊಂದು ಜೇನನ್ನು ಸಂಗ್ರಹಿಸುವವ ಗರಲ ಕುಂಡದಲ್ಲಿ ಬೀಳುತ್ತಾನೆ. ತಾನು ಎಷ್ಟು ದಿನ ಬದುಕಿದ್ದನೋ ಅಷ್ಟು ವರ್ಷಕಾಲ ಅಲ್ಲಿದ್ದು ನೊಣವಾಗಿ ಹುಟ್ಟುತ್ತಾನೆ. ನಿರಪರಾಧಿಗಳನ್ನೂ ಬ್ರಾಹ್ಮಣರನ್ನೂ ದಂಡಿಸುವವನು

ವಜ್ರದಂಷ್ಟ್ರಕೀಟ ಕುಂಡದಲ್ಲಿ ಬೀಳುತ್ತಾನೆ. ಅವರ ಮೈಯಲ್ಲಿ ಎಷ್ಟು ರೋಮಗಳೊ ಅಷ್ಟು ವರ್ಷ ಅಲ್ಲಿ ವಾಸ ಮಾಡುತ್ತಾನೆ.

ಹಣದ ಆಸೆಯಿಂದ ಪ್ರಜೆಗಳನ್ನು ದಂಡಿಸುವ ರಾಜ ಪ್ರಜೆಗಳ ರೋಮ ಪ್ರಮಾಣದಷ್ಟು ವರ್ಷ ವೃಶ್ಚಿಕ ಕುಂಡದಲ್ಲಿ ಬಿದ್ದು ಏಳುಜನ್ಮಗಳಲ್ಲಿ ಚೇಳಾಗಿ ಹುಟ್ಟಿ ಬಳಿಕ ಅಂಗವಿಕಲ ವ್ಯಾಧಿಗ್ರಸ್ತ ಮಾನವಾಗಿ ಹುಟ್ಟುತ್ತಾನೆ. ಬ್ರಾಹ್ಮಣನಾಗಿ ಹುಟ್ಟಿ ಶಸ್ತ್ರಧಾರಿಯಾಗಿ, ಅನ್ಯರ ದೂತನಾಗಿದ್ದು, ಹರಿಭಕ್ತಿ ತೊರೆದು, ಸಂಧ್ಯೋಪಾಸನೆ-ಯನ್ನೂ ಜರಿದು, ಮೂಢನಾಗಿ ಬಾಳುವವ ಶರಕುಂಡ ಖಡ್ಗಕುಂಡಗಳಲ್ಲಿ ಬೀಳುತ್ತಾನೆ. ತನ್ನ ರೋಮ ಪ್ರಮಾಣದಷ್ಟು ವರ್ಷ ಶರಶೂಲ ಖಡ್ಗಗಳಿಂದ ಹಿಂಸಿಸಲ್ಪಡುತ್ತಾನೆ.

ಒಂದು ಸಣ್ಣ ತಪ್ಪಿಗೂ ಪ್ರಜೆಗಳನ್ನು ಕತ್ತಲ ಬಂದೀಖಾನೆಯಲ್ಲಿ ಬಂಧಿಸಿಡುವ ರಾಜ ಗೋಲಕುಂಡದಲ್ಲಿ ಬೀಳುತ್ತಾನೆ. ಕುದಿವ ನೀರು, ಹರಿತವಾದ ಕೋರೆದಾಡೆ ಉಳ್ಳ ಕೀಟಗಳುಳ್ಳ ಕತ್ತಲು ತುಂಬಿದ ನರಕವೆ ಗೋಲಕುಂಡ. ಪ್ರಜೆಗಳ ರೋಮ ಪ್ರಮಾಣದಷ್ಟು ವರ್ಷ ವಾಸ ಮಾಡಿ ನೀಚರ ಸೇವಕನಾಗಿ ಹುಟ್ಟುತ್ತಾನೆ. ಸರೋವರದಿಂದ ಹೊರಗೆ ಬರುವ ಮೊಸಳೆ ಮುಂತಾದ ಪ್ರಾಣಿಗಳನ್ನು ಕೊಲ್ಲುವವನು ಅವುಗಳ ಮೈಯಲ್ಲಿರುವ ಮುಳ್ಳುಗಳ ಸಂಖ್ಯೆಯಷ್ಟು ವರ್ಷ ನಕ್ರಕುಂಡದಲ್ಲಿ ವಾಸಮಾಡಿ ನದೀ ಸರೋವರಾದಿಗಳಲ್ಲಿ ಮೊಸಳೆ ಮುಂತಾದ ಪ್ರಾಣಿಯಾಗಿ ಹುಟ್ಟುತ್ತಾನೆ.

ಪರಸ್ತ್ರೀಯನ್ನು ಕಾಮಾಸಕ್ತಿಯಿಂದ ನೋಡುವವನು ತನ್ನ ಮೈಯ ರೋಮಸಂಖ್ಯೆಯಷ್ಟು ವರ್ಷ ಕಾಕಕುಂಡದಲ್ಲಿ ಕಾಗೆಗಳಿಂದ ಕಣ್ಣುಕುಕ್ಕಿಸಿಕೊಳ್ಳುತ್ತಾನೆ. ಮೂರು ಜನ್ಮಗಳಲ್ಲಿ ಕುರುಡನಾಗುತ್ತಾನೆ. ದೇವ ಬ್ರಾಹ್ಮಣರ ಚಿನ್ನ ಕದಿಯುವವನು ತನ್ನ ಮೈಯ ರೋಮಸಂಖ್ಯೆಯಷ್ಟು ವರ್ಷ ಲಾವಾರಸ ಕುಂಡದಲ್ಲಿ ವಾಸಮಾಡಿ ಮೂರುಜನ್ಮಗಳಲ್ಲಿ ಕುರುಡನೂ ಏಳುಜನ್ಮಗಳಲ್ಲಿ ದರಿದ್ರನೂ ಆಗುತ್ತಾನೆ. ತಾಮ್ರ ಕಬ್ಬಿಣಗಳನ್ನು ಕದಿಯುವವನು ತನ್ನ ಮೈಯ ರೋಮಸಂಖ್ಯೆಯಷ್ಟು ವರ್ಷ ವಾಜಕುಂಡದಲ್ಲಿ ವಜ್ರಕೀಟಗಳಿಂದ ಕಣ್ಣುಕುಕ್ಕಿಸಿಕೊಳ್ಳುತ್ತಾನೆ. ದೇವರನ್ನೂ ದೇವರ ಸೊತ್ತನ್ನೂ ಕದಿಯುವವನು ತನ್ನ ಮೈಯ ರೊಮಸಂಖ್ಯೆಯಷ್ಟು ವರ್ಷ ವಜ್ರ ಕುಂಡದಲ್ಲಿ ವಜ್ರಕೀಟಗಳಿಂದ ಕಚ್ಚಿಸಿಕೊಳ್ಳುತ್ತಾನೆ. ದೇವಬ್ರಾಹ್ಮಣರ ಬೆಳ್ಳಿ ರಸದ್ರವ್ಯ ಬಟ್ಟೆಬರೆಗಳನ್ನು ಕದಿಯುವವನು ತನ್ನ ಮೈರೋಮಸಂಖ್ಯೆಯಷ್ಟು ವರ್ಷ ತಪ್ತ ಪಾಷಾಣ ಕುಂಡದಲ್ಲಿ ಬಿದ್ದು ಮೂರು ಜನ್ಮಗಳಲ್ಲಿ ಬಕಪಕ್ಷಿಯಾಗಿ, ಮೂರು ಜನ್ಮಗಳಲ್ಲಿ ಹಂಸವಾಗಿ, ಏಳು ಜನ್ಮಗಳಲ್ಲಿ ರಕ್ತದೋಷಜನ್ಯ ರೋಗಗ್ರಸ್ತನಾಗಿ, ಅಲ್ಪಾಯುವಾಗಿ ಜನಿಸುತ್ತಾನೆ. ದೇವ ಬ್ರಾಹ್ಮಣರ ಹಿತ್ತಾಳೆ ಕಂಚಿನ ಪಾತ್ರೆಗಳನ್ನು

ಅಪಹರಿಸುವವನು ತೀಕ್ಷ್ಣಪಾಷಾಣಕುಂಡದಲ್ಲಿ ಶರೀರ ರೋಮ ಪ್ರಮಾಣದಷ್ಟು ವರ್ಷ ನರಳಿ ಏಳು ಜನ್ಮಗಳಲ್ಲಿ ಕುದುರೆಯಾಗಿ ಹುಟ್ಟಿ ಅಧಿಕಾಂಗನಾಗಿ ಪಾದರೋಗಿಯಾಗಿ ಹುಟ್ಟುತ್ತಾನೆ. ಸೂಳೆಯ ಅನ್ನ ಉಂಡು ಬಾಳುವವನು ಶರೀರ ರೋಮ ಸಂಖ್ಯೆಯಷ್ಟು ವರ್ಷ ಲಾಲಾಕುಂಡದಲ್ಲಿ ನರಳಿ ಕಣ್ಣಿನ ರೋಗಿಯಾಗಿ ಶೂಲ ರೋಗಿಯಾಗಿ ಹುಟ್ಟುತ್ತಾನೆ. ಮ್ಲೇಚ್ಛರ ಸೇವೆಯಿಂದ ಮಸಿಯ ಮಾರಾಟ-ದಿಂದ ಜೀವಿಸುವವ ತನ್ನ ಶರೀರರೋಮ ಸಂಖೆಯಷ್ಟು ವರ್ಷ ಮಸೀ ಕುಂಡದಲ್ಲಿ ವಾಸಮಾಡಿ ಮೂರು ಜನ್ಮಗಳಲ್ಲಿ ಕಪ್ಪುಬಣ್ಣದ ಪಶುವಾಗಿ ಹುಟ್ಟುತ್ತಾನೆ. ಮೂರು-ಜನ್ಮಗಳಲ್ಲಿ ಹೋತನಾಗಿ, ಮೂರುಜನ್ಮಗಳಲ್ಲಿ ಕೃಷ್ಣಸರ್ಪನಾಗಿ ಅನಂತರ ತಾಳೆಯ ಮರವಾಗಿ ಹುಟ್ಟುತ್ತಾನೆ.

ದೇವ ಬ್ರಾಹ್ಮಣರ ಸಸ್ಯ , ಧಾನ್ಯ , ಆಸನ, ಶಯ್ಯೆ , ತಾಂಬೂಲಗಳನ್ನು ಕದಿಯು-ವವನು ಚೂರ್ಣಕುಂಡದಲ್ಲಿ ನೂರುವರ್ಷ ನರಳಿ, ಮೂರು ಜನ್ಮಗಳಲ್ಲಿ ಕುರಿಯಾಗಿ, ಕೋಳಿಯಾಗಿ ಹುಟ್ಟಿ ಕೆಮ್ಮಿನ ರೋಗಗ್ರಸ್ತನಾದ ವಂಶಹೀನ ದರಿದ್ರ ಅಲ್ಪಾಯು ಮಾನವನಾಗಿ ಹುಟ್ಟುತ್ತಾನೆ. ವಿಪ್ರರ ಸೊತ್ತುಗಳನ್ನು ಅಪಹರಿಸಿ ಗಾಣದ ಚಕ್ರಗಳನ್ನು ತಯಾರಿಸುವವನು ನೂರು ವರ್ಷ ಚಕ್ರಕುಂಡದಲ್ಲಿ ವಾಸಮಾಡಿ ಮೂರುಜನ್ಮಗಳಲ್ಲಿ ರೋಗಗ್ರಸ್ತ ವಂಶಹೀನ ಗಾಣಿಗನಾಗಿ ಹುಟ್ಟುತ್ತಾನೆ. ಬಂಧುಗಳಲ್ಲಿ ಬ್ರಾಹ್ಮಣರಲ್ಲಿ ವಂಚನೆ ಮಾಡುವವ ಒಂದು ಯುಗಕಾಲ ವಕ್ರಕುಂಡದಲ್ಲಿ ನರಳಿ ಏಳು ಜನ್ಮಗಳಲ್ಲಿ ವಂಶಹೀನ, ಭಾರ್ಯಾಹೀನ, ಅಂಗ ಹೀನ, ದರಿದ್ರ ವಕ್ರಾಂಗನಾಗಿ ಜನಿಸುತ್ತಾನೆ.

ಚಾತುರ್ಮಾಸ್ಯ ಕಾಲದಲ್ಲಿ ಆಮೆಯ ಮಾಂಸ ತಿಂದರೆ ನೂರು ವರ್ಷ ಕೂರ್ಮಕುಂಡವಾಸ. ಮೂರು ಜನ್ಮಗಳಲ್ಲಿ ಆಮೆಯಾಗಿ ಮೂರುಜನ್ಮಗಳಲ್ಲಿ ಹಂದಿ-ಯಾಗಿ ಮೂರು ಜನ್ಮಗಳಲ್ಲಿ ಬೆಕ್ಕು ಅಥವಾ ನವಿಲಾಗಿ ಹುಟ್ಟುತ್ತಾನೆ. ದೇವ ಬ್ರಾಹ್ಮಣರ ತುಪ್ಪ ಎಣ್ಣೆ ಮುಂತಾದುವನ್ನು ಅಪಹರಿಸುವವನು ಜ್ವಾಲಕುಂಡ ಭಸ್ಮಕುಂಡಗಳಲ್ಲಿ ನೂರುವರ್ಷ ನರಳಿ ಏಳು ಜನ್ಮಗಳಲ್ಲಿ ಮೀನು ಅಥವಾ ಇಲಿಯಾಗಿ ಹುಟ್ಟುತ್ತಾನೆ. ದೇವ ಬ್ರಾಹ್ಮಣರ ಸುಗಂಧಿ ತೈಲ, ನೆಲ್ಲಿಕಾಯಿ, ಸುಗಂಧ ದ್ರವ್ಯಗಳನ್ನು ಅಪಹರಿಸುವವನು ತನ್ನ ರೋಮ ಪ್ರಮಾಣದಷ್ಟು ವರ್ಷ ಪೂತಿ-ಕುಂಡದಲ್ಲಿ ನರಳಿ ಏಳು ಜನ್ಮಗಳಲ್ಲಿ ದುರ್ಗಂಧಿಯಾಗಿ ಹುಟ್ಟುತ್ತಾನೆ. ವಂಚನೆಯಿಂದ ಅಥವಾ ಬಲಾತ್ಕಾರದಿಂದ ಪರರ ವಂಶಪರಂಪರಾಪ್ರಾಪ್ತವಾದ ಭೂಮಿಯನ್ನು ಅಪಹರಿಸಿದರೆ ತಪ್ತಸೂರ್ಮಿಕುಂಡದಲ್ಲಿ ಏಳು ಮನ್ವಂತರಗಳಲ್ಲಿ ಮೈಸುಡಿಸಿ-ಕೊಳ್ಳುತ್ತಾನೆ. ಕುದಿವ ಎಣ್ಣೆಯಲ್ಲಿ ಯಾವುದೇ ಜಂತು ಸುಡುತ್ತದೆ ಹೊರತು ಭಸ್ಮ-ವಾಗುವುದಿಲ್ಲ ಹೇಗೋ ಹಾಗೇ ಪಾಪಿಯ ಶರೀರವೂ ನರಕ ಕುಂಡದಲ್ಲಿ ಸುಡುತ್ತದೆ, ಭಸ್ಮವಾಗುವುದಿಲ್ಲ. ಅರವತ್ತು ಸಾವಿರವರ್ಷ ಮಲಕ್ರಿಮಿಯಾಗಿದ್ದು ಭೂಮಿಹೀನ

ದರಿದ್ರನಾಗಿ ಹುಟ್ಟುತ್ತಾನೆ. ಹಣದಾಸೆಯಿಂದ ನಿರ್ದಯನಾಗಿ ಕತ್ತಿಯಿಂದ ಜೀವಿಗಳನ್ನು ಕತ್ತರಿಸುವವ, ಮನುಷ್ಯರನ್ನು ಕೊಲ್ಲುವವ, ಹದಿನಾಲ್ಕು ಇಂದ್ರರ ಕಾಲ ಅಸಿಪತ್ರದಲ್ಲಿ ನರಳುತ್ತಾನೆ. ಬ್ರಹ್ಮಹತ್ಯೆ ಮಾಡುವವ ನೂರು ಮನ್ವಂತರ ಕಾಲ ನರಳುತ್ತಾನೆ. ಯಮದೂತರ ಕತ್ತಿಯಿಂದ ಹೊಡೆಸಿಕೊಳ್ಳುತ್ತಾನೆ. ಬಳಿಕ ನೂರು ಜನ್ಮ ಚಂಡಾಲನಾಗಿ, ನೂರು ಜನ್ಮ ಹಂದಿ ಅಥವಾ ನಾಯಿಯಾಗಿ, ಏಳು ಜನ್ಮ ನರಿಯಾಗಿ, ಏಳುಜನ್ಮ ಹುಲಿಯಾಗಿ, ಮೂರುಜನ್ಮ ತೋಳನಾಗಿ, ಏಳುಜನ್ಮ ಖಡ್ಗಮೃಗನಾಗಿ, ಮತ್ತು ಮೂರು ಜನ್ಮ ಕೋಣನಾಗಿ ಹುಟ್ಟುತ್ತಾನೆ.

ಹಳ್ಳಿ ನಗರಗಳಿಗೆ ಬೆಂಕಿ ಇಡುವವ ಮೂರುಯುಗಕಾಲ ಕ್ಷುರಧಾರದಲ್ಲಿ ನರಳಿ ಪ್ರೇತನಾಗಿ ಬಾಯಲ್ಲಿ ಬೆಂಕಿ ಉಗುಳುತ್ತ ಸಂಚರಿಸುತ್ತಾನೆ. ಏಳು ಜನ್ಮ ಮಲ-ಭಕ್ಷಕನಾಗಿ, ಏಳುಜನ್ಮ ಮಿಣುಕು ಹುಳುವಾಗಿ, ಏಳುಜನ್ಮ ಮಹಾಶೂಲ ರೋಗಿ-ಯಾಗಿ, ಏಳುಜನ್ಮ ಕುಷ್ಠರೋಗಿಯಾಗಿ ಬಾಳುತ್ತಾನೆ. ಚಾಡಿ ಹೇಳುವ ಪರರನ್ನು ನಿಂದಿಸುವ, ಪರರ ದೂಷಣೆ ಕೇಳಿ ಬಹುಸಂತೋಷ ಪಡುವ ದೇವ ಬ್ರಾಹ್ಮಣನಿಂದಕ ಮೂರು ಯುಗಕಾಲ ಸೂಚೀಮುಖದಲ್ಲಿ ಸೂಜಿಯಿಂದ ಚುಚ್ಚಿಸಿಕೊಳ್ಳುತ್ತಾನೆ. ಏಳು ಜನ್ಮಗಳಲ್ಲಿ ಹಾವು ಅಥವಾ ಚೇಳಾಗಿ, ಏಳು ಜನ್ಮಗಳಲ್ಲಿ ವಜ್ರಕೀಟ ಭಸ್ಮಕೀಟವಾಗಿ ಹುಟ್ಟಿ ಮಹಾವ್ಯಾಧಿಗ್ರಸ್ತ ಮಾನವನಾಗಿ ಹುಟ್ಟುತ್ತಾನೆ. ಮನೆಗೆ ಕನ್ನಹಾಕಿ ಕದಿವವ, ಹಸು ಆಡುಕುರಿಗಳನ್ನು ಅಪಹರಿಸುವವ ಗೋಧಾಮುಖದಲ್ಲಿ ನರಳಿ ಮೂರು ಜನ್ಮ ವ್ಯಾಧಿಯುಕ್ತ ಎತ್ತಾಗಿ, ಮೂರು ಜನ್ಮ ಕುರಿಯಾಗಿ ಮೂರು ಜನ್ಮ ಆಡಾಗಿ, ಬಳಿಕ ಭಾರ್ಯಾ ಬಂಧುಹೀನ ದರಿದ್ರ ನಿತ್ಯರೋಗಿ ಮಾನವನಾಗಿ ಹುಟ್ಟುತ್ತಾನೆ.

ಸಣ್ಣಪುಟ್ಟ ಕಳ್ಳತನ ಮಾಡುವವ ಒಂದು ಯುಗಕಾಲ. ನಕ್ರಮುಖದಲ್ಲಿ ನರಳಿ ಮಹಾರೋಗಿ ಮಾನವನಾಗಿ ಹುಟ್ಟುತ್ತಾನೆ. ಹಸು ಆನೆ ಕುದುರೆ ಮನುಷ್ಯರನ್ನು ಕೊಲ್ಲುವವ ಮೂರು ಯುಗಕಾಲ ಗಜದಂಶದಲ್ಲಿ ನರಳಿ ಆನೆ ಕುದುರೆ ಗೋವು ಮ್ಲೇಚ್ಛ ಜಾತಿಗಳಲ್ಲಿ ಕ್ರಮವಾಗಿ ಮೂರು ಮೂರು ಜನ್ಮವೆತ್ತುವನು. ಬಾಯಾರಿ ನೀರು ಕುಡಿವ ಗೋವನ್ನು ತಡೆವವ ಮನ್ವಂತರಕಾಲ ಗೋಮುಖದಲ್ಲಿ ನರಳಿ ಏಳು ಜನ್ಮಗಳಲ್ಲಿ ಗೋಹೀನ ಮಹಾರೋಗಿ ದರಿದ್ರ ಅಂತ್ಯಜನಾಗುತ್ತಾನೆ.

ಗೋಹತ್ಯೆ ಬ್ರಹ್ಮಹತ್ಯೆಗಳಿಗೆ ಸಮಾನವಾದ ಪಾಪಗಳು. ಅಗಮ್ಯಾಗಮನ, ಸಂಧ್ಯಾ-ಹೀನತೆ, ದೀಕ್ಷೆ ಇಲ್ಲದಿರುವುದು, ಪುಣ್ಯ ತೀರ್ಥಕ್ಷೇತ್ರಗಳಲ್ಲಿ ದಾನ ಸ್ವೀಕರಿಸುವುದು, ಗ್ರಾಮ ಪೌರೋಹಿತ್ಯ, ದೇವಾಲಯದ ಅರ್ಚಕತ್ವ, ಶೂದ್ರರಿಗೆ ಅಡಿಗೆ ಮಾಡುವುದು, ಪ್ರಮತ್ತತೆ, ಶೂದ್ರಸ್ತ್ರೀಸಂಗ, ಸ್ತ್ರೀ ಮಿತ್ರ ಭ್ರೂಣಹತ್ಯೆಗಳು ಇವನ್ನು ಮಾಡುವ ಮಹಾಪಾಪಿ ಹದಿನಾಲ್ಕು ಇಂದ್ರರ ಕಾಲ ಕುಂಭೀಪಾಕದಲ್ಲಿ ನರಳುತ್ತಾನೆ. ಬೆಂಕಿ, ಮುಳ್ಳು, ಕಾದ ಎಣ್ಣೆ, ಕುದಿವ ನೀರು, ಕಾದಕಲ್ಲು, ಕಾದ ಕಬ್ಬಿಣಗಳಲ್ಲಿ

ನರಳಿದ ಬಳಿಕ, ಕೋಟಿಸಹಸ್ರ ಜನ್ಮಗಳಲ್ಲಿ ಹದ್ದಾಗಿ, ನೂರು ಜನ್ಮ ಹಂದಿಯಾಗಿ, ಏಳುಜನ್ಮ ಕಾಗೆಯಾಗಿ, ಏಳುಜನ್ಮ ಹಾವಾಗಿ, ಅರವತ್ತು ಸಾವಿರವರ್ಷ ಮಲಕ್ರಿಮಿಯಾಗಿ ಕೊನೆಗೆ ವಂಶಹೀನ ಭಾರ್ಯಾಹೀನ ದರಿದ್ರ ಕುಷ್ಠರೋಗಿ ಕ್ಷಯರೋಗಿ ಶೂದ್ರನಾಗಿ ಜನಿಸುತ್ತಾನೆ.

ಸಾವಿತ್ರಿ— ಬ್ರಹ್ಮಹತ್ಯೆ ಗೋಹತ್ಯೆಗಳಿಗೆ ಸಮಾನವಾದ ಪಾಪಗಳು ಯಾವುವು ? ಅಗಮ್ಯ ಸ್ತ್ರೀ ಯಾರು ? ಸಂಧ್ಯಾಹೀನ ಯಾರು ? ದೀಕ್ಷೆ ಇಲ್ಲದವನಾರು ? ತೀರ್ಥ ಕ್ಷೇತ್ರಗಳಲ್ಲಿ ದಾನ ಸ್ವೀಕರಿಸುವವನಾರು ? ಗ್ರಾಮ ಪುರೋಹಿತ ಯಾರು ? ದೇವಾಲಯದ ಅರ್ಚಕನೆಂದರೆ ಯಾರು ? ಶೂದ್ರರಿಗೆ ಅಡಿಗೆ ಮಾಡುವವನಾರು ? ಪ್ರಮತ್ತ ಯಾರು ? ಶೂದ್ರಸ್ತ್ರೀ ಗಮನ ಮಾಡುವವನಾರು ? ಇವರ ಎಲ್ಲ ಲಕ್ಷಣಗಳನ್ನು ಹೇಳು.

ಯಮ— ಶ್ರೀಕೃಷ್ಣ, ಅವನ ವಿಗ್ರಹ, ಪ್ರಕೃತಿ, ಪ್ರಾಕೃತವಸ್ತು, ಶಿವ, ಶಿವಲಿಂಗ, ಸೂರ್ಯ, ಸೂರ್ಯಮಣಿ, ಗಣೇಶ, ಅವನ ವಿಗ್ರಹಗಳಲ್ಲಿ ವೈಷಮ್ಯವೆಣಿಸಿದರೆ, ಗುರು ಇಷ್ಟದೇವತೆ, ಜನ್ಮವಿತ್ತ ತಾಯಿಯರಲ್ಲಿ ವೈಷಮ್ಯವೆಣಿಸಿದರೆ, ವೈಷ್ಣವ, ವೈಷ್ಣವೇತರ, ಬ್ರಾಹ್ಮಣ ಬ್ರಾಹ್ಮಣೇತರರಲ್ಲಿ ಸಾಮ್ಯವೆಣಿಸಿದರೆ, ವಿಷ್ಣುನೈವೇದ್ಯ, ಅನ್ಯನೈವೇದ್ಯ, ಹರಿಪಾದೋದಕ ಅನ್ಯಪಾದೋದಕಗಳಲ್ಲಿ ಸಮಾನತೆ ಕಂಡರೆ, ಸರ್ವೇಶ್ವರೇಶ್ವರನಾದ ಸರ್ವಾಂತರಾತ್ಮನಾದ ಕೃಷ್ಣನಲ್ಲಿ ಅನ್ಯದೇವತಾ ಸಾಮ್ಯವನ್ನು ತಿಳಿದರೆ ಬ್ರಹ್ಮಹತ್ಯಾದೋಷ.

ವೇದ ವಿಹಿತವಾದ ಪಿತೃದೇವಾರ್ಚನೆಯನ್ನು ನಿಷೇಧಿಸಿದರೆ, ಪರಮ ಪವಿತ್ರನಾದ ಹೃಷೀಕೇಶನನ್ನೂ ಅವನ ಮಂತ್ರೋಪಾಸಕನನ್ನೂ ನಿಂದಿಸಿದರೆ ಬ್ರಹ್ಮಹತ್ಯಾದೋಷ.

ಕೃಷ್ಣನಿಗೆ ಪ್ರಾಣಪ್ರಿಯನೂ ವೈಷ್ಣವಾಗ್ರೇಸರನೂ ಆದ ಶಿವನನ್ನು ಪೂಜಿಸದಿದ್ದರೆ, ವಿಷ್ಣುಭಕ್ತಿದಾಯಕಳಾದ ವಿಷ್ಣುಮಾಯೆಯನ್ನು ನಿಂದಿಸಿದರೆ ಬ್ರಹ್ಮಹತ್ಯಾದೋಷ.

ಕೃಷ್ಣಜನ್ಮಾಷ್ಟಮೀ, ರಾಮನವಮೀ, ಶಿವರಾತ್ರಿ, ಏಕಾದಶಿ, ಭಾನುವಾರ ಈ ಐದು ಪುಣ್ಯಕರವಾದ ವ್ರತಗಳನ್ನು ಮಾಡದಿದ್ದರೆ ಬ್ರಹ್ಮಹತ್ಯಾದೋಷ.

ಆರ್ದ್ರಾನಕ್ಷತ್ರದಲ್ಲಿ ಸೂರ್ಯನಿರುವಾಗ ನೆಲ ಅಗೆದರೆ, ನೀರಲ್ಲಿ ಮಲಮೂತ್ರ ವಿಸರ್ಜಿಸಿದರೆ, ಅನಾಥರಾದ ಗುರು ಮಾತಾಪಿತೃಗಳು ಪತಿವ್ರತೆಯಾದ ಪತ್ನಿಪುತ್ರರು ಇವರನ್ನು ಪೋಷಿಸದಿದ್ದರೆ, ವಿವಾಹವಾಗದೆ ಮಗನನ್ನು ಪಡೆಯದೆ ಹರಿಭಕ್ತಿಯನ್ನೂ ಮಾಡದೆ ಇದ್ದರೆ, ಹರಿಗೆ ನಿವೇದಿತವಲ್ಲದ ಅನ್ನ ಉಂಡರೆ, ಹರಿ ಹರರ ಪೂಜೆ ಮಾಡದಿದ್ದರೆ, ಬ್ರಹ್ಮಹತ್ಯಾದೋಷ. ಹುಲ್ಲು ಮೇಯುವ ನೀರು ಕುಡಿವ ಹಸುವನ್ನು ತಡೆದರೆ, ಗೋಬ್ರಾಹ್ಮಣರ ನಡುವೆ ಹೋದರೆ, ಹಸುವನ್ನು ಕೋಲಿಂದ ಹೊಡೆದರೆ,

ಗೂಳಿಯ ಮೇಲೆ ಸವಾರಿ ಮಾಡಿದರೆ, ಗೋವಿಗೆ ಎಂಜಲು ಕೊಟ್ಟರೆ, ವೃಷವಾಹಕನ ಅನ್ನ ಉಂಡರೆ ಗೋಹತ್ಯಾದೋಷ.

ಶೂದ್ರಸ್ತ್ರೀಯ ಪತಿಗೆ ಪೌರೋಹಿತ್ಯ ಮಾಡಿದರೆ, ಅವನ ಅನ್ನ ಉಂಡರೆ ನೂರು ಗೋಹತ್ಯೆಗೆ ಸಮಾನ. ಬೆಂಕಿಯಲ್ಲಿ ಕಾಲು ಕಾಯಿಸುವುದು ಗೋವನ್ನು ಒದೆಯುವುದು, ಸ್ನಾನ ಮಾಡಿ ಕಾಲು ತೊಳೆಯದೆ ಮನೆಯೊಳಗೆ ಹೋಗುವುದು, ಒದ್ದೆಗಾಲಲ್ಲಿ ಉಣ್ಣುವುದು ಮಲಗುವುದು, ಹಗಲಲ್ಲಿ ಎರಡು ಬಾರಿ ಉಣ್ಣುವುದು, ಪತಿಪುತ್ರರಿಲ್ಲದ ಹೆಂಗಸಿನ ಅನ್ನ ಉಣ್ಣುವುದು, ಹೆಂಡತಿಯ ಶರೀರ ಮಾರಿ ಬದುಕುವುದು, ಮೂರು ಹೊತ್ತು ಸಂಧ್ಯಾವಂದನೆ ಮಾಡದಿರುವುದು, ಒಳ್ಳೆಯ ದಿನಗಳಲ್ಲಿ ಪಿತೃದೇವತಾ ಅತಿಥಿಪೂಜೆ ಮಾಡದಿರುವುದು ಗೋಹತ್ಯೆಗೆ ಸಮಾನ.

ಪತಿದೇವನಿಗೆ ಕೃಷ್ಣನಿಗೆ ವೈಷಮ್ಯವೆಣಿಸಿ ಪತಿಯನ್ನು ಕಟುನುಡಿಯಿಂದ ನಿಂದಿಸು-ವುದು ಗೋಹತ್ಯೆಗೆ ಸಮಾನ.

ಗೋಮಾಳಗಳಲ್ಲಿ, ಕೆರೆಯ ಅಂಗಳದಲ್ಲಿ, ಏರಿಯಲ್ಲಿ ಕೃಷಿ ಮಾಡುವುದು ಗೋಹತ್ಯೆಗೆ ಸಮಾನ. ಹಣದಾಸೆಯಿಂದ ಅಥವಾ ಅಜ್ಞಾನದಿಂದ ಗೋವಧಕ್ಕೆ ಪ್ರಾಯಶ್ಚಿತ್ತ ಮಾಡಿಕೊಳ್ಳದಿದ್ದರೆ ಅದೂ ಗೋಹತ್ಯೆಗೆ ಸಮಾನವಾಗುತ್ತದೆ. ರಾಜಕೀಯ ಅಥವಾ ಪ್ರಾಕೃತಿಕ ವಿಪ್ಲವದಲ್ಲಿ ಗೋವುಗಳನ್ನು ರಕ್ಷಿಸದೆ ಅವುಗಳಿಗೆ ದುಃಖ ನೀಡಿದರೆ ಗೋಹತ್ಯಾ ದೋಷವಿದೆ. ದೇವಾರ್ಚನೆಯಲ್ಲಿ ನಿರತನಾದವನನ್ನು ದೇವರ ತೀರ್ಥ ನೈವೇದ್ಯ ಪುಷ್ಪಗಳನ್ನು ದಾಟಿದರೆ ಗೋಹತ್ಯಾದೋಷ.

ಯಾಚಕರಿಗೆ ಯಾವಾಗಲೂ ಇಲ್ಲವೆನ್ನುವವ, ಸುಳ್ಳು ಹೇಳುವವ, ವಂಚಕ, ದೇವದ್ವೇಷಿ, ಗುರುದ್ವೇಷಿ ಇವರೆಲ್ಲರಿಗೂ ಗೋಹತ್ಯಾದೋಷ. ದೇವತಾ ಪ್ರತಿಮೆ ಗುರು ಬ್ರಾಹ್ಮಣರನ್ನು ಕಂಡಾಗ ಭಕ್ತಿಯಿಂದ ನಮಿಸದವನೂ, ನಮಸ್ಕಾರ ಮಾಡಿದವರಿಗೆ ಕೋಪದಿಂದ ಆಶೀರ್ವಾದ ಮಾಡದ, ವಿದ್ಯಾರ್ಥಿಗೆ ವಿದ್ಯೆ ನೀಡದ ಬ್ರಾಹ್ಮಣನೂ ಗೋಹತ್ಯಾಪಾತಕಿ ಎನಿಸುತ್ತಾನೆ.

ಸಾವಿತ್ರಿ, ಗೋಹತ್ಯೆ ಬ್ರಹ್ಮಹತ್ಯೆಗಳಿಗೆ ಸಮಾನವಾದ ಪಾತಕಗಳನ್ನು ಸೂರ್ಯ-ದೇವನಿಂದ ನಾನು ತಿಳಿದಂತೆ ವರ್ಣಿಸಿದ್ದೇನೆ. ಇನ್ನೇನು ಕೇಳಬಯಸುವೆ ?

ಸಾವಿತ್ರಿ— ಸಾಕ್ಷಾತ್ ಗೋಹತ್ಯೆ ಬ್ರಹ್ಮಹತ್ಯೆಗಳಿಗೂ ತತ್ಸಮಾನ ಪಾಪಗಳಿಗೂ ಏನು ವ್ಯತ್ಯಾಸ ? ಯಾವುದು ಕಡಿಮೆ, ಯಾವುದು ಹೆಚ್ಚು ಎನ್ನುವುದನ್ನು ವರ್ಣಿಸು.

ಯಮ— ಸಾಮಾನ್ಯವಾಗಿ ಯಾವಾಗಲೂ ಸಾಕ್ಷಾತ್ ಪಾಪವೆ ಹೆಚ್ಚು. ಸಮಾನ-ಪಾಪ ಯಾವಾಗಲೂ ಕಡಿಮೆಯದು. ಸಾಕ್ಷಾತ್ ಪಾಪ ಕಡಿಮೆಯದಾಗಿ ಸಮಾನಪಾಪ ಅಧಿಕವೆನಿಸುವುದು ಎಲ್ಲಿ, ಎರಡೂ ಸಮಾನವಾಗಿರುವುದು ಎಲ್ಲಿ ಎಂಬುದನ್ನು ವೇದ

ಪ್ರಮಾಣದಿಂದ ತಿಳಿದುಕೊಳ್ಳಬೇಕು. ಉದಾಹರಣೆಗೆ ಮಂತ್ರೋಪದೇಶ ನೀಡುವ ಗುರು ತಂದೆಗೆ ಸಮಾನನೆನಿಸುತ್ತಾನೆ. ಆದರೆ ಸಾಕ್ಷಾತ್ ತಂದೆಗಿಂತ ತಂದೆಗೆ ಸಮಾನನೆನಿಸಿದ ಗುರುವೆ ಶ್ರೇಷ್ಠ. ಹೇಗೆಂದರೆ ತಂದೆಗಿಂತ ನೂರುಪಾಲು ತಾಯಿ ಶ್ರೇಷ್ಠಳಾದರೂ ಅವಳಿಗಿಂತ ನೂರುಪಾಲು ಮಂತ್ರೋಪದೇಶಕನಾದ ಗುರುಶ್ರೇಷ್ಠ-ನೆಂಬುದು ಶ್ರುತಿಸಮ್ಮತ.

ಆದರೂ ವಾಸ್ತವ ಬ್ರಹ್ಮಹತ್ಯೆ ಗೋಹತ್ಯೆಗಳು ತತ್ಸಮಾನ ಪಾಪಗಳಿಗಿಂತ ನಾಲ್ಕು-ಪಾಲು ಅಧಿಕವೆಂದೇ ವೇದಸಮ್ಮತ ಎಂದು ಬ್ರಹ್ಮನು ಹೇಳಿದ್ದಾನೆ.

ಇನ್ನು ಅಗಮ್ಯರಾದ ಸ್ತ್ರೀಯರು ಯಾರೆಂದು ಹೇಳುತ್ತೇನೆ. ಸಾಮಾನ್ಯವಾಗಿ ತನಗೆ ತನ್ನ ಹೆಂಡತಿ ಗಮ್ಯಳು. ಬೇರೆ ಸ್ತ್ರೀಯರು ಅಗಮ್ಯರೆಂದು ವೇದದಲ್ಲಿ ಹೇಳಿದೆ. ಅತ್ಯಂತ ಅಗಮ್ಯರು ಯಾರೆಂಬುದನ್ನೂ ಹೇಳುತ್ತೇನೆ. ಶೂದ್ರರಿಗೆ ವಿಪ್ರಪತ್ನಿ, ವಿಪ್ರರಿಗೆ ಶೂದ್ರ ಸ್ತ್ರೀ ಅತ್ಯಂತ ಅಗಮ್ಯಳೆಂದು ಲೋಕದಲ್ಲಿಯೂ ವೇದದಲ್ಲಿಯೂ ಪ್ರಸಿದ್ಧ-ವಾಗಿದೆ. ಶೂದ್ರ ಬ್ರಾಹ್ಮಣ ಸ್ತ್ರೀಯನ್ನು ಕೂಡಿದರೆ ಇಬ್ಬರಿಗೂ ನೂರು ಬ್ರಹ್ಮಹತ್ಯಾ ಸಮಾನ ಪಾಪ. ಕುಂಭೀಪಾಕ ನರಕವಾಗುತ್ತದೆ. ಬ್ರಾಹ್ಮಣ ಶೂದ್ರ ಸ್ತ್ರೀಯನ್ನು ಕೂಡಿದರೆ ಅವನು ಬ್ರಾಹ್ಮಣ ಜಾತಿಯಿಂದ ಭ್ರಷ್ಟನಾಗುತ್ತಾನೆ. ಚಂಡಾಲನಿಗಿಂತ ಅಧಮನೆನಿಸುತ್ತಾನೆ. ಅವನು ನೀಡುವ ಪಿಂಡ ತರ್ಪಣಗಳು ಮಲಮೂತ್ರಸಮಾನ. ಕೋಟಿ ಜನ್ಮಗಳಲ್ಲಿ ಸಂಧ್ಯಾವಂದನೆ ದೇವತಾರ್ಚನೆ ತಪಸ್ಸುಗಳಿಂದ ಗಳಿಸಿದ ಪುಣ್ಯವೆಲ್ಲ ಬ್ರಾಹ್ಮಣನಿಗೆ ಶೂದ್ರ ಸ್ತ್ರೀಭೋಗದಿಂದ ನಾಶವಾಗುವುದು. ಇದರಲ್ಲಿ ಸಂಶಯ ಬೇಡ. ಸುರಾಪಾನ ಮಾಡುವ ಬ್ರಾಹ್ಮಣ ಹರಿವಾಸರದಲ್ಲಿ ಉಣ್ಣುವ ಬ್ರಾಹ್ಮಣ ಇಬ್ಬರೂ ಕುಂಭೀಪಾಕ ನರಕದಲ್ಲಿ ಬೀಳುತ್ತಾರೆ.

ಗುರುಪತ್ನಿ, ರಾಜಪತ್ನಿ, ಸವತಿತಾಯಿ, ಹೆತ್ತತಾಯಿ, ಮಗಳು, ಸೊಸೆ, ಅತ್ತೆ, ಸೋದರಿ, ಸೋದರನ ಪತ್ನಿ, ಸೋದರ ಮಾವನ ಪತ್ನಿ, ತಂದೆಯ ತಾಯಿ, ತಾಯಿಯ ತಾಯಿ, ತಾಯಿಯ ತಂಗಿ, ಸೋದರನ ಮಗಳು, ಶಿಷ್ಯಳು, ಶಿಷ್ಯನ ಹೆಂಡತಿ, ಸೋದರಳಿಯನ ಹೆಂಡತಿ, ಸೋದರನ ಸೊಸೆ ಇವರೆಲ್ಲರು ಅಗಮ್ಯ ಸ್ತ್ರೀಯರು. ಇವರಲ್ಲಿ ಒಬ್ಬರನ್ನಾಗಲಿ ಅನೇಕರನ್ನಾಗಲಿ ಕೂಡವ ಮಾನವ ತಾಯಿಗೆ ಗಂಡನೆನಿಸಿ ನೂರು ಬ್ರಹ್ಮಹತ್ಯಾ ಸಮಾನ ಪಾಪಕ್ಕೆ ಭಾಗಿಯಾಗುತ್ತಾನೆ. ಅವನು ಯಾವ ಸತ್ಕರ್ಮಕ್ಕೂ ಅನರ್ಹ, ಅಸ್ಪೃಶ್ಯ. ಲೋಕದಲ್ಲಿಯೂ ವೇದದಲ್ಲಿಯೂ ಅತ್ಯಂತ ನಿಂದ್ಯ. ಕುಂಭೀಪಾಕ ನರಕದಲ್ಲಿ ಅವನು ಬೀಳುತ್ತಾನೆ.

ಸಂಧ್ಯಾವಂದನೆ ಮಾಡದವ, ಮಾಡಿದರೂ ಅಶುದ್ಧವಾಗಿ ಮಾಡುವವ ಸಂಧ್ಯಾಹೀನನೆನಿಸುತ್ತಾನೆ.

ವಿಷ್ಣು ಶಿವಭಕ್ತಿ ಸೂರ್ಯ ಗಣಪತಿ ಮಂತ್ರಗಳನ್ನು ಉಪದೇಶ ಪಡೆಯದ ಅಹಂಕಾರಿ ದೀಕ್ಷೆ ಇಲ್ಲದವನೆನಿಸುತ್ತಾನೆ.

ಗಂಗಾಪ್ರವಾಹದ ಎರಡೂ ಪಾರ್ಶ್ವಗಳಲ್ಲಿ ನಾಲ್ಕುಹಸ್ತ ಪ್ರಮಾಣದ ಪ್ರದೇಶಕ್ಕೆ ನಾರಾಯಣ ಸ್ವಾಮಿ. ಅಂಥ ನಾರಾಯಣ ಕ್ಷೇತ್ರ, ಕುರುಕ್ಷೇತ್ರ, ವಿಷ್ಣುಪಾದ, ಕಾಶಿ ಬದರಿ, ಗಂಗಾಸಾಗರ ಸಂಗಮ, ಪುಷ್ಕರ, ಪ್ರಭಾಸ, ವೃಂದಾವನ, ಹರಿದ್ವಾರ, ಕೇದಾರ, ಸರಸ್ವತೀತೀರ, ಗೋದಾವರೀತೀರ, ಕೌಶಿಕೀತೀರ, ತ್ರಿವೇಣೀ ತೀರ ಮುಂತಾದ ಪುಣ್ಯ ತೀರ್ಥಕ್ಷೇತ್ರಗಳಲ್ಲಿ ಹಣದಾಸೆಯಿಂದ ದಾನ ಸ್ವೀಕರಿಸುವವ ತೀರ್ಥ ಪ್ರತಿಗ್ರಾಹಿ ಎನಿಸುತ್ತಾನೆ, ಕುಂಭೀಪಾಕದಲ್ಲಿ ಬೀಳುತ್ತಾನೆ.

ಶೂದ್ರಾದಿ ಹೀನಕುಲದವರಿಗೆ ಪೌರೋಹಿತ್ಯ ಮಾಡಿಸುವವ ಗ್ರಾಮಯಾಜಿ. ದೇವಪೂಜೆಯಿಂದ ಬದುಕುವವನು ದೇವಲ. ಶೂದ್ರನಿಗೆ ಅಡಿಗೆ ಮಾಡುವವ ಸೂಪಕಾರ. ಸಂಧ್ಯಾವಂದನ ದೇವಪೂಜೆಗಳಿಲ್ಲದವ ಪ್ರಮತ್ತ. ಶೂದ್ರಸ್ತ್ರೀಸಂಗ ಮಾಡುವವನ ಬಗ್ಗೆ ಹಿಂದೆಯೆ ಹೇಳಿದ್ದೇನೆ. ಇವರೆಲ್ಲ ಮಹಾಪಾತಕಿಗಳು. ಕುಂಭೀಪಾಕದಲ್ಲಿ ಬೀಳುತ್ತಾರೆ. ಇನ್ನು ಬೇರೆ ನರಕಗಳ ಬಗ್ಗೆ ಹೇಳುತ್ತೇನೆ.

**ಇಲ್ಲಿಗೆ ಶ್ರೀ ಬ್ರಹ್ಮವೈವರ್ತ ಮಹಾಪುರಾಣದಲ್ಲಿ ಎರಡನೆಯದಾದ ಪ್ರಕೃತಿಖಂಡದ ನಾರದನಾರಾಯಣ ಸಂವಾದದಲ್ಲಿ ಸಾವಿತ್ರ್ಯುಪಾಖ್ಯಾನದ ಯಮ ಸಾವಿತ್ರೀ ಸಂವಾದದಲ್ಲಿ ಕರ್ಮವಿಪಾಕದಲ್ಲಿ ಪಾಪಿಗಳ ನರಕ ನಿರೂಪಣ ಬ್ರಹ್ಮಹತ್ಯಾದಿ ಪದಾರ್ಥ ನಿರೂಪಣವೆಂಬ ಮೂವತ್ತನೆ ಅಧ್ಯಾಯ ಮುಗಿಯಿತು.**

## ಸಾವಿತ್ರಿಗೆ ಯಮನ ಉಪದೇಶದಲ್ಲಿ ಕರ್ಮವಿಪಾಕದಲ್ಲಿ ಪಾಪಿಗಳಿಗೆ ಕುಂಡನಿರ್ಣಯ

**ಅಧ್ಯಾಯ-೩೧**

ಯಮ— ಸಾವಿತ್ರಿ, ಹರಿಸೇವೆಯಿಲ್ಲದೆ ಕರ್ಮಬಂಧನ ಪರಿಹಾರವಾಗದು. ಶುಭಕರ್ಮದಿಂದ ಸ್ವರ್ಗ, ಅಶುಭಕರ್ಮದಿಂದ ನರಕ ಸಿಗುತ್ತಲೆ ಇರುತ್ತದೆ.

ಪುಂಶ್ಚಲಿಯ ಮತ್ತು ವೇಶ್ಯೆಯ ಅನ್ನ ಉಣ್ಣುವ ಅವಳ ಸಂಗ ಮಾಡುವ ಬ್ರಾಹ್ಮಣ ಕಾಲಸೂತ್ರದಲ್ಲಿ ನೂರುವರ್ಷ ನರಳಿ ರೋಗಗ್ರಸ್ತ ಶೂದ್ರನಾಗಿ ಹುಟ್ಟುತ್ತಾನೆ.

ಪತಿಯೊಬ್ಬನಲ್ಲಿಯೆ ಅನುರಕ್ತಳಾಗಿರುವವಳು ಪತಿವ್ರತೆ ಎನಿಸುತ್ತಾಳೆ. ಇಬ್ಬರು ಪುರುಷರ ಸಂಬಂಧ ಮಾಡಿದರೆ ಕುಲಟೆ. ಮೂವರನ್ನು ಸೇರಿದರೆ ಧರ್ಷಿಣೆ.

ನಾಲ್ವರನ್ನು ಸೇರಿದರೆ ಪುಂಶ್ಚಲಿ. ಐವರನ್ನು ಅಥವಾ ಆರು ಮಂದಿಯನ್ನು ಕೂಡಿದರೆ ವೇಶ್ಯೆ. ಏಳು ಎಂಟು ಮಂದಿಯ ಸಂಬಂಧವಿದ್ದರೆ ಯುಂಗಿ. ಇನ್ನೂ ಹೆಚ್ಚು ಜನರಿದ್ದರೆ ಮಹಾವೇಶ್ಯೆ ಎನಿಸುವಳು. ಈ ಕುಲಟೆ ಮುಂತಾದವರ ಸಂಗ ಮಾಡುವ ಬ್ರಾಹ್ಮಣ ಅವಟೋದದಲ್ಲಿ ನರಳುತ್ತಾನೆ. ಕುಲಟೆಯ ಸಂಗ ಮಾಡುವವ ನೂರುವರ್ಷ ಆ ನರಕದಲ್ಲಿರುತ್ತಾನೆ. ಧರ್ಷಿಣೀ ಸಂಗ ಉಳ್ಳವ ಇದಕ್ಕೆ ನಾಲ್ಕರಷ್ಟು ದೀರ್ಘಕಾಲ-ವಿರುತ್ತಾನೆ. ಪುಂಶ್ಚಲೀಗಾಮಿ ಆರರಷ್ಟು, ವೇಶ್ಯಾಗಾಮಿ ಎಂಟರಷ್ಟು, ಯುಂಗೀಗಾಮಿ ಹತ್ತರಷ್ಟು, ಮಹಾವೇಶ್ಯಾಗಾಮಿ ನೂರರಷ್ಟು, ಬಳಿಕ ಕುಲಟಾಗಾಮಿ ತಿತ್ತಿರಿ ಪಕ್ಷಿ-ಯಾಗಿ, ಧರ್ಷಿಣೀಗಾಮಿ ಕಾಗೆಯಾಗಿ, ಪುಂಶ್ಚಲೀಗಾಮಿ ಕೋಗಿಲೆಯಾಗಿ, ವೇಶ್ಯಾಗಾಮಿ ತೋಳವಾಗಿ, ಯುಂಗೀಗಾಮಿ ಹಂದಿಯಾಗಿ, ಮಹಾವೇಶ್ಯಾಗಾಮಿ ಸ್ಮಶಾನದಲ್ಲಿ ಮುಳ್ಳುಬೂರುಗ ಮರವಾಗಿ ಏಳು ಜನ್ಮಕಳೆಯುತ್ತಾರೆ.

ಚಂದ್ರ ಸೂರ್ಯಗ್ರಹಣ ಕಾಲಗಳಲ್ಲಿ ಊಟ ಮಾಡುವ ಮೂಢ ಉಂಡ ಅನ್ನದ ಅಗುಳಿನ ಪ್ರಮಾಣದಷ್ಟು ವರ್ಷ ಅರುಂತುದ ನರಕದಲ್ಲಿ ನರಳಿ ಉದರವ್ಯಾಧಿ ಗುಲ್ಮರೋಗಯುಕ್ತನೂ ದಂತಹೀನನೂ ಒಂದುಕಣ್ಣಿನ ಕುರುಡನೂ ಆದ ಮಾನವ-ನಾಗಿ ಹುಟ್ಟುತ್ತಾನೆ. ಒಬ್ಬನಿಗೆ ವಾಗ್ದಾನ ಮಾಡಿದ ಕನ್ಯೆಯನ್ನು ಇನ್ನೊಬ್ಬನಿಗೆ ಕೊಡುವವ ಪಾಂಸುಭೋಜದಲ್ಲಿ ನೂರುವರ್ಷ ನರಳುತ್ತಾನೆ, ಧೂಳು ತಿನ್ನುತ್ತಾನೆ. ದತ್ತಾಪಹಾರಿ ನೂರುವರ್ಷ ಪಾಶವೇಷ್ಟದಲ್ಲಿ ಶರಶಯ್ಯೆಯ ಮೇಲೆ ಮಲಗುತ್ತಾನೆ. ಶಿವಲಿಂಗವನ್ನು ಪೂಜಿಸದವ ಶೂಲಪ್ರೋತದಲ್ಲಿ ನೂರುವರ್ಷವಿದ್ದು ಏಳುಜನ್ಮಗಳಲ್ಲಿ ಕ್ರೂರಮೃಗವಾಗಿ, ಏಳುಜನ್ಮಗಳಲ್ಲಿ ದೇವಪೂಜೆಯಿಂದ ಜೀವಿಸುವ ಬ್ರಾಹ್ಮಣನಾಗಿ ಹುಟ್ಟುತ್ತಾನೆ. ಬ್ರಾಹ್ಮಣರನ್ನು ಶಿಕ್ಷಿಸುತ್ತ ಅವರನ್ನು ಭಯದಿಂದ ನಡುಗುವಂತೆ ಮಾಡುವವ ಪ್ರಕಂಪನದಲ್ಲಿ ಬ್ರಾಹ್ಮಣರ ರೋಮ ಸಂಖ್ಯೆಯಷ್ಟು ವರ್ಷ ನರಳುವನು.

ಕೋಪದಿಂದ ಮುಖ ಗಂಟಿಕ್ಕಿ ಪತಿಗೆ ಕಟುನುಡಿ ನುಡಿವವಳು ಉಲ್ಕಾಮುಖ-ಪತಿಯ ರೋಮ ಪ್ರಮಾಣದಷ್ಟು ವರ್ಷ ನರಕದಲ್ಲಿ ವಾಸಮಾಡುತ್ತ ಬಾಯೊಳಗೆ ಉರಿವ ಕೊಳ್ಳಿ ಮೈಮೇಲೆ ಬಡಿಗೆ ಏಟುಗಳನ್ನು ಅನುಭವಿಸುತ್ತಾಳೆ. ಬಳಿಕ ಏಳು ಜನ್ಮಗಳಲ್ಲಿ ವಿಧವೆಯಾಗಿ ವ್ಯಾಧಿಗ್ರಸ್ತಳಾಗಿ ದುಃಖ ಅನುಭವಿಸುತ್ತಾಳೆ. ಶೂದ್ರ ಭೋಗ್ಯಳಾದ ಬ್ರಾಹ್ಮಣಿಯು ಹದಿನಾಲ್ಕು ಇಂದ್ರರ ಕಾಲ ಅಂಧಕೂಪದಲ್ಲಿ ಕುದಿವ ಶೌಚಜಲ ಪಾನಮಾಡಿ ಸಾವಿರಜನ್ಮ ಕಾಗೆಯಾಗಿ, ನೂರುಜನ್ಮ ಹಂದಿಯಾಗಿ, ನೂರುಜನ್ಮ ಕೋಳಿಯಾಗಿ ಏಳುಜನ್ಮ ನರಿಯಾಗಿ, ಏಳುಜನ್ಮ ಪಾರಿವಾಳವಾಗಿ, ಏಳುಜನ್ಮ ಕಪಿಯಾಗಿ ಹುಟ್ಟಿ ಅನಂತರ ಸರ್ವಭೋಗ್ಯಳಾದ ಚಂಡಾಲಿ, ಕ್ಷಯರೋಗಗ್ರಸ್ತ ಅಗಸಿತಿ, ಕುಷ್ಠರೋಗಗ್ರಸ್ತ ಗಾಣಿಗಿತ್ತಿಯಾಗಿಯೂ ಹುಟ್ಟುತ್ತಾಳೆ.

ವೇಶ್ಯೆ ವೇಧನದಲ್ಲಿ, ಯುಂಗಿ ದಂಡತಾಡನದಲ್ಲಿ, ಮಹಾವೇಶ್ಯೆ ಜಾಲ ರಂಧ್ರದಲ್ಲಿ, ಕುಲಟೆ ದೇಹಚೂರ್ಣದಲ್ಲಿ, ಸ್ವೈರಿಣಿ ದಲನದಲ್ಲಿ, ಧರ್ಷಿಣಿ

ಶೋಷಣದಲ್ಲಿ ಮನ್ವಂತರಕಾಲ ಯಾತನೆ ಅನುಭವಿಸಿ ಮಲಮೂತ್ರ ಭಕ್ಷಿಸಿ ಲಕ್ಷವರ್ಷ ಮಲಕ್ರಿಮಿಯಾಗಿಯೆ ಇರುತ್ತಾಳೆ. ನಾಲ್ಕು ವರ್ಣದವರೂ ತಮ್ಮ ಜಾತಿಯ ಪರಸ್ತ್ರೀಯ ಸಂಗಮಾಡಿದರೂ ಹನ್ನೆರಡು ವರ್ಷಕಾಲ ಕಷದಲ್ಲಿ ಕುದಿವ ಕಷಾಯಜಲ ಕುಡಿಯುತ್ತಾರೆ. ಕ್ಷತ್ರಿಯ ಅಥವಾ ವೈಶ್ಯ ಬ್ರಾಹ್ಮಣಸ್ತ್ರೀಯ ಸಂಗ ಮಾಡಿದರೆ ಮಾತೃಗಾಮಿ ಎನಿಸುತ್ತಾನೆ. ಹದಿನಾಲ್ಕು ಇಂದ್ರರ ಕಾಲ ಶೂರ್ಪದಲ್ಲಿ ಗೆರಸೆ-ಯಾಕಾರದ ಕೃಮಿಗಳಿಂದ ಕಚ್ಚಿಸಿಕೊಂಡು ಕುದಿವ ಮೂತ್ರಪಾನ ಮಾಡುತ್ತಾನೆ. ಏಳುಜನ್ಮಗಳಲ್ಲಿ ಹಂದಿ ಅಥವಾ ಹೋತನಾಗಿ ಹುಟ್ಟುತ್ತಾನೆ.

ತುಲಸಿ, ಗಂಗಾಜಲ, ಶಾಲಗ್ರಾಮ, ಪ್ರತಿಮೆ, ಬ್ರಾಹ್ಮಣ, ಗೋವಹ್ನಿಗಳನ್ನು ಮುಟ್ಟಿ ಶಪಥ ಮಾಡಿ ಅದನ್ನು ನಡೆಸದಿದ್ದರೆ, ದೇವಾಲಯದಲ್ಲಿ ನಿಂತು ಶಪಥ ಮಾಡಿ ನಡೆಸದಿದ್ದರೆ, ಬಲಗೈ ನೀಡಿ ಸುಳ್ಳು ಶಪಥ ಮಾಡಿದರೆ ಹದಿನಾಲ್ಕು ಇಂದ್ರರ ಕಾಲ ಜ್ವಾಲಾಮುಖದಲ್ಲಿ ಬೀಳುತ್ತಾರೆ. ಮಿತ್ರದ್ರೋಹಿ, ಕೃತಘ್ನ, ವಿಶ್ವಾಸಘಾತಕ, ಸುಳ್ಳುಸಾಕ್ಷಿ ನೀಡುವವ ಇವರೂ ಜ್ವಾಲಾಮುಖದಲ್ಲಿ ಬಿದ್ದು ಸುಡಿಸಿಕೊಳ್ಳುತ್ತಾರೆ. ಬಳಿಕ ತುಲಸಿ ಸ್ಪರ್ಶಿ ಏಳುಜನ್ಮಗಳಲ್ಲಿ ಚಂಡಾಲನಾಗುತ್ತಾನೆ. ಗಂಗಾಜಲಸ್ಪರ್ಶಿ ಐದು ಜನ್ಮಗಳಲ್ಲಿ ಮ್ಲೇಚ್ಛನಾಗುತ್ತಾನೆ. ಶಾಲಗ್ರಾಮ ಸ್ಪರ್ಶಿ ಏಳುಜನ್ಮಗಳಲ್ಲಿ ಮಲಕೃಮಿ-ಯಾಗುತ್ತಾನೆ. ಪ್ರತಿಮಾಸ್ಪರ್ಶಿ ಏಳುಜನ್ಮಗಳಲ್ಲಿ ವ್ರಣಕೃಮಿಯಾಗುತ್ತಾನೆ. ಬಲಗೈ ನೀಡುವವ ಏಳು ಜನ್ಮಗಳಲ್ಲಿ ಹಾವಾಗುತ್ತಾನೆ. ದೇವಾಲಯದಲ್ಲಿ ನಿಂತು ಸುಳ್ಳು ಹೇಳುವವ ಏಳು ಜನ್ಮಗಳಲ್ಲಿ ದೇವಪೂಜೆಯಿಂದ ಬದುಕುತ್ತಾನೆ. ಬ್ರಾಹ್ಮಣ ಗೋವು ಮುಂತಾದವರನ್ನು ಮುಟ್ಟಿ ಶಪಥ ಮಾಡುವವ ಮೊದಲಿಗೆ ದಾನ ಸ್ವೀಕರಿಸು-ವವನಾಗುತ್ತಾನೆ. ಮಿತ್ರದ್ರೋಹಿ ಮುಂಗುಸಿಯಾಗುತ್ತಾನೆ. ಕೃತಘ್ನ ಖಡ್ಗಮೃಗ-ವಾಗುತ್ತಾನೆ. ವಿಶ್ವಾಸಘಾತಿ ಹುಲಿಯಾಗುತ್ತಾನೆ. ಸುಳ್ಳು ಸಾಕ್ಷಿ ನೀಡುವವ ಕರಡಿಯಾಗುತ್ತಾನೆ. ತನ್ನ ವಂಶದ ಹಿಂದಿನ ಮುಂದಿನ ಏಳು ತಲೆಮಾರಿನವರನ್ನೂ ನರಕಕ್ಕೆ ಕಳಿಸುತ್ತಾನೆ.

ವೇದವಾಕ್ಯಗಳಲ್ಲಿ ವಿಶ್ವಾಸರಹಿತನಾಗಿ ಅಪಹಾಸ ಮಾಡುತ್ತ ನಿತ್ಯಾಹ್ನಿಕಗಳನ್ನು ತೊರೆದು ವ್ರತ ಉಪವಾಸಗಳನ್ನೂ ಜರಿವ ಕಪಟಿ ಜಿಹ್ಮದಲ್ಲಿ ನೂರುವರ್ಷ ಹಿಮಜಲದಲ್ಲಿ ಮುಳುಗಿರುತ್ತಾನೆ. ನೂರುಜನ್ಮಗಳಲ್ಲಿ ಜಲಜಂತುವಾಗಿ ಹುಟ್ಟುತ್ತಾನೆ. ದೇವ ಬ್ರಾಹ್ಮಣರ ಧನಾಪಹಾರ ಮಾಡುವವ ತನ್ನ ವಂಶದ ಹಿಂದಿನ ಮುಂದಿನ ಹತ್ತು ತಲೆಮಾರಿನವರನ್ನೂ ನರಕಕ್ಕೆ ಬೀಳಿಸಿ ತಾನು ಧೂಮಾಂಧದಲ್ಲಿ ಹೊಗೆ ತಿನ್ನುತ್ತ ನಾಲ್ಕು ಯುಗಕಾಲವಿದ್ದು ನೂರುಜನ್ಮಗಳಲ್ಲಿ ಇಲಿ, ಪಕ್ಷಿ, ಕೃಮಿ, ವೃಕ್ಷಗಳಾಗಿ ಹುಟ್ಟಿ ಭಾರ್ಯಾಹೀನ ವಂಶಹೀನ ವ್ಯಾಧಿಗ್ರಸ್ತ ಮಾನವನಾಗಿ ಹುಟ್ಟುತ್ತಾನೆ.

ಜ್ಯೋತಿಷ್ಯ, ವೈದ್ಯ, ಲೋಹ ಅರಗು ಮುಂತಾದವುಗಳ ಮತ್ತು ರಸವಸ್ತುಗಳ ವ್ಯಾಪಾರಗಳಿಂದ ಬದುಕುವವನು ತನ್ನ ರೋಮಗಳ ಸಂಖ್ಯೆಯಷ್ಟು ವರ್ಷ

ನಾಗವೇಷ್ಟದಲ್ಲಿ ಹಾವುಗಳಿಂದ ಕಚ್ಚಿಸಿಕೊಳ್ಳುತ್ತಾನೆ. ಹೀಗೆ ಪ್ರಸಿದ್ಧ ನರಕಕುಂಡಗಳ ಬಗ್ಗೆ ಹೇಳಿದ್ದೇನೆ. ಅಪ್ರಸಿದ್ಧವಾದ ಬೇರೆ ಸಣ್ಣ ನರಕಗಳೂ ಇವೆ. ಅವುಗಳಲ್ಲಿಯೂ ಪಾಪಿಗಳು ತಮ್ಮ ಕರ್ಮಗಳ ಫಲವನ್ನು ಭೋಗಿಸುತ್ತ ಸಂಸಾರದಲ್ಲಿ ಸುತ್ತುವರು.

ಸಾವಿತ್ರಿ, ಇನ್ನೇನು ಕೇಳಲು ಬಯಸುವಿ ?

**ಇಲ್ಲಿಗೆ ಶ್ರೀ ಬ್ರಹ್ಮವೈವರ್ತ ಮಹಾಪುರಾಣದಲ್ಲಿ ಎರಡನೆಯದಾದ ಪ್ರಕೃತಿಖಂಡದ ನಾರದನಾರಾಯಣ ಸಂವಾದದಲ್ಲಿ ಸಾವಿತ್ರ್ಯುಪಾಖ್ಯಾನದಲ್ಲಿ ಕರ್ಮವಿಪಾಕದಲ್ಲಿ ಪಾಪಿಗಳಿಗೆ ಕುಂಡನಿರ್ಣಯವೆಂಬ ಮೂವತ್ತೊಂದನೆ ಅಧ್ಯಾಯ ಮುಗಿಯಿತು.**

## ಯಮಕಿಂಕರಭಯಪರಿಹಾರಕ್ಕೆ ಕೃಷ್ಣನ ಉಪಾಸನೆ ಮತ್ತು ಕೃಷ್ಣಮಂತ್ರ ಜಪಕಾರಣ ಎಂದು ಯಮನ ಉಪದೇಶ

**ಅಧ್ಯಾಯ-೩೨**

ಸಾವಿತ್ರಿ— ಧರ್ಮರಾಜ, ನೀನು ವೇದ ವೇದಾಂಗಗಳನ್ನು ಅರಿತವ ನಾನಾ ಇತಿಹಾಸ ಪುರಾಣ ಪಂಚರಾತ್ರಗಳನ್ನು ಉಪದೇಶಿಸಬಲ್ಲವ. ಕರ್ಮಗಳಲ್ಲೆಲ್ಲ ಶ್ರೇಷ್ಠ-ವಾಗಿದ್ದು ಕರ್ಮಬಂಧನ ಕಳೆಯಬಲ್ಲ ಕರ್ಮ ಯಾವುದು ? ಯಾವ ಕರ್ಮದಿಂದ ಮಾನವರು ಯಮಯಾತನೆಯಿಂದ ಪಾರಾಗಬಲ್ಲರು ? ಜನನ ಮರಣಗಳನ್ನು ನರಕಭಯವನ್ನು ದೂರಮಾಡಬಲ್ಲ ಕರ್ಮ ಯಾವುದು ಹೇಳು. ನರಕ ಕುಂಡಗಳ ಆಕಾರ ಹೇಗಿರುತ್ತದೆ ? ಯಾವ ಶರೀರದಿಂದ ಅಲ್ಲಿ ಪಾಪಿಗಳಿರುತ್ತಾರೆ ? ಪಾರ್ಥಿವ ದೇಹ ಭಸ್ಮವಾದ ಬಳಿಕ ನರಕ ದುಃಖಾನುಭವಕ್ಕೆ ಬೇರೆ ಯಾವ ದೇಹ ಬರುತ್ತದೆ ? ಆ ದೇಹ ನರಕದ ಶಿಕ್ಷೆ ಅನುಭವಿಸುವಾಗ ಏಕೆ ನಾಶವಾಗದು ?

ಯಮ— ಮಗಳೆ, ನಾಲ್ಕು ವೇದಗಳು ಪುರಾಣ ಇತಿಹಾಸ ಪಂಚರಾತ್ರಾದಿ ಶಾಸ್ತ್ರಗಳಲ್ಲೆಲ್ಲ ಸಾರಭೂತವಾದ ಮಂಗಲಕರವಾದ ಕೃಷ್ಣನ ಆರಾಧನೆಯೆ ಉಕ್ತ-ವಾಗಿದೆ. ಜನನ ಮರಣ ಜರೆ ರೋಗ ಶೋಕ ಸಂತಾಪಗಳನ್ನೆಲ್ಲ ಕಳೆದು ಪರಮಾ-ನಂದ ನೀಡುವ ಸರ್ವಮಂಗಲ ರೂಪವಾದ ನರಕಾರ್ಣವ ತಾರಕವಾದ ಆ ಕರ್ಮವೆ ಭಕ್ತಿವೃಕ್ಷದ ಅಂಕುರವನ್ನು ಬೆಳೆಸುವಂಥಹುದು. ಕರ್ಮವೃಕ್ಷವನ್ನು ಛೇದಿಸು-ವಂಥಹುದು. ಗೋಲೋಕವನ್ನೇರಲು ಸೋಪಾನ, ಸಾಲೋಕ್ಯ ಸಾರ್ಷ್ಟಿ ಸಾರೂಪ್ಯ ಸಾಮೀಪ್ಯಾದಿದಾಯಕ.

ಕೃಷ್ಣಕಿಂಕರರು ಯಮಕಿಂಕರರನ್ನು ಸ್ವಪ್ನದಲ್ಲಿಯೂ ಕಾಣಲಾರರು. ವಿಷ್ಣುವ್ರತವನ್ನಾಚರಿಸುತ್ತ ವಿಷ್ಣುತೀರ್ಥಸ್ನಾನ ವಿಷ್ಣುಪ್ರತಿಮಾರಾಧನ ನಮನಗಳನ್ನು ಮಾಡುತ್ತ ಮೂರು ಹೊತ್ತು ಸಂಧ್ಯಾವಂದನ ಮಾಡುವ ಶುದ್ಧಾಚಾರಿಗಳು ಸ್ವಧರ್ಮನಿರತರು ಹರಿವಾಸರದಲ್ಲಿ ಉಣದವರು ಯಮಲೋಕಕ್ಕೆ ಹೋಗುವುದಿಲ್ಲ. ನರಕಕುಂಡಗಳನ್ನು ಕಾಣುವುದಿಲ್ಲ.

ಕೃಷ್ಣಸೇವೆ ಮಾಡದ ಅನ್ಯದೇವತಾಭಕ್ತರು ಸ್ವರ್ಗಭೂಮಿಗಳಲ್ಲಿ ತಿರುಗುತ್ತ ಇರುತ್ತಾರೆ ಹೊರತು ಅವರಿಗೆ ಸುಖವಿಲ್ಲ.

ಗರುಡನನ್ನು ಕಂಡ ಹಾವುಗಳಂತೆ ಕೃಷ್ಣೋಪಾಸಕನಿಗೆ ಹೆದರಿ ನನ್ನ ದೂತರು ದೂರ ಓಡುತ್ತಾರೆ. ಕೈಯಲ್ಲಿ ಪಾಶವನ್ನು ಹಿಡಿದು ಮರ್ತ್ಯಲೋಕಕ್ಕೆ ಹೋಗುವ ನನ್ನ ದೂತರಿಗೆ ನಾನು ಹೇಳುತ್ತೇನೆ- 'ನೀವು ಎಲ್ಲ ಕಡೆ ಹೋಗಬಹುದು. ವಿಷ್ಣುಭಕ್ತರ ಮನೆಗೆ ಮಾತ್ರ ಹೋಗಬೇಡಿ. ವಿಷ್ಣುಮಂತ್ರೋಪಾಸಕರ ಹೆಸರುಗಳೂ ನಿಮ್ಮನ್ನು ನಾಶಮಾಡಬಲ್ಲುವು.' ವಿಷ್ಣುಭಕ್ತನಿಗೆ ಚಿತ್ರಗುಪ್ತ ಕೈ ಮುಗಿಯುತ್ತಾನೆ. ಬ್ರಹ್ಮನೂ ಅವನಿಗೆ ಮಧುಪರ್ಕಾದಿಗಳನ್ನು ನೀಡುತ್ತಾನೆ. ಬೆಂಕಿಯ ಜ್ವಾಲೆಯಲ್ಲಿ ತೃಣಕಾಷ್ಠಗಳು ಉರಿದು ಹೋಗುವಂತೆ ವಿಷ್ಣುಭಕ್ತನ ದೃಷ್ಟಿಗೋಚರವಾಗುವ ಮೋಹ ಸಂಮೋಹಗಳೆಲ್ಲ ನಾಶವಾಗುವುವು. ಕಾಮಕ್ರೋಧ ಲೋಭ ಮೃತ್ಯು ರೋಗ ಜರೆ ಶೋಕಗಳೆಲ್ಲವೂ ಓಡುವುವು. ಯಮಲೋಕಕ್ಕೆ ಹೋಗದವರು ಯಾರೆಂದು ಹೇಳಿದ್ದೇನೆ. ಇನ್ನು ಮುಂದೆ ಶರೀರದ ಬಗ್ಗೆ ವಿವರಣೆ ನೀಡುತ್ತೇನೆ, ಕೇಳು.

ಪೃಥಿವೀ ವಾಯು ಆಕಾಶ ತೇಜಸ್ಸು ಜಲಗಳಿಂದಾದ ಸ್ಥೂಲದೇಹ ನಶ್ವರ. ಭಸ್ಮವಾಗುತ್ತದೆ. ಸಾಯುವಾಗ ಜೀವನಿಗೆ ಅಂಗುಷ್ಠ ಪ್ರಮಾಣದ ಸೂಕ್ಷ್ಮದೇಹ ಬರುತ್ತದೆ. ಅದು ನನ್ನ ಲೋಕದಲ್ಲಿ ಉರಿವ ಬೆಂಕಿಗೆ ಬಿದ್ದರೂ ಭಸ್ಮವಾಗದು. ನೀರಲ್ಲಿ ಮುಳುಗಿಸಲಿ, ಬಹುಕಾಲ ಹೊಡೆಯಲಿ, ಶಸ್ತ್ರ ಅಸ್ತ್ರ ಕಂಟಕ, ಕುದಿವ ನೀರು, ಕಾದ ಕಬ್ಬಿಣ ಕಲ್ಲು ಇವಾವುದರಿಂದಲೂ ಅದು ನಾಶವಾಗದು. ಕಾದ ಕಬ್ಬಿಣದ ಪ್ರತಿಮೆಯನ್ನು ಅಪ್ಪಿದರೂ ಸುಡುವುದಿಲ್ಲ. ವೇದನೆ ಮಾತ್ರವಾಗುತ್ತದೆ.

ದೇವಿ, ನರಕ ಕುಂಡಗಳ ಲಕ್ಷಣವನ್ನೂ ಹೇಳುತ್ತೇನೆ, ಕೇಳು.

**ಇಲ್ಲಿಗೆ ಶ್ರೀ ಬ್ರಹ್ಮವೈವರ್ತ ಮಹಾಪುರಾಣದಲ್ಲಿ ಎರಡನೆಯದಾದ ಪ್ರಕೃತಿಖಂಡದ ನಾರದನಾರಾಯಣ ಸಂವಾದದಲ್ಲಿ ಸಾವಿತ್ರ್ಯುಪಾಖ್ಯಾನದಲ್ಲಿ ಮೂವತ್ತೆರಡನೆಯ ಅಧ್ಯಾಯ ಮುಗಿಯಿತು.**

# ಯಮಲೋಕದ ನರಕ ಕುಂಡಗಳ ಲಕ್ಷಣ ಪರಿಮಾಣ ಕಥನ

**ಅಧ್ಯಾಯ-೩೩**

ಯಮ— ನರಕದ ಎಲ್ಲ ಕುಂಡಗಳೂ ವರ್ತುಲಾಕಾರವಾಗಿ ಬಹು ಆಳವಾಗಿದ್ದು ಕಲ್ಲಿನಿಂದ ಕಟ್ಟಿಸಿದ್ದರೂ ಭಗವಂತನ ಇಚ್ಛೆಯಂತೆ ಪ್ರಳಯದವರೆಗೂ ನಾಶ ಹೊಂದದೆ ಪಾಪಿಗಳಿಗೆ ದುಃಖ ನೀಡುತ್ತವೆ.

ವಹ್ನಿಕುಂಡ ನೂರು ಮೊಳ ಎತ್ತರಕ್ಕೆ ಜ್ವಲಿಸುವ ಕೆಂಡದಿಂದ ತುಂಬಿದ್ದು ಒಂದು ಹರದಾರಿಯಷ್ಟು ಸುತ್ತಳತೆಯಿಂದ ಕೂಡಿದೆ.

ತಪ್ತಕುಂಡ ಕುದಿವ ನೀರಿನಿಂದ ಕ್ರೂರ ಜಂತುಗಳಿಂದ ಅಂಧಕಾರದಿಂದ ತುಂಬಿದ್ದು ಅರ್ಧಹರದಾರಿ ಸುತ್ತಳತೆ ಉಳ್ಳದ್ದು.

ಕ್ಷಾರಕುಂಡ ಕುದಿವ ಕ್ಷಾರಜಲದಿಂದ ಮೊಸಳೆಗಳಿಂದ ತುಂಬಿದ್ದು ಒಂದು ಹರದಾರಿ ಸುತ್ತಳತೆ ಉಳ್ಳದ್ದು.

ವಿಟ್‌ಕುಂಡ ಮಲ, ಮೂತ್ರ, ಕ್ರಿಮಿಗಳಿಂದ ತುಂಬಿದ್ದು ಒಂದು ಹರದಾರಿ ಸುತ್ತಳತೆ ಉಳ್ಳದ್ದು. ಅತ್ಯಂತ ದುರ್ಗಂಧಮಯ.

ಮೂತ್ರಕುಂಡ ಕುದಿವ ಮೂತ್ರದ್ರವದಿಂದ ಮೂತ್ರಕೀಟಗಳಿಂದ ಅಂಧಕಾರ-ದಿಂದ ತುಂಬಿದ್ದು ಎರಡು ಹರದಾರಿ ಸುತ್ತಳತೆಯದು.

ಶ್ಲೇಷ್ಮಕುಂಡ ಶ್ಲೇಷ್ಮ, ಶ್ಲೇಷ್ಮಕೀಟಗಳಿಂದ ತುಂಬಿದ್ದು ಒಂದು ಹರದಾರಿ ಸುತ್ತಳತೆಯದು. ಗರಕುಂಡ ವಿಷ, ವಿಷಕ್ರಿಮಿಗಳಿಂದ ತುಂಬಿದ್ದು ಅರ್ಧಹರದಾರಿ ಸುತ್ತಳತೆ ಉಳ್ಳದ್ದು. ನೇತ್ರಮಲಕುಂಡ ನೇತ್ರಮಲ ಮತ್ತು ಕ್ರಿಮಿಗಳಿಂದ ತುಂಬಿದೆ. ಅರ್ಧಹರದಾರಿ ಸುತ್ತಳತೆ, ವಸಾಕುಂಡ ಕೊಬ್ಬಿನಿಂದ ತುಂಬಿದೆ. ನಾಲ್ಕು ಹರದಾರಿ ಅದರ ಸುತ್ತಳತೆ. ಶುಕ್ರಕುಂಡ ಶುಕ್ರ ಮತ್ತು ಶುಕ್ರಕೀಟಗಳಿಂದ ತುಂಬಿದೆ. ಒಂದು ಹರದಾರಿ ಸುತ್ತಳತೆ. ಅಸೃಕ್‌ಕುಂಡ ದುರ್ಗಂಧರಕ್ತದಿಂದ ತುಂಬಿದೆ. ಒಂದು ವಾಪಿಯಷ್ಟು, ಅಂದರೆ, ನಾಲ್ಕುಸಾವಿರ ಧನುಃ ಪ್ರಮಾಣದಷ್ಟು ಸುತ್ತಳತೆ.

ಅಶ್ರುಕುಂಡ ಮಾನವರ ಕಣ್ಣೀರಿಂದ ತುಂಬಿದೆ. ಅರ್ಧವಾಪೀ ಪ್ರಮಾಣ. ಗಾತ್ರಮಲಕುಂಡ ಮಾನವ ಶರೀರಮಲ ಮತ್ತು ಕ್ರಿಮಿಗಳಿಂದ ತುಂಬಿದೆ. ಕರ್ಣವಿಟ್ ಕುಂಡ ಕರ್ಣಮಲ ಮತ್ತು ಕೀಟಗಳಿಂದ ತುಂಬಿದೆ. ವಾಪಿಯ ಕಾಲಂಶ ಪರಿಮಾಣ. ಮಜ್ಜಾಕುಂಡ ಮಹಾ ದುರ್ಗಂಧದ ಮಜ್ಜೆಯಿಂದ ತುಂಬಿದೆ. ವಾಪಿಯ ಕಾಲಂಶ ಪರಿಮಾಣ. ಮಾಂಸ ಕುಂಡ ಹಸಿ ಮಾಂಸದಿಂದ ಕೀಟಗಳಿಂದ ತುಂಬಿದೆ. ಒಂದು ವಾಪಿಯಷ್ಟು ಉದ್ದಗಲ. ಕನ್ಯಾವಿಕ್ರಯ ಮಾಡುವವರು ಇಲ್ಲಿ 'ರಕ್ಷಿಸಿ'

ಎನ್ನುತ್ತಿರುತ್ತಾರೆ. ನಖಕುಂಡ, ಲೋಮಕುಂಡ, ಕೇಶಕುಂಡ, ಅಸ್ಥಿಕುಂಡ ಈ ನಾಲ್ಕು ನರಕಗಳು ವಾಪಿಯ ಕಾಲಂಶ ಪರಿಮಾಣದವುಗಳು.

ತಪ್ತ ತಾಮ್ರಕುಂಡ ಚೆನ್ನಾಗಿ ಕಾದ ತ್ರಾಮದ ಲಕ್ಷ ಪ್ರತಿಮೆಗಳಿಂದ ತುಂಬಿದೆ. ಪ್ರತಿಮೆಗಳನ್ನು ತಬ್ಬಿಕೊಂಡು ಮೈ ಸುಡಿಸಿಕೊಳ್ಳುವ ಸ್ಥಳ. ಎರಡು ಹರದಾರಿ ಪ್ರಮಾಣದ್ದು.

ತಪ್ತಲೋಹಕುಂಡವೂ ಚೆನ್ನಾಗಿ ಕಾದ ಕಬ್ಬಿಣದ ಲಕ್ಷ ಪ್ರತಿಮೆಗಳಿಂದ ತುಂಬಿದೆ. ನಾಲ್ಕು ಹರದಾರಿ ಪ್ರಮಾಣದ್ದು. ಕತ್ತಲು ತುಂಬಿದ ಭೀಕರ ನರಕ. ಘರ್ಮಕುಂಡ, ತಪ್ತಸುರಾಕುಂಡಗಳು ಅರ್ಧವಾಪೀ ಪ್ರಮಾಣದಷ್ಟಿವೆ.

ತೀಕ್ಷ್ಣಕಂಟಕ ಕುಂಡ ಮುಳ್ಳುಬೂರುಗ ಮರದ ಕೆಳಗೆ ಒಂದು ಹರದಾರಿ ಸುತ್ತಳತೆ. ಲಕ್ಷ ಪುರುಷ ಪ್ರಮಾಣದಷ್ಟು ಆಳವಾಗಿದ್ದು ಧನುಃ ಪ್ರಮಾಣದ ತೀಕ್ಷ್ಣಕಂಟಕಗಳಿಂದ ತುಂಬಿದೆ. ಮರದ ಮೇಲಿಂದಲೂ ಕಂಟಕಗಳು ಬೀಳುತ್ತವೆ. ನನ್ನ ದೂತರಿಂದ ತಲೆ ಒಡೆಸಿಕೊಂಡು ಆ ಮುಳ್ಳುಗಳಿಂದ ಚುಚ್ಚಿಸಿಕೊಂಡು ದಾಹ-ದಿಂದ 'ನೀರು!' ಎನ್ನುತ್ತಾರೆ ಪಾಪಿಗಳು.

ವಿಷಕುಂಡ ತಕ್ಷಕಾದಿ ಸರ್ಪಗಳ ವಿಷದಿಂದ ತುಂಬಿದೆ. ಹರದಾರಿ, ಸುತ್ತಳತೆ. ತಪ್ತತೈಲಕುಂಡ ಕಾದ ಎಣ್ಣೆಯಿಂದ ತುಂಬಿದೆ. ನಾಲ್ಕು ಹರದಾರಿ ಸುತ್ತಳತೆ. ಶಸ್ತ್ರಕುಂಡ ಶೂಲಾಕಾರದ ತೀಕ್ಷ್ಣ ಅಗ್ರಭಾಗವುಳ್ಳ ಕಬ್ಬಿಣದ ಶಸ್ತ್ರಗಳಿಂದ ತುಂಬಿದೆ ಒಂದು ಹರದಾರಿ ಸುತ್ತಳತೆ.

ಕುಂತಕುಂಡ ಶಸ್ತ್ರದ ಹಾಸಿಗೆಯಾಗಿದೆ. ಕೀಟಗಳಿಂದ ತುಂಬಿದೆ. ಕಾಲು ಹರದಾರಿ-ಯಷ್ಟು ಸುತ್ತಳತೆ.

ದಂತಕುಂಡ ವಿಕಾರವಾದ ಹರಿತವಾದ ಹಲ್ಲುಗಳಿಂದ, ಕೀಟಗಳಿಂದ ಕತ್ತಲಿಂದ ತುಂಬಿದೆ. ಪೂಯಕುಂಡ ಅತಿ ದುರ್ಗಂಧದ ಕೀವು ತುಂಬಿದ ಅರ್ಧಹರದಾರಿ ಪ್ರಮಾಣದ ಕುಂಡ. ಸರ್ಪಕುಂಡ ಹಿಮಜಲದಿಂದ ತುಂಬಿದೆ. ತಾಳೆ ಮರದಷ್ಟು ಪ್ರಮಾಣದ ಏಳುಕೋಟಿ ಸರ್ಪಗಳು ಪಾಪಿಗಳನ್ನು ಸುತ್ತಿ ಕಚ್ಚುತ್ತವೆ. ನಾಲ್ಕು ಹರದಾರಿ ಸುತ್ತಳತೆಯಿಂದ ಕೂಡಿದೆ.

ಮಶಕ-ದಂಶ-ಗರಲ ಕುಂಡಗಳು ಮೂರು ನೊಣ ಸೊಳ್ಳೆ ವಿಷಗಳಿಂದ ತುಂಬಿದ್ದು ಅರ್ಧ ಹರದಾರಿ ಸುತ್ತಳತೆ ಉಳ್ಳವುಗಳು. ಪಾಪಿಗಳನ್ನು ಇಲ್ಲಿ ಕೈಕಾಲು ಕಟ್ಟಿ ಹಾಕುತ್ತಾರೆ.

ವಜ್ರಕೀಟ ಕುಂಡ, ವೃಶ್ಚಿಕ ಕುಂಡಗಳು ವಜ್ರಕೀಟ ಮತ್ತು ಚೇಳುಗಳಿಂದ ತುಂಬಿದ್ದು ಅರ್ಧವಾಪೀ ಪ್ರಮಾಣದವುಗಳಾಗಿವೆ.

ಶರಕುಂಡ, ಶೂಲಕುಂಡ, ಖಡ್ಗಕುಂಡಗಳೂ ಬಾಣ ಶೂಲ ಖಡ್ಗಗಳಿಂದ ತುಂಬಿದ್ದು ಅರ್ಧವಾಪೀ ಪ್ರಮಾಣದವುಗಳಾಗಿವೆ.

ಗೋಲಕುಂಡ ಕುದಿವ ಕೆಸರು ಅಂಧಕಾರ ಕೀಟಗಳಿಂದ ತುಂಬಿದೆ. ವಜ್ರಕುಂಡ ಅಂಧಕಾರ ವಜ್ರಕೀಟಗಳಿಂದ ತುಂಬಿದೆ. ನೂರು ಧನುಃಪ್ರಮಾಣ ಇದರ ಸುತ್ತಳತೆ.

ತಪ್ತಪಾಷಾಣಕುಂಡ ಕಾದ ಕಲ್ಲುಗಳಿಂದ ತುಂಬಿ ಉರಿವ ಕೆಂಡದಂತಿದೆ. ವಾಪೀ ಪ್ರಮಾಣಕ್ಕಿಂತ ಎರಡರಷ್ಟು ಇದರ ಸುತ್ತಳತೆ.

ತೀಕ್ಷ್ಣಪಾಷಾಣ ಕುಂಡ ಕತ್ತಿಯ ಅಲುಗಿನಂತೆ ತೀಕ್ಷ್ಣವಾದ ಕಲ್ಲುಗಳಿಂದ ತುಂಬಿದೆ. ಲಾಲಾಕುಂಡ ದುರ್ವಾಸನೆಯ ಜೊಲ್ಲಿನಿಂದ ತುಂಬಿದ್ದು ಆಳವಾಗಿದೆ. ಹರದಾರಿ ಸುತ್ತಳತೆ ಉಳ್ಳದ್ದು. ಮಸೀಕುಂಡ ಕಾಡಿಗೆಯಂತೆ ಕಪ್ಪಾದ ಕುದಿವ ನೀರಿಂದ ತುಂಬಿದೆ. ನೂರು ಧನುಃ ಪ್ರಮಾಣದಷ್ಟು ಸುತ್ತಳತೆ ಉಳ್ಳದ್ದು.

ಚೂರ್ಣಕುಂಡ ಸುಣ್ಣದ ನೀರಿನಿಂದ ತುಂಬಿದೆ. ಹರದಾರಿ ಸುತ್ತಳತೆ ಪಾಪಿಗಳು ಸುಣ್ಣದ ನೀರು ಕುಡಿದು ಬೆಂದುಹೋಗುತ್ತಾರೆ.

ಚಕ್ರಕುಂಡ ಕುಂಬಾರನ ಚಕ್ರದಂತೆ ಸತತವಾಗಿ ಸುತ್ತುತ್ತದೆ. ಅದರ ಹ ತವಾದ ಹದಿನಾರು ಹಾರೆ ಕಾಲುಗಳ ನಡುವೆ ಪಾಪಿಗಳು ಚೂರುಚೂರಾಗುತ್ತಾರೆ.

ವಕ್ರಕುಂಡ ಅತ್ಯಂತ ವಕ್ರ, ಆಳವಾಗಿದೆ. ನಾಲ್ಕು ಹರದಾರಿ ಸುತ್ತಳತೆ. ಗುಹೆಯಂತೆ ಆಕಾರ. ಕುದಿವ ನೀರಿನಲ್ಲಿ ಜಲಜಂತುಗಳಿವೆ. ಕತ್ತಲು ಆವರಿಸಿದೆ. ಭಯಾನಕವಾಗಿದೆ.

ಕೂರ್ಮಕುಂಡ ಭಯಂಕರ ವಿಕೃತಾಕಾರದ ಕೋಟಿ ಆಮೆಗಳಿಂದ ತುಂಬಿದೆ. ಜ್ವಾಲಾಕುಂಡ ಒಂದು ಹರದಾರಿ ಸುತ್ತಳತೆ ಇದ್ದು ಬೆಂಕಿಯ ಜ್ವಾಲೆಯಿಂದ ತುಂಬಿದೆ. ದಗ್ಧಕುಂಡ ಆಳವಾಗಿದ್ದು ಸುಡುವ ಬೂದಿಯಿಂದ ತುಂಬಿದೆ. ಹರದಾರಿ ಸುತ್ತಳತೆ-ಯಿಂದ ಕೂಡಿದೆ. ಕಾದಕಲ್ಲು ಮಣ್ಣು ಹೆಂಟೆಗಳಿಂದ ತುಂಬಿದೆ. ಗಾಢಾಂಧಕಾರಕ-ವಿದಿದೆ. ಪಾಪಿಗಳ ಮೈ ಇಲ್ಲಿ ದಗ್ಧವಾಗುತ್ತದೆ.

ತಪ್ತಸೂರ್ಮಿಕುಂಡ ದೊಡ್ಡ ಅಲೆಗಳಿಂದ ಕೂಡಿದ ಕುದಿವ ಕ್ಷಾರಜಲದಿಂದ ತುಂಬಿದೆ. ಜಲಜಂತುಯುಕ್ತವಾಗಿದೆ. ಕತ್ತಲು ತುಂಬಿದೆ. ನಾಲ್ಕು ಹರದಾರಿ ಸುತ್ತಳತೆ.

ಅಸಿಪತ್ರಕುಂಡ ಕತ್ತಿಯ ಅಲುಗಿನಂತೆ ಹರಿತವಾದ ಎಲೆಗಳುಳ್ಳ ಎತ್ತರದ ತಾಳೆ ಮರದ ಕೆಳಗೆ ಅರ್ಧ ಹರದಾರಿ ಸುತ್ತಳತೆಯಲ್ಲಿರುವ ಕತ್ತಲು ತುಂಬಿದ ಕುಂಡ. ಮರದ ತುದಿಯಿಂದ ಎಲೆಗಳು ಪಾಪಿಗಳ ಮೇಲೆ ಬೀಳುವುವು. ಅದರಿಂದ ಅವರು ರಕ್ತಮಯರಾಗಿ 'ಕಾಪಾಡಿ' ಎಂದು ಕಿರಚುವರು.

ಕ್ಷುರಧಾರಕುಂಡ ಕ್ಷೌರದ ಕತ್ತಿಯಂಥ ತೀಕ್ಷ್ಣವಾದ ಅಸ್ತ್ರಗಳಿಂದ ತುಂಬಿದ ನೂರು ಧನುಃಪ್ರಮಾಣ ಸುತ್ತಳತೆಯುಳ್ಳ ಕುಂಡ.

ಸೂಜಿಮುಖಕುಂಡ ಸೂಜಿಯ ಮೊನೆಯಂತೆ ತೀಕ್ಷ್ಣವಾದ ಅಸ್ತ್ರಗಳಿಂದ ತುಂಬಿದ ಐವತ್ತು ಧನುಃ ಪ್ರಮಾಣ ಸುತ್ತಳತೆಯ ಕುಂಡ.

ಗೋಧಾಮುಖಕುಂಡ ಹೆಂಟೆಗೊದ್ದನ ಮುಖದ ಆಕಾರದಲ್ಲಿ ಬಹು ಆಳವಾದ ಭಯಂಕರವಾದ ಕುಂಡ. ಇಪ್ಪತ್ತು ಧನುಃ ಪ್ರಮಾಣದಷ್ಟು ಸುತ್ತಳತೆ.

ನಕ್ರಮುಖ ಕುಂಡ ಮೊಸಳೆಯ ಮುಖದ ಆಕಾರದಲ್ಲಿ ಬಹು ಆಳದ ಬಾವಿಯ ರೂಪದಲ್ಲಿರುವ ಹದಿನಾರು ಧನುಃ ಪ್ರಮಾಣದ ಸುತ್ತಳತೆಯ ಕುಂಡ.

ಗಜದಂಶಕುಂಡ ಆನೆಗಳ ಹಿಂಡಿನಿಂದ, ಆನೆಯ ದಂತದಿಂದ ಗಾಯಗೊಂಡ ಪಾಪಿಗಳ ರಕ್ತದಿಂದ ತುಂಬಿದ್ದು ನೂರುಧನುಃ ಪ್ರಮಾಣದಷ್ಟು ಸುತ್ತಳತೆಯದಾಗಿದೆ.

ಗೋಮುಖ ಕುಂಡ ಗೋಮುಖಾಕಾರದಲ್ಲಿದ್ದು ಮೂವತ್ತು ಧನುಃ ಪ್ರಮಾಣ ಸುತ್ತಳತೆಯದು. ಕುಂಭೀಪಾಕ ಗಡಿಗೆಯ ಆಕಾರದ್ದು. ಕಾಲಚಕ್ರ ಪ್ರಭಾವದಿಂದ ಸತತ ತಿರುಗುತ್ತದೆ. ನಾಲ್ಕು ಹರದಾರಿ ಸುತ್ತಳತೆಯ ಕತ್ತಲು ತುಂಬಿದ ಭಯಂಕರ ನರಕ. ಒಂದು ಲಕ್ಷ ಪುರುಷ ಪ್ರಮಾಣ ಆಳವಾಗಿದೆ. ಅದರೊಳಗೆ ತಪ್ತತೈಲಕುಂಡ, ತಪ್ತಲೋಹಕುಂಡ, ತಪ್ತ ಪಾಷಾಣ ಕುಂಡಗಳೆಲ್ಲ ಇವೆ. ಮಹಾಪತಕಿಗಳು ಪಾಪಿಗಳಲ್ಲೆಲ್ಲ ಪ್ರಧಾನರು ಅಲ್ಲಿ ತುಂಬಿಕೊಂಡಿದ್ದಾರೆ. ಬೇರೆ ಎಲ್ಲ ನರಕಗಳಲ್ಲಿರುವ ಒಟ್ಟು ಪಾಪಿಗಳಿಗಿಂತ ನಾಲ್ಕುಪಾಲು ಹೆಚ್ಚು ಪಾಪಿಗಳು ಇಲ್ಲಿ ಇದ್ದಾರೆ. ಎಲ್ಲ ನರಕಗಳಿಗಿಂತ ಪ್ರಧಾನ ಈ ನರಕ.

ಕಾಲಸೂತ್ರಕುಂಡ ಕಾಲಪಾಶದಿಂದ ಬದ್ಧರಾದ ಪಾಪಿಗಳು ಕುದಿವ ನೀರಲ್ಲಿ ಸೂತ್ರದ ಬೊಂಬೆಗಳಂತೆ ನನ್ನ ದೂತರಿಂದ ಕ್ಷಣಕ್ಷಣದಲ್ಲಿ ಮುಳುಗಿಸಿ ಎಬ್ಬಿಸಲ್ಪಡುವ ಕುಂಡ. ಉಚ್ಛ್ವಾಸ ನಿಶ್ವಾಸಗಳಿಗೇ ತಡೆಯುಂಟಾಗುವುದರಿಂದ ಅತ್ಯಂತ ಕ್ಲೇಶದಾಯಕ ಈ ನರಕ.

ಅವಟೋದ ಕುಂಡ ಕುದಿವ ನೀರಿನಿಂದ ತುಂಬಿದ ಇಪ್ಪತ್ತು ಧನುಃಪ್ರಮಾಣ ಸುತ್ತಳತೆಯ ಕುಂಡ.

ಅರುಂತುದಕುಂಡ ಮುಟ್ಟಿದ ಮಾತ್ರಕ್ಕೆ ಸಕಲ ರೋಗಗಳುಂಟುಮಾಡುವ ನೀರಿನಿಂದ ತುಂಬಿದ್ದು ನೂರು ಧನುಃ ಪ್ರಮಾಣ ಸುತ್ತಳತೆ ಉಳ್ಳದ್ದು.

ಪಾಂಸು ಭೋಜಕುಂಡ ಕಾದ ಮರಳಿನಿಂದ ತುಂಬಿದ, ನೂರು ಧನುಃ ಪ್ರಮಾಣ ಸುತ್ತಳತೆಯ ಕುಂಡ. ಪಾಶವೇಷ್ಟನಕುಂಡದಲ್ಲಿ ಬಿದ್ದೊಡನೆ ಪಾಪಿ ಪಾಶಬದ್ಧನಾಗುತ್ತಾನೆ. ಒಂದು ಹರದಾರಿ ಸುತ್ತಳತೆ.

ಶೂಲಪ್ರೋತ ಕುಂಡದಲ್ಲಿ ಬಿದ್ದೊಡನೆ ಪಾಪಿಗಳು ಶೂಲದಲ್ಲಿ ಪೋಣಿಸಲ್ಪಡುತ್ತಾರೆ. ಇಪ್ಪತ್ತು ಧನುಃ ಪ್ರಮಾಣ ಇದರ ಸುತ್ತಳತೆ.

ಪ್ರಕಂಪನಕುಂಡದಲ್ಲಿ ಪಾಪಿ ಬಿದ್ದೊಡನೆ ನಡುಗುತ್ತಾನೆ. ಅಷ್ಟು ತಣ್ಣಗೆ ಕೊರೆವ ನೀರು. ಅರ್ಧಹರದಾರಿ ಇದರ ಸುತ್ತಳತೆ.

ಉಲ್ಕಾಮುಖಕುಂಡದಲ್ಲಿ ಬಿದ್ದ ಪಾಪಿಗಳ ಬಾಯಿಗೆ ನನ್ನ ದೂತರು ಉರಿವ ಕೊಳ್ಳಿ-ಯನ್ನಿಡುವರು. ಇಪ್ಪತ್ತು ಧನುಃ ಪ್ರಮಾಣ ಸುತ್ತಳತೆ. ಲಕ್ಷ ಪುರುಷ ಪ್ರಮಾಣ ಆಳ.

ಅಂಧ ಕೂಪ ಮಹಾ ಅಂಧಕಾರದಿಂದ ತುಂಬಿದ ಕೂಪಾಕಾರದ ನರಕ. ನಾನಾ ಪ್ರಕಾರದ ಭಯಂಕರ ಕ್ರಿಮಿಗಳಿವೆ. ಕುದಿವ ನೀರಲ್ಲಿ ಬೆಂದು ಕೀಟಗಳಿಂದ ಕಣ್ಣು ಕಳೆದುಕೊಂಡು ಪರಸ್ಪರ ನೋಡಲಾರದಂಥ ಪಾಪಿಗಳಿಂದ ತುಂಬಿರುತ್ತದೆ.

ವೇಧನ ಕುಂಡದ ನಾನಾ ಪ್ರಕಾರದ ಶಸ್ತ್ರಗಳ ಇರಿತಕ್ಕೆ ಬಲಿಯಾಗುವ ಪಾಪಿಗಳ ನರಕ. ಇಪ್ಪತ್ತು ಧನುಃ ಪ್ರಮಾಣ ಸುತ್ತಳತೆ.

ದಂಡತಾಡನ ಕುಂಡ ಪಾಪಿಗಳನ್ನು ದಂಡದಿಂದ ಹೊಡೆಯುವ ಸ್ಥಳ. ಹದಿನಾರು ಧನುಃ ಪ್ರಮಾಣ.

ಜಾಲಬದ್ಧಕುಂಡ ಪಾಪಿಗಳು ದೊಡ್ಡ ಬಲೆಯಲ್ಲಿ ಮೀನುಗಳಂತೆ ಸಿಕ್ಕಿ ಬೀಳುವ ನರಕ. ಮೂವತ್ತು ಧನುಃ ಪ್ರಮಾಣ ಸುತ್ತಳತೆ.

ದೇಹಚೂರ್ಣಕುಂಡದಲ್ಲಿ ಪಾಪಿಗಳು ಬಿದ್ದೊಡನೆ ಅವರ ದೇಹ ಪುಡಿಪುಡಿಯಾಗುವುದು. ಕೋಟಿ ಪುರುಷಪ್ರಮಾಣ ಆಳ. ಇಪ್ಪತ್ತು ಧನುಃ ಪ್ರಮಾಣ ಸುತ್ತಳತೆ. ಕತ್ತಲು ತುಂಬಿದೆ.

ದಲನಕುಂಡದಲ್ಲಿ ಪಾಪಿಗಳು ಒನಕೆ ಏಟಿಗೆ ಒಡೆದು ಸೀಳಾಗುತ್ತಾರೆ. ಹದಿನಾರು ಧನುಃ ಪ್ರಮಾಣ.

ಶೋಷಣ ಕುಂಡದಲ್ಲಿ ನೀರಿಲ್ಲ. ಕಾದ ಮರಳಿನ ರಾಶಿಯ ಮೇಲೆ ಪಾಪಿಗಳು ಬಿದ್ದಾಗ ಗಂಟಲು ಒಣಗುವುದು. ಮೂವತ್ತು ಧನುಃ ಪ್ರಮಾಣ ಸುತ್ತಳತೆ. ನೂರು ಪುರುಷ ಪ್ರಮಾಣ ಆಳ.

ಕಷಕುಂಡದಲ್ಲಿ ದುರ್ಗಂಧಯುಕ್ತವಾದ ನಾನಾ ಬಗೆಯ ಕಷಾಯಜಲ ತುಂಬಿದೆ. ನೂರು ಧನುಃ ಪ್ರಮಾಣ ಸುತ್ತಳತೆ ಇದೆ.

ಶೂರ್ಪಮುಖ ಕುಂಡದಲ್ಲಿ ಕಾದಕಬ್ಬಿಣದ ಮರಳು ತುಂಬಿದೆ. ಅದರ ಮುಖ ಮೊರದ ಆಕಾರದ್ದು. ಹನ್ನೆರಡು ಧನುಃಪ್ರಮಾಣ ಸುತ್ತಳತೆ.

ಜ್ವಾಲಾಮುಖ ಕುಂಡದ ಮುಖ ಬೆಂಕಿಯ ಜ್ವಾಲೆಯಿಂದ ವ್ಯಾಪ್ತವಾಗಿದೆ. ಇಪ್ಪತ್ತು ಧನುಃ ಪ್ರಮಾಣ ಸುತ್ತಳತೆ ಉಳ್ಳದ್ದು.

ಜಿಹ್ವ ಕುಂಡಲ್ಲಿ ಪಾಪಿ ಬಿದ್ದೊಡನೆ ಮೂರ್ಛಿತನಾಗಿ ವೇದನೆ ಪಡುತ್ತಾನೆ. ಕಾದ ಇಟ್ಟಿಗೆಗಳು ಎಲ್ಲೆಡೆ ತುಂಬಿದೆ. ವಾಪೀ ಪ್ರಮಾಣದ ಅರ್ಧದಷ್ಟು ಸುತ್ತಳತೆ.

ಧೂಮಾಂಧ ಕುಂಡದಲ್ಲಿ ಹೊಗೆ ಕತ್ತಲು ತುಂಬಿರುತ್ತದೆ. ಉಸಿರು ಕಟ್ಟಿಸುತ್ತದೆ. ನೂರು ಧನುಃ ಪ್ರಮಾಣದಷ್ಟು ಸುತ್ತಳತೆ ಇದೆ.

ನಾಗವೇಷ್ಟನ ಕುಂಡ ಹಾವುಗಳಿಂದ ತುಂಬಿದೆ. ಪಾಪಿ ಅದರಲ್ಲಿ ಬಿದ್ದೊಡನೆ ಹಾವುಗಳು ಅವನನ್ನು ಸುತ್ತಿಕೊಳ್ಳುತ್ತವೆ. ನೂರು ಧನುಃ ಪ್ರಮಾಣದಷ್ಟು ಇದರ ಸುತ್ತಳತೆ.

ಹೀಗೆ ಎಂಬತ್ತಾರು ನರಕ ಕುಂಡಗಳನ್ನು ಅವುಗಳ ಲಕ್ಷಣಗಳನ್ನೂ ಹೇಳಿದ್ದೇನೆ. ಇನ್ನೇನು ಕೇಳಲು ಬಯಸುವೆ ?

**ಇಲ್ಲಿಗೆ ಶ್ರೀ ಬ್ರಹ್ಮವೈವರ್ತ ಮಹಾಪುರಾಣದಲ್ಲಿ ಎರಡನೆಯದಾದ ಪ್ರಕೃತಿಖಂಡದ ನಾರದನಾರಾಯಣ ಸಂವಾದದಲ್ಲಿ ಸಾವಿತ್ರ್ಯುಪಾಖ್ಯಾನದಲ್ಲಿ ಯಮಲೋಕದ ನರಕಕುಂಡ ಲಕ್ಷಣ ಕಥನವೆಂಬ ಮೂವತ್ತಮೂರನೆ ಅಧ್ಯಾಯ ಮುಗಿಯಿತು.**

## ಸಾವಿತ್ರಿಗೆ ಯಮನ ಉಪದೇಶ ಸಮಾಪ್ತಿ

**ಅಧ್ಯಾಯ-೩೪**

ಸಾವಿತ್ರಿ— ಧರ್ಮರಾಜ, ದುರ್ಲಭವಾದ ಹರಿಭಕ್ತಿಯನ್ನು ನನಗೆ ಉಪದೇಶಿಸು. ನರಕ ಸಾಗರವನ್ನು ದಾಟಿಸುವ, ಲಕ್ಷಾಂತರ ಜೀವರನ್ನು ಉದ್ಧರಿಸುವ ಶ್ರೀಕೃಷ್ಣನ ಗುಣಕೀರ್ತನ ಧರ್ಮವನ್ನು ಉಪದೇಶಿಸು. ಮುಕ್ತಿಗಳು ಎಷ್ಟು ಬಗೆ ? ಭಕ್ತಿ ಮುಕ್ತಿಗಳಿಗೆ ಭೇದವೇನು ? ನಿಷೇಕದ ಲಕ್ಷಣವೇನು ? ಎಲ್ಲವನ್ನೂ ಹೇಳು. ಸ್ತ್ರೀಯರಿಗೆ ತತ್ವಜ್ಞಾನ ಕಡಿಮೆ. ಅದು ವಿಧಿನಿಯಮ. ಆದ್ದರಿಂದ ತತ್ವಜ್ಞಾನದ ಸಾರವನ್ನು ಹೇಳು. ಎಲ್ಲ ದಾನಗಳೂ ಉಪವಾಸ ತೀರ್ಥಸ್ನಾನ ವ್ರತ ತಪಸ್ಸುಗಳೂ ಅಜ್ಞಾನಿಗಳಿಗೆ ನೀಡುವ ಜ್ಞಾನದಾನದ ಹದಿನಾರನೆ ಒಂದಂಶಕ್ಕೆ ಸಮಾನವಾಗ-ಲಾರದು. ಅದರಿಂದಲೆ ತಂದೆಗಿಂತ ತಾಯಿ ನೂರುಪಾಲು ಮಿಗಿಲಾದರೂ ತಾಯಿಗಿಂತ ನೂರುಪಾಲು ಜ್ಞಾನದಾಯಕನಾದ ಗುರು ಮಿಗಿಲು.

ಯಮ— ನಾನು ನಿನ್ನ ಮನಸ್ಸಿನಲ್ಲಿರುವ ಎಲ್ಲ ಅಭೀಷ್ಟವನ್ನು ಪೂರೈಸುವೆನೆಂದು ಮೊದಲೆ ವರಕೊಟ್ಟಿದ್ದೇನೆ. ಆದ್ದರಿಂದ ಹರಿಭಕ್ತಿಯನ್ನು ಈಗ ಉಪದೇಶಿಸುತ್ತೇನೆ.

ಹೇಳುವವರ ಕೇಳುವವರಿಬ್ಬರ ಕುಲಗಳನ್ನೂ ಉದ್ಧರಿಸಬಲ್ಲ ಕೃಷ್ಣನ ಗುಣಗಳನ್ನು ಹೇಳುತ್ತೇನೆ, ಕೇಳು. ಕೃಷ್ಣನ ಅನಂತ ಗುಣಗಳನ್ನು ಪೂರ್ತಿಯಾಗಿ ಸಾವಿರ ಮುಖದ ಶೇಷನೂ ವರ್ಣಿಸಲಾರ. ಐದು ಮುಖದ ಶಿವನೂ ಹೇಳಲಾರ. ನಾಲ್ಕು ವೇದಗಳನ್ನು ಬಲ್ಲ ನಾಲ್ಕು ಮುಖದ ಬ್ರಹ್ಮನೂ ಹೇಳಲಾರ. ಸರ್ವಜ್ಞನಾದ ವಿಷ್ಣುವೂ ಹೇಳಲಾರ. ಷಣ್ಮುಖ, ಗಣೇಶರೂ ಹೇಳಲಾರರು. ಶಾಸ್ತ್ರಗಳಲ್ಲೆಲ್ಲ ಶ್ರೇಷ್ಠವಾದ ನಾಲ್ಕು ವೇದ-ಗಳೂ ಕೃಷ್ಣನ ಗುಣಗಳಲ್ಲಿ ಹದಿನಾರನೆ ಒಂದಂಶವನ್ನೂ ಹೇಳಲಾರವು. ಸರಸ್ವತಿ, ಸನತ್ಕುಮಾರ, ಧರ್ಮ, ಸನಕ, ಸನಾತನ, ಸನಂದ, ಕಪಿಲ, ಸೂರ್ಯ ಇತರ ಬ್ರಹ್ಮಪುತ್ರರು, ಹೇಳಲು ಸಮರ್ಥರಲ್ಲ. ಇನ್ನು ಅಜ್ಞರ ಪಾಡೇನು ? ಎಲ್ಲರಿಗಿಂತ ಹೆಚ್ಚು ತಿಳಿದವ ಶಿವ. ಅವನಿಗೆ ಸಾಕ್ಷಾತ್ ಕೃಷ್ಣನೆ ಗೋಲೋಕದ ರಾಸಮಂಡಲದಲ್ಲಿ ರಹಸ್ಯವಾಗಿ ತನ್ನ ಗುಣಗಳ ಬಗ್ಗೆ ಸ್ವಲ್ಪವೆ ಹೇಳಿದ್ದಾನೆ. ಶಿವ ಶಿವಲೋಕದಲ್ಲಿ ಧರ್ಮನಿಗೆ ಅದನ್ನೆ ಹೇಳಿದ. ಧರ್ಮ ಪುಷ್ಕರದಲ್ಲಿ ನನ್ನ ತಂದೆಯಾದ ಸೂರ್ಯನಿಗೆ ಉಪದೇಶಿಸಿದ. ಅವನು ನನಗೆ ಉಪದೇಶಿಸಿದ್ದನ್ನೆ ನಾನು ನಿನಗೆ ಹೇಳುತ್ತೇನೆ.

ತದ್ಗುಣಂ ಸ ನ ಜಾನಾತಿ ತದನ್ಯಸ್ಯ ಕಾ ಕಥಾ ?
ಯಥಾಕಾಶಂ ನ ಜಾನಾತಿ ಸ್ವಾಂತಮೇವ ವರಾನನೇ ॥

ದೇಶ ಕಾಲ ಪರಿಮಿತಿ ಇಲ್ಲದ ಆಕಾಶ ತನ್ನ ಪರಿಮಿತಿಯನ್ನು ಹೇಗೆ ತಿಳಿಯದೋ ಹಾಗೇ ಪರಿಮಿತಿಯಿಲ್ಲದ ತನ್ನ ಗುಣವನ್ನು ಇಷ್ಟೇ ಎಂದು ಹರಿ ತಾನೇ ತಿಳಿಯಲಾರ. ಇನ್ನುಳಿದವರ ಪಾಡೇನು ?

ಭಗವಾನ್ ಶ್ರೀಕೃಷ್ಣ ಸರ್ವಾಂತರಾತ್ಮ. ಸರ್ವಕಾರಣಗಳಿಗೂ ಕಾರಣ. ಸರ್ವೇಶ್ವರ. ಸರ್ವಜ್ಞ, ಸರ್ವರೂಪಧಾರಿ. ನಿತ್ಯ, ನಿತ್ಯಾನಂದ, ಪ್ರಾಕೃತ ಆಕಾರವಿಲ್ಲದವ. ಪ್ರಕೃತಿ-ಗಿಂತ ಆಚೆ ಇರುವವ. ಭಕ್ತರ ಮೇಲೆ ಅನುಗ್ರಹ ಮಾಡುವುದಕ್ಕಾಗಿ ತನ್ನ ಚಿನ್ಮಯ ಆಕಾರವನ್ನು ತೋರುತ್ತಾನೆ. ಆ ಆಕಾರ ಅತ್ಯಂತ ಮನೋಹರ. ಮೇಘಶ್ಯಾಮ ಬಾಲಗೋಪಾಲರೂಪ. ಕೋಟಿ ಮನ್ಮಥರ ಲಾವಣ್ಯದಿಂದ ಕೂಡಿದೆ. ಅಮೂಲ್ಯ ರತ್ನಾಭರಣ ಭೂಷಿತವಾಗಿದೆ. ಪೀತಾಂಬರ ಉಟ್ಟು ವನಮಾಲೆ ಧರಿಸಿ ಗೋಪಿಯರ ನಡುವೆ ರಾಧಾಸಮೇತನಾಗಿ ಬ್ರಹ್ಮತೇಜಸ್ಸಿನಿಂದ ಜ್ವಲಿಸುತ್ತಿದೆ. ಈ ರೂಪವನ್ನೆ ಭಕ್ತರು ಭಕ್ತಿಯಿಂದ ಧ್ಯಾನಿಸುತ್ತಾರೆ.

ಶ್ರೀಕೃಷ್ಣನ ಭಯದಿಂದಲೆ ಬ್ರಹ್ಮ ಸೃಷ್ಟಿ ಮಾಡುತ್ತಾನೆ. ಜೀವರ ಕರ್ಮಾನುಸಾರ ಫಲವನ್ನು ಅವರ ಹಣೆಯಲ್ಲಿ ಬರೆದಿಟ್ಟು ಕರ್ಮಗಳಿಗೂ ತಪಸ್ಸುಗಳಿಗೂ ಕೃಷ್ಣನ ಆಜ್ಞೆಯಿಂದಲೆ ಫಲ ಕೊಡುತ್ತಾನೆ. ಅವನ ಭಯದಿಂದಲೆ ವಿಷ್ಣುಪಾಲನ ಮಾಡುತ್ತಾನೆ. ರುದ್ರ ಸಂಹಾರ ಮಾಡುತ್ತಾನೆ. ವಾಯು ಬೀಸುತ್ತಾನೆ. ಸೂರ್ಯ ಬೆಳಗುತ್ತಾನೆ. ಇಂದ್ರ ಮಳೆ ತರುತ್ತಾನೆ. ಮೃತ್ಯು ಜೀವರನ್ನು ಸೆಳೆಯುತ್ತಾನೆ. ಕೃಷ್ಣನ

ಇಚ್ಛಾನುಸಾರವೇ ಬೆಂಕಿ ಬಿಸಿಯಾಗಿರುತ್ತದೆ. ನೀರು ತಣ್ಣಗಿರುತ್ತದೆ. ದಿಕ್ಪಾಲಕರು ದಿಕ್ಕುಗಳನ್ನು ರಕ್ಷಿಸುತ್ತಾರೆ. ರಾಶಿಚಕ್ರಗಳು ಗ್ರಹಗಳು ಕಾಲಕ್ಕೆ ಸರಿಯಾಗಿ ತಿರುಗುತ್ತವೆ. ವೃಕ್ಷಗಳು ಫಲಪುಷ್ಪಗಳನ್ನು ಕೊಡುತ್ತವೆ.

ಕೃಷ್ಣನ ಇಚ್ಛಾನುಸಾರವೆ ಮರಗಳು ಫಲಕೊಡುವುದನ್ನು ನಿಲ್ಲಿಸುತ್ತವೆ. ಭೂಚರ-ಪ್ರಾಣಿಗಳು ಜಲದಲ್ಲಿ, ಜಲಚರಗಳು ನೆಲದಲ್ಲಿ ಬದುಕದಿರುವುದಕ್ಕೂ ಅವನ ಇಚ್ಛೆಯೆ ಕಾರಣ. ನಾನು ಧರ್ಮ ಅಧರ್ಮಗಳನ್ನು ನಿಯಮಿಸುತ್ತಿರುವುದೂ ಅವನ ಆಜ್ಞಾನುಸಾರವಾಗಿಯೆ. ಕಾಲ ಅವನಾಜ್ಞೆಯಿಂದಲೆ ಉರುಳುತ್ತದೆ, ಎಲ್ಲವನ್ನೂ ತನ್ನಲ್ಲಿ ಬಂಧಿಸುತ್ತದೆ. ಅಕಾಲದಲ್ಲಿ ಕಾಲ ಯಾವವಸ್ತುವನ್ನೂ ಅಪಹರಿಸುವುದಿಲ್ಲ. ಅವನ ಇಚ್ಛಾನುಸಾರವೆ ಕೆಲವೊಮ್ಮೆ ಜೀವರು ಬೆಂಕಿಯಲ್ಲಿ ಬೀಳಲಿ, ನೀರಲ್ಲಿ ಮುಳುಗಲಿ, ಮರದ ಮೇಲಿಂದ ಕೆಳಗೆ ಬೀಳಲಿ, ಕತ್ತಿಗೆ ಗುರಿಯಾಗಲಿ, ಹಾವಿನ ಕಡಿತಕ್ಕೆ ಬಲಿಯಾಗಲಿ, ಭೀಕರ ರಣದಲ್ಲಿ ನಾನಾ ಶಸ್ತ್ರಾಸ್ತ್ರಗಳಿಗೆ ಸಿಲುಕಲಿ ಮೃತ್ಯು ಅವರನ್ನು ಸೆಳೆಯುವುದಿಲ್ಲ. ಕೆಲವೊಮ್ಮೆ ತಂತ್ರ ಮಂತ್ರಗಳಿಂದ ಬಂಧುವರ್ಗದವರ ಸಹಾಯ-ದಿಂದ ಸುರಕ್ಷಿತವಾಗಿ ಹೂವಿನ ಹಾಸಿಗೆಯಲ್ಲಿ ಮಲಗಿದ್ದರೂ ಮೃತ್ಯು ಸೆಳೆಯುತ್ತಾನೆ.

ವಾಯು ಜಲರಾಶಿಯನ್ನು ಜಲರಾಶಿ ಕೂರ್ಮವನ್ನು ಕೂರ್ಮ ಅನಂತನನ್ನು ಅನಂತ ಭೂಮಿಯನ್ನು ಭೂಮಿ ಸಮುದ್ರ ಪರ್ವತ ಮುಂತಾದುವನ್ನೂ ಧರಿಸಿರು-ವುದು ನಾನಾರೂಪವಾದ ಕೃಷ್ಣನ ಇಚ್ಛೆಯಿಂದ.

ಎಪ್ಪತ್ತೊಂದು ಮಹಾಯುಗಗಳು ಒಬ್ಬ ಇಂದ್ರನ ಅಧಿಕಾರವಧಿ. ಇಂಥ ಇಪ್ಪತ್ತೆಂಟು ಅವಧಿಗಳು ಬ್ರಹ್ಮನಿಗೆ ಒಂದು ದಿನ. ಇಂಥ ಮೂವತ್ತು ದಿನ ಒಂದು ತಿಂಗಳು. ಎರಡು ತಿಂಗಳು ಒಂದು ಋತು. ಆರು ಋತುಗಳು ಒಂದು ವರ್ಷ. ನೂರುವರ್ಷ ಬ್ರಹ್ಮನ ಪೂರ್ಣಾಯುಷ್ಯ. ಈ ಕಾಲದಲ್ಲಿ ಹರಿಯು ಕಣ್ಣು ತೆರೆದಿರು-ತ್ತಾನೆ. ಅವನು ಕಣ್ಣುಮುಚ್ಚಿದಾಗ ಬ್ರಹ್ಮಾಂಡ ಪ್ರಳಯ. ಆಗ ಎಲ್ಲ ಜೀವರೂ ಬ್ರಹ್ಮನಲ್ಲಿ ಲೀನರಾಗುತ್ತಾರೆ. ಬ್ರಹ್ಮ ವಿಷ್ಣುವಿನ ನಾಭಿಕಮಲದಲ್ಲಿ. ವಿಷ್ಣು ಕೃಷ್ಣನ ಎಡಭಾಗದಲ್ಲಿ. ರುದ್ರಾದಿ ಭೈರವಾದಿ ಶಿವಾನುಚರರು ಶಿವನಲ್ಲಿಯೂ ಶಿವ ವಿಷ್ಣುವಿನ ಜ್ಞಾನದಲ್ಲಿಯೂ ಲಯ ಹೊಂದುತ್ತಾರೆ. ಸಕಲ ಶಕ್ತಿಗಳೂ ವಿಷ್ಣು ಮಾಯೆಯಲ್ಲಿ ವಿಷ್ಣುಮಾಯೆ ವಿಷ್ಣುವಿನ ಬುದ್ಧಿಯಲ್ಲಿಯೂ ಲಯ ಹೊಂದುವರು. ಗಣಪತಿ ವಿಷ್ಣು-ವಿನ ಬಾಹುವಿನಲ್ಲಿ ಲಯ ಹೊಂದುತ್ತಾನೆ. ಸ್ತ್ರೀಯರೆಲ್ಲ ಲಕ್ಷ್ಮಿಯಲ್ಲಿ ಲಕ್ಷ್ಮಿ-ರಾಧೆಯಲ್ಲಿ ಲೀನರಾಗುತ್ತಾರೆ. ಸಾವಿತ್ರಿಯೂ ಸಕಲಶಾಸ್ತ್ರಗಳೂ ಸರಸ್ವತಿಯಲ್ಲಿ ಸರಸ್ವತಿ ವಿಷ್ಣುವಿನ ಜಿಹ್ವೆಯಲ್ಲಿ ಲೀನರಾಗುತ್ತಾರೆ. ಗೋಲೋಕದ ಎಲ್ಲ ಗೋಪರೂ ಕೃಷ್ಣನ ರೋಮಗಳಲ್ಲಿ ಲೀನರಾಗುತ್ತಾರೆ. ಎಲ್ಲರ ಪ್ರಾಣ ಅವನ ಪ್ರಾಣಗಳಲ್ಲಿ, ಬೆಂಕಿ ಜಠರಾಗ್ನಿಯಲ್ಲಿ, ನೀರು ನಾಲಿಗೆ ತುದಿಯಲ್ಲಿ, ಎಲ್ಲ ವೈಷ್ಣವರೂ ಅವನ ಪಾದಕಮಲಗಳಲ್ಲಿ ಲೀನರಾಗುತ್ತಾರೆ.

ಹೀಗೆ ಕೃಷ್ಣ ಕಣ್ಣು ತೆರೆದಿರುವಷ್ಟು ಕಾಲ ಸೃಷ್ಟಿ ಇರುತ್ತದೆ, ಮುಚ್ಚಿದ್ದಷ್ಟು ಕಾಲ ಪ್ರಳಯ ಎಂದ ಮೇಲೆ ಅಂಥ ಕೃಷ್ಣನ ಮಹಿಮೆಯನ್ನು ಯಾರು ಹೇಳಬಲ್ಲರು ? ಆದರೂ ತಂದೆಯ ಉಪದೇಶದಿಂದ ನಾನು ತಿಳಿದುದನ್ನು ನಿನಗೆ ಹೇಳುತ್ತಿದ್ದೇನೆ.

ಮುಕ್ತಿಯು ನಾಲ್ಕು ವಿಧ ಸಾಲೋಕ್ಯ, ಸಾರೂಪ್ಯ, ಸಾಮೀಪ್ಯ, ನಿರ್ವಾಣ ಎಂದು. ಕೃಷ್ಣನ ಏಕಾಂತ ಭಕ್ತರು ಅವನ ಸೇವೆಯನ್ನು ಹೊರತು ಈ ನಾಲ್ಕು ಬಗೆಯ ಮೋಕ್ಷವನ್ನೂ ಬಯಸರು. ಮುಕ್ತಿ ಎಂದರೆ ಪ್ರಾಕೃತ ಶರೀರದ ಬಂಧನ ತೊರೆದು ಸ್ವರೂಪಭೂತವಾದ ದಿವ್ಯ ರೂಪದಲ್ಲಿರುವುದೇ ಆಗಿದೆ. ಈ ಮುಕ್ತಿಯಲ್ಲಿ ಭಗವಂತನ ಸೇವೆ ಮಾಡಬೇಕೆಂದು ವಿಧಿ ಇಲ್ಲ. ಆದರೆ ಈ ಮುಕ್ತಿಗೆ ಸಾಧನವಾದ ಭಕ್ತಿಯ ಅವಸ್ಥೆಯಲ್ಲಿ ಭಕ್ತಿಯಿಂದ ಸೇವೆ ಮಾಡುವುದು ವಿಹಿತವಾಗಿದೆ. ಇದೇ ಭಕ್ತಿ ಮುಕ್ತಿಗಳಲ್ಲಿರುವ ಭೇದ. ನಿಷೇಕವೆಂದರೆ ಕರ್ಮಫಲ ಭೋಗ. ಅದಕ್ಕೆ ಪರಿಹಾರ ಶ್ರೀಕೃಷ್ಣನ ಸೇವೆ. ಇದೇ ಲೋಕ ವೇದಗಳಲ್ಲೆಲ್ಲ ಶ್ರೇಷ್ಠವಾದ ಸಾರಭೂತವಾದ ತತ್ತ್ವ-ಜ್ಞಾನ. ಸಕಲ ವಿಘ್ನಪರಿಹಾರಕ, ಮಂಗಳಕರ. ಮಗು, ನೀನಿನ್ನು ಮನೆಗೆ ಹಿಂತಿರುಗು.

ಹೀಗೆ ಹೇಳಿ ಯಮ ಸತ್ಯವಂತನನ್ನು ಬದುಕಿಸಿ ಕೊಟ್ಟು ಆಶೀರ್ವದಿಸಿ ಹೊರಟ. ಸಾವಿತ್ರಿ ಅವನ ಕಾಲು ಹಿಡಿದು ಅಳತೊಡಗಿದಳು. ಸಜ್ಜನರ ವಿಯೋಗವೆ ಹಾಗೆ. ಅಸಹನೀಯವೆನಿಸುತ್ತದೆ. ದಯಾನಿಧಿಯಾದ ಯಮ ಸಂತೋಷದಿಂದ ಅತ್ತು ನುಡಿದ— 'ಸಾವಿತ್ರಿ, ಒಂದು ಲಕ್ಷ ವರ್ಷಕಾಲ ಪುಣ್ಯಕ್ಷೇತ್ರವಾದ ಭಾರತದಲ್ಲಿ ಸುಖ ಅನುಭವಿಸಿ ಕೊನೆಯಲ್ಲಿ ಗೋಲೋಕದ ಕೃಷ್ಣಮಂದಿರವನ್ನು ಪಡೆಯುವಿ. ಈಗ ನೀನು ನಿನ್ನ ಮನೆಗೆ ಹಿಂತಿರುಗು. ನಾರಿಯರಿಗೆ ಮೋಕ್ಷದಾಯಕವಾದ ಸಾವಿತ್ರೀ ವ್ರತವನ್ನು ಹದಿನಾಲ್ಕು ವರ್ಷಕಾಲ ಆಚರಿಸು. ಜ್ಯೇಷ್ಠ ಶುಕ್ಲ ಚತುರ್ದಶಿಯಂದು ಆ ವ್ರತವನ್ನು ಆರಂಭಿಸು. ಪ್ರತಿವರ್ಷ ಭಾದ್ರಪದ ಶುಕ್ಲಾಷ್ಟಮಿಯಂದು ಮಹಾಲಕ್ಷ್ಮೀ ವ್ರತ ಪ್ರಾರಂಭಿಸಿ ಹದಿನೈದು ದಿನ ಆಚರಿಸಿದರೆ ಹದಿನಾರು ವರ್ಷಗಳಲ್ಲಿ ವ್ರತ ಪೂರ್ಣವಾಗುವುದು. ಅದರಿಂದ ವಿಷ್ಣುಲೋಕ ಪ್ರಾಪ್ತಿಯಾಗುವುದು.

ಪ್ರತಿ ಮಂಗಳವಾರ ಮಂಗಳ ಚಂಡಿಕಾ ದೇವಿಯನ್ನು, ಪ್ರತಿ ತಿಂಗಳ ಶುಕ್ಲ ಷಷ್ಠಿಯಂದು ಷಷ್ಠೀ ದೇವಿಯನ್ನು, ಆಷಾಢ ಮಾಸದ ಸಂಕ್ರಾಂತಿ ದಿವಸ ಮನಸಾ ದೇವಿಯನ್ನು, ಕಾರ್ತಿಕ ಮಾಸದ ಸಂಕ್ರಾಂತಿ ದಿವಸ ರಾಧಾದೇವಿಯನ್ನು, ಪ್ರತಿತಿಂಗಳ ಶುಕ್ಲಾಷ್ಟಮಿಯಂದು ಭಗವತಿ ವಿಷ್ಣುಮಾಯೆಯನ್ನು ಪತಿಪುತ್ರರ ಸಹಿತವಾಗಿ ಪತಿವ್ರತೆ-ಯರಲ್ಲಿ ಯಂತ್ರಗಳಲ್ಲಿ ಅಥವಾ ವಿಗ್ರಹಗಳಲ್ಲಿ ಆವಾಹಿಸಿ ಪೂಜಿಸಿದರೆ ಇಹದಲ್ಲಿ ಧನಸಂಪತ್ತು ಸಂತತಿಗಳನ್ನೂ ಕೊನೆಯಲ್ಲಿ ವಿಷ್ಣುಲೋಕವನ್ನೂ ಹೊಂದಲು ಸಾಧ್ಯ.

ಯಮ ಹೀಗೆ ಹೇಳಿ ತನ್ನ ಲೋಕಕ್ಕೆ ಮರಳಿದ. ಸಾವಿತ್ರಿ ಪತಿಯೊಂದಿಗೆ ತನ್ನ ಮನೆಗೆ ಹಿಂತಿರುಗಿದಳು. ಅಲ್ಲಿ ತನಗೆ ಯಮನೊಡನೆ ನಡೆದ ಸಂಭಾಷಣೆಯನ್ನು ಪತಿಗೂ ಬಂಧುಮಿತ್ರರಿಗೂ ವರ್ಣಿಸಿದಳು.

ಯಮನ ವರದಂತೆ ಸಾವಿತ್ರಿಯ ತಂದೆ ಪುತ್ರರನ್ನೂ, ಮಾವ ಕಣ್ಣುಗಳನ್ನೂ ರಾಜ್ಯವನ್ನೂ ಪಡೆದರು. ಸಾವಿತ್ರಿ ಪುತ್ರವತಿಯಾಗಿ ಪುಣ್ಯಕ್ಷೇತ್ರವಾದ ಭಾರತದಂಥ ಒಂದು ಲಕ್ಷವರ್ಷ ಪತಿಯೊಡನೆ ಸುಖವಾಗಿ ಬಾಳಿ ಪತಿಯೊಡನೆಯೆ ಗೋಲೋಕ ಸೇರಿದಳು.

ಸೂರ್ಯಮಂಡಲಕ್ಕೂ ಗಾಯತ್ರೀ ಮಂತ್ರಕ್ಕೂ ಅಧಿದೇವತೆಯಾದ್ದರಿಂದ ಮತ್ತು ವೇದಗಳ ಜನನಿಯಾದ್ದರಿಂದ ಸಾವಿತ್ರೀ ಎಂದು ಹೆಸರು.

ವತ್ಸ ನಾರದ, ಸಾವಿತ್ರಿಯ ಕಥೆಯನ್ನೂ ಜೀವಕರ್ಮವಿಪಾಕವನ್ನೂ ವರ್ಣಿಸಿ-ದ್ದೇನೆ. ಇನ್ನೇನು ಕೇಳಬಯಸುವಿ ?

**ಇಲ್ಲಿಗೆ ಶ್ರೀ ಬ್ರಹ್ಮವೈವರ್ತ ಮಹಾಪುರಾಣದಲ್ಲಿ ಎರಡನೆಯದಾದ ಪ್ರಕೃತಿಖಂಡದ ನಾರದನಾರಾಯಣ ಸಂವಾದದಲ್ಲಿ ಸಾವಿತ್ರ್ಯುಪಾಖ್ಯಾನದಲ್ಲಿ ಸಾವಿತ್ರಿಗೆ ಯಮನ ಉಪದೇಶ ಸಮಾಪ್ತಿ ಎಂಬ ಮೂವತ್ತನಾಲ್ಕನೆ ಅಧ್ಯಾಯ ಮುಗಿಯಿತು.**

## ಲಕ್ಷ್ಮಿಯ ಉಪಾಖ್ಯಾನ ಲಕ್ಷ್ಮೀಸ್ವರೂಪ ಪೂಜಾದಿ ವರ್ಣನ

**ಅಧ್ಯಾಯ-೩೫**

ನಾರದ— ಪ್ರಭು, ಸಾವಿತ್ರೀಯಮ ಸಂವಾದದಲ್ಲಿ ಅತ್ಯಂತ ಮಂಗಳಕರವಾದ ಕೃಷ್ಣನ ಗುಣಸಂಕೀರ್ತವನ್ನು ಕೇಳಿದೆ. ಈಗ ಲಕ್ಷ್ಮಿಯ ಉಪಾಖ್ಯಾನವನ್ನು ಕೇಳಲು ಬಯಸುತ್ತೇನೆ. ಲಕ್ಷ್ಮಿ ಮೊದಲಿಗೆ ಯಾರಿಂದ ಪೂಜಿತಳಾದಳು ? ಯಾರಿಂದ ಹೇಗೆ ಆವಿರ್ಭವಿಸಿದಳು ? ಅವಳ ಗುಣಗಳೇನು ? ಎಲ್ಲವನ್ನೂ ಹೇಳು.

ನಾರಾಯಣ— ನಾರದ, ಸೃಷ್ಟಿಯ ಆದಿಯಲ್ಲಿ ರಾಸಮಂಡಲದಲ್ಲಿ ಕೃಷ್ಣನ ಎಡಭಾಗದಿಂದ ಒಬ್ಬಳು ದೇವಿ ಆವಿರ್ಭವಿಸಿದಳು. ಬಿಳಿ ಸಂಪಿಗೆಯಂಥ ಮೈಬಣ್ಣ. ಹನ್ನೆರಡು ವರ್ಷ ವಯಸ್ಸಿನವಳಂತೆ ಕಾಣುವ ಸ್ಥಿರಯೌವನದಿಂದೊಪ್ಪುವ ರಮ್ಯ ಶರೀರ ಶರತ್ಕಾಲದ ಹುಣ್ಣಿಮೆ ಚಂದ್ರನನ್ನು ನಾಚಿಸುವ ಮುಖಕಾಂತಿಯಿಂದ ಬೆಳಗುತ್ತಿದ್ದ. ಆ ದೇವಿ ಎರಡು ರೂಪ ಧರಿಸಿದಳು. ಎಡಭಾಗದಿಂದ ಮಹಾಲಕ್ಷ್ಮಿ ಎನಿಸಿದಳು. ಬಲಭಾಗದಿಂದ ರಾಧೆ ಎನಿಸಿದಳು. ರೂಪ ಬಣ್ಣ ವಯಸ್ಸು ಕಾಂತಿ ಯಶಸ್ಸು ವಸ್ತ್ರ ಆಭರಣ ಗುಣ ನಡೆ ನುಡಿ, ನೋಟ ನಗು ಎಲ್ಲವುದರಲ್ಲೂ ಈ ಲಕ್ಷ್ಮೀರಾಧೆಯರು ಪರಸ್ಪರ ಸಮಾನರು.

ರಾಧೆ ಮೊದಲಿಗೆ ದ್ವಿಭುಜನಾದ ಕೃಷ್ಣನನ್ನು ವರಿಸಿದಳು. ಮಹಾಲಕ್ಷ್ಮಿಯೂ ಅವನನ್ನೆ ವರಿಸಲು ಹೋದಾಗ ಕೃಷ್ಣ ತಾನೂ ಎರಡು ರೂಪಧರಿಸಿದ. ಬಲಭಾಗ-ದಿಂದ ದ್ವಿಭುಜಕೃಷ್ಣನೂ, ಎಡಭಾಗದಿಂದ ಚತುರ್ಭುಜ ವಿಷ್ಣುವೂ ಆದ. ದ್ವಿಭುಜ ಚತುರ್ಭುಜನಿಗೆ ಮಹಾಲಕ್ಷ್ಮಿಯನ್ನಿತ್ತ.

**ಲಕ್ಷ್ಯತೇ ದೃಶ್ಯತೇ ವಿಶ್ವಂ ಸ್ನಿಗ್ಧ ದೃಷ್ಟ್ಯಾ ಯಯಾನಿಶಂ ।**
**ದೇವೀಷು ಯಾ ಚ ಮಹತೀ ಮಹಾಲಕ್ಷ್ಮೀಶ್ಚ ಸಾ ಸ್ಮೃತಾ ॥**

ಇಡಿ ವಿಶ್ವವನ್ನು ಸದಾ ವಾತ್ಸಲ್ಯಪೂರ್ಣವಾದ ದೃಷ್ಟಿಯಿಂದ ಲಕ್ಷಿಸುತ್ತಾಳೆ, ಅಂದ ವೀಕ್ಷಿಸುತ್ತಾಳೆ. ಅದರಿಂದ ಲಕ್ಷ್ಮಿ ಎನಿಸುತ್ತಾಳೆ. ದೇವಿಯರಲ್ಲೆಲ್ಲ ಇವಳಿಗೇ ಮಹತ್ವ-ವಿರುವುದರಿಂದ ಮಹಾಲಕ್ಷ್ಮಿ ಎನಿಸುತ್ತಾಳೆ.

ರಾಧಾರಮಣ ದ್ವಿಭುಜ ಕೃಷ್ಣ ಗೋಲೋಕದಲ್ಲಿಯೆ ನಿಂತ. ಲಕ್ಷ್ಮೀರಮಣ ಚತುರ್ಭುಜ ನಾರಾಯಣ ವೈಕುಂಠದಲ್ಲಿರ ತೊಡಗಿದ. ಈ ಕೃಷ್ಣನಾರಾಯಣರು ಎಲ್ಲ ಅಂಶಗಳಲ್ಲಿಯೂ ಪರಸ್ಪರ ಸಮಾನರು.

ಮಹಾಲಕ್ಷ್ಮಿ ಯೋಗ ಬಲದಿಂದ ನಾನಾ ರೂಪಧರಿಸಿದಳು. ವೈಕುಂಠದಲ್ಲಿ ಪೂರ್ಣಸ್ವರೂಪದಿಂದಿದ್ದು ಸ್ವರ್ಗದಲ್ಲಿ ಸ್ವರ್ಗಲಕ್ಷ್ಮಿ, ಮರ್ತ್ಯಪಾತಾಗಳಲ್ಲಿ ರಾಜಲಕ್ಷ್ಮಿ, ಮನೆಮನೆಗಳಲ್ಲಿ ಗೃಹಲಕ್ಷ್ಮಿಯಾಗಿ ಸರ್ವಸಂಪತ್‌ಸ್ವರೂಪಳಾಗಿ ಸರ್ವಮಂಗಳ-ದಾಯಕಳಾಗಿ ನೆಲೆಸಿದ್ದಾಳೆ. ಗೋಮಾತೆ ಸುರಭಿ, ಯಜ್ಞನ ಪತ್ನಿ ದಕ್ಷಿಣೆ, ಕ್ಷೀರ ಸಮುದ್ರರಾಜನ ಕುಮಾರಿ, ತಾವರೆಗಳ ಕಾಂತಿ, ಚಂದ್ರನ ಶೋಭೆ, ಸೂರ್ಯನ ಪ್ರಭೆ, ಆಭರಣ, ರತ್ನ, ಫಲ, ರಾಜರು, ರಾಣಿಯರು ದಿವ್ಯಸ್ತ್ರೀಯರು, ಸಸ್ಯಗಳು, ವಸ್ತ್ರಗಳು, ಸಿಂಗರಿಸಿದ ಸ್ಥಳ ದೇವಪ್ರತಿಮೆಗಳು, ಮಂಗಳಕಲಶಗಳು, ಮಾಣಿಕ್ಯ ಮುತ್ತು ಹೂಮಾಲೆ, ಹಾರ, ಕ್ಷೀರ, ಚಂದನ, ವೃಕ್ಷಶಾಖೆ, ನವ ಮೇಘ ಮುಂತಾದೆಡೆ-ಗಳಲ್ಲೆಲ್ಲ ಮಹಾಲಕ್ಷ್ಮಿಯ ಸನ್ನಿಧಾನವಿದೆ.

ಮೊದಲಿಗೆ ಮಹಾಲಕ್ಷ್ಮಿಯನ್ನು ವೈಕುಂಠದಲ್ಲಿ ನಾರಾಯಣನೆ ಆರಾಧಿಸಿದ. ಬಳಿಕ ಬ್ರಹ್ಮ, ಶಿವರು ತಮ್ಮ ಲೋಕಗಳಲ್ಲಿ ಪೂಜಿಸಿದರು. ಕ್ಷೀರ ಸಮುದ್ರದಲ್ಲಿ ವಿಷ್ಣುವೂ ಪೂಜಿಸಿದ. ಸ್ವಾಯಂಭುವ ಮನುವೂ ಋಷಿ ಮುನಿಗಳೂ ಗಂಧರ್ವ ನಾಗ ಮುಂತಾದವರೂ ಪೂಜಿಸಿದರು. ಭಾದ್ರಪದ ಶುಕ್ಲ ಅಷ್ಟಮಿಯಲ್ಲಿ ಪ್ರಾರಂಭಿಸಿ ಹದಿನೈದು ದಿನ ಬ್ರಹ್ಮನೂ ಚೈತ್ರ ಪುಷ್ಯ ಭಾದ್ರಪದ ಮಾಸಗಳ ಮಂಗಳವಾರಗಳಲ್ಲಿ ವಿಷ್ಣುವೂ ಪೂಜಿಸಿದ. ವರ್ಷಾಂತ್ಯದ ಪುಷ್ಯಸಂಕ್ರಮಣದಲ್ಲಿ ಸ್ವಾಯಂಭುವ ಮನು ಪೂಜಿಸಿದ. ಧ್ರುವ, ಇಂದ್ರ, ಕಶ್ಯಪ, ದಕ್ಷ, ಸೂರ್ಯ, ಪ್ರಿಯವ್ರತ, ಚಂದ್ರ, ಕುಬೇರ

ವಾಯು ಯಮ ವಹ್ನಿ ವರುಣ ಮೊದಲಾದವರೆಲ್ಲರೂ ದೇವಿಯನ್ನು ಪೂಜಿಸಿದರು. ಸರ್ವರ ಐಶ್ವರ್ಯಕ್ಕೂ ಅಧಿದೇವತೆಯಾದ್ದರಿಂದ ದೇವಿ ಸರ್ವವಂದ್ಯಳೆನಿಸಿದಳು.

**ಇಲ್ಲಿಗೆ ಶ್ರೀ ಬ್ರಹ್ಮವೈವರ್ತ ಮಹಾಪುರಾಣದಲ್ಲಿ ಎರಡನೆಯದಾದ ಪ್ರಕೃತಿಖಂಡದ ನಾರದನಾರಾಯಣ ಸಂವಾದದಲ್ಲಿ ಲಕ್ಷ್ಮಿಯ ಉಪಾಖ್ಯಾನದಲ್ಲಿ ಲಕ್ಷ್ಮೀಸ್ವರೂಪ ಪೂಜಾದಿ ವರ್ಣನರೂಪವಾದ ಮೂವತ್ತೈದನೆ ಅಧ್ಯಾಯ ಮುಗಿಯಿತು.**

## ಅಧ್ಯಾಯ-೩೬

## ಹರಿನಿರ್ಮಾಲ್ಯವನ್ನು ತಿರಸ್ಕರಿಸಿದ ದೇವೇಂದ್ರನಿಗೆ ದುರ್ವಾಸರ ಶಾಪ. ಇಂದ್ರ ಪ್ರಾರ್ಥಿಸಿಕೊಂಡಾಗ ಅವರಿಂದ ಜ್ಞಾನೋಪದೇಶ

ನಾರದ— ವೈಕುಂಠದಲ್ಲಿ ನಾರಾಯಣನ ಪ್ರೇಯಸಿಯಾಗಿದ್ದ ಮಹಾಲಕ್ಷ್ಮಿ ಭೂಮಿಯಲ್ಲಿ ಸಮುದ್ರರಾಜನ ಕುಮಾರಿಯಾಗಿ ಹೇಗೆ ಅವತರಿಸಿದಳು ? ಅವಳ ಧ್ಯಾನ ಕವಚ ಪೂಜಾಕ್ರಮಗಳು ಹೇಗೆ ? ಅವಳನ್ನು ಮೊದಲಿಗೆ ಯಾರು ಸ್ತುತಿಸಿದರು ? ಎಲ್ಲವನ್ನೂ ಹೇಳು.

ನಾರಾಯಣ— ಹಿಂದೆ ದೂರ್ವಾಸ ಮಹರ್ಷಿಯ ಶಾಪದಿಂದ ದೇವೇಂದ್ರನೂ ಎಲ್ಲದೇವತೆಗಳೂ ಮರ್ತ್ಯಲೋಕವೂ ಎಲ್ಲರೂ ಸಂಪತ್ತಿನಿಂದ ಚ್ಯುತರಾದರು. ಲಕ್ಷ್ಮಿ ಕೋಪಗೊಂಡು ಸ್ವರ್ಗಮರ್ತ್ಯ ಮುಂತಾದ ಲೋಕಗಳನ್ನು ತೊರೆದು ವೈಕುಂಠದಲ್ಲಿ ಮಹಾಲಕ್ಷ್ಮಿಯಲ್ಲಿಯೆ ಲೀನಳಾದಳು. ಆಗ ದೇವತೆಗಳು ದುಃಖಗೊಂಡು ಬ್ರಹ್ಮನ ಬಳಿಗೆ ಹೋದರು. ಬ್ರಹ್ಮನನ್ನು ಮುಂದೆ ಮಾಡಿಕೊಂಡು ವೈಕುಂಠಕ್ಕೂ ಹೋದರು. ನಾರಾಯಣನನ್ನು ಮೊರೆಹೊಕ್ಕು ದೈನ್ಯದಿಂದ ಬೇಡಿದರು. ಆಗ ನಾರಾಯಣನ ಆಜ್ಞೆಯಂತೆ ಲಕ್ಷ್ಮಿ ಸಮುದ್ರ ರಾಜನ ಕುಮಾರಿಯಾಗಿಯೂ ಇಂದ್ರನ ಸಂಪತ್ತಿಗೆ ಅಧಿಷ್ಠಾತ್ರಿಯಾಗಿಯೂ ಅವತರಿಸಲು ಸಂಕಲ್ಪಿಸಿದಳು. ನಾರಾಯಣನ ಆಜ್ಞೆಯಂತೆ ದೇವತೆಗಳು ದೈತ್ಯರೊಡನೆ ಒಪ್ಪಂದ ಮಾಡಿಕೊಂಡು ಎಲ್ಲರೂ ಸೇರಿ ಕ್ಷೀರ-ಸಮುದ್ರವನ್ನು ಮಥಿಸಿ ಮಹಾಲಕ್ಷ್ಮಿಯನ್ನು ಪ್ರಾದುರ್ಭಾವಗೊಳಿಸಿದರು. ದೇವಿ ದೇವತೆಗಳು ಋಷಿಗಳು ಮುಂತಾದವರಿಗೆ ವರನೀಡಿ ಕ್ಷೀರಸಮುದ್ರಶಾಯಿಯಾದ ವಿಷ್ಣುವಿನ ಕೊರಳಿಗೆ ವನಮಾಲೆ ತೊಡಿಸಿ ಅವನನ್ನು ವರಿಸಿದಳು. ಅವಳ ವರದಿಂದ ದೇವತೆಗಳು ಅಸುರರಿಂದ ಆಕ್ರಮಿಸಲ್ಪಟ್ಟಿದ್ದ ರಾಜ್ಯವನ್ನು ಪಡೆದರು. ಎಲ್ಲೆಡೆ ಕ್ಷೇಮ ಉಂಟಾಯಿತು. ದೇವಿಯನ್ನು ಎಲ್ಲರೂ ಆರಾಧಿಸಿ ಸ್ತೋತ್ರ ಮಾಡಿದರು.

ನಾರದ— ದೂರ್ವಾಸ ಮುನಿ ದೇವೇಂದ್ರನನ್ನು ಏಕೆ ಶಪಿಸಿದರು ? ಅವನು ಏನು ಅಪರಾಧ ಮಾಡಿದ ? ಕ್ಷೀರಸಮುದ್ರವನ್ನು ದೇವಾಸುರರು ಹೇಗೆ ಮಥಿಸಿದರು ? ಯಾವ ಸ್ತೋತ್ರದಿಂದ ದೇವಿ ಇಂದ್ರನಿಗೆ ಒಲಿದು ಬಂದಳು ? ಅವರಲ್ಲಿ ಏನು ಸಂಭಾಷಣೆ ನಡೆಯಿತು ?

ನಾರಾಯಣ— ಹಿಂದೆ ದೇವೇಂದ್ರ ಮಧುಪಾನದಿಂದ ಮತ್ತನಾಗಿ ರಂಭೆ-ಯೊಡನೆ ವನವಿಹಾರ ಮಾಡುತ್ತಿದ್ದಾಗ ಆ ದಾರಿಯಾಗಿ ವೈಕುಂಠದಿಂದ ಕೈಲಾಸಕ್ಕೆ ಹೋಗುತ್ತಿದ್ದ ದೂರ್ವಾಸರು ಅವನನ್ನು ಕಂಡು ವಿಷ್ಣುಪ್ರಸಾದ ರೂಪವಾದ ಪಾರಿಜಾತಮಾಲೆಯನ್ನು ಕೊಟ್ಟರು. ರಾಜ್ಯಮದದಿಂದ ಮತ್ತನಾಗಿದ್ದ ಇಂದ್ರ ಅದನ್ನು ಐರಾವತದ ತಲೆ ಮೇಲಿಟ್ಟ. ಆ ಹೂವಿನ ಸ್ಪರ್ಶ ಮಾತ್ರದಿಂದ ಆನೆ ವಿಷ್ಣು-ಸನ್ನಿಧಾನದಿಂದ ವಿಷ್ಣುತುಲ್ಯವಾದ ತೇಜಸ್ಸು ವಯಸ್ಸು ಕಾಂತಿ ಗುಣಗಳಿಂದ ಕೂಡಿ ಇಂದ್ರನನ್ನು ತೊರೆದು ಕಾಡಿನಲ್ಲಿ ಎಲ್ಲಿಯೋ ಹೊರಟು ಹೋಯಿತು. ಇಂದ್ರನಿಗೆ ಅದನ್ನು ಅಂಕೆಯಲ್ಲಿ ಇಟ್ಟುಕೊಳ್ಳಲಾಗಲಿಲ್ಲ. ದೂರ್ವಾಸರು ಕೋಪಗೊಂಡರು. ಶಾಪವಿತ್ತರು— 'ಇಂದ್ರ, ನೀನು ರಾಜ್ಯಲಕ್ಷ್ಮಿಯಿಂದ ಮತ್ತನಾಗಿ ಆ ಲಕ್ಷ್ಮಿಯನ್ನೆ ಅವಮಾನಿಸಿದೆ. ನಾನು ಕೊಟ್ಟ ಹೂವನ್ನು ಆನೆಯ ತಲೆಯ ಮೇಲಿಟ್ಟೆ. ಅದು ವಿಷ್ಣುವಿಗೆ ಅರ್ಪಿತವಾದ ಪುಷ್ಪ.

**ವಿಷ್ಣೋರ್ನಿವೇದಿತಂ ಪುಷ್ಪಂ ನೈವೇದ್ಯಂ ವಾ ಫಲಂ ಜಲಂ ।**
**ಪ್ರಾಪ್ತಿಮಾತ್ರೇಣ ಭೋಕ್ತವ್ಯಂ ತ್ಯಾಗೇನ ಬ್ರಹ್ಮಹಾ ಜನಃ ॥**

ವಿಷ್ಣುವಿಗೆ ಅರ್ಪಿತವಾದ ಹೂ ಹಣ್ಣು ನೀರು ಅಥವಾ ನೈವೇದ್ಯವನ್ನು ಅದು ಸಿಕ್ಕಿದೊಡನೆ ಸ್ವೀಕರಿಸಬೇಕು. ಬಿಟ್ಟರೆ ಬ್ರಹ್ಮಹತ್ಯಾಪಾತಕ ತಗಲುತ್ತದೆ.

**ಭ್ರಷ್ಟಶ್ರೀರ್ಭ್ರಷ್ಟಬುದ್ಧಿಶ್ಚ ಭ್ರಷ್ಟಜ್ಞಾನೋ ಭವೇನ್ನರಃ ।**
**ಯಸ್ತ್ಯಜೇದ್ ವಿಷ್ಣುನೈವೇದ್ಯಂ ಭಾಗ್ಯೇನೋಪಸ್ಥಿತಂ ಶುಭಂ ॥**

ಭಾಗ್ಯವಶದಿಂದ ಮಂಗಳಕರವಾದ ವಿಷ್ಣುನೈವೇದ್ಯ ದೊರೆತಾಗ ಅದನ್ನು ಪರಿತ್ಯಜಿಸುವವನು ಸಂಪತ್ತು ಬುದ್ಧಿ ಜ್ಞಾನಗಳಿಂದ ಭ್ರಷ್ಟನಾಗುವನು.

**ಪ್ರಾಪ್ತಿಮಾತ್ರೇಣ ಯೋ ಭುಂಕ್ತೇ ಭಕ್ತ್ಯಾ ವಿಷ್ಣುನಿವೇದಿತಂ ।**
**ಪುಂಸಾಂ ಶತಂ ಸಮುದ್ಧೃತ್ಯ ಜೀವನ್ಮುಕ್ತಃ ಸ್ವಯಂ ಭವೇತ್ ॥**

ವಿಷ್ಣುವಿಗೆ ನಿವೇದಿತವಾದ ನೈವೇದ್ಯ ಹೂಹಣ್ಣು ಮುಂತಾದುದು ದೊರೆತಾಗ ಒಡನೆ ಅದನ್ನು ಸ್ವೀಕರಿಸುವವನು ತನ್ನ ಕುಲದ ನೂರು ತಲೆ ಮಾರಿನವರನ್ನು ಉದ್ಧರಿಸಿ ತಾನೂ ಜೀವನ್ಮುಕ್ತನಾಗುವನು.

ವಿಷ್ಣುನೈವೇದ್ಯವನ್ನೆ ಉಣ್ಣುವ ಅವನನ್ನೆ ನಮಿಸುವ, ಪೂಜಿಸುವ, ಕೊಂಡಾಡುವ ಭಕ್ತ ವಿಷ್ಣುಸಾರೂಪ್ಯ ಹೊಂದುತ್ತಾನೆ. ಅವನ ಮೈ ಸೋಕಿದ ಗಾಳಿಯಿಂದ ತೀರ್ಥ-ಗಳೂ ಪವಿತ್ರವಾಗುವುವು. ಅವನ ಪಾದಧೂಳಿಯಿಂದ ಭೂಮಿ ಪವಿತ್ರವಾಗುವುದು.

ವ್ಯಭಿಚಾರಿಣಿಯರ, ಪತಿಪುತ್ರರಿಲ್ಲದವರ ಅನ್ನ, ಶೂದ್ರಶ್ರಾದ್ಧನ್ನ ಹರಿಗೆ ಅನಿವೇದಿತವಾದ ಅನ್ನ, ಯಜ್ಞಶಿಷ್ಟವಲ್ಲದ ಮಾಂಸ, ಶಿವಲಿಂಗಕ್ಕೆ ಅರ್ಪಿಸಿದ ಅನ್ನ, ಶೂದ್ರರಿಗೆ ಪೌರೋಹಿತ್ಯ ಮಾಡುವವನ, ವೈದ್ಯವೃತ್ತಿಯ ದ್ವಿಜನ, ದೇವಪೂಜಾ-ವೃತ್ತಿಯವನ, ಕನ್ಯೆಯನ್ನು ಮಾರಾಟಮಾಡುವವನ, ಹೆಂಡತಿಯ ಮೈಮಾರಿ ಜೀವಿಸು-ವವನ ಅನ್ನ, ಆರಿದ, ಹಳಸಿದ, ಎಲ್ಲರೂ ಉಂಡು ಉಳಿದ ಅನ್ನ, ಶೂದ್ರಸ್ತ್ರೀ ಸಂಗ ಉಳ್ಳವನ, ದೀಕ್ಷೆ ಇಲ್ಲದ ದ್ವಿಜನ, ಹೆಣಸುಡುವವನ, ಅಗಮ್ಯಸ್ತ್ರೀಯರ ಸಂಗ ಮಾಡುವವನ ಅನ್ನ, ಮಿತ್ರದ್ರೋಹಿ ಕೃತಘ್ನ ವಿಶ್ವಾಸಘಾತಿಗಳ ಸುಳ್ಳುಸಾಕ್ಷಿ ನೀಡುವರ ಅನ್ನ ಇವೆಲ್ಲವನ್ನು ಉಂಡರೂ ಆ ಪಾಪವೆಲ್ಲ ವಿಷ್ಣು ನೈವೇದ್ಯ ಭಕ್ಷಣದಿಂದ ಪರಿಹಾರವಾಗುವುದು.

**ಶ್ವಪಚೋ ವಿಷ್ಣುಸೇವೀ ಚ ವಂಶಾನಾಂ ಕೋಟಿಮುದ್ಧರೇತ್ ।**
**ಹರೇರಭಕ್ತೋ ವಿಪ್ರಶ್ಚ ಸ್ವಂ ಚ ರಕ್ಷಿತುಮಕ್ಷಮಃ ॥**

ಚಂಡಾಲನೂ ವಿಷ್ಣು ಸೇವಕನಾಗಿದ್ದರೆ ಕೋಟಿ ಕುಲವನ್ನು ಉದ್ಧರಿಸಬಲ್ಲ. ವಿಷ್ಣುಭಕ್ತನಲ್ಲದ ಬ್ರಾಹ್ಮಣ ತನ್ನನ್ನೆ ತಾನು ರಕ್ಷಿಸಿಕೊಳ್ಳಲಾರ.

ಅಜ್ಞಾನದಿಂದಲಾದರೂ ವಿಷ್ಣುನಿರ್ಮಾಲ್ಯವನ್ನು ಸ್ವೀಕರಿಸಿದರೆ ಏಳು ಜನ್ಮಗಳ ಪಾಪದಿಂದ ಬಿಡುಗಡೆಯಾಗುವುದು. ಜ್ಞಾನಪೂರ್ವಕವಾಗಿ ಭಕ್ತಿಯಿಂದ ಸ್ವೀಕರಿಸಿದರೆ ಕೋಟಿಜನ್ಮಗಳ ಪಾಪದಿಂದ ಬಿಡುಗಡೆ. ಇದರಲ್ಲಿ ಸಂಶಯವಿಲ್ಲ. ಇಂಥ ವಿಷ್ಣು ನಿರ್ಮಾಲ್ಯ ಪುಷ್ಪವನ್ನು ಮದಾಂಧತೆಯಿಂದ ಆನೆಯ ತಲೆಯ ಮೇಲೆ ಎಸೆದ ನಿನ್ನನ್ನು ಲಕ್ಷ್ಮಿ ತೊರೆದು ಹೋಗಲಿ ಎಂದು ಶಾಪ ನೀಡುತ್ತೇನೆ. ನಾನು ನಾರಾಯಣನ ಭಕ್ತ. ಈಶ್ವರ ಬ್ರಹ್ಮರಿಗಾಗಲಿ ಕಾಲ ಮೃತ್ಯು ಜರೆಗಳಿಗಾಗಲಿ ನಾನು ಬೆದರುವವನಲ್ಲ. ಇನ್ನು ನಿನ್ನ ತಂದೆ ಕಶ್ಯಪನಾಗಲಿ, ಗುರು ಬೃಹಸ್ಪತಿಯಾಗಲಿ ನನ್ನನ್ನೇನು ಮಾಡಬಲ್ಲ ? ಈ ಪುಷ್ಪ ಯಾವ ಆನೆಯ ತಲೆಯನ್ನು ಅಲಂಕರಿಸಿತೋ ಆ ಆನೆಯ ತಲೆಗೇ ಮೊದಲ ಪೂಜೆ ಸಲ್ಲುವಂತಾಗಲಿ. ಶಿವನ ಪುತ್ರನಾದ ಗಣಪತಿಯ ಶಿರಶ್ಛೇದವಾಗುವಾಗ ಈ ಆನೆಯ ತಲೆ ಜೋಡಿಸಲ್ಪಟ್ಟು ಪೂಜ್ಯವೆನಿಸಲಿ.'

ದೇವೇಂದ್ರ ಈ ಶಾಪವಚನವನ್ನು ಕೇಳಿ ನಡುಗಿದ. ದೂರ್ವಾಸರ ಎರಡೂ ಕಾಲುಗಳನ್ನು ಹಿಡಿದು ಗಟ್ಟಿಯಾಗಿ ಅತ್ತು ಹೇಳಿದ- 'ಪ್ರಭು, ನೀನು ನನಗೆ ಸರಿಯಾದ ಶಾಪವನ್ನೆ ನೀಡಿದೆ. ನಾನು ಐಶ್ವರ್ಯಮದದಿಂದ ಮತ್ತನೇ ಆಗಿದ್ದ.

ಅಂಥ ಐಶ್ವರ್ಯವನ್ನು ನೀನೀಗ ಕಳೆದು ಅನುಗ್ರಹಿಸಿರುವೆ. ಜೊತೆಗೆ ಒಳ್ಳೆಯ ಜ್ಞಾನವನ್ನು ನೀಡಿ ಅನುಗ್ರಹಿಸು.

ಐಶ್ವರ್ಯ ಆಪತ್ತುಗಳಿಗೆ ಮೂಲ. ಜ್ಞಾನಾಂಧತೆಗೆ ಕಾರಣ. ಮುಕ್ತಿಮಾರ್ಗಕ್ಕೆ ತಡೆ. ಹರಿಭಕ್ತಿಗೆ ನಾಶಕ. ಜನನ ಮರಣ ಜರೆ ರೋಗ ಶೋಕ ದುಃಖಗಳ ಅಂಕುರಕ್ಕೆ ಬೀಜ. ಐಶ್ವರ್ಯದ ಅಂಧಕಾರದಿಂದ ಅಂಧನಾದವ ಮೋಕ್ಷಮಾರ್ಗವನ್ನು ಕಾಣಲಾರ.

ಐಶ್ವರ್ಯದಿಂದ ಮತ್ತನಾದವ ಕುಡಿದು ಮತ್ತನಾದವನಂತೆಯೆ. ಇಬ್ಬರೂ ಬಂಧುಗಳನ್ನು ದ್ವೇಷಿಸುವರು. ಐಶ್ವರ್ಯ ಬಂದಿತೆಂದರೆ ವಿಷಯಾಸಕ್ತಿಯಿಂದ ಅಂಧನಾಗಿ ಮಹಾಕಾಮಿಯಾಗಿ ದುಡುಕಿ ಅಕೃತ್ಯವೆಸಗುತ್ತಾನೆ. ಸಾತ್ವಿಕ ಮಾರ್ಗ ಅವನಿಗೆ ಕಾಣುವುದಿಲ್ಲ. ರಾಜಸನೋ ತಾಮಸನೋ ಆಗಿ ಬಿಡುತ್ತಾನೆ. ಶಾಸ್ತ್ರಜ್ಞಾನ ಉಳಿದಿದ್ದರೆ ರಾಜಸ. ಅದು ಅಳಿದಿದ್ದರೆ ತಾಮಸ.

ಶಾಸ್ತ್ರದಲ್ಲಿ ಎರಡು ಮಾರ್ಗ ಉಕ್ತವಾಗಿದೆ. ಒಂದು ಪ್ರವೃತ್ತಿ ಮಾರ್ಗ. ಇನ್ನೊಂದು ನಿವೃತ್ತಿಮಾರ್ಗ. ಜೀವಿಗಳು ಮೊದಲಿಗೆ ಕಾಲಿಡುವುದು ಪ್ರವೃತ್ತಿ ಮಾರ್ಗದಲ್ಲಿ. ಅದು ದುಃಖಕರವಾದರೂ ಮೇಲುನೋಟಕ್ಕೆ ಆಕರ್ಷಕವಾಗಿರುತ್ತದೆ. ಅದರಿಂದ ಜೀವಿಗಳು ಆ ಮಾರ್ಗ ಹಿಡಿದು ಅನೇಕ ಜನ್ಮಗಳಲ್ಲಿ ವ್ಯರ್ಥವಾಗಿ ಸುತ್ತಿಸುತ್ತಿ ಕೊನೆಯಲ್ಲಿ ಕೃಷ್ಣನ ಅನುಗ್ರಹದಿಂದ ಸಜ್ಜನರ ಸಂಗ ಪಡೆಯುತ್ತಾರೆ. ಸಾವಿರದಲ್ಲಿಯೋ ನೂರರಲ್ಲಿಯೋ ಒಬ್ಬನಿಗೆ ಈ ಅವಕಾಶ ಸಿಗುತ್ತದೆ. ಸಜ್ಜನರು ಮುಕ್ತಿಮಾರ್ಗ ತೋರಿದಾಗ ಆ ಜೀವಿ ಅನೇಕ ಜನ್ಮಗಳಲ್ಲಿ ಯತ್ನಮಾಡಿ ತಪಸ್ಸು ವ್ರತ ಉಪವಾಸಗಳ ಮೂಲಕ ಮುಕ್ತಿ-ಮಾರ್ಗವನ್ನು ಹಿಡಿಯುತ್ತಾರೆ. ಈ ಮಾರ್ಗ ನಿರ್ವಿಘ್ನವಾಗಿದ್ದು ಸುಖಕರ-ವಾಗಿರುತ್ತದೆ. ಇಷ್ಟು ವಿಷಯವನ್ನು ಮಾತ್ರ ನಾನು ಗುರುಮುಖದಿಂದ ಕೇಳಿ ತಿಳಿದಿದ್ದೇನೆ. ಮುಂದೆ ಏನೂ ತಿಳಿದಿಲ್ಲ. ಈಗ ವಿಧಿವಶದಿಂದ ವಿಪತ್ತು ಒದಗಿದೆ, ಜ್ಞಾನೋದಯವಾಗಿದೆ. ಈ ವಿಪತ್ತೇ ನನಗೆ ಸಂಪತ್ತು. ಮುನಿಯೆ, ನೀನು ಜ್ಞಾನ-ಸಾಗರ, ದೀನಬಂಧು. ದೀನನಾದ ನನಗೆ ಮೋಕ್ಷದಾಯಕವಾದ ತತ್ವಜ್ಞಾನ ನೀಡು.'

ಇಂದ್ರನ ಮಾತನ್ನು ಕೇಳಿ ದೂರ್ವಾಸರು ಸಂತುಷ್ಟರಾಗಿ ನುಡಿದರು- 'ಮಹೇಂದ್ರ, ಮೊದಲಿಗೆ ದುಃಖಕರವಾದರೂ ಕೊನೆಯಲ್ಲಿ ಸುಖಕರವಾದ ಮಂಗಳ-ಕರವಾದ ಶ್ರೇಷ್ಠವಾದ ನಿವೃತ್ತಿ ಮಾರ್ಗವನ್ನು ತಿಳಿಯಲು ಬಯಸುತ್ತಿರುವಿ. ದಾನ ತಪಸ್ಸು ವ್ರತ ಉಪವಾಸ ಮೊದಲಾದ ಕರ್ಮಗಳಿಂದ ಸ್ವರ್ಗಾದಿ ಸುಖ ಮಾತ್ರ ಸಿಕ್ಕೀತು. ಕರ್ಮದ ಬಂಧ ಹರಿಯದು. ಅದಕ್ಕೆ ಆ ಕರ್ಮಗಳನ್ನೆ ಫಲದ ಆಸೆ ತೊರೆದು ಮಾಡಬೇಕು. ಆಗ ಅದು ಸಾತ್ವಿಕವೆನಿಸುತ್ತದೆ. ಇಂಥ ಸಾತ್ವಿಕ ಕರ್ಮವನ್ನು ಕೃಷ್ಣಾರ್ಪಣ ಮಾಡಿದರೆ ಪರಬ್ರಹ್ಮನಲ್ಲಿ ಲೀನನಾಗಬಹುದು. ಇದು ನಿರ್ವಾಣ ಮೋಕ್ಷ. ವಿಷ್ಣುವಿನ ಏಕಾಂತಭಕ್ತರು ಇಷ್ಟರಿಂದಲೆ ತೃಪ್ತರಾಗಲಾರರು. ಅವರಿಗೆ

ವಿಷ್ಣುಸೇವೆಯೆ ಮೋಕ್ಷಸುಖಕ್ಕಿಂತ ಹಿರಿದು. ಅವರು ದಿವ್ಯದೇಹ ಧರಿಸಿ ಗೋಲೋಕ-ದಲ್ಲಿ ಅಥವಾ ವೈಕುಂಠದಲ್ಲಿ ಪರಮಾತ್ಮನ ಸೇವೆ ಮಾಡುತ್ತಲೆ ಇರುತ್ತಾರೆ. ಇಂಥ ಹರಿಸೇವಾರೂಪವಾದ ಮುಕ್ತಿಯನ್ನೆ ವೈಷ್ಣವರು ಬಯಸುತ್ತಾರೆ.

ಸ್ಮರಣಂ ಕೀರ್ತನಂ ವಿಷ್ಣೋರರ್ಚನಂ ಪಾದಸೇವನಂ ।
ವಂದನಂ ಸ್ತವನಂ ನಿತ್ಯಂ ಭಕ್ತ್ಯಾ ನೈವೇದ್ಯಭಕ್ಷಣಂ ॥

ಚರಣೋದಕಪಾನಂ ಚ ತನ್ಮಂತ್ರ ಜಪನಂ ಪರಂ ।
ಇದಂ ನಿಸ್ತಾರಬೀಜಂ ಚ ಸರ್ವೇಷಾಮೀಪ್ಸಿತಂ ಭವೇತ್ ॥

ಹರಿಸ್ಮರಣೆ, ಹರಿನಾಮಕೀರ್ತನೆ, ಹರಿಯ ಅರ್ಚನೆ, ಹರಿಪಾದಸೇವನೆ, ಹರಿವಂದನೆ, ಹರಿಸ್ತೋತ್ರ, ನಿತ್ಯ ಭಕ್ತಿಯಿಂದ ಹರಿನೈವೇದ್ಯ ಭಕ್ಷಣ, ಹರಿಪಾದೋದಕ ಪ್ರಾಶನ, ಹರಿಮಂತ್ರ ಜಪ -ಈ ನವವಿಧ ಭಕ್ತಿಯೆ ಸಂಸಾರಸಾಗರವನ್ನು ದಾಟುವ ಉಪಾಯ. ಇದನ್ನೆ ಎಲ್ಲ ಮುಮುಕ್ಷುಗಳೂ ಬಯಸಬೇಕು.

ಈ ಮೃತ್ಯುಂಜಯವಾದ ಜ್ಞಾನ ನನಗೆ ಮೃತ್ಯುಂಜಯನಿಂದಲೆ ಬಂದಿದೆ. ನಾನು ಅವನ ಶಿಷ್ಯ. ಅವನ ಅನುಗ್ರಹದಿಂದ ನನಗೆ ಎಲ್ಲ ಸಂಶಯ ಪರಿಹಾರವಾಗಿದೆ. ಹೀಗೆ ತ್ರಿಲೋಕ ದುರ್ಲಭವಾದ ಹರಿಭಕ್ತಿಯನ್ನು ನೀಡುವವನೆ ಗುರು, ಅವನೆ ಜನ್ಮದಾತ, ಅವನೆ ಬಂಧು. ಕೃಷ್ಣಸೇವೆ ಇಲ್ಲದ ಬೇರೆ ಮಾರ್ಗ ತೋರುವವ ಹಂತಕನೆನಿಸುತ್ತಾನೆ. ಅವನಿಗೆ ಶಿಷ್ಯವಧೆಯ ಪಾಪ ತಗಲುತ್ತದೆ.

ಕೃಷ್ಣನಾಮ ಲೋಕಕ್ಕೆ ಸದಾ ಮಂಗಳದಾಯಕ. ಅದರಿಂದ ಮಂಗಳ ವರ್ಧಿಸು-ತ್ತದೆ. ಆಯುಷ್ಯ ಕ್ಷೀಣಿಸುವುದಿಲ್ಲ. ಕಾಲ ಮೃತ್ಯು ರೋಗ ತಾಪಶೋಕವೆಲ್ಲ ಗರುಡ-ನನ್ನು ಕಂಡ ಹಾವಿನಂತೆ ದೂರ ಓಡುತ್ತದೆ. ಕೃಷ್ಣಮಂತ್ರ ಉಪಾಸಕ ಬ್ರಾಹ್ಮಣನಿರಲಿ ಚಂಡಾಲನೆ ಇರಲಿ, ಬ್ರಹ್ಮಲೋಕವನ್ನು ದಾಟಿ ಗೋಲೋಕಕ್ಕೆ ಹೋಗಬಲ್ಲ. ಶಿವ ಉಪದೇಶಿಸುವ ಉತ್ತಮ ಮೋಕ್ಷೋಪಾಯ ಈ ಕೃಷ್ಣಸೇವೆಯೆ. ಬ್ರಹ್ಮನಿಂದ ತೊಡಗಿ ಹುಲ್ಲುಕಡ್ಡಿಯವರೆಗಿನ ಈ ಪ್ರಾಕೃತ ಪ್ರಪಂಚ ಎಲ್ಲವೂ ಸುಮ್ಮನೆ. ಅದರಿಂದ ಸುಖವಿಲ್ಲ. ಪ್ರಕೃತಿಯ ಆಚೆ ಇರುವ ಪರಬ್ರಹ್ಮನಾದ ರಾಧಾರಮಣನನ್ನೆ ಭಜಿಸ-ಬೇಕು. ಇದು ಸತ್ಯ.

ಬೇರೆ ಎಲ್ಲ ಯೋಗಿಗಳಿಗೂ ಸಿದ್ಧರಿಗೂ ಯತಿಗಳಿಗೂ ತಪಸ್ವಿಗಳಿಗೂ ಕರ್ಮಫಲ ಭೋಗವಿದ್ದೇ ಇದೆ. ವಿಷ್ಣುಭಕ್ತರಿಗಿಲ್ಲ. ಪಾಪ ಅವರನ್ನು ಮುಟ್ಟಿದ ಮಾತ್ರಕ್ಕೇ ಉರಿವ ಬೆಂಕಿಯಲ್ಲಿ ಬಿದ್ದ ಒಣಗಿದ ಕಟ್ಟಿಗೆಯಂತೆ ಭಸ್ಮವಾಗಿ ಬಿಡುವುದು. ಅವರನ್ನು ಕಂಡರೆ ಪಾಪ ಭಯಗಳೂ ಯಮದೂತರೂ ನಡುಗುತ್ತ ದೂರ ಓಡುತ್ತಾರೆ.

ಅಂಥ ಐಶ್ವರ್ಯವನ್ನು ನೀನೀಗ ಕಳೆದು ಅನುಗ್ರಹಿಸಿರುವೆ. ಜೊತೆಗೆ ಒಳ್ಳೆಯ ಜ್ಞಾನವನ್ನು ನೀಡಿ ಅನುಗ್ರಹಿಸು.

ಐಶ್ವರ್ಯ ಆಪತ್ತುಗಳಿಗೆ ಮೂಲ. ಜ್ಞಾನಾಂಧತೆಗೆ ಕಾರಣ. ಮುಕ್ತಿಮಾರ್ಗಕ್ಕೆ ತಡೆ. ಹರಿಭಕ್ತಿಗೆ ನಾಶಕ. ಜನನ ಮರಣ ಜರೆ ರೋಗ ಶೋಕ ದುಃಖಗಳ ಅಂಕುರಕ್ಕೆ ಬೀಜ. ಐಶ್ವರ್ಯದ ಅಂಧಕಾರದಿಂದ ಅಂಧನಾದವ ಮೋಕ್ಷಮಾರ್ಗವನ್ನು ಕಾಣಲಾರ.

ಐಶ್ವರ್ಯದಿಂದ ಮತ್ತನಾದವ ಕುಡಿದು ಮತ್ತನಾದವನಂತೆಯೆ. ಇಬ್ಬರೂ ಬಂಧುಗಳನ್ನು ದ್ವೇಷಿಸುವರು. ಐಶ್ವರ್ಯ ಬಂದಿತೆಂದರೆ ವಿಷಯಾಸಕ್ತಿಯಿಂದ ಅಂಧನಾಗಿ ಮಹಾಕಾಮಿಯಾಗಿ ದುಡುಕಿ ಅಕೃತ್ಯವೆಸಗುತ್ತಾನೆ. ಸಾತ್ವಿಕ ಮಾರ್ಗ ಅವನಿಗೆ ಕಾಣುವುದಿಲ್ಲ. ರಾಜಸನೋ ತಾಮಸನೋ ಆಗಿ ಬಿಡುತ್ತಾನೆ. ಶಾಸ್ತ್ರಜ್ಞಾನ ಉಳಿದಿದ್ದರೆ ರಾಜಸ. ಅದು ಅಳಿದಿದ್ದರೆ ತಾಮಸ.

ಶಾಸ್ತ್ರದಲ್ಲಿ ಎರಡು ಮಾರ್ಗ ಉಕ್ತವಾಗಿದೆ. ಒಂದು ಪ್ರವೃತ್ತಿ ಮಾರ್ಗ. ಇನ್ನೊಂದು ನಿವೃತ್ತಿಮಾರ್ಗ. ಜೀವಿಗಳು ಮೊದಲಿಗೆ ಕಾಲಿಡುವುದು ಪ್ರವೃತ್ತಿ ಮಾರ್ಗದಲ್ಲಿ. ಅದು ದುಃಖಕರವಾದರೂ ಮೇಲುನೋಟಕ್ಕೆ ಆಕರ್ಷಕವಾಗಿರುತ್ತದೆ. ಆದರಿಂದ ಜೀವಿಗಳು ಆ ಮಾರ್ಗ ಹಿಡಿದು ಅನೇಕ ಜನ್ಮಗಳಲ್ಲಿ ವ್ಯರ್ಥವಾಗಿ ಸುತ್ತಿಸುತ್ತಿ ಕೊನೆಯಲ್ಲಿ ಕೃಷ್ಣನ ಅನುಗ್ರಹದಿಂದ ಸಜ್ಜನರ ಸಂಗ ಪಡೆಯುತ್ತಾರೆ. ಸಾವಿರದಲ್ಲಿಯೋ ನೂರರಲ್ಲಿಯೋ ಒಬ್ಬನಿಗೆ ಈ ಅವಕಾಶ ಸಿಗುತ್ತದೆ. ಸಜ್ಜನರು ಮುಕ್ತಿಮಾರ್ಗ ತೋರಿದಾಗ ಆ ಜೀವಿ ಅನೇಕ ಜನ್ಮಗಳಲ್ಲಿ ಯತ್ನಮಾಡಿ ತಪಸ್ಸು ವ್ರತ ಉಪವಾಸಗಳ ಮೂಲಕ ಮುಕ್ತಿ-ಮಾರ್ಗವನ್ನು ಹಿಡಿಯುತ್ತಾರೆ. ಈ ಮಾರ್ಗ ನಿರ್ವಿಘ್ನವಾಗಿದ್ದು ಸುಖಕರ-ವಾಗಿರುತ್ತದೆ. ಇಷ್ಟು ವಿಷಯವನ್ನು ಮಾತ್ರ ನಾನು ಗುರುಮುಖದಿಂದ ಕೇಳಿ ತಿಳಿದಿದ್ದೇನೆ. ಮುಂದೆ ಏನೂ ತಿಳಿದಿಲ್ಲ. ಈಗ ವಿಧಿವಶದಿಂದ ವಿಪತ್ತು ಒದಗಿದೆ, ಜ್ಞಾನೋದಯವಾಗಿದೆ. ಈ ವಿಪತ್ತೇ ನನಗೆ ಸಂಪತ್ತು. ಮುನಿಯೆ, ನೀನು ಜ್ಞಾನ-ಸಾಗರ, ದೀನಬಂಧು. ದೀನನಾದ ನನಗೆ ಮೋಕ್ಷದಾಯಕವಾದ ತತ್ವಜ್ಞಾನ ನೀಡು.'

ಇಂದ್ರನ ಮಾತನ್ನು ಕೇಳಿ ದೂರ್ವಾಸರು ಸಂತುಷ್ಟರಾಗಿ ನುಡಿದರು- 'ಮಹೇಂದ್ರ, ಮೊದಲಿಗೆ ದುಃಖಕರವಾದರೂ ಕೊನೆಯಲ್ಲಿ ಸುಖಕರವಾದ ಮಂಗಳ-ಕರವಾದ ಶ್ರೇಷ್ಠವಾದ ನಿವೃತ್ತಿ ಮಾರ್ಗವನ್ನು ತಿಳಿಯಲು ಬಯಸುತ್ತಿರುವಿ. ದಾನ ತಪಸ್ಸು ವ್ರತ ಉಪವಾಸ ಮೊದಲಾದ ಕರ್ಮಗಳಿಂದ ಸ್ವರ್ಗಾದಿ ಸುಖ ಮಾತ್ರ ಸಿಕ್ಕೀತು. ಕರ್ಮದ ಬಂಧ ಹರಿಯದು. ಅದಕ್ಕೆ ಆ ಕರ್ಮಗಳನ್ನೆ ಫಲದ ಆಸೆ ತೊರೆದು ಮಾಡಬೇಕು. ಆಗ ಅದು ಸಾತ್ವಿಕವೆನಿಸುತ್ತದೆ. ಇಂಥ ಸಾತ್ವಿಕ ಕರ್ಮವನ್ನು ಕೃಷ್ಣಾರ್ಪಣ ಮಾಡಿದರೆ ಪರಬ್ರಹ್ಮನಲ್ಲಿ ಲೀನನಾಗಬಹುದು. ಇದು ನಿರ್ವಾಣ ಮೋಕ್ಷ. ವಿಷ್ಣುವಿನ ಏಕಾಂತಭಕ್ತರು ಇಷ್ಟರಿಂದಲೆ ತೃಪ್ತರಾಗಲಾರರು. ಅವರಿಗೆ

ವಿಷ್ಣುಸೇವೆಯೆ ಮೋಕ್ಷಸುಖಕ್ಕಿಂತ ಹಿರಿದು. ಅವರು ದಿವ್ಯದೇಹ ಧರಿಸಿ ಗೋಲೋಕ-ದಲ್ಲಿ ಅಥವಾ ವೈಕುಂಠದಲ್ಲಿ ಪರಮಾತ್ಮನ ಸೇವೆ ಮಾಡುತ್ತಲೆ ಇರುತ್ತಾರೆ. ಇಂಥ ಹರಿಸೇವಾರೂಪವಾದ ಮುಕ್ತಿಯನ್ನೆ ವೈಷ್ಣವರು ಬಯಸುತ್ತಾರೆ.

ಸ್ಮರಣಂ ಕೀರ್ತನಂ ವಿಷ್ಣೋರರ್ಚನಂ ಪಾದಸೇವನಂ ।
ವಂದನಂ ಸ್ತವನಂ ನಿತ್ಯಂ ಭಕ್ತ್ಯಾ ನೈವೇದ್ಯಭಕ್ಷಣಂ ॥

ಚರಣೋದಕಪಾನಂ ಚ ತನ್ಮಂತ್ರ ಜಪನಂ ಪರಂ ।
ಇದಂ ನಿಸ್ತಾರಬೀಜಂ ಚ ಸರ್ವೇಷಾಮೀಪ್ಸಿತಂ ಭವೇತ್ ॥

ಹರಿಸ್ಮರಣೆ, ಹರಿನಾಮಕೀರ್ತನೆ, ಹರಿಯ ಅರ್ಚನೆ, ಹರಿಪಾದಸೇವನೆ, ಹರಿವಂದನೆ, ಹರಿಸ್ತೋತ್ರ, ನಿತ್ಯ ಭಕ್ತಿಯಿಂದ ಹರಿನೈವೇದ್ಯ ಭಕ್ಷಣ, ಹರಿಪಾದೋದಕ ಪ್ರಾಶನ, ಹರಿಮಂತ್ರ ಜಪ -ಈ ನವವಿಧ ಭಕ್ತಿಯೆ ಸಂಸಾರಸಾಗರವನ್ನು ದಾಟುವ ಉಪಾಯ. ಇದನ್ನೆ ಎಲ್ಲ ಮುಮುಕ್ಷುಗಳೂ ಬಯಸಬೇಕು.

ಈ ಮೃತ್ಯುಂಜಯವಾದ ಜ್ಞಾನ ನನಗೆ ಮೃತ್ಯುಂಜಯನಿಂದಲೆ ಬಂದಿದೆ. ನಾನು ಅವನ ಶಿಷ್ಯ. ಅವನ ಅನುಗ್ರಹದಿಂದ ನನಗೆ ಎಲ್ಲ ಸಂಶಯ ಪರಿಹಾರವಾಗಿದೆ. ಹೀಗೆ ತ್ರಿಲೋಕ ದುರ್ಲಭವಾದ ಹರಿಭಕ್ತಿಯನ್ನು ನೀಡುವವನೆ ಗುರು, ಅವನೆ ಜನ್ಮದಾತ, ಅವನೆ ಬಂಧು. ಕೃಷ್ಣಸೇವೆ ಇಲ್ಲದ ಬೇರೆ ಮಾರ್ಗ ತೋರುವವ ಹಂತಕನೆನಿಸುತ್ತಾನೆ. ಅವನಿಗೆ ಶಿಷ್ಯವಧೆಯ ಪಾಪ ತಗಲುತ್ತದೆ.

ಕೃಷ್ಣನಾಮ ಲೋಕಕ್ಕೆ ಸದಾ ಮಂಗಳದಾಯಕ. ಆದರಿಂದ ಮಂಗಳ ವರ್ಧಿಸು-ತ್ತದೆ. ಆಯುಷ್ಯ ಕ್ಷೀಣಿಸುವುದಿಲ್ಲ. ಕಾಲ ಮೃತ್ಯು ರೋಗ ತಾಪಶೋಕವೆಲ್ಲ ಗರುಡ-ನನ್ನು ಕಂಡ ಹಾವಿನಂತೆ ದೂರ ಓಡುತ್ತದೆ. ಕೃಷ್ಣಮಂತ್ರ ಉಪಾಸಕ ಬ್ರಾಹ್ಮಣನಿರಲಿ ಚಂಡಾಲನೆ ಇರಲಿ, ಬ್ರಹ್ಮಲೋಕವನ್ನು ದಾಟಿ ಗೋಲೋಕಕ್ಕೆ ಹೋಗಬಲ್ಲ. ಶಿವ ಉಪದೇಶಿಸುವ ಉತ್ತಮ ಮೋಕ್ಷೋಪಾಯ ಈ ಕೃಷ್ಣಸೇವೆಯೆ. ಬ್ರಹ್ಮನಿಂದ ತೊಡಗಿ ಹುಲ್ಲುಕಡ್ಡಿಯವರೆಗಿನ ಈ ಪ್ರಾಕೃತ ಪ್ರಪಂಚ ಎಲ್ಲವೂ ಸುಮ್ಮನೆ. ಅದರಿಂದ ಸುಖವಿಲ್ಲ. ಪ್ರಕೃತಿಯ ಆಚೆ ಇರುವ ಪರಬ್ರಹ್ಮನಾದ ರಾಧಾರಮಣನನ್ನೆ ಭಜಿಸ-ಬೇಕು. ಇದು ಸತ್ಯ.

ಬೇರೆ ಎಲ್ಲ ಯೋಗಿಗಳಿಗೂ ಸಿದ್ಧರಿಗೂ ಯತಿಗಳಿಗೂ ತಪಸ್ವಿಗಳಿಗೂ ಕರ್ಮಫಲ ಭೋಗವಿದ್ದೇ ಇದೆ. ವಿಷ್ಣುಭಕ್ತರಿಗಿಲ್ಲ. ಪಾಪ ಅವರನ್ನು ಮುಟ್ಟಿದ ಮಾತ್ರಕ್ಕೇ ಉರಿವ ಬೆಂಕಿಯಲ್ಲಿ ಬಿದ್ದ ಒಣಗಿದ ಕಟ್ಟಿಗೆಯಂತೆ ಭಸ್ಮವಾಗಿ ಬಿಡುವುದು. ಅವರನ್ನು ಕಂಡರೆ ಪಾಪ ಭಯಗಳೂ ಯಮದೂತರೂ ನಡುಗುತ್ತ ದೂರ ಓಡುತ್ತಾರೆ.

ಜನರು ಸಂಸಾರ ಕಾರಾಗಾರದಲ್ಲಿ ಬಂಧಿತರಾಗಿರುವುದು ಕೃಷ್ಣಶಾಸ್ತ್ರವನ್ನು ಗುರುಮುಖದಿಂದ ಕೇಳದ ತನಕ ಮಾತ್ರ. ಕೇಳಿದೊಡನೆ ಎಲ್ಲ ಕರ್ಮಬಂಧ ಹರಿಯುವುದು. ಎಲ್ಲ ಮಾಯಾ ಪಾಶ ಹರಿಯುವುದು. ಗೋಲೋಕಮಾರ್ಗ ತೋರುವುದು. ಎಲ್ಲ ವೇದಪಾಠ ವ್ರತಾದಿಗಳಿಗೂ ಸಿದ್ಧಿ ಲಭಿಸುವುದು ಎಂದು ಬ್ರಹ್ಮನೆ ಉಪದೇಶಿಸಿದ್ದಾನೆ.

ವಿಷ್ಣುಮಂತ್ರ ಉಪದೇಶ ಪಡೆದವ ತಾಯಿತಂದೆ ಸೋದರ ಪತ್ನಿ ಬಂಧು ಶಿಷ್ಯ ಸೇವಕ ಮುಂತಾದವರನ್ನೂ ಅತ್ತೆ ಮಾವಂದಿರನ್ನೂ ಅವರ ಮಕ್ಕಳು ಮೊಮ್ಮಕ್ಕಳನ್ನೂ ಸಹಪಾಠಿ ಗುರುಪತ್ನಿ ಗುರುಸುತರನ್ನು ಉದ್ಧರಿಸಬಲ್ಲ.

ಏಳು ಜನ್ಮಗಳಲ್ಲಿ ಅನ್ಯದೇವತೆಗಳ ಉಪಾಸನೆ ಮಾಡಿದರೆ ಸರ್ವಕರ್ಮಸಾಕ್ಷಿಯಾದ ಸೂರ್ಯನ ಮಂತ್ರ ಲಭಿಸುವುದು. ಮೂರುಜನ್ಮಗಳಲ್ಲಿ ಸೂರ್ಯಮಂತ್ರ ಉಪಾಸನೆ ಮಾಡಿದರೆ ಗಣೇಶಮಂತ್ರ ಲಭಿಸುವುದು. ತಿರುಗಿ ಮೂರುಜನ್ಮ ಗಣೇಶ ಮಂತ್ರೋಪಾಸನೆಯಿಂದ ವಿಷ್ಣುಮಾಯೆಯೆನಿಸಿದ ದುರ್ಗೆಯ ಮಂತ್ರ ಸಿಗುವುದು. ನೂರುಜನ್ಮ ದುರ್ಗಾಮಂತ್ರೋಪಾಸನೆಯಿಂದ ಶಿವಮಂತ್ರ ಲಭಿಸುವುದು. ಮೂರುಜನ್ಮ ಶಿವಮಂತ್ರೋಪಾಸನೆಯಿಂದ ಬೇಗನೆ ಒಲಿವ ಶಿವನ ಅನುಗ್ರಹದಿಂದ ಹರಿಭಕ್ತಿಯೂ ಅದರಿಂದ ಹರಿಭಕ್ತರ ಸಂಸರ್ಗವೂ ಅದರಿಂದ ಕೃಷ್ಣಮಂತ್ರವೂ ಲಭಿಸುವುದು. ಅದರಿಂದ ನಿರ್ಮಲಜ್ಞಾನಪೂರ್ವಕ ನಿವೃತ್ತಿಮಾರ್ಗ ಪ್ರಾಪ್ತಿ. ಪಾಂಚ ಭೌತಿಕ ದೇಹನಾಶ, ದಿವ್ಯದೇಹದಿಂದ ಗೋಲೋಕದಲ್ಲಿ ಅಥವಾ ವೈಕುಂಠದಲ್ಲಿ ಪರಮಾನಂದಯುಕ್ತನಾಗಿ ಮೋಹಾದಿದೋಷ ವರ್ಜಿತನಾಗಿ ಹರಿಸೇವೆ ಮಾಡುತ್ತಾನೆ. ತಿರುಗಿ ಸಂಸಾರಕ್ಕೆ ಎಂದೂ ಬರುವುದಿಲ್ಲ. ಮಾತೆಯ ಸ್ತನವನ್ನು ಹಿಡಿದು ಕ್ಷೀರಪಾನ ಮಾಡುವುದಿಲ್ಲ.

ನಿವೃತ್ತಿ ಮಾರ್ಗದಲ್ಲಿರುವವನು ಸನ್ಯಾಸಿ. ಒಳ್ಳೆಯ ಕೆಟ್ಟ ಅನ್ನ ಅನ್ನಗಳಲ್ಲಿ, ಮಣ್ಣಹೆಂಟೆ ಬಂಗಾರಗಳಲ್ಲಿ, ಸಮಾನವಾದ ಭಾವನೆ ಇದ್ದು ದಂಡ ಕಮಂಡಲು ಕಾವಶಾಟಿಗಳನ್ನು ಧರಿಸಿ, ನಿತ್ಯ ಪ್ರವಾಸ ಮಾಡುತ್ತ ಶುದ್ಧಾಚಾರಿಗಳಾದ ದ್ವಿಜರ ಅನ್ನ ಉಣ್ಣುವ ಯಾರನ್ನೂ ಬೇಡದೆ ಇರುವ, ಎಲ್ಲ ಕಾಮ್ಯಕರ್ಮಗಳನ್ನು ತೊರೆದಿರುವ, ಮೌನವಾಗಿದ್ದು ನಾರಾಯಣನನ್ನು ಧ್ಯಾನಿಸುವವನೆ ಸನ್ಯಾಸಿ. ಅವನು ಸ್ತ್ರೀಯರ ಮುಖ ನೋಡಬಾರದು. ಅವರ ಬಳಿ ಇರಬಾರದು. ಮರದಲ್ಲಿ ಮಾಡಿದ ಹೆಣ್ಣಿನ ಬೊಂಬೆಯನ್ನು ಮುಟ್ಟಬಾರದು. ಇದಕ್ಕೆ ವ್ಯತಿರಿಕ್ತವಾಗಿ ನಡೆದರೆ ನರಕಾದ್ಯನರ್ಥ. ಜನನ ಮರಣ ಯಮದರ್ಶನಾದಿಗಳು ತಪ್ಪಲಾರವು.

ಎಲ್ಲ ಜೀವರಿಗೂ ದೇವತಾಗರ್ಭದಲ್ಲಾಗಲಿ ಹಂದಿಯ ಗರ್ಭದಲ್ಲಾಗಲಿ ಕ್ಷುದ್ರಜಂತುವಿನ ಪಶುವಿನ ಗರ್ಭದಲ್ಲಾಗಲಿ ದುಃಖಾನುಭವ ಒಂದೇ ತರನಾಗಿರುತ್ತದೆ.

ಗರ್ಭದಲ್ಲಿ ಜೀವ ಹಿಂದೆ ನೂರಾರು ಜನ್ಮಗಳಲ್ಲಿ ಮಾಡಿದ ಕರ್ಮಗಳನ್ನು ಸ್ಮರಿಸುತ್ತಾನೆ. ಗರ್ಭದಿಂದ ಹೊರಬಂದೊಡನೆ ವಿಷ್ಣುಮಾಯೆಯಿಂದ ಎಲ್ಲವನ್ನೂ ಮರೆಯುತ್ತಾನೆ. ದೇವತಾಶರೀರವಿರಲಿ ಒಂದು ಕೀಟದ ಶರೀರವೆ ಇರಲಿ, ಯತ್ನದಿಂದ ರಕ್ಷಿಸುತ್ತಾನೆ.

ಗರ್ಭಕೋಶದಲ್ಲಿ ಶುಕ್ರ ಶೋಣಿತ ಮೇಲನವಾಗುವಾಗ ಶೋಣಿತ ಅಧಿಕವಿದ್ದರೆ ಶಿಶು ತಾಯಿಯಂತೆಯೂ ಶುಕ್ರ ಅಧಿಕವಿದ್ದರೆ ತಂದೆಯಂತೆಯೂ ಆಕೃತಿ ಪಡೆಯು-ವುದು. ಸಮದಿವಸದಲ್ಲಿ ಗಂಡೂ ಬೆಸದಿವಸದಲ್ಲಿ ಹೆಣ್ಣೂ ಜನಿಸುವುದು. ಭಾನು ಮಂಗಳ ಗುರುವಾರಗಳಲ್ಲಿ ಗಂಡು. ಬೇರೆ ದಿನಗಳಲ್ಲಿ ಹೆಣ್ಣು. ಮೊದಲನೆ ಯಾಮದಲ್ಲಿ ಅಲ್ಪಾಯು. ಎರಡನೆ ಯಾಮದಲ್ಲಿ ಮಾಧ್ಯಮ. ಮೂರನೆ ಯಾಮದಲ್ಲಿ ದೀರ್ಘಾಯು. ಚತುರ್ಥ ಯಾಮದಲ್ಲಿ ಚಿರಜೀವಿ. ಎಂಥ ಸಮಯದಲ್ಲಿ ಮಗು ಗರ್ಭದಲ್ಲಿ ಜನಿಸುವುದೋ ಅಂಥ ಸಮಯದಲ್ಲಿಯೆ ಪ್ರಸವವೂ ಆಗುವುದು. ಆದ್ದರಿಂದ ಜ್ಯೋತಿಷ್ಯ ಬಲ್ಲವರು ಪ್ರಸವ ಕಾಲವನ್ನೆ ವಿಚಾರಿಸುವರು.

ಶುಕ್ರಶೋಣಿತ ಮೇಲನವಾಗಿ ಒಂದು ದಿನದಲ್ಲಿ ಕಲಲವೆನಿಸುವುದು. ಏಳು ದಿವಸಗಳಲ್ಲಿ ಯುಗಚಿ ಹಣ್ಣಿನ ಗಾತ್ರಕ್ಕೆ ಬೆಳೆಯುವುದು. ಒಂದು ತಿಂಗಳಲ್ಲಿ ಲಡ್ಡು-ವಿನಂತಾಗುವುದು. ಮೂರು ತಿಂಗಳಲ್ಲಿ ಕೈಕಾಲುಗಳಿಲ್ಲದ ಒಂದು ಮಾಂಸದ ಪಿಂಡವಾಗಿದ್ದು ಐದನೇ ತಿಂಗಳಲ್ಲಿ ಎಲ್ಲ ಅಂಗಗಳಿಂದ ಕೂಡಿಕೊಂಡು ಆರನೆ ತಿಂಗಳಲ್ಲಿ ಪ್ರಾಣ ಸಂಚಾರಯುಕ್ತವಾಗುವುದು. ಜೀವ ಆಗ ಗರ್ಭವಾಸ ದುಃಖ ಅನುಭವಿಸುತ್ತಾನೆ. ಪಂಜರದೊಳಗೆ ಹಿಡಿದಿಟ್ಟ ಹಕ್ಕಿಯಂತೆ ಸಣ್ಣಗರ್ಭಕೋಶದೊಳಗೆ ಸಿಕ್ಕಿಕೊಂಡು ದುಃಖ ಪಡುತ್ತಾನೆ. ತಾಯಿಯ ಮಲಾಶಯ ಸಮೀಪವೆ ಇದ್ದು ತಾಯಿ ಸೇವಿಸಿದ ಅನ್ನಪಾನವನ್ನು ಸೇವಿಸುತ್ತ ಹಾ ಹಾ ಎನ್ನುತ್ತ ಪರಮಾತ್ಮನನ್ನು ಚಿಂತಿಸು-ತ್ತಾನೆ. ಹೀಗೆ ನಾಲ್ಕು ತಿಂಗಳ ಕಾಲವಿದ್ದು ಪ್ರಸವ ಕಾಲದಲ್ಲಿ ವಾಯು ಪ್ರೇರಣೆಯಿಂದ ಗರ್ಭವನ್ನು ಬಿಟ್ಟು ಹೊರಗೆ ಬರುತ್ತಾನೆ. ವಿಷ್ಣುಮಾಯೆಯಿಂದ ಹಿಂದೆ ನಡೆದುದ-ನ್ನೆಲ್ಲ ಮರೆತು ದಿಕ್ಕು ದೇಶ ಕಾಲ ಒಂದನ್ನೂ ಅರಿಯದ, ಸದಾ ಮಲಮೂತ್ರ-ಯುಕ್ತವಾದ ಶೈಶವಾವಸ್ಥೆಯನ್ನು ಅನುಭವಿಸುತ್ತಾನೆ. ಪೂರ್ತಿ ಪರಾಧೀನನಾಗಿದ್ದು ಮೈಮೇಲಿಂದ ನೊಣ ಸೊಳ್ಳೆಗಳನ್ನು ಓಡಿಸಲೂ ಅಸಮರ್ಥನಾಗಿ ಅಳುತ್ತಾನೆ. ಸ್ತನಪಾನದ ಇಚ್ಛೆ ಉಂಟಾದರೂ ಹೇಳಲು ಅಶಕ್ತನಾಗಿ ದುಃಖಿಸುತ್ತಾನೆ. ಹೀಗೆ ಬಾಲ್ಯದಲ್ಲಿ ದುಃಖ ಅನುಭವಿಸಿ, ಯೌವನಕ್ಕೆ ಕಾಲಿಟ್ಟಾಗ ಆಹಾರ ಸ್ತ್ರೀಸುಖಗಳ ಆಸಕ್ತಿಯಿಂದ ಮೋಹಿತನಾಗಿ, ಹೆಂಡತಿ ಮಕ್ಕಳು ಪರಿವಾರದವರನ್ನು ರಕ್ಷಿಸಲು ಶ್ರಮಿಸುತ್ತಾನೆ. ಬಂಧುಗಳು ಅವನನ್ನು ಶಕ್ತನಾಗಿರುವಾಗ ಆದರಿಸುತ್ತಾರೆ. ಅಶಕ್ತ-ನಾದಾಗ ಮುದಿ ಎತ್ತಿನಂತೆ ಕಂಡು ತಿರಸ್ಕರಿಸುತ್ತಾರೆ.

ಮುಪ್ಪು ಬಂದಾಗ ಬುದ್ಧಿ ಮಾಂದ್ಯ ಕಿವುಡುತನ ಮುಂತಾದವುಗಳಿಗೊಳಗಾಗಿ ಕೆಮ್ಮು ದಮ್ಮು ಮುಂತಾದವುಗಳಿಗೆ ಬಲಿಯಾಗಿ ಪರಾಧೀನನಾಗುತ್ತಾನೆ. ಆಗ ಪಶ್ಚಾತ್ತಾಪ ಪಡುತ್ತಾನೆ— 'ನಾನು ವಿಷ್ಣುಕ್ಷೇತ್ರಗಳಲ್ಲಿ ಸಂಚರಿಸಲಿಲ್ಲ. ಸಜ್ಜನರ ಒಡನಾಟ ಮಾಡಲಿಲ್ಲ. ಮುಂದಿನ ಜನ್ಮದಲ್ಲಾದರೂ ಮನುಷ್ಯನಾಗಿ ಹುಟ್ಟಿ ತೀರ್ಥಯಾತ್ರೆ ಮಾಡುತ್ತೇನೆ. ಕೃಷ್ಣನನ್ನು ಆರಾಧಿಸುತ್ತೇನೆ' ಎಂದು ಹೀಗೆ ಆತ ಆಲೋಚಿಸು- ತ್ತಿದ್ದಂತೆಯೆ ಭಯಂಕರರಾದ ಯಮದೂತರು ಬರುತ್ತಾರೆ. ದಂಡಪಾಶಗಳನ್ನು ಹಿಡಿದು ಕೋಪದ ಕೆಂಗಣ್ಣಿಂದ ನೋಡುವ ವಿಕೃತಾಕಾರದ ಆ ದೂತರನ್ನು ಕಂಡೊಡನೆ ಭಯದಿಂದ ಆತ ಮಲಮೂತ್ರ ವಿಸರ್ಜಿಸುತ್ತಾನೆ. ಪ್ರಾಣಗಳನ್ನೂ ಪಾಂಚಭೌತಿಕ ದೇಹವನ್ನೂ ಬಿಟ್ಟು ಹೊರಗೆ ಬರುತ್ತಾನೆ. ಅಂಗುಷ್ಠದಷ್ಟು ಗಾತ್ರದ ಸೂಕ್ಷ್ಮಶರೀರದಿಂದ ಅವನನ್ನು ಯಮದೂತರು ಸೆಳೆದೊಯ್ದು ನಾನಾ ವಿಧದ ಯಾತನಾಶರೀರದೊಳಗೆ ಸೇರಿಸುತ್ತಾರೆ.

ಯಮ ಜೀವರ ಕರ್ಮಾನುಸಾರ ಅವರನ್ನು ಶಿಕ್ಷಿಸುತ್ತಾನೆ. ಆತ ಧರ್ಮಜ್ಞ. ಮೂರುಕೋಟಿ ದೂತರಿಂದ ಪರಿವೃತನಾಗಿ ನಗುಮೊಗದಿಂದ ರತ್ನಸಿಂಹಾಸನದಲ್ಲಿ ಮಂಡಿಸಿ ಶುದ್ಧಸ್ಫಟಿಕ ಮಾಲೆಯಿಂದ ಕೃಷ್ಣಮಂತ್ರ ಜಪಿಸುತ್ತಾನೆ. ಕೃಷ್ಣನ ಪಾದಕಮಲ- ಗಳನ್ನು ಧ್ಯಾನಿಸುತ್ತ ಮೈರೋಮಾಂಚಗೊಂಡು ಕಣ್ಣುಗಳಲ್ಲಿ ಆನಂದಬಾಷ್ಪ ಸುರಿಸುತ್ತ ಶರತ್ಕಾಲದ ಚಂದ್ರನಂತೆ ಹೊಳೆಯುತ್ತಾನೆ. ಮುಂದೆ ಚಿತ್ರಗುಪ್ತನಿರುತ್ತಾನೆ. ಪುಣ್ಯಾತ್ಮರಿಗೆ ಶಾಂತರೂಪ, ಪಾಪಿಗಳಿಗೆ ಭಯಂಕರ, ಯಮ. ಅವನನ್ನು ಕಂಡು ಪಾಪಿ ಭಯದಿಂದ ನಡುಗಿ ಕಾಲಿಗೆ ಬೀಳುತ್ತಾನೆ. ಯಮ ಚಿತ್ರಗುಪ್ತನೊಡನೆ ವಿಚಾರಿಸಿ ಶುಭ ಅಶುಭ ಫಲಗಳನ್ನು ಕರ್ಮಾನುಸಾರ ನೀಡುತ್ತಾನೆ. ಹೀಗೆ ಪ್ರವೃತ್ತಿಮಾರ್ಗ- ದಲ್ಲಿರುವವರಿಗೆ ಜನನ ಮರಣಗಳಿಂದ ಬಿಡುಗಡೆಯೆ ಇಲ್ಲವಾಗುತ್ತದೆ. ಶ್ರೀಕೃಷ್ಣನ ಪಾದಸೇವೆ ಮಾಡಿದರೆ ಮುಕ್ತಿ ನಿಶ್ಚಿತ.

ಮಹೇಂದ್ರ, ನೀನು ಕೇಳಿದ ಎಲ್ಲ ತತ್ವಗಳನ್ನೂ ಹೇಳಿದ್ದೇನೆ. ಇನ್ನೇನು ಬಯಸುವೆ ? ನೀನು ಬಯಸುವುದನ್ನೆಲ್ಲ ಪೂರೈಸಿಕೊಡುತ್ತೇನೆ. ನನಗೆ ಅಸಾಧ್ಯವೇನೂ ಇಲ್ಲ.'

ಮಹೇಂದ್ರ ಹೇಳಿದ, 'ಮುನಿಯೆ, ನನ್ನ ಇಂದ್ರ ಪದವಿ ಹೊರಟುಹೋಯಿತು. ಅದು ಹೋಗಲಿ, ಐಶ್ವರ್ಯದಿಂದೇನು ಪ್ರಯೋಜನ ? ನನಗೆ ಮೋಕ್ಷ ನೀಡು.'

ದೂರ್ವಾಸರು ಹೇಳಿದರು- 'ಮಹೇಂದ್ರ, ಪದಾಧಿಕಾರಿಗಳಾದ ನಿನ್ನಂಥ ದೇವತೆಗಳಿಗೆ ಬ್ರಹ್ಮಾಂಡಲಯ ಪರ್ಯಂತವೂ ಮುಕ್ತಿ ಇಲ್ಲ.

ಸರಿಸಾರಿ ಜೀವರು ಸೃಷ್ಟಿಯಲ್ಲಿ ಆವಿರ್ಭವಿಸುತ್ತಾರೆ, ಲಯದಲ್ಲಿ ತಿರೋಭಾವ ಹೊಂದುತ್ತಾರೆ. ಜಾಗರ ನಿದ್ದೆಗಳಂತೆ ಇವು ಕ್ರಮವಾಗಿ ಉಂಟಾಗುತ್ತವೆ. ಪರಮಾತ್ಮನ

ಇಚ್ಛೆಯಂತೆ ಕಾಲಚಕ್ರ ತಿರುಗುತ್ತದೆ. ಅದಕ್ಕೆ ಸರಿಯಾಗಿ ಸಂಸಾರಿಗಳೂ ಜನನ ಮರಣ ಚಕ್ರಗಳಲ್ಲಿ ತಿರುಗುತ್ತಾರೆ.

ಅರವತ್ತು ವಿಪಳಗಳು ಒಂದು ಪಳ. ಅರವತ್ತು ಪಳಗಳು ಒಂದು ದಂಡ. ಎರಡು ದಂಡಗಳು ಒಂದು ಮುಹೂರ್ತ. ಮೂವತ್ತು ಮುಹೂರ್ತಗಳು ಒಂದು ಹಗಲು-ರಾತ್ರಿ. ಹದಿನೈದು ಹಗಲುರಾತ್ರಿಗಳು ಒಂದು ಪಕ್ಷ. ಶುಕ್ಲ ಕೃಷ್ಣ ಪಕ್ಷಗಳೆರಡು ಸೇರಿ ಒಂದು ಮಾಸ. ಎರಡು ಮಾಸಗಳು ಒಂದು ಋತು. ಮೂರು ಋತುಗಳು ಒಂದು ಅಯನ. ಎರಡು ಅಯನಗಳು ಒಂದು ವರ್ಷ. ಇದು ದೇವಮಾನದಲ್ಲಿ ಒಂದು ಹಗಲು ರಾತ್ರಿಯಾಗುವುದು. ದೇವಮಾನದ ನಲವತ್ತಮೂರು ಲಕ್ಷ ಇಪ್ಪತ್ತು ಸಾವಿರ ವರ್ಷಗಳು ಒಂದು ಚತುರ್ಯುಗ. ಎರಡು ಸಾವಿರ ಚತುರ್ಯುಗಗಳು ಬ್ರಹ್ಮನಿಗೆ ಒಂದು ಹಗಲು ರಾತ್ರಿ. ಅವನ ನೂರುವರ್ಷಗಳು ಪೂರ್ಣವಾದಾಗ ಬ್ರಹ್ಮಾಂಡ ಲಯವಾಗುವುದು. ನೂರುವರ್ಷ ಲಯಕಾಲ. ತಿರುಗಿ ನೂರುವರ್ಷ ಸೃಷ್ಟಿಕಾಲ. ಕೃಷ್ಣ ಕಣ್ಣುಮುಚ್ಚಿದರೆ ಲಯ. ಕಣ್ಣುತೆರೆದರೆ ಸೃಷ್ಟಿ. ಇಂಥ ಸೃಷ್ಟಿಲಯಗಳು ಅಸಂಖ್ಯ. ನೆಲದ ಮೇಲಿನ ದೂಳಿನ ಕಣಗಳಂತೆಯೆ ಎಣಿಸಲು ಅಸಾಧ್ಯ ಎಂದು ಶಿವ ಹೇಳಿದ್ದಾನೆ. ಹೀಗೆ ಸೃಷ್ಟಿಲಯ ಮಾನವನ್ನೂ ಹೇಳಿದ್ದೇನೆ.

ಇನ್ನೇನು ವರವನ್ನು ಬೇಡುವೆ ? ಹೇಳು.'

ದೂರ್ವಾಸರ ಈ ಮಾತನ್ನು ಕೇಳಿ ದೇವೇಂದ್ರ ತಾನು ಕಳೆದುಕೊಂಡ ಇಂದ್ರಪದವಿಯನ್ನೆ ತಿರುಗಿ ಬೇಡಿದ. ಮುನಿ 'ಆಗಲಿ, ಬೇಗನೆ ಅದನ್ನು ಹೊಂದುವೆ' ಎಂದು ವರವಿತ್ತು ಹೊರಟುಹೋದರು.

**ಇಲ್ಲಿಗೆ ಶ್ರೀ ಬ್ರಹ್ಮವೈವರ್ತ ಮಹಾಪುರಾಣದಲ್ಲಿ ಎರಡನೆಯದಾದ ಪ್ರಕೃತಿಖಂಡದ ನಾರದನಾರಾಯಣ ಸಂವಾದದಲ್ಲಿ ಲಕ್ಷ್ಮಿ ಉಪಾಖ್ಯಾನದ ದೂರ್ವಾಸ ಮುನಿ ಸುರೇಂದ್ರ ಸಂವಾದದಲ್ಲಿ ಇಂದ್ರನಿಗೆ ದೂರ್ವಾಸರ ಶಾಪಾದಿ ವರ್ಣನವೆಂಬ ಮೂವತ್ತಾರನೆ ಅಧ್ಯಾಯ ಮುಗಿಯಿತು.**

# ದೇವೇಂದ್ರ ಬೃಹಸ್ಪತಿ ಸಂವಾದ

**ಅಧ್ಯಾಯ-೩೭**

ನಾರದ- ಹರಿಯ ಗುಣವರ್ಣನೆಯನ್ನು ಕೇಳಿದ ದೇವೇಂದ್ರ ಮುಂದೇನು ಮಾಡಿದ ?

ನಾರಾಯಣ— ಹರಿಯ ಗುಣಗಳನ್ನು ಕೇಳಿದ ಬಳಿಕ ದೇವೇಂದ್ರ ಅಮರಾವತಿ ಶತ್ರುಗಳಿಗೆ ವಶವಾದುದನ್ನು ಕಂಡ. ಗುರುಗಳಾದ ಬೃಹಸ್ಪತ್ಯಾಚಾರ್ಯರ ಬಳಿಗೆ ಹೋಗಿ ನಮಸ್ಕರಿಸಿ ಅಳುತ್ತ ದೂರ್ವಾಸಶಾಪ ವೃತ್ತಾಂತವನ್ನು ಹೇಳಿದ. ಕಳೆದು-ಹೋದ ಅಮರಾವತಿಯನ್ನು ತಿರುಗಿ ಪಡೆಯುವ ವರದ ಬಗ್ಗೆಯೂ ಹೇಳಿದ. ಬೃಹಸ್ಪತಿ ಬೋಧಿಸಿದ—

'ದೇವೇಂದ್ರ, ಅಳಬೇಡ. ನೀತಿಜ್ಞನಾದವನು ಆಪತ್ಕಾಲದಲ್ಲಿ ಅಧೀರನಾಗ-ಬಾರದು. ಸಂಪತ್ತು ವಿಪತ್ತುಗಳು ಸ್ವಪ್ನದಂತೆ ನಶ್ವರ. ಪೂರ್ವಕರ್ಮಾನುಗುಣವಾಗಿ ಬಂದು ಹೋಗುತ್ತವೆ.

ನಾಭುಕ್ತಂ ಕ್ಷೀಯತೇ ಕರ್ಮ ಕಲ್ಪಕೋಟಿ ಶತೈರಪಿ ।
ಅವಶ್ಯಮೇವ ಭೋಕ್ತವ್ಯಂ ಕೃತಂ ಕರ್ಮ ಶುಭಾಶುಭಂ ॥

ಕೋಟಿ ಕಲ್ಪಗಳು ಕಳೆದರೂ ತಾನು ಮಾಡಿದ ಕರ್ಮದ ಫಲ ಉಣದೆ ತೀರದು. ಆದ್ದರಿಂದ ಕರ್ಮ ಶುಭವಿರಲಿ ಅಶುಭವಿರಲಿ ಅದರ ಫಲವನ್ನು ಉಣಲೇಬೇಕು.

ಸಾಮವೇದದ ಕೌಥುಮಶಾಖೆಯಲ್ಲಿ ಕೃಷ್ಣ ತನ್ನ ಕುಲದಲ್ಲಿ ಜನಿಸಿದವರಿಗೆ ಮೇಲಿನಂತೆ ಉಪದೇಶಿಸಿದ್ದಾನೆ. ಆದ್ದರಿಂದ ಕೋಟಿಜನ್ಮಗಳಲ್ಲಿ ಮಾಡಿದ ಕರ್ಮ-ಗಳೆಲ್ಲ ಜೀವನ ಬೆನ್ನ ಹಿಂದೇ ನೆರಳಿನಂತೆ ಬರುತ್ತವೆ. ಅವನ್ನು ಭೋಗಿಸದೆ ದೂರವಾಗಲಾರವು.

ಕಾಲದೇಶ ಪಾತ್ರಗಳಿಗನುಗುಣವಾಗಿ ಕರ್ಮಗಳಲ್ಲಿ ತಾರತಮ್ಯ ಉಂಟಾಗುತ್ತದೆ. ಸಾಮಾನ್ಯದಿನಗಳಲ್ಲಿ ನೀಡಿದ ದಾನ ಸಾಮಾನ್ಯಫಲ ನೀಡಿದರೂ ವಿಶೇಷದಿನಗಳಲ್ಲಿ ವಿಶೇಷಫಲ ನೀಡುವುದು. ಸಾಮಾನ್ಯ ಪ್ರದೇಶದಲ್ಲಿ ನೀಡಿದ ದಾನ ಸಾಮಾನ್ಯ ಫಲನೀಡಿದರೂ ವಿಶೇಷ ಸ್ಥಳಗಳಲ್ಲಿ ನೀಡಿದ ದಾನ ವಿಶೇಷ ಫಲ ನೀಡುವುದು. ಸಾಮಾನ್ಯವ್ಯಕ್ತಿಗೆ ನೀಡಿದ ದಾನ ಸಾಮಾನ್ಯಫಲ ನೀಡಿದರೂ ವಿಶೇಷವ್ಯಕ್ತಿಗೆ ನೀಡಿದ ದಾನ ವಿಶೇಷಫಲ ನೀಡುವುದು. ವಿಶೇಷಫಲವೆಂದರೆ ಸಾಮಾನ್ಯಫಲಕ್ಕಿಂತ ಕೋಟಿಪಾಲು ಹೆಚ್ಚಿನದು ಅಥವಾ ಅನಂತಪಾಲು ಹೆಚ್ಚಿನದಾಗಬಹುದು. ವ್ಯವಸಾಯಗಾರನಿಗೆ ಸಸ್ಯ-ಗಳು ಕಾಲ ದೇಶ ಪಾತ್ರಗಳಲ್ಲಿ ಬೇರೆ ಬೇರೆ ಪ್ರಮಾಣದಲ್ಲಿ ಫಲ ನೀಡುವಂತೆಯೆ ಇದು.

ಸಾಮಾನ್ಯ ದಿನಗಳಲ್ಲಿ ನೀಡುವ ದಾನಕ್ಕಿಂತ ಅಮಾವಾಸ್ಯಾ ಸೂರ್ಯ ಸಂಕ್ರಮಣ-ಗಳಲ್ಲಿ ನೀಡುವ ದಾನ ನೂರು ಪಾಲು ಅಧಿಕ ಫಲ ನೀಡುವುದು. ಚಾತುರ್ಮಾಸ್ಯ

ಪೌರ್ಣಮಿಗಳಲ್ಲಿ ನೀಡುವ ದಾನ ಅನಂತ ಫಲ ನೀಡುವುದು. ಚಂದ್ರಗ್ರಹಣದಲ್ಲಿ ನೀಡಿದರೆ ಕೋಟಿಪಾಲು ಅಧಿಕಫಲ. ಅಕ್ಷಯ ತೃತೀಯೆಯಂದು ನೀಡಿದರೆ ಅಕ್ಷಯ ಅನಂತ ಫಲ. ಹೀಗೇ ಬೇರೆ ಬೇರೆ ಪುಣ್ಯದಿನಗಳಲ್ಲಿ ದಾನಾದಿ ಕರ್ಮಗಳಿಗೆ ವಿಶೇಷಫಲ ಸಿಗುವುದು. ದಾನದಂತೆ ಸ್ನಾನಜಪ ಮುಂತಾದ ಪುಣ್ಯಕರ್ಮಗಳಲ್ಲಿಯೂ ಹೀಗೆಯೆ ಫಲದಲ್ಲಿ ತಾರತಮ್ಯವಿದೆ.

ಸಾಮಾನ್ಯ ಪ್ರದೇಶದಲ್ಲಿ ಬ್ರಾಹ್ಮಣನಿಗೆ ದಾನ ಮಾಡಿದರೆ ಸಾಮಾನ್ಯಫಲ. ತೀರ್ಥಕ್ಷೇತ್ರ ದೇವಾಲಯಗಳಲ್ಲಿ ನೀಡಿದರೆ ನೂರುಪಾಲು ಅಧಿಕಫಲ. ಗಂಗಾ-ತೀರದಲ್ಲಿ ಕೋಟಿಪಾಲು ಅಧಿಕಫಲ. ನಾರಾಯಣ ಕ್ಷೇತ್ರದಲ್ಲಿ ಅನಂತಫಲ. ಕುರುಕ್ಷೇತ್ರ ಬದರಿ ಕಾಶಿಗಳಲ್ಲಿ ಕೋಟಿಪಾಲು ಅಧಿಕಫಲ. ಕೇದಾರದಲ್ಲಿ ಲಕ್ಷಪಾಲು ಅಧಿಕಫಲ. ಪುಷ್ಕರ ಭಾಸ್ಕರಕ್ಷೇತ್ರಗಳಲ್ಲಿ ಹತ್ತುಲಕ್ಷಪಾಲು ಅಧಿಕ ಫಲ. ಹೀಗೆ ಬೇರೆ ಕರ್ಮಗಳಿಗೂ ಬೇರೆ ಬೇರೆ ದೇಶಗಳಲ್ಲಿ ಫಲದಲ್ಲಿ ತಾರತಮ್ಯ ತಿಳಿಯಬೇಕು.

ಸಾಮಾನ್ಯ ಬ್ರಾಹ್ಮಣನಿಗೆ ದಾನ ಮಾಡಿದರೆ ಸಾಮಾನ್ಯಫಲ. ಮೂರು ಹೊತ್ತು ಸಂಧ್ಯಾವಂದನೆ ಮಾಡುತ್ತ ಪವಿತ್ರನಾಗಿರುವ, ಜಿತೇಂದ್ರಿಯನಾಗಿರುವ, ಬ್ರಾಹ್ಮಣನಿಗೆ ದಾನಮಾಡಿದರೆ ಲಕ್ಷಪಾಲು ಅಧಿಕಫಲ. ವಿಷ್ಣುಮಂತ್ರೋಪಾಸಕನಾದ ಬ್ರಾಹ್ಮಣನಿಗೆ ನೀಡಿದರೆ ಕೋಟಿಪಾಲು ಅಧಿಕಫಲ. ಹೀಗೇ ಬೇರೆ ಬೇರೆ ಪಾತ್ರಗಳಿಗೆ ನೀಡಿದ ದಾನ-ಗಳಿಗೆ ಬೇರೆ ಬೇರೆ ಪಾತ್ರಗಳಲ್ಲಿ ನೀಡಿದ ದಾನಗಳಿಗೆ ಬೇರೆ ಬೇರೆ ರೀತಿಯ ಫಲವಿದೆ.

ಹೇಗೆ ಕುಂಬಾರ ದಂಡ, ಸೂತ್ರ, ಜಲ, ಚಕ್ರಗಳಿಂದ ಗಡಿಗೆಯನ್ನು ನಿರ್ಮಿಸು-ವನೋ ಹಾಗೇ ಬ್ರಹ್ಮನೂ ಕರ್ಮಸೂತ್ರದಿಂದ ಫಲ ನೀಡುತ್ತಾನೆ. ನಾರಾಯಣನ ಆಜ್ಞೆಯಿಂದ ಅವನು ಹಾಗೆ ಮಾಡುತ್ತಾನೆ. ನಾರಾಯಣ ಸೃಷ್ಟಿಕರ್ತನಿಗೆ ಸೃಷ್ಟಿಕರ್ತ. ಪಾಲನಕರ್ತನಿಗೆ ಪಾಲನಕರ್ತ. ಲಯಕರ್ತನಿಗೆ ಲಯಕರ್ತ. ಅವನನ್ನೆ ಸ್ಮರಿಸು.

ಮಹಾವಿಪತ್ತೌ ಸಂಸಾರೇ ಯಃ ಸ್ಮರೇನ್ಮಧುಸೂದನಂ ।
ವಿಪತ್ತೌ ತಸ್ಯ ಸಂಪತ್ತಿರ್ಭವೇದಿತ್ಯಾಹ ಶಂಕರಃ ॥

ಸಂಸಾರದಲ್ಲಿ ಮಹಾವಿಪತ್ತು ಬಂದಾಗ ಯಾರು ಮಧುಸೂದನನನ್ನು ಸ್ಮರಿಸು-ವನೋ ಅವನಿಗೆ ಆ ವಿಪತ್ತಿನಲ್ಲಿಯೂ ಸಂಪತ್ತು ಲಭಿಸುವುದೆಂದು ಶಿವ ಹೇಳುತ್ತಾನೆ.

ಹೀಗೆ ಹೇಳಿ ಬೃಹಸ್ಪತ್ಯಾಚಾರ್ಯರು ದೇವೇಂದ್ರನನ್ನು ಆಲಿಂಗಿಸಿ ಆಶೀರ್ವದಿಸಿ ಹಿತವನ್ನು ಬೋಧಿಸಿದ.

ಇಲ್ಲಿಗೆ ಶ್ರೀ ಬ್ರಹ್ಮವೈವರ್ತ ಮಹಾಪುರಾಣದಲ್ಲಿ ಎರಡನೆಯದಾದ ಪ್ರಕೃತಿಖಂಡದ
ನಾರದನಾರಾಯಣ ಸಂವಾದದಲ್ಲಿ ಮಹಾಲಕ್ಷ್ಮ್ಯುಪಾಖ್ಯಾನದ ಬೃಹಸ್ಪತಿ ಮಹೇಂದ್ರ ಸಂವಾದದಲ್ಲಿ
ಕರ್ಮಫಲ ನಿರೂಪಣವೆಂಬ ಮೂವತ್ತೇಳನೆ ಅಧ್ಯಾಯ ಮುಗಿಯಿತು.

# ಭಗವಂತನ ಆದೇಶದಂತೆ ದೇವತೆಗಳಿಂದ ಕ್ಷೀರಸಾಗರ ಮಥನ. ಲಕ್ಷ್ಮಿಯ ಪ್ರಾದುರ್ಭಾವ. ದೇವತೆಗಳಲ್ಲಿ ಅನುಗ್ರಹ

ಅಧ್ಯಾಯ-೩೮

ನಾರಾಯಣ— ಮಹೇಂದ್ರ ಹರಿಯನ್ನು ಧ್ಯಾನಿಸಿ ಬೃಹಸ್ಪತಿಯನ್ನು ಮುಂದಿರಿಸಿಕೊಂಡು ಎಲ್ಲ ದೇವತೆಗಳೊಂದಿಗೆ ಬ್ರಹ್ಮಲೋಕಕ್ಕೆ ಹೋಗಿ ಬ್ರಹ್ಮನಿಗೆ ವಂದಿಸಿದ. ಬೃಹಸ್ಪತಿ ಬ್ರಹ್ಮನಿಗೆ ನಡೆದ ವೃತ್ತಾಂತವನ್ನೆಲ್ಲ ವರ್ಣಿಸಿದ. ಬ್ರಹ್ಮ ನಕ್ಕು ನುಡಿದ-

'ದೇವೇಂದ್ರ, ನೀನು ನನ್ನ ವಂಶದಲ್ಲಿ ಜನಿಸಿದವ. ನನಗೆ ಮರಿಮಗ. ಬೃಹಸ್ಪತಿಯ ಶಿಷ್ಯ. ದೇವತೆಗಳೆಲ್ಲರಿಗೂ ಅಧಿಪತಿ. ನಿನ್ನ ತಾಯಿಯ ತಂದೆ ವಿಷ್ಣುಭಕ್ತನಾದ ಪ್ರತಾಪಶಾಲಿಯಾದ ದಕ್ಷ. ನಿನ್ನ ಮೂರುಕುಲ ಶುದ್ಧವಾಗಿದೆ. ನಿನ್ನ ತಾಯಿ ಪತಿವ್ರತೆ. ತಂದೆ ಜಿತೇಂದ್ರಿಯ, ಶುದ್ಧ. ತಾಯಿಯ ತಂದೆ, ತಾಯಿಯ ಸೋದರರೂ ಶುದ್ಧರು. ಹೀಗೆ ಮೂರು ಕುಲ ಶುದ್ಧವಾಗಿರುವಾಗ ನಿನಗೆ ಅಹಂಕಾರ ಏಕೆ ಬಂದಿತು. ಜನರಿಗೆ ತಂದೆ ತಾಯಿ ಗುರುಗಳ ದೋಷದಿಂದ ಹರಿಯಲ್ಲಿ ದ್ವೇಷಭಾವನೆ ಬರಬಹುದು. ನಿನಗೆ ಇದು ಅಸಂಭಾವಿತ.

ಸರ್ವಾಂತರ್ಯಾಮಿಯಾದ ವಿಷ್ಣು ಸರ್ವರ ದೇಹದಲ್ಲಿರುವನು. ಅವನು ಹೊರಟರೆ ಜೀವನೂ ಹೊರಟು ಹೋಗುವುದರಿಂದ ದೇಹ ಶವವೆನಿಸುವುದು. ಮನಸ್ಸು ಅಹಂಕಾರ ಇಂದ್ರಿಯಗಳಿಗೆ ಅಧಿಪತಿಯಾದ ಜ್ಞಾನರೂಪಿಯಾದ ಶಿವನಾಗಲಿ, ಪ್ರಾಣಬುದ್ಧಿಗಳಿಗೆ ಅಧಿಷ್ಠಾತ್ರಿಯಾದ ಪ್ರಕೃತಿಯಾಗಲಿ, ಆತ್ಮನ ಪ್ರತಿಬಿಂಬನಾದ ಜೀವನಾಗಲಿ, ಸರ್ವೇಶ್ವರನಾದ ಆತ್ಮರೂಪಿಯಾದ ಹರಿ ದೇಹದಿಂದ ತೊಲಗಿದನೆಂದರೆ ತಾವೂ ತೊಲಗುತ್ತಾರೆ, ರಾಜ ಪ್ರಯಾಣಕ್ಕೆ ಹೊರಟರೆ ಪರಿವಾರದವರೂ ಜೊತೆಗೆ ಬರುವಂತೆ. ನಾನು ಶಿವ, ಶೇಷ, ವಿಷ್ಣು, ಧರ್ಮ, ಮಹಾವಿರಾಟ್ ಎಲ್ಲರೂ ಹರಿಯ ಅಂಶಭೂತರು, ಭಕ್ತರು. ಅವನಿಗೆ ನಿವೇದಿತವಾದ ಪುಷ್ಪವನ್ನು ನೀನು ತಿರಸ್ಕರಿಸಿದೆ. ಶಿವ ಯಾವ ಹೂವಿಂದ ಹರಿಯ ಪಾದಪದ್ಮವನ್ನು ಅರ್ಚಿಸಿದ್ದನೋ ಅದೇ ಹೂವನ್ನು ದೂರ್ವಾಸಮುನಿ ನಿನಗಿತ್ತಿದ್ದ. ಆದರೆ ದೈವ ಸಂಕಲ್ಪವೆ ಬೇರೆಯಾಗಿತ್ತು. ಆ ಹೂವು ಯಾವ ತಲೆಯ ಮೇಲೆ ಕುಳಿತಿತೋ ಆ ತಲೆಗೇ ಎಲ್ಲ ದೇವತೆಗಳಿಗಿಂತ ಮೊದಲಿನ ಪೂಜೆ ಲೋಕದಲ್ಲಿ ನಡೆಯುವಂತಾಯಿತು. ನೀನು ದೈವದಿಂದ ವಂಚಿತನಾದೆ. ದೈವ ಎಲ್ಲಕ್ಕಿಂತ ಬಲಿಷ್ಠ. ಭಾಗ್ಯಹೀನನಾದ ಮೂಢನನ್ನು ಯಾರು ತಾನೆ ರಕ್ಷಿಸಬಲ್ಲರು ?

ಕೃಷ್ಣಂ ನ ಮನ್ಯತೇ ಯೋ ಹಿ ಶ್ರೀನಾಥಂ ಸರ್ವವಂದಿತಂ ।
ಪ್ರಯಾತಿ ರುಷ್ಟಾ ತದ್ದಾಸೀ ಮಹಾಲಕ್ಷ್ಮೀರ್ವಿಹಾಯ ತಂ ॥

ಲಕ್ಷ್ಮೀಪತಿಯೂ ಸರ್ವವಂದ್ಯನೂ ಆದ ಕೃಷ್ಣನನ್ನು ಯಾರು ಆರಾಧಿಸುವು-ದಿಲ್ಲವೋ ಅವನ ಬಗ್ಗೆ ಕೋಪಗೊಂಡು ಕೃಷ್ಣನ ದಾಸಿಯಾದ ಲಕ್ಷ್ಮಿ ತೊರೆದು ದೂರ ಹೋಗುವಳು.

ದೇವೇಂದ್ರ, ನೀನು ಹಿಂದೆ ನೂರು ಯಜ್ಞಗಳನ್ನು ಮಾಡಿ ಸಂಪಾದಿಸಿದ್ದ ಇಂದ್ರ-ಪದವಿಯ ಲಕ್ಷ್ಮಿ ಈಗ ಕೃಷ್ಣನಿರ್ಮಾಲ್ಯ ಪರಿತ್ಯಾಗದಿಂದ ಕುಪಿತಳಾಗಿ ಹೊರಟು-ಹೋದಳು. ಈಗ ನೀನು ನಾನು ಮತ್ತು ಬೃಹಸ್ಪತಿಯೊಡನೆ ವೈಕುಂಠಕ್ಕೆ ಹೋಗಿ ಲಕ್ಷ್ಮೀಪತಿಯನ್ನು ಆರಾಧಿಸಿ ಲಕ್ಷ್ಮಿಯನ್ನು ಪಡೆ.'

ಹೀಗೆ ಹೇಳಿ ಬ್ರಹ್ಮ ಎಲ್ಲ ದೇವತೆಗಳೊಡನೆ ಬೇಗನೆ ವೈಕುಂಠಕ್ಕೆ ಹೋಗಿ ಸರಸ್ವತೀ ಗಂಗೆಯರಿಂದ ಸೇವಿಸಲ್ಪಡುವ ಚತುರ್ಭುಜನಾದ ಲಕ್ಷ್ಮೀಕಾಂತನನ್ನು ಕಂಡು ಭಕ್ತಿ-ಯಿಂದ ನಮಿಸಿದ. ಎಲ್ಲರೂ ಆನಂದಬಾಷ್ಪ ಸುರಿಸುತ್ತ ಹರಿಯನ್ನು ಸ್ತೋತ್ರ ಮಾಡಿದರು. ಸ್ವಯಂ ಬ್ರಹ್ಮನೆ ಕೈಮುಗಿದು ನಡೆದ ವೃತ್ತಾಂತವನ್ನು ಹರಿಗೆ ನಿವೇದಿಸಿದ. ತಮ್ಮ ಪದವಿಗಳನ್ನು ಕಳೆದುಕೊಂಡಿದ್ದ ಎಲ್ಲ ದೇವತೆಗಳೂ ಅಳುತ್ತಿ-ದ್ದರು. ಎಲ್ಲರೂ ಭಯಗ್ರಸ್ತರಾಗಿ ವಸ್ತ್ರಾಲಂಕಾರ ವಾಹನ ರಹಿತರಾಗಿ ಪರಿವಾರ-ವಿಲ್ಲದವರಾಗಿ ಶೋಭಾಹೀನರಾಗಿರುವುದನ್ನು ಕಂಡು ನಾರಾಯಣ ನುಡಿದ-

''ಬ್ರಹ್ಮ, ದೇವತೆಗಳೆ, ಯಾರೂ ಭಯಪಡಬೇಡಿ. ನಾನಿರುವಾಗ ನಿಮಗೆ ಏತರ ಭಯ ? ಪರಮೈಶ್ವರ್ಯವನ್ನು ವರ್ಧಿಸುವ ನಿಶ್ಚಲಳಾದ ಲಕ್ಷ್ಮಿಯನ್ನು ನಿಮಗೆ ನೀಡುತ್ತೇನೆ. ಮೊದಲಿಗೆ ನನ್ನ ಮಾತನ್ನು ಕೇಳಿ. ಅದು ಹಿತ, ಸತ್ಯ. ಸಾರಭೂತ-ವಾಗಿದ್ದು ಕೊನೆಯಲ್ಲಿ ಸುಖಕರವಾಗಿರುತ್ತದೆ.

ಲೋಕದಲ್ಲಿರುವ ಎಲ್ಲ ಜನರೂ ನನ್ನ ಅಧೀನರೆ. ಆದರೂ ನಾನು ಭಕ್ತಪರಾಧೀನ. ಯಾರು ನನ್ನ ಭಕ್ತನಲ್ಲಿ ಕೋಪಗೊಳ್ಳುತ್ತಾನ, ಸ್ವಚ್ಛಂದವಾಗಿ ವರ್ತಿಸುತ್ತಾನೆ, ಅವನ ಮನೆಯಲ್ಲಿ ಲಕ್ಷ್ಮೀಸಮೇತನಾಗಿ ನಾನು ಇರುವುದಿಲ್ಲ. ದೂರ್ವಾಸ ಶಿವನ ಅಂಶ. ನನ್ನ ಭಕ್ತ. ಅವನ ಶಾಪದಿಂದ ನಾನು ಲಕ್ಷ್ಮೀಸಮೇತನಾಗಿ ನಿಮ್ಮ ನಿಮ್ಮ ಲೋಕಗಳಿಂದ ದೂರ ಹೋಗಿದ್ದೇನೆ.

**ಯತ್ರ ಶಂಖಧ್ವನಿರ್ನಾಸ್ತಿ ತುಲಸೀ ಚ ಶಿಲಾರ್ಚನಂ ।**
**ನ ಭೋಜನಂ ಚ ವಿಪ್ರಾಣಾಂ ನ ಪದ್ಮಾ ತತ್ರ ತಿಷ್ಠತಿ ॥**

ಯಾವ ಮನೆಯಲ್ಲಿ ಶಂಖಧ್ವನಿ ತುಲಸಿ ಸಾಲಗ್ರಾಮಾರ್ಚನೆ ಬ್ರಾಹ್ಮಣ ಭೋಜನಗಳಿಲ್ಲವೋ ಆ ಮನೆಯಲ್ಲಿ ಲಕ್ಷ್ಮಿ ನಿಲ್ಲುವುದಿಲ್ಲ.

ಯಾವ ಮನೆಯಲ್ಲಿ ನನ್ನ ಭಕ್ತರ ನಿಂದೆ, ಹರಿವಾಸರದಲ್ಲಿ, ನನ್ನ ಜಯಂತೀ ದಿನಗಳಲ್ಲಿ ಭೋಜನ, ನನ್ನ ನಾಮದ ವಿಕ್ರಯ, ಕನ್ಯೆಯ ಮಾರಾಟ, ಅತಿಥಿಗಳಿಗೆ

ಅನ್ನದ ಅಭಾವ, ವಿಶ್ವಾಸಘಾತ, ನರಹತ್ಯೆ, ಅಗಮ್ಯಾಗಮನ, ವ್ಯಭಿಚಾರ, ಹಗಲಲ್ಲಿ ಎರಡು ಬಾರಿ ಭೋಜನ, ದಿವಾಸ್ವಾಪ, ದಿವಾಮೈಥುನ, ವ್ರತೋಪವಾಸಸಂಧ್ಯೆಗಳ ಪರಿತ್ಯಾಗ, ಬ್ರಾಹ್ಮಣನಿಂದೆ ಮುಂತಾದವು ಇರುವುವೋ ಅಲ್ಲಿ ಲಕ್ಷ್ಮಿ ನಿಲ್ಲುವುದಿಲ್ಲ.

ಯಾವ ಮನೆಯಲ್ಲಿ ವಿಷ್ಣುಪೂಜೆ, ಹರಿನಾಮಸಂಕೀರ್ತನೆ. ವಿಷ್ಣುಭಕ್ತರ ಪ್ರಶಂಸೆ, ಶಂಖಧ್ವನಿ, ಶಂಖ, ಸಾಲಿಗ್ರಾಮ, ತುಲಸೀದಲ, ಸಾಲಗ್ರಾಮಪೂಜೆ, ವಂದನಧ್ಯಾನ, ಶಿವಲಿಂಗಾರ್ಚನೆ, ಶಿವನಾಮಕೀರ್ತನೆ, ದುರ್ಗಾರ್ಚನೆ, ಬ್ರಾಹ್ಮಣಾರಾಧನೆ, ದೇವಾರ್ಚನೆಗಳು ನಡೆಯುವುವೋ ಅಲ್ಲಿ ಲಕ್ಷ್ಮಿ ನೆಲೆಸುತ್ತಾಳೆ.

ಬ್ರಹ್ಮ, ಕ್ಷೀರಸಮುದ್ರ ಮಥನದಿಂದ ಲಕ್ಷ್ಮಿಯನ್ನು ಆವಿರ್ಭಾವಗೊಳಿಸಿ ದೇವತೆ-ಗಳಿಗೆ ಅವಳ ಅನುಗ್ರಹ ದೊರಕಿಸು.'

ಹೀಗೆ ಹೇಳಿ ಹರಿ ಅಂತರ್ಧಾನನಾದ.

ದೇವತೆಗಳು ಬೇಗನೆ ಕ್ಷೀರಸಮುದ್ರದ ಬಳಿಗೆ ಹೋದರು. ಮಂದರಪರ್ವತವನ್ನು ಕಡಗೋಲನ್ನಾಗಿಯೂ ಕೂರ್ಮನನ್ನು ಕಡೆಯುವ ಪಾತ್ರೆಯನ್ನಾಗಿಯೂ ವಾಸುಕಿಯನ್ನು ಹಗ್ಗವನ್ನಾಗಿಯೂ ಮಾಡಿ ಸಮುದ್ರವನ್ನು ಮಥಿಸಿದರು. ಧನ್ವಂತರಿ, ಅಮೃತ, ಉಚ್ಚೈಃಶ್ರವಸ್, ಐರಾವತ ಮುಂತಾದ ರತ್ನಗಳೊಂದಿಗೆ ಮಹಾಲಕ್ಷ್ಮಿಯನ್ನೂ ಪಡೆದರು. ದೇವಿ ಕ್ಷೀರಸಾಗರಶಾಯಿಯಾದ ಸರ್ವೇಶ್ವರನಾದ ಹರಿಯ ಕೊರಳಿಗೆ ವನಮಾಲೆ ಅರ್ಪಿಸಿದಳು. ಬ್ರಹ್ಮರುದ್ರಾದಿ ದೇವತೆಗಳು ಅವಳನ್ನು ಪೂಜಿಸಿದರು. ಅವಳು ಒಲಿದು ಬ್ರಾಹ್ಮಣ ಶಾಪಮೋಚಕವಾದ ಅನುಗ್ರಹದೃಷ್ಟಿಯನ್ನು ಅಮರಾವತಿಯ ಕಡೆಗೆ ಬೀರಿದಳು. ಆಗ ದೇವತೆಗಳು ದೈತ್ಯರಿಂದ ಆಕ್ರಮಿಸಲ್ಪಟ್ಟಿದ್ದ ಎಲ್ಲ ಅಧಿಕಾರಗಳನ್ನೂ ಪಡೆದುಕೊಂಡರು.

ನಾರದ, ಹೀಗೆ ಉತ್ತಮವಾದ ಲಕ್ಷ್ಮೀಉಪಖ್ಯಾನವನ್ನು ಹೇಳಿದ್ದೇನೆ. ಇನ್ನೇನು ಕೇಳಬಯಸುವೆ ?

**ಇಲ್ಲಿಗೆ ಶ್ರೀ ಬ್ರಹ್ಮವೈವರ್ತ ಮಹಾಪುರಾಣದಲ್ಲಿ ಎರಡನೆಯದಾದ ಪ್ರಕೃತಿಖಂಡದ ನಾರದನಾರಾಯಣ ಸಂವಾದದಲ್ಲಿ ಲಕ್ಷ್ಮೀಉಪಾಖ್ಯಾನದಲ್ಲಿ ಸಮುದ್ರ ಮಥನವೆಂಬ ಮೂವತ್ತೆಂಟನೆ ಅಧ್ಯಾಯ ಮುಗಿಯಿತು.**

# ಲಕ್ಷ್ಮೀಪೂಜಾವಿಧಾನ

**ಅಧ್ಯಾಯ-೩೯**

ನಾರದ— ಪ್ರಭು, ಹರಿಯ ಗುಣಗಾನವನ್ನು ಲಕ್ಷ್ಮಿಯ ಉಪಾಖ್ಯಾನವನ್ನು ನಾನು ಕೇಳಿದೆ. ಮುಂದೆ ಲಕ್ಷ್ಮಿಯ ಧ್ಯಾನ ಸ್ತೋತ್ರಾದಿಗಳನ್ನು ಹೇಳು. ಮೊದಲಿಗೆ ಹರಿಯೂ ಬ್ರಹ್ಮನೂ ಲಕ್ಷ್ಮಿಯನ್ನು ಪೂಜಿಸಿದರು. ಬಳಿಕ ರಾಜ್ಯಭ್ರಷ್ಟನಾದ ದೇವೇಂದ್ರ ಪೂಜಿಸಿದ. ದೇವತೆಗಳೆಲ್ಲರೂ ಪೂಜಿಸಿದರು ಎಂದು ನೀನು ಹೇಳಿದಿ. ಆ ಪೂಜೆಯ ವಿಧಾನವೇನು, ಧ್ಯಾನಸ್ತೋತ್ರಗಳೇನು ಎನ್ನುವುದನ್ನು ವಿಸ್ತರಿಸಿ ಹೇಳು.

ನಾರಾಯಣ— ದೇವೇಂದ್ರ ಪುಣ್ಯತೀರ್ಥದಲ್ಲಿ ಮಿಂದು, ಮಡಿಯುಟ್ಟು, ಕಲಶಸ್ಥಾಪನೆ ಮಾಡಿ, ಗಣೇಶ ಸೂರ್ಯ ಅಗ್ನಿ ವಿಷ್ಣು ಶಿವ ದುರ್ಗೆಯರನ್ನು ಆವಾಹಿಸಿ ಭಕ್ತಿಪೂರ್ವಕ ಪುಷ್ಪಗಂಧಾದಿಗಳಿಂದ ಪೂಜಿಸಿದ. ನಡುವೆ ಮಹಾಲಕ್ಷ್ಮಿಯನ್ನು ಆವಾಹಿಸಿ ಪೂಜಿಸಿದ. ಬ್ರಹ್ಮ ಶಿವ ಬೃಹಸ್ಪತಿ ದೇವತೆಗಳು ಮುನಿಗಳು ಎಲ್ಲರೂ ಅದನ್ನು ವೀಕ್ಷಿಸಿದರು. ಪಾರಿಜಾತದ ಹೂವನ್ನು ಚಂದನದಲ್ಲಿ ಅದ್ದಿ ಹಿಡಿದುಕೊಂಡು ದೇವಿಯನ್ನು ಇಂದ್ರ ಸಾಮವೇದೋಕ್ತ ರೀತಿಯಿಂದ ಧ್ಯಾನಿಸಿದ. ಹಿಂದೆ ಹರಿ ಬ್ರಹ್ಮನಿಗೆ ಉಪದೇಶಿಸಿದ ಆ ಧ್ಯಾನಕ್ರಮವನ್ನು ನಿನಗೆ ಹೇಳುತ್ತೇನೆ, ಕೇಳು-

**ಸಹಸ್ರದಲ ಪದ್ಮಸ್ಯ ಕರ್ಣಿಕಾವಾಸಿನೀಂ ಪರಾಂ ।**
**ಶರತ್ಪಾರ್ವಣಕೋಟೀಂದು ಪ್ರಭಾಜುಷ್ಟಕರಾಂ ವರಾಂ ॥**

**ಪ್ರತಪ್ತ ಕಾಂಚನನಿಭಾಂ ಶೋಭಾಂ ಮೂರ್ತಿಮತೀಂ ಸತೀಂ ।**
**ರತ್ನಭೂಷಣ ಭೂಷಾಢ್ಯಾಂ ಶೋಭಿತಾಂ ಪೀತವಾಸಸಾ ॥**

**ಈಷದ್ಧಾಸ್ಯ ಪ್ರಸನ್ನಾಸ್ಯಾಂ ರಮ್ಯಾಂ ಸುಸ್ಥಿರಯೌವನಾಂ ।**
**ಸರ್ವಸಂಪತ್ಪ್ರದಾತ್ರೀಂ ಚ ಮಹಾಲಕ್ಷ್ಮೀಂ ಭಜೇ ಶಿವಾಂ ॥**

ಸಹಸ್ರದಲಪದ್ಮದ ಕರ್ಣಿಕೆಯಲ್ಲಿ ಕುಳಿತು ಶರತ್ಕಾಲದ ಹುಣ್ಣಿಮೆಯ ಕೋಟಿ-ಚಂದ್ರರಂತೆ ಪುಟಕ್ಕಿಟ್ಟ ಚಿನ್ನದಂತೆ ಹೊಳೆವ, ಪೀತಾಂಬರ ಉಟ್ಟು ರತ್ನಾಭರಣಧರಿಸಿ ಮಂದಹಾಸಸೂಸುವ ಪ್ರಸನ್ನ ಮುಖದಿಂದ ಒಪ್ಪುವ ಶೋಭೆಯೆ ಮೂರ್ತಿಮತ್ತಾಗಿ ನಿಂತಂತಿರುವ, ಸರ್ವಸಂಪದ್ದಾಯಕಳಾದ ಮಂಗಳಾಂಗಿಯಾದ ಸ್ಥಿರಯೌವನವತಿ-ಯಾದ ಸುಂದರಿಯಾದ ಮಹಾಲಕ್ಷ್ಮಿಯನ್ನು ಭಜಿಸುವೆನು.

ಬ್ರಹ್ಮನ ಉಪದೇಶದಂತೆ ಇಂದ್ರ ಹೀಗೆ ಧ್ಯಾನಿಸಿ ಷೋಡಶೋಪಚಾರಗಳನ್ನು ಭಕ್ತಿಯಿಂದ ವಿಧ್ಯುಕ್ತವಾಗಿ ಹೀಗೆ ಮಂತ್ರಪೂರ್ವಕ ಸಲ್ಲಿಸಿದ-

ಮಹಾಲಕ್ಷ್ಮಿ, ಅಮೂಲ್ಯರತ್ನಖಚಿತವಾದ ವಿಶ್ವಕರ್ಮನಿರ್ಮಿತವಾದ ವಿಚಿತ್ರವಾದ ಆಸನವನ್ನು ಸ್ವೀಕರಿಸು.

ಪಾಪವೆಂಬ ಕಟ್ಟಿಗೆಯನ್ನು ಬೆಂಕಿಯಂತೆ ಸುಡುವ ಸರ್ವವಂದಿತವಾದ ಪಾದ್ಯ-ರೂಪದ ಈ ಗಂಗೋದಕವನ್ನು ಸ್ವೀಕರಿಸು.

ಪುಷ್ಪಚಂದನ ದೂರ್ವೆ ಮುಂತಾದವುಗಳಿಂದ ಕೂಡಿದ ಶಂಖ ಮಧ್ಯದಲ್ಲಿರುವ ಅರ್ಘ್ಯರೂಪದ ಈ ಗಂಗೋದಕವನ್ನು ಸ್ವೀಕರಿಸು.

ಶರೀರ ಸೌಂದರ್ಯವರ್ಧಕವಾದ ಸುಗಂಧತೈಲ ಮತ್ತು ಸುಗಂಧದ ನೆಲ್ಲಿಕಾಯಿ-ಯುಕ್ತ ಜಲವನ್ನು ಸ್ನಾನಕ್ಕಾಗಿ ಸ್ವೀಕರಿಸು.

ವನಸ್ಪತಿ ರಸ ಹಾಗೂ ಸುಗಂಧ ದ್ರವ್ಯಗಳಿಂದ ಉದ್ಭವಿಸುವ ಪವಿತ್ರವಾದ ಈ ಧೂಪವನ್ನು ಸ್ವೀಕರಿಸು.

ಮಲಯಾಚಲದಲ್ಲಿ ಬೆಳೆದ ಸುಗಂಧಯುಕ್ತ ಮನೋಹರ ಸುಖಕರವಾದ ಚಂದನವನ್ನು ಸ್ವೀಕರಿಸು.

ಕತ್ತಲೆಯನ್ನು ಓಡಿಸುವ, ಜಗತ್ತಿಗೆ ಕಣ್ಣಿನಂತಿರುವ ಈ ಶುದ್ಧದೀಪವನ್ನು ಸ್ವೀಕರಿಸು.

ನಾನಾರಸ, ನಾನಾ ರುಚಿಯಿಂದ ಯುಕ್ತವಾದ ನಾನಾ ಬಗೆಯ ಭಕ್ಷ್ಯಭೋಜ್ಯ-ರೂಪದ ಈ ನೈವೇದ್ಯವನ್ನು ಸ್ವೀಕರಿಸು.

ಪ್ರಾಣರಕ್ಷಕವಾದ ರುಚಿಯಾದ ಅನ್ನವನ್ನು ಸ್ವೀಕರಿಸು

ಸಕ್ಕರೆ ಹಾಲು ಸೇರಿಸಿ ಪಕ್ವಮಾಡಿದ ಶಾಲ್ಯನ್ನರೂಪವಾದ ರುಚಿಕರವಾದ ಪರಮಾನ್ನವನ್ನು ಸ್ವೀಕರಿಸು.

ಸಕ್ಕರೆ ತುಪ್ಪ ಸೇರಿಸಿ ಬೇಯಿಸಿದ ರುಚಿಕರವಾದ ಸ್ವಸ್ತಿಕವನ್ನು ಸ್ವೀಕರಿಸು. ಸುಂದರವಾದ ರುಚಿಯಾದ ನಾನಾ ಬಗೆಯ ಪಕ್ವಫಲಗಳನ್ನು ಸ್ವೀಕರಿಸು. ಕಾಮಧೇನುವಿನ ಸ್ತನದಿಂದ ಬಂದ ಭೂಲೋಕದ ಅಮೃತರೂಪವಾದ ರುಚಿಯಾದ ಹಾಲನ್ನು ಸ್ವೀಕರಿಸು.

ರುಚಿಯಾದ ರಸದಿಂದ ಕೂಡಿದ ಕಬ್ಬಿನಹಾಲನ್ನು ಬೇಯಿಸಿ ಮಾಡಿದ ಬೆಲ್ಲವನ್ನು ಸ್ವೀಕರಿಸು.

ಯವೆ ಗೋದಿ ಹಿಟ್ಟುಗಳಿಗೆ ಬೆಲ್ಲ ತುಪ್ಪ ಬೆರೆಸಿ ಮಾಡಿದ ಮಿಷ್ಟಾನ್ನವನ್ನು ಸ್ವೀಕರಿಸು.

ಹಿಟ್ಟಿನಿಂದ ಮಾಡಿದ ಸ್ವಸ್ತಿಕಾದಿಯುಕ್ತವಾದ ಪಿಷ್ಟಕವನ್ನು ನಿವೇದಿಸುತ್ತಿದ್ದೇನೆ, ಸ್ವೀಕರಿಸು.

ಮಧುರವಾದ ಕಬ್ಬಿನ ಹಾಲನ್ನು ಸ್ವೀಕರಿಸು.

ಸೆಕೆಯಾದಾಗ ತಂಗಾಳಿ ನೀಡಿ ಸುಖ ಉಂಟುಮಡುವ ಬಿಳಿಚಾಮರ ಮತ್ತು ಬೀಸಣಿಗೆಸೇವೆಯನ್ನು ಸ್ವೀಕರಿಸು.

ಪಚ್ಚಕರ್ಪೂರದಿಂದ ಕೂಡಿದ್ದು ನಾಲಿಗೆಯ ಜಡತ್ವವನ್ನು ಕಳೆವ ತಾಂಬೂಲವನ್ನು ಸ್ವೀಕರಿಸು.

ಬಾಯಾರಿಕೆ ಕಳೆವ, ಜಗತ್ತಿಗೆ ಜೀವನಪ್ರದವಾದ, ಸುಗಂಧಿತ ಶೀತಲೋದಕವನ್ನು ಸ್ವೀಕರಿಸು.

ಶರೀರ ಸೌಂದರ್ಯ ಶೋಭೆಗಳನ್ನು ಹೆಚ್ಚಿಸುವ ಹತ್ತಿ ರೇಶ್ಮೆ ವಸ್ತ್ರಗಳನ್ನು ಸ್ವೀಕರಿಸು.

ರತ್ನ ಚಿನ್ನಗಳಿಂದ ಮಾಡಿದ, ಶರೀರದ ಸೌಖ್ಯಶೋಭೆಗಳನ್ನು ಹೆಚ್ಚಿಸುವ ಸಂಪತ್ಕರವಾದ ಆಭರಣವನ್ನು ಸ್ವೀಕರಿಸು.

ನಾನಾ ಕುಸುಮಗಳಿಂದ ಮಾಡಿದ, ಬಹಳ ಶೋಭೆ ನೀಡುವ, ದೇವಲೋಕ-ಪ್ರಿಯವಾದ ಶುದ್ಧವಾದ ಮಾಲೆಯನ್ನು ಸ್ವೀಕರಿಸು.

ಸರ್ವಮಂಗಲ ಮಂಗಲವೆನಿಸಿದ ಶುದ್ಧವಾದ ಶುದ್ಧಿದಾಯಕವಾದ ಸುಗಂಧ-ದ್ರವ್ಯದಿಂದ ತಯಾರಿಸಿದ ಗಂಧವನ್ನು ಸ್ವೀಕರಿಸು.

ಶುದ್ಧವೂ ಶುದ್ಧಿದಾಯಕವೂ ಆದ ಪುಣ್ಯತೀರ್ಥೋದಕ ರೂಪವಾದ ಆಚಮನ ಜಲವನ್ನು ಸ್ವೀಕರಿಸು.

ಶ್ರೇಷ್ಠರತ್ನ ಖಚಿತವಾದ ಪುಷ್ಪಚಂದನಯುಕ್ತವಾದ ರತ್ನಾಲಂಕಾರಯುಕ್ತ ಶಯ್ಯೆ-ಯನ್ನು ಸ್ವೀಕರಿಸು.

ದೇವತೆಗಳಿಗೆ ರಾಜರಿಗೆ ಶ್ರೀಮಂತರಿಗೆ ಯೋಗ್ಯವಾದ ಭೂಲೋಕದಲ್ಲಿ ದುರ್ಲಭವಾದ ಅಪೂರ್ವ ವಸ್ತುಗಳೇನೇನು ಇದೆಯೋ ಅವೆಲ್ಲವನ್ನು ಸ್ವೀಕರಿಸು.

ಹೀಗೆ ಅಪೂರ್ವವೂ ದುರ್ಲಭವೂ ಆದ ವಸ್ತುಗಳನ್ನು ದೇವೇಂದ್ರ ದೇವಿಗೆ ಮೂಲಮಂತ್ರದಿಂದ ಸಮರ್ಪಿಸಿ ಹತ್ತುಲಕ್ಷಬಾರಿ ಮೂಲಮಂತ್ರವನ್ನು ಜಪಿಸಿ ಸಿದ್ಧಿಪಡೆದ. ಬ್ರಹ್ಮ ಉಪದೇಶಿಸಿದ ಕಲ್ಪವೃಕ್ಷದಂಥ ಸರ್ವಾಭೀಷ್ಟದಾಯಕವಾದ ಆ ಮಂತ್ರ ಹೀಗಿದೆ-

ಶ್ರೀಂ ಹ್ರೀಂ ಕ್ಲೀಂ ಐಂ ಕಮಲವಾಸಿನ್ಯೈ ಸ್ವಾಹಾ ।

ಈ ಶ್ರೇಷ್ಠವಾದ ವೈದಿಕ ದ್ವಾದಶಾಕ್ಷರ ಮಂತ್ರವನ್ನು ಕುಬೇರ, ದಕ್ಷ, ಸಾವರ್ಣಿ, ಮನು, ಮಂಗಲ, ಪ್ರಿಯವ್ರತ, ಉತ್ತಾನಪಾದ, ಕೇದಾರ ಮುಂತಾದ ರಾಜರು ಜಪಿಸಿ ಸಪ್ತದ್ವೀಪಗಳಿಂದ ಕೂಡಿದ ಸಮಸ್ತ ಭೂಮಂಡಲಕ್ಕೆ ಒಡೆಯರಾದರು.

ಮಂತ್ರಜಪಕ್ಕೆ ಒಲಿದು ದೇವಿ ಇಂದ್ರನ ಮುಂದೆ ಗೋಚರಳಾದಳು. ರತ್ನಖಚಿತ ವಿಮಾನದಲ್ಲಿ ಕುಳಿತು ಸಪ್ತದ್ವೀಪಯುತವಾದ ಭೂಲೋಕವನ್ನೆಲ್ಲ ತನ್ನ ಕಾಂತಿಯಿಂದ ಮುಚ್ಚುತ್ತ ಕೋಟಿ ಚಂದ್ರರಂತೆ ಹೊಳೆಯುತ್ತಿದ್ದಳು. ಬಿಳಿ ಸಂಪಿಗೆಯಂಥ ಮೈಬಣ್ಣ, ರತ್ನಾಭರಣಗಳಿಂದ ಭೂಷಿತಳಾಗಿ ಮಂದಹಾಸಯುಕ್ತ ಪ್ರಸನ್ನಮುಖದಿಂದ ಭಕ್ತರಿಗೆ ಅನುಗ್ರಹ ಮಾಡುತ್ತಿದ್ದ ಆ ಜಗನ್ಮಾತೆಯನ್ನು ಕಂಡು ದೇವೇಂದ್ರ ಮೈರೋಮಾಂಚ-ಗೊಂಡು ಆನಂದಬಾಷ್ಪ ಸುರಿಸುತ್ತ ಕೈಮುಗಿದು ಬ್ರಹ್ಮನು ಉಪದೇಶಿಸಿದ್ದ ಸರ್ವಾಭೀಷ್ಟದಾಯಕವಾದ ವೈದಿಕ ಸ್ತೋತ್ರದಿಂದ ಸ್ತುತಿಸಿದ-

ಕಮಲವಾಸಿನಿಯಾದ ನಾರಾಯಣಿಗೆ ನಮೋನಮಃ ನೀನು ಕೃಷ್ಣನ ಪ್ರೇಯಸಿ. ಕಮಲದಂಥ ಕಣ್ಣು ಕಮಲದಂಥ ಮುಖ ಉಳ್ಳ ನೀನು ಕಮಲದಲ್ಲಿ ವಾಸಮಾಡುತ್ತಿ. ಸರ್ವಸಂಪತ್ತಿಗೆ ಅಧಿಷ್ಠಾತ್ರಿ. ಸರ್ವಸಂಪದ್ದಾತ್ರಿ ಸುಖದಾತ್ರಿ, ಮೋಕ್ಷದಾತ್ರಿ, ಸಿದ್ಧಿ-ದಾತ್ರಿ, ಹರಿಭಕ್ತಿದಾತ್ರಿ, ಸಸ್ಯಗಳಿಗೆ ಅಧಿಷ್ಠಾತ್ರಿಯಾಗಿದ್ದು ಸಸ್ಯ ಲಕ್ಷ್ಮಿ ಎನಿಸಿರುವಿ. ವೈಕುಂಠದಲ್ಲಿ ನೀನು ಮಹಾಲಕ್ಷ್ಮಿ. ಕ್ಷೀರಸಾಗರದಲ್ಲಿ ಲಕ್ಷ್ಮಿ. ಇಂದ್ರಲೋಕದಲ್ಲಿ ಸ್ವರ್ಗಲಕ್ಷ್ಮಿ. ರಾಜರ ಅರಮನೆಗಳಲ್ಲಿ ರಾಜಲಕ್ಷ್ಮಿ, ಸಂಸಾರಿಗಳಿಗೆ ಗೃಹಲಕ್ಷ್ಮಿ, ಗೋಮಾತೆಸುರಭಿಯಲ್ಲಿ ನಿನ್ನ ಒಂದಂಶವಿದೆ. ಯಜ್ಞಪುರುಷನ ಪ್ರೇಯಸಿ ದಕ್ಷಿಣೆ ನೀನೆ. ದೇವಮಾತೆ ಅದಿತಿ. ಯಜ್ಞಗಳಲ್ಲಿ ಸ್ವಾಹೆ, ಪಿತೃಕಾರ್ಯಗಳಲ್ಲಿ ಸ್ವಧೆ, ಇವರೆಲ್ಲ ನಿನ್ನ ಅಂಶದಿಂದ ಕೂಡಿದವರು. ಸರ್ವಾಧಾರಳಾದ ಧರಾದೇವಿಯಲ್ಲಿಯೂ ನಿನ್ನ ಅಂಶವಿದೆ. ನೀನು ಅಪ್ರಾಕೃತ ಸತ್ವಸ್ವಭಾವದವಳು. ನಾರಾಯಣನ ಚರಣ ಸೇವಕಿ. ಕ್ರೋಧ ಹಿಂಸಾ ವರ್ಜಿತಳು. ಪರಮ ಪುರುಷಾರ್ಥವಾದ ಮೋಕ್ಷಕ್ಕೆ ಕಾರಣವಾದ ಹರಿದಾಸ್ಯ ನೀಡುವವಳು. ನೀನಿಲ್ಲದ ಜಗತ್ತು ಕೇವಲ ಭಸ್ಮದಂತೆ ನಿಃಸಾರ, ಜೀವನ್ಮೃತ, ಶವಸದೃಶ. ನಿನ್ನ ಅನುಗ್ರಹವಿಲ್ಲದೆ ಬಂಧುಗಳು ಬಂಧುಗಳೆನಿಸುವು-ದಿಲ್ಲ. ನಿನ್ನನ್ನು ಬಿಟ್ಟವರು ಬಂಧುಹೀನರಾಗುವರು. ನಿನ್ನನ್ನು ಆಶ್ರಯಿಸಿದವರು ಬಂಧುಯುಕ್ತರಾಗುವರು, ಧರ್ಮ ಅರ್ಥ ಕಾಮ ಮೋಕ್ಷಗಳಿಗೆ ನೀನು ಕಾರಣಳು. ಸ್ತನಪಾನ ಮಾಡುವ ಶಿಶುಗಳಿಗೆ ತಾಯಿ ಹೇಗೋ ಹಾಗೆ ಸಮಸ್ತ ಪ್ರಪಂಚಕ್ಕೆ ನೀನು ಪೋಷಕಳು. ಸ್ತನಪಾನ ಮಾಡಿಸುವ ತಾಯಿಯಿಲ್ಲದಿದ್ದರೂ ಶಿಶು ದೈವಾತ್ ಬದುಕಿರ-ಬಹುದು. ನೀನಿಲ್ಲದಿದ್ದರೆ ನಾವು ಯಾರೂ ಬದುಕಲಾರೆವು.

ದೇವಿ, ನೀನು ನಮಗೆ ಒಲಿದು ಶತ್ರುಗಳಿಂದ ಆಕ್ರಮಿಸಲ್ಪಟ್ಟ ಪದವಿಗಳನ್ನು ತಿರುಗಿ ನಮಗೆ ನೀಡು. ನಿನ್ನ ಅನುಗ್ರಹವಿಲ್ಲದೆ ನಾವು ಎಲ್ಲ ಸಂಪತ್ತು ಕಳೆದು-ಕೊಂಡು. ಬಂಧುಹೀನರಾಗಿ ಭಿಕ್ಷುಕರಾಗಿ ಅಲೆಯುತ್ತಿದ್ದೇವೆ.

ದೇವಿ, ನಮಗೆ ರಾಜ್ಯ, ಸಂಪತ್ತು, ಬಲ, ಕೀರ್ತಿ, ಧನ, ಪುತ್ರಸಂತತಿ, ಸುಖ, ಬುದ್ಧಿ, ಭೋಗ ಜ್ಞಾನ ಧರ್ಮ ಸರ್ವಸೌಭಾಗ್ಯ , ಸರ್ವಾಧಿಕಾರ, ಪ್ರಭಾವ, ಪ್ರತಾಪ, ಜಯ, ಪರಾಕ್ರಮ ಪರಮೈಶ್ವರ್ಯ ಇವೆಲ್ಲವನ್ನೂ ಅನುಗ್ರಹಿಸು.'

ಹೀಗೆ ಸ್ತುತಿಸಿ ದೇವೇಂದ್ರನೂ ಎಲ್ಲ ದೇವತೆಗಳೂ ಕಣ್ಣೀರು ಸುರಿಸಿ ತಲೆಬಾಗಿ ನಮಿಸಿದರು. ಬ್ರಹ್ಮ, ಶಿವ, ಶೇಷ, ಧರ್ಮ, ವಿಷ್ಣು ಎಲ್ಲರೂ ದೇವಕಾರ್ಯಕ್ಕೆ ದೇವಿಯ ಮನ ಒಲಿಸಿದರು. ದೇವಿ ದೇವತೆಗಳಿಗೆ ವರನೀಡಿ ಮನೋಹರವಾದ ಹೂಮಾಲೆಯನ್ನು ವಿಷ್ಣುವಿನ ಕೊರಳಿಗೆ ಅರ್ಪಿಸಿ ಅವನ ಪ್ರೇಯಸಿಯಾದಳು. ದೇವತೆಗಳೆಲ್ಲರೂ ಸಂತೋಷದಿಂದ ತಮ್ಮ ತಮ್ಮ ಲೋಕಗಳಿಗೆ ಹಿಂತಿರುಗಿದರು.

ದೇವೇಂದ್ರನು ಮಾಡಿದ ಈ ಲಕ್ಷ್ಮೀಸ್ತೋತ್ರವನ್ನು ಮೂರು ಸಂಧ್ಯೆಗಳಲ್ಲಿ ಪಠಿಸುವವನು ಕುಬೇರನಂತೆ ಮಹಾ ರಾಜರಾಜೇಶ್ವರನಾಗುತ್ತಾನೆ. ಐದು ಲಕ್ಷ ಜಪಿಸಿದರೆ ಸಿದ್ಧಿಯಾಗುವುದು.

ನಾರದ— ಪ್ರಭು, ನನಗೆ ಒಂದು ಸಂಶಯ ಉದ್ಭವಿಸಿದೆ. ದೂರ್ವಾಸರ ವಚನ-ದಂತೆ ಅವರು ಕೊಟ್ಟ ಹೂವನ್ನು ಇಂದ್ರ ಯಾವ ಆನೆಯ ತಲೆಯಮೇಲಿಟ್ಟನೋ ಆ ತಲೆಗೆ ಲೋಕದಲ್ಲಿ ಮೊದಲ ಪೂಜೆ ಎಂದು ನೀನು ಹೇಳಿದೆ. ಆ ಆನೆ ಮದದಿಂದ ಕಾಡಿಗೆ ಹೋದಬಳಿಕ ವಿನಾಯಕನಿಗೆ ಶನಿದೃಷ್ಟಿ ಬಿದ್ದುದರ ಪರಿಣಾಮವಾಗಿ ಶಿರಶ್ಛೇಧವಾದಾಗ, ಆ ಆನೆಯ ತಲೆಯನ್ನು ಹರಿ ಗಣೇಶನಿಗೆ ಜೋಡಿಸಿದ್ದರಿಂದ ಗಣೇಶ ಗಜಮುಖನಾಗಿ ಅಗ್ರಪೂಜಾರ್ಹನೆನಿಸಿದ, ಎಂಬುದು ನಿನ್ನ ಅಭಿಪ್ರಾಯ. ಆದರೆ ಈಗ ಇಂದ್ರ ಆರು ದೇವತೆಗಳನ್ನು ಮೊದಲಿಗೆ ಪೂಜಿಸಿ ಲಕ್ಷ್ಮೀಪೂಜೆ ಮಾಡಿದನೆಂದು ಹೇಳುತ್ತಿರುವೆ. ಹಾಗಾದರೆ ಗಣೇಶನಿಗೆ ಅಗ್ರಪೂಜೆ ದೂರ್ವಾಸರ ವಚನದಿಂದ ಉಂಟಾದುದಲ್ಲ ಎಂದಂತಾಗುವುದು. ಈ ಸಂದೇಹವನ್ನು ಪರಿಹರಿಸು.

ನಾರಾಯಣ— ದೂರ್ವಾಸರು ಇಂದ್ರನಿಗೆ ಶಾಪ ಕೊಡುವ ಕಾಲದಲ್ಲಿ ಗಣೇಶ-ನಿನ್ನೂ ಜನಿಸಿಯೆ ಇರಲಿಲ್ಲ. ದೇವತೆಗಳು ದುಃಖದಿಂದ ಬಹುಕಾಲ ಅಲೆಯುತ್ತಿದ್ದರು. ಬಳಿಕ ವಿಷ್ಣುವಿನ ಅನುಗ್ರಹದಿಂದ ಲಕ್ಷ್ಮಿಯನ್ನು ಪಡೆದರು. ಆ ಲಕ್ಷ್ಮಿಯನ್ನು ಪೂಜಿಸುವ ಕಾಲದಲ್ಲಿ ಗಣೇಶ ಪ್ರಾದುರ್ಭವಿಸಿ ದೂರ್ವಾಸರ ವಚನದಿಂದಲೆ ಅಗ್ರಪೂಜಾರ್ಹನಾಗಿದ್ದರಿಂದ ಆರು ದೇವತೆಗಳ ನಡುವೆ ಮೊದಲಿಗೆ ಪೂಜಿತನಾದ.

**ಇಲ್ಲಿಗೆ ಶ್ರೀ ಬ್ರಹ್ಮವೈವರ್ತ ಮಹಾಪುರಾಣದಲ್ಲಿ ಎರಡನೆಯದಾದ ಪ್ರಕೃತಿಖಂಡದ ನಾರದನಾರಾಯಣ ಸಂವಾದದಲ್ಲಿ ಲಕ್ಷ್ಮ್ಯುಪಾಖ್ಯಾನದಲ್ಲಿ ಲಕ್ಷ್ಮೀಪೂಜಾವಿಧಾನವೆಂಬ ಮೂವತ್ತೊಂಬತ್ತನೆ ಅಧ್ಯಾಯ ಮುಗಿಯಿತು.**

## ಸ್ವಾಹಾ ಉಪಾಖ್ಯಾನ, ಸಾಹಾ ಜನ್ಮಾದಿ ಕಥನ

## ಅಧ್ಯಾಯ-೪೦

ನಾರದ— ಪ್ರಭು, ರೂಪ ಗುಣ ಯಶಸ್ಸು ತೇಜಸ್ಸು ಪ್ರಕಾಶಾದಿಗಳಲ್ಲಿ ನಿನಗೆ ನೀನೆ ಸಾಟಿ. ಜ್ಞಾನಿಗಳಲ್ಲಿ ಸಿದ್ಧರಲ್ಲಿ ಯೋಗಿಗಳಲ್ಲಿ ನೀವೆ ಶ್ರೇಷ್ಠ. ಮಹಾಲಕ್ಷ್ಮಿಯ ಉಪಾಖ್ಯಾನವನ್ನು ನಾನು ನಿನ್ನ ಮುಖದಿಂದ ಕೇಳಿತಿಳಿದೆ. ಅದು ಅದ್ಭುತವಾಗಿತ್ತು. ಇನ್ನು ಬೇರೆ ವೇದೋಕ್ತವಾಗಿದ್ದು ಪುರಾಣಗಳಲ್ಲಿ ಸ್ಪಷ್ಟವಿಲ್ಲದ ರಹಸ್ಯವಾದ ಉಪಯುಕ್ತವಾದ ಉಪಾಖ್ಯಾನಗಳನ್ನು ಹೇಳು.

ನಾರಾಯಣ— ವೇದೋಕ್ತವಾಗಿದ್ದು ಪುರಾಣಗಳಲ್ಲಿ ಹೇಳದಿದ್ದ ಉಪಾಖ್ಯಾನ-ಗಳು ಅನೇಕ ಇವೆ. ಅವುಗಳಲ್ಲಿ ಮುಖ್ಯವಾಗಿ ನೀನು ಕೇಳಬಯಸುವ ಉಪಾಖ್ಯಾನ-ಗಳಾವುವು ಎಂದು ಹೇಳು. ಅವುಗಳನ್ನು ವಿವರಿಸುತ್ತೇನೆ.

ನಾರದ— ದೇವಕಾರ್ಯಗಳಲ್ಲಿ ಸ್ವಾಹಾದೇವಿಗೆ ಪ್ರಾಶಸ್ತ್ಯ, ಪಿತೃಕಾರ್ಯಗಳಲ್ಲಿ ಸ್ವಧಾದೇವಿಗೆ ಪ್ರಾಶಸ್ತ್ಯ, ದಕ್ಷಿಣಾದೇವಿ ಎಲ್ಲ ಕಾರ್ಯಗಳಲ್ಲಿಯೂ ಬೇಕು. ಈ ದೇವಿಯರ ಚರಿತ್ರೆ ಅವತರಿಸಿದ ಉದ್ದೇಶ ಅವರ ವೈಶಿಷ್ಟ್ಯಗಳ ಬಗ್ಗೆ ನಿಮ್ಮ ಮುಖದಿಂದ ಕೇಳಬಯಸುತ್ತೇನೆ.

ನಾರಾಯಣ— ಸೃಷ್ಟಿಯ ಆದಿಯಲ್ಲಿ ದೇವತೆಗಳು ಆಹಾರಕ್ಕಾಗಿ ಬ್ರಹ್ಮ ದೇವನ ಬಳಿಗೆ ಹೋದರು. ಆಹಾರವನ್ನು ಬೇಡಿದರು. ಬ್ರಹ್ಮ ಶ್ರೀಹರಿಯನ್ನು ಆರಾಧಿಸಿದ. ಒಡನೆ ಹರಿ ಯಜ್ಞರೂಪನಾಗಿ ಅವತರಿಸಿದ. ಯಜ್ಞದಲ್ಲಿ ನೀಡುವ ಹವಿಸ್ಸು ದೇವತೆ-ಗಳಿಗೆ ಸಿಗಲಿ ಎಂದು ಬ್ರಹ್ಮ ವರ ನೀಡಿದ. ಆದರೆ ಬ್ರಾಹ್ಮಣರಾಗಲಿ ಕ್ಷತ್ರಿಯಾದಿ-ಗಳಾಗಲಿ ಯಜ್ಞಗಳಲ್ಲಿ ನೀಡಿದ ಹವಿಸ್ಸು ದೇವತೆಗಳಿಗೆ ತಲುಪಲಿಲ್ಲ. ದೇವತೆಗಳು ವಿಷಣ್ಣರಾಗಿ ತಿರುಗಿ ಬ್ರಹ್ಮನ ಬಳಿಗೆ ಬಂದರು. ಬ್ರಹ್ಮ ಅವರ ಪ್ರಾರ್ಥನೆ ಕೇಳಿ ಶ್ರೀಕೃಷ್ಣನನ್ನು ಧ್ಯಾನಿಸಿದ. ಬಳಿಕ ಕೃಷ್ಣನ ಆಜ್ಞೆಯಂತೆ ಪ್ರಕೃತಿಯನ್ನು ಆರಾಧಿಸಿದ. ಪ್ರಕೃತಿ ಅಗ್ನಿಯ ದಾಹಕ ಶಕ್ತಿರೂಪಳಾದ ಸ್ವಾಹಾದೇವಿಯಾಗಿ ಒಂದು ಅಂಶದಿಂದ ಪ್ರಾದುರ್ಭವಿಸಿದಳು. ಗ್ರೀಷ್ಮಕಾಲದ ಮಧ್ಯಾಹ್ನ ಸೂರ್ಯನನ್ನು ಮೀರಿಸುವ ಪ್ರಭೆ-ಯಿಂದ ಕೂಡಿದ ಮನೋಹರರೂಪ ಅವಳದು. ನಸುನಗೆಯಿಂದ ಪ್ರಸನ್ನವಾದ ಮುಖ. ಭಕ್ತರನ್ನು ಅನುಗ್ರಹಿಸುವ ಆ ದೇವಿ ಬ್ರಹ್ಮನನ್ನು ಕುರಿತು ನಿನ್ನ ಅಭೀಷ್ಟವೇನೆಂದಳು. ಬ್ರಹ್ಮ ಹೇಳಿದ- 'ನೀನು ಸುಂದರಿ. ಅಗ್ನಿಯ ದಾಹಶಕ್ತಿಯೂ ಪತ್ನಿಯೂ ನೀನಾಗಬೇಕು. ನೀನಿಲ್ಲದೆ ಅಗ್ನಿ ಹವಿಸ್ಸನ್ನು ಸುಡಲಾರ. ನಿನ್ನ ನಾಮವನ್ನು ಮಂತ್ರದ ಕೊನೆಯಲ್ಲಿ ಉಚ್ಚರಿಸಿ ಹವಿಸ್ಸನ್ನು ನೀಡಿದರೆ ಮಾತ್ರ ದೇವತೆಗಳು ಆನಂದದಿಂದ ಆ ಹವಿಸ್ಸನ್ನು ಸ್ವೀಕರಿಸುವರು.'

ಬ್ರಹ್ಮನ ಮಾತನ್ನು ಕೇಳಿ ಸ್ವಾಹಾದೇವಿ ವಿಷಣ್ಣಳಾದಳು. ತನ್ನ ಮನೋಗತವನ್ನು ಮಾತುಗಳಿಂದ ವ್ಯಕ್ತಮಾಡಿದಳು- 'ನಾನು ಕೃಷ್ಣನನ್ನು ತಪಸ್ಸಿನಿಂದ ಆರಾಧಿಸುತ್ತೇನೆ.

ಅವನನ್ನು ಹೊರತು ಈ ಪ್ರಪಂಚವೆಲ್ಲ ನನಗೆ ಸ್ವಪ್ನದಂತೆ ಕೇವಲ ಭ್ರಮೆಯ ಸರಿ. ಸೃಷ್ಟಿಕರ್ತನಾದ ನೀನಾಗಲಿ ಶಿವ ಶೇಷ ಧರ್ಮ ಗಣೇಶ ಪ್ರಕೃತಿ ಋಷಿ ಮುನಿಗಳಾಗಲಿ ಎಲ್ಲರೂ ಅವನ ಆರಾಧನೆಯಿಂದಲೆ ಪೂಜ್ಯರೆನಿಸಿದ್ದೀರಿ. ಅಂಥ ಅವನ ಪಾದ ಕಮಲವನ್ನೆ ಸರ್ವೋತ್ತಮ ಪರಬ್ರಹ್ಮನೆಂದು ಆರಾಧಿಸುತ್ತೇನೆ.'

ಹೀಗೆ ಹೇಳಿ ಒಂದು ಲಕ್ಷ ವರ್ಷಕಾಲ ಒಂಟಿಕಾಲಿನಲ್ಲಿ ನಿಂತು ಶ್ರೀಕೃಷ್ಣನನ್ನು ತಪಸ್ಸಿನಿಂದ ಸಾಕ್ಷಾತ್ಕರಿಸಿಕೊಂಡಳು. ಕೃಷ್ಣನ ಮನೋಹರ ರೂಪವನ್ನು ಕಂಡು ಮೋಹಿತಳಾಗಿ ಮೈಮರೆತಳು. ಅವಳ ಅಭಿಪ್ರಾಯವನ್ನು ತಿಳಿದ ಸರ್ವಜ್ಞನಾದ ಕೃಷ್ಣ ಅವಳನ್ನು ತೊಡೆಯ ಮೇಲಿರಿಸಿಕೊಂಡು ನುಡಿದ 'ವರಾಹಕಲ್ಪದಲ್ಲಿ ನೀನು ಒಂದಂಶದಿಂದ ನಗ್ನಜಿತನ ಮಗಳಾಗಿ ಅವತರಿಸಿ ನನ್ನ ಪ್ರೇಯಸಿಯಾಗುವಿ. ಈಗ ನೀನು ಅಗ್ನಿಯ ದಾಹಶಕ್ತಿಯೂ ಪತ್ನಿಯೂ ಆಗಿರು. ಮಂತ್ರಕ್ಕೆ ಅಂಗರೂಪಳೂ ಪವಿತ್ರಳೂ ಆಗಿರು. ಅಗ್ನಿ ನಿನ್ನನ್ನು ಪ್ರೀತಿಯಿಂದ ಸ್ವೀಕರಿಸಿ ನಿನ್ನೊಡನೆ ರಮಿಸುವನು.

ಹೀಗೆ ಹೇಳಿ ಕೃಷ್ಣ ಅಂತರ್ಧಾನ ಹೊಂದಿದ. ಇತ್ತ ಬ್ರಹ್ಮನ ಆಜ್ಞೆಯಂತೆ ಅಗ್ನಿ ಬಂದು ಸ್ವಾಹಾದೇವಿಯನ್ನು ಮಂತ್ರಪೂರ್ವಕ ಪಾಣಿಗ್ರಹಣ ಮಾಡಿಕೊಂಡ. ದಿವ್ಯವಾದ ನೂರುವರ್ಷಕಾಲ ಅವಳೊಡನೆ ವಿಹರಿಸಿ ಅವಳಲ್ಲಿ ಗರ್ಭಾಧಾನ ಗೈದ. ಹನ್ನೆರಡು ವರ್ಷ ಆ ಗರ್ಭವನ್ನು ಧರಿಸಿ ದೇವಿ ದಕ್ಷಿಣಾಗ್ನಿ ಆಹವನೀಯ ಗಾರ್ಹಪತ್ಯ ಎಂಬ ಮೂವರು ಮಕ್ಕಳಿಗೆ ಜನ್ಮವಿತ್ತಳು. ಋಷಿಮುನಿಗಳು ಬ್ರಾಹ್ಮಣಕ್ಷತ್ರಿಯ ಮುಂತಾದವರು ಮಂತ್ರದ ಕೊನೆಯಲ್ಲಿ ಸ್ವಾಹಾ ಎಂದು ಉಚ್ಚರಿಸಿ ಹವಿಸ್ಸನ್ನು ಅಗ್ನಿಯಲ್ಲಿ ನೀಡಿದರು. ಅದು ದೇವತೆಗಳಿಗೆ ತಲುಪಿತು. ಅವರು ಸಂತುಷ್ಟರಾದರು. ಸ್ವಾಹಾಯುಕ್ತವಾದ ಮಂತ್ರ ಪ್ರಶಸ್ತ. ಅದರಿಂದ ಸರ್ವಸಿದ್ಧಿ. ವಿಷವಿಲ್ಲದ ಹಾವು, ವೇದಾಭ್ಯಾಸವಿಲ್ಲದ ದ್ವಿಜ, ಪತಿಸೇವೆ ಮಾಡದ ಹೆಂಡತಿ, ವಿದ್ಯೆಯಿಲ್ಲದ ಮನುಷ್ಯ, ಫಲನೀಡದ ಮರ ಹೇಗೆ ನಿಂದ್ಯವೋ ಹಾಗೇ ಸ್ವಾಹಾಹೀನವಾದ ಮಂತ್ರವೂ ನಿಂದ್ಯ. ಅದು ಫಲದಾಯಕವಲ್ಲ.

ಸ್ವಾಹಾದೇವಿಯ ಈ ಉಪಾಖ್ಯಾನ ಸುಖಕರ, ಮೋಕ್ಷದಾಯಕ. ಇನ್ನು ಏನು ಕೇಳಬಯಸುವಿ ?

ನಾರದ— ಮುನಿವರ್ಯ, ಸ್ವಾಹಾದೇವಿಯ ಪೂಜಾವಿಧಾನವನ್ನು ಧ್ಯಾನ-ಸ್ತೋತ್ರಗಳನ್ನೂ ಹೇಳು.

ನಾರಾಯಣ— ಸಾಮವೇದೋಕ್ತವಾದ ಧ್ಯಾನ ಸ್ತೋತ್ರ ಪೂಜಾವಿಧಾನಗಳನ್ನು ಹೇಳುತ್ತೇನೆ ಕೇಳು. ಎಲ್ಲ ಯಜ್ಞಗಳಿಗೆ ಪ್ರಾರಂಭದಲ್ಲಿ ಶಾಲಗ್ರಾಮದಲ್ಲಿ ಅಥವಾ ಕಲಶ-ದಲ್ಲಿ ಸ್ವಾಹಾದೇವಿಯನ್ನು ಪೂಜಿಸಬೇಕು. ಆಗ ಯಜ್ಞದಿಂದ ಫಲಪ್ರಾಪ್ತಿಯಾಗುವುದು.

**ಸ್ವಾಹಾಂ ಮಂತ್ರಾಂಗ ಪೂತಾಂ ಚ ಮಂತ್ರಸಿದ್ಧಿ ಸ್ವರೂಪಿಣೀಂ**
**ಸಿದ್ಧಾಂ ಚ ಸಿದ್ಧಿದಾಂ ನೃಣಾಂ ಕರ್ಮಣಾಂ ಫಲದಾಂ ಭಜೇ**

'ಮಂತ್ರಾಂಗರೂಪಳಾಗಿ ಪವಿತ್ರಳಾದ, ಮಂತ್ರಸಿದ್ಧಿ ಸ್ವರೂಪಳಾದ, ಸಿದ್ಧಿ-ದಾಯಕಳಾದ, ಕರ್ಮಫಲದಾಯಕಳೂ ಆದ ಸ್ವಾಹಾದೇವಿಯನ್ನು ಆರಾಧಿಸುತ್ತೇನೆ.' -ಹೀಗೆ ಧ್ಯಾನಿಸಿ ಮೂಲಮಂತ್ರದಿಂದ ಪಾದ್ಯಾದಿಗಳನ್ನಿತ್ತರೆ ಸರ್ವಸಿದ್ಧಿ ಲಭಿಸುವುದು. ಮೂಲಮಂತ್ರವನ್ನೂ ಸ್ತೋತ್ರವನ್ನೂ ಹೇಳುತ್ತೇನೆ ಕೇಳು.

**'ಓಂ ಹ್ರೀಂ ಶ್ರೀಂ ವಹ್ನಿಜಾಯಾಯೈ ದೇವ್ಯೈ ಸ್ವಾಹಾ'**

ಇದು ಮೂಲಮಂತ್ರ. ಈ ಮಂತ್ರದಿಂದ ಪೂಜಿಸಿದರೆ ದೇವಿ ಸರ್ವಾಭೀಷ್ಟಗಳನ್ನು ನೀಡುವಳು.

ಸ್ವಾಹಾ, ಆದ್ಯಾ, ಪ್ರಕೃತ್ಯಂಶಾ, ಮಂತ್ರತಂತ್ರಾಂಗ ರೂಪಿಣೀ, ಮಂತ್ರಫಲದಾತ್ರೀ, ಜಗತಾಂಧಾತ್ರೀ, ಸತೀ, ಸಿದ್ಧಿಸ್ವರೂಪಾ, ಸಿದ್ಧಾ, ನೃಣಾಂ ಸರ್ವದಾಸಿದ್ಧಿದಾ, ಹುತಾಶ-ದಾಹಿಕಾಶಕ್ತಿ, ತತ್ತ್ವಾಣಾಧಿಕ ರೂಪಿಣೀ, ಸಂಸಾರ ಸಾರರೂಪಾ, ಘೋರ ಸಂಸಾರ ತಾರಿಣೀ, ದೇವ ಜೀವನ ರೂಪಾ, ದೇವ ಪೋಷಣಕಾರಿಣೀ -ಈ ಹದಿನಾರು ನಾಮಗಳನ್ನು ಭಕ್ತಿಯಿಂದ ಪಠಿಸಿದರೆ ಇಹಪರಗಳಲ್ಲಿ ಸರ್ವಸಿದ್ಧಿ ಲಭಿಸುವುದು. ಅವನ ಯಾವ ಕರ್ಮದಲ್ಲಿಯೂ ಅಂಗವೈಕಲ್ಯ ಉಂಟಾಗುವುದಿಲ್ಲ. ಅಪುತ್ರರಿಗೆ ಪುತ್ರಸಂತತಿ ಲಭಿಸುವುದು. ಮದುವೆಯಾಗದಿದ್ದವರಿಗೆ ಒಳ್ಳೆಯ ಕನ್ಯೆ ದೊರಕುವಳು.

**ಇಲ್ಲಿಗೆ ಶ್ರೀ ಬ್ರಹ್ಮವೈವರ್ತ ಮಹಾಪುರಾಣದಲ್ಲಿ ಎರಡನೆಯದಾದ ಪ್ರಕೃತಿಖಂಡದ ನಾರದನಾರಾಯಣ ಸಂವಾದದಲ್ಲಿ ಸ್ವಾಹೋಪಾಖ್ಯಾನದಲ್ಲಿ ಸ್ವಾಹಾ ಜನ್ಮಾದಿಕಥನವೆಂಬ ನಲವತ್ತನೆ ಅಧ್ಯಾಯ ಮುಗಿಯಿತು.**

# ಸ್ವಧಾದೇವಿಯ ಉಪಾಖ್ಯಾನ, ಸ್ವಧಾ ಉತ್ಪತ್ತಿ, ಪೂಜಾದಿ ಕಥನ

ಅಧ್ಯಾಯ-೪೧

ನಾರಾಯಣ— ನಾರದ, ಇನ್ನುಮುಂದೆ ಸ್ವಧಾದೇವಿಯ ಉಪಾಖ್ಯಾನವನ್ನು ಹೇಳುತ್ತೇನೆ. ಇದು ಪಿತೃಗಳಿಗೆ ತೃಪ್ತಿಕರ. ಶ್ರಾದ್ಧಗಳಿಗೆ ಹೆಚ್ಚು ಫಲದಾಯಕ. ಸೃಷ್ಟಿಯ ಆದಿಯಲ್ಲಿ ಬ್ರಹ್ಮ ಪಿತೃ ಗಣಗಳನ್ನು ಸೃಜಿಸಿದ. ಅವರಲ್ಲಿ ನಾಲ್ಕುಗಣದವರು ಸಾಕಾರರು. ಮೂರುಗಣದವರು ಕೇವಲ ತೇಜೋರೂಪರು. ಈ ಏಳು ಪಿತೃಗಣದವರಿಗೆ ಶ್ರಾದ್ಧತರ್ಪಣ ಮುಂತಾದ ರೂಪದಲ್ಲಿ ಆಹಾರವನ್ನೂ ಬ್ರಹ್ಮ ವ್ಯವಸ್ಥೆಗೊಳಿಸಿದ.

ಸ್ನಾನವಿಧಿ ತರ್ಪಣಪರ್ಯಂತ ನಡೆಯಬೇಕು. ದೇವಪೂಜೆ ಶ್ರಾದ್ಧದ ಪರ್ಯಂತವಾಗಿ ನಡೆಯಬೇಕು. ಆಹ್ನಿಕ ಮೂರು ಸಂಧ್ಯಾವಂದನೆಯವರೆಗೆ ನಡೆಯಬೇಕೆಂದು ಶ್ರುತಿಯಲ್ಲಿ ಹೇಳಿದೆ. ಹೀಗೆ ನಿತ್ಯವೂ ಮೂರು ಸಂಧ್ಯಾವಂದನೆ ಶ್ರಾದ್ಧ ತರ್ಪಣ ದೇವಪೂಜೆ ವೇದಪಾಠ, ಇವನ್ನು ಮಾಡದ ಬ್ರಾಹ್ಮಣ ವಿಷವಿಲ್ಲದ ಹಾವಿನಂತೆ. ಹರಿಪೂಜೆ ಮಾಡದೆ, ಹರಿಗೆ ಅನಿವೇದಿತವಾದ ಅನ್ನ ಉಣ್ಣುವವನಿಗೆ ಮರಣಪರ್ಯಂತ ಆಶೌಚ. ಅವನು ಯಾವ ಕರ್ಮಕ್ಕೂ ಅರ್ಹನಲ್ಲ.

ಬ್ರಹ್ಮ ಪಿತೃಗಳ ಆಹಾರಕ್ಕಾಗಿ ಶ್ರಾದ್ಧಾದಿಗಳನ್ನು ಏರ್ಪಡಿಸಿದರೂ ಪಿತೃಗಳಿಗೆ ಆ ಆಹಾರ ತಲುಪಿರಲಿಲ್ಲ. ಎಲ್ಲರೂ ಹಸಿದು ದುಃಖದಿಂದ ಬ್ರಹ್ಮನ ಬಳಿಗೆ ಹೋಗಿ ನಿವೇದಿಸಿಕೊಂಡರು. ಬ್ರಹ್ಮ ಓರ್ವ ಮಾನಸ ಕನ್ಯೆಯನ್ನು ಸೃಜಿಸಿದ. ಅವಳು ರೂಪಯೌವನ ಸಂಪನ್ನೆ. ಶರಚ್ಚಂದ್ರನ ಕಾಂತಿ ಉಳ್ಳವಳು. ವಿದ್ಯೆಗುಣ ರೂಪಗಳುಳ್ಳವಳು. ಬಿಳಿ ಸಂಪಿಗೆಯಂಥ ಮೈಬಣ್ಣದವಳು. ರತ್ನಾಭರಣ ಭೂಷಿತಳಾದವಳು. ಲಕ್ಷ್ಮಿಯ ಲಕ್ಷಣಗಳಿಂದ ಒಪ್ಪುವ ಕಮಲಮುಖಿ, ಕಮಲನಯನೆ. ಕಮಲದಲ್ಲಿ ನಿಂತಿದ್ದಳು. ಇವಳೆ ಸ್ವಧಾದೇವಿ. ಪ್ರಕೃತಿಯ ಅಂಶರೂಪಳಾದ ಆ ದೇವಿಯನ್ನು ಪಿತೃಗಳಿಗೆ ಪತ್ನಿಯನ್ನಾಗಿ ಮಾಡಿಕೊಟ್ಟ, ಬ್ರಹ್ಮ. ಬಳಿಕ ಬ್ರಾಹ್ಮಣರಿಗೆ ಉಪದೇಶಮಾಡಿದ- 'ಮಂತ್ರದ ಕೊನೆಯಲ್ಲಿ ಸ್ವಧಾ ಎಂದು ಉಚ್ಚರಿಸಿಯೆ ಪಿತೃಗಳಿಗೆ ಕವ್ಯವನ್ನು ಅರ್ಪಿಸಿರಿ' ಎಂದು. ಬ್ರಾಹ್ಮಣರು ಹಾಗೇ ಮಾಡಿದರು.

ಹವ್ಯಗಳಿಗೆ 'ಸ್ವಾಹಾ' ಬೇಕು. ಕವ್ಯಗಳಿಗೆ 'ಸ್ವಧಾ' ಹವ್ಯಕವ್ಯಗಳಿಗೆಲ್ಲ ದಕ್ಷಿಣೆ ಬೇಕು. ದಕ್ಷಿಣೆಯಿಲ್ಲದ ಯಜ್ಞವೆಲ್ಲ ನಿರರ್ಥಕ.

ಪಿತೃಗಳು ದೇವತೆಗಳು ಬ್ರಾಹ್ಮಣರು ಮುನಿಗಳು ಮಾನವರು ಎಲ್ಲರೂ ಸ್ವಧಾಪೂಜೆ ಮಾಡಿ ಅವಳ ವರದಿಂದ ಎಲ್ಲರೂ ಪೂರ್ಣಮನೋರಥರಾದರು.

ಹೀಗೆ ಸ್ವಧೋಪಾಖ್ಯಾನವನ್ನು ಹೇಳಿದ್ದೇನೆ. ಉತ್ತಮವಾಗಿದ್ದು ಎಲ್ಲರಿಗೂ ಸಂತೋಷದಾಯಕವಾದುದು. ಇನ್ನೇನು ಕೇಳಬಯಸುವೆ ?

ನಾರದ— ಸ್ವಧಾದೇವಿಯ ಪೂಜಾವಿಧಾನವನ್ನೂ ಧ್ಯಾನಸ್ತೋತ್ರಗಳನ್ನೂ ಕೇಳ-ಬಯಸುತ್ತೇನೆ.

ನಾರಾಯಣ— ಸ್ವಧಾ ದೇವಿಯ ಧ್ಯಾನ ಸ್ತೋತ್ರಗಳು ವೇದೋಕ್ತವಾದವು. ನಿನಗೆ ತಿಳಿದೇ ಇವೆ. ಆದರೂ ವಿಶೇಷ ಜ್ಞಾನಕ್ಕಾಗಿ ಕೇಳುತ್ತಿರುವೆ.

ಶರತ್ಕಾಲದ ಕೃಷ್ಣ ತ್ರಯೋದಶಿ, ಮಘಾನಕ್ಷತ್ರ, ಶ್ರಾದ್ಧದಿನ, ಇವುಗಳಲ್ಲಿ ಸ್ವಧಾ-ದೇವಿಯನ್ನು ಪೂಜಿಸಿ ಶ್ರಾದ್ಧವನ್ನಾಚರಿಸಬೇಕು. ಅವಳನ್ನು ಪೂಜಿಸದೆ ಶ್ರಾದ್ಧ-ಮಾಡಿದರೆ ಫಲವಿಲ್ಲ.

**ಬ್ರಹ್ಮಣೋ ಮಾನಸೀಂ ಕನ್ಯಾಂ ಶಶ್ವತ್ ಸುಸ್ಥಿರಯೌವನಾಂ ।**

**ಪೂಜ್ಯಾಂ ಪಿತೄಣಾಂ ದೇವಾನಾಂ ಶ್ರಾದ್ಧಾನಾಂ ಫಲದಾಂ ಭಜೇ ॥**

'ಸ್ವಧಾದೇವಿ ಬ್ರಹ್ಮನ ಮಾನಸಪುತ್ರಿ. ಸ್ಥಿರಯೌವನವತಿ. ಪಿತೃಗಳಿಗೂ ದೇವತೆ-ಗಳಿಗೂ ಪೂಜ್ಯಳು. ಶ್ರಾದ್ಧಗಳಿಗೆ ಫಲದಾಯಕಳು. ಅವಳನ್ನು ಆರಾಧಿಸುತ್ತೇನೆ.'

ಹೀಗೆ ಧ್ಯಾನಮಾಡಿ ಶಾಲಗ್ರಾಮದಲ್ಲಿ ಅಥವಾ ಕಲಶದಲ್ಲಿ ದೇವಿಯನ್ನು ಮೂಲಮಂತ್ರದಿಂದ ಪಾದ್ಯಾದಿಗಳಿತ್ತು ಪೂಜಿಸಬೇಕು.

**ಓಂ ಹ್ರೀಂ ಶ್ರೀಂ ಕ್ಲೀಂ ಸ್ವಧಾದೇವ್ಯೈ ಸ್ವಾಹಾ ।**

ಈ ಮಹಾಮಂತ್ರವನ್ನು ಉಚ್ಚರಿಸಿ ಪೂಜಿಸಿ ಸ್ತೋತ್ರಮಾಡಿ ನಮಿಸಬೇಕು. ಸ್ತೋತ್ರ ಬ್ರಹ್ಮನಿಂದ ಕೃತವಾದುದು, ಸಕಲಾಭೀಷ್ಟ ನೀಡುವಂಥಹುದು. ಅದನ್ನು ಹೇಳುತ್ತೇನೆ, ಕೇಳು-

'ಸ್ವಧಾ' ಎಂಬ ಶಬ್ದದ ಉಚ್ಚಾರಣ ಮಾತ್ರದಿಂದಲೆ ತೀರ್ಥಸ್ನಾನಫಲ ಲಭಿಸುವುದು. ಸರ್ವಪಾಪ ಪರಿಹಾರವಾಗುವುದು. ವಾಜಪೇಯಫಲ ಲಭಿಸುವುದು. ಸ್ವಧಾ ಸ್ವಧಾ ಸ್ವಧಾ ಎಂದು ಮೂರು ಬಾರಿ ಸ್ಮರಣೆಮಾಡಿದರೆ ಶ್ರಾದ್ಧಫಲ ಲಭಿಸು-ವುದು. ಸಕಾಲದಲ್ಲಿ ತರ್ಪಣ ನೀಡಿದ ಫಲ ಸಿಗುವುದು. ಶ್ರಾದ್ಧಕಾಲದಲ್ಲಿ ಸ್ವಧಾ-ದೇವಿಯ ಸ್ತೋತ್ರವನ್ನು ಶ್ರವಣಮಾಡಿದರೆ ನೂರುಶ್ರಾದ್ಧಗಳ ಪುಣ್ಯ ಬರುವುದು.

ಸ್ವಧಾ ಸ್ವಧಾ ಸ್ವಧಾ ಎಂದು ಮೂರು ಸಂಧ್ಯೆಗಳಲ್ಲಿ ಉಚ್ಚರಿಸಿದರೆ ಪ್ರೀತಿ-ಪಾತ್ರಳಾದ ವಿನೀತಳಾದ ಹೆಂಡತಿ ಗುಣವಂತನಾದ ಪುತ್ರರು ಲಭಿಸುವರು. ಹೇ ದೇವಿ, ನೀನು ಪಿತೃಗಳಿಗೆ ಪ್ರಾಣತುಲ್ಯಳು. ಶ್ರಾದ್ಧಗಳಿಗೆ ಅಧಿಷ್ಠಾತ್ರಿ. ಶ್ರಾದ್ಧಫಲ-ದಾಯಕಳು. ನನ್ನ ಮನಸ್ಸಿನಿಂದ ಪ್ರಾದುರ್ಭವಿಸಿ ಹೊರಗೆ ಬಾ. ಪಿತೃಗಳಿಗೆ

ಸಂತೋಷ ನೀಡು. ಬ್ರಾಹ್ಮಣರಿಗೆ ಸುಖನೀಡು. ಗೃಹಸ್ಥರಿಗೆ ಸಮೃದ್ಧಿ ನೀಡು. ನೀನು ನಿತ್ಯಳು. ನಿತ್ಯಸ್ವರೂಪಳು. ಗುಣರೂಪಳು. ಸೃಷ್ಟಿಪ್ರಳಯಗಳಲ್ಲಿ ನಿನಗೆ ಜನನ ಮರಣಗಳಿಲ್ಲ, ಕೇವಲ ಆವಿರ್ಭಾವ ತಿರೋಭಾವಗಳಾಗುತ್ತವೆ. ಓಂ ಸ್ವಸ್ತಿ ನಮಃ ಸ್ವಾಹಾ ಸ್ವಧಾ ದಕ್ಷಿಣಾ ಇವು ಆರು ವೇದೋಕ್ತವಾದ ನಿನ್ನ ನಾಮಗಳು.

ನೀನು ಹಿಂದೆ ಗೋಲೋಕದಲ್ಲಿ ಸ್ವಾಹಾ ಎಂಬ ಗೋಪಿಯೂ ಆಗಿದ್ದೆ. ಕೃಷ್ಣನನ್ನು ಸ್ವಯಂ ವಿಹಾರಕ್ಕೆ ಕರೆಯುತ್ತಿದ್ದುದರಿಂದ 'ಸ್ವಾಹಾ' ಎನಿಸಿದ್ದೆ. ಆಗಲೂ ರಾಧೆ ಕಂಡು ಶಪಿಸಿದ್ದರಿಂದ ಈ ಲೋಕಕ್ಕೆ ಬಂದು ಅಗ್ನಿಯ ಪತ್ನಿಯಾದೆ. ನಿನ್ನ 'ಸ್ವಾಹಾ' ನಾಮೋಚ್ಚಾರಣದಿಂದಲೆ ಮಾನವನ ಪಾಪಗಳೆಲ್ಲ ದೂರ ಹೋಗುವುವು. ಪರಮಪವಿತ್ರಳಾದ ನಿನ್ನನ್ನು ದೇವತೆಗಳು ವಂದಿಸುತ್ತಾರೆ.

ನೀನು ಹಿಂದೆ ಸುಶೀಲೆ ಎಂಬ ಗೋಪಿಯಾಗಿದ್ದೆ. ರಾಧೆಯ ಗೆಳತಿಯಾಗಿದ್ದೆ. ಆಗ ಕೃಷ್ಣನ ಬಲತೊಡೆಯಲ್ಲಿ ಕುಳಿತಿದ್ದೆ. ರಾಧೆಯ ಶಾಪದಿಂದ ಈ ಲೋಕಕ್ಕೆ ಬಂದು ಯಜ್ಞನ ಪತ್ನಿಯಾದೆ. ರತಿವಿಹಾರದಲ್ಲಿ ದಕ್ಷಳೂ ಪತಿಯ ಬಲಭಾಗದಲ್ಲಿ ಕುಳ್ಳಿರು-ವವಳೂ ಆದ್ದರಿಂದ ದಕ್ಷಿಣಾ ಎನಿಸಿದ.

ಹೀಗೆ ಗೋಲೋಕದಲ್ಲಿದ್ದ ಮೂವರು ಗೋಪಿಯರೆ ಕರ್ಮಿಗಳ ಕರ್ಮಪೂರ್ತಿ-ಗಾಗಿಯೆ ಪರಮಾತ್ಮನ ಇಚ್ಛೆಯಂತೆ ಸ್ವಧಾ ಸ್ವಾಹಾದಕ್ಷಿಣಾ ಎಂದು ಮೂವರು ದೇವಿಯರಾದಿರಿ.'

ಹೀಗೆ ಬ್ರಹ್ಮ ಹೇಳಿದೊಡನೆ ಅವನ ಮನಸ್ಸಿನಿಂದ ಸ್ವಧಾದೇವಿ ಆವಿರ್ಭೂತ-ಳಾದಳು. ಬ್ರಹ್ಮ ಅವಳನ್ನು ಪಿತೃಗಳಿಗೆ ನೀಡಿದ. ಪಿತೃಗಳು ಸಂತುಷ್ಟರಾದರು.

ಈ ಪುಣ್ಯಕರವಾದ ಸ್ವಧಾಸ್ತೋತ್ರವನ್ನು ಮನಸ್ಸಿಟ್ಟು ಕೇಳುವವ ಸರ್ವತೀರ್ಥ-ಸ್ನಾನದ ಸರ್ವವೇದ ಪಾರಾಯಣದ ಫಲವನ್ನು ಪಡೆಯುತ್ತಾನೆ.

**ಇಲ್ಲಿಗೆ ಶ್ರೀ ಬ್ರಹ್ಮವೈವರ್ತ ಮಹಾಪುರಾಣದಲ್ಲಿ ಎರಡನೆಯದಾದ ಪ್ರಕೃತಿಖಂಡದ ನಾರದನಾರಾಯಣ ಸಂವಾದದಲ್ಲಿ ಸ್ವಧೋಪಾಖ್ಯಾನದಲ್ಲಿ ಸ್ವಧೋತ್ಪತ್ತಿ ಪೂಜಾದಿಕಥನವೆಂಬ ನಲವತ್ತೊಂದನೆ ಅಧ್ಯಾಯ ಮುಗಿಯಿತು.**

# ದಕ್ಷಿಣಾಖ್ಯಾನ, ದಕ್ಷಿಣಾ ಉತ್ಪತ್ತಿ ಪೂಜಾದಿ ಕಥನ

## ಅಧ್ಯಾಯ-೪೨

ನಾರಾಯಣ— ಸ್ವಾಹಾ ಸ್ವಧಾದೇವಿಯರ ಉಪಾಖ್ಯಾನವನ್ನು ಹೇಳಿದ್ದೇನೆ. ಇನ್ನು ದಕ್ಷಿಣಾ ದೇವಿಯ ಉಪಾಖ್ಯಾನವನ್ನು ಹೇಳುತ್ತೇನೆ ಕೇಳು.

**ಸುಶೀಲೆ ಗೋಲೋಕದಲ್ಲಿ** ರಾಧೆಯ ಸಖಿಯಾದ ಒಬ್ಬಳು ಗೋಪಿ. ಬಹಳ ಸುಂದರಿ. ವಿದ್ಯೆ ಗುಣರೂಪ ಕಲೆಗಳಿಂದ ಯುಕ್ತಳಾದ ಬಿಳಿ ಸಂಪಿಗೆಯಂಥ ಮೈಬಣ್ಣದ ಮೃಗನಯನೆ. ಕಾಮಶಾಸ್ತ್ರನಿಪುಣೆ. ಕೃಷ್ಣನ ಹೃದಯದ ಇಂಗಿತವನ್ನರಿಯ-ಬಲ್ಲವಳು. ಪ್ರೀತಿಯಿಂದ ಅನುರಾಗದಿಂದ ಒಮ್ಮೆ ರಾಧೆಯ ಮುಂದೆಯೆ ಕೃಷ್ಣನ ಬಲತೊಡೆಯಲ್ಲಿ ಕುಳಿತಳು. ಕೃಷ್ಣ ರಾಧೆಯ ಭಯದಿಂದ ತಲೆತಗ್ಗಿಸಿ ಕುಳಿತ. ರಾಧೆ ಕೋಪದಿಂದ ನಡುಗಿದಳು. ಕಣ್ಣು ಕೆಂಪಾಯಿತು. ತುಟಿ ಅದುರಿತು. ಆಕೆ ಕೃಷ್ಣನ ಸಮೀಪಕ್ಕೆ ಬರುತ್ತಿದ್ದಂತೆ ಪರಿಸ್ಥಿತಿ ವಿಕೋಪಕ್ಕೆ ಹೋದೀತೆಂದು ಹೆದರಿ ಕೃಷ್ಣ ಅಂತರ್ಧಾನನಾದ. ಸುಶೀಲೆಯೂ ಭಯದಿಂದ ಅಂತರ್ಧಾನಳಾದಳು. ಬಳಿಯಲ್ಲಿದ್ದ ಲಕ್ಷಕೋಟಿ ಗೋಪಿಯರೆಲ್ಲ ಹೆದರಿ ಕೈಮುಗಿದು ಭಕ್ತಿಯಿಂದ ತಲೆಬಾಗಿ 'ದೇವಿ, ರಕ್ಷಿಸು ರಕ್ಷಿಸು,' ಎನ್ನುತ್ತ ರಾಧೆಯ ಕಾಲುಗಳನ್ನು ಹಿಡಿದುಕೊಂಡರು. ಮೂರು-ಲಕ್ಷಕೋಟಿ ಸುದಾಮಾದಿ ಗೋಪರೂ ಕೂಡ ಭಯದಿಂದ ರಾಧೆಯ ಕಾಲುಗಳನ್ನು ಮೊರೆಹೊಕ್ಕರು. ರಾಧೆ ಸುಶೀಲೆಗೆ ಶಾಪವಿತ್ತಳು 'ನೀನಿನ್ನು ಗೋಲೋಕಕ್ಕೆ ಬಂದರೆ ತತ್ಕ್ಷಣ ಭಸ್ಮವಾಗುವಿ' ಎಂದು. ಬಳಿಕ ಕೃಷ್ಣನನ್ನು ಕಾಣದೆ ವಿರಹಕಾತರಳಾಗಿ ಕ್ಷಣವನ್ನು ಕೋಟಿಯುಗದಂತೆ ಕಳೆಯುತ್ತ ಕರೆಯತೊಡಗಿದಳು, 'ಕೃಷ್ಣ ಬಾ, ನನ್ನ ಪ್ರಾಣಪ್ರಿಯ, ಬೇಗ ಬಾ, ನೀನಿಲ್ಲದೆ ನನ್ನ ಈ ಪ್ರಾಣಗಳೆ ಹೋಗುತ್ತಿವೆ.''

ಪತಿಪ್ರೇಮ ದೊರಕಿದರೆ ಸ್ತ್ರೀಗೆ ಗರ್ವ ದಿನೇ ದಿನೇ ಹೆಚ್ಚುವುದು ಸ್ವಾಭಾವಿಕ. ಅದರಿಂದ ನಾನು ನಿನ್ನಲ್ಲಿ ಅಪರಾಧ ಮಾಡಿದೆ. ಸ್ತ್ರೀಗೆ ಎಲ್ಲ ಸುಖಸಂಪತ್ತೂ ಪತಿಯಿಂದ ಬರುವುದರಿಂದ ಅವನನ್ನು ಚೆನ್ನಾಗಿ ಸೇವಿಸುವುದು ಅವಳಿಗೆ ಧರ್ಮ.

**ಪತಿರ್ಬಂಧುಃ ಕುಲಸ್ತ್ರೀಣಾಂ ಅಧಿದೇವಃ ಸದಾಗತಿಃ ।**
**ಪರಂ ಸಂಪತ್‌ಸ್ವರೂಪಶ್ಚ ಸುಖರೂಪಶ್ಚ ಮೂರ್ತಿಮಾನ್ ॥**

ಸತ್ಕುಲದಲ್ಲಿ ಹುಟ್ಟಿದ ಸ್ತ್ರೀಗೆ ಸದಾ ಪತಿಯೆ ಬಂಧು, ಅಧಿದೈವ, ಆಶ್ರಯ. ಅವನೆ ಅವಳಿಗೆ ಸರ್ವಸಂಪತ್ತು, ಮೂರ್ತಿವೆತ್ತ ಸುಖ.

ಪತಿ ಸತಿಗೆ ಧರ್ಮ, ಸುಖ, ಪ್ರೀತಿ, ಶಾಂತಿ, ಸಮ್ಮಾನ, ಮಾನ ಎಲ್ಲವನ್ನೂ ಕೊಡುತ್ತಾನೆ. ಅದರಿಂದ ಅವಳ ಗರ್ವವನ್ನೂ ಅವನೆ ಕಳೆಯಬೇಕು. ಬಂಧುಗಳಲ್ಲಿ ಪತಿಗೆ ಸಮನಾದವ ಸ್ತ್ರೀಗೆ ಇನ್ನೊಬ್ಬನಿಲ್ಲ.

ಪತಿ ಸತಿಯನ್ನು ಭರಿಸುವುದರಿಂದ ಭರ್ತಾ, ಪಾಲಿಸುವುದರಿಂದ ಪತಿ, ಆಳುವುದರಿಂದ ಸ್ವಾಮಿ, ಆಸೆಗಳನ್ನು ಪೂರೈಸುವುದರಿಂದ ಕಾಂತ. ಸುಖ ಬಂಧನ-ದಲ್ಲಿಡುವುದರಿಂದ ಬಂಧು, ಪ್ರೀತಿಸುವುದರಿಂದ ಪ್ರಿಯ, ಸಂಪತ್ತನ್ನು ಕೊಡುವುದ-ರಿಂದ ಈಶ, ಪ್ರಾಣರಕ್ಷಕನಾದ್ದರಿಂದ ಪ್ರಾಣನಾಥ, ರತಿಸುಖ ನೀಡುವುದರಿಂದ ರಮಣ. ಇಂಥ ಗಂಡನಿಗಿಂತ ಹೆಚ್ಚು ಪ್ರಿಯ ಸ್ತ್ರೀಗೆ ಇನ್ನಾರು ? ಪುತ್ರನೂ ಪ್ರಿಯ-ನೆನಿಸಲು ಪ್ರಿಯನಾದ ಗಂಡನಿಂದ ಜನ್ಮ ಪಡೆಯುವುದೆ ಕಾರಣ. ಅದರಿಂದ ಕುಲ-ಸ್ತ್ರೀಗೆ ನೂರು ಮಕ್ಕಳಿಗಿಂತ ಒಬ್ಬ ಪತಿ ಹೆಚ್ಚು ಪ್ರಿಯ. ದುಷ್ಟಕುಲದ ಸ್ತ್ರೀ ಪತಿಯ ಇಂಗಿತವನ್ನು ಅರಿಯಲಾರಳು.

ಸರ್ವತೀರ್ಥಸ್ನಾನ, ಸರ್ವಯಜ್ಞ, ಭೂಪ್ರದಕ್ಷಿಣೆ, ತಪಸ್ಸು, ವ್ರತ, ದಾನ, ಉಪವಾಸ, ಗುರುಸೇವೆ, ಬ್ರಾಹ್ಮಣಸೇವೆ, ದೇವತಾರಾಧನೆ ಮುಂತಾದುವೆಲ್ಲವೂ ಪತಿಸೇವೆಯ ಹದಿನಾರನೆ ಒಂದಂಶಕ್ಕೆ ಸಮವಾಗದು. ಗುರು ಬ್ರಾಹ್ಮಣ ಇಷ್ಟದೈವ-ಗಳಿಗಿಂತಲೂ ಸ್ತ್ರೀಗೆ ಪತಿಯೇ ಹೆಚ್ಚು. ಪುರುಷನಿಗೆ ವಿದ್ಯೆ ನೀಡುವ ಗುರುವಿನಂತೆ ಕುಲಸ್ತ್ರೀಗೆ ಪತಿ.

ಕೃಷ್ಣ, ಮೂರುಲಕ್ಷಕೋಟಿ ಸಂಖ್ಯೆಯಲ್ಲಿರುವ ಗೋಪರಿಗೂ ಗೋಪಿಯರಿಗೂ ನಾನು ಒಡತಿಯಾಗಿರುವುದು ನಿನ್ನ ಅನುಗ್ರಹದಿಂದ. ಆದರೂ ನಾನು ನಿನ್ನನ್ನು ಅರಿತುಕೊಳ್ಳಲಿಲ್ಲ. ಸ್ತ್ರೀಸ್ವಭಾವವೆ ಇದು. ಇದನ್ನು ಯಾವ ಸ್ತ್ರೀಯೂ ಬಿಡಲಾರಳು.

-ಹೀಗೆ ಹೇಳಿ ರಾಧೆ ಭಕ್ತಿಯಿಂದ ಕೃಷ್ಣನನ್ನು ಧ್ಯಾನಿಸಿದಳು. ಒಡನೆ ಕೃಷ್ಣ ಮೈದೋರಿ ಅವಳೊಡನೆ ವಿಹರಿಸಿದ.

ಸುಶೀಲೆ ಗೋಲೋಕದಿಂದ ಕಣ್ಮರೆಯಾಗಿ ಬಹುಕಾಲದ ತಪಸ್ಸಿನಿಂದ ಲಕ್ಷ್ಮೀ-ದೇವಿಯ ಶರೀರದಲ್ಲಿ ಪ್ರವೇಶಿಸಿದಳು. ಆಗ ದೇವತೆಗಳು ಮುಂತಾದವರು ತಾವು ಎಷ್ಟು ಶ್ರಮದಿಂದ ಯಜ್ಞ ಮಾಡಿದರೂ ಫಲ ಸಿಗದಿದ್ದುರಿಂದ ವಿಷಣ್ಣರಾಗಿ ಬ್ರಹ್ಮನ ಬಳಿಗೆ ಬಂದರು. ಬ್ರಹ್ಮ ವಿಷ್ಣುವನ್ನು ಧ್ಯಾನಿಸಿದ. ಆಗ ವಿಷ್ಣು ಲಕ್ಷ್ಮಿಯ ಶರೀರದಿಂದ ಸುಶೀಲೆಯನ್ನು ಹೊರತಂದು ಬ್ರಹ್ಮನಿಗೆ ಕೊಟ್ಟ. ಅವಳೆ ದಕ್ಷಿಣಾದೇವಿ. ಅವಳನ್ನು ಬ್ರಹ್ಮ ಯಜ್ಞನಿಗೆ ಕೊಟ್ಟು ಮದುವೆ ಮಾಡಿದ. ಪುಟಕ್ಕಿಟ್ಟ ಚಿನ್ನದಂಥ ಮೈಬಣ್ಣ ಕೋಟಿ ಚಂದ್ರರಂಥ ಕಾಂತಿಗಳಿಂದ ಮನಸೆಳೆವ ಸುಂದರಿ ದಕ್ಷಿಣಾದೇವಿ. ಒಳ್ಳೆಯ ವೇಷ ಧರಿಸಿ, ಜಾಜಿ ಹೂ ಮಾಲೆಯನ್ನು ತೊಟ್ಟು, ಮಂದಹಾಸದಿಂದ ಪ್ರಸನ್ನವಾದ ಮುಖ ತೋರಿ ಮುನಿಗಳ ಮನಸ್ಸನ್ನೂ ಸೂರೆಗೊಳ್ಳುವಂತಿದ್ದ ದೇವಿಯ ರೂಪವನ್ನು ಕಂಡ ಯಜ್ಞ ಮೈಮರೆತ. ವಿಧ್ಯುಕ್ತವಾಗಿ ಅವಳ ಕೈಹಿಡಿದು ಏಕಾಂತದಲ್ಲಿ ನೂರು ದಿವ್ಯವರ್ಷಗಳ ಕಾಲ ವಿಹರಿಸಿದ. ಅವಳು ಗರ್ಭಧರಿಸಿ ಹನ್ನೆರಡು ವರ್ಷಕಾಲ ಹೊತ್ತಳು. ಸರ್ವಕರ್ಮಫಲದಾಯಕನಾದ ಫಲ ಎಂಬ ಪುತ್ರನಿಗೆ ಜನ್ಮವಿತ್ತಳು. ಹೀಗೆ

ಯಜ್ಞ ದಕ್ಷಿಣಾದೇವಿಯಿಂದ ಕೂಡಿ ಪರಿಪೂರ್ಣನಾದಾಗ ಫಲದಾಯಕನಾದ ಪುತ್ರನನ್ನು ಪಡೆದ. ಅಂದಿನಿಂದ ಯಜ್ಞಗಳಿಗೆ ಫಲ ದೊರೆತು ದೇವತೆಗಳು ಮುಂತಾದವರು ಸಂತುಷ್ಟರಾದರು.

ಕರ್ಮಕ್ಕೆ ದಕ್ಷಿಣೆ ನೀಡಿದಾಗಲೆ ಅದು ಪೂರ್ಣವಾಗುತ್ತದೆ, ಫಲ ನೀಡುತ್ತದೆ. ಕರ್ಮದ ಕೊನೆಯಲ್ಲಿ ತಕ್ಷಣವೆ ದಕ್ಷಿಣೆ ಕೊಡಬೇಕು. ದೈವಾತ್ ಅಥವಾ ಅಜ್ಞಾನ-ದಿಂದ ವಿಲಂಬವಾಯಿತೆಂದರೆ ಬಹಳ ದೋಷವಿದೆ. ಒಂದು ಮುಹೂರ್ತ ವಿಲಂಬ-ವಾದರೆ ಮೊದಲಿನದಕ್ಕೆ ಎರಡು ಪಾಲು ಅಧಿಕ ದಕ್ಷಿಣೆ ನೀಡಬೇಕಾಗುವುದು. ಒಂದು ದಿನ ಕಳೆದರೆ ಎಂಟುಪಾಲು, ಮೂರುದಿನ ಕಳೆದರೆ ಹತ್ತುಪಾಲು. ಒಂದು ವಾರ ಕಳೆದರೆ ಇಪ್ಪತ್ತುಪಾಲು. ಒಂದುತಿಂಗಳು ಕಳೆದರೆ ಲಕ್ಷಪಾಲು. ಒಂದು ವರ್ಷ ಕಳೆದರೆ ಮೂರು ಕೋಟಿಪಾಲು. ಕರ್ಮ ನಿಷ್ಫಲವೆ ಆಗುತ್ತದೆ. ಆ ಕರ್ಮಮಾಡಿದವ ಬ್ರಹ್ಮಸ್ವ ಅಪಹರಿಸಿದಂತಾಗುತ್ತದೆ. ಆತ ಮುಂದೆ ಅಶುಚಿಯಾಗಿದ್ದು ಯಾವ ಕರ್ಮಕ್ಕೂ ಅರ್ಹನೆನಿಸುವುದಿಲ್ಲ. ದರಿದ್ರನಾಗಿ ವ್ಯಾಧಿಯುಕ್ತನಾಗುತ್ತಾನೆ. ಲಕ್ಷ್ಮಿ ಅವನಿಗೆ ಶಾಪ-ವಿತ್ತು ಮನೆಯಿಂದ ಹೊರಟುಹೋಗುತ್ತಾಳೆ. ಪಿತೃಗಳೂ ಅವನು ನೀಡುವ ಶ್ರಾದ್ಧ-ತರ್ಪಣವನ್ನು ಸ್ವೀಕರಿಸುವುದಿಲ್ಲ. ದೇವತೆಗಳೂ ಅವನಿಂದ ಪೂಜೆ ಸ್ವೀಕರಿಸುವುದಿಲ್ಲ. ಯಜ್ಞದ ಆಹುತಿಗಳನ್ನೂ ಸ್ವೀಕರಿಸುವುದಿಲ್ಲ.

**ದಾತಾ ದದಾತಿ ನೋ ದಾನಂ ಗ್ರಹೀತಾ ತನ್ನ ಯಾಚತೇ ।**
**ಉಭೌ ತೌ ನರಕಂ ಯಾತಶ್ಛಿನ್ನರಜ್ಜುರ್ಯಥಾ ಘಟಃ ॥**

ದಕ್ಷಿಣೆ ಕೊಡುವವ ಕೊಡದಿದ್ದರೆ, ಕೊಳ್ಳುವವ ಬೇಡದಿದ್ದರೆ, ಆ ಇಬ್ಬರೂ, ಹಗ್ಗ ಕಿತ್ತ ಬಿಂದಿಗೆ ಬಾವಿಗೆ ಬೀಳುವಂತೆ, ನರಕಕ್ಕೆ ಬೀಳುತ್ತಾರೆ.

ನಾರದ— ದಕ್ಷಿಣೆ ಕೊಡದಿದ್ದಾಗ ಆ ಕರ್ಮದ ಫಲ ಯಾರಿಗೆ ಹೋಗುತ್ತದೆ ? ಯಜ್ಞ ದಕ್ಷಿಣಾದೇವಿಯನ್ನು ಪೂಜಿಸಿದ ಬಗೆ ಹೇಗೆ ?

ನಾರಾಯಣ— ದಕ್ಷಿಣೆಯಿಲ್ಲದ ಕರ್ಮದಿಂದ ಫಲವೆ ಉಂಟಾಗುವುದಿಲ್ಲ. ಅದರಿಂದ ಯಾರಿಗೆ ಫಲವೆಂಬ ಪ್ರಶ್ನೆ ಉದ್ಭವಿಸುವುದಿಲ್ಲ. ಆದರೆ ಅಂಥಕರ್ಮದಲ್ಲಿ ಉಪಯೋಗಿಸಿದ ಹವಿಸ್ಸು ಮುಂತಾದುವನ್ನು ಬಲಿಚಕ್ರವರ್ತಿ ಉಣ್ಣುತ್ತಾನೆ. ಹಿಂದೆ ವಾಮನ ಬಲಿಗೆ ಹಾಗೆ ವರನೀಡಿದ್ದಾನೆ. ಶ್ರೋತ್ರಿಯನಿಲ್ಲದ ಶ್ರಾದ್ಧ, ಶ್ರದ್ಧೆಯಿಲ್ಲದ ದಾನ, ಶೂದ್ರಸ್ತ್ರೀ ಸಂಗ ಮಾಡಿದ ಬ್ರಾಹ್ಮಣನಿಗಿತ್ತ ಪೂಜೆ, ಋತ್ವಿಜರಿಲ್ಲದೆ ನಡೆಸಿದ ಯಜ್ಞ, ಅಶೌಚದಲ್ಲಿ ಮಾಡಿದ ಪೂಜೆ, ಗುರುಭಕ್ತಿ ಇಲ್ಲದವನ ಕರ್ಮ ಇವೆಲ್ಲವುಗಳಲ್ಲಿಯೂ ಉಪಯೋಗಿಸುವ ಹವಿಸ್ಸು ದ್ರವ್ಯ ಮುಂತಾದುವನ್ನು ಬಲಿಚಕ್ರವರ್ತಿಯೆ ಅಪಹರಿಸುತ್ತಾನೆ.

ಇನ್ನು ದಕ್ಷಿಣಾದೇವಿಯ ಧ್ಯಾನ ಸ್ತೋತ್ರ ಪೂಜಾವಿಧಾನಗಳನ್ನು ಕಾಣ್ವಶಾಖೆಯಲ್ಲಿ ಹೇಳಿದಂತೆ ವಿವರಿಸುತ್ತೇನೆ. ಹಿಂದೆ ದಕ್ಷಿಣಾದೇವಿಯ ರೂಪಕ್ಕೆ ಮರುಳಾಗಿ ಕಾಮಾತುರನಾದ ಯಜ್ಞ ದೇವಿಯನ್ನು ಹೀಗೆ ಸ್ತುತಿಸಿದ—

ದೇವಿ, ಹಿಂದೆ ನೀನು ಗೋಲೋಕದಲ್ಲಿ ಓರ್ವ ಪ್ರಧಾನಗೋಪಿಯಾಗಿದ್ದು ರಾಧೆಗೆ ಸಮಳಾಗಿ ಅವಳಿಗೆ ಸಖಿಯಾಗಿ ಶ್ರೀಕೃಷ್ಣನಿಗೆ ಪ್ರೇಯಸಿಯಾಗಿದ್ದೆ. ಕಾರ್ತಿಕ ಹುಣ್ಣಿಮೆ ದಿನ ರಾಸದಲ್ಲಿ ನೀನು ಕೃಷ್ಣನ ಬಲಭಾಗದಿಂದ ಆವಿರ್ಭವಿಸಿದ್ದರಿಂದ ದಕ್ಷಿಣಾ ಎನಿಸಿದ್ದೆ. ಒಳ್ಳೆಯ ಶೀಲವತಿಯಾಗಿದ್ದು ಸುಶೀಲಾ ಎನಿಸಿದ್ದೆ. ರಾಧೆಯ ಶಾಪದಿಂದ ಗೋಲೋಕದಿಂದ ಭ್ರಷ್ಟಳಾಗಿ ನನ್ನ ಭಾಗ್ಯವಶದಿಂದ ನನಗೆ ದೊರಕಿರುವೆ. ನೀನು ನನ್ನ ಸತಿಯಾಗು. ಎಲ್ಲ ಕರ್ಮಗಳಿಗೂ ನೀನೆ ಫಲ ನೀಡುವ-ವಳು. ನೀನಿಲ್ಲದ ಯಾವ ಕರ್ಮವೂ ನಿಷ್ಫಲವೆ. ಫಲ ಕೊಡದ ವೃಕ್ಷದಂತೆ ನೀನಿಲ್ಲದ ಕರ್ಮ. ಅದಕ್ಕೆ ಶೋಭೆಯಿಲ್ಲ. ನೀನಿಲ್ಲದ ಕರ್ಮಕ್ಕೆ ಫಲವನ್ನು ಬ್ರಹ್ಮ ವಿಷ್ಣು ಶಿವರಾಗಲಿ ದಿಕ್ಪಾಲಕರಾಗಲಿ ಯಾರೂ ಕೊಡಲಾರರು.

ಕರ್ಮರೂಪೀ ಸ್ವಯಂ ಬ್ರಹ್ಮಾ ಫಲರೂಪೀ ಮಹೇಶ್ವರಃ ।
ಯಜ್ಞರೂಪೀ ವಿಷ್ಣುರಹಂ ತ್ವಮೇಷಾಂ ಸಾರರೂಪಿಣೀ ॥

ಕರ್ಮಮಾಡಿಸುವವ ಸ್ವಯಂ ಬ್ರಹ್ಮ, ಫಲ ಕೊಡಿಸುವವ ಶಿವ. ಯಜ್ಞರೂಪನಾದ ವಿಷ್ಣು ಕರ್ಮಗಳಿಗೆ ಫಲ ನೀಡಬಲ್ಲ. ಈ ಮೂವರ ಸಾರಸ್ವರೂಪಳೆ ನೀನು.

-ಹೀಗೆ ಹೇಳಿ ಯಜ್ಞ ದಕ್ಷಿಣಾದೇವಿಯನ್ನು ಹೊಗಳಿದಾಗ ದೇವಿ ಸಂತುಷ್ಟಳಾಗಿ ಯಜ್ಞನನ್ನು ವರಿಸಿದಳು.

ಈ ದಕ್ಷಿಣಾ ಸ್ತೋತ್ರವನ್ನು ಯಜ್ಞಕಾಲದಲ್ಲಿ ಪಠಿಸಿದರೆ ಸರ್ವಯಜ್ಞಗಳೂ ಫಲದಾಯಕವಾಗುವುವು. ರಾಜಸೂಯ, ವಾಜಪೇಯ, ಗೋಮೇಧ, ನರಮೇಧ, ಅಶ್ವಮೇಧ, ಲಾಂಗಲ, ವಿಷ್ಣುಯಜ್ಞ, ಪಲ್ಗುಯಾಗ, ಪುತ್ರೇಷ್ಟಿ, ಗಜಮೇಧ, ಲೋಹಯಜ್ಞ, ಸ್ವರ್ಣಯಜ್ಞ, ಶಿವಯಜ್ಞ, ರುದ್ರಯಜ್ಞ, ಶಕ್ರಯಜ್ಞ, ಬಂಧಕಯಾಗ, ವರುಣಯಾಗ, ಕಂದುಕಯಾಗ, ಶುಚಿಯಾಗ, ಧರ್ಮಯಾಗ, ರೇಚನಯಾಗ, ಬಂಧನಯಾಗ, ಮಣಿಯಾಗ, ಸುಭದ್ರ -ಈ ಎಲ್ಲ ಯಜ್ಞಗಳಲ್ಲಿಯೂ ಈ ಸ್ತೋತ್ರ ಪಠಿಸಿದರೆ ಅವು ನಿರ್ವಿಘ್ನವಾಗಿ ಸಾಂಗವಾಗಿ ನಡೆಯುವುದು.

ದಕ್ಷಿಣಾದೇವಿಯನ್ನು ಶಾಲಿಗ್ರಾಮದಲ್ಲಿ ಅಥವಾ ಕಲಶದಲ್ಲಿ ಆವಾಹಿಸಿ ಹೀಗೆ ಧ್ಯಾನಿಸಬೇಕು-

ಲಕ್ಷ್ಮೀದಕ್ಷಾಂಶ ಸಂಭೂತಾಂ ದಕ್ಷಿಣಾಂ ಕಮಲಾಕಲಾಂ ।
ಸರ್ವ ಕರ್ಮಸು ದಕ್ಷಾಂ ಚ ಫಲದಾಂ ಸರ್ವಕರ್ಮಣಾಂ ॥
ವಿಷ್ಣೋಃ ಶಕ್ತಿಸ್ವರೂಪಾಂ ಚ ಸುಶೀಲಾಂ ಶುಭದಾಂ ಭಜೇ ॥

ಲಕ್ಷ್ಮಿಯ ಬಲಭಾಗದಿಂದ ಉದಿಸಿಬಂದವಳು ಲಕ್ಷ್ಮಿಯ ಅಂಶಭೂತಳು, ಎಲ್ಲ ಕರ್ಮಗಳಲ್ಲಿ ದಕ್ಷಳು. ಅದರಿಂದ ದಕ್ಷಿಣಾ ಎನಿಸಿದ ದಕ್ಷಿಣಾದೇವಿ ಸರ್ವಕರ್ಮ ಫಲದಾಯಕಳು ಯಜ್ಞರೂಪಿ ವಿಷ್ಣುವಿನ ಪತ್ನಿ, ಸುಶೀಲೆ, ಮಂಗಳದಾಯಕಳು. ಅವಳನ್ನು ಆರಾಧಿಸುವೆನು.

ಹೀಗೆ ದೇವಿಯನ್ನು ಧ್ಯಾನಿಸಿ ವೇದೋಕ್ತ ಮೂಲಮಂತ್ರದಿಂದ ಪಾದ್ಯಾದಿ-ಗಳನ್ನಿತ್ತು ಪೂಜಿಸಬೇಕು. ಆ ಮಂತ್ರ ಹೀಗಿದೆ-

'ಓಂ ಶ್ರೀಂ ಕ್ಲೀಂ ಹ್ರೀಂ ದಕ್ಷಿಣಾಯೈ ಸ್ವಾಹಾ'

ಇದು ದಕ್ಷಿಣಾ ದೇವಿಯ ಉಪಾಖ್ಯಾನ. ಸರ್ವಕರ್ಮಫಲದಾಯಕ. ಇದನ್ನು ಶ್ರವಣ ಮಾಡಿದರೆ ಕರ್ಮವೆಂದೂ ಅಂಗಹೀನವಾಗುವುದಿಲ್ಲ. ಪುತ್ರನಿಲ್ಲದವನಿಗೆ ಪುತ್ರಲಾಭ. ಭಾರ್ಯಾಹೀನನಿಗೆ ಉತ್ತಮ ಭಾರ್ಯಾಲಾಭ. ವಿದ್ಯಾಹೀನನಿಗೆ ವಿದ್ಯಾ-ಲಾಭ. ಧನಹೀನನಿಗೆ ಧನಲಾಭ. ಭೂಮಿಹೀನನಿಗೆ ಭೂ ಲಾಭ. ಸಂತತಿ ಹೀನನಿಗೆ ಸಂತತಿಲಾಭ. ಸಂಕಟದಲ್ಲಿ ಬಂಧುವಿಯೋಗದಲ್ಲಿ ಬಂಧನಮುಂತಾದ ಆಪತ್ತಿನಲ್ಲಿ ಒಂದು ತಿಂಗಳು ಈ ಸ್ತೋತ್ರಶ್ರವಣದಿಂದ ಕಷ್ಟಪರಿಹಾರ. ಇದರಲ್ಲಿ ಸಂಶಯವಿಲ್ಲ.

**ಇಲ್ಲಿಗೆ ಶ್ರೀ ಬ್ರಹ್ಮವೈವರ್ತ ಮಹಾಪುರಾಣದಲ್ಲಿ ಎರಡನೆಯದಾದ ಪ್ರಕೃತಿಖಂಡದ ನಾರದನಾರಾಯಣ ಸಂವಾದದಲ್ಲಿ ದಕ್ಷಿಣೋಪಾಖ್ಯಾನದಲ್ಲಿ ದಕ್ಷಿಣೋತ್ಪತ್ತಿ ತತ್ಪೂಜಾದಿ ವಿಧಾನವೆಂಬ ನಲವತ್ತೆರಡನೆ ಅಧ್ಯಾಯ ಮುಗಿಯಿತು.**

# ಷಷ್ಠೀದೇವಿಯ ಉಪಾಖ್ಯಾನ, ಷಷ್ಠೀದೇವಿಯ ಜನನ, ಪೂಜಾಸ್ತೋತ್ರಾದಿ ಕಥನ

ನಾರದ— ಪ್ರಭು, ಅನೇಕ ದೇವಿಯರ ಉಪಾಖ್ಯಾನಗಳನ್ನು ಕೇಳಿದ್ದಾಯಿತು. ಇನ್ನೂ ಬೇರೆ ದೇವಿಯರ ಚರಿತ್ರೆಗಳನ್ನು ಹೇಳು.

ನಾರಾಯಣ— ಎಲ್ಲ ದೇವಿಯರ ಚರಿತ್ರೆಗಳೂ ಬೇರೆಬೇರೆಯಾಗಿ ವೇದಗಳಲ್ಲಿ ಇವೆ. ನೀನು ಯಾವ ದೇವಿಯರ ಚರಿತ್ರೆಗಳನ್ನೂ ಕೇಳಬಯಸುವಿ ?

ನಾರದ— ಷಷ್ಠೀದೇವಿ ಮಂಗಲಚಂಡೀದೇವಿ ಮತ್ತು ಮನಸಾದೇವಿಯರ ಚರಿತ್ರೆಗಳನ್ನು ಕೇಳಬಯಸುತ್ತೇನೆ.

ನಾರಾಯಣ— ಪ್ರಕೃತಿಯ ಆರನೆ ಅಂಶದವಳಾದ್ದರಿಂದ ಷಷ್ಠೀ ಎನಿಸಿದ ದೇವಿ ಬಾಲಕರಿಗೆ ಅಧಿಷ್ಠಾತ್ರಿ. ವಿಷ್ಣುಮಾಯೆಯಾಗಿರುವಳು. ಮಾತೃಕೆಯರಲ್ಲಿ ಇವಳೂ ಒಬ್ಬಳು. ದೇವಸೇನಾ ಎಂಬ ಹೆಸರಿನಿಂದ ಷಣ್ಮುಖನ ಪತ್ನಿಯಾಗಿರುವವಳೂ ಇವಳೇ. ಬಾಲಕರಿಗೆ ಸದಾ ಬಳಿಯಲ್ಲಿದ್ದು ರಕ್ಷಣೆ ಮಾಡುತ್ತ ಆಯುಷ್ಯ ನೀಡುವವಳು. ಅವಳ ಪೂಜಾವಿಧಾನವನ್ನು ಕೇಳುವ ಮುನ್ನ ಧರ್ಮದ ಮುಖದಿಂದ ಉಪದಿಷ್ಟವಾದ ಒಂದು ಇತಿಹಾಸವನ್ನು ಕೇಳು. ಅದು ಪುತ್ರದಾಯಕ.

ರಾಜಾ ಪ್ರಿಯವ್ರತ ಸ್ವಾಯಂಭುವ ಮನುವಿನ ಪುತ್ರ. ಮಹಾಯೋಗಿ. ತಪಸ್ಸಿನಲ್ಲಿ ಆಸಕ್ತನಾಗಿದ್ದು ವಿವಾಹ ಮಾಡಿಕೊಳ್ಳಲು ಒಪ್ಪಲಿಲ್ಲ. ಕೊನೆಯಲ್ಲಿ ಬ್ರಹ್ಮನ ಆಜ್ಞೆ-ಯಂತೆ ವಿವಾಹವಾದರೂ ಪುತ್ರ ಜನಿಸಲಿಲ್ಲ. ಕಶ್ಯಪಮುನಿ ಅವನಿಂದ ಪುತ್ರೇಷ್ಟಿ ಮಾಡಿಸಿದ. ಯಾಗದ ಹವಿಷ್ಯಾನ್ನವನ್ನು ಮುನಿ ರಾಣಿ ಮಾಲಿನೀ ದೇವಿಗೆ ಕೊಟ್ಟ. ಅದರಿಂದ ಆಕೆ ಗರ್ಭ ಧರಿಸಿದಳು. ಹನ್ನೆರಡು ವರ್ಷಗಳಾದ ಬಳಿಕ ಒಬ್ಬ ಮಗನಿಗೆ ಜನ್ಮವಿತ್ತಳು. ಆತ ಬಂಗಾರದಂತೆ ಹೊಳೆಯುತ್ತಿದ್ದ. ಎಲ್ಲ ಅವಯವಗಳಿಂದಲೂ ಯುಕ್ತನಾಗಿದ್ದ. ಆದರೆ ಹುಟ್ಟುತ್ತಲೆ ಮೃತನಾಗಿದ್ದ. ಕಣ್ಣುಗುಡ್ಡೆ ಮೇಲ್ಮುಖವಾಗಿತ್ತು. ಎಲ್ಲ ಸ್ತ್ರೀಯರೂ ಅತ್ತರು. ತಾಯಿ ಪುತ್ರಶೋಕದಿಂದ ಮೂರ್ಛೆ ಹೊಂದಿದಳು. ರಾಜ ಮಗನನ್ನು ಹೊತ್ತು ಸ್ಮಶಾನಕ್ಕೆ ಹೊರಟ. ಆದರೆ ಪುತ್ರಶೋಕವನ್ನು ತಡೆಯಲಾಗಲಿಲ್ಲ. ಎದೆಗೆ ತಬ್ಬಿಕೊಂಡು ಅಳತೊಡಗಿದ. ಪ್ರಾಣತ್ಯಾಗ ಮಾಡಲು ಉದ್ಯುಕ್ತನಾದ. ದಾರುಣಪುತ್ರ ಶೋಕ ಅವನ ಜ್ಞಾನವನ್ನೆಲ್ಲ ಮರೆಮಾಡಿತ್ತು. ಆಗ ಒಂದು ವಿಮಾನ ಕಂಡುಬಂದಿತು. ಶುದ್ಧಸ್ಫಟಿಕದಂತೆ ಹೊಳೆವ ರತ್ನಖಚಿತವಾದ ಹೂಮಾಲೆಗಳಿಂದ ಸಿಂಗರಿಸಲ್ಪಟ್ಟ ವಿಮಾನ. ಅದರಲ್ಲಿ ಬಿಳಿಸಂಪಿಗೆಯಂಥ ಮೈಬಣ್ಣದ ಮನೋಹರ-ಳಾದ ಒಬ್ಬ ದೇವಿ ಇದ್ದಳು. ಅವಳನ್ನು ಕಂಡು ರಾಜ ಮಗುವನ್ನು ಕೆಳಗಿಟ್ಟು ಭಕ್ತಿಯಿಂದ ಸ್ತೋತ್ರ ಮಾಡಿದ, 'ಸುಂದರಿ, ನೀನಾರು ? ಯಾರ ಪತ್ನಿ, ಯಾರ ಪುತ್ರಿ ?' ಎಂದು ಕೇಳಿದ. ಅವಳು ವಸ್ತುತಃ ದೇವಸೇನೆ. ದೈತ್ಯರಿಂದ ಭೀತರಾದ ದೇವತೆಗಳ ಸೇನೆಗೆ ಅಧಿಷ್ಠಾತ್ರಿಯಾಗಿ ದೇವತೆಗಳಿಗೆ ಜಯ ನೀಡಿದವಳು. ಅದರಿಂದ ದೇವಸೇನೆ ಎಂದು ಹೆಸರು. ಆದ್ದರಿಂದ ಅವಳು ರಾಜನಿಗೆ ಹೀಗೆ ಹೇಳಿದಳು-

'ನಾನು ಬ್ರಹ್ಮನ ಮಾನಸಪುತ್ರಿ, ದೇವಸೇನೆ. ನನ್ನನ್ನು ಬ್ರಹ್ಮಮನಸ್ಸಿನಿಂದ ಸೃಜಿಸಿ ಷಣ್ಮುಖನಿಗೆ ನೀಡಿದ. ಷಣ್ಮುಖನ ಪತ್ನಿಯಾಗಿ ಮಾತೃಕೆಯರಲ್ಲಿ ಒಬ್ಬಳಾಗಿ ಪ್ರಸಿದ್ಧಳಾಗಿದ್ದೇನೆ. ಪ್ರಕೃತಿದೇವಿಯ ಆರನೆ ಒಂದಂಶಳಾಗಿರುವುದರಿಂದ ಷಷ್ಠೀ ದೇವಿ ಎಂದೂ ನನಗೆ ಹೆಸರು. ನಾನು ಅಪುತ್ರರಿಗೆ ಪುತ್ರನನ್ನೂ ಅಪತ್ನೀಕರಿಗೆ ಪತ್ನಿಯನ್ನು ದರಿದ್ರರಿಗೆ ಧನವನ್ನೂ ಕೊಡುತ್ತೇನೆ. ಕರ್ಮಿಗಳಿಂದ ಶುಭಕರ್ಮವನ್ನು ಮಾಡಿಸುತ್ತೇನೆ.

ಸಂಪತ್ತು ವಿಪತ್ತುಗಳನ್ನು ಹೊಂದುವುದು, ಸುಖದುಃಖ ಭಯ ಶೋಕ ಹರ್ಷ-ಮಂಗಲಗಳನ್ನು ಹೊಂದುವುದು, ಬಹುಪುತ್ರವಂತನೆನಿಸುವುದು ವಂಶಹೀನನೆನಿಸು-ವುದು, ಸುಂದರನಾಗುವುದು, ರೋಗಿಯಾಗುವುದು, ಗುಣಶಾಲಿಯಾಗುವುದು ಅಂಗವಿಕಲನಾಗುವುದು ಎಲ್ಲವೂ ಕರ್ಮದಿಂದ. ಆದ್ದರಿಂದ ಎಲ್ಲಕ್ಕಿಂತ ಕರ್ಮ-ಪ್ರಬಲ. ಕರ್ಮಗಳ ಮೂಲಕ ಆಯಾಫಲ ನೀಡುವವ ಕರ್ಮರೂಪಿ ಹರಿ.'

ಹೀಗೆ ಹೇಳಿ ದೇವಿ ಮೃತಶಿಶುವನ್ನು ಎತ್ತಿ ಬದುಕಿಸಿಕೊಟ್ಟಳು. 'ರಾಜನೆ, ನೀನು ಸ್ವಾಯಂಭುವ ಮನುವಿನ ಪುತ್ರ. ಮೂಲೋಕಕ್ಕೆ ರಾಜ. ಎಲ್ಲೆಡೆ ನನ್ನ ಪೂಜೆ ಮಾಡಿಸು. ನಿನಗೆ ಈ ಮಗನನ್ನು ನೀಡುತ್ತಿದ್ದೇನೆ. ಈತ ಸುವ್ರತ ಎಂಬ ಹೆಸರಿನಿಂದ ಖ್ಯಾತನಾಗುತ್ತಾನೆ. ನಾರಾಯಣನ ಅಂಶ ಇವನಲ್ಲಿದೆ. ಗುಣವಂತ ಪಂಡಿತ ಯೋಗಿ-ಯಾಗಿ ನೂರುಯಾಗಗಳನ್ನು ಮಾಡಿ ಲಕ್ಷ ಆನೆಗಳ ಬಲ ಉಳ್ಳವನಾಗಿ, ಬಿಲ್ಲುಗಾರ-ನಾಗಿ, ಮಹಾದಾನಿಯಾಗಿ, ಯಶಸ್ಸನ್ನು ಸಂಪಾದಿಸುತ್ತಾನೆ.' ಹೀಗೆ ಹೇಳಿ ಮಗುವನ್ನು ರಾಜನ ಕೈಗಿತ್ತು ಸ್ವರ್ಗಕ್ಕೆ ತೆರಳಿದಳು.

ರಾಜ ಸಂತುಷ್ಟನಾಗಿ ಎಲ್ಲ ವೃತ್ತಾಂತವನ್ನು ಅರಮನೆಯಲ್ಲಿ ಹೇಳಿದಾಗ ನರನಾರಿ-ಯರೆಲ್ಲರೂ ಸಂತುಷ್ಟರಾದರು. ರಾಜ ಮಂಗಳಕಾಯಕ ಮಾಡಿಸಿದ. ಷಷ್ಠೀದೇವಿ-ಯನ್ನು ಪೂಜಿಸಿ ಬ್ರಾಹ್ಮಣರಿಗೆ ದಾನ ಮಾಡಿದ. ಪ್ರತಿತಿಂಗಳಲ್ಲಿ ಶುಕ್ಲಪಕ್ಷದ ಷಷ್ಠೀ ದಿನ ಷಷ್ಠೀದೇವಿಯ ಉತ್ಸವ ಮಾಡಿಸಿದ. ಶಿಶು ಜನನವಾದ ಆರನೆ ದಿನವೂ ಇಪ್ಪತ್ತೊಂದನೆ ದಿನವೂ ಷಷ್ಠೀದೇವಿಯ ಪೂಜೆಯಾಗಬೇಕೆಂದು ವಿಧಿಸಿದ. ಬಾಲಕರಿಗೆ ನಡೆಯುವ ಅನ್ನಪ್ರಾಶನಾದಿ ಶುಭಕಾರ್ಯದಲ್ಲಿಯೂ ದೇವಿಯ ಪೂಜೆ ಎಲ್ಲೆಡೆ ಮಾಡಿಸಿದ.

ನಾರದ, ಷಷ್ಠೀದೇವಿಯ ಧ್ಯಾನ ಪೂಜಾಕ್ರಮ ಸ್ತೋತ್ರಗಳನ್ನೂ ಹೇಳುತ್ತೇನೆ ಕೇಳು. ಕೌಥುಮಶಾಖೋಕ್ತವಾಗಿದ್ದು ಧರ್ಮನಿಂದ ಅದನ್ನು ನಾನು ಉಪದೇಶ ಪಡೆದಿದ್ದೇನೆ.

ಶಾಲಗ್ರಾಮದಲ್ಲಿಯಾಗಲಿ ಕಲಶದಲ್ಲಿಯಾಗಲಿ ಆಲದ ಮರದ ಬುಡದಲ್ಲಾಗಲಿ ದೇವಿಯನ್ನು ಪೂಜಿಸಬಹುದು. ಗೋಡೆಯಲ್ಲಿ ವಿಗ್ರಹವನ್ನು ಮಾಡಿಯೂ ಪೂಜಿಸ-ಬಹುದು.

ಷಷ್ಠಾಂಶಾಂ ಪ್ರಕೃತೇಃ ಶುದ್ಧಾಂ ಸುಪ್ರತಿಷ್ಠಾಂ ಚ ಸುವ್ರತಾಂ ।
ಸುಪುತ್ರದಾಂ ಚ ಶುಭದಾಂ ದಯಾರೂಪಾಂ ಜಗತ್ಪ್ರಸೂಂ ॥

ಶ್ವೇತಚಂಪಕವರ್ಣಾಭಾಂ ರತ್ನಭೂಷಣ ಭೂಷಿತಾಂ ।
ಪವಿತ್ರರೂಪಾಂ ಪರಮಾಂ ದೇವಸೇನಾಂ ಪರಾಂ ಭಜೇ ॥

'ಪ್ರಕೃತಿಯ ಆರನೆ ಅಂಶದವಳು, ಶುದ್ಧಳು, ಒಳ್ಳೆಯ ಪ್ರತಿಷ್ಠಿತಳು, ಸುವ್ರತಳು, ಸುಪುತ್ರರನ್ನು ನೀಡುವವಳು, ಮಂಗಳದಾಯಕಳು, ದಯಾಶೀಲಳು, ಜಗನ್ಮಾತೆ, ಬಿಳಿ ಸಂಪಿಗೆಯಂಥ ಮೈಬಣ್ಣದವಳು, ರತ್ನಾಭರಣ ಭೂಷಿತಳು ಪವಿತ್ರಳಾದವಳು, ಇಂಥ ಶ್ರೇಷ್ಠ ದೇವಿಯಾದ ದೇವಸೇನೆಯನ್ನು ಆರಾಧಿಸುತ್ತೇನೆ.'

ಹೀಗೆ ಧ್ಯಾನ ಮಾಡಿ ಪಾದ್ಯ ಅರ್ಘ್ಯ ಆಚಮನ ಗಂಧ ಧೂಪ ದೀಪಾದಿಗಳನ್ನೂ ನೈವೇದ್ಯವನ್ನೂ ಮೂಲಮಂತ್ರದಿಂದ ಅರ್ಪಿಸಬೇಕು. ಮಂತ್ರ ಹೀಗಿದೆ.

'ಓಂ ಹ್ರೀಂ ಷಷ್ಠೀ ದೇವ್ಯೈ ಸ್ವಾಹಾ'

ಈ ಅಷ್ಟಾಕ್ಷರ ಮಹಾಮಂತ್ರವನ್ನು ಯಥಾಶಕ್ತಿ ಜಪಿಸಬೇಕು. ಬಳಿಕ ಸಾಮ-ವೇದೋಕ್ತವಾದ ಸ್ತೋತ್ರದಿಂದ ಸ್ತುತಿಸಿ ಭಕ್ತಿಯಿಂದ ನಮಿಸಬೇಕು. ಧನ ಪುತ್ರ-ಫಲವನ್ನು ನೀಡುವಂತಹುದು ಈ ಸ್ತೋತ್ರ. ಮಂತ್ರವೂ ಒಂದು ಲಕ್ಷ ಜಪಿಸಿದರೆ ನಿಶ್ಚಯವಾಗಿ ಪುತ್ರನನ್ನು ಕೊಡುತ್ತದೆ ಎಂದು ಬ್ರಹ್ಮ ಹೇಳುತ್ತಾನೆ. ಸರ್ವಾಭೀಷ್ಟ-ದಾಯಕವಾದ ಸ್ತೋತ್ರ ಹೀಗಿದೆ—

'ಷಷ್ಠೀದೇವಿ, ನಿನಗೆ ನಮಸ್ಕಾರ. ನೀನು ಸಿದ್ಧಿ ಶಾಂತಿ ಸ್ವರೂಪಳಾದ ಮಹಾದೇವಿ. ದೇವಸೇನೆಯೆಂದು ಪ್ರಸಿದ್ಧಳು. ಪುತ್ರಸಂಪತ್ತು, ಧನ ಸುಖ ಮೋಕ್ಷ ವರಗಳನ್ನು ನೀಡುವವಳು, ಪ್ರಕೃತಿಯ ಆರನೆ ಅಂಶಭೂತಳು, ಮಾಯಾರೂಪಳು, ಸಿದ್ಧಯೋಗಿನಿ, ಸಂಸಾರದಿಂದ ಪಾರುಗಾಣಿಸುವವಳು, ಕರ್ಮಗಳನ್ನು ಪೂರ್ತಿ ಮಾಡಿಸುವವಳು, ಎಲ್ಲ ಕರ್ಮಗಳಲ್ಲಿ ಪೂಜ್ಯಳು, ಷಣ್ಮುಖನ ಪತ್ನಿ, ದೇವತೆಗಳ ರಕ್ಷಕಳು, ಶುದ್ಧ ಸತ್ವರೂಪಳು, ಹಿಂಸಾಕ್ರೋಧವರ್ಜಿತಳು, ನೀನು ನನಗೆ ಹೆಂಡತಿ ಮಕ್ಕಳು ಸಂಪತ್ತು ಧರ್ಮ ಯಶಸ್ಸು ಭೂಮಿ ಪ್ರಜೆ ವಿದ್ಯೆ ಕಲ್ಯಾಣಗಳನ್ನು ನೀಡು.'

ಪ್ರಿಯವ್ರತ ಮಹಾರಾಜ ಈ ಸ್ತೋತ್ರದಿಂದ ದೇವಿಯನ್ನು ಕೊಂಡಾಡಿ ಪುತ್ರವರವನ್ನು ಪಡೆದ. ಒಂದು ವರ್ಷಕಾಲ ಈ ಸ್ತೋತ್ರ ಪಠಿಸಿದರೆ ಪುತ್ರರಿಲ್ಲದವರು ದೀರ್ಘಾಯುಷ್ಯವಂತನಾದ ಗುಣಶಾಲಿಯಾದ ಸತ್ಪುತ್ರನನ್ನು ಪಡೆಯುವರು. ಬಂಜೆಯರು ಸುಪುತ್ರವತಿಯರಾಗುವರು. ಒಬ್ಬನೆ ಮಗನನ್ನು ಪಡೆದವಳು, ಎಲ್ಲ ಮಕ್ಕಳನ್ನು ಕಳೆದುಕೊಂಡವಳೂ ಈ ಸ್ತೋತ್ರವನ್ನು ಒಂದು ವರ್ಷ ಶ್ರವಣ ಮಾಡಿದರೆ ಸುಪುತ್ರವತಿಯಾಗುವಳು.

ಶಿಶು ರೋಗಗ್ರಸ್ತವಾದರೆ ತಂದೆತಾಯಿಗಳು ಒಂದು ತಿಂಗಳ ಕಾಲ ಈ ಸ್ತೋತ್ರ-ಶ್ರವಣಮಾಡಬೇಕು. ದೇವಿಯ ಅನುಗ್ರಹದಿಂದ ಶಿಶು ರೋಗದಿಂದ ಬಿಡುಗಡೆ ಹೊಂದುವುದು.

**ಇಲ್ಲಿಗೆ ಶ್ರೀ ಬ್ರಹ್ಮವೈವರ್ತ ಮಹಾಪುರಾಣದಲ್ಲಿ ಎರಡನೆಯದಾದ ಪ್ರಕೃತಿಖಂಡದ ನಾರದನಾರಾಯಣ ಸಂವಾದದಲ್ಲಿ ಷಷ್ಠ್ಯುಪಾಖ್ಯಾನದಲ್ಲಿ ಷಷ್ಠೀದೇವಿಯ ಉತ್ಪತ್ತಿ ತತ್ಪೂಜಾಸ್ತೋತ್ರಾದಿಕಥನವೆಂಬ ನಲವತ್ತಮೂರನೆ ಅಧ್ಯಾಯ ಮುಗಿಯಿತು.**

# ಮಂಗಳ ಚಂಡೀಚರಿತ್ರ, ಪೂಜಾಸ್ತೋತ್ರಾದಿ ಕಥನ

## ಅಧ್ಯಾಯ-೪೪

ನಾರಾಯಣ— ಷಷ್ಠೀದೇವಿಯ ಕಥೆಯನ್ನು ಹೇಳಿದ್ದೇನೆ. ಇನ್ನು ಮುಂದೆ ಮಂಗಳ ಚಂಡೀ ದೇವಿಯ ಕಥೆಯನ್ನು ಹೇಳುತ್ತೇನೆ. ಅವಳ ಪೂಜಾದಿಗಳನ್ನೂ ಹೇಳುತ್ತೇನೆ. ಧರ್ಮನ ಮುಖದಿಂದ ಎಲ್ಲವನ್ನೂ ನಾನು ತಿಳಿದಿದ್ದೇನೆ. ಅದು ಶ್ರುತಿಸಮ್ಮತ. ಎಲ್ಲ ಜ್ಞಾನಿಗಳಿಗೂ ಸಮ್ಮತ.

ಶತ್ರುಗಳ ನಡುವೆ ರೋಷಗೊಂಡು ತಿರುಗುವುದರಿಂದ ದೇವಿ ಚಂಡಿಕಾ ಎಂದೂ ಮಂಗಳ ಉಂಟುಮಾಡುವುದರಿಂದ ಮಂಗಳಾ ಎಂದೂ ಕರೆಸಿಕೊಳ್ಳುತ್ತಾಳೆ. ಅದರಿಂದ ಮಂಗಳಚಂಡಿಕಾ ಎಂದು ಹೆಸರು.

ಅಥವಾ ಚಂಡೀ ಎಂದರೆ ದುರ್ಗೆ. ಮಂಗಲ ಎಂದರೆ ಮಂಗಳಗ್ರಹ. ಮಂಗಳ-ಗ್ರಹನಿಗೆ ಅಭೀಷ್ಟಳಾದ ದೇವಿಯಾದ್ದರಿಂದ ಮಂಗಳಚಂಡಿಕಾ.

ಅಥವಾ ಮಂಗಲ ಎಂದರೆ ಮನುವಂಶದಲ್ಲಿ ಜನಿಸಿ ಸಪ್ತದ್ವೀಪಯುಕ್ತ ಭೂಮಂಡಲಕ್ಕೆ ಒಡೆಯನಾದ ಒಬ್ಬರಾಜ. ಅವನ ಅಭೀಷ್ಟ ದೇವತೆ ಮಂಗಳ ಚಂಡಿಕಾ.

ಮೂಲ ಪ್ರಕೃತಿಯ ಒಂದು ರೂಪವೆ ಈ ದುರ್ಗೆ. ಸ್ತ್ರೀಯರಿಗೆ ಇಷ್ಟ ದೇವತೆ.

ಮೊದಲಿಗೆ ತ್ರಿಪುರಾಸುರ ಸಂಹಾರಕಾಲದಲ್ಲಿ ಶಿವ ವಿಷ್ಣುವಿನ ಪ್ರೇರಣೆಯಿಂದ ದೇವಿಯನ್ನು ಪೂಜಿಸಿದ. ಶಿವನ ರಥ ತ್ರಿಪುರಾಸುರನ ಏಟಿಗೆ ಆಕಾಶದಿಂದ ಕೆಳಗೆ ಬೀಳತೊಡಗಿತು. ಆಗ ಬ್ರಹ್ಮ ವಿಷ್ಣುಗಳ ಉಪದೇಶದಂತೆ ಶಿವ ದೇವಿಯನ್ನು ಸ್ತುತಿಸಿದ. ದೇವಿ ಶಿವನ ಮುಂದೆ ಪ್ರಾದುರ್ಭವಿಸಿ ಅಭಯ ನೀಡಿದಳು.

''ಶಿವ, ಭಯಪಡಬೇಡ. ಕೃಷ್ಣಪರಮಾತ್ಮ ವೃಷಭರೂಪನಾಗಿ ನಿನ್ನ ರಥವನ್ನು ಧರಿಸುತ್ತಾನೆ. ನಾನು ಯುದ್ಧಶಕ್ತಿರೂಪಳಾಗಿ ನಿನ್ನಲ್ಲಿ ಆವೇಶಗೊಳ್ಳುತ್ತೇನೆ. ನನ್ನ ಮತ್ತು ಹರಿಯ ಸಹಾಯದಿಂದ ನೀನು ಅಸುರನನ್ನು ಕೊಲ್ಲುವೆ' ಎಂದು ಹೇಳಿ ಅಂತರ್ಧಾನಳಾದಳು. ಶಿವನಲ್ಲಿ ಯುದ್ಧಶಕ್ತಿಯಾಗಿ ನಿಂತಳು. ಶಿವ ವಿಷ್ಣುದತ್ತವಾದ ಬಾಣದಿಂದ ದೈತ್ಯನನ್ನು ಕೊಂದ. ಎಲ್ಲ ದೇವತೆಗಳೂ ಋಷಿಗಳೂ ಭಕ್ತಿಯಿಂದ ಶಿವನನ್ನು ಕೊಂಡಾಡಿದರು. ಅವನ ಶಿರಸ್ಸಿಗೆ ಹೂಮಳೆಗರೆದರು. ಬ್ರಹ್ಮ ವಿಷ್ಣುಗಳು ಸಂತುಷ್ಟರಾಗಿ ಅವನನ್ನು ಶುಭವಾಗಲಿ ಎಂದು ಹರಸಿದರು.

ಶಿವ ಸ್ನಾನಮಾಡಿ ಶುಚಿಯಾಗಿ ಮಂಗಲಚಂಡಿಯನ್ನು ಪಾದ್ಯ, ಅರ್ಘ್ಯ, ಆಚಮನ, ಪುಷ್ಪ, ಗಂಧ, ನೈವೇದ್ಯ, ವಸ್ತ್ರಾಭರಣ, ಪಾಯಸ, ಪಿಷ್ಟಕ, ಮಧು,

ಸುಧಾಫಲಗಳಿಂದ ಸಂಗೀತನೃತ್ಯ ವಾದ್ಯಗಳಿಂದ ಪೂಜಿಸಿದ. ಕಾಣ್ವ ಶಾಖೋಕ್ತ ಕ್ರಮದಿಂದ ವಿದ್ಯುಕ್ತವಾಗಿ ಧ್ಯಾನಮಾಡಿ ಮೂಲಮಂತ್ರದಿಂದ ಎಲ್ಲ ಉಪಚಾರ-ಗಳನ್ನೂ ಸಲ್ಲಿಸಿದ.

**ಓಂ ಹ್ರೀಂ ಶ್ರೀಂ ಕ್ಲೀಂ ಸರ್ವಪೂಜ್ಯೇ ದೇವಿ**
**ಮಂಗಲ ಚಂಡಿಕೇ ಐಂ ಕ್ರೂಂ ಫಟ್ ಸ್ವಾಹಾ ।**

ಎಂದು ಇಪ್ಪತ್ತೊಂದು ಅಕ್ಷರಗಳ ದೇವೀ ಮೂಲಮಂತ್ರ ಕಲ್ಪವೃಕ್ಷದಂತೆ ಭಕ್ತರಿಗೆ ಸರ್ವಾಭೀಷ್ಟದಾಯಕ. ಹತ್ತು ಲಕ್ಷ ಜಪಿಸಿದ ಮಾತ್ರಕ್ಕೆ ಮಂತ್ರಸಿದ್ಧಿಯಾಗುವುದು ಮಂತ್ರ ಸಿದ್ಧವಾಯಿತೆಂದರೆ ವಿಷ್ಣು ಸರ್ವಾಭೀಷ್ಟಗಳನ್ನು ನೀಡುತ್ತಾನೆ.

ಇನ್ನು ಮಂಗಲಚಂಡೀಧ್ಯಾನವನ್ನು ಹೇಳುತ್ತೇನೆ ಕೇಳು. ಅದು ವೇದೋಕ್ತ ಸಕಲ ಜ್ಞಾನಿಗಳಿಗೆ ಸಮ್ಮತ.

**ದೇವೀಂ ಷೋಡಶ ವರ್ಷೀಯಾಂ ರಮ್ಯಾಂ ಸುಸ್ಥಿರ ಯೌವನಾಂ ।**
**ಸರ್ವರೂಪಗುಣಾಢ್ಯಾಂ ಚ ಕೋಮಲಾಂಗೀಂ ಮನೋಹರಾಂ ।**
**ಶ್ವೇತಚಂಪಕ ವರ್ಣಾಭಾಂ ಚಂದ್ರಕೋಟಿ ಸಮಪ್ರಭಾಂ**
**ವಹ್ನಿಶುದ್ಧಾಂಶುಕಾಧಾನಾಂ ರತ್ನಭೂಷಣ ಭೂಷಿತಾಂ**
**ಬಿಭ್ರತೀಂ ಕಬರೀಭಾರಂ ಮಾಲತೀ ಮಾಲ್ಯ ಭೂಷಿತಂ**
**ಬಿಂಬೋಷ್ಠೀಂ ಸುದತೀಂ ಶುದ್ಧಾಂ ಶರತ್ಪದ್ಮ ನಿಭಾನನಾಂ**
**ಈಷದ್ಧಾಸ್ಯ ಪ್ರಸನ್ನಾಸ್ಯಾಂ ಸುನೀಲೋತ್ಪಲ ಲೋಚನಾಂ**
**ಜಗದ್ಧಾತ್ರೀಂ ಚ ದಾತ್ರೀಂ ಚ ಸರ್ವೇಭ್ಯಃ ಸರ್ವ ಸಂಪದಾಂ**
**ಸಂಸಾರ ಸಾಗರೇ ಘೋರೇ ಪೋತರೂಪಾಂ ವರಾಂ ಭಜೇ ॥**

'ದೇವಿ ಮಂಗಲಚಂಡಿಯನ್ನು ಆರಾಧಿಸುತ್ತೇನೆ. ಹದಿನಾರು ವಯಸ್ಸಿನಂತೆ ಕಾಣುವ ಸ್ಥಿರ ಯೌವನಶಾಲಿಯಾದ ರಮ್ಯ ಶರೀರ ಅವಳದು. ಸರ್ವರೂಪಗುಣ ಸಂಪನ್ನಳು. ಕೋಮಲ ಮೈಯುವಳು. ಮನ ಸೆಳೆವವಳು. ಬಿಳಿ ಸಂಪಿಗೆಯಂಥ ಮೈಬಣ್ಣ. ಕೋಟಿ ಚಂದ್ರರ ಕಾಂತಿ. ಬೆಂಕಿಯಂತೆ ಉಜ್ವಲವಾದ ಬಟ್ಟೆ ಉಟ್ಟು ರತ್ನಾಭರಣಗಳನ್ನು ತೊಟ್ಟು ಜಾಜಿ ಹೂ ಮುಡಿದುಕೊಂಡಿರುವ ದೇವಿಯ ತುಟಿಗಳು ತೊಂಡೆ ಹಣ್ಣಿನಂತೆ, ಹಲ್ಲುಗಳು ಮುತ್ತಿನಂತೆ. ಮುಖ ಶರತ್ಕಾಲದ ಕಮಲದಂತೆ. ನಸುನಗುವ ಪ್ರಸನ್ನ ಮುಖ. ನೀಲೋತ್ಪಲದಂಥ ಕಣ್ಣುಗಳು. ಜಗತ್ತನ್ನೆ ಧರಿಸುವ, ಸರ್ವರಿಗೂ ಸರ್ವಸಂಪತ್ತು ನೀಡುವ ಸಂಸಾರಸಾಗರ ದಾಟಲು ನೌಕೆಯಂತಿರುವ ಆ ದೇವಿಯನ್ನು ಆರಾಧಿಸುತ್ತೇನೆ.'

ಇದು ದೇವಿಯ ಧ್ಯಾನ. ಇನ್ನು ಸ್ತೋತ್ರವನ್ನು ಹೇಳುತ್ತೇನೆ ಕೇಳು. ಸಂಕಟದಲ್ಲಿದ್ದಾಗ ಶಿವ ಈ ಸ್ತೋತ್ರದಿಂದಲೆ ದೇವಿಯನ್ನು ಸ್ತುತಿಸಿದ್ದ-

'ದೇವಿ ಜಗನ್ಮಾತೆ, ಕಾಪಾಡು. ಮಂಗಲಚಂಡಿಕೆ, ಕಾಪಾಡು. ನೀನು ಎಲ್ಲ ಆಪತ್ತುಗಳನ್ನು ಕಳೆವವಳು. ಆನಂದ ಮಂಗಲಗಳನ್ನು ತರುವವಳು. ಮಂಗಳ ಸ್ವರೂಪಳು, ಮಂಗಲಗಳಿಗೆ ಅರ್ಹಳು. ಎಲ್ಲ ಮಂಗಲಗಳಿಗಿಂತ ಮಂಗಲಳು. ಎಲ್ಲ ಸಜ್ಜನರಿಗೂ ಮಂಗಳ ನೀಡುವವಳು, ಮಂಗಳವಾರದಲ್ಲಿ ವಿಶೇಷ ಪೂಜೆಗೊಳ್ಳುವ ಮಂಗಳ ಇಷ್ಟದೇವತೆ ನೀನು. ಮನುವಂಶದ ಮಂಗಳರಾಜನಿಂದ ಪೂಜಿತಳಾದವಳು. ಮಂಗಳಗಳಿಗೆ ಅಧಿಷ್ಠಾತ್ರಿ, ಸಂಸಾರದಲ್ಲಿ ಮಂಗಳಕ್ಕೆ ಆಧಾರಳು, ಮೋಕ್ಷದಲ್ಲಿಯೂ ಮಂಗಳ ನೀಡುವವಳು, ಮಂಗಲಾಧಾರಗಳಲ್ಲಿ ನೀನೆ ಮಿಗಿಲು. ಸರ್ವಕರ್ಮಗಳಿಂದ ಪಾರು ಮಾಡುವವಳು.'

ಈ ಸ್ತೋತ್ರದಿಂದ ಶಿವ ದೇವಿಯನ್ನು ಸ್ತೋತ್ರ ಮಾಡಿದ. ಪ್ರತಿಮಂಗಳ-ವಾರದಲ್ಲಿಯೂ ಪೂಜಿಸಿದ. ಈ ದೇವೀ ಮಂಗಳ ಸ್ತೋತ್ರವನ್ನು ಭಕ್ತಿಯಿಂದ ಕೇಳುವವನಿಗೆ ಸದಾ ಮಂಗಳ. ಅಮಂಗಳವೆಂದೂ ಇಲ್ಲ.

ಮೊದಲಬಾರಿ ಶಿವ ದೇವಿಯನ್ನು ಪೂಜಿಸಿದ. ಎರಡನೆ ಬಾರಿ ಮಂಗಲಗ್ರಹ. ಮೂರನೆಯ ಬಾರಿ ಮಂಗಳ ಮಹಾರಾಜ. ನಾಲ್ಕನೆ ಬಾರಿ ಮಂಗಳವಾರದಲ್ಲಿ ಸುಂದರಿಯರು ಪೂಜಿಸತೊಡಗಿದರು. ಐದನೆ ಬಾರಿಗೆ ಮಂಗಳಾಭಿಲಾಷಿಗಳಾದ ಎಲ್ಲ ಮಾನವರೂ ದೇವಿಯನ್ನು ಪೂಜಿಸುತ್ತಿದ್ದಾರೆ.

ದೇವಿಯ ಮಂಗಲ ಸ್ತೋತ್ರದಿಂದ ಪುತ್ರ ಪೌತ್ರರ ಸಂತತಿಯೂ ಎಲ್ಲ ಮಂಗಳಗಳೂ ದಿನೇ ದಿನೇ ವೃದ್ಧಿಯಾಗುತ್ತದೆ.

**ಇಲ್ಲಿಗೆ ಶ್ರೀ ಬ್ರಹ್ಮವೈವರ್ತ ಮಹಾಪುರಾಣದಲ್ಲಿ ಎರಡನೆಯದಾದ ಪ್ರಕೃತಿಖಂಡದ ನಾರದನಾರಾಯಣ ಸಂವಾದದಲ್ಲಿ ಮಂಗಲೋಪಾಖ್ಯಾನದಲ್ಲಿ ದೇವೀ ಸ್ತೋತ್ರಾದಿ ಕಥನವೆಂಬ ನಲವತ್ತನಾಲ್ಕನೆ ಅಧ್ಯಾಯ ಮುಗಿಯಿತು.**

# ಮನಸಾ ಉಪಾಖ್ಯಾನ, ಪೂಜಾಸ್ತೋತ್ರಾದಿ ಕಥನ

ಅಧ್ಯಾಯ-೪೫

ನಾರಾಯಣ— ನಾರದ, ಷಷ್ಠೀದೇವಿ ಮಂಗಳಚಂಡಿಕೆ ಇವರಿಬ್ಬರ ಕಥೆಯನ್ನು ಹೇಳಿದ್ದೇನೆ. ಇನ್ನುಮುಂದೆ ಧರ್ಮನು ಉಪದೇಶಿಸಿದಂತೆ ಮನಸಾದೇವಿಯ ಚರಿತ್ರೆ-ಯನ್ನು ಹೇಳುತ್ತೇನೆ.

ಭಗವತಿ ಮನಸಾದೇವಿ ಕಶ್ಯಪಮುನಿಯ ಮಾನಸಪುತ್ರಿ. ಮನಸ್ಸಿನಿಂದ ಸದಾ ಆನಂದಿಸುತ್ತಾಳೆ. ಮನಸ್ಸಿನಿಂದ ಪರಮಾತ್ಮನನ್ನು ಧ್ಯಾನಿಸುತ್ತಾಳೆ. ಹೀಗೆ ಅನೇಕ ಕಾರಣಗಳಿಂದ ಮನಸಾದೇವಿಯೆನಿಸಿದಳು.

ದೇವಿ ಆತ್ಮಾರಾಮಳಾಗಿ ಸಿದ್ಧಯೋಗಿನಿಯಾಗಿ ಮೂರು ಯುಗಕಾಲ ಕೃಷ್ಣನನ್ನು ಕುರಿತು ತಪಸ್ಸು ಮಾಡಿ ವೃದ್ಧಳಾದ್ದರಿಂದ 'ಜರತ್' ಮುದಿಯಾದ 'ಕಾರು' ಶರೀರ ಉಳ್ಳವಳೆಂಬ ಅಭಿಪ್ರಾಯದಿಂದ ಕೃಷ್ಣ ಅವಳಿಗೆ ಜರತ್ಕಾರು ಎಂದು ಹೆಸರಿಟ್ಟ. ಸ್ವರ್ಗಲೋಕ ನಾಗಲೋಕ ಭೂಲೋಕಗಳಲ್ಲೆಲ್ಲ ಅವಳ ಪೂಜೆ ನಡೆಯುವಂತೆ ಅನುಗ್ರಹಿಸಿದ.

ಜಗತ್ತಿನಲ್ಲೆಲ್ಲ ಗೌರಿಯಾಗಿ ಮನಸೆಳೆದುದರಿಂದ ಜಗದ್ಗೌರಿ ಎನಿಸಿದಳು. ಶಿವನ ಶಿಷ್ಯಳಾದ್ದರಿಂದ ಶೈವೀ ಎನಿಸಿದಳು. ವಿಷ್ಣುಭಕ್ತೆಯಾದ್ದರಿಂದ ವೈಷ್ಣವೀ ಎನಿಸಿದಳು. ನಾಗರ ಪ್ರಾಣಗಳನ್ನು ಜನಮೇಜಯನ ಯಜ್ಞ ಸಂದರ್ಭದಲ್ಲಿ ರಕ್ಷಿಸಿದವಳಾದ್ದರಿಂದ ನಾಗೇಶ್ವರಿ ಎನಿಸಿದಳು. ವಾಸುಕಿಯ ಸೋದರಿಯಾದ್ದರಿಂದ ನಾಗಭಗಿನಿ ಎನಿಸಿದಳು. ವಿಷವನ್ನು ಪರಿಹರಿಸುವುದರಿಂದ ವಿಷಹರೀ ಎನಿಸಿದಳು. ಸಿದ್ಧವಾದ ಯೋಗವನ್ನು ಶಿವನಿಂದ ಪಡೆದು ಸಿದ್ಧಯೋಗಿನಿ ಎನಿಸಿದಳು. ಗೋಪ್ಯವಾದ ಮೃತಸಂಜೀವಿನಿ-ಯಂಥ ಮಹಾಜ್ಞಾನ ಪಡೆದು ಮಹಾಜ್ಞಾನಯುತಾ ಎನಿಸಿದಳು. ಆಸ್ತೀಕ ಮುನಿಯ ಮಾತೆಯಾದ್ದರಿಂದ ಆಸ್ತೀಕಮಾತೆ ಎನಿಸಿದಳು. ಜರತ್ಕಾರು ಮುನಿಯ ಪತ್ನಿಯಾದ್ದ-ರಿಂದ ಜರತ್ಕಾರುಪ್ರಿಯೆ ಎನಿಸಿದಳು. ಹೀಗೆ ದೇವಿಗೆ ಹನ್ನೆರಡು ಹೆಸರುಗಳು-

ಜರತ್ಕಾರುರ್ಜಗದ್‌ಗೌರೀ ಮನಸಾ ಸಿದ್ಧಯೋಗಿನೀ ।
ವೈಷ್ಣವೀ ನಾಗಭಗಿನೀ ಶೈವೀ ನಾಗೇಶ್ವರೀ ತಥಾ ॥

ಜರತ್ಕಾರು ಪ್ರಿಯಾऽऽಸ್ತೀಕಮಾತಾ ವಿಷಹರೀತಿ ಚ ।
ಮಹಾಜ್ಞಾನಯುತಾ ಚೈವ ಸಾ ದೇವೀ ವಿಶ್ವಪೂಜಿತಾ ॥

ದ್ವಾದಶೈತಾನಿ ನಾಮಾನಿ ಪೂಜಾಕಾಲೇ ಚ ಯಃ ಪಠೇತ್ ।
ತಸ್ಯ ನಾಗಭಯಂ ನಾಸ್ತಿ ತಸ್ಯ ವಂಶೋದ್ಭವಸ್ಯ ಚ ॥

ದೇವಿಯ ದ್ವಾದಶನಾಮಗಳನ್ನು ಪೂಜಾಕಾಲದಲ್ಲಿ ಪಠಿಸಿದರೆ ಅವನಿಗೂ ಅವನ ವಂಶದವರಿಗೂ ನಾಗಭಯವಿಲ್ಲ. ಹಾಸಿಗೆಯಲ್ಲಿ ಹಾವು ಬಂದಿದ್ದರೂ, ಮನೆಯೊಳಗೆ ಹಾವು ಸೇರಿಕೊಂಡಿದ್ದರೂ, ಹಾವು ಕಡಿದಿದ್ದರೂ, ಹಾವಿನಿಂದ ಒಂದು ಪ್ರದೇಶ ದುರ್ಗಮವೆನಿಸಿದಾಗಲೂ ಶರೀರವನ್ನು ಹಾವು ಸುತ್ತಿಕೊಂಡಾಗಲೂ ಈ ಸ್ತೋತ್ರ ಪಠಿಸಿದರೆ ಭಯದಿಂದ ಮುಕ್ತನಾಗುತ್ತಾನೆ. ನಿತ್ಯ ಪಠಿಸಿದರೆ ಅವನನ್ನು ನೋಡಿದ ಮಾತ್ರಕ್ಕೆ ಹಾವಿನ ಜಾತಿಯೆ ದೂರ ಪಲಾಯನ ಮಾಡುತ್ತದೆ. ಹತ್ತುಲಕ್ಷ ಜಪಿಸಿದರೆ ಸ್ತೋತ್ರಸಿದ್ಧಿ ಉಂಟಾಗುತ್ತದೆ. ಸ್ತೋತ್ರ ಸಿದ್ಧವಾದರೆ ಅವನು ವಿಷವನ್ನೂ ತಿಂದು ಅರಗಿಸಿಕೊಳ್ಳಬಲ್ಲ. ಹಾವುಗಳನ್ನು ಭೂಷಣವಾಗಿ ತೊಡಬಲ್ಲ. ಹಾವನ್ನೆ ವಾಹನ ಆಸನ ಶಯನವನ್ನಾಗಿ ಮಾಡಿಕೊಂಡು ಮಹಾಸಿದ್ಧಿಪುರುಷನೆನಿಸಬಲ್ಲ.

**ಇಲ್ಲಿಗೆ ಶ್ರೀ ಬ್ರಹ್ಮವೈವರ್ತ ಮಹಾಪುರಾಣದಲ್ಲಿ ಎರಡನೆಯದಾದ ಪ್ರಕೃತಿಖಂಡದ ನಾರದನಾರಾಯಣ ಸಂವಾದದಲ್ಲಿ ಮನಸೋಪಾಖ್ಯಾನದಲ್ಲಿ ಮನಸಾ ಸ್ತೋತ್ರಾದಿ ಕಥನವೆಂಬ ನಲವತ್ತೈದನೆ ಅಧ್ಯಾಯ ಮುಗಿಯಿತು.**

## ಅಧ್ಯಾಯ-೪೬

## ಮನಸಾಜರತ್ಕಾರು ದಂಪತಿಗಳಿಂದ ಆಸ್ತೀಕ ಜನಮೇಜಯನ ಸರ್ಪಯಾಗವನ್ನು ತಡೆದು ಮನಸಾನನ್ನು ಪೂಜಿಸಿದ ಇಂದ್ರನನ್ನು ಉಳಿಸಿದ

ನಾರಾಯಣ— ನಾರದ, ಸಾಮವೇದೋಕ್ತ ಕ್ರಮದಿಂದ ಮನಸಾ ದೇವಿಯ ಪೂಜೆ ಸ್ತೋತ್ರ ಧ್ಯಾನಗಳನ್ನು ತಿಳಿಸುತ್ತೇನೆ, ಕೇಳು.

ಶ್ವೇತಚಂಪಕವರ್ಣಾಭಾಂ ರತ್ನಭೂಷಣ ಭೂಷಿಯಾಂ ।
ವಹ್ನಿಶುದ್ಧಾಂಶುಕಾಧಾನಾಂ ನಾಗಯಜ್ಞೋಪವೀತಿನೀಂ ॥

ಮಹಾಜ್ಞಾನಯುತಾಂ ಚೈವ ಪ್ರವರಾಂ ಜ್ಞಾನಿನಾಂ ಸತಾಂ
ಸಿದ್ಧಾಧಿಷ್ಠಾತ್ರ ದೇವೀಂ ಚ ಸಿದ್ಧಾಂ ಸಿದ್ಧಿಪ್ರದಾಂ ಭಜೇ ॥

'ಬಿಳಿ ಸಂಪಿಗೆಯಂಥ ಮೈ ಬಣ್ಣದವಳು, ರತ್ನಾಭರಣ ಭೂಷಿತಳು, ಬೆಂಕಿಯಂತೆ ಉಜ್ವಲ ವಸ್ತ್ರ ಧರಿಸಿದವಳು, ಹಾವನ್ನು ಯಜ್ಞೋಪವೀತ ಮಾಡಿಕೊಂಡವಳು, ಮಹಾಜ್ಞಾನಯುತಳು, ಒಳ್ಳೆಯ ಜ್ಞಾನಿಗಳಲ್ಲೆಲ್ಲ ಶ್ರೇಷ್ಠಳು, ಸಿದ್ಧರಿಗೆ ಅಧಿಷ್ಠಾತ್ರಿ, ಸಿದ್ಧಿದಾಯಕಳು, ಸಿದ್ಧಿ ಹೊಂದಿದವಳು ಇಂಥ ಮನಸಾದೇವಿಯನ್ನು ಆರಾಧಿಸುವೆನು.'

ಹೀಗೆ ಧ್ಯಾನಿಸಿ ಮೂಲಮಂತ್ರದಿಂದ ಗಂಧ ಪುಷ್ಪ ಧೂಪ ದೀಪ ನೈವೇದ್ಯಗಳಿತ್ತು ಪೂಜಿಸಬೇಕು. ದ್ವಾದಶಾಕ್ಷರ ಮೂಲಮಂತ್ರ ವೇದೋಕ್ತವಾಗಿದೆ. ಭಕ್ತರಿಗೆ ಅಭೀಷ್ಟ-ದಾಯಕವಾಗಿದ್ದು ಮೂಲಕಲ್ಪವೃಕ್ಷವೆಂದೆ ಪ್ರಸಿದ್ಧವಾಗಿದೆ.

'ಓಂ ಹ್ರೀಂ ಶ್ರೀಂ ಕ್ಲೀಂ ಐಂ ಮನಸಾದೇವ್ಯೈ ಸ್ವಾಹಾ'

ಈ ಮಂತ್ರವನ್ನು ಐದು ಲಕ್ಷ ಜಪಿಸಿದರೆ ಸಿದ್ಧಿಯಾಗುವುದು. ಮಂತ್ರ ಸಿದ್ಧವಾದರೆ ವಿಷ ಅಮೃತ ತುಲ್ಯವಾಗುವುದು. ಸ್ವಯಂ ಧನ್ವಂತರಿಗೆ ಸಮಾನನಾದ ವೈದ್ಯ-ನಾಗುವನು.

ಆಷಾಢ ಮಾಸದ ಸಂಕ್ರಮಣ ದಿನದಲ್ಲಿ ಕಬ್ಬಿನ ಜಲ್ಲೆಗಳಲ್ಲಿ ದೇವಿಯನ್ನು ಆವಾಹಿಸಿ ಆ ಮಾಸ ಪೂರ್ತಿ ಭಕ್ತಿಯಿಂದ ಪೂಜಿಸಬೇಕು. ಮತ್ತು ಮನಸಾ ಪಂಚಮಿಯಂದು ದೇವಿಗೆ ಪೂಜೆಯನ್ನರ್ಪಿಸಬೇಕು. ಅದರಿಂದ ಧನ ಪುತ್ರಸಂಪತ್ತು ಕೀರ್ತಿಗಳು ಲಭಿಸುವುವು.

ಇನ್ನುಮುಂದೆ ದೇವಿಯ ಉಪಾಖ್ಯಾನವನ್ನು ಹೇಳುತ್ತೇನೆ, ಕೇಳು— ಹಿಂದೆ ಭೂಲೋಕದಲ್ಲಿ ಮಾನವರು ನಾಗಭಯದಿಂದ ಪೀಡಿತರಾದರು. ಹಾವುಗಳ ಕಡಿತಕ್ಕೆ ಸಿಲುಕಿದವರಾರೂ ಬದುಕಿ ಉಳಿಯುತ್ತಿರಲಿಲ್ಲ. ಮಾನವಕುಲವೆ ನಾಶವಾದೀತೆಂದು ಭಯದಿಂದ ಕಶ್ಯಪರು ಬ್ರಹ್ಮನಾಜ್ಞೆಯಂತೆ ವೇದ ಬೀಜಾನುಸಾರವಾಗಿ ಮಂತ್ರಗಳನ್ನು ಸೃಜಿಸಿದ. ಆ ಮಂತ್ರಗಳಿಗೆ ಅಧಿಷ್ಠಾತ್ರಿಯಾಗಿ ಮನಸಾದೇವಿಯನ್ನು ಮನಸ್ಸಿನಿಂದ ಬ್ರಹ್ಮ ಸೃಜಿಸಿದ. ದೇವಿ ಶಿವಲೋಕಕ್ಕೆ ಹೋಗಿ ಸಾವಿರ ದಿವ್ಯವರ್ಷಕಾಲ ಶಿವನನ್ನು ಆರಾಧಿಸಿದಳು. ಆಶುತೋಷನಾದ ಆ ಮಹೇಶ ಮಹಾಜ್ಞಾನವಿತ್ತು ಸಾಮವೇದವನ್ನು ಉಪದೇಶಿಸಿ ಕಲ್ಪವೃಕ್ಷದಂಥ ಅಷ್ಟಾಕ್ಷರ ಕೃಷ್ಣಮಂತ್ರವನ್ನೂ ಉಪದೇಶಿಸಿದ. ಆ ಮಂತ್ರ ಹೀಗಿದೆ-

'ಶ್ರೀಂ ಹ್ರೀಂ ಕ್ಲೀಂ ಕೃಷ್ಣಾಯ ನಮಃ'

ಕೃಷ್ಣಕವಚ ಸ್ತೋತ್ರ ಧ್ಯಾನ ಪುರಶ್ಚರಣ ಇವೆಲ್ಲವನ್ನೂ ಶಿವನಿಂದ ಉಪದೇಶ ಪಡೆದು ಅವನ ಅನುಜ್ಞೆಯಿಂದ ಪುಷ್ಕರದಲ್ಲಿ ಮೂರು ಯುಗಗಳ ಕಾಲ ತಪಸ್ಸು ಮಾಡಿದಳು. ತಪಸ್ಸಿಗೆ ಒಲಿದ ಹರಿ ಆವಿರ್ಭೂತನಾಗಿ ಕೃಶಳಾದ ಆ ಬಾಲೆಯನ್ನು ತಾನೆ ಪೂಜಿಸಿ ವರನೀಡಿದ, 'ಲೋಕದಲ್ಲಿ ಎಲ್ಲೆಡೆ ಪೂಜಿತಳಾಗು' ಎಂದು. ಹೀಗೆ ಮೊದಲ ಬಾರಿಗೆ ಮನಸಾದೇವಿಯನ್ನು ಕೃಷ್ಣನೆ ಪೂಜಿಸಿದ. ಎರಡನೆ ಬಾರಿ ಶಿವ ಪೂಜಿಸಿದ. ಬಳಿಕ ಕಶ್ಯಪಮುನಿ, ದೇವತೆಗಳು, ಮನು ಮುನಿಮಾನವಾದಿಗಳೆಲ್ಲ ಪೂಜಿಸಿದರು.

ಕಶ್ಯಪರು ದೇವಿಯನ್ನು ಜರತ್ಕಾರು ಮುನಿಗೆ ಮದುವೆ ಮಾಡಿಕೊಟ್ಟರು. ಆತ ಮಹಾಯೋಗಿ. ಬಹುಕಾಲತಪಸ್ಸು ಮಾಡಿ ಬಳಲಿ ವಿಶ್ರಾಂತಿಗಾಗಿ ಪುಷ್ಕರದಲ್ಲಿ

ಒಂದು ಆಲದ ಮರದ ಕೆಳಗೆ ದೇವಿಯ ತೊಡೆಯ ಮೇಲೆ ತಲೆ ಇಟ್ಟು ಮಲಗಿದ. ನಿದ್ರಾವಸ್ಥೆಗೆ ನಿಯಾಮಕನಾದ ಭಗವಂತನನ್ನು ನೆನೆದು ನಿದ್ದೆ ಮಾಡಿದ. ಆಗ ಸೂರ್ಯ ಅಸ್ತಮಿಸಿದ. 'ಸಂಧ್ಯಾಕಾಲವಿದು, ಪತಿಗೆ ಧರ್ಮಲೋಪವಾದೀತೆಂದು' ಪತಿವ್ರತೆಯಾದ ದೇವಿ ಆಲೋಚಿಸಿದಳು. ಪ್ರಾತಃ ಸಾಯಂ ಸಂಧ್ಯೆಗಳಲ್ಲಿ ಸಂಧ್ಯೋ-ಪಾಸನೆ ಮಾಡದಿದ್ದಲ್ಲಿ ಬ್ರಹ್ಮಹತ್ಯಾದಿ ಪಾಪಗಳನ್ನು ಹೊಂದಿ ಸದಾ ಅಶುಚಿ ಎನಿಸುತ್ತಾನೆ ಎಂದು ವೇದವೆ ಹೇಳುತ್ತದೆ. ಹೀಗೆ ಆಲೋಚಿಸಿ ದೇವಿಪತಿಯನ್ನು ಎಬ್ಬಿಸಿದಳು. ಆತ ಎದ್ದು ಕೋಪಗೊಂಡು ನುಡಿದ-

'ಪತಿವ್ರತೆಯಾದ ನೀನು ನನ್ನ ನಿದ್ರಾಭಂಗವೇಕೆ ಮಾಡಿದೆ ? ಪತಿಗೆ ವಿರೋಧ-ವಾಗಿ ವರ್ತಿಸುವವಳು ಮಾಡುವ ವ್ರತಾದಿಗಳೆಲ್ಲ ವ್ಯರ್ಥ. ಪತಿಯನ್ನು ಪೂಜಿಸಿದರೆ ಕೃಷ್ಣನನ್ನು ಪೂಜಿಸಿದಂತೆ. ಪತಿವ್ರತೆಯ ವ್ರತಸಿದ್ಧಿಗಾಗಿಯೆ ಹರಿ ತಾನಾಗಿ ಪತಿರೂಪ-ದಿಂದ ಬರುತ್ತಾನೆ. ಎಲ್ಲ ದಾನ, ಯಜ್ಞ, ತೀರ್ಥಯಾತ್ರೆ, ತಪಸ್ಸು, ವ್ರತ, ಉಪವಾಸ, ಧರ್ಮಾಚರಣೆ, ಸತ್ಯ, ದೇವಪೂಜೆಗಳೂ ಪತಿಸೇವೆಯ ಹದಿನಾರನೆ ಒಂದಂಶಕ್ಕೆ ಸಮವಾಗವು. ಪುಣ್ಯಕರವಾದ ಭಾರತ ಭೂಮಿಯಲ್ಲಿ ಪತಿಸೇವೆ ಮಾಡುವ ಸ್ತ್ರೀ ಪತಿಯೊಂದಿಗೇ ವೈಕುಂಠವನ್ನು ಸೇರುವಳು. ಪತಿಗೆ ವಿರೋಧವಾಗಿ ನಡೆದರೆ ನುಡಿದರೆ ಚಂದ್ರಸೂರ್ಯರಿರುವಷ್ಟು ಕಾಲ ಕುಂಭೀಪಾಕ ನರಕ. ಬಳಿಕ ಪತಿಪುತ್ರ ವರ್ಜಿತಳಾದ ಚಂಡಾಲಿಯಾಗಿ ಜನಿಸುವಳು.'

ಹೀಗೆ ಹೇಳುತ್ತ ಮುನಿ ಶಾಪಕೊಡಲು ಉದ್ಯುಕ್ತನಾದ. ಮನಸಾದೇವಿ ಭಯ-ದಿಂದ ನುಡಿದಳು— 'ಪತಿದೇವ, ನಾನು ನಿನ್ನ ಸಂಧ್ಯಾಲೋಪ ಭಯದಿಂದ ನಿದ್ರಾಭಂಗ ಮಾಡಿದೆ. ನನ್ನ ತಪ್ಪನ್ನು ಮನ್ನಿಸು. ಶೃಂಗಾರಸುಖ ಆಹಾರ ನಿದ್ರೆಗಳಿಗೆ ಭಂಗ ಉಂಟುಮಾಡುವುದು ಮಹಾಪಾಪ. ಅದರಲ್ಲಿಯೂ ಪತ್ನಿ ಪತಿಗೆ ಈ ಅಪರಾಧ ಮಾಡಿದರೆ ವಿಶೇಷ ಪಾಪ. ಕಾಲಸೂತ್ರ ನರಕಪ್ರಾಪ್ತಿ.' ಹೀಗೆ ಹೇಳಿ ಪತಿಯ ಕಾಲಿಗೆ ಬಿದ್ದು ಅಳತೊಡಗಿದಳು. ಮುನಿ ಈಗ ಸೂರ್ಯನಲ್ಲಿಯೆ ಕೋಪಗೊಂಡು ಶಾಪ ಕೊಡಲು ಉದ್ಯುಕ್ತನಾದ. ಒಡನೆ ಸೂರ್ಯ ಸಂಧ್ಯಾದೇವಿಯೊಡನೆ ಬಂದು ವಿನಯದಿಂದ ನುಡಿದ-

'ಮುನಿಯೆ, ಸೂರ್ಯಾಸ್ತದ ಸಮಯವನ್ನು ಕಂಡು ಧರ್ಮಲೋಪಭಯದಿಂದ ನಿನ್ನ ಪತ್ನಿ ನಿನ್ನನ್ನು ಎಚ್ಚರಿಸಿದ್ದಳು. ಆದರೆ ನಾನು ಅಸ್ತಂಗತನಾಗಲಿಲ್ಲ. ಅದರಿಂದ ನೀನು ನನ್ನನ್ನು ಶಪಿಸುವುದು ಉಚಿತವಲ್ಲ, ಕ್ಷಮಿಸು.'

ಬ್ರಾಹ್ಮಣಾನಾಂ ಚ ಹೃದಯಂ ನವನೀತಸಮಂ ಸದಾ ।<br>
ತೇಷಾಂ ಕ್ಷಣಾರ್ಧಂ ಕ್ರೋಧಶ್ಚ ತತೋ ಭಸ್ಮ ಭವೇಜ್ಜಗತ್ ।<br>
ಪುನಃ ಸ್ರಷ್ಟುಂ ದ್ವಿಜಃ ಶಕ್ತೋ ನ ತೇಜಸ್ವೀ ದ್ವಿಜಾತ್ ಪರಃ ॥

ಬ್ರಾಹ್ಮಣರ ಹೃದಯ ಬೆಣ್ಣೆಯಂತೆ. ಕೋಪಬಂದರೆ ಅರ್ಧಕ್ಷಣ ಮಾತ್ರ. ಅಷ್ಟರಿಂದಲೆ ಜಗತ್ತು ಸುಟ್ಟು ಬೂದಿಯಾಗಬಹುದು. ಆದರೆ ಪುನಃ ಸೃಷ್ಟಿಸಲು ಬ್ರಾಹ್ಮಣ ಸಮರ್ಥ. ಅವನಿಗಿಂತ ತೇಜಸ್ವಿ ಇನ್ನೊಬ್ಬನಿಲ್ಲ.

ಬ್ರಾಹ್ಮಣ ಬ್ರಹ್ಮನ ವಂಶದಲ್ಲಿ ಹುಟ್ಟಿರುತ್ತಾನೆ. ಬ್ರಹ್ಮತೇಜಸ್ಸಿನಿಂದ ಉರಿಯುತ್ತಾನೆ. ಜ್ಯೋತಿಃ ಸ್ವರೂಪ ಪರಬ್ರಹ್ಮ ಶ್ರೀಕೃಷ್ಣನನ್ನು ಸದಾ ಧ್ಯಾನಿಸುತ್ತಾನೆ.'

ಸೂರ್ಯನ ಈ ಮಾತನ್ನು ಕೇಳಿ ಜರತ್ಕಾರು ಮುನಿ ಸಂತುಷ್ಟನಾದ. ಸೂರ್ಯನಿಗೆ ಆಶೀರ್ವದಿಸಿದ. ಆದರೆ ಮನಸಾದೇವಿಯನ್ನು ಪರಿತ್ಯಜಿಸಲು ಸಂಕಲ್ಪಿಸಿದ. ಇದನ್ನು ತಿಳಿದು ದೇವಿ ಭೀತಳಾಗಿ ಗುರುವಾದ ಶಿವನನ್ನೂ ಇಷ್ಟದೇವತೆಯಾದ ಹರಿಯನ್ನೂ ಬ್ರಹ್ಮನನ್ನೂ ಜನ್ಮದಾತನಾದ ಕಶ್ಯಪನನ್ನೂ ನೆನೆದಳು. ಒಡನೆ ಎಲ್ಲರೂ ಬಂದರು. ಜರತ್ಕಾರು ಅವರೆಲ್ಲರಿಗೂ ನಮಿಸಿ ಅವರ ಆಗಮನ ಕಾರಣವನ್ನು ಕೇಳಿದ. ಬ್ರಹ್ಮ ಹರಿಯನ್ನು ವಂದಿಸಿ ಮುನಿಗೆ ಹೇಳತೊಡಗಿದ- 'ಧರ್ಮಿಷ್ಠಳಾದ ಧರ್ಮಪತ್ನಿಯಾದ ಮನಸೆಯನ್ನು ನೀನು ಬಿಡುವುದಾದರೆ ಮೊದಲಿಗೆ ಅವಳಲ್ಲಿ ಪುತ್ರನನ್ನು ಪಡೆಯಬೇಕು. ಇದು ಧರ್ಮ. ಯಾವುದೇ ಆಶ್ರಮದಲ್ಲಿರಲಿ ವೈರಾಗ್ಯದಿಂದ ಸಂನ್ಯಾಸಿಯಾಗುವವನು ಪತ್ನಿಯಲ್ಲಿ ಪುತ್ರೋತ್ಪತ್ತಿ ಮಾಡಿಯೆ ಸನ್ಯಾಸಿಯಾಗಬೇಕು. ಇಲ್ಲದಿದ್ದರೆ ಎಲ್ಲ ತಪಸ್ಸೂ ಪುಣ್ಯಕರ್ಮವೂ ವಂದರಿಯೊಳಗಿನ ನೀರು ಸುರಿದು ಹೋಗುವಂತೆ ನಶಿಸುವುದು.

ಬ್ರಹ್ಮನ ಮಾತನ್ನು ಕೇಳಿ ಜರತ್ಕಾರು ಮನಸೆಯ ನಾಭಿಯನ್ನು ಮಂತ್ರಪೂರ್ವಕ ಸ್ಪರ್ಶಿಸಿದ. ದೇವತೆಗಳು ಅವಳಿಗೆ ಶುಭಾಶೀರ್ವಾದ ಮಾಡಿ ಹೊರಟುಹೋದರು. ಮುನಿಯ ಕರಸ್ಪರ್ಶ ಮಾತ್ರದಿಂದ ಮನಸೆ ಗರ್ಭಧರಿಸಿದಳು. ಅವಳಿಗೆ ಮುನಿ ಹೇಳಿದ— 'ಮನಸೆ, ನಿನಗೆ ಜಿತೇಂದ್ರಿಯ ಧರ್ಮಿಷ್ಠ ವೈಷ್ಣವಾಗ್ರಣಿಯಾದ ಮಗ ಹುಟ್ಟುತ್ತಾನೆ. ಅವನು ತೇಜಸ್ವಿ ತಪಸ್ವಿ ಯಶಸ್ವಿ ಗುಣವಂತ, ವೇದವೇತ್ತರಿಗೂ ಜ್ಞಾನಿಗಳಿಗೂ ಯೋಗಿಗಳಿಗೂ ಶ್ರೇಷ್ಠನೆನಿಸಿ ವಿಷ್ಣುಭಕ್ತನಾಗಿ ಕುಲವನ್ನು ಉದ್ಧರಿಸುತ್ತಾನೆ. ಅವನು ಜನಿಸಿದೊಡನೆ ಪಿತೃಗಳೆಲ್ಲ ಸಂತೋಷದಿಂದ ಕುಣಿದಾಡುತ್ತಾರೆ. ಇಂಥ ಪುತ್ರನೆ ಪುತ್ರ. ಪುತ್ರಮಾತೆಯಾಗುವ ಪತಿವ್ರತಾ ಸ್ತ್ರೀಯೆ ಪತ್ನಿ. ಹರಿಭಕ್ತಿ ನೀಡುವವನೆ ಬಂಧು, ಸುಖ ನೀಡುವವನೆ ಇಷ್ಟ. ತತ್ವಜ್ಞಾನ ನೀಡಿ ಸಂಸಾರ ಬಂಧವನ್ನು ಕಳೆವವನೆ ಪಿತ. ಗರ್ಭವಾಸದಿಂದ ಬಿಡುಗಡೆ ತಂದುಕೊಡುವವಳೆ ಗರ್ಭಧಾರಿಣಿ. ವಿಷ್ಣುಭಕ್ತಿಯನ್ನು ವಿಷ್ಣುಮಂತ್ರವನ್ನೂ ನೀಡುವವನೆ ಗುರು. ಕೃಷ್ಣನನ್ನು ಕುರಿತಾದ ಜ್ಞಾನವೆ ಜ್ಞಾನ. ಬೇರೆ ಜ್ಞಾನ ಬರುತ್ತದೆ ಹೋಗುತ್ತದೆ. ಆದರಿಂದೇನು ? ವೇದದಿಂದ ಯೋಗಾಭ್ಯಾಸದಿಂದ ಹರಿಸೇವೆ ಮಾಡುವುದೆ ಸಂಸಾರದಲ್ಲಿರುವ ಸಾರ. ಬೇರೆ ಎಲ್ಲ ಸುಮ್ಮನೆ. ಮನಸೆ, ನಿನಗೆ ಸರಿಯಾದ ಜ್ಞಾನ

ನೀಡಿದ್ದೇನೆ. ಸತಿಗೆ ತತ್ವಜ್ಞಾನ ನೀಡುವ ಪತಿಯೆ ನಿಜವಾದ ಪತಿ. ಆ ಜ್ಞಾನದಿಂದಲೆ ಬಂಧದಿಂದ ಮುಕ್ತಿ. ಬಂಧವನ್ನೆ ನೀಡುವವ ಪತಿಯಲ್ಲ, ಶತ್ರು.

**ವಿಷ್ಣುಭಕ್ತಿಯುತಂ ಜ್ಞಾನಂ ಸ ದದಾತಿ ಹಿ ಯೋ ಗುರುಃ ।**
**ಸ ರಿಪುಃ ಶಿಷ್ಯಘಾತೀಚ ಯತೋ ಬಂಧಾನ್ನ ಮೋಚಯೇತ್ ॥**

ವಿಷ್ಣುಭಕ್ತಿಯುಕ್ತವಾದ ಜ್ಞಾನ ನೀಡುವ ಗುರುವೆ ಗುರು. ಯಾರು ಜ್ಞಾನ ನೀಡದೆ ಬಂಧದಿಂದ ಬಿಡುಗಡೆ ಮಾಡಲಾರನೋ ಅವನು ಗುರುವಲ್ಲ, ಶಿಷ್ಯನಿಗೆ ಅವನು ಶತ್ರು.

ಗರ್ಭವಾಸ ದುಃಖ ಮರಣ ಸಂಕಟಗಳಿಗೆ ಪರಿಹಾರ ನೀಡದವ ಹೇಗೆ ಗುರುವೆನಿಸಿಯಾನು ? ಹೇಗೆ ತಂದೆ ಎನಿಸಿಯಾನು ? ಹೇಗೆ ಬಂಧು ಎನಿಸಿಯಾನು ? ಆನಂದರೂಪಿಯಾದ ಕೃಷ್ಣನ ಮಾರ್ಗವನ್ನು ತೋರಿಸದವ ಅವನೆಂಥ ಬಾಂಧವ ? ಆದ್ದರಿಂದ ಪ್ರಿಯೆ, ನೀನು ಕೃಷ್ಣನನ್ನೆ ಭಜಿಸು. ಅವನ ಸೇವೆಯಿಂದಲೆ ನಮ್ಮ ಪ್ರಾಚೀನ ಕರ್ಮಗಳೆಲ್ಲ ನಿರ್ಮೂಲವಾಗಬಲ್ಲುವು. ಈಗ ನಿದ್ರಾಭಂಗದ ನೆಪದಿಂದ ನಾನು ನಿನ್ನನ್ನು ಪರಿತ್ಯಜಿಸುವುದು ಸರಿಯಲ್ಲ. ನನ್ನ ಈ ತಪ್ಪನ್ನು ಕ್ಷಮಿಸು. ನಿನ್ನಂಥ ಪತಿವ್ರತೆಯರು ಕ್ಷಮಾಶೀಲರಾಗಿರುತ್ತಾರೆ. ಅವರಿಗೆ ಕೋಪವೆಂಬುದೆ ಇಲ್ಲ. ನಾನು ತಪಸ್ಸಿಗಾಗಿ ನಿನ್ನನ್ನು ತೊರೆದು ಹೋಗುತ್ತಿದ್ದೇನೆ. ಶ್ರೀಕೃಷ್ಣನ ಪಾದಕಮಲ ಧ್ಯಾನವನ್ನು ಅರಗಳಿಗೆ ನಾ ಬಿಡಲಾರೆ. ಪ್ರವೃತ್ತಿ ಮಾರ್ಗಿಗಳಿಗೆ ಹೆಂಡತಿ, ಮಕ್ಕಳು, ಧನ ಸಂಪತ್ತುಗಳಲ್ಲಿ ಪ್ರೀತಿ. ನಿವೃತ್ತಿ ಮಾರ್ಗಿಗಳಿಗೆ ಶ್ರೀಕೃಷ್ಣನ ಪಾದಕಮಲದಲ್ಲಿಯೇ ಪ್ರೀತಿ. ಆದ್ದರಿಂದ ಶೋಕಮಾಡದೆ ತಂದೆಯ ಮನೆಗೇ ಹೋಗು.'

ಪತಿಯ ಮಾತುಗಳನ್ನು ಕೇಳಿ ಮನಸಾದೇವಿ ಶೋಕಪರವಶಳಾಗಿ ಕಣ್ಣೀರು ಸುರಿಸಿ ವಿನಯದಿಂದ ಹೇಳಿದಳು— "ನಾಥ, ನಿದ್ರಾಭಂಗದ ತಪ್ಪನ್ನು ನೆಪಮಾಡಿಕೊಂಡು ನೀನು ನನ್ನನ್ನು ತ್ಯಜಿಸುತ್ತಿರುವಿ. ಆದರೆ ನಾನು ಎಲ್ಲಿ ಯಾವಾಗ ನಿನ್ನನ್ನು ಸ್ಮರಿಸಿದರೂ ಆಪ್ತಬಂಧುವಾಗಿ ನನ್ನ ಬಳಿಗೆ ನೀನು ಬರಬೇಕು.

ಬಂಧುವಿಯೋಗ ಬಹಳ ಕಷ್ಟ. ಅದಕ್ಕಿಂತ ಪುತ್ರವಿಯೋಗ. ಅದಕ್ಕಿಂತಲೂ ಪತಿವಿಯೋಗ. ಪ್ರಾಣೇಶ್ವರನನ್ನು ಬಿಟ್ಟಿರುವುದೆಂದರೆ ಪ್ರಾಣಗಳನ್ನೆ ಬಿಟ್ಟಂತೆ. ಪತಿವ್ರತೆಯರಿಗೆ ನೂರು ಪುತ್ರರಿಗಿಂತ ಒಬ್ಬ ಪತಿ ಹೆಚ್ಚು ಪ್ರಿಯ. ಎಲ್ಲರಿಗಿಂತ ಪತಿಯೆ ಪ್ರಿಯನಾದ್ದರಿಂದ ಅವನಿಗೆ ಪ್ರಿಯ ಎಂದೆ ಹೆಸರು. ಒಬ್ಬನೆ ಮಗನಿರುವ ತಂದೆ ತಾಯಿಗಳಿಗೆ ಆ ಮಗನಲ್ಲಿ, ವಿಷ್ಣುಭಕ್ತರಿಗೆ ವಿಷ್ಣುವಿನಲ್ಲಿ, ಒಂದೇ ಕಣ್ಣಿರುವವರಿಗೆ ಆ ಕಣ್ಣಿನಲ್ಲಿ, ಬಾಯಾರಿದವರಿಗೆ ನೀರಿನಲ್ಲಿ, ಹಸಿದವರಿಗೆ ಅನ್ನದಲ್ಲಿ, ಕಾಮುಕರಿಗೆ ಸ್ತ್ರೀಯಲ್ಲಿ, ಕಳ್ಳರಿಗೆ ಪರರ ಸೊತ್ತಿನಲ್ಲಿ, ಕೆಟ್ಟ ಸ್ತ್ರೀಯರಿಗೆ ಜಾರನಲ್ಲಿ, ವಿದ್ವಾಂಸರಿಗೆ ಶಾಸ್ತ್ರದಲ್ಲಿ, ವರ್ತಕರಿಗೆ ವ್ಯಾಪಾರದಲ್ಲಿ ಹೇಗೋ ಹಾಗೆ ಪತಿವ್ರತಾಸ್ತ್ರೀಯರಿಗೆ ಪತಿಯಲ್ಲಿ ಸದಾ ಮನಸ್ಸಿರುತ್ತದೆ.'

ಹೀಗೆ ಹೇಳಿ ದೇವಿ ಪತಿಯ ಕಾಲಿಗೆ ಬಿದ್ದಳು. ಮುನಿ ಕರುಣೆಯಿಂದ ದೇವಿಯನ್ನು ಆಲಿಂಗಿಸಿ ಕಣ್ಣೀರಿಂದ ಅವಳಿಗೆ ಅಭಿಷೇಕ ಮಾಡಿದ. ಅವಳೂ ಕಣ್ಣೀರಿಂದ ಮುನಿಯ ಎದೆಯನ್ನು ತೋಯಿಸಿದಳು. ಬಳಿಕ ಇಬ್ಬರೂ ವಿವೇಕ ತಂದುಕೊಂಡು ಕೃಷ್ಣನ ಪಾದಕಮಲಗಳನ್ನು ನೆನೆದರು. ಮುನಿ ಅವಳನ್ನು ಸಮಾಧಾನ ಮಾಡಿ ತಪಸ್ಸಿಗೆ ಹೊರಟುಹೋದ. ಅವಳೂ ಕೈಲಾಸಕ್ಕೆ ಹೋಗಿ ಗುರುವಾದ ಶಂಕರನ ಬಳಿ ಸೇರಿದಳು. ಪಾರ್ವತಿ ಅವಳಿಗೆ ಸಮಾಧಾನ ಮಾಡಿದಳು. ಶಿವ ತತ್ವಜ್ಞಾನವನ್ನು ಉಪದೇಶಿಸಿದ.

ಒಂದು ಪ್ರಶಸ್ತವಾದ ದಿನದಲ್ಲಿ ಮನಸಾದೇವಿ ಒಬ್ಬ ಪುತ್ರನಿಗೆ ಜನ್ಮವಿತ್ತಳು. ಆತ ನಾರಾಯಣನ ಅಂಶದಿಂದ ಕೂಡಿದ್ದ. ಗರ್ಭದಲ್ಲಿದ್ದೇ ಆತ ಶಿವನ ಮುಖದಿಂದ ಜ್ಞಾನೋಪದೇಶ ಪಡೆದಿದ್ದುದರಿಂದ ಮಹಾಯೋಗಿಯೂ ಮಹಾಜ್ಞಾನಿಯೂ ಆದ. ಸ್ವತಃ ಶಿವನೆ ಮಗುವಿನ ಜಾತಕರ್ಮಾದಿಗಳನ್ನು ನಡೆಸಿದ. ಬ್ರಾಹ್ಮಣರಿಂದ ವೇದ-ಘೋಷ ಮಾಡಿಸಿದ. ಅವರಿಗೆ ಮೂರುಕೋಟಿಲಕ್ಷ ರತ್ನಾದಿಗಳನ್ನು ದಾನ ಮಾಡಿದ. ಪಾರ್ವತಿಯೂ ಲಕ್ಷಗೋವುಗಳನ್ನೂ ವಿವಿಧ ರತ್ನಗಳನ್ನೂ ದಾನಮಾಡಿದಳು. ಬಳಿಕ ಶಿವ ಬಾಲಕನಿಗೆ ನಾಲ್ಕು ವೇದಗಳನ್ನೂ ಮೋಕ್ಷದಾಯಕ ತತ್ವಜ್ಞಾನವನ್ನೂ ಉಪದೇಶಿಸಿದ.

ಮನಸಾದೇವಿಗೆ ತನ್ನ ಪತಿಯಲ್ಲಿ ಭಕ್ತಿ ಇದ್ದಿತು. ಇಷ್ಟದೇವತೆಯಾದ ಹರಿ-ಯಲ್ಲಿಯೂ ಗುರುವಾದ ಶಿವನಲ್ಲಿಯೂ ಭಕ್ತಿ ಇದ್ದಿತು. ಅದರಿಂದ ಅವಳ ಮಗನಾದ ಈ ಬಾಲಕ ಆಸ್ತೀಕನೆನಿಸಿದ. ಆತ ಶಿವನಿಂದ ಅನುಜ್ಞೆ ಪಡೆದು ಪುಷ್ಕರದಲ್ಲಿ ಹರಿಯನ್ನು ಕುರಿತು ತಪಸ್ಸಿಗೆ ಹೊರಟುಹೋದ. ಮೂರು ಲಕ್ಷ ದಿವ್ಯ ವರ್ಷಗಳ ಕಾಲ ತಪಸ್ಸುಮಾಡಿ ಹಿಂತಿರುಗಿದ. ಮಗನೊಂದಿಗೆ ತಾಯಿ ಮನಸಾದೇವಿ ತಂದೆಯಾದ ಕಶ್ಯಪನ ಆಶ್ರಮಕ್ಕೆ ಬಂದಳು. ಮುನಿ ಆನಂದಗೊಂಡು ನೂರು ಲಕ್ಷ ರತ್ನಗಳನ್ನು ಬ್ರಾಹ್ಮಣರಿಗೆ ದಾನ ಮಾಡಿದ. ಮಗುವಿನ ಶ್ರೇಯಸ್ಸಿಗಾಗಿ ಅಸಂಖ್ಯ ಬ್ರಾಹ್ಮಣರಿಗೆ ಅನ್ನದಾನ ಮಾಡಿದ. ಅದಿತಿ ದಿತಿ ಮುಂತಾದವರೆಲ್ಲ ಸಂತುಷ್ಟರಾದರು. ಹೀಗೆ ಮನಸಾದೇವಿ ಬಹುಕಾಲ ತಂದೆಯ ಮನೆಯಲ್ಲಿ ವಾಸ ಮಾಡಿದಳು.

ಅಭಿಮನ್ಯುವಿನ ಪುತ್ರನಾದ ಪರೀಕ್ಷಿತ ಮಹಾರಾಜನಿಗೆ ದೈವಾತ್ ಬ್ರಾಹ್ಮಣಶಾಪ ಬಂದೆರಗಿತು— 'ಒಂದು ವಾರ ಕಳೆದೊಡನೆ ತಕ್ಷಕ ನಿನ್ನನ್ನು ಕಡಿಯುತ್ತಾನೆ' ಎಂದು ಶೃಂಗಿ ಎಂಬ ಮುನಿಕುಮಾರ ಕೌಶಿಕೀಜಲಸ್ಪರ್ಶ ಪೂರ್ವಕವಾಗಿ ಶಪಿಸಿದ್ದ. ಈ ವೃತ್ತಾಂತವನ್ನು ರಾಜ ಕೇಳಿ ಗಂಗಾದ್ವಾರದಲ್ಲಿ ಭಾಗವತ ಸಪ್ತಾಹ ಶ್ರವಣ ಮಾಡಿದ. ಒಂದುವಾರ ಕಳೆಯಿತು. ರಾಜನನ್ನು ಕಡಿಯಲೆಂದು ತಕ್ಷಕ, ಕಡಿತದಿಂದ ರಾಜನನ್ನು ಉಳಿಸಲೆಂದು ಧನ್ವಂತರಿ ಹೀಗೆ ಇಬ್ಬರೂ ಹೊರಟು ದಾರಿಯಲ್ಲಿ ಒಂದೆಡೆ

ಸೇರಿದರು. ಪರಸ್ಪರ ಸಂಭಾಷಣೆಯಾಯಿತು. ಮೈತ್ರಿ ಉಂಟಾಯಿತು. ತಕ್ಷಕ ಧನ್ವಂತರಿಗೆ ಶ್ರೇಷ್ಠವಾದ ಒಂದು ಮಣಿಯನ್ನು ಸ್ವೇಚ್ಛೆಯಿಂದ ನೀಡಿದ. ಧನ್ವಂತರಿ ಸಂತುಷ್ಟನಾಗಿ ಹಿಂತಿರುಗಿದ. ತಕ್ಷಕ ನೇರವಾಗಿ ರಾಜನ ಬಳಿಗೆ ಬಂದು ಕಡಿದ. ಒಡನೆ ರಾಜ ಹರಿಸ್ಮರಣೆ ಮಾಡುತ್ತ ದೇಹ ತ್ಯಜಿಸಿ ವೈಕುಂಠಕ್ಕೆ ತೆರಳಿದ. ಮಗನಾದ ಜನಮೇಜಯ ತಂದೆಗೆ ಅಂತ್ಯ ಸಂಸ್ಕಾರ ಮಾಡಿದ.

ಅನಂತರ ರಾಜಾ ಜನಮೇಜಯ ಸರ್ಪಸತ್ರಯಾಗ ಪ್ರಾರಂಭಿಸಿದ. ಅದರಲ್ಲಿ ಸರ್ಪಗಳೆಲ್ಲ ಆಹುತಿಯಾದುವು. ತಕ್ಷಕ ಭಯಗೊಂಡು ಇಂದ್ರನನ್ನು ಮೊರೆಹೊಕ್ಕ. ಋತ್ವಿಜರು ಇಂದ್ರನ ಜೊತೆಗೇ ತಕ್ಷಕನನ್ನು ಆಹುತಿ ನೀಡಲು ಉದ್ಯುಕ್ತರಾದರು. ಆಗ ದೇವತೆಗಳೂ ಮುನಿಗಳೂ ಮನಸಾದೇವಿಯನ್ನು ಮೊರೆಹೊಕ್ಕರು. ದೇವೇಂದ್ರ ಭಯವಿಹ್ವಲನಾಗಿ ದೇವಿಯನ್ನು ಸ್ತೋತ್ರ ಮಾಡಿದ. ಒಡನೆ ದೇವಿಯ ಆಜ್ಞೆಯಂತೆ ಆಸ್ತೀಕಮುನಿ ಜನಮೇಜಯರಾಜನ ಬಳಿಗೆ ಬಂದು ಯಜ್ಞದೀಕ್ಷಿತನಾದ ರಾಜನಲ್ಲಿ ಮಹೇಂದ್ರ ತಕ್ಷಕರಿಗೆ ಪ್ರಾಣಗಳನ್ನು ಬೇಡಿದ. ಋತ್ವಿಜರ ಅನುಜ್ಞೆ ಪಡೆದು ರಾಜ ಇಬ್ಬರಿಗೂ ಪ್ರಾಣದಾನ ಮಾಡಿ ಯಜ್ಞವನ್ನು ಸಮಾಪ್ತಿಗೊಳಿಸಿದ. ಋತ್ವಿಜರಿಗೆ ದಕ್ಷಿಣೆಗಳನ್ನು ಸಲ್ಲಿಸಿದ.

ದೇವತೆಗಳೂ ಋಷಿಗಳೂ ಸಂತುಷ್ಟರಾಗಿ ಮನಸಾದೇವಿಯ ಬಳಿಗೆ ಬಂದು ಸ್ತೋತ್ರ ಮಾಡಿದರು. ಇಂದ್ರ ದೇವಿಗೆ ಷೋಡಶೋಪಚಾರಗಳನ್ನು ಸಲ್ಲಿಸಿ ಪರಮಾದರದಿಂದ ಸ್ತೋತ್ರ ಮಾಡಿದ.

ನಾರದ— ಮಹೇಂದ್ರ ದೇವಿಯನ್ನು ಹೇಗೆ ಪೂಜಿಸಿದ ? ಹೇಗೆ ಸ್ತೋತ್ರ ಮಾಡಿದ ?

ನಾರಾಯಣ— ಇಂದ್ರ ಸ್ನಾನಾಚಮನಗಳನ್ನು ಮಾಡಿ ಮಡಿಯುಟ್ಟು ಮನಸಾ-ದೇವಿಯನ್ನು ರತ್ನಸಿಂಹಾಸನದಲ್ಲಿ ಕುಳ್ಳಿರಿಸಿ ರತ್ನಕಲಶದಲ್ಲಿ ತುಂಬಿದ ದೇವಗಂಗಾ ಜಲದಿಂದ ವೇದಮಂತ್ರಪೂರ್ವಕವಾಗಿ ಸ್ನಾನ ಮಾಡಿಸಿದ ಅರ್ಘ್ಯಪಾದ್ಯಗಳನ್ನೂ ಗಂಧ ವಸ್ತ್ರಗಳನ್ನೂ ಅರ್ಪಿಸಿದ.

ಗಣೇಶ ಸೂರ್ಯ ಅಗ್ನಿ ವಿಷ್ಣು ಶಿವ ದುರ್ಗೆಯರನ್ನೂ ಪೂಜಿಸಿದ. ಬಳಿಕ ದೇವಿಯನ್ನು,

'ಓಂ ಹ್ರೀಂ ಶ್ರೀಂ ಮನಸಾದೇವ್ಯೈ ಸ್ವಾಹಾ'

ಎಂಬ ದಶಾಕ್ಷರ ಮಂತ್ರಪೂರ್ವಕವಾಗಿ ಷೋಡಶೋಪಚಾರಗಳಿಂದ ಪೂಜಿಸಿ ಮಂಗಳ ವಾದ್ಯ ಮೊಳಗಿಸಿ ಆಕಾಶದಿಂದ ದೇವಿಯ ಶಿರಸ್ಸಿಗೆ ಹೂಮಳೆಗರೆಸಿದ. ಮೈರೋಮಾಂಚಗೊಂಡು ಆನಂದಬಾಷ್ಪ ಸುರಿಸುತ್ತ ಹೀಗೆ ಸ್ತೋತ್ರ ಮಾಡಿದ-

'ದೇವಿ, ನಾನು ನಿನ್ನನ್ನು ಸ್ತೋತ್ರ ಮಾಡಲು ಬಯಸಿದ್ದೇನೆ. ಆದರೆ ನಿನ್ನ ಉತ್ತಮ ಗುಣಗಳನ್ನೆಲ್ಲ ಸ್ತೋತ್ರಮಾಡಲು ನಾನು ಶಕ್ತನಲ್ಲ. ಸ್ತೋತ್ರಗಳಿಗೆ ವೇದೋಕ್ತವಾದ

ಲಕ್ಷಣ ಸ್ವಭಾವವರ್ಣನೆ. ನಿನ್ನ ಗುಣಗಳ ಸ್ವಭಾವ ವರ್ಣನೆ ಮಾಡಲು ನಾನು ಅಸಮರ್ಥನಾಗಿದ್ದೇನೆ. ಏಕೆಂದರೆ ಶುದ್ಧಸತ್ವ ಸ್ವರೂಪಳಾದ ನೀನು ಕೋಪ ಹಿಂಸಾ-ರಹಿತಳು. ನಿರಪರಾಧಿನಿಯಾದ ನಿನ್ನನ್ನು ಪತಿ ಪರಿತ್ಯಜಿಸುವಾಗಲೂ ನೀನು ಅವನನ್ನು ಶಪಿಸಲಿಲ್ಲ. ನೀನು ನನಗೆ ಅದಿತಿಯಂತೆ ಮಾತೆಯಾಗಿರುವೆ. ದಯಾರೂಪಳಾಗಿ ನನಗೆ ಸೋದರಿಯಾಗಿರುವೆ. ಕ್ಷಮಾರೂಪಳಾಗಿ ತಾಯಿಯಾಗಿ ಬಂದು ನನ್ನ ಪ್ರಾಣ-ಗಳನ್ನು ಕಾಪಾಡಿದೆ. ಲೋಕದಲ್ಲಿ ನಿನಗೆ ವಿಶೇಷ ಪೂಜೆಯಾಗುವಂತೆ ಮಾಡುತ್ತೇನೆ. ಆಷಾಡಮಾಸದ ಸಂಕ್ರಮಣ ದಿನದಲ್ಲಿ, ಮನಸಾಪಂಚಮೀ ದಿನದಲ್ಲಿ ಅಥವಾ ಮಾಸಾಂತ್ಯದಲ್ಲಿ ನಿನ್ನನ್ನು ಪೂಜಿಸಿದರೆ ಪುತ್ರಪೌತ್ರಾದಿವೃದ್ಧಿ ಧನವೃದ್ಧಿಯಾಗುವುದು. ಯಶಸ್ಸು ಕೀರ್ತಿ ವಿದ್ಯೆ ಗುಣಗಳು ಲಭಿಸುವುವು. ನಿನ್ನನ್ನು ಪೂಜಿಸದವರು ದರಿದ್ರರಾಗಿ ನಾಗಭಯದಿಂದಲೂ ಪೀಡಿತರಾಗುವರು. ನೀನೆ ಸ್ವರ್ಗದಲ್ಲಿ ಸ್ವರ್ಗಲಕ್ಷ್ಮಿಯಾಗಿರುವೆ. ವೈಕುಂಠದಲ್ಲಿ ಮಹಾಲಕ್ಷ್ಮಿಯಾಗಿರುವೆ. ನಿನ್ನ ಪತಿ ಜರತ್ಕಾರು ನಾರಾಯಣಾಂಶ ಉಳ್ಳವ. ತಪೋಬಲದಿಂದ ನಿನ್ನ ತಂದೆ ನಿನ್ನನ್ನು ಮನಸಿನಿಂದ ಹುಟ್ಟಿಸಿದ. ನಮ್ಮ ರಕ್ಷಣೆಗಾಗಿಯೆ ನಿನ್ನ ಪ್ರಾದುರ್ಭಾವವಾಯಿತು. ತಂದೆಯಾದ ಕಶ್ಯಪರ ಮನಸಿನಿಂದ ಹುಟ್ಟಿದ್ದರಿಂದಲೂ, ನೀನು ನಿನ್ನ ಮನಸ್ಸಿನಲ್ಲಿಯೆ ಸದಾ ಆನಂದದಿಂದ ಕ್ರೀಡಿಸು-ವುದರಿಂದಲೂ, ದೇವತೆಗಳೆಲ್ಲ ನಿನ್ನನ್ನು ಮನಸಿನಿಂದ ಪೂಜಿಸುವುದರಿಂದಲೂ ನೀನು ಮನಸಾದೇವಿ ಎನಿಸಿರುವೆ. ಸದಾ ಪರಮಾತ್ಮನ ಸತ್ವಸ್ವಭಾವವನ್ನೆ ಆರಾಧಿಸುವುದರಿಂದ ನೀನು ಸತ್ವಸ್ವಭಾವದವಳಾಗಿರುವಿ, ಯಾರು ಯಾವ ರೀತಿಯಿಂದ ಪರಮಾತ್ಮನನ್ನು ಧ್ಯಾನಿಸುವರೋ ಅವರು ಆ ಗುಣಗಳನ್ನು ಬೆಳೆಸಿಕೊಳ್ಳುವರು.''

ಹೀಗೆ ಮಹೇಂದ್ರ ದೇವಿಯನ್ನು ಸ್ತುತಿಸಿ ತನ್ನ ಸೋದರಿ ಎಂಬ ಭಾವನೆಯಿಂದ ತನ್ನ ಲೋಕಕ್ಕೆ ಕರೆದೊಯ್ದ. ಅಲ್ಲಿ ಆಕೆ ಎಲ್ಲ ಸೋದರರೊಂದಿಗೆ ಪುತ್ರಸಮೇತಳಾಗಿ ತಂದೆಮನೆಯಲ್ಲಿ ಸುಖವಾಗಿ ವಾಸ ಮಾಡಿದಳು. ಗೋಲೋಕದಿಂದ ಕಾಮಧೇನು ಬಂದು ಹಾಲಿನಿಂದ ಅವಳಿಗೆ ಅಭಿಷೇಕ ಮಾಡಿ ಪೂಜಿಸಿದಳು. ದುರ್ಲಭವಾದ ಜ್ಞಾನವನ್ನು ಉಪದೇಶಿಸಿದಳು.

ಮನಸಾದೇವಿಯ ಸ್ತೋತ್ರವನ್ನು ಪಠಿಸಿದವನಿಗೆ ನಾಗಭಯವಿಲ್ಲ. ಅವನ ವಂಶದವರಿಗೂ ನಾಗಭಯವಿಲ್ಲ. ವಿಷವೆ ಅಮೃತದಂತಾಗುವುದು. ಐದು ಲಕ್ಷ ಜಪ-ದಿಂದ ಮನಸಾ ಮಂತ್ರಸಿದ್ಧವಾಗುವುದು. ಮಂತ್ರಸಿದ್ಧವಾದರೆ ಮಾನವ ಸರ್ಪಶಾಯಿ-ಯಾಗಬಲ್ಲ, ಸರ್ಪವಾಹನನಾಗಬಲ್ಲ.

**ಇಲ್ಲಿಗೆ ಶ್ರೀ ಬ್ರಹ್ಮವೈವರ್ತ ಮಹಾಪುರಾಣದಲ್ಲಿ ಎರಡನೆಯದಾದ ಪ್ರಕೃತಿಖಂಡದಲ್ಲಿ ನಾರದ ನಾರಾಯಣ ಸಂವಾದದಲ್ಲಿ ಮನಸೋಪಾಖ್ಯಾನದಲ್ಲಿ ತದುತ್ಪತ್ತಿ ಪೂಜಾಸ್ತೋತ್ರಾದಿ ಕಥನವೆಂಬ ನಲವತ್ತಾರನೆ ಅಧ್ಯಾಯ ಮುಗಿಯಿತು.**

## ಕಾಮದೇನುವಿನ ಕತೆ, ಪೂಜಾಸ್ತೋತ್ರಾದಿ ನಿರೂಪಣೆ

**ಅಧ್ಯಾಯ-೪೭**

ನಾರದ— ಕಾಮಧೇನು ಗೋಲೋಕದಿಂದ ಬಂದಳು ಎಂದು ಹೇಳಿದಿ. ಅವಳ ಜನ್ಮ ಚರಿತ್ರೆಯನ್ನು ಕೇಳಬಯಸುತ್ತೇನೆ.

ನಾರಾಯಣ— ಕಾಮಧೇನು ಗೋವುಗಳಿಗೆಲ್ಲ ಅಧಿಷ್ಠಾತ್ರಿ. ಗೋವುಗಳಿಗೆಲ್ಲ ಜನನಿ. ಗೋಲೋಕದಲ್ಲಿ ಉದ್ಭವಿಸಿದವಳು. ಮೊದಲಿಗೆ ಆದಿಸೃಷ್ಟಿಯ ಕಥೆಯನ್ನು ಹೇಳುತ್ತೇನೆ, ಕೇಳು. ಒಮ್ಮೆ ರಾಧಾರಮಣ ರಾಧೆಯೊಡನೆ ಗೋಪಾಂಗನಾ ಪರಿವೃತ-ನಾಗಿ ವೃಂದಾವನದಲ್ಲಿ ವಿಹರಿಸಿದ. ಆಗ ಅವನಿಗೆ ಹಾಲು ಕುಡಿವ ಬಯಕೆ ಉಂಟಾಯಿತು. ಒಡನೆ ಸುರಭಿದೇವಿಯನ್ನು ತನ್ನ ಎಡಭಾಗದಿಂದ ಸೃಜಿಸಿದ. ಕರುವಿ-ನಿಂದ ಕೂಡಿದ್ದು ಒಳ್ಳೆಯ ಹಾಲು ಕೊಡುತ್ತಿದ್ದ ಆ ಹಸುವಿನಿಂದ ರತ್ನಖಚಿತ ಪಾತ್ರೆ-ಯಲ್ಲಿ ಹಾಲು ಕರೆದ. ಆ ಹಾಲು ಅಮೃತಕ್ಕಿಂತಲೂ ಶ್ರೇಷ್ಠ. ಜರಾಮರಣ ಜರೆಗಳನ್ನು ತಡೆಯುವಂಥಹುದು. ಬೆಚ್ಚಗಿನ ಸವಿಯಾದ ಆ ಹಾಲನ್ನು ಕೃಷ್ಣ ಕುಡಿದ. ಪಾತ್ರೆಯ ಹಾಲು ಚೆಲ್ಲಿ ಅದೇ ಒಂದು ಸರೋವರವಾಯಿತು. ನೂರು ಯೋಜನ ಉದ್ದಗಲ-ವಾಗಿ ರೂಪುಗೊಂಡ ಆ ರಮ್ಯವಾದ ಕ್ಷೀರಸರೋವರ ರಾಧೆಗೂ ಗೋಪಿಯರಿಗೂ ಈಜುಕೊಳವಾಯಿತು. ಸುತ್ತಲೂ ರತ್ನಮಯವಾದ ಪಾವಟಿಕೆಗಳನ್ನು ಅದಕ್ಕೆ ನಿರ್ಮಿಸಲಾಯಿತು.

ಸುರಭಿ ದೇವಿಯ ರೋಮಕೂಪಗಳಿಂದ ಲಕ್ಷಕೋಟಿ ಕಾಮಧೇನುಗಳು ಕರುಗಳ ಸಹಿತವಾಗಿ ಆವಿರ್ಭವಿಸಿದುವು. ಅವುಗಳಿಗೆ ಮಕ್ಕಳು ಮರಿಮಕ್ಕಳು ಅಸಂಖ್ಯವಾಗಿ ಹುಟ್ಟಿದುವು. ಜಗತ್ತಿನಲ್ಲಿ ಎಲ್ಲೆಡೆ ಈ ಗೋವುಗಳು ತುಂಬಿದುವು.

ಕೃಷ್ಣನೆ ಮೊದಲಿಗೆ ಸುರಭಿಗೆ ಪೂಜೆ ಮಾಡಿದನಂತೆ. ಮರುದಿನ ಅವನಾಜ್ಞೆಯಂತೆ ಮೂಲೋಕದಲ್ಲಿ ಅವಳಿಗೆ ಪೂಜೆ ಪ್ರಾರಂಭವಾಯಿತು. ವೇದೋಕ್ತವಾದ ಸುರಭಿ ಧ್ಯಾನ ಸ್ತೋತ್ರ ಮೂಲಮಂತ್ರ ಪೂಜಾವಿಧಿಯನ್ನು ಹೇಳುತ್ತೇನೆ, ಕೇಳು.

'ಓಂ ಸುರಭ್ಯೈ ನಮಃ'

ಭಕ್ತರಿಗೆ ಕಲ್ಪವೃಕ್ಷದಂತಿರುವ ಈ ಷಡಕ್ಷರ ಮೂಲಮಂತ್ರವನ್ನು ಒಂದು ಲಕ್ಷ ಜಪಿಸಿದರೆ ಸಿದ್ಧಿಯಾಗುವುದು.

ಸುರಭಿಯ ಧ್ಯಾನ ಪೂಜೆಗಳು ಯಜುರ್ವೇದೋಕ್ತವಾಗಿದ್ದು ಎಲ್ಲ ಜ್ಞಾನಿಗಳಿಗೆ ಸಮ್ಮತವಾಗಿವೆ.

ಋದಿದಾಂ ವೃದ್ಧಿದಾಂ ಚೈವ ಮುಕ್ತಿದಾಂ ಸರ್ವಕಾಮದಾಂ
ಲಕ್ಷ್ಮೀ ಸ್ವರೂಪಾಂ ಪರಮಾಂ ರಾಧಾಸಹಚರೀಂ ಪರಾಂ ॥

ಗವಾಮಧಿಷ್ಠಾತ್ರ ದೇವೀಂ ಗವಾಮಾದ್ಯಾಂ ಗವಾಂ ಪ್ರಸೂಂ
ಪವಿತ್ರರೂಪಾಂ ಪೂಜ್ಯಾಂ ಚ ಭಕ್ತಾನಾಂ ಸರ್ವಕಾಮದಾಂ
ಯಯಾ ಪೂತಂ ಸರ್ವವಿಶ್ವಂ ತಾಂ ದೇವೀಂ ಸುರಭಿಂ ಭಜೇ ॥

ದೇವಿ ಸುರಭಿ ಸರ್ವಸಮೃದ್ಧಿದಾಯಕಳು. ಮುಕ್ತಿಯನ್ನೂ ಸಕಲ ಇಷ್ಟಾರ್ಥವನ್ನೂ ನೀಡುವವಳು. ಲಕ್ಷ್ಮೀಸ್ವರೂಪಳು ರಾಧೆಯ ಗೆಳತಿ. ಗೋವುಗಳ ಅಧಿಷ್ಠಾತ್ರಿ. ಪ್ರಪಂಚದ ಮೊದಲನೆ ಗೋವೂ ಎಲ್ಲ ಗೋವುಗಳ ಮಾತೆಯೂ ಆಗಿರುವಳು. ಪವಿತ್ರಳು, ಜಗತ್ತನ್ನು ಪವಿತ್ರಗೊಳಿಸುವವಳು. ಪೂಜ್ಯಳಾದ ಆ ದೇವಿಯನ್ನು ಆರಾಧಿಸುತ್ತೇನೆ.

ಹೀಗೆ ಧ್ಯಾನಿಸಿ ಕಲಶದಲ್ಲಿ, ಹಸುವಿನ ಶಿರಸ್ಸಿನಲ್ಲಿ, ಹಸುವನ್ನು ಕಟ್ಟಿದ ಕಂಬದಲ್ಲಿ ಶಾಲಗ್ರಾಮದಲ್ಲಿ ಜಲದಲ್ಲಿ ಅಥವಾ ಅಗ್ನಿಯಲ್ಲಿ ಸುರಭಿಯನ್ನು ಪೂಜಿಸಬೇಕು. ದೀಪಾವಳಿಯ ಮರುದಿನ ಬೆಳಿಗ್ಗೆ ಸುರಭಿಯನ್ನು ಪೂಜಿಸುವವ ಲೋಕಪೂಜ್ಯ-ನಾಗುತ್ತಾನೆ.

ಒಮ್ಮೆ ವರಾಹಕಲ್ಪದಲ್ಲಿ ವಿಷ್ಣುಮಾಯೆಯ ಪ್ರಭಾವದಿಂದ ಸುರಭಿ ಹಾಲು ಕೊಡುವುದನ್ನು ನಿಲ್ಲಿಸಿದಳು. ಆಗ ದೇವತೆಗಳು ಮುಂತಾದವರೆಲ್ಲ ಚಿಂತಾಕ್ರಾಂತರಾಗಿ ಬ್ರಹ್ಮಲೋಕದಲ್ಲಿ ಬ್ರಹ್ಮನನ್ನು ಮೊರೆಹೊಕ್ಕರು. ಬ್ರಹ್ಮನ ಉಪದೇಶದಂತೆ ಇಂದ್ರ ಸುರಭಿಯನ್ನು ಸ್ತುತಿಸಿದ—

''ಮಹಾದೇವಿ ಸುರಭಿಗೆ ನಮೋನಮಃ'' ನೀನು ಗೋವುಗಳಿಗೆಲ್ಲ ಮಾತೆ. ಜಗನ್ಮಾತೆ. ರಾಧೆಯ ಪ್ರಿಯಸಖಿ. ಲಕ್ಷ್ಮಿಯ ಅಂಶಭೂತಳು. ಕೃಷ್ಣನ ಪ್ರೇಯಸಿ. ಕಲ್ಪವೃಕ್ಷದಂತೆ ಸರ್ವಸಂಪತ್ತನ್ನು ಕೊಡುವವಳು. ಕಾಂತಿ, ಸಂಪತ್ತು, ಶುದ್ಧಿ, ಮಂಗಳ-ಗಳನ್ನು ನೀಡುವವಳು. ಪ್ರಸನ್ನಳಾಗಿದ್ದು ಯಶಸ್ಸು ಸೌಖ್ಯ ನೀಡುವವಳು ಧರ್ಮ-ರಹಸ್ಯ ಬಲ್ಲವಳು. ಇಂಥ ದೇವಿಗೆ ನಮೋನಮಃ.'

ಈ ಸ್ತೋತ್ರವನ್ನು ಕೇಳಿದೊಡನೆ ಸುರಭಿ ಸಂತುಷ್ಟಳಾಗಿ ದೇವೇಂದ್ರನಿಗೆ ವರ ನೀಡಿದಳು. ಒಡನೆ ಪ್ರಪಂಚದಲ್ಲಿ ಎಲ್ಲೆಡೆ ಹಾಲಿನ ಸಮೃದ್ಧಿಯುಂಟಾಯಿತು. ಹಾಲಿ-ನಿಂದ ತುಪ್ಪ, ತುಪ್ಪದಿಂದ ಯಜ್ಞ, ಯಜ್ಞದಿಂದ ದೇವತೆಗಳಿಗೆ ತೃಪ್ತಿ ಉಂಟಾಯಿತು.

ಮಹಾಪುಣ್ಯಕರವಾದ ಈ ಸ್ತೋತ್ರವನ್ನು ಭಕ್ತಿಯಿಂದ ಪಠಿಸಿದರೆ ಗೋಸಂಪತ್ತು ಧನ ಸಂಪತ್ತುಗಳೂ, ಕೀರ್ತಿಯೂ, ಪುಣ್ಯವೂ, ಲಭಿಸುವುದು. ಸರ್ವತೀರ್ಥಸ್ನಾನದ ಸರ್ವಯಜ್ಞಗಳ ಫಲ ಲಭಿಸುವುದು. ಇಹದಲ್ಲಿ ಸುಖ ಅನುಭವಿಸಿ ಪಾಠಕನು

ಗೋಲೋಕದಲ್ಲಿಯೂ ಚಿರಕಾಲ ಕೃಷ್ಣನ ಸೇವೆ ಮಾಡುತ್ತಾನೆ. ಪುನಃ ಸಂಸಾರದಲ್ಲಿ ಹುಟ್ಟುವುದಿಲ್ಲ.

**ಇಲ್ಲಿಗೆ ಶ್ರೀ ಬ್ರಹ್ಮವೈವರ್ತ ಮಹಾಪುರಾಣದಲ್ಲಿ ಎರಡನೆಯದಾದ ಪ್ರಕೃತಿಖಂಡದಲ್ಲಿ ನಾರದ ನಾರಾಯಣ ಸಂವಾದದಲ್ಲಿ ಸುರಭ್ಯುಪಾಖ್ಯಾನದಲ್ಲಿ ತದುತ್ಪತ್ತಿ ತತ್ಪೂಜಾದಿ ಕಥನವೆಂಬ ನಲವತ್ತೇಳನೆ ಅಧ್ಯಾಯ ಮುಗಿಯಿತು.**

## ರಾಧಾ ಉಪಾಖ್ಯಾನ, ಉತ್ಪತ್ತಿ ಸ್ತೋತ್ರ, ಪೂಜಾದಿ ಕಥನ

**ಅಧ್ಯಾಯ-೪೮**

ನಾರದ— ನಾರಾಯಣನ ಅಂಶಭೂತನಾದ ಮಹಾತ್ಮನೆ, ಸುರಭಿಯ ಉಪಾಖ್ಯಾನವನ್ನು ಕೇಳಿದೆ. ಮನೋಹರವಾಗಿತ್ತು. ಪುರಾಣಗಳಲ್ಲಿ ಅದು ಗೋಪ್ಯ-ವಾಗಿತ್ತು, ಪುರಾಣಜ್ಞರಿಗೆ ಪ್ರಶಂಸನೀಯವಾಗಿತ್ತು. ಈಗ ರಾಧೆಯ ಉಪಾಖ್ಯಾನವನ್ನು ಕೇಳಬಯಸುತ್ತೇನೆ. ರಾಧೆಯ ಉತ್ಪತ್ತಿ ಧ್ಯಾನ ಸ್ತೋತ್ರ ಕವಚಗಳನ್ನು ಹೇಳು.

ನಾರಾಯಣ— ಹಿಂದೆ ಕೈಲಾಸದಲ್ಲಿ ಶಿವ ಕುಮಾರನಿಗೆ ಶ್ರೀಕೃಷ್ಣನ ರಾಸೋತ್ಸವ-ವನ್ನು ವರ್ಣಿಸುತ್ತಿದ್ದಾಗ ಪಾರ್ವತಿ ಬಂದು- 'ಪುರಾಣಗಳಲ್ಲಿ ಎಲ್ಲಿಯೂ ಕಾಣದ ಅಪೂರ್ವವಾದ ರಾಧೆಯ ಕಥೆಯನ್ನು ಹೇಳು. ಇಷ್ಟರವರೆಗೆ ಪಂಚರಾತ್ರಾದಿ. ಸಕಲಾಗಮಗಳನ್ನೂ ನೀತಿಶಾಸ್ತ್ರ ಯೋಗಶಾಸ್ತ್ರ ಸಿದ್ಧಿಶಾಸ್ತ್ರ ಭಕ್ತಿಶಾಸ್ತ್ರಗಳನ್ನೂ ಕೃಷ್ಣನ ದೇವಿಯರ ಚರಿತ್ರೆಗಳನ್ನೂ ಹೇಳಿರುವಿ. ಈಗ ರಾಧೆಯ ಚರಿತ್ರೆಯನ್ನು ಕೇಳಲು ಬಯಸುತ್ತೇನೆ. ಅದು ಸಂಕ್ಷೇಪವಾಗಿ ಕಾಣ್ವಶಾಖೆಯಲ್ಲಿ ವೇದೋಕ್ತವಾದುದು. ವಿಸ್ತಾರವಾಗಿ ನೀನು ನನಗೆ ಹೇಳಬೇಕು. ಆಗಮಗಳನ್ನು ಹೇಳುವ ಸಂದರ್ಭದಲ್ಲಿ ರಾಧೆಯ ಕಥೆಯನ್ನೂ ಹೇಳುವುದಾಗಿ ನೀನೆ ಹೇಳಿದೆ. ನಿನ್ನಂಥವರು ಆಡಿದ ಮಾತೆಂದೂ ಸುಳ್ಳಾಗುವುದಿಲ್ಲ. ಆದ್ದರಿಂದ ರಾಧಾದೇವಿಯ ಉತ್ಪತ್ತಿ ಧ್ಯಾನ ನಾಮ ಮಹಾತ್ಮ್ಯಗಳನ್ನೂ ಪೂಜಾವಿಧಾನ ಚರಿತ್ರೆ ಸ್ತೋತ್ರ ಕವಚಗಳನ್ನೂ ಹೇಳು,' ಎಂದು ನುಡಿದಳು. ಶಿವ ತಲೆತಗ್ಗಿಸಿ ಚಿಂತಿಸತೊಡಗಿದ. 'ರಾಧೆಯ ಚರಿತ್ರೆಯನ್ನು ಹೇಳಕೂಡದೆಂದು ಕೃಷ್ಣ ನಿಷೇಧಿಸಿರುವುದರಿಂದ ನಾನು ಹೇಳಲಾರೆ. ವಚನ-ಭಂಗವಾಗುವುದರಿಂದ ಹೇಳದೆಯೂ ಇರಲಾರೆ. ಏನು ಮಾಡಲಿ' ಎಂದು ಕೃಷ್ಣನನ್ನೆ ಧ್ಯಾನಿಸಿದ. ಕೃಷ್ಣ ಅನುಮತಿ ನೀಡಿದ. ಈಗ ಸಂತೋಷದಿಂದ ಶಿವ ಪಾರ್ವತಿಗೆ

ಹೇಳಿದ- 'ದೇವಿ, ಆಗಮಗಳನ್ನು ಹೇಳುವ ಸಮಯದಲ್ಲಿ ನಾನು ರಾಧೆಯ ಚರಿತ್ರೆಯನ್ನೂ ಹೇಳುವೆನೆಂದು ನಾನು ಮಾತು ಕೊಟ್ಟಿರುವುದು ನಿಜ. ಆದರೆ ಆಗ ಕೃಷ್ಣ ಹೇಳಕೂಡದೆಂದು ನಿಷೇಧಿಸಿದ್ದ. ಅದರಿಂದ ನಾನು ಚಿಂತೆಗೊಳಗಾದೆ. ಆದರೆ ಈಗ ನನ್ನ ಅರ್ಧಾಂಗಿಗೆ ನಾನು ರಾಧಾಚರಿತ್ರೆ ಹೇಳಬಹುದೆಂದು ಕೃಷ್ಣ ಅನುಮತಿ ನೀಡಿದ್ದಾನೆ. ಆದ್ದರಿಂದ ಅತ್ಯಂತ ಗೋಪ್ಯವಾದ ಕೃಷ್ಣ ಭಕ್ತಿದಾಯಕವಾದ ರಾಧಾಚರಿತ್ರೆಯನ್ನು ನಿನಗೆ ಹೇಳುತ್ತೇನೆ.

ಈ ಚರಿತ್ರೆಯ ಪೂರ್ವಾಪರಗಳನ್ನು ರಹಸ್ಯವನ್ನು ಬ್ರಹ್ಮ ಶೇಷ ಸನತ್ಕುಮಾರ ಸನಾತನ ಧರ್ಮ ಇಂದ್ರ ಮುಂತಾದ ದೇವತೆಗಳೂ ಮುನಿಗಳೂ ಸಿದ್ಧರೂ ಅರಿಯರು. ನಾನು ಅರಿತಿದ್ದೇನೆ. ಎಷ್ಟೇ ರಹಸ್ಯವಾಗಿದ್ದರೂ ನಿನಗೆ ಹೇಳುತ್ತೇನೆ.

ಹಿಂದೆ ಗೋಲೋಕದ ವೃಂದಾವನದಲ್ಲಿ ಶತಶೃಂಗ ಪರ್ವತದ ಒಂದು ಭಾಗದಲ್ಲಿ ಜಾಜಿ ಮಲ್ಲಿಗೆಗಳ ವನದ ನಡುವೆ ರತ್ನಸಿಂಹಾಸನದಲ್ಲಿ ಕುಳಿತಿದ್ದ ಜಗತ್ಪತಿಯಾದ ಕೃಷ್ಣನಿಗೆ ರತಿಕ್ರೀಡೆಯ ಇಚ್ಛೆ ಉಂಟಾಯಿತು. ಸ್ವತಂತ್ರನಾಗಿ ತನ್ನಿಚ್ಛೆಯಂತೆ ನಡೆಯುವ ಆತ ತಾನೆ ತನ್ನ ಎಡಭಾಗದಿಂದ ರಾಧೆಯನ್ನು ಹುಟ್ಟಿಸಿದ. ಬಲಭಾಗದಿಂದ ಕೃಷ್ಣ-ನಾಗಿಯೆ ನಿಂತ.

ರಾಧೆ ಪುಟಕ್ಕಿಟ್ಟ ಚಿನ್ನದಂತೆ ಹೊಳೆವ ಮೈಬಣ್ಣದವಳು. ಕೋಟಿ ಪೂರ್ಣಚಂದ್ರರ ಕಾಂತಿ. ಬೆಂಕಿಯಂತೆ ಶುದ್ಧವಾದ ಸೀರೆ ಉಟ್ಟು ಅಮೂಲ್ಯ ರತ್ನಾಭರಣಗಳನ್ನು ಧರಿಸಿ ರತ್ನಸಿಂಹಾಸನದಲ್ಲಿ ಕುಳಿತಳು. ಮುಕ್ತಾಹಾರ ಭೂಷಿತ ಸುಂದರ ಸ್ತನಯುಗದಿಂದ ಮಂದಹಾಸದಿಂದ ಒಪ್ಪುವ ಕಾಮಾತುರಳಾದ ದೇವಿಯನ್ನು ರಸಿಕನಾದ ಕೃಷ್ಣ ಅವಳೊಡನೆ ರತಿಕ್ರೀಡೆಯಾಡಬಯಸಿದ. ದೇವಿ ಅವನೆಡೆಗೆ ಧಾವಿಸಿದಳು. ಅದರಿಂದ ಅವಳು 'ರಾಧೆ' ಎನಿಸಿದಳು.

ರಾಧೆ ಕೃಷ್ಣನನ್ನು ಆರಾಧಿಸುತ್ತಾಳೆ. ಕೃಷ್ಣ ರಾಧೆಯನ್ನು ಆರಾಧಿಸುತ್ತಾನೆ. ಇಬ್ಬರಿಗೂ ಸರ್ವಸಾಮ್ಯವಿದ್ದುದರಿಂದ ಸರಿಯಾದ ಜೋಡಿ ಎಂದು ಜ್ಞಾನಿಗಳು ಸ್ತುತಿಸುತ್ತಾರೆ. ರಾಸದಲ್ಲಿ ಕೃಷ್ಣನನ್ನು ಎದೆಯಲ್ಲಿ ಧರಿಸಿದ್ದರಿಂದಲೂ 'ರಾಧೆ' ಎಂದು ಹೆಸರಾಯಿತು. ರಾಧೆ ಎಂಬ ನಾಮದ 'ರಾ' ಎಂಬ ಅಕ್ಷರದಿಂದ ಮುಕ್ತಿ ಪಡೆಯ-ಬಹುದು. 'ಧಾ' ಎಂಬ ಅಕ್ಷರದಿಂದ ಗೋಲೋಕದಲ್ಲಿ ಹರಿಸೇವೆಗಾಗಿ ಧಾವಿಸುತ್ತಿರ-ಬಹುದು. 'ರಾ' ಎಂದರೆ ಪಡೆಯುವುದು. 'ಧಾ' ಎಂದರೆ ಮುಕ್ತಿ. ದೇವಿಯ ಅನುಗ್ರಹದಿಂದ ಮುಕ್ತಿ ಪಡೆಯಬಹುದು. ಅದರಿಂದ ರಾಧೆ ಎಂದು ಹೆಸರು.

ರಾಧೆಯ ರೋಮಕೂಪಗಳಿಂದ ಗೋಪಿಯರೂ ಕೃಷ್ಣನ ರೋಮಕೂಪಗಳಿಂದ ಗೋಪರೂ ಉದ್ಭವಿಸಿದರು. ರಾಧೆಯ ಎಡಭಾಗದಿಂದ ಮಹಾಲಕ್ಷ್ಮಿ ಉದಿಸಿದಳು.

ಅವಳು ಚತುರ್ಭುಜನಾದ ವಿಷ್ಣುವಿನ ಪತ್ನಿಯಾಗಿ ವೈಕುಂಠದಲ್ಲಿ ಇರತೊಡಗಿದಳು. ಅವಳ ಅಂಶಭೂತಳು ರಾಜಲಕ್ಷ್ಮಿ. ರಾಜರಿಗೆ ಸಂಪತ್ತು ಕೊಡುವವಳು. ಅವಳ ಅಂಶರೂಪಳು ಮರ್ತ್ಯಲಕ್ಷ್ಮಿ. ಮನೆಮನೆಗಳಲ್ಲಿ ದೀಪ ಬೆಳಗುವ ಗೃಹದೇವತೆಯೆ ಇವಳು. ಸ್ವತಃ ರಾಧೆ ಕೃಷ್ಣನ ಎದೆಯಲ್ಲಿರುವವಳು, ಕೃಷ್ಣಪತ್ನಿ. ಕೃಷ್ಣನ ಪ್ರಾಣೇಶ್ವರಿ.

ದೇವಿ ಪಾರ್ವತಿ, ಬ್ರಹ್ಮನಿಂದ ತೊಡಗಿ ಒಂದು ಹುಲ್ಲು ಕಡ್ಡಿಯವರೆಗಿನ ಈ ಸಕಲಪ್ರಪಂಚವೂ ನಿಃಸಾರವಾದುದು. ಸಾರರೂಪನಾದವ ಪರಬ್ರಹ್ಮನಾದ ರಾಧಾರಮಣ. ಅವನನ್ನೇ ಭಜಿಸು. ಅವನು ಸರ್ವೋತ್ತಮನಾದ ಪರಮಾತ್ಮ. ಪ್ರಕೃತಿಯಿಂದ ಆಚೆಗಿರುವವ. ಸ್ವತಂತ್ರ, ನಿತ್ಯ. ಭಕ್ತರನ್ನು ಅನುಗ್ರಹಿಸುವುದಕ್ಕಾಗಿ ತನ್ನ ಚಿನ್ಮಯರೂಪವನ್ನು ತೋರುತ್ತಾನೆ. ಅವನಲ್ಲದೆ ಬೇರೆಲ್ಲ ದೇವತೆಗಳೂ ಪ್ರಾಕೃತಶರೀರ ಉಳ್ಳವರು.

ರಾಧೆಯೆ ಮೂಲ ಪ್ರಕೃತಿ. ಮಹಾವಿಷ್ಣುವಿಗೆ ಜನನಿ ಅವಳೆ. ಅವಳ ಪಾದಕಮಲಸೇವೆ ಬ್ರಹ್ಮಾದಿಗಳಿಗೂ ದುರ್ಲಭ. ಆದರೂ ಸುದಾಮನ ಶಾಪದಿಂದ ಅವಳು ಗೋಲೋಕದಿಂದ ಭೂಮಿಗೆ ಬಂದು ವೃಷಭಾನುವೆಂಬ ಗೋಪನ ಮಡದಿ ಕಲಾವತಿಯಲ್ಲಿ ಜನಿಸಿದಳು.

**ಇಲ್ಲಿಗೆ ಶ್ರೀ ಬ್ರಹ್ಮವೈವರ್ತ ಮಹಾಪುರಾಣದಲ್ಲಿ ಎರಡನೆಯದಾದ ಪ್ರಕೃತಿಖಂಡದ ನಾರದನಾರಾಯಣ ಸಂವಾದದಲ್ಲಿ ಹರಗೌರೀ ಸಂವಾದದಲ್ಲಿ ರಾಧೋಪಾಖ್ಯಾನದಲ್ಲಿ ತದುತ್ಪತ್ತಿತತ್ಪೂಜಾದಿ ಕಥನವೆಂಬ ನಲವತ್ತೆಂಟನೆ ಅಧ್ಯಾಯ ಮುಗಿಯಿತು.**

## ರಾಧೋಪಾಖ್ಯಾನ, ರಾಧಾ-ಸುದಾಮರ ಪರಸ್ಪರ ಶಾಪಪ್ರದಾನ

ಪಾರ್ವತಿ— ರಾಧೆ ಸುದಾಮನ ಶಾಪವನ್ನು ಹೊಂದಿದ ಬಗೆ ಹೇಗೆ ? ಭೃತ್ಯನಾದ ಆತ ತನ್ನ ಇಷ್ಟದೇವತೆಯಾದ ದೇವಿಯನ್ನು ಹೇಗೆ ಶಪಿಸಿದ ?

ಶಿವ— ದೇವಿ ಕೇಳು. ಒಮ್ಮೆ ಶ್ರೀಕೃಷ್ಣ ವಿರಜಾ ಎಂಬ ಗೋಪಿಯೊಡನೆ ಏಕಾಂತದಲ್ಲಿ ವಿಹರಿಸುತ್ತಿದ್ದುದನ್ನು ರಾಧೆಯ ನಾಲ್ವರು ಸಖಿಯರು ತಿಳಿದು ರಾಧೆಗೆ ಹೇಳಿದರು. ಕೃಷ್ಣನನ್ನು ಬಿಡಲು ಉದ್ಯುಕ್ತಳಾದಳು. ಸಖಿಯರ ಸಾಂತ್ವನದ ನುಡಿಗಳು ಫಲಕಾರಿಯಾಗಲಿಲ್ಲ. ಪೀತಾಂಬರ, ರತ್ನಾಭರಣಗಳನ್ನೂ ಶೃಂಗಾರದ ವೇಷ-

ಭೂಷಣಗಳನ್ನೂ ಬಿಸುಟು ಬಿಳಿ ಬಟ್ಟೆ ಉಟ್ಟು ಗೋಪಿಯರೊಡನೆ ರಥವೇರಿದಳು. ಹತ್ತು ಯೋಜನ ಅಗಲ ನೂರು ಯೋಜನ ಉದ್ದದ ಸಾವಿರ ಚಕ್ರಗಳ ರತ್ನಖಚಿತ ದಿವ್ಯರಥ. ಮೂರುಲಕ್ಷ ಕೋಟಿ ಗೋಪಿಯರೊಡನೆ ಆ ರಥವನ್ನೇರಿ ಕೋಪದಿಂದ ನಡುಗುತ್ತ ತುಟಿಗಳನ್ನು ಅದುರಿಸುತ್ತ ಕೃಷ್ಣನ ಕಡೆಗೆ ರಾಧೆ ಹೊರಟಾಗ, ಆ ಕೋಲಾಹಲವನ್ನು ಕೇಳಿದ ಕೃಷ್ಣನ ಪರಿವಾರದವನಾದ ಸುದಾಮನೆಂಬ ಗೋಪ ಬೇಗನೆ ಕೃಷ್ಣನ ಬಳಿಗೆ ಬಂದು ಎಚ್ಚರ ನೀಡಿ ಗೋಪರೊಂದಿಗೆ ದೂರಕ್ಕೆ ಪಲಾಯನ ಮಾಡಿದ. ಕೃಷ್ಣ ವಿರಜೆಯನ್ನು ಬಿಟ್ಟು ಅಂತರ್ಧಾನನಾದ. ವಿರಜೆ ಮನಸ್ಸಿನಲ್ಲಿ ಚೆನ್ನಾಗಿ ವಿಚಾರಮಾಡಿ ಕೊನೆಗೆ ಶರೀರತ್ಯಾಗ ಮಾಡಿ ನದಿಯಾಗಿ ಹರಿದಳು. ಕೋಟಿಯೋಜನ ಅಗಲ, ಅದಕ್ಕೆ ನೂರುಪಾಲು ಉದ್ದವಾಗಿ ಗೋಲೋಕದ ಸುತ್ತಲೂ ಕಂದಕದಂತೆ ಮನೋಹರವಾದ ನದಿಯಾದಳು. ಅವಳ ಸಖಿಯರಾದ ಗೋಪಿಯರೂ ಪ್ರಪಂಚ-ದಲ್ಲಿ ಎಲ್ಲೆಡೆ ನದಿಗಳಾಗಿ ಹರಿದರು. ಈ ಏಳು ಸಮುದ್ರಗಳೂ ವಿರಜೆಯ ಮಕ್ಕಳು.

ರಾಧೆ ಬಂದು ನೋಡಿದಾಗ ವಿರಜೆಯೂ ಇರಲಿಲ್ಲ, ಕೃಷ್ಣನೂ ಇರಲಿಲ್ಲ. ಆಕೆ ಹಿಂತಿರುಗಿದಳು. ಕೃಷ್ಣ ಎಂಟುಮಂದಿ ಗೋಪರೊಡನೆ ರಾಧೆಯ ಮನೆಗೆ ಬಂದ. ಬಾಗಿಲಲ್ಲಿ ದ್ವಾರಪಾಲಕಿಯರು ತಡೆದರೂ ಒಳಗೆ ನುಗ್ಗಿದ. ರಾಧೆ ಅವನನ್ನು ಮನಃಪೂರ್ತಿ ಜರಿದಳು. ಇದನ್ನು ಕೇಳಿ ತಡೆಯಲಾರದೆ ಸುದಾಮ ರಾಧೆಯನ್ನು ಆಕ್ಷೇಪಿಸಿದ. ದೇವಿ ಕೋಪಾವಿಷ್ಟಳಾಗಿ ಸುದಾಮನನ್ನು 'ಅಸುರನಾಗು, ತೊಲಗು ಇಲ್ಲಿಂದ' ಎಂದು ಶಪಿಸಿದಳು. ಸುದಾಮನೂ ದೇವಿಯನ್ನು ಶಪಿಸಿದ- 'ನೀನೂ ಇಲ್ಲಿಂದ ದೂರದ ಭಾರತ ಭೂಮಿಗೆ ಹೋಗು, ನಿನ್ನ ಮುಖ್ಯ ಪರಿವಾರದರೊಂದಿಗೆ ಗೋಪಕನ್ಯೆಯಾಗಿ ಜನಿಸು. ನೂರುವರ್ಷಕಾಲ ನಿನಗೆ ಕೃಷ್ಣನ ವಿಯೋಗವಾಗಲಿ. ಆಗ ಕೃಷ್ಣ ಭೂಭಾರಹರಣ ಕಾರ್ಯ ಮಾಡುತ್ತಾನೆ.'

ಸುದಾಮ ಹೀಗೆ ಶಪಿಸಿದರೂ ತಾಯಿತಂದೆಗಳಾದ ರಾಧಾಕೃಷ್ಣರ ವಿಯೋಗ ತಾಳಲಾರದೆ ಕಣ್ಣೀರು ಸುರಿಸಿದ. ಕಷ್ಟದಿಂದ ಹೊರಡಲು ಉದ್ಯುಕ್ತನಾದ. ರಾಧೆಯೂ ಪುತ್ರವಿಯೋಗವನ್ನು ತಡೆಯಲಾರದೆ 'ಮಗೂ, ಎಲ್ಲಿಗೆ ಹೋಗುತ್ತಿರುವೆ?' ಎಂದು ಶೋಕವಿಹ್ವಲಳಾಗಿ ಕಣ್ಣೀರು ಸುರಿಸುತ್ತ ಸುದಾಮನ ಹಿಂದೆ ಹಿಂದೆ ಹೆಜ್ಜೆ ಹಾಕಿದಳು. ಕೃಷ್ಣ ಅವಳನ್ನು ಸಂತೈಸುತ್ತ ನುಡಿದ—

'ಪ್ರಿಯೆ, ದುಃಖಿಸಬೇಡ, ಸುದಾಮ ಬೇಗನೆ ಹಿಂತಿರುಗಿ ಬರುತ್ತಾನೆ.' ಮುಂದೆ ಸುದಾಮ ಶಂಖಚೂಡನೆಂಬ ಅಸುರನಾಗಿ ಜನಿಸಿ ತುಲಸಿಯನ್ನು ಮದುವೆಯಾದ. ನನ್ನ ಶೂಲದ ಆಘಾತದಿಂದ ಶರೀರತ್ಯಾಗ ಮಾಡಿ ಗೋಲೋಕಕ್ಕೆ ಹಿಂತಿರುಗಿದ್ದಾನೆ.

ಇತ್ತ ರಾಧೆ ವಾರಾಹಕಲ್ಪದಲ್ಲಿ ಭಾರತ ದೇಶದ ಗೋಕುಲದಲ್ಲಿ ವೃಷಭಾನು ಎಂಬ ವೈಶ್ಯನ ಮಗಳಾಗಿ ಹುಟ್ಟಿದಳು. ಆದರೆ ಆಕೆ ಅಯೋನಿಜೆ. ತಾಯಿ ಕಲಾವತಿ

ವಿಷ್ಣುಮಾಯೆಯ ಪ್ರಭಾವದಿಂದ ಕೇವಲ ಗಾಳಿಯನ್ನು ಗರ್ಭದಲ್ಲಿ ಧರಿಸಿದ್ದಳು. ಪ್ರಸವಕಾಲದಲ್ಲಿ ಗಾಳಿಯೆ ಗರ್ಭದಿಂದ ಹೊರಗೆ ಬಂದಿತ್ತು. ಆ ಸ್ಥಳದಲ್ಲಿ ರಾಧೆ ಶಿಶುವಾಗಿ ಆವಿರ್ಭವಿಸಿದಳು.

ಶಿಶು ರಾಧೆ ಬೆಳೆದು ಹನ್ನೆರಡು ವರ್ಷದವಳಾದಾಗ ತಂದೆ ರಾಯಣನೆಂಬ ವೈಶ್ಯನಿಗೆ ಮದುವೆ ಮಾಡಿಕೊಟ್ಟ. ಆಗ ಮದುಮಗಳ ಸ್ಥಾನದಲ್ಲಿ ರಾಧೆಯ ಬದಲು ಛಾಯಾರಾಧೆಯೆ ಹಸೆಮಣೆ ಏರಿದಳು.

ಹದಿನಾಲ್ಕು ವರ್ಷಗಳು ಕಳೆದುವು. ಜಗತ್ತಿಗೆ ಕಂಸನ ಭೀತಿಯನ್ನು ಕಳೆಯಲು ಕೃಷ್ಣ ಗೋಕುಲದಲ್ಲಿ ಶಿಶುವಾಗಿ ಅವತರಿಸಿದ. ಆಗ ಕೃಷ್ಣನ ತಾಯಿಯಾದವಳು, ರಾಯಣನ ಸೋದರಿ ಯಶೋದೆಯೆ. ರಾಯಣ ಗೋಲೋಕದಲ್ಲಿ ಗೋಪನಾಗಿ ಕೃಷ್ಣನ ಸೇವೆ ಮಾಡಿದವನಾದ್ದರಿಂದ ಭೂಮಿಯಲ್ಲಿ ಕೃಷ್ಣನಿಗೆ ಸೋದರಮಾವನೆನಿಸಿದ್ದ.

ಕೃಷ್ಣ ಗೋಕುಲದಿಂದ ವೃಂದಾವನಕ್ಕೆ ಬಂದಾಗ ಬ್ರಹ್ಮ ಅವನಿಗೆ ರಾಧೆಯನ್ನು ಕೊಟ್ಟು ವಿವಾಹ ಮಾಡಿದ. ಇದು ಗೋಪಾಲಕರಿಗೆ ಯಾರಿಗೂ ದೃಷ್ಟಿಗೋಚರ-ವಾಗಲಿಲ್ಲ. ಅವರಾರೂ ಸ್ವಪ್ನದಲ್ಲಿಯೂ ರಾಧೆಯನ್ನು ನೋಡಲಾರರು. ಹೀಗಾಗಿ ರಾಧೆ ಸ್ವತಃ ಕೃಷ್ಣನ ವಕ್ಷಃಸ್ಥಲದಲ್ಲಿ ಕುಳಿತಳು. ಛಾಯಾರಾಧೆ ರಾಯಣನ ಮನೆ-ಯಲ್ಲಿದ್ದಳು.

ಬ್ರಹ್ಮ ರಾಧೆಯ ದರ್ಶನಕ್ಕಾಗಿ ಪುಷ್ಕರದಲ್ಲಿ ಅರವತ್ತು ಸಾವಿರ ವರ್ಷ ತಪಸ್ಸು ಮಾಡಿದ್ದ. ಅದರಿಂದ ಅವನಿಗೆ ದೇವಿಯ ದರ್ಶನ ಲಾಭವಾಗಿತ್ತು.

ರಾಧೆಯನ್ನು ಮದುವೆಯಾಗಿ ಕೃಷ್ಣ ಕೆಲಕಾಲ ವೃಂದಾವನದಲ್ಲಿ ವಿಹರಿಸಿದ. ಬಳಿಕ ಸುದಾಮನ ಶಾಪಾನುಸಾರ ಅವರಿಗೆ ವಿಯೋಗವಾಯಿತು. ನೂರು ವರ್ಷಕಾಲ ಕೃಷ್ಣ ರಾಧೆಯನ್ನು ಬಿಟ್ಟು ಭೂಭಾರಹರಣ ಕಾರ್ಯದಲ್ಲಿ ಮಗ್ನನಾದ. ನೂರು ವರ್ಷ ಕಳೆದಮೇಲೆ ಕೃಷ್ಣ ತೀರ್ಥಯಾತ್ರೆಯ ನೆಪದಿಂದ ಸಂಚರಿಸುತ್ತಿದ್ದಾಗ ಇಬ್ಬರೂ ಪರಸ್ಪರ ಭೆಟ್ಟಿಯಾದರು. ಇಬ್ಬರೂ ಜೊತೆಯಾಗಿ ಗೋಲೋಕಕ್ಕೆ ನಡೆದರು. ಕಲಾವತಿ ಯಶೋದೆಯರೂ ರಾಧೆಯೊಂದಿಗೇ ಗೋಲೋಕಕ್ಕೆ ಹೋದರು. ವೃಷಭಾನು ನಂದರೂ ಬೇರೆ ಎಲ್ಲ ಗೋಪರೂ ಗೋಲೋಕಕ್ಕೆ ತೆರಳಿದರು. ಛಾಯಾ ಗೋಪರೂ ಛಾಯಾ ಗೋಪಿಯರೂ ಮುಕ್ತಿ ಪಡೆದು ಕೃಷ್ಣನೊಡನೆ ಅಲ್ಲಿ ರಮಿಸಿದರು. ಮೂವತ್ತಾರು ಲಕ್ಷಕೋಟಿ ಗೋಪಿಯರೂ ಗೋಪರೂ ಮುಕ್ತರಾಗಿ ರಾಧಾಕೃಷ್ಣರ ಜೊತೆಗೆ ಗೋಲೋಕವನ್ನು ಸೇರಿದರು.

ದ್ರೋಣನೆಂಬ ವಸು ನಂದನಾಗಿ ಜನಿಸಿದ್ದ. ಅವನ ಪತ್ನೀ ಧರಾದೇವಿ ಯಶೋದೆಯಾಗಿದ್ದಳು. ಇಬ್ಬರೂ ಪೂರ್ವಜನ್ಮದ ತಪಸ್ಸಿನ ಫಲವಾಗಿ ಕೃಷ್ಣನನ್ನು ಮಗನನ್ನಾಗಿ ಪಡೆದರು.

ವಸುದೇವ ಹಿಂದೆ ಕಶ್ಯಪನಾಗಿದ್ದ. ದೇವಕಿ ಅದಿತಿ. ಪ್ರತಿಕಲ್ಪದಲ್ಲಿಯೂ ಅವರೆ ಸ್ವಾಭಾವಿಕವಾಗಿ ದೇವತೆಗಳ ತಂದೆ ತಾಯಿಗಳು. ರಾಧೆಯ ಮಾತೆ ಕಲಾವತಿ ಪಿತೃಗಳ ಮಾನಸಪುತ್ರಿ. ವೃಷಭಾನು ಹಿಂದೆ ಗೋಲೋಕದಲ್ಲಿದ್ದ ವಸುದಾಮನೆಂಬ ಗೋಪಾಲಕ.

ಇದು ರಾಧೆಯ ಚರಿತ್ರೆ. ಸಂಪತ್ಕರ, ಪಾಪಪರಿಹಾರಕ, ಪುತ್ರ ಪೌತ್ರ ವೃದ್ಧಿಕರ.

ಶ್ರೀಕೃಷ್ಣನಿಗೆ ಎರಡು ರೂಪಗಳು. ವೈಕುಂಠದಲ್ಲಿರುವ ಚತುರ್ಭುಜ ರೂಪ ಒಂದು, ಗೋಲೋಕದಲ್ಲಿರುವ ದ್ವಿಭುಜ ರೂಪವಿನ್ನೊಂದು. ಮಹಾಲಕ್ಷ್ಮಿ ಸರಸ್ವತಿ ಗಂಗೆ ತುಲಸಿಯರು ಚತುರ್ಭುಜನಾದ ನಾರಾಯಣನ ಪತ್ನಿಯರು. ದ್ವಿಭುಜ ಕೃಷ್ಣನ ಪತ್ನಿ ತೇಜಸ್ಸು ವಯಸ್ಸು ರೂಪ ಗುಣಗಳಲ್ಲಿ ಅವನಿಗೆ ಸಮಾನಳಾಗಿ ಅವನಿಂದಲೇ ಬಂದ ರಾಧೆ. ಅವಳ ನಾಮವನ್ನು ಉಚ್ಚರಿಸಿಯೆ ಕೃಷ್ಣನ ನಾಮ ಉಚ್ಚರಿಸಬೇಕು. ವ್ಯತ್ಯಾಸಮಾಡಿದರೆ ಬ್ರಹ್ಮಹತ್ಯಾದೋಷ ಬರುತ್ತದೆ.

ಕಾರ್ತಿಕ ಹುಣ್ಣಿಮೆಯಂದು ಗೋಲೋಕದ ರಾಸ ಮಂಡಲದಲ್ಲಿ ಕೃಷ್ಣ ರಾಧೆಯನ್ನು ಪೂಜಿಸಿ ಉತ್ಸವವನ್ನಾಚರಿಸಿದ. ರಾಧೆಯ ಕವಚವನ್ನು ರತ್ನದ ತಾಯಿತದಲ್ಲಿಟ್ಟು ಕಂಠದಲ್ಲಿಯೂ ಬಲಭುಜದಲ್ಲಿಯೂ ಧರಿಸಿದ. ಎಲ್ಲ ಗೋಪರಿಂದಲೂ ಧಾರಣೆ ಮಾಡಿಸಿದ. ಧ್ಯಾನ ಸ್ತೋತ್ರಗಳನ್ನೂ ಮಾಡಿ ರಾಧೆ ಅಗಿದುಕೊಟ್ಟ ತಾಂಬೂಲವನ್ನು ತಾನು ಮೆದ್ದ.

ಕೃಷ್ಣನಿಗೆ ರಾಧೆ ಪೂಜ್ಯಳು, ರಾಧೆಗೆ ಕೃಷ್ಣ ಪೂಜ್ಯ. ಒಬ್ಬರು ಇನ್ನೊಬ್ಬರಿಗೆ ಇಷ್ಟದೈವ. ಅವರಲ್ಲಿ ಭೇದವೆಣಿಸಿದರೆ ನರಕಪ್ರಾಪ್ತಿ. ಹೀಗೆ ಮೊದಲನೆ ಬಾರಿ ರಾಧೆಯನ್ನು ಕೃಷ್ಣ ಪೂಜಿಸಿದ.

ಎರಡನೆ ಬಾರಿ ಧರ್ಮ, ಬ್ರಹ್ಮ, ನಾನು, ಅನಂತ, ವಾಸುಕಿ, ಸೂರ್ಯ, ಚಂದ್ರ, ಇಂದ್ರ, ರುದ್ರರು, ಮನುಗಳು, ಮಾನವರು, ದೇವತೆಗಳು, ಋಷಿಗಳು ಹೀಗೆ ಎಲ್ಲರೂ ಪೂಜಿಸಿದರು. ಮೂರನೆಬಾರಿ ಸಪ್ತದ್ವೀಪ ಪತಿಯಾದ ಸುಯಜ್ಞ ಭಾರತದಲ್ಲಿ ಪುತ್ರ ಮಿತ್ರಾದಿಗಳೊಡನೆ ರಾಧೆಯನ್ನು ಪೂಜಿಸಿದ. ದೈವಯೋಗದಿಂದ ಆ ರಾಜ ಮೊದಲಿಗೆ ಬ್ರಾಹ್ಮಣ ಶಾಪಕ್ಕೊಳಗಾಗಿ ಕುಷ್ಠರೋಗ ಪೀಡಿತನಾಗಿ ದುಃಖಿತನಾಗಿದ್ದ. ಬಳಿಕ ರಾಧೆಯನ್ನು ಪೂಜಿಸಿ ಬ್ರಹ್ಮನು ಉಪದೇಶಿಸಿದ್ದ ಸ್ತೋತ್ರದಿಂದ ಸ್ತುತಿಸಿ ರಾಧಾಕವಚವನ್ನು ಕಂಠದಲ್ಲಿಯೂ ಬಲ ತೋಳಿನಲ್ಲಿಯೂ ಧರಿಸಿ ಪುಷ್ಕರದಲ್ಲಿ ನೂರು ವರ್ಷ ತಪಸ್ಸು ಮಾಡಿ ಕೊನೆಯಲ್ಲಿ ರತ್ನಖಚಿತವಿಮಾನದಿಂದ ಗೋಲೋಕವನ್ನು ಸೇರಿದ.

**ಇಲ್ಲಿಗೆ ಶ್ರೀ ಬ್ರಹ್ಮವೈವರ್ತ ಮಹಾಪುರಾಣದಲ್ಲಿ ಎರಡನೆಯದಾದ ಪ್ರಕೃತಿಖಂಡದ ನಾರದನಾರಾಯಣ ಸಂವಾದದೊಳಗಿನ ಹರ ಗೌರೀ ಸಂವಾದದಲ್ಲಿ ರಾಧೋಪಾಖ್ಯಾನದಲ್ಲಿ ರಾಧೆಗೆ ಸುದಾಮ ಶಾಪಾದಿಕಥನವೆಂಬ ನಲವತ್ತೊಂಬತ್ತನೆ ಅಧ್ಯಾಯ ಮುಗಿಯಿತು.**

# ರಾಧಾ ಆಖ್ಯಾನದಲ್ಲಿ ಸುಯಜ್ಞ ಉಪಾಖ್ಯಾನ

ಅಧ್ಯಾಯ-೫೦

ಪಾರ್ವತಿ— ನಾಥ, ಸುಯಜ್ಞ ಮಹಾರಾಜ ಯಾರು ? ಯಾವ ವಂಶದವನು ? ಅವನು ಬ್ರಾಹ್ಮಣ ಶಾಪಕ್ಕೊಳಗಾಗಲು ಕಾರಣವೇನು ? ರಾಧೆಯನ್ನು ಆತ ಹೇಗೆ ಪೂಜಿಸಿದ ? ಸರ್ವೇಶ್ವರನಾದ ಕೃಷ್ಣನ ಪತ್ನಿಯಾಗಿದ್ದು ಅವನಿಂದ ಪೂಜಿತಳಾದ ಆ ದೇವಿಯನ್ನು ಮಲಮೂತ್ರಧಾರಿಯಾದ ಒಬ್ಬ ಮಾನವ ಹೇಗೆ ಪೂಜಿಸಿದ ? ಅರವತ್ತು ಸಾವಿರ ವರ್ಷಕಾಲ ತಪಸ್ಸು ಮಾಡಿ ಬ್ರಹ್ಮ ರಾಧೆಯ ಪಾದಕಮಲ ಧೂಳಿ-ಯನ್ನು ಪಡೆದ. ಆ ದೇವಿಯನ್ನು ನೀನೂ ಕೂಡ ಬಹು ಕಷ್ಟದಿಂದಲೆ ನೋಡಬಲ್ಲೆ. ಮಾನವರು ಹೇಗೆ ನೋಡಬಲ್ಲರು ? ಬ್ರಹ್ಮ ಆ ರಾಜನಿಗೆ ರಾಧಾಕವಚ ಧ್ಯಾನ ಪೂಜಾವಿಧಿ ಸ್ತೋತ್ರಗಳನ್ನು ಹೇಗೆ ಉಪದೇಶಿಸಿದ ?

ಶಿವ— ದೇವಿ, ಮನುಗಳಲ್ಲಿ ಮೊದಲನೆಯವನಾದ ಸ್ವಾಯಂಭುವ ಬ್ರಹ್ಮಪುತ್ರ, ತಪಸ್ವಿ. ಅವನ ಪತ್ನಿ ಶತರೂಪಾದೇವಿ. ಈ ದಂಪತಿಗಳ ಪುತ್ರ ಉತ್ತಾನಪಾದ. ಅವನ ಮಗ ಧ್ರುವ, ಮೂರೋಕದಲ್ಲಿ ಪ್ರಖ್ಯಾತನಾದವ. ಅವನ ಮಗ ವಿಷ್ಣುಭಕ್ತನಾದ ಉತ್ಕಲ. ಆತ ಪುಷ್ಕರಕ್ಷೇತ್ರದಲ್ಲಿ ಒಂದು ಸಾವಿರ ರಾಜಸೂಯ ಯಾಗಮಾಡಿ ಸಾವಿರ ಅಮೂಲ್ಯ ರತ್ನರಾಶಿಗಳನ್ನೆ ಬ್ರಾಹ್ಮಣರಿಗೆ ದಾನಮಾಡಿದವ. ಆ ಯಜ್ಞಗಳ ವೈಭವ-ವನ್ನು ನೋಡಿ ಬ್ರಹ್ಮ ರಾಜನಿಗೆ ಸುಯಜ್ಞ ಎಂಬ ಬಿರುದನ್ನಿತ್ತ.

ರಾಜಾ ಸುಯಜ್ಞ ಪ್ರತಿನಿತ್ಯ ಅನ್ನದಾನ, ರತ್ನದಾನ, ಸರ್ವಸಂಪದ್ದಾನ, ದಶಲಕ್ಷ ಗೋದಾನಗಳನ್ನು ವಿಪ್ರರಿಗೆ ನೀಡುತ್ತಿದ್ದ. ಆರು ಕೋಟಿ ಬ್ರಾಹ್ಮಣರಿಗೆ ಅನ್ನದಾನ ಮಾಡುತ್ತಿದ್ದ. ಚೋಷ್ಯ ಸುರಿದುಕೊಂಡು ಸೇವಿಸುವ ವಸ್ತು. ಚರ್ವ್ಯ ಅಗಿದು ತಿನ್ನುವ ವಸ್ತು. ಲೇಹ್ಯ ನೆಕ್ಕಿ ತಿನ್ನುವ ವಸ್ತು. ಪೇಯ ಕುಡಿಯುವ ವಸ್ತು. ಈ ನಾಲ್ಕು ವಿಧದ ಅನ್ನ ಮಾಂಸ ವರ್ಜಿತವಾಗಿದ್ದು ತೊವ್ವೆ ತುಪ್ಪ ಮೊಸರು ಮುಂತಾದವುಗಳಿಂದ ಕೂಡಿದ್ದು ಒಳ್ಳೆ ತೃಪ್ತಿ ಕೊಡುತ್ತಿತ್ತು. ಯಜ್ಞದ ಕೊನೆಯಲ್ಲಿ ಮೂವತ್ತಾರು ಲಕ್ಷಕೋಟಿ ವಿಪ್ರರಿಗೆ ಸಂಗ್ರಾಸ ಭೋಜನ. ಅವರಿಗೆ ಮನೆಗೆ ಒಯ್ಯಲಾಗದಷ್ಟು ರತ್ನಗಳ ದಾನ. ಆ ರತ್ನಗಳಲ್ಲಿ ಕೆಲವನ್ನು ಅವರು ಶೂದ್ರರಿಗೆ ಕೊಟ್ಟರು. ಕೆಲವನ್ನು ದಾರಿಯಲ್ಲಿಯೆ ಬಿಟ್ಟು ಹೋದರು. ಬ್ರಾಹ್ಮಣ ಭೋಜನವಾದ ಬಳಿಕ ಇತರ ಜಾತಿಯವರಿಗೂ ಭೋಜನ ನಡೆಯಿತು. ಆದರೂ ಸಾವಿರಾರು ಅನ್ನರಾಶಿಗಳು ಇನ್ನೂ ಉಳಿದಿದ್ದುವು. ಹೀಗೆ ಯಜ್ಞ ಮಾಡಿ ಮುಗಿಸಿ ರತ್ನಖಚಿತ ದಿವ್ಯ ಸಭಾಮಂಟಪದಲ್ಲಿ ವಸುಗಳು ಇಂದ್ರ ಚಂದ್ರ ರುದ್ರರು ಆದಿತ್ಯರು ನಾರದಾದಿ ಮುನಿಗಳು ಮನುಗಳು ಬ್ರಹ್ಮ ವಿಷ್ಣು ಶಿವರು ಇವರೆಲ್ಲರ ನಡುವೆ ರತ್ನಸಿಂಹಾಸನದಲ್ಲಿ ರಾಜ ಸುಯಜ್ಞ ಕುಳಿತ.

ಒಬ್ಬ ಬ್ರಾಹ್ಮಣ ಆ ಸಭೆಯನ್ನು ಪ್ರವೇಶಿಸಿದ. ಆತನ ಶರೀರ ಸೊರಗಿತ್ತು. ಕಂಠ ಓಷ್ಠ ತಾಲುಗಳು ಒಣಗಿದ್ದುವು. ಮಲಿನವಾದ ಬಟ್ಟೆ ಉಟ್ಟಿದ್ದ. ಚಂದನ ಪುಷ್ಪಮಾಲೆಗಳಿಂದ ಅಲಂಕೃತನಾಗಿ ರತ್ನಸಿಂಹಾಸನದಲ್ಲಿ ಕುಳಿತಿದ್ದ ರಾಜನನ್ನು ಆಶೀರ್ವದಿಸಿದ. ರಾಜ ಕುಳಿತಲ್ಲಿಯೆ ಆ ಬ್ರಾಹ್ಮಣನಿಗೆ ನಮಸ್ಕರಿಸಿದ. ಎದ್ದು ಗೌರವ ತೋರಲಿಲ್ಲ. ಸಭಾಸದರೂ ಯಾರೂ ಏಳಲಿಲ್ಲ. ಸ್ವಲ್ಪ ಹಾಸ್ಯವನ್ನೂ ಮಾಡಿದರು. ಬ್ರಾಹ್ಮಣ ದೇವತೆಗಳಿಗೂ ಮುನಿಗಳಿಗೂ ನಮಸ್ಕರಿಸಿದ. ರಾಜನ ಕಡೆಗೆ ನೋಡಿ ಕೋಪದಿಂದ ಶಪಿಸಿದ, 'ರಾಜನ್, ನೀನು ರಾಜಸಂಪತ್ತನ್ನು ಕಳೆದುಕೊಂಡು ಕುಷ್ಠರೋಗಿಯಾಗಿ ಬುದ್ಧಿಹೀನನಾಗಿ ದುಃಖಿತನಾಗಿರು.' ಅಪಹಾಸ ಮಾಡಿದ ಸಭಾಸದರನ್ನೂ ಶಪಿಸಲು ಉದ್ಯುಕ್ತನಾದ. ಆಗ ಅವರೆಲ್ಲ ಎದ್ದು ನಿಂತು ಪ್ರಣಾಮ ಮಾಡಿದರು. ಮುನಿಯ ಕೋಪ ಶಾಂತವಾಯಿತು. ಆದರೂ ರಾಜ ಬಳಿಗೆ ಬಂದು ನಮಸ್ಕರಿಸಿ ತಡೆಯುತ್ತಿದ್ದಂತೆಯೆ ಮುನಿ ಸಭೆಯಿಂದ ಹೊರಗೇ ನಡೆದ. ಮುನಿಗಳೂ ನಿಲ್ಲು ನಿಲ್ಲೆಂದು ತಡೆದರು. ಆದರೂ ಆತ ನಿಲ್ಲಲಿಲ್ಲ. ಆಗ ಎಲ್ಲ ಮುನಿಗಳೂ ಅವನನ್ನು ಹಿಂಬಾಲಿಸಿದರು. ಪುಲಹ, ಪುಲಸ್ತ್ಯ, ಪ್ರಚೇತಸ್, ಭೃಗು, ಅಂಗಿರಸ್, ಮರೀಚಿ, ಕಶ್ಯಪ, ವಸಿಷ್ಠ ಕ್ರತು, ಶುಕ್ರ, ಬೃಹಸ್ಪತಿ, ದೂರ್ವಾಸ, ಲೋಮಶ, ಗೌತಮ, ಕಣಾದ, ಕಣ್ವ, ಕಾತ್ಯಾಯನ, ಕಠ, ಪಾಣಿನಿ, ಜಾಜಲಿ, ಋಷ್ಯಶೃಂಗ, ವಿಭಾಂಡಕ, ತೈತ್ತಿರಿ, ಆಪಿಶಲಿ, ಮಾರ್ಕಂಡೇಯ, ಸನಕ, ಸನಂದ, ವೋಢು, ಪೈಲ, ಸನಾತನ, ಸನತ್ಕುಮಾರ, ನರ, ನಾರಾಯಣ, ಪರಾಶರ, ಜರತ್ಕಾರು, ಸಂವರ್ತ, ಕರಭ, ಭರದ್ವಾಜ, ವಾಲ್ಮೀಕಿ, ಔರ್ವ, ಚ್ಯವನ, ಅಗಸ್ತ್ಯ, ಅತ್ರಿ, ಉತಥ್ಯ, ಸಂವರ್ತ, ಆಸ್ತೀಕ, ಆಸುರಿ, ಶಿಲಾಲಿ, ಲಾಂಗಲಿ, ಶಾಕಲ್ಯ, ಶಾಕಟಾಯನ, ಗರ್ಗ, ವತ್ಸ, ಪಂಚಶಿಖ, ಜಮದಗ್ನಿ, ದೇವಲ, ಜೈಗೀಷವ್ಯ, ವಾಮದೇವ, ವಾಲಖಿಲ್ಯಾದಿಗಳು, ಶಕ್ತಿ, ದಕ್ಷ ಕರ್ದಮ, ಪ್ರಸ್ಕನ್ನ, ಕಪಿಲ, ವಿಶ್ವಾಮಿತ್ರ, ಕೌತ್ಸ, ಋಚೀಕ, ಅಘಮರ್ಷಣ ಇತ್ಯಾದಿ ಋಷಿಮುನಿಗಳೂ ಪಿತೃದೇವತೆಗಳೂ ಅಗ್ನಿಗಳೂ ದಿಕ್ಪಾಲಕರೂ ಆ ಬ್ರಾಹ್ಮಣನನ್ನು ಹಿಂಬಾಲಿಸಿ ಹೊರಟರು. ಅವನನ್ನು ಸಮಾಧಾನ ಪಡಿಸಿ ನಿಲ್ಲಿಸಿದರು. ಕ್ರಮವಾಗಿ ಎಲ್ಲರೂ ಅವನಿಗೆ ಸಾಂತ್ವನ ಮಾಡುತ್ತ ಹೇಳಿದರು.

**ಇಲ್ಲಿಗೆ ಶ್ರೀ ಬ್ರಹ್ಮವೈವರ್ತ ಮಹಾಪುರಾಣದಲ್ಲಿ ಎರಡನೆಯದಾದ ಪ್ರಕೃತಿಖಂಡದ ನಾರದನಾರಾಯಣ ಸಂವಾದಾಂತರ್ಗತ ಹರಗೌರೀ ಸಂವಾದದಲ್ಲಿ ರಾಧೋಪಾಖ್ಯಾನದಲ್ಲಿ ಸುಯಜ್ಞೋಪಾಖ್ಯಾನವೆಂಬ ಐವತ್ತನೆ ಅಧ್ಯಾಯ ಮುಗಿಯಿತು.**

# ರಾಜ-ಮುನಿ ಸಂವಾದದಲ್ಲಿ ರಾಧೋಪಾಖ್ಯಾನದಲ್ಲಿ ಕರ್ಮವಿಪಾಕ ಕಥನ

## ಅಧ್ಯಾಯ-೫೧

ಪಾರ್ವತಿ— ಬ್ರಹ್ಮಪುತ್ರರಾದ ಮುನಿಗಳು ಆ ಬ್ರಾಹ್ಮಣನಿಗೆ ಏನು ಹೇಳಿದರು ?

ಶಿವ— ಮುನಿಗಳು ಆ ಬ್ರಾಹ್ಮಣನನ್ನು ವಿನಯದಿಂದ ಸ್ತುತಿಸಿ ಕ್ರಮವಾಗಿ ಹೇಳತೊಡಗಿದರು.

ಸನತ್ಕುಮಾರ- ಬ್ರಾಹ್ಮಣೋತ್ತಮ, ನೀನು ಹೊರಟರೆ ನಿನ್ನ ಬೆನ್ನ ಹಿಂದೆಯೆ ರಾಜನ ಸಂಪತ್ತು ಕೀರ್ತಿ ಬಲ ಯಶಸ್ಸು ಶೀಲ ಐಶ್ವರ್ಯ ಪಿತೃಗಳು ಅಗ್ನಿಗಳು ದೇವತೆಗಳು ಎಲ್ಲರೂ ಬರುತ್ತಿದ್ದಾರೆ. ರಾಜ ಸರ್ವಸ್ವವನ್ನೂ ಕಳೆದುಕೊಳ್ಳುತ್ತಿದ್ದಾನೆ. ಪ್ರಸನ್ನನಾಗು. ಕೋಪ ಬಿಡು. ಬ್ರಾಹ್ಮಣರ ಹೃದಯ ಬೆಣ್ಣೆಯಂತೆ ಮೃದು, ನಿರ್ಮಲ. ತಪಸ್ಸಿನಿಂದ ಅದರ ಕೊಳೆ ಎಲ್ಲವೂ ಹೋಗಿರುತ್ತದೆ. ಆದ್ದರಿಂದ ರಾಜನ ಅಪರಾಧವನ್ನು ಕ್ಷಮಿಸು. ಬಾ, ಅರಮನೆಯನ್ನು ನಿನ್ನ ಪವಿತ್ರ ಪಾದಧೂಳಿಯಿಂದ ಶುದ್ಧಿಗೊಳಿಸು. ರಾಜನನ್ನು ಆಶೀರ್ವದಿಸು.

ಭೃಗು- ಅತಿಥಿ ಯಾರ ಮನೆಗೆ ಬಂದು ನಿರಾಸೆಯಿಂದ ಹಿಂತಿರುಗುವನೋ ಅವನ ಮನೆಯಿಂದ ಪಿತೃಗಳೂ ದೇವತೆಗಳೂ ಅಗ್ನಿಗಳೂ ನಿರಾಶರಾಗಿ ಹೊರಟುಹೋಗುತ್ತಾರೆ. ಆದ್ದರಿಂದ ಬಾ, ಅರಮನೆಯನ್ನು ಪಾದದೂಳಿಯಿಂದ ಶುದ್ಧಗೊಳಿಸು. ಅತಿಥಿ ಸತ್ಕಾರಕ್ಕೆ ಲೋಪ ಬಂದರೆ ಸ್ತ್ರೀಹತ್ಯೆ ಗೋಹತ್ಯೆ ಬ್ರಹ್ಮಹತ್ಯೆ ಕೃತಘ್ನತೆ ಗುರುತಲ್ಪಗಮನಗಳಷ್ಟು ದೋಷಬರುತ್ತದೆ.

ಪುಲಸ್ತ್ಯ— ಮನೆಗೆ ಬಂದ ಅತಿಥಿಯ ಕಡೆಗೆ ತಿರಸ್ಕಾರದ ವಕ್ರದೃಷ್ಟಿ ಬೀರಿದರೆ ಅತಿಥಿ ಅವನಿಗೆ ತನ್ನ ಪಾಪ ನೀಡಿ ಪುಣ್ಯವನ್ನು ಸೆಳೆದೊಯ್ಯುತ್ತಾನೆ. ರಾಜನ ಅಪರಾಧವನ್ನು ಮನ್ನಿಸು. ಪ್ರಾರಬ್ಧವಶದಿಂದ ಅವನು ಹಾಗೆ ಮಾಡಿದ್ದಾನೆ. ಕ್ಷಮಿಸಿ ಅರಮನೆಗ ಹಿಂತಿರುಗು.

ಪುಲಹ— ರಾಜ್ಯ ಸಂಪತ್ತಿನಿಂದ ಅಥವಾ ಪಾಂಡಿತ್ಯದಿಂದ ಗರ್ವಿತನಾಗಿ ಬ್ರಾಹ್ಮಣನನ್ನು ಅವಮಾನಿಸುವ, ಸಂಧ್ಯಾವಂದನೆ ಏಕಾದಶೀವ್ರತ ವಿಷ್ಣುನೈವೇದ್ಯಭಕ್ಷಣಗಳಿಲ್ಲದ ಕ್ಷತ್ರಿಯ ಸಂಪತ್ತನ್ನು ಕಳೆದುಕೊಳ್ಳುತ್ತಾನೆ ಬಾ, ಅರಮನೆಯನ್ನು ಪಾದದೂಳಿಯಿಂದ ಪವಿತ್ರಗೊಳಿಸು, ರಾಜನನ್ನು ಕ್ಷಮಿಸು.

ಕ್ರತು— ಬ್ರಾಹ್ಮಣ ಕ್ಷತ್ರಿಯ ವೈಶ್ಯ ಶೂದ್ರರು ಯಾರೇ ಆಗಲಿ ಬ್ರಾಹ್ಮಣಾವಮಾನ ಮಾಡಿದರೆ ಆತ ದೀಕ್ಷಾಹೀನನೆನಿಸುತ್ತಾನೆ. ಧನ ಪುತ್ರ ಭಾರ್ಯಾಹೀನನೂ ಆಗುತ್ತಾನೆ. ಆದ್ದರಿಂದ ಬಾ, ಅರಮನೆಯನ್ನು ಪವಿತ್ರಗೊಳಿಸು, ರಾಜನನ್ನು ಕ್ಷಮಿಸು.

ಅಂಗಿರಸ್— ಜ್ಞಾನಿಯಾದ ಬ್ರಾಹ್ಮಣನೆ ಆದರೂ ಬ್ರಾಹ್ಮಣಾವಮಾನ ಮಾಡಿದರೆ ಭಾರತದಲ್ಲಿ ಏಳು ಜನ್ಮಗಳವರೆಗೂ ಎತ್ತುಗಳಿಂದ ಉತ್ತು ಜೀವಿಸುವವನಾಗುವನು.

ಮರೀಚಿ— ಪುಣ್ಯಕ್ಷೇತ್ರವಾದ ಭಾರತದಲ್ಲಿ ದೇವತೆಗಳನ್ನೂ ಬ್ರಾಹ್ಮಣರನ್ನೂ ಗುರುಗಳನ್ನೂ ಅವಮಾನಿಸುವವನು ವಿಷ್ಣುಭಕ್ತಿ ಹೀನನಾಗುತ್ತಾನೆ.

ಕಶ್ಯಪ— ವಿಷ್ಣುಭಕ್ತನಾದ ಬ್ರಾಹ್ಮಣನನ್ನು ನೋಡಿ ಅವಮಾನಿಸುವವ ವಿಷ್ಣು-ಮಂತ್ರ ಹೀನನೂ ವಿಷ್ಣುಪೂಜಾರಹಿತನೂ ಆಗುವನು.

ಪ್ರಚೇತಾ— ಬ್ರಾಹ್ಮಣನಾದ ಅತಿಥಿಯನ್ನು ನೋಡಿ ಎದ್ದು ಗೌರವ ನೀಡಿದವ ಪಿತೃಭಕ್ತಿಹೀನನಾಗಿ ಭಾರತಭೂಮಿಯಲ್ಲಿ ಹುಟ್ಟುವನು. ಬಳಿಕ ಏಳು ಜನ್ಮಗಳಲ್ಲಿ ಆನೆಯಾಗಿ ಹುಟ್ಟುತ್ತಾನೆ. ಬೇಗ ಬಾ, ರಾಜನಿಗೆ ಆಶೀರ್ವಾದ ಮಾಡು.

ದೂರ್ವಾಸ— ಗುರುವನ್ನಾಗಲಿ ಬ್ರಾಹ್ಮಣನನ್ನಾಗಲಿ ದೇವತಾ ಪ್ರತಿಮೆ-ಯನ್ನಾಗಲಿ ನೋಡಿ ಬೇಗನೆ ನಮಿಸದವ ಹಂದಿಯಾಗಿ ಹುಟ್ಟುತ್ತಾನೆ. ಸುಳ್ಳುಸಾಕ್ಷಿ ನೀಡಿದ ವಿಶ್ವಾಸಘಾತ ಮಾಡಿದ ಪಾಪ ಬರುವುದು. ನಮ್ಮ ಎಲ್ಲ ತಪ್ಪನ್ನೂ ಕ್ಷಮಿಸು. ನಮ್ಮ ಆತಿಥ್ಯವನ್ನು ಸ್ವೀಕರಿಸು.

ರಾಜ— ನನ್ನ ಈ ಅಪರಾಧದ ನೆಪದಿಂದ ನೀವು ಮುನಿವರ್ಯರು ನನಗೆ ಧರ್ಮೋಪದೇಶ ಮಾಡಿದ್ದೀರಿ. ನಾನು ಮೂಢ. ಇನ್ನೂ ಸ್ಪಷ್ಟವಾಗಿ ಹೇಳಿ. ಸ್ತ್ರೀಹತ್ಯೆ ಗೋಹತ್ಯೆ ಕೃತಘ್ನತೆ, ಗುರುತಲ್ಪಗಮನ, ಬ್ರಹ್ಮಹತ್ಯೆಗಳಿಂದಾಗುವ ಪಾಪವೆಷ್ಟೆಂದು ಹೇಳಿ.

ವಸಿಷ್ಠ— ರಾಜನೆ, ಇಚ್ಛಾಪೂರ್ವಕ ಗೋಹತ್ಯೆ ಮಾಡಿದರೆ ಒಂದು ವರ್ಷಕಾಲ ತೀರ್ಥಯಾತ್ರೆ ಮಾಡಬೇಕಾಗುತ್ತದೆ. ಜವೆಗೋದಿ ಅನ್ನ ಉಣಬೇಕು. ಬೊಗಸೆ-ಯಿಂದ ನೀರುಕುಡಿಯಬೇಕು. ನೂರು ಗೋದಾನ ಮಾಡಬೇಕು. ನೂರು ಬ್ರಾಹ್ಮಣ-ರಿಗೆ ಅನ್ನದಾನ ಮಾಡಬೇಕು. ಎಷ್ಟು ಪ್ರಾಯಶ್ಚಿತ್ತ ಮಾಡಿದರೂ ಪಾಪದಿಂದ ಪೂರ್ತಿ ಬಿಡುಗಡೆಯಾಗದು. ಪಾಪಶೇಷದಿಂದ ಚಂಡಾಲನಾಗಿ ದುಃಖಿಯಾಗಿ ಜನಿಸುತ್ತಾನೆ.

ಗೋಹತ್ಯಾ ಸಮವೆನ್ನಲಾಗುವ ಕರ್ಮದಿಂದ ಅದರ ಅರ್ಧದಷ್ಟು ಪಾಪಮಾತ್ರ ಬರುತ್ತದೆ. ಅದಕ್ಕೆ ಗೋಹತ್ಯಾ ಪ್ರಾಯಶ್ಚಿತ್ತ ಪ್ರತಿನಿಧಿಯನ್ನು ಆಚರಿಸಬೇಕು. ಆಗಲೂ ಪೂರ್ಣಪಾಪ ನಶಿಸುವುದಿಲ್ಲ.

ಶುಕ್ರ— ಗೋಹತ್ಯೆಗಿಂತ ಎರಡುಪಾಲು ಪಾಪ ಸ್ತ್ರೀಹತ್ಯೆಯಿಂದ ಬರುತ್ತದೆ. ಅರವತ್ತು ಸಾವಿರವರ್ಷ ಕಾಲಸೂತ್ರ ನರಕಪ್ರಾಪ್ತಿ. ಅನಂತರ ಏಳು ಜನ್ಮಗಳಲ್ಲಿ ಹಂದಿಯೂ ಇನ್ನು ಏಳು ಜನ್ಮಗಳಲ್ಲಿ ಹಾವಾಗಿಯೂ ಹುಟ್ಟುತ್ತಾನೆ.

ಬೃಹಸ್ಪತಿ— ಸ್ತ್ರೀಹತ್ಯೆಗಿಂತ ಎರಡು ಪಾಲು ಪಾಪ ಬ್ರಹ್ಮಹತ್ಯೆಯಿಂದ ಬರುತ್ತದೆ. ಲಕ್ಷವರ್ಷ ಕುಂಭೀಪಾಕವಾಸ. ಅನಂತರ ನೂರುವರ್ಷ ಮಲಕ್ರಿಮಿಯಾಗಿಯೂ ಏಳು ಜನ್ಮಗಳಲ್ಲಿ ಹಾವಾಗಿಯೂ ಹುಟ್ಟುತ್ತಾನೆ.

ಗೌತಮ— ಕೃತಘ್ನತೆಯಿಂದ ಬ್ರಹ್ಮಹತ್ಯೆಗಿಂತ ನಾಲ್ಕುಪಾಲು ಪಾಪ. ಕೃತಘ್ನತಾ ಪಾಪಕ್ಕೆ ಪ್ರಾಯಶ್ಚಿತ್ತವನ್ನು ವೇದ ಹೇಳಲೆ ಇಲ್ಲ.

ರಾಜ— ಕೃತಘ್ನರ ಲಕ್ಷಣವೇನು ? ಕೃತಘ್ನರು ಎಷ್ಟು ವಿಧ ? ಯಾರಲ್ಲಿ ಯಾವ ದೋಷ ?

ಋಷ್ಯಶೃಂಗ— ಕೃತಘ್ನರು ಸಾಮವೇದೋಕ್ತ ರೀತಿಯಿಂದ ಹದಿನಾರು ಬಗೆಯಾಗಿದ್ದಾರೆ. ಅವರೆಲ್ಲ ಬೇರೆ ಬೇರೆ ದೋಷದಿಂದ ಬೇರೆ ಬೇರೆ ಫಲ ಅನುಭವಿಸುತ್ತಾರೆ. ಸತ್ಕರ್ಮ, ಸತ್ಯ, ಪುಣ್ಯ, ಸ್ವಧರ್ಮ, ತಪಸ್ಸು, ಪ್ರತಿಜ್ಞಾಪಾಲನ, ದಾನ, ಸ್ವಗೋಷ್ಠೀಪಾಲನ, ಗುರುಕೃತ್ಯ, ದೇವಕೃತ್ಯ, ಕಾಮ್ಯಕೃತ್ಯ, ದ್ವಿಜಾರ್ಚನ, ನಿತ್ಯಕರ್ಮ, ವಿಶ್ವಾಸ, ಪರಧರ್ಮ, ಪರದಾನಗಳಲ್ಲಿ ನಿರತನಾದವನನ್ನು ಹಿಂಸಿಸಿದರೆ ಕೃತಘ್ನನೆನಿಸುತ್ತಾನೆ. ಈ ಹದಿನಾರು ಬಗೆಯ ಕೃತಘ್ನರಿಗೆ ಬೇರೆಬೇರೆ ಲೋಕಗಳಿವೆ. ಬೇರೆಬೇರೆ ಪುನರ್ಜನ್ಮಗಳಿವೆ. ಅವರು ಅನುಭವಿಸಬೇಕಾಗಿರುವ ನರಕಗಳೆಲ್ಲ ಯಮಲೋಕದಲ್ಲಿವೆ.

ರಾಜ— ಯಾವ ಕೃತಘ್ನತೆಯಿಂದ ಯಾವ ನರಕವನ್ನು ಹೊಂದುತ್ತಾನೆ. ಪ್ರತ್ಯೇಕವಾಗಿ ಪ್ರತಿಯೊಂದನ್ನೂ ಕೇಳಬಯಸುತ್ತೇನೆ.

ಕಾತ್ಯಾಯನ— ಪ್ರತಿಜ್ಞೆ ಮಾಡಿ ಅದರ ಸತ್ಯತೆಯನ್ನು ಕಾಪಾಡಿಕೊಳ್ಳದಿದ್ದಲ್ಲಿ ಆ ಕೃತಘ್ನ ನಾಲ್ಕು ಯುಗಕಾಲ ಕಾಲಸೂತ್ರದಲ್ಲಿ ವಾಸಮಾಡುತ್ತಾನೆ. ಏಳು ಜನ್ಮ ಕಾಗೆಯಾಗಿ, ಏಳು ಜನ್ಮ ಗೂಬೆಯಾಗಿ , ಮತ್ತು ಏಳು ಜನ್ಮ ಮಹಾವ್ಯಾಧಿಗ್ರಸ್ತನಾಗಿ ಹುಟ್ಟುತ್ತಾನೆ.

ಸನಂದನ— ಪುಣ್ಯಕರ್ಮಮಾಡಿ ಕೀರ್ತಿಗಾಗಿ ಆತ್ಮಪ್ರಶಂಸೆ ಮಾಡಿಕೊಂಡರೆ ಮೂರು ಯುಗಕಾಲ ತಪ್ತಸೂರ್ಮಿ ನರಕದಲ್ಲಿ ಮೂರು ಯುಗಕಾಲ ವಾಸಮಾಡುತ್ತಾನೆ.

ಸನಾತನ— ಮೂರುಹೊತ್ತು ಸಂಧ್ಯಾವಂದನೆ, ಸ್ನಾನಾಂಗತರ್ಪಣ, ವಿಷ್ಣುನೈವೇದ್ಯ ಭಕ್ಷಣ, ವಿಷ್ಣುಪೂಜೆ, ವಿಷ್ಣುಮಂತ್ರ, ಏಕಾದಶೀ ವ್ರತ, ಕೃಷ್ಣಜನ್ಮಾಷ್ಟಮೀ ಶಿವರಾತ್ರಿ, ಶ್ರೀರಾಮನವಮೀ ವ್ರತಗಳು ಪಿತೃಕಾರ್ಯ ಮುಂತಾದ ಸ್ವಧರ್ಮವನ್ನು ಪಾಲಿಸದಿದ್ದರೆ ಅವನು ಕೃತಘ್ನನೆನಿಸುತ್ತಾನೆ. ಅವನು ಹದಿನಾಲ್ಕು ಇಂದ್ರರ ಕಾಲ ಕುಂಭೀಪಾಕದಲ್ಲಿದ್ದು ಏಳು ಜನ್ಮಗಳಲ್ಲಿ ಚಂಡಾಲನಾಗಿ, ನೂರು ಜನ್ಮಗಳಲ್ಲಿ ಹದ್ದಾಗಿ, ನೂರು ಜನ್ಮ ಹಂದಿಯಾಗಿ ಹುಟ್ಟಿ ಕೊನೆಯಲ್ಲಿ ಶೂದ್ರರ ಮನೆಯಲ್ಲಿ ಅಡಿಗೆ ಮಾಡುವ ಬ್ರಾಹ್ಮಣನಾಗಿ ಹುಟ್ಟುತ್ತಾನೆ. ಏಳು ಜನ್ಮ ಎತ್ತುಗಳಿಂದ ಜೀವಿಸುತ್ತಾನೆ. ಶೂದ್ರರಿಗೆ ಶವದಾಹ ಮಾಡಿಸುತ್ತಾನೆ. ಬ್ರಾಹ್ಮಣನಾಗಿ ಶೂದ್ರ ಸ್ತ್ರೀಸಂಗ ಮಾಡುತ್ತಾನೆ. ರೌರವ ನರಕವನುಭವಿಸಿ ತಿರುಗಿ ಪಾಪಜನ್ಮ ತಿರುಗಿ ನರಕ ಹೀಗೆ ಅನೇಕ ಬಾರಿ ತಿರುಗಿ ಕೊನೆಗೆ ಐದು ಜನ್ಮಗಳಲ್ಲಿ ಕತ್ತೆ ಬೆಕ್ಕು ಕಪ್ಪೆಗಳಾಗಿ ಹುಟ್ಟುತ್ತಾನೆ.

ರಾಜ— ಶೂದ್ರರಿಗೆ ಅಡಿಗೆ ಮಾಡುವುದು, ಶವದಾಹ ಮಾಡುವುದು, ಅವರ ಅನ್ನ ಉಣ್ಣುವುದು ಅವರ ಸ್ತ್ರೀಸಂಗ ಮಾಡುವುದು, ಎತ್ತುಗಳಿಂದ ಜೀವಿಸುವುದು ಇವುಗಳಿಂದ ಬ್ರಾಹ್ಮಣನಿಗೆ ಏನು ಪಾಪ ಬರುವುದು ?

ಪರಾಶರ— ಶೂದ್ರರಿಗೆ ಅಡಿಗೆ ಮಾಡುವ ಅಜ್ಞಬ್ರಾಹ್ಮಣ ಎಪ್ಪತ್ತೊಂದು ಯುಗಕಾಲ ಅಸಿಪತ್ರ ನರಕದಲ್ಲಿ ವಾಸಮಾಡಿ ಏಳುಜನ್ಮಗಳಲ್ಲಿ ಕತ್ತೆ ಇಲಿಕೀಟಗಳಾಗಿ ಹುಟ್ಟುವನು.

ಜರತ್ಕಾರು— ಎತ್ತಿನಿಂದ ಭಾರಹೊರಿಸಿ ಜೀವಿಸುವ ಬ್ರಾಹ್ಮಣ ಕೃತಘ್ನ-ನೆನಿಸುತ್ತಾನೆ. ಅವನು ಎತ್ತಿಗೆ ನಿತ್ಯ ಹೊಡೆದರೆ ಬ್ರಹ್ಮಹತ್ಯಾಪಾಪ, ಭಾರ ಹೊರಿಸಿದರೆ ಅದಕ್ಕಿಂತ ಎರಡುಪಾಲು ಪಾಪ. ಬಿಸಿಲಲ್ಲಿ ಹಸಿತೃಷೆಗಳಿಂದ ದಣಿಯುವಂತೆ ಭಾರ ಹೊರಿಸಿದರೆ ನೂರು ಬ್ರಹ್ಮಹತ್ಯೆಗಳ ಪಾಪ. ಈ ಪಾತಕಿಯ ಅನ್ನನೀರು ಮಲಮೂತ್ರ-ಸಮಾನ. ಅವನಿಗೆ ದೇವ ಪಿತೃಕಾರ್ಯಗಳಲ್ಲಿ ಅಧಿಕಾರವಿಲ್ಲ. ಸೂರ್ಯಚಂದ್ರ-ರಿರುವಷ್ಟು ಕಾಲ ಲಾಲಾಕುಂಡದಲ್ಲಿ ವಾಸ ಮಾಡುತ್ತಾನೆ.

ಮೂರು ಸಂಧ್ಯೆಗಳಲ್ಲಿ ಎತ್ತಿಗೆ ಹೊಡೆವವನಿಗೆ ಯಮದೂತರು ಮುಖಕ್ಕೆ ಕೊಳ್ಳಿ-ಯಿಂದ ಸೀಯುವರು, ಸೂಜಿಯಿಂದ ಚುಚ್ಚುವರು. ಬಳಿಕ ಅರವತ್ತು ಸಾವಿರ ವರ್ಷ ಮಲಕ್ರಿಮಿಯಾಗಿ ಹುಟ್ಟಿ ಐದು ಜನ್ಮಗಳಲ್ಲಿ ಕಾಗೆ ಬಕಗಳಾಗಿ ಹದ್ದು ನರಿಗಳಾಗಿ ಹುಟ್ಟಿ ದರಿದ್ರಮಹಾವ್ಯಾಧಿಗ್ರಸ್ತ ಶೂದ್ರನಾಗಿ ಹುಟ್ಟುತ್ತಾನೆ.

ಭಾರದ್ವಾಜ— ಶೂದ್ರರಿಗೆ ಶವದಾಹ ಮಾಡಿಸುವವನೂ ಕೃತಘ್ನನೆನಿಸುತ್ತಾನೆ. ಬ್ರಹ್ಮಹತ್ಯಾ ಪಾಪಕ್ಕೊಳಗಾಗಿ ಆ ಪಾಪಕ್ಕುಚಿತವಾದ ಜನ್ಮಗಳನ್ನೂ ನರಕಗಳನ್ನೂ ಪಡೆಯುತ್ತಾನೆ. ಶೂದ್ರರ ಶ್ರಾದ್ಧಾನ್ನ ಉಂಡರೂ ಅಷ್ಟೇ ದೋಷ.

ವಿಭಾಂಡಕ— ಶೂದ್ರನಲ್ಲಿ ಶ್ರಾದ್ಧಾನ್ನ ಉಂಡರೆ ಸುರಾಪಾನ ಬ್ರಹ್ಮಹತ್ಯಾ-ಪಾಪಗಳುಂಟಾಗುತ್ತವೆ. ಆತ ಪಿತೃಕಾರ್ಯ ದೇವಕಾರ್ಯಗಳಿಗೆ ಅನರ್ಹನೆನಿಸುತ್ತಾನೆ.

ಮಾರ್ಕಂಡೇಯ— ಬ್ರಾಹ್ಮಣ ಶೂದ್ರಸ್ತ್ರೀ ಸಂಗ ಮಾಡಿದರೆ ಕೃತಘ್ನತೆಯ ಪರಮಾವಧಿಯೆನಿಸುತ್ತದೆ. ಹದಿನಾಲ್ಕು ಇಂದ್ರರ ಕಾಲ ಕೃತಿದಂಷ್ಟ್ರ ನರಕವಾಸ. ಕಾದ ಕಬ್ಬಿಣದ ಪ್ರತಿಮೆಯನ್ನು ಆಲಿಂಗಿಸಬೇಕಾಗುತ್ತದೆ. ಬಳಿಕ ವೇಶ್ಯೆಯ ಯೋನಿಕ್ರಿಮಿ-ಯಾಗಿ ಸಾವಿರವರ್ಷವಿದ್ದು ಶೂದ್ರನಾಗಿ ಜನಿಸುತ್ತಾನೆ.

ರಾಜ— ಇನ್ನೂ ಬೇರೆ ಬಗೆಯ ಕೃತಘ್ನತೆಗಳಿಗೆ ಫಲವನ್ನು ಹೇಳಿ ಬ್ರಾಹ್ಮಣ ಶಾಪ ನನಗೆ ವರವಾಯಿತು. ಈ ವಿಷಯಗಳನ್ನೆಲ್ಲ ತಿಳಿಯುವ ಸುಯೋಗ ಲಭಿಸಿತು. ಕಷ್ಟ

ಗೌತಮ— ಕೃತಘ್ನತೆಯಿಂದ ಬ್ರಹ್ಮಹತ್ಯೆಗಿಂತ ನಾಲ್ಕುಪಾಲು ಪಾಪ. ಕೃತಘ್ನತಾ ಪಾಪಕ್ಕೆ ಪ್ರಾಯಶ್ಚಿತ್ತವನ್ನು ವೇದ ಹೇಳಲೆ ಇಲ್ಲ.

ರಾಜ— ಕೃತಘ್ನರ ಲಕ್ಷಣವೇನು ? ಕೃತಘ್ನರು ಎಷ್ಟು ವಿಧ ? ಯಾರಲ್ಲಿ ಯಾವ ದೋಷ ?

ಋಷ್ಯಶೃಂಗ— ಕೃತಘ್ನರು ಸಾಮವೇದೋಕ್ತ ರೀತಿಯಿಂದ ಹದಿನಾರು ಬಗೆಯಾಗಿ- ದ್ದಾರೆ. ಅವರೆಲ್ಲ ಬೇರೆ ಬೇರೆ ದೋಷದಿಂದ ಬೇರೆ ಬೇರೆ ಫಲ ಅನುಭವಿಸುತ್ತಾರೆ. ಸತ್ಕರ್ಮ, ಸತ್ಯ, ಪುಣ್ಯ, ಸ್ವಧರ್ಮ, ತಪಸ್ಸು, ಪ್ರತಿಜ್ಞಾಪಾಲನ, ದಾನ, ಸ್ವಗೋಷ್ಠೀ- ಪಾಲನ, ಗುರುಕೃತ್ಯ, ದೇವಕೃತ್ಯ, ಕಾಮ್ಯಕೃತ್ಯ, ದ್ವಿಜಾರ್ಚನ, ನಿತ್ಯಕರ್ಮ, ವಿಶ್ವಾಸ, ಪರಧರ್ಮ, ಪರದಾನಗಳಲ್ಲಿ ನಿರತನಾದವನನ್ನು ಹಿಂಸಿಸಿದರೆ ಕೃತಘ್ನನೆನಿಸುತ್ತಾನೆ. ಈ ಹದಿನಾರು ಬಗೆಯ ಕೃತಘ್ನರಿಗೆ ಬೇರೆಬೇರೆ ಲೋಕಗಳಿವೆ. ಬೇರೆಬೇರೆ ಪುನರ್ಜನ್ಮ- ಗಳಿವೆ. ಅವರು ಅನುಭವಿಸಬೇಕಾಗಿರುವ ನರಕಗಳೆಲ್ಲ ಯಮಲೋಕದಲ್ಲಿವೆ.

ರಾಜ— ಯಾವ ಕೃತಘ್ನತೆಯಿಂದ ಯಾವ ನರಕವನ್ನು ಹೊಂದುತ್ತಾನೆ. ಪ್ರತ್ಯೇಕ- ವಾಗಿ ಪ್ರತಿಯೊಂದನ್ನೂ ಕೇಳಬಯಸುತ್ತೇನೆ.

ಕಾತ್ಯಾಯನ— ಪ್ರತಿಜ್ಞೆ ಮಾಡಿ ಅದರ ಸತ್ಯತೆಯನ್ನು ಕಾಪಾಡಿಕೊಳ್ಳದಿದ್ದಲ್ಲಿ ಆ ಕೃತಘ್ನ ನಾಲ್ಕು ಯುಗಕಾಲ ಕಾಲಸೂತ್ರದಲ್ಲಿ ವಾಸಮಾಡುತ್ತಾನೆ. ಏಳು ಜನ್ಮ ಕಾಗೆಯಾಗಿ, ಏಳು ಜನ್ಮ ಗೂಬೆಯಾಗಿ , ಮತ್ತು ಏಳು ಜನ್ಮ ಮಹಾವ್ಯಾಧಿಗ್ರಸ್ತನಾಗಿ ಹುಟ್ಟುತ್ತಾನೆ.

ಸನಂದನ— ಪುಣ್ಯಕರ್ಮಮಾಡಿ ಕೀರ್ತಿಗಾಗಿ ಆತ್ಮಪ್ರಶಂಸೆ ಮಾಡಿಕೊಂಡರೆ ಮೂರು ಯುಗಕಾಲ ತಪ್ತಸೂರ್ಮಿ ನರಕದಲ್ಲಿ ಮೂರು ಯುಗಕಾಲ ವಾಸಮಾಡುತ್ತಾನೆ.

ಸನಾತನ— ಮೂರುಹೊತ್ತು ಸಂಧ್ಯಾವಂದನೆ, ಸ್ನಾನಾಂಗತರ್ಪಣ, ವಿಷ್ಣು- ನೈವೇದ್ಯ ಭಕ್ಷಣ, ವಿಷ್ಣುಪೂಜೆ, ವಿಷ್ಣುಮಂತ್ರ, ಏಕಾದಶೀ ವ್ರತ, ಕೃಷ್ಣಜನ್ಮಾಷ್ಟಮೀ ಶಿವರಾತ್ರಿ, ಶ್ರೀರಾಮನವಮೀ ವ್ರತಗಳು ಪಿತೃಕಾರ್ಯ ಮುಂತಾದ ಸ್ವಧರ್ಮವನ್ನು ಪಾಲಿಸದಿದ್ದರೆ ಅವನು ಕೃತಘ್ನನೆನಿಸುತ್ತಾನೆ. ಅವನು ಹದಿನಾಲ್ಕು ಇಂದ್ರರ ಕಾಲ ಕುಂಭೀಪಾಕದಲ್ಲಿದ್ದು ಏಳು ಜನ್ಮಗಳಲ್ಲಿ ಚಂಡಾಲನಾಗಿ, ನೂರು ಜನ್ಮಗಳಲ್ಲಿ ಹದ್ದಾಗಿ, ನೂರು ಜನ್ಮ ಹಂದಿಯಾಗಿ ಹುಟ್ಟಿ ಕೊನೆಯಲ್ಲಿ ಶೂದ್ರರ ಮನೆಯಲ್ಲಿ ಅಡಿಗೆ ಮಾಡುವ ಬ್ರಾಹ್ಮಣನಾಗಿ ಹುಟ್ಟುತ್ತಾನೆ. ಏಳು ಜನ್ಮ ಎತ್ತುಗಳಿಂದ ಜೀವಿಸು- ತ್ತಾನೆ. ಶೂದ್ರರಿಗೆ ಶವದಾಹ ಮಾಡಿಸುತ್ತಾನೆ. ಬ್ರಾಹ್ಮಣನಾಗಿ ಶೂದ್ರ ಸ್ತ್ರೀಸಂಗ ಮಾಡುತ್ತಾನೆ. ರೌರವ ನರಕವನುಭವಿಸಿ ತಿರುಗಿ ಪಾಪಜನ್ಮ ತಿರುಗಿ ನರಕ ಹೀಗೆ ಅನೇಕ ಬಾರಿ ತಿರುಗಿ ಕೊನೆಗೆ ಐದು ಜನ್ಮಗಳಲ್ಲಿ ಕತ್ತೆ ಬೆಕ್ಕು ಕಪ್ಪೆಗಳಾಗಿ ಹುಟ್ಟುತ್ತಾನೆ.

ರಾಜ— ಶೂದ್ರರಿಗೆ ಅಡಿಗೆ ಮಾಡುವುದು, ಶವದಾಹ ಮಾಡುವುದು, ಅವರ ಅನ್ನ ಉಣ್ಣುವುದು ಅವರ ಸ್ತ್ರೀಸಂಗ ಮಾಡುವುದು, ಎತ್ತುಗಳಿಂದ ಜೀವಿಸುವುದು ಇವುಗಳಿಂದ ಬ್ರಾಹ್ಮಣನಿಗೆ ಏನು ಪಾಪ ಬರುವುದು ?

ಪರಾಶರ— ಶೂದ್ರರಿಗೆ ಅಡಿಗೆ ಮಾಡುವ ಅಜ್ಞಬ್ರಾಹ್ಮಣ ಎಪ್ಪತ್ತೊಂದು ಯುಗಕಾಲ ಅಸಿಪತ್ರ ನರಕದಲ್ಲಿ ವಾಸಮಾಡಿ ಏಳುಜನ್ಮಗಳಲ್ಲಿ ಕತ್ತೆ ಇಲಿಕೀಟಗಳಾಗಿ ಹುಟ್ಟುವನು.

ಜರತ್ಕಾರು— ಎತ್ತಿನಿಂದ ಭಾರಹೊರಿಸಿ ಜೀವಿಸುವ ಬ್ರಾಹ್ಮಣ ಕೃತಘ್ನ-ನೆನಿಸುತ್ತಾನೆ. ಅವನು ಎತ್ತಿಗೆ ನಿತ್ಯ ಹೊಡೆದರೆ ಬ್ರಹ್ಮಹತ್ಯಾಪಾಪ, ಭಾರ ಹೊರಿಸಿದರೆ ಅದಕ್ಕಿಂತ ಎರಡುಪಾಲು ಪಾಪ. ಬಿಸಿಲಲ್ಲಿ ಹಸಿತೃಷೆಗಳಿಂದ ದಣಿಯುವಂತೆ ಭಾರ ಹೊರಿಸಿದರೆ ನೂರು ಬ್ರಹ್ಮಹತ್ಯೆಗಳ ಪಾಪ. ಈ ಪಾತಕಿಯ ಅನ್ನನೀರು ಮಲಮೂತ್ರ-ಸಮಾನ. ಅವನಿಗೆ ದೇವ ಪಿತೃಕಾರ್ಯಗಳಲ್ಲಿ ಅಧಿಕಾರವಿಲ್ಲ. ಸೂರ್ಯಚಂದ್ರ-ರಿರುವಷ್ಟು ಕಾಲ ಲಾಲಾಕುಂಡದಲ್ಲಿ ವಾಸ ಮಾಡುತ್ತಾನೆ.

ಮೂರು ಸಂಧ್ಯೆಗಳಲ್ಲಿ ಎತ್ತಿಗೆ ಹೊಡೆವವನಿಗೆ ಯಮದೂತರು ಮುಖಕ್ಕೆ ಕೊಳ್ಳಿ-ಯಿಂದ ಸೀಯುವರು, ಸೂಜಿಯಿಂದ ಚುಚ್ಚುವರು. ಬಳಿಕ ಅರವತ್ತು ಸಾವಿರ ವರ್ಷ ಮಲಕೃಮಿಯಾಗಿ ಹುಟ್ಟಿ ಐದು ಜನ್ಮಗಳಲ್ಲಿ ಕಾಗೆ ಬಕಗಳಾಗಿ ಹದ್ದು ನರಿಗಳಾಗಿ ಹುಟ್ಟಿ ದರಿದ್ರಮಹಾವ್ಯಾಧಿಗ್ರಸ್ತ ಶೂದ್ರನಾಗಿ ಹುಟ್ಟುತ್ತಾನೆ.

ಭಾರದ್ವಾಜ— ಶೂದ್ರರಿಗೆ ಶವದಾಹ ಮಾಡಿಸುವವನೂ ಕೃತಘ್ನನೆನಿಸುತ್ತಾನೆ. ಬ್ರಹ್ಮಹತ್ಯಾ ಪಾಪಕ್ಕೊಳಗಾಗಿ ಆ ಪಾಪಕ್ಕುಚಿತವಾದ ಜನ್ಮಗಳನ್ನೂ ನರಕಗಳನ್ನೂ ಪಡೆಯುತ್ತಾನೆ. ಶೂದ್ರರ ಶ್ರಾದ್ಧಾನ್ನ ಉಂಡರೂ ಅಷ್ಟೇ ದೋಷ.

ವಿಭಾಂಡಕ— ಶೂದ್ರನಲ್ಲಿ ಶ್ರಾದ್ಧಾನ್ನ ಉಂಡರೆ ಸುರಾಪಾನ ಬ್ರಹ್ಮಹತ್ಯಾ-ಪಾಪಗಳುಂಟಾಗುತ್ತವೆ. ಆತ ಪಿತೃಕಾರ್ಯ ದೇವಕಾರ್ಯಗಳಿಗೆ ಅನರ್ಹನೆನಿಸುತ್ತಾನೆ.

ಮಾರ್ಕಂಡೇಯ— ಬ್ರಾಹ್ಮಣ ಶೂದ್ರಸ್ತ್ರೀ ಸಂಗ ಮಾಡಿದರೆ ಕೃತಘ್ನತೆಯ ಪರಮಾವಧಿಯೆನಿಸುತ್ತದೆ. ಹದಿನಾಲ್ಕು ಇಂದ್ರರ ಕಾಲ ಕೃತಿದಂಷ್ಟ್ರ ನರಕವಾಸ. ಕಾದ ಕಬ್ಬಿಣದ ಪ್ರತಿಮೆಯನ್ನು ಆಲಿಂಗಿಸಬೇಕಾಗುತ್ತದೆ. ಬಳಿಕ ವೇಶ್ಯೆಯ ಯೋನಿಕೃಮಿ-ಯಾಗಿ ಸಾವಿರವರ್ಷವಿದ್ದು ಶೂದ್ರನಾಗಿ ಜನಿಸುತ್ತಾನೆ.

ರಾಜ— ಇನ್ನೂ ಬೇರೆ ಬಗೆಯ ಕೃತಘ್ನತೆಗಳಿಗೆ ಫಲವನ್ನು ಹೇಳಿ ಬ್ರಾಹ್ಮಣ ಶಾಪ ನನಗೆ ವರವಾಯಿತು. ಈ ವಿಷಯಗಳನ್ನೆಲ್ಲ ತಿಳಿಯುವ ಸುಯೋಗ ಲಭಿಸಿತು. ಕಷ್ಟ

ಪಡದೆ ಯಾರಿಗೆ ತಾನೆ ಇಷ್ಟ ಲಭಿಸುವುದು ? ನಾನು ಧನ್ಯ. ಕೃತಕೃತ್ಯ. ನನ್ನ ಜೀವನ ಸಾರ್ಥಕ. ಜೀವನ್ಮುಕ್ತರಾದ ಮುನಿಗಳು ದೇವತೆಗಳು ನನ್ನ ಮನೆಗೆ ಬಂದರು.

**ಇಲ್ಲಿಗೆ ಶ್ರೀ ಬ್ರಹ್ಮವೈವರ್ತ ಮಹಾಪುರಾಣದಲ್ಲಿ ಎರಡನೆಯದಾದ ಪ್ರಕೃತಿಖಂಡದ ನಾರದನಾರಾಯಣ ಸಂವಾದದಲ್ಲಿ ರಾಜ ಮುನಿಸಂವಾದದಲ್ಲಿ ರಾಧೋಪಾಖ್ಯಾನದಲ್ಲಿ ಕರ್ಮವಿಪಾಕವೆಂಬ ಐವತ್ತೊಂದನೆ ಅಧ್ಯಾಯ ಮುಗಿಯಿತು.**

## ಸುಯಜ್ಞೋಪಾಖ್ಯಾನದಲ್ಲಿ ಕರ್ಮವಿಪಾಕ ಕಥನ

**ಅಧ್ಯಾಯ-೫೨**

ಪಾರ್ವತಿ— ಬೇರೆ ಬಗೆಯ ಕೃತಘ್ನರಿಗೆ ಯಾವ ಫಲಗಳನ್ನು ಮುನಿಗಳು ಹೇಳಿದರು ಎಂಬುದನ್ನು ಹೇಳು.

ಶಿವ— ರಾಜನ ಪ್ರಶ್ನೆಗೆ ಉತ್ತರವಾಗಿ ನಾರಾಯಣ ಋಷಿ ಹೇಳತೊಡಗಿದ- ತಾನು ಅಥವಾ ಇನ್ನೊಬ್ಬ ದಾನಮಾಡಿರುವ ಬ್ರಹ್ಮಸ್ವವನ್ನು ಅಪಹರಿಸುವವನೂ ಕೃತಘ್ನನೆನಿಸುತ್ತಾನೆ. ಬ್ರಾಹ್ಮಣನ ಕಣ್ಣೀರಿನಲ್ಲಿ ಎಷ್ಟು ಕಣಗಳಿರುವುವೋ ಅಷ್ಟು ಸಾವಿರ ವರ್ಷ ಶೂಲಪ್ರೋತದಲ್ಲಿ ಅವನಿಗೆ ಶಿಕ್ಷೆ. ಉರಿವಕೆಂಡವನ್ನು ಆತ ಉಣ್ಣುತ್ತಾನೆ. ಕುದಿವ ಮೂತ್ರ ಕುಡಿಯುತ್ತಾನೆ. ಉರಿವ ಕೆಂಡದಲ್ಲಿ ಮಲಗುತ್ತಾನೆ. ಮೇಲೆ ಯಮದೂತರ ಏಟುಗಳು. ಕೊನೆಗೆ ಮಲಕ್ರಿಮಿಯಾಗಿ ಅರವತ್ತು ಸಾವಿರ ದಿವ್ಯ-ವರ್ಷಕಾಲವಿರುತ್ತಾನೆ ಮತ್ತು ಭೂಮಿಹೀನ, ಸಂತತಿ ಹೀನ, ದರಿದ್ರ, ಕೃಪಣ, ರೋಗಿ, ಶೂದ್ರನಾಗಿ ಹುಟ್ಟುತ್ತಾನೆ.

ನಾರದ— ಪರರ ಕೀರ್ತಿಯನ್ನು ನಾಶಮಾಡಿಕೊಳ್ಳುವವ, ತನ್ನ ಕೀರ್ತಿ ಕಳೆದುಕೊಳ್ಳುವವ ಕೃತಘ್ನನೆನಿಸಿ ಹದಿನಾಲ್ಕು ವರ್ಷಕಾಲ ಅಂಧಕೂಪ ನರಕದಲ್ಲಿ ವಾಸ ಮಾಡುತ್ತ ಕೀಟಗಳು ಮುಂಗುಸಿ ಹದ್ದುಗಳಿಂದ ಕಚ್ಚಿಸಿಕೊಂಡು ಕುದಿವ ಉಪ್ಪು ನೀರು ಕುಡಿಯುತ್ತಾನೆ. ಏಳು ಜನ್ಮ ಹಾವಾಗಿ ಕಾಗೆಯಾಗಿ ಹುಟ್ಟುತ್ತಾನೆ.

ದೇವಲ— ಬ್ರಹ್ಮಸ್ವ ಗುರುಸ್ವ ದೇವಸ್ವಗಳನ್ನು ಅಪಹರಿಸಿದರೆ ಅವನು ಕೃತಘ್ನ-ನೆನಿಸಿ ಹದಿನಾಲ್ಕು ಇಂದ್ರರ ಕಾಲ ಅವಟೋದ ನರಕ ಶಿಕ್ಷೆ ಅನುಭವಿಸಿ ಮದ್ಯಪಾಯಿ ಶೂದ್ರನಾಗಿ ಹುಟ್ಟುತ್ತಾನೆ.

ಜೆಗೀಷವ್ಯ— ಮಾತಾಪಿತೃಗಳಲ್ಲಿ ಭಕ್ತಿ ಇಡದೆ ಅವರನ್ನು ರಕ್ಷಿಸದವ, ಹೊಡೆಯುವವ ಬೈಯುವವ ಕೃತಘ್ನನೆನಿಸುತ್ತಾನೆ. ಪತಿಯನ್ನು ಹೊಡೆಯುವ ಬೈಯುವ ಪತ್ನಿಯೂ ಕೃತಘ್ನಳೆನಿಸುತ್ತಾಳೆ. ಇವರೆಲ್ಲ ವಹ್ನಿಕುಂಡದಲ್ಲಿ ಚಂದ್ರಸೂರ್ಯರಿರುವಷ್ಟು ಕಾಲವಾಸ ಮಾಡುತ್ತಾರೆ. ಬಳಿಕ ಏಳು ಜನ್ಮಗಳಲ್ಲಿ ಜಿಗಣೆಯಾಗಿ ಹುಟ್ಟುತ್ತಾರೆ.

ವಾಲ್ಮೀಕಿ— ಹೇಗೆ ಎಲ್ಲ ವೃಕ್ಷಗಳಲ್ಲಿ ವೃಕ್ಷತ್ವವಿರುವುದೋ ಹಾಗೆ ಎಲ್ಲ ಪಾಪಕರ್ಮಗಳಲ್ಲಿಯೂ ಕೃತಘ್ನತೆ ಇರುತ್ತದೆ. ಕಾಮಕ್ರೋಧ ಭಯಗಳಿಗೆ ವಶನಾಗಿ ಸುಳ್ಳುಸಾಕ್ಷಿ ನೀಡುವವ ಕೃತಘ್ನನೆನಿಸುತ್ತಾನೆ. ವಾದಿ ಪ್ರತಿವಾದಿಗಳಲ್ಲಿ ಪಕ್ಷಪಾತ ಮಾಡಿ ತೀರ್ಪು ನೀಡುವವನೂ ಕೃತಘ್ನನೆನಿಸುತ್ತಾನೆ. ಇವರೆಲ್ಲ ಸಾವಿರ ಇಂದ್ರರ ಕಾಲ ಸರ್ಪಕುಂಡದಲ್ಲಿರುತ್ತಾನೆ. ಸರ್ಪಗಳು ಅವರನ್ನು ಸುತ್ತಿ ಕಚ್ಚುತ್ತವೆ. ಸರ್ಪಗಳ ಮಲಮೂತ್ರ ಭುಂಜಿಸಬೇಕಾಗುತ್ತದೆ. ಏಳುಜನ್ಮ ಹೆಂಟೆ ಗೊದ್ದನಾಗಿ ಏಳು ಜನ್ಮ ಕಪ್ಪೆಯಾಗಿ ಹುಟ್ಟಿ ಮಹಾ ಅರಣ್ಯದಲ್ಲಿ ಬೂರುಗದ ಮರವಾಗಿ ಹುಟ್ಟುತ್ತಾನೆ. ಬಳಿಕ ಮೂಕ ಶೂದ್ರನಾಗಿ ಜನಿಸುತ್ತಾನೆ.

ಆಸ್ತೀಕ— ಗುರುತಲ್ಪಗಮನ ಮಾತೃಗಮನದಂತೆ, ಮಾತೃಗಮನಕ್ಕೆ ಪ್ರಾಯಶ್ಚಿತ್ತ-ವಿಲ್ಲ. ಶೂದ್ರ ಬ್ರಾಹ್ಮಣಸ್ತ್ರೀಸಂಗ ಮಾಡಿದರೂ ಅಷ್ಟು ದೋಷವಿದೆ. ಬ್ರಾಹ್ಮಣಸ್ತ್ರಿಗೂ ಶೂದ್ರಸಂಗದಿಂದ ಅಷ್ಟುದೋಷ. ಹಾಗೇ ಮಗಳು ಸೊಸೆ, ಅತ್ತೆ ಅತ್ತಿಗೆ, ಸೋದರಿ-ಯರ ಸಂಗ ಮಾಡಿದರೂ ಅಷ್ಟೇ ದೋಷವಿದೆ. ಈ ಪಾಪ ಮಾಡಿದವ ಜೀವನ್ಮೃತ-ನಂತೆ. ಚಂಡಾಲನಂತೆ ಅಸ್ಪೃಶ್ಯ. ಸೂರ್ಯದರ್ಶನಕ್ಕೆ ಆತ ಅರ್ಹನಲ್ಲ. ಶಾಲಗ್ರಾಮ, ಶಾಲಗ್ರಾಮ ತೀರ್ಥ, ತುಲಸೀದಲ, ತುಲಸೀದಲಜಲ, ಸರ್ವತೀರ್ಥಜಲ, ವಿಪ್ರ-ಪಾದೋದಕಗಳನ್ನು ಮುಟ್ಟಲೂ ಆತ ಅರ್ಹನಲ್ಲ. ದೇವಗುರು ಬ್ರಾಹ್ಮಣರನ್ನು ನಮಸ್ಕರಿಸಲೂ ಅರ್ಹನಲ್ಲ. ಅವನು ನೀಡುವ ಅನ್ನ ನೀರು ಮಲಮೂತ್ರ-ಸಮಾನವೆಂದು ದೇವತೆಗಳು ಪಿತೃಗಳು ಮುನಿಗಳು ಬಿಟ್ಟುಬಿಡುವರು. ಅವನ ಸ್ಪರ್ಶ-ವಾದರೆ ದೇವತೆಗಳು ಋಷಿಗಳು ಏಳುದಿನ ಉಪವಾಸ ಮಾಡುವರು. ಭೂದೇವಿಗೆ ಅವನು ಭಾರವೆನಿಸುವನು. ಮನುಷ್ಯರು ಅವನ ಜೊತೆಗೆ ಸ್ಪರ್ಶ ಆಲಾಪ ಶಯನ ಭೋಜನಗಳನ್ನು ಮಾಡಿದರೆ ಅವನಷ್ಟೇ ಪಾಪ. ಅವನೂ ನೂರು ಬ್ರಹ್ಮರ ಕಾಲ ಕುಂಭೀಪಾಕದಲ್ಲಿ ವಾಸ ಮಾಡುವನು. ಅರವತ್ತು ಸಾವಿರವರ್ಷ ಮಲಕ್ರಿಮಿ ಯಾಗುವನು. ಬಳಿಕ ಏಳುಜನ್ಮಗಳಲ್ಲಿ ಭಾರ್ಯಾಹೀನನ ಪುಂಸಕ ಚಂಡಾಲ-ನಾಗುವನು. ಏಳು ಜನ್ಮ ಕುಷ್ಠರೋಗಿ ಶೂದ್ರನಾಗುವನು. ಬಳಿಕ ಏಳು ಜನ್ಮ ಬ್ರಾಹ್ಮಣನಾಗಿಯೂ ಅಂಧ ಕುಷ್ಠರೋಗಿ ನಪುಂಸಕನಾಗುವನು.

ಮುನಿಗಳು— ರಾಜನೇ, ಎಲ್ಲ ಪಾಪಗಳಿಗೆ ಫಲಗಳನ್ನು ಶಾಸ್ತ್ರಾನುಸಾರವಾಗಿ ಹೇಳಿದ್ದೇವೆ. ಅತಿಥಿಗೆ ಅಪಮಾನ ಮಾಡುವುದೂ ಇಂಥದೇ ಒಂದು ಪಾಪ.

ಆದ್ದರಿಂದ ಮುನಿಗೆ ನಮಸ್ಕರಿಸು. ಅವನನ್ನು ಅರಮನೆಗೆ ಕರೆಸಿಕೊಳ್ಳು, ಚೆನ್ನಾಗಿ ಸತ್ಕಾರ ಮಾಡಿ ಆಶೀರ್ವಾದ ಸ್ವೀಕರಿಸು. ಕಾಡಿಗೆ ಹೋಗಿ ತಪಸ್ಸು ಮಾಡು. ಶಾಪ-ಮುಕ್ತನಾಗುವಿ ಪುನಃ ಹಿಂತಿರುಗುವೆ.

ಹೀಗೆ ಹೇಳಿ ಆಶೀರ್ವದಿಸಿ ಮುನಿಗಳೂ ದೇವತೆಗಳೂ ರಾಜರೂ ಬಂಧು-ವರ್ಗದವರೂ ತಮ್ಮ ತಮ್ಮ ಮನೆಗಳಿಗೆ ಹೋದರು.

**ಇಲ್ಲಿಗೆ ಶ್ರೀ ಬ್ರಹ್ಮವೈವರ್ತ ಮಹಾಪುರಾಣದಲ್ಲಿ ಎರಡನೆಯದಾದ ಪ್ರಕೃತಿಖಂಡದ ನಾರದನಾರಾಯಣ ಸಂವಾದದಲ್ಲಿ ರಾಧೋಪಾಖ್ಯಾನದಲ್ಲಿ ಬರುವ ಸುಯಜ್ಞೋಪಾಖ್ಯಾನದಲ್ಲಿ ಕರ್ಮವಿಪಾಕವೆಂಬ ಐವತ್ತೆರಡನೆ ಅಧ್ಯಾಯ ಮುಗಿಯಿತು.**

## ಸುಯಜ್ಞನಿಗೆ ಅತಿಥಿಯ ಉಪದೇಶ

**ಅಧ್ಯಾಯ-೫೩**

ಪಾರ್ವತಿ— ಮುನಿಗಳೆಲ್ಲ ಹೊರಟು ಹೋದ ಬಳಿಕ ರಾಜ ಏನು ಮಾಡಿದ ? ಅತಿಥಿಯಾದ ಮುನಿ ಏನು ಮಾಡಿದ ? ಆತ ತಿರುಗಿ ಅರಮನೆಗೆ ಬಂದನೆ, ಇಲ್ಲವೆ ?

**ಶಿವ—** ಮುನಿಗಳೆಲ್ಲ ಹೊರಟು ಹೋದಾಗ ಪುರೋಹಿತನಾದ ವಸಿಷ್ಠನ ಉಪದೇಶದಂತೆ ರಾಜ ಮುನಿಯ ಪಾದಗಳಿಗೆ ದಂಡಪ್ರಣಾಮಮಾಡಿದ. ಮುನಿ ಕೋಪ ಬಿಟ್ಟು ರಾಜನಿಗೆ ಆಶೀರ್ವದಿಸಿದ. ರಾಜ ಕಣ್ಣೀರು ಸುರಿಸುತ್ತ ಕೈ ಮುಗಿದು ಹೇಳಿದ- 'ಸ್ವಾಮಿ, ನಿಮ್ಮ ಕುಲ ಯಾವುದು ? ಹೆಸರೇನು ? ಎಲ್ಲಿ ವಾಸ ? ನಿಮ್ಮ ಗುರು ಯಾರು ? ಆರಾಧ್ಯ ದೈವ ಯಾರು ? ನಿನ್ನ ಈ ವೇಷಕ್ಕೆ ಕಾರಣವೇನು ?

ಅತಿಥಿಯಾಗಿ ಮನೆಗೆ ಬರುವವನು ಸಾಕ್ಷಾತ್ ವಿಷ್ಣುವೆ. ನನ್ನ ಈ ರಾಜ್ಯಕೋಶ. ಐಶ್ವರ್ಯವೆಲ್ಲವನ್ನೂ ನೀನು ಸ್ವೀಕರಿಸು. ನನ್ನನ್ನೂ ನನ್ನ ಹೆಂಡತಿ ಮಕ್ಕಳನ್ನೂ ನಿನ್ನ ಸೇವಕರನ್ನಾಗಿ ಮಾಡಿಕೊಳ್ಳು. ನೀನೆ ಸಪ್ತಸಾಗರ ಸಪ್ತದ್ವೀಪಯುಕ್ತವಾದ ಸಮಸ್ತ-ಭೂಮಂಡಲವನ್ನಾಳು.'

ರಾಜನ ಮಾತನ್ನು ಕೇಳಿ ಮುನಿ ನಕ್ಕು ಹೇಳಿದ—

ಬ್ರಹ್ಮಪುತ್ರ ಮರೀಚಿಯ ಮಗ ಕಶ್ಯಪ. ಕಶ್ಯಪರ ಮಕ್ಕಳೆಲ್ಲ ದೇವತ್ವ ಪಡೆದರು. ಅವರಲ್ಲಿ ತ್ವಷ್ಟ್ರುವೂ ಒಬ್ಬ, ಮಹಾಜ್ಞಾನಿ. ಪುಷ್ಕರದಲ್ಲಿ ಸಾವಿರದಿವ್ಯ ವರ್ಷಕಾಲ ತಪಸ್ಸು ಮಾಡಿ ನಾರಾಯಣನಿಂದ ವರ ಪಡೆದು ವಿಶ್ವರೂಪನೆಂಬ ತಪೋಧನನನ್ನು

ಮಗನನ್ನಾಗಿ ಪಡೆದ. ವಿಶ್ವರೂಪ ಇಂದ್ರನಿಗೆ ಪೌರೋಹಿತ್ಯ ಮಾಡಿ ದೈತ್ಯರಾದ ತಾಯಿಯ ತಂದೆ ಮುಂತಾದವರಿಗೆ ತಾಯಿಯ ಪ್ರೇರಣೆಯಿಂದ ಯಜ್ಞದಲ್ಲಿ ತುಪ್ಪದ ಆಹುತಿ ನೀಡಿದ. ಇಂದ್ರ ಅವನ ತಲೆಕಡಿದ. ಈ ವಿಶ್ವರೂಪನ ಮಗನಾದ ವಿರೂಪ ನನ್ನ ತಂದೆಯ ತಂದೆ. ನಾನು ಸುತಪನೆಂಬ ಕಶ್ಯಪಗೋತ್ರದ ಬ್ರಾಹ್ಮಣ ನನ್ನ ಗುರು ಶಿವ. ಆರಾಧ್ಯದೈವ ಅಪ್ರಾಕೃತನಾದ ಶ್ರೀಕೃಷ್ಣ. ಅವನ ಪಾದಕಮಲಗಳನ್ನೆ ಸದಾ ಬಯಸುತ್ತೇನೆ. ನನಗೆ ಸಂಪತ್ತು ಬೇಡ. ಅವನ ಸೇವೆ ಬೇಕು. ಅವನ ಸೇವೆ ಇಲ್ಲದ ಸಾಲೋಕ್ಯ ಸಾರ್ಷ್ಟಿ ಸಾರೂಪ್ಯ ಸಾಮೀಪ್ಯಗಳನ್ನು ಆತ ಕೊಟ್ಟರೂ ನಾನು ಸ್ವೀಕರಿಸ-ಲಾರೆ. ಬ್ರಹ್ಮಪದವಿ ಇಂದ್ರಪದವಿ ಮುಂತಾದುವನ್ನೂ ನಾನು ಬಯಸಲಾರೆ. ಇನ್ನು ನಿನ್ನ ಈ ರಾಜ್ಯ ಸಂಪತ್ತುಗಳೇಕೆ ? ಎಲ್ಲವೂ ನೀರಲ್ಲಿ ಬರೆದ ಬರೆಹದಂತೆ ಕ್ಷಣಿಕ. ನಿನ್ನ ಯಜ್ಞಕ್ಕೆ ಎಲ್ಲ ಮುನಿಗಳೂ ಬರುತ್ತಾರೆ ಎಂದು ಕೇಳಿದೆ. ನಾನೂ ಬಂದು ನಿನಗೆ ವಿಷ್ಣುಭಕ್ತಿ ಪ್ರಾಪ್ತಿಗೆ ದಾರಿ ಮಾಡಿಕೊಡಬೇಕೆಂದೇ ಬಯಸಿದೆ. ನಾನು ಈಗ ನಿನಗೆ ಅನುಗ್ರಹ ಮಾಡಿದ್ದೇನೆ. ಶಾಪಕೊಟ್ಟಿಲ್ಲ. ಘೋರ ಸಂಸಾರಸಾಗರದಲ್ಲಿ ಬಿದ್ದಿರುವ ನಿನ್ನನ್ನು ಉದ್ಧರಿಸಿದ್ದೇನೆ. ನೀರು ನಿಜವಾಗಿ ತೀರ್ಥವಲ್ಲ, ಮಣ್ಣು ಕಲ್ಲು ದೇವರಲ್ಲ. ಅವು ಬಹು ವಿಳಂಬದಿಂದ ಪಾಪಿಯನ್ನು ಶುದ್ಧಗೊಳಿಸುತ್ತವೆ. ಆದರೆ ಕೃಷ್ಣಭಕ್ತರು ದರ್ಶನ ಮಾತ್ರದಿಂದಲೆ ಶುದ್ಧಗೊಳಿಸುತ್ತಾರೆ. ರಾಜನೆ, ನೀನು ಅರಮನೆ ಬಿಟ್ಟು ನಡೆ. ರಾಜ್ಯವನ್ನು ಮಗನಿಗಿತ್ತು ಹೆಂಡತಿಯ ರಕ್ಷಣೆಯ ಭಾರವನ್ನೂ ಮಗನಿಗೆ ಒಪ್ಪಿಸಿ ಕಾಡಿಗೆ ಹೋಗು. ಬ್ರಹ್ಮನಿಂದ ತೊಡಗಿ ಹುಲ್ಲುಕಡ್ಡಿಯವರೆಗಿನ ಸಮಸ್ತ ಪ್ರಪಂಚವೂ ನಿಃಸಾರವಾದುದು. ಶ್ರೀಕೃಷ್ಣನನ್ನೇ ಆರಾಧಿಸು. ಬ್ರಹ್ಮ ವಿಷ್ಣು ಶಿವಾದಿಗಳಿಗೂ ಆತ ಸಿಗುವವನಲ್ಲ. ಅವರೆಲ್ಲ ಅವನ ಆಜ್ಞೆಯಿಂದಲೆ ತಮ್ಮ ಕರ್ತವ್ಯಗಳನ್ನು ನಿರ್ವಹಿಸು-ತ್ತಾರೆ. ಕಾಲಕಾಲದಲ್ಲಿ ಇಂದ್ರಮಳೆಗರೆಯುವುದು, ಅಗ್ನಿ ಸುಡುವುದು, ಮೃತ್ಯು ಪ್ರಾಣಿಗಳನ್ನೊಯ್ಯುವುದು ಎಲ್ಲವೂ ಅವನ ಇಚ್ಛೆಯಂತೆ. ಕಾಲಪುರುಷನಾಗಿ ಕಾಲ-ಕಾಲದಲ್ಲಿ ಅವನೆ ಸೃಷ್ಟಿಸ್ಥಿತಿಲಯಗಳನ್ನು ಮಾಡುತ್ತಾನೆ.

ಈ ಬ್ರಹ್ಮಾಂಡ ಸಪ್ತದ್ವೀಪ ಸಪ್ತಸಾಗರಯುಕ್ತವಾದ ಭೂಮಿಯಿಂದಲೂ, ಏಳು ಪಾತಾಳಗಳಿಂದಲೂ ಊರ್ಧ್ವ ಲೋಕಗಳಿಂದಲೂ ಕೂಡಿದ್ದು ಅದರೊಳಗೆ ಬ್ರಹ್ಮ ವಿಷ್ಣು ಶಿವಾದಿ ದೇವತೆಗಳೂ ನರನಾಗ ಗಂಧರ್ವ ರಾಕ್ಷಸಾದಿಗಳು ಇರುತ್ತಾರೆ. ಇಂಥ ಬ್ರಹ್ಮಾಂಡ ಕ್ಷುದ್ರವಿರಾಟ್ ರೂಪಿ ವಿಷ್ಣುವಿನ ನಾಭಿಕಮಲದಲ್ಲಿದೆ. ಅಂಥ ವಿಷ್ಣು ಜಲರೂಪದ ಹಾಸಿಗೆಯಲ್ಲಿ ಮಲಗಿ ಕೃಷ್ಣನನ್ನು ಧ್ಯಾನಿಸುತ್ತಾನೆ. ಅವನ ರೋಮ-ಕೂಪದಲ್ಲಿ ಬ್ರಹ್ಮಾಂಡ ಅಡಗಬಲ್ಲುದು. ಆದರೂ ಆತ ಕೃಷ್ಣನ ಶರೀರದಿಂದ ಬಂದವ. ಕೃಷ್ಣನನ್ನು ಧ್ಯಾನಿಸುವವ. ಬ್ರಹ್ಮ ವಿಷ್ಣು ಶಿವಾದಿಗಳೂ ಮಹಾವಿರಾಟ್ ಕ್ಷುದ್ರ ವಿರಾಟ್ ಪ್ರಕೃತಿ ಎಲ್ಲರೂ ಕಾಲನಿಗೆ ಭಯಪಟ್ಟು ಅವನನ್ನೇ ಧ್ಯಾನಿಸುತ್ತಾರೆ.

ರಾಜನೆ, ಶಿವ ಉಪದೇಶಿಸಿದ ಈ ತತ್ವಗಳನ್ನು ನಿನಗೆ ಉಪದೇಶಿಸಿದ್ದೇನೆ. ಇನ್ನೇನು ಕೇಳಬಯಸುವೆ ?

**ಇಲ್ಲಿಗೆ ಶ್ರೀ ಬ್ರಹ್ಮವೈವರ್ತ ಮಹಾಪುರಾಣದಲ್ಲಿ ಎರಡನೆಯದಾದ ಪ್ರಕೃತಿಖಂಡದ ನಾರದನಾರಾಯಣ ಸಂವಾದದಲ್ಲಿ ಬರುವ ಹರಗೌರೀ ಸಂವಾದ ರೂಪವಾದ ರಾಧೋಪಾಖ್ಯಾನದಲ್ಲಿ ಸುಯಜ್ಞೋಪಾಖ್ಯಾನದಲ್ಲಿ ಸುಯಜ್ಞನಿಗೆ ಅತಿಥಿಯ ಉಪದೇಶವೆಂಬ ಐವತ್ತ ಮೂರನೇ ಅಧ್ಯಾಯ ಮುಗಿಯಿತು.**

## ಸುಯಜ್ಞನಿಗೆ ಗೋಲೋಕಪ್ರಾಪ್ತಿ

**ಅಧ್ಯಾಯ-೫೪**

ರಾಜ— ಸರ್ವಾಧಾರನಾದ ಮಹಾವಿಷ್ಣುವಿಗೆ ಆಧಾರ ಯಾವುದು ? ಅವನೂ ಕಾಲಭಯ ಉಳ್ಳವನಾದರೆ ಅವನ ಕಾಲಮಿತಿಯೆಷ್ಟು ? ಕ್ಷುದ್ರ ವಿರಾಟ್ ಪುರುಷ-ನಿಗೂ ಬ್ರಹ್ಮ ಪ್ರಕೃತಿಗಳಿಗೂ ಮನು ಇಂದ್ರ ಚಂದ್ರ ಸೂರ್ಯರಿಗೂ ಬೇರೆ ಪ್ರಾಕೃತ ಜನರಿಗೂ ಆಯುಃ ಪರಿಮಿತಿ ಎಷ್ಟು ? ವಿಶ್ವದ ಊರ್ಧ್ವಭಾಗದಲ್ಲಿರುವ ಲೋಕ ಯಾವುದು ?

ಮುನಿ— ವಿಶ್ವದ ಊರ್ಧ್ವ ಭಾಗದಲ್ಲಿರುವ ಲೋಕ ಗೋಲೋಕ. ಆಕಾಶದಂತೆ ವಿಸ್ತಾರವಾದುದು. ನಿತ್ಯವಾಗಿದ್ದು ಕೃಷ್ಣನ ಇಚ್ಛೆಯಿಂದ ಅಭಿವ್ಯಕ್ತವಾಗುತ್ತದೆ. ಸೃಷ್ಟಿಯ ಆದಿಯಲ್ಲಿ ಪ್ರಕೃತಿಯೊಡನೆ ಕ್ರೀಡಿಸಿ ಆಯಾಸಗೊಂಡ ಕೃಷ್ಣನ ಮುಖದಿಂದ ಬೆವರುಹರಿದು ಎಲ್ಲವೂ ಜಲಮಯವಾಯಿತು. ಆ ಜಲವೆ ಸರ್ವಾಧಾರನಾದ ವಿಷ್ಣುವಿಗೆ ಆಧಾರವಾಯಿತು. ಅದರಲ್ಲಿ ನಿರ್ಮಿತವಾದ ವೈಕುಂಠದಲ್ಲಿ ಪೀತಾಂಬರ-ಧಾರಿ ಚತುರ್ಭುಜನಾದ ವಿಷ್ಣು ಮಲಗಿದ. ಈ ವೈಕುಂಠವೂ ಆತ್ಮ ಆಕಾಶಗಳಂತೆ ನಿತ್ಯ, ಸ್ವತ. ನಿರಾಧಾರವಾಗಿ ಪರಮಾತ್ಮನ ಇಚ್ಛೆಯಿಂದಲೆ ನಿಂತಿದೆ. ಲಕ್ಷ್ಮಿ, ಸರಸ್ವತಿ ಗಂಗೆ ತುಲಸಿಯರ ಅರಸನಾದ ಆ ವಿಷ್ಣು ಸುನಂದ, ನಂದ, ಕುಮುದ, ಮುಂತಾದ ಪಾರ್ಷದರಿಂದ ಪರಿವೃತನಾಗಿದ್ದಾನೆ.

ಚತುರ್ಭುಜನಾದ ವಿಷ್ಣು, ದ್ವಿಭುಜನಾದ ಕೃಷ್ಣ ಇವೆರಡೂ ಒಬ್ಬನದೆ ಎರಡು ರೂಪ. ಚತುರ್ಭುಜ ವೈಕುಂಠದಲ್ಲಿರುತ್ತಾನೆ. ದ್ವಿಭುಜ ಇನ್ನೂ ಐವತ್ತು ಕೋಟಿ ಯೋಜನ ಮೇಲೆ ಗೋಲೋಕದಲ್ಲಿರುತ್ತಾನೆ. ಆ ಗೋಲೋಕ ಅಮೂಲ್ಯ ರತ್ನಮಯ ದಿವ್ಯಮಂದಿರಗಳಿಂದ ಕೂಡಿದ್ದು ಕೋಟಿ ಯೋಜನ ಅಗಲ. ಅದರ

ನೂರರಷ್ಟು ಉದ್ದವಾಗಿದ್ದು ಶತಶೃಂಗ ಪರ್ವತಗಳುಳ್ಳದ್ದು. ವಿರಜಾನದಿಯಿಂದ ಪರಿವೃತವಾಗಿದೆ. ಅದರೊಳಗೆ ವಿರಜಾನದಿಯ ಅರ್ಧಪ್ರಮಾಣ ದೀರ್ಘ ಶತಶೃಂಗ ಪರ್ವತದ ಅರ್ಧದಷ್ಟು ಅಗಲವಾದ ವೃಂದಾವನವಿದೆ. ವೃಂದಾವನದಲ್ಲಿ ಅದರ ಅರ್ಧದಷ್ಟಿರುವ ರಾಸಮಂಡಲವಿದೆ. ರಾಸಮಂಡಲದಲ್ಲಿ ಗೋವುಗಳು ಗೋಪ-ಗೋಪಿಯರು ಇವರಿಂದ ಕೂಡಿದ ರಾಧಾರಮಣ ವಿಹಾರ ಮಾಡುತ್ತಾನೆ. ಗೋಪ ಬಾಲಕ ವೇಷದಿಂದ ಮುರಲೀ ಹಸ್ತನಾಗಿರುತ್ತಾನೆ.

ನಾಲ್ಕು ಅಂಗುಲ ಉದ್ದ ಒಂದು ಮಾಷ ತೂಕದ ನಾಲ್ಕು ಸುವರ್ಣ ಸೂಜಿಗಳಿಂದ ರಂಧ್ರ ಮಾಡಿದ್ದು, ಆರು ಪಲ ತೂಕವಿರುವ ತಾಮ್ರ ಪಾತ್ರೆಯಲ್ಲಿ ತುಂಬಿದ ನೀರು ಎಷ್ಟುಕಾಲದಲ್ಲಿ ಸ್ರವಿಸುವುದೋ ಆ ಕಾಲ ದಂಡವೆನಿಸುವುದು. ಎರಡು ದಂಡಗಳು ಒಂದು ಮುಹೂರ್ತ. ನಾಲ್ಕು ಮುಹೂರ್ತ ಒಂದು ಯಾಮ. ಎಂಟು ಯಾಮಗಳು ಒಂದು ದಿನ. ಹದಿನೈದು ದಿನಗಳು ಒಂದು ಪಕ್ಷ. ಎರಡು ಪಕ್ಷಗಳು ಒಂದು ತಿಂಗಳು. ಹನ್ನೆರಡು ತಿಂಗಳು ಒಂದು ವರ್ಷ. ಇದು ಮನುಷ್ಯಮಾನ. ಮನುಷ್ಯರ ಒಂದು ತಿಂಗಳು ಪಿತೃಗಳಿಗೆ ಒಂದುದಿವಸ. ಮನುಷ್ಯರ ಒಂದು ವರ್ಷ ದೇವತೆಗಳಿಗೆ ಒಂದು ದಿವಸ. ಉತ್ತರಾಯಣ ಹಗಲು ದಕ್ಷಿಣಾಯನ ರಾತ್ರಿ.

ಕೃತ ತ್ರೇತಾ ದ್ವಾಪರ ಕಲಿ ಎಂದು ಚತುರ್ಯುಗಗಳು, ದೇವಮಾನದಿಂದ ಕ್ರಮ-ವಾಗಿ ನಾಲ್ಕು ಮೂರು ಎರಡು ಒಂದು ಸಾವಿರ ವರ್ಷ ದೀರ್ಘವಾದವುಗಳು. ಈ ಯುಗಗಳ ಸಂಧಿ ಸಂಧ್ಯಂಶಗಳು ಒಟ್ಟು ಎರಡು ಸಾವಿರ ವರ್ಷಗಳಾಗುತ್ತಿವೆ.

ಮನುಷ್ಯ ಪ್ರಮಾಣದಂತೆ ನಲವತ್ತ ಮೂರು ಲಕ್ಷ ಇಪ್ಪತ್ತುಸಾವಿರ ವರ್ಷಗಳು ಒಂದು ಚತುರ್ಯುಗ. ಹದಿನೇಳು ಲಕ್ಷ ಇಪ್ಪತ್ತೆಂಟು ಸಾವಿರ ವರ್ಷ ಕೃತಯುಗ. ಹನ್ನೆರಡು ಲಕ್ಷ ತೊಂಬತ್ತಾರು ಸಾವಿರ ವರ್ಷ ತ್ರೇತಾಯುಗ. ಎಂಟು ಲಕ್ಷ ಅರವತ್ತ ನಾಲ್ಕು ಸಾವಿರ ವರ್ಷ ದ್ವಾಪರ. ನಾಲ್ಕುಲಕ್ಷ ಮೂವತ್ತೆರಡುಸಾವಿರ ವರ್ಷ ಕಲಿಯುಗ.

ವಾರಗಳು ಏಳು, ತಿಥಿಗಳು ಹದಿನಾರು, ಹಗಲು ರಾತ್ರಿಗಳು, ಎರಡು ಪಕ್ಷಗಳು ತಿಂಗಳು, ವರ್ಷಗಳು ಹೇಗೋ ಹಾಗೇ ಯುಗಗಳೂ ಮನ್ವಂತರಗಳೂ ಚಕ್ರದಂತೆ ಉರುಳುತ್ತವೆ. ಎಪ್ಪತ್ತೊಂದು ಯುಗಗಳು ಒಂದು ಮನ್ವಂತರ. ಒಂದೊಂದು ಮನ್ವಂತರಕ್ಕೆ ಒಬ್ಬೊಬ್ಬ ಮನುವಿನಂತೆ ಕ್ರಮವಾಗಿ ಹದಿನಾಲ್ಕು ಮನುಗಳು ಪ್ರತಿಯೊಬ್ಬರೂ ಎಪ್ಪತ್ತೊಂದು ಚತುರ್ಯುಗಗಳ ಕಾಲ ಅಧಿಕಾರದಲ್ಲಿರುವರು. ಹೀಗೆ ಒಂದು ಮನ್ವಂತರವೆಂದರೆ ಮನುಷ್ಯಮಾನದಂತೆ ಇಪ್ಪತ್ತೈದು ಸಾವಿರದ ಐನೂರ ಅರವತ್ತು ಯುಗಗಳು.

ಇನ್ನು ಮನುಗಳ ಚರಿತ್ರೆಯನ್ನು ನಾನು ಶಿವನ ಮುಖದಿಂದ ಕೇಳಿದಂತೆ ವರ್ಣಿಸುತ್ತೇನೆ. ಬ್ರಹ್ಮನ ಮಗನಾದ ಶತರೂಪಾಪತಿ ಸ್ವಾಯಂಭುವ ಮನು

ಮೊದಲನೆಯ ಮನು. ಅವನೆ ನಿನ್ನ ಮುತ್ತಜ್ಜ. ಶಿವನ ಶಿಷ್ಯ ಮಹಾಜ್ಞಾನಿ, ವಿಷ್ಣುವ್ರತ ಪರಾಯಣ. ಅವನು ನರ್ಮದಾ ನದೀತೀರದಲ್ಲಿ ಸಾವಿರ ರಾಜಸೂಯ-ಯಾಗಗಳನ್ನೂ ಮೂರುಲಕ್ಷ ಅಶ್ವಮೇಧಗಳನ್ನೂ ಮೂರುಲಕ್ಷ ನರಮೇಧಗಳನ್ನೂ ನಾಲ್ಕು ಲಕ್ಷ ಗೋಮೇಧಗಳನ್ನೂ ಮಾಡಿ ಪ್ರತಿನಿತ್ಯ ಮೂರುಕೋಟಿ ಬ್ರಾಹ್ಮಣರಿಗೆ ಭೋಜನ ಮಾಡಿಸುತ್ತಿದ್ದ. ಶಿವನಿಂದ ತತ್ವಜ್ಞಾನವನ್ನೂ ಕೃಷ್ಣಮಂತ್ರವನ್ನೂ ಉಪದೇಶ ಪಡೆದು ಗೋಲೋಕಕ್ಕೆ ಆತ ತೆರಳಿದ. ತನ್ನ ಮಗ ಹೀಗೆ ಮುಕ್ತನಾದುದನ್ನು ಕಂಡು ಬ್ರಹ್ಮ ಶಿವನನ್ನು ಹೊಗಳಿದ. ಇನ್ನೊಬ್ಬ ಮನುವಿಗೆ ಅಧಿಕಾರವಿತ್ತ.

ಮೊದಲನೆಯವನು ಸ್ವಯಂಭು ಎನಿಸಿದ ಬ್ರಹ್ಮನ ಮಗನಾದ್ದರಿಂದ ಸ್ವಾಯಂಭುವನೆನಿಸಿದ್ದ. ಎರಡನೆಯವ ಸ್ವರೋಚಿಷ ಎನಿಸುವ ಅಗ್ನಿಯ ಮಗನಾದ-ರಿಂದ ಸ್ವಾರೋಚಿಷನೆನಿಸಿದ. ಇವನೂ ಸ್ವಾಯಂಭುವನಂತೆಯೆ ದಾನಿ, ಧರ್ಮಿಷ್ಠ.

ಮುಂದೆ ಉತ್ತಮ ತಾಪಸರು ಮನುಗಳೆನಿಸಿದರು ಇವರು. ಪ್ರಿಯವ್ರತರಾಜನ ಮಕ್ಕಳು, ತಪಸ್ವಿಗಳು, ಮಹಾವಿಷ್ಣುಭಕ್ತರು ಶಿವನ ಶಿಷ್ಯರು.

ಮಹಾಧರ್ಮಿಷ್ಠನಾದ ರೈವತ ಐದನೇ ಮನು.

ವಿಷ್ಣುಪರಾಯಣನಾದ ಚಾಕ್ಷುಷ ಆರನೆ ಮನು.

ಸೂರ್ಯಪುತ್ರನಾದ ಶ್ರಾದ್ಧದೇವ ಏಳನೆ ಮನು. ಈತನೂ ವಿಷ್ಣುಭಕ್ತ.

ಸೂರ್ಯಪುತ್ರನಾದ ಸಾವರ್ಣಿ ಎಂಟನೆ ಮನು. ಇವನೂ ವಿಷ್ಣುಭಕ್ತ. ಮುಂದೆ ದಕ್ಷಸಾವರ್ಣಿ, ಬ್ರಹ್ಮಸಾವರ್ಣಿ, ಧರ್ಮಸಾವರ್ಣಿ, ರುದ್ರಸಾವರ್ಣಿ, ದೇವಸಾವರ್ಣಿ, ಚಂದ್ರಸಾವರ್ಣಿಗಳು ಮನುಗಳು. ಇವರೆಲ್ಲರೂ ಜ್ಞಾನಿಗಳು, ವಿಷ್ಣುಭಕ್ತರು.

ಇಂದ್ರನ ಅಧಿಕಾರಾವಧಿಯೂ ಮನುವಿನ ಅಧಿಕಾರಾವಧಿಯೂ ಒಂದೇ ಆಗಿರುತ್ತದೆ.

ಹದಿನಾಲ್ಕು ಇಂದ್ರರ ಕಾಲ ಬ್ರಹ್ಮನಿಗೆ ಒಂದು ಹಗಲು. ಅಷ್ಟೇ ದೀರ್ಘ ಅವನ ರಾತ್ರಿ. ಇದನ್ನೆ ಕಾಲರಾತ್ರಿ ಎಂದು ವೇದದಲ್ಲಿ ಹೇಳಿದೆ.

ಬ್ರಹ್ಮನ ಒಂದು ದಿನವನ್ನೇ ಕ್ಷುದ್ರಕಲ್ಪವೆನ್ನುತ್ತಾರೆ. ಇಂಥ ಏಳು ಕಲ್ಪಗಳಲ್ಲಿ ಚಿರಂಜೀವಿಯಾದ ಮಾರ್ಕಂಡೇಯ ಬದುಕಿದ್ದ.

ಬ್ರಹ್ಮನ ಹಗಲು ಕಳೆದಾಗ ಸಂಕರ್ಷಣ ಮುಖಾಗ್ನಿಯಿಂದ ಮೂಲೋಕಗಳು ಭಸ್ಮವಾಗುತ್ತವೆ. ಚಂದ್ರ ಸೂರ್ಯರೂ ಬ್ರಹ್ಮಪುತ್ರರೂ ಬ್ರಹ್ಮಲೋಕಕ್ಕೆ ಹೋಗು-ತ್ತಾರೆ. ಬ್ರಹ್ಮರಾತ್ರಿ ಕಳೆದಾಗ ಪುನಃ ಬ್ರಹ್ಮ ಆ ಲೋಕಗಳನ್ನು ಸೃಷ್ಟಿ ಮಾಡುತ್ತಾನೆ. ಹೀಗೆ ಬ್ರಹ್ಮನ ಮೂವತ್ತು ದಿನಗಳು ಅವನಿಗೆ ಒಂದು ಮಾಸ. ಹನ್ನೆರಡು ಮಾಸಗಳು

ಒಂದು ವರ್ಷ. ಇಂಥ ಹದಿನೈದು ವರ್ಷಗಳು ಕಳೆದಾಗ ದೈನಂದಿನ ಪ್ರಳಯ ಉಂಟಾಗುತ್ತದೆ. ಇದನ್ನೆ ಮೋಹರಾತ್ರಿಯೆಂದು ವೇದಜ್ಞರು ಹೇಳುತ್ತಾರೆ. ಈ ಪ್ರಳಯದಲ್ಲಿ ಚಂದ್ರ ಸೂರ್ಯಾದಿಗಳು ದಿಕ್ಪಾಲಕರು ಆದಿತ್ಯರು ವಸುಗಳು, ರುದ್ರರು ಮನುಗಳು ಮಾನವರು ಮುಂತಾದವರು ಋಷಿ ಮುನಿಗಂಧರ್ವ ರಕ್ಷಸರು ಮಾರ್ಕಂಡೇಯ, ಲೋಮಶ, ಪೇಚಕ, ಇಂದ್ರದ್ಯುಮ್ನರಾಜ, ಅಕೂಪಾರ ಎಂಬ ಆಮೆ, ನಾಡೀಜಂಘ ಎಂಬ ಬಕ, ಎಲ್ಲರೂ ನಾಶವಾಗುವರು. ಬ್ರಹ್ಮಲೋಕದ ಕೆಳಗಿನ ಪಾತಾಳದ ವರೆಗಿನ ಎಲ್ಲ ಲೋಕಗಳು ಆಗ ನಾಶವಾಗುವುವು. ಬ್ರಹ್ಮ ಪುತ್ರಾದಿಗಳೆಲ್ಲ ಬ್ರಹ್ಮಲೋಕಕ್ಕೆ ಹೋಗುವರು. ಈ ಪ್ರಳಯ ಕಳೆದ ಬಳಿಕ ಬ್ರಹ್ಮ ಪುನಃ ಲೋಕಸೃಷ್ಟಿ ಮಾಡುತ್ತಾನೆ.

ಈ ರೀತಿ ನೂರು ವರ್ಷಗಳವರೆಗೆ ಬ್ರಹ್ಮನ ಆಯುಷ್ಯ. ಅದು ತೀರಿದಾಗ ಮಹಾಪ್ರಳಯ. ಇದನ್ನೇ ಪ್ರಾಚೀನರು ಮಹಾರಾತ್ರಿ ಎಂದಿದ್ದಾರೆ. ಈ ಪ್ರಳಯದಲ್ಲಿ ಬ್ರಹ್ಮಾಂಡ ಲಯ ಹೊಂದುವುದು. ಎಲ್ಲವೂ ಜಲಮಯವಾಗುವುದು. ವೇದಮಾತೆ ಸಾವಿತ್ರಿ, ಸಕಲ ವೇದಗಳು, ಧರ್ಮಾದಿಗಳು ಮತ್ತು ಪ್ರಕೃತಿ ಶಿವರನ್ನುಳಿದು ಎಲ್ಲರೂ ನಾಶ ಹೊಂದುವರು. ಬಳಿಕ ಪ್ರಕೃತಿ ನಾರಾಯಣ ಶಂಭು ಮಹಾವಿಷ್ಣುಗಳೂ ಒಮ್ಮೆ ಕಣ್ಣುಮುಚ್ಚುವರು. ಕಣ್ಣು ತೆರೆವಾಗ ಪುನಃ ಕೃಷ್ಣನ ಇಚ್ಛೆಯಿಂದ ಸೃಷ್ಟಿಯಾಗಿರುವುದು. ಕೃಷ್ಣ, ಪ್ರಕೃತಿಗಿಂತ ಆಚೆ ಇರುವುದರಿಂದ ಆತ ಕಣ್ಣು ಮುಚ್ಚುವುದಿಲ್ಲ. ಪ್ರಕೃತಿಯ ಗುಣಯುಕ್ತರಾದವರಿಗೆ ಕಾಲ ಸಂಖ್ಯೆ ವಯೋಮಿತಿ ಇರುವುದರಿಂದ ಕಣ್ಣು ಮುಚ್ಚುತ್ತಾರೆ.

ಪ್ರಕೃತಿಯು ಸಾವಿರ ಬಾರಿ ಕಣ್ಣುಮುಚ್ಚಿ ತೆರೆದರೆ ಅದು ಪ್ರಕೃತಿಗೆ ಒಂದು ದಂಡಕಾಲ. ಅರವತ್ತು ದಂಡಗಳು ಒಂದು ದಿನ. ಮೂವತ್ತು ದಿನಗಳು ಒಂದು ಮಾಸ. ಹನ್ನೆರಡು ಮಾಸಗಳು ಒಂದು ವರ್ಷ. ಹೀಗೆ ನೂರು ವರ್ಷಗಳು ಕಳೆದಾಗ ಪ್ರಕೃತಿಗೆ ಕೃಷ್ಣನಲ್ಲಿ ಲಯ. ಅವಳು ಎಲ್ಲ ಪ್ರಾಕೃತ ವಸ್ತುಗಳನ್ನೂ ಲಯ ಮಾಡಿ ಕೃಷ್ಣನ ಎದೆಯಲ್ಲಿ ಲೀನಳಾಗುವಳು. ಅವಳನ್ನು ಶಾಕ್ತರು ಸರ್ವಶಕ್ತಿ ಸ್ವರೂಪಳಾದ ದುರ್ಗೆ ಎನ್ನುತ್ತಾರೆ. ಅವಳೆ ಬುದ್ಧ್ಯಧಿಷ್ಠಾತ್ರಿ ದೇವಿ. ಅವಳ ಮಾಯೆಯಿಂದ ಬ್ರಹ್ಮ ವಿಷ್ಣು ಶಿವಾದಿಗಳೆಲ್ಲ ಮೋಹಿತರಾಗುವರು. ವೈಷ್ಣವರು ಈ ಪ್ರಕೃತಿಯನ್ನು ಮಹಾಲಕ್ಷ್ಮಿ ಎಂದೂ ರಾಧೆಯೆಂದೂ ಹೇಳುತ್ತಾರೆ. ನಾರಾಯಣ ಶಿವರೂ ತಮ್ಮ ಗಣದವರನ್ನು ಲಯಗೈದು ಕೃಷ್ಣನಲ್ಲಿ ಲೀನರಾಗುತ್ತಾರೆ. ಗೋಪ ಗೋಪಿಯರೂ ಗೋವುಗಳು ಕರುಗಳು ಎಲ್ಲರೂ ಪ್ರಕೃತಿಯಲ್ಲಿ, ಪ್ರಕೃತಿ ಕೃಷ್ಣನಲ್ಲಿ ಲಯ ಹೊಂದುವರು. ಕ್ಷುದ್ರ ವಿಷ್ಣುಗಳೆಲ್ಲ ಮಹಾವಿಷ್ಣುವಿನಲ್ಲಿ, ಮಹಾವಿಷ್ಣು ಪ್ರಕೃತಿಯಲ್ಲಿ, ಪ್ರಕೃತಿ ಕೃಷ್ಣನಲ್ಲಿ ಲಯಹೊಂದುವರು. ಪ್ರಕೃತಿಯೆ ಯೋಗನಿದ್ರೆ. ಅವಳು ಕೃಷ್ಣನ ಎರಡು ಕಣ್ಣುಗಳಲ್ಲಿ

ಲಯ ಹೊಂದುವಳು. ಪ್ರಕೃತಿಯ ಒಂದು ದಿನದಷ್ಟು ವೃಂದಾವನದಲ್ಲಿ ಕೃಷ್ಣನಿಗೆ ನಿದ್ರಾಕಾಲ. ಪುನಃ ಎಚ್ಚತ್ತಾಗ ಎಲ್ಲವನ್ನೂ ಸೃಷ್ಟಿ ಮಾಡುತ್ತಾನೆ. ಅವನ ವಂದನ ಸ್ಮರಣ ಧ್ಯಾನ ಅರ್ಚನ ಕೀರ್ತನಗಳಿಂದ ಮಹಾಪಾತಕಗಳೆಲ್ಲ ನಾಶವಾಗುವುವು.

ನಾನು ಶಿವನ ಮುಖದಿಂದ ಕೇಳಿದ್ದನ್ನು ಈಗ ನಿನಗೆ ಹೇಳಿದ್ದೇನೆ. ಇನ್ನೇನು ಕೇಳ ಬಯಸುವಿ ?

ರಾಜ— ಕಾಲಾಗ್ನಿರುದ್ರ ಬ್ರಹ್ಮ ಪ್ರಳಯದಲ್ಲಿ ಮೃತ್ಯುಂಜಯನಲ್ಲಿ, ಮೃತ್ಯುಂಜಯ ಪ್ರಾಕೃತ ಲಯದಲ್ಲಿ ನಿರ್ಗುಣ ಕೃಷ್ಣನಲ್ಲಿ ಲಯಹೊಂದುತ್ತಾನೆ ಎಂದಿರುವೆ. ನಿನ್ನ ಗುರುವಿಗೆ ಮೃತ್ಯುಂಜಯ ಎಂದು ಹೆಸರು ಹೇಗೆ ಬಂದಿತು ?

ಮುನಿ— ಸರ್ವಲೋಕ ಲಯಕಾರಿಣಿಯಾದ ಮೃತ್ಯುಕನ್ಯೆ ಬ್ರಹ್ಮಲಯದಲ್ಲಿ ಲಯ ಹೊಂದುವಳು. ಕೋಟಿಗಟ್ಟಲೆ ಮೃತ್ಯುಕನ್ಯೆಯರ ಬ್ರಹ್ಮರ ಲಯವಾದ ಬಳಿಕ ಶಿವ ನಿರ್ಗುಣನಾದ ಕೃಷ್ಣನಲ್ಲಿ ಲಯ ಹೊಂದುತ್ತಾನೆ. ಮೃತ್ಯುಕನ್ಯೆಯನ್ನು ನನ್ನ ಗುರು ಶಿವ ಗೆದ್ದ. ಶಿವನನ್ನು ಮೃತ್ಯುಕನ್ಯೆ ಗೆಲ್ಲಲಿಲ್ಲ. ಶಂಭು, ನಾರಾಯಣ, ಪ್ರಕೃತಿಯರು ನಿತ್ಯರು. ಅವರಿಗೆ ಕೃಷ್ಣನಲ್ಲಿ ಲಯ ಮಾಯೆಯೆ ಹೊರತು ವಾಸ್ತವವಲ್ಲ. ನಿರ್ಗುಣನಾದ ಕೃಷ್ಣ ಕಾಲಾನುಗುಣವಾಗಿ ಸಗುಣನಾಗುವನು. ತಾನೆ ನಾರಾಯಣ ಶಂಭು ಪ್ರಕೃತಿರೂಪ-ನಾಗುವನು. ಅವರು ಅವನ ಅಂಶಭೂತರು. ಅವನಿಗೆ ಸಮಾನರು. ಬೆಂಕಿಗೆ ಅದರ ಕಿಡಿಗಳಂತೆ.

ಬ್ರಹ್ಮನು ಸೃಷ್ಟಿ ಮಾಡಿದ ರುದ್ರಾದಿತ್ಯಾದಿಗಳನ್ನು ಮೃತ್ಯುಕನ್ಯೆ ಗೆದ್ದಿರುವಳು. ಶಿವ ಬ್ರಹ್ಮನಿಂದ ಸೃಷ್ಟನಾದವನಲ್ಲ. ಅವನು ಸತ್ಯನಿತ್ಯ ಸನಾತನ. ಅದರಿಂದ ಆತ ಮೃತ್ಯುಂಜಯ.

ರಾಜ— ಇಂದು ನನ್ನ ಜನ್ಮ ಸಫಲವಾಯಿತು. ಸಾರ್ಥಕವಾಯಿತು. ನಿಮ್ಮ ಶಾಪ ನನಗೆ ವರರೂಪವಾಯಿತು. ಹರಿಭಕ್ತಿಲಾಭಕ್ಕೆ ಕಾರಣವಾಯಿತು. ಹರಿಭಕ್ತಿ ದುರ್ಲಭ. ಅತ್ಯಂತ ಮಂಗಳಕರ. ಅದಕ್ಕೆ ಸಮವಾದ ಮೋಕ್ಷಸಾಧನವಿಲ್ಲ. ನನಗೆ ಕೃಷ್ಣನಲ್ಲಿ ಭಕ್ತಿ ಹೆಚ್ಚುವಂತೆ ಅನುಗ್ರಹಿಸು. ಎಲ್ಲ ವರ್ಣಗಳಲ್ಲಿ ದ್ವಿಜಜಾತಿ ಉತ್ತಮ. ಅವರಲ್ಲಿಯೂ ಸ್ವಧರ್ಮನಿರತರು ಉತ್ತಮರು. ಅವರಲ್ಲಿಯೂ ಕೃಷ್ಣಭಕ್ತರು ಉತ್ತಮರು. ಅವರಿ-ಗಿಂತಲೂ ನಿತ್ಯಕೃಷ್ಣ ನೈವೇದ್ಯ ಭಕ್ಷಿಸಿ ಶುದ್ಧರಾದವರು ಶ್ರೇಷ್ಠರು. ನೀನು ವಿಷ್ಣುಭಕ್ತ. ಶಿವಶಿಷ್ಯ ಮಹಾಜ್ಞಾನ ಸಾಗರ. ಇಂಥವರನ್ನು ಹೊಂದಿ ಇನ್ನಾರನ್ನು ಶರಣಾಗಲಿ ? ನಾನು ನಿನ್ನನ್ನೇ ಮೊರೆ ಹೋಗುತ್ತೇನೆ. ಈಗ ನಾನು ನಿನ್ನ ಶಾಪದಿಂದ ಕುಷ್ಠರೋಗಿ-ಯಾಗಿ ಅಶುಚಿಯಾಗಿ ಹೇಗೆ ತಪಸ್ಸು ಮಾಡಲಿ ?

ಮುನಿ— ರಾಜನೆ, ವಿಷ್ಣುಮಾಯೆಯಾದ ರಾಧೆ ಯಾರನ್ನು ಅನುಗ್ರಹಿಸುವರೋ ಅವರಿಗೆ ಮಾತ್ರ ಅವಳು ಭಕ್ತಿ ನೀಡುವಳು. ಯಾರು ಮಾಯೆಯಿಂದ

ಮೋಹಿತರಾಗುವವರೋ ಅವರಿಗೆ ನೀಡಲಾರಳು. ಅವರಿಗೆ ನಶ್ವರವಾದ ಧನ ಸಂಪತ್ತನ್ನು ನೀಡಿ ವಂಚನೆ ಮಾಡುವಳು. ಆದ್ದರಿಂದ ನೀನು ಕೃಷ್ಣನ ಪ್ರಾಣೇಶ್ವರಿ-ಯಾದ ರಾಧೆಯನ್ನು ಭಜಿಸು. ಅವಳ ಅನುಗ್ರಹದಿಂದ ಗೋಲೋಕಕ್ಕೆ ನೀನು ಹೋಗುವಿ. ಧ್ಯಾನಸಾಧ್ಯನಾದ ನಿರ್ಗುಣ ಕೃಷ್ಣನ ಆರಾಧನೆ ಕಷ್ಟ. ಬಹುಜನ್ಮದಲ್ಲಿ ಅವನನ್ನು ಆರಾಧಿಸಿ ಕೊನೆಯಲ್ಲಿ ಗೋಲೋಕ ಸೇರಬೇಕಾಗುವುದು. ಕೃಪಾಮಯಿ-ಯಾದ ರಾಧೆಯನ್ನು ಭಕ್ತಿಯಿಂದ ಸೇವಿಸಿದರೆ ಬೇಗನೆ ಗೋಲೋಕ ಸಿಗುವುದು. ಅವಳು ಮಹಾವಿಷ್ಣುವಿಗೆ ಜನನಿ. ಸರ್ವ ಸಂಪತ್ ಸ್ವರೂಪಿಣಿ.

ಸಾವಿರ ವರ್ಷ ಪರ್ಯಂತ ವಿಪ್ರಪಾದೋದಕ ಪಾನ ಮಾಡು. ಆದರಿಂದ ನೀನು ರೋಗಮುಕ್ತನಾಗಿ ಮನ್ಮಥನಂತಾಗುವಿ. ವಿಪ್ರಪಾದೋದಕದಿಂದ ನೆಲ ಒದ್ದೆಯಾದರೆ ಪಿತೃಗಳು ಕಮಲ ಪತ್ರದಲ್ಲಿ ಜಲಪಾನ ಮಾಡುವರು. ಭೂಮಿಯ ಮೇಲೆ ಎಷ್ಟು ತೀರ್ಥಗಳಿವೆಯೋ ಅವೆಲ್ಲ ಸಾಗರದಲ್ಲಿವೆ. ಸಾಗರದಲ್ಲಿರುವ ತೀರ್ಥವೆಲ್ಲ ವಿಪ್ರನ ಪಾದದಲ್ಲಿವೆ. ಅದರಿಂದ ವಿಪ್ರಪಾದೋದಕ ಪಾಪದಿಂದ ಬರುವ ವ್ಯಾಧಿಗಳನ್ನು ಪರಿಹರಿಸಿ ಭುಕ್ತಿಮುಕ್ತಿಗಳನ್ನು ನೀಡಬಲ್ಲುದು. ವಿಪ್ರನೆಂದರೆ ಮಾನವರೂಪದ ದೇವದೇವ ಜನಾರ್ದನ. ವಿಪ್ರನ ಮೂಲಕ ಕೊಡುವ ನೈವೇದ್ಯವನ್ನೆ ಎಲ್ಲ ದೇವತೆಗಳೂ ಉಣ್ಣುತ್ತಾರೆ.''

ಹೀಗೆ ಹೇಳಿ ರಾಜನಿಂದ ಸತ್ಕಾರವನ್ನು ಸ್ವೀಕರಿಸಿ 'ರಾಜನೆ, ನಾನು ನನ್ನ ಮನೆಗೆ ಹಿಂತಿರುಗುತ್ತೇನೆ. ಒಂದು ವರ್ಷದ ನಂತರ ತಿರುಗಿ ಬರುತ್ತೇನೆ' ಎನ್ನುತ್ತ ಹೊರಟುಹೋದ, ಮುನಿ.

ರಾಜ ಇತ್ತ ಬ್ರಾಹ್ಮಣರ ಪಾದೋದಕ ಸೇವಿಸುತ್ತ ಅವರನ್ನು ಸತ್ಕರಿಸಿ ಭೋಜನ ಮಾಡಿಸುತ್ತ ಒಂದು ವರ್ಷ ಕಳೆದ. ಆಗಲೆ ಅವನ ವ್ಯಾಧಿ ಗುಣವಾಗಿತ್ತು. ಸುತಪ-ಮುನಿ ಅರಮನೆಗೆ ಬಂದ. ರಾಜನಿಗೆ ರಾಧಾಪೂಜಾವಿಧಾನ ಸ್ತೋತ್ರ ಕವಚ ಮಂತ್ರ ಧ್ಯಾನಗಳನ್ನು ಸಾಮವೇದೋಕ್ತ ಪ್ರಕಾರದಿಂದ ಉಪದೇಶಿಸಿದ. ಕಾಡಿಗೆ ಹೋಗಿ ತಪಸ್ಸು ಮಾಡೆಂದು ಆದೇಶಿಸಿ ಹೊರಟುಹೋದ. ರಾಜ ಬೇಗನೆ ಅರಮನೆಯನ್ನು ತೊರೆದು ದುರ್ಗಮವಾದ ಅರಣ್ಯಕ್ಕೆ ಹೊರಟ. ಬಂಧುಗಳೆಲ್ಲ ಅವನ ವಿರಹ ತಾಳಲಾರದೆ ಶೋಕಾವಿಷ್ಟರಾಗಿ ಅತ್ತರು. ಪತ್ನಿಯರು ಪ್ರಾಣತ್ಯಾಗ ಮಾಡಿದರು. ಮಗ ರಾಜನಾದ.

ಸುಯಜ್ಞ ಮಹಾರಾಜ ಪುಷ್ಕರದಲ್ಲಿ ದುಷ್ಕರ ತಪಸ್ಸು ಮಾಡುತ್ತ ನೂರು ವರ್ಷ ರಾಧಾ ಮಂತ್ರ ಜಪಿಸಿದಾಗ ಆಕಾಶದಲ್ಲಿ ರಥಾರೂಢಳಾಗಿ ದೇವಿ ದರ್ಶನ ನೀಡಿದಳು. ಒಡನೆ ರಾಜ ಪಾಪಮುಕ್ತನಾಗಿ ಮಾನುಷ ದೇಹವನ್ನೂ ತೊರೆದು ದಿವ್ಯ-ರೂಪಧರಿಸಿದ. ದೇವಿ ಆ ರಥದಲ್ಲಿಯೆ ರಾಜನನ್ನು ಗೋಲೋಕಕ್ಕೆ ಕರೆದೊಯ್ದಳು.

ವಿರಜಾನದಿಯಿಂದ ಸುತ್ತುವರಿಯಲ್ಪಟ್ಟ ಆ ಗೋಲೋಕವನ್ನು ರಾಜ ಕಂಡ. ಅಲ್ಲಿ ಶತಶೃಂಗ ಪರ್ವತಗಳಿವೆ. ವೃಂದಾವನವಿದೆ, ರಾಸಮಂಡಲವಿದೆ. ರತ್ನಮಯ ಮನೋಹರ ಮಂದಿರಗಳಲ್ಲಿ ಗೋ ಗೋಪ ಗೋಪಿಯರು ಅಲ್ಲಿ ವಾಸಿಸುತ್ತಿದ್ದಾರೆ. ಎಲ್ಲೆಡೆ ಪಾರಿಜಾತ ವೃಕ್ಷಗಳು ಬೆಳೆದಿವೆ. ಕಲ್ಪವೃಕ್ಷಗಳಿಂದ ಶೋಭಿಸುವ ಮೂವತ್ತೇಳು ಕ್ರೀಡಾ ಪರ್ವತಗಳಿವೆ. ಆಕಾಶದಂತೆ ವಿಸ್ತಾರವಾಗಿದೆ. ಆ ಗೋಲೋಕ ಚಂದ್ರ-ಮಂಡಲದಂತೆ ವರ್ತುಲಾಕಾರವಾಗಿದೆ. ವೈಕುಂಠಕ್ಕಿಂತ ಐವತ್ತು ಕೋಟಿ ಯೋಜನ ಎತ್ತರದಲ್ಲಿ ಶೂನ್ಯಪ್ರದೇಶದಲ್ಲಿ ನಿರಾಧಾರವಾಗಿ ಸ್ಥಿರವಾಗಿ ಪರಮಾತ್ಮನ ಇಚ್ಛೆಯಿಂದ ನಿಂತಿದೆ. ಆತ್ಮ ಆಕಾಶಗಳಂತೆ ನಿತ್ಯವಾಗಿದೆ.

ಈ ಗೋಲೋಕವನ್ನು ನೋಡಬಲ್ಲವರು ನಾನು, ನಾರಾಯಣ, ಅನಂತ, ಬ್ರಹ್ಮ, ವಿಷ್ಣು, ಮಹಾವಿರಾಟ್, ಧರ್ಮ, ಕ್ಷುದ್ರವಿರಾಟ್, ಗಂಗಾ, ಲಕ್ಷ್ಮೀ, ಸರಸ್ವತೀ, ನೀನು, ವಿಷ್ಣುಮಾಯೆ, ಸಾವಿತ್ರಿ, ತುಲಸಿ, ಗಣೇಶ, ಸನತ್ಕುಮಾರ, ಸ್ಕಂದ, ನರ, ನಾರಾಯಣ, ಋಷಿಗಳು, ಕಪಿಲ, ದಕ್ಷಿಣಾ, ಯಜ್ಞ, ಬ್ರಹ್ಮಪುತ್ರರಾದ ಯೋಗಿಗಳು, ವಾಯು, ವರುಣ, ಚಂದ್ರ, ಸೂರ್ಯ, ರುದ್ರ, ಅಗ್ನಿ, ಕೃಷ್ಣಮಂತ್ರೋಪಾಸಕರಾದ ಭಾರತದ ವೈಷ್ಣವ ಜನರು. ಇವರು ಮಾತ್ರ ಗೋಲೋಕವನ್ನು ಕಾಣಬಲ್ಲರು. ಇತರರಿಗೆ ಎಂದೂ ಕಾಣಸಿಗದು.

ಈ ಗೋಲೋಕದಲ್ಲಿ ರತ್ನಾಭರಣಭೂಷಿತನೂ ಚಂದನ ಬಳಿದ ಮೈಯವನೂ ಆದ ನವಮೇಘಶ್ಯಾಮ ಕಮಲನಯನ ದ್ವಿಭುಜ ಮುರಲೀ ಹಸ್ತ ಬಾಲಗೋಪಾಲ ರೂಪಿನ ಕೃಷ್ಣನನ್ನು ರಾಜ ಕಂಡ. ಬಿಳಿ ಚಾಮರ ಹಿಡಿದ ಪ್ರೀತಿಯ ಹನ್ನೆರಡು ಗೋಪಾಲಕರಿಂದ ಸ್ಥಿರಯೌವನವತಿಯರಾದ ಸುಂದರ ಗೋಪಿಯರಿಂದ ಪರಿವೃತ-ನಾದ ಶ್ರೀಕೃಷ್ಣನನ್ನು ರಾಧೆ ರಾಜನಿಗೆ ತೋರಿಸಿದಳು. ನಾಲ್ಕು ವೇದಗಳು ಮೂರ್ತಿ-ಮತ್ತಾಗಿ ಬಂದು ಕೃಷ್ಣನನ್ನು ಸ್ತುತಿಸುತ್ತಿದ್ದುವು. ರಾಗ ರಾಗಿಣಿಯರು ಹಾಡಿ ಕೊಂಡಾಡುತ್ತಿದ್ದರು. ಅಖಂಡ ತುಲಸೀದಲ, ಕಸ್ತೂರೀ, ಕುಂಕುಮ, ಗಂಧಚಂದನ, ದೂರ್ವಾ, ಅಕ್ಷತೆ, ಪಾರಿಜಾತ, ಪುಷ್ಪಗಳಿಂದ, ವಿರಜಾಜಲದ ಅರ್ಘ್ಯಗಳಿಂದ ಪೂಜಿತನಾಗಿ ಸುಪ್ರಸನ್ನನಾಗಿದ್ದ ಕೃಷ್ಣ. ಸರ್ವಾಂತರಾತ್ಮ ಪರಂಜ್ಯೋತಿ ಪರಂಬ್ರಹ್ಮ-ನೆನಿಸಿದ ಸರ್ವಮಂಗಲ ಮಂಗಲನಾದ ಕೃಷ್ಣನನ್ನು ಕಂಡು ರಾಜ ಬೇಗನೆ ರಥ-ದಿಂದಿಳಿದು ಪುಲಕಿತನಾಗಿ ಆನಂದಭಾಷ್ಪ ಸುರಿಸಿ ತಲೆಬಾಗಿ ನಮಿಸಿದ. ರಾಧೆ ರಥ-ದಿಂದಿಳಿದು ಕೃಷ್ಣನ ವಕ್ಷಃಸ್ಥಳವನ್ನೇರಿದಳು. ಕೃಷ್ಣ ನಸುನಗುತ್ತ ಎದ್ದು ಸಂಭ್ರಮದಿಂದ ಅವಳನ್ನೆತ್ತಿ ಎದೆಯಲ್ಲಿರಿಸಿಕೊಂಡ.

ಮೊದಲಿಗೆ ರಾಧಾಶಬ್ದ ಹೇಳಿ ಅನಂತರ ಮಾಧವ ಎಂದೇ ಹೇಳುವುದು ವೇದ ಸಮ್ಮತ. ವ್ಯತ್ಯಾಸಮಾಡಿ ಹೇಳುತ್ತ ಜಗನ್ಮಾತೆಯಾದ ರಾಧೆಯನ್ನು ನಿಂದಿಸುವವರು

ಚಂದ್ರಸೂರ್ಯರಿರುವಷ್ಟು ಕಾಲ ಕಾಲಸೂತ್ರದಲ್ಲಿ ನರಳಿ ನೂರು ಜನ್ಮಗಳಲ್ಲಿ ಸ್ತ್ರೀಪುತ್ರಹೀನರಾಗಿ ರೋಗಿಗಳಾಗಿ ಬಳಲುತ್ತಾರೆ.

ಪಾರ್ವತಿ, ಇದು ರಾಧಾ ಚರಿತ್ರೆ. ಇದು ನಿನಗೆ ಗೊತ್ತೇ ಇದೆ. ನೀನು ಭಗವತಿ ವಿಷ್ಣುಮಾಯೆಯೆ ಆಗಿದ್ದು ಸರ್ವಜ್ಞಳಾಗಿರುವೆ. ಮಾಯೆಯಿಂದ ಏನೂ ಅರಿಯದ-ವಳಂತೆ ಕೇಳುತ್ತಿರುವೆ. ಸ್ತ್ರೀಜಾತಿಗೆ ಅಧಿದೇವತೆ ನೀನು ಜಾತಿಸ್ಮರಳು. ಆದರೂ ನಿನಗೆ ರಾಧೆಯ ಚರಿತ್ರೆಯನ್ನು ವರ್ಣಿಸಿದ್ದೇನೆ. ಇನ್ನೇನು ಕೇಳಬಯಸುವೆ ?

**ಇಲ್ಲಿಗೆ ಶ್ರೀ ಬ್ರಹ್ಮವೈವರ್ತ ಮಹಾಪುರಾಣದಲ್ಲಿ ಎರಡನೆಯದಾದ ಪ್ರಕೃತಿಖಂಡದ ನಾರದನಾರಾಯಣ ಸಂವಾದದಲ್ಲಿ ಬರುವ ಹರಗೌರೀ ಸಂವಾದದಲ್ಲಿ ರಾಧಾಖ್ಯಾನದಲ್ಲಿ ಸುಯಜ್ಞಾಖ್ಯಾನದ ಸುತಪಃ ಸುಯಜ್ಞ ಸಂವಾದದಲ್ಲಿ ಸುಯಜ್ಞ ಗೋಲೋಕಪ್ರಾಪ್ತಿ ಎಂಬ ಐವತ್ತನಾಲ್ಕನೆಯ ಅಧ್ಯಾಯ ಮುಗಿಯಿತು.**

## ರಾಧಾ ಪೂಜಾಸ್ತೋತ್ರಾದಿ ಕಥನ

## ಅಧ್ಯಾಯ-೫೫

ಪಾರ್ವತಿ— ವಿಷ್ಣುಭಕ್ತನಾದ ರಾಜ ಕೃಷ್ಣಮಂತ್ರವನ್ನು ಬಿಟ್ಟು ರಾಧಾಮಂತ್ರ-ವನ್ನೇಕೆ ಉಪದೇಶಪಡೆದ ? ರಾಧಾಮಂತ್ರ ಹೇಗೆ, ಧ್ಯಾನ ಸ್ತೋತ್ರ ಕವಚಗಳು ಹೇಗೆ ಎಂಬುದನ್ನು ಹೇಳು.

ಶಿವ— 'ಮುನಿಯೆ, ಬೇಗನೆ ಗೋಲೋಕ ಪಡೆಯಲು ನಾನು ಯಾರನ್ನು ಆರಾಧಿಸಬೇಕು' ? ಎಂದು ರಾಜ ಕೇಳಿದಾಗ ಸುತಪ ಮುನಿ ಹೇಳಿದ, 'ಕೃಷ್ಣನ ಸೇವೆ ಮಾಡಿ ಕೃಷ್ಣನ ಲೋಕ ಹೊಂದಲು ಬಹುಜನ್ಮಗಳು ಬೇಕಾಗುತ್ತವೆ. ಆದಕ್ಕೆ ಕೃಷ್ಣನ ಪ್ರಾಣೇಶ್ವರಿಯಾದ ರಾಧೆಯನ್ನು ಆರಾಧಿಸಬೇಕು. ಅವಳು ದಯಾಮಯಿ. ಅವಳು ಒಲಿದು ಬೇಗನೆ ಗೋಲೋಕ ನೀಡುವಳು.'

ಹೀಗೆ ಹೇಳಿ ಮುನಿ ರಾಧಾಮಂತ್ರವನ್ನು ಉಪದೇಶಿಸಿದ.

'ಓಂ ರಾಧಾಯೈ ಸ್ವಾಹಾ'

ಎಂಬುದೆ ಷಡಕ್ಷರ ರಾಧಾಮಂತ್ರ. ಪ್ರಾಣಾಯಾಮ ಭೂತೋಚ್ಚಾಟನೆ ಮಂತ್ರ-ನ್ಯಾಸ, ಅಂಗನ್ಯಾಸ, ಕರನ್ಯಾಸ, ಧ್ಯಾನಗಳ ಸಹಿತವಾಗಿ ಈ ಮಂತ್ರವನ್ನು ಉಪದೇಶ ಪಡೆದು ರಾಜ ಜಪಿಸಿದ. ಸಾಮವೇದೋಕ್ತವಾದ ರಾಧಾಮಂತ್ರಧ್ಯಾನ ಹೀಗಿದೆ—

'ಬಿಳಿ ಸಂಪಿಗೆಯಂಥ ಮೈಬಣ್ಣ, ಕೋಟಿ ಚಂದ್ರರಿಗೆ ಸಮವಾಗುವ ಕಾಂತಿ, ಶರತ್ಕಾಲದ ಹುಣ್ಣಿಮೆ ಚಂದ್ರನಂಥ ಮುಖ, ಶರತ್ಕಾಲದ ಕಮಲದಂಥ ಕಣ್ಣುಗಳು, ಮುತ್ತಿನಂಥ ಹಲ್ಲುಗಳು, ತೊಂಡೆಹಣ್ಣಿನಂಥ ತುಟಿಗಳು, ಮಂದಹಾಸಯುಕ್ತವಾದ ಪ್ರಸನ್ನವಾದ ಮುಖ, ಬೆಂಕಿಯಂತೆ ಶುದ್ಧವಾದ ಬಟ್ಟೆ ಉಟ್ಟು ರತ್ನಮಯ ಹಾರ ಕೇಯೂರ ಮಂಜೀರ ಕುಂಡಲ ಕಿರೀಟ ಅಂಗುಲೀಯಕಗಳನ್ನು ಧರಿಸಿ, ಜಾಜಿ ಹೂ ಮುಡಿದು, ಮದ್ದಾನೆಯಂತೆ ಹೆಜ್ಜೆ ಇಡುತ್ತಾಳೆ ಸೌಂದರ್ಯದ ಅಧಿದೇವತೆಯಾದ ರಾಧೆ. ಗೋಪಿಯರು ಸಿದ್ಧ ಚಾರಣರು ಅವಳನ್ನು ಸೇವಿಸುತ್ತಿದ್ದಾರೆ. ಕೃಷ್ಣನೂ ಅವಳನ್ನು ನಿತ್ಯಭಕ್ತಿಯಿಂದ ಆರಾಧಿಸುತ್ತಾನೆ. ಭಕ್ತರಿಗೆ ಅವಳು ಕೃಷ್ಣಭಕ್ತಿ ನೀಡುವ-ವಳು. ಸ್ವಯಂ ಕೃಷ್ಣ ಪ್ರೇಮಮಯಿ. ರಾಜಮಂಡಲ ಮಧ್ಯದ ರತ್ನಸಿಂಹಾಸನದಲ್ಲಿ ರಾಸೇಶ್ವರಯುಕ್ತಳಾಗಿರುವ ರಾಸೇಶ್ವರಿಯಾದ ರಾಧೆಯನ್ನು ಆರಾಧಿಸುತ್ತೇನೆ.'

ಹೀಗೆ ರಾಧೆಯನ್ನು ಧ್ಯಾನಿಸಿ ಹೂವನ್ನರ್ಪಿಸಿ ಕೃಷ್ಣನನ್ನು ಧ್ಯಾನಿಸಿ ಹೂವನ್ನು ಅರ್ಪಿಸಬೇಕು. ಷೋಡಶೋಪಚಾರಗಳನ್ನೂ ಅರ್ಪಿಸಬೇಕು.

ಆಸನ, ವಸ್ತ್ರ, ಪಾದ್ಯ, ಅರ್ಘ್ಯ, ಗಂಧ, ಅನುಲೇಪನ, ಧೂಪ, ದೀಪ, ಪುಷ್ಪ, ಸ್ನಾನೀಯ, ರತ್ನಾಭರಣ, ನೈವೇದ್ಯ, ತಾಂಬೂಲ, ಸುವಾಸಿತಜಲ, ಮಧುಪರ್ಕ, ರತ್ನ-ಪರ್ಯಂಕ ಇವೇ ಷೋಡಶೋಪಚಾರಗಳು. ಇವೆಲ್ಲವನ್ನೂ ಪ್ರತ್ಯೇಕವಾಗಿ ವೇದ-ಮಂತ್ರಗಳಿಂದ ದೇವಿಗೆ ರಾಜ ಸಮರ್ಪಿಸಿದ. ಆ ಮಂತ್ರಗಳನ್ನು ಹೇಳುತ್ತೇನೆ ಕೇಳು—

ದೇವಿ ರಾಧೆ, ವಿಶ್ವಕರ್ಮನಿರ್ಮಿತವಾದ ಶ್ರೇಷ್ಠ ರತ್ನಸಿಂಹಾಸನವನ್ನು ನಿನಗೆ ಅರ್ಪಿಸುವೆನು. ಸ್ವೀಕರಿಸು.

ಅನೇಕ ರತ್ನಖಚಿತವಾದ ನವುರಾದ ವಹ್ನಿಯಂತೆ ಶುದ್ಧವಾದ ನಿರ್ಮಲವಾದ ವಸ್ತ್ರವನ್ನು ಸ್ವೀಕರಿಸು.

ರತ್ನಪಾತ್ರೆಯಲ್ಲಿ ಪಾದಪ್ರಕ್ಷಾಲನಕ್ಕಾಗಿ ಮಂಗಳಕರವಾದ ಪವಿತ್ರಜಲವಿದೆ. ಪಾದ್ಯರೂಪದಿಂದ ಅದನ್ನು ಸ್ವೀಕರಿಸು.

ಬಲಮುರಿ ಶಂಖದಲ್ಲಿ ದೂರ್ವೆ ಪುಷ್ಪಚಂದನಗಳಿಂದ ಯುಕ್ತವಾಗಿರುವ ಪವಿತ್ರ-ವಾದ ತೀರ್ಥಜಲವಿದೆ. ಅರ್ಘ್ಯ ರೂಪವಾಗಿ ಸ್ವೀಕರಿಸು.

ಪಾರ್ಥಿವ ದ್ರವ್ಯದಿಂದ ಉದ್ಭವಿಸಿದ ಸುವಾಸಿತ ಪವಿತ್ರ ಮಂಗಳಕರ ದಿವ್ಯ-ಗಂಧವನ್ನು ಅರ್ಪಿಸುವೆನು, ಸ್ವೀಕರಿಸು.

ಸುಗಂಧಚೂರ್ಣ ಕಸ್ತೂರಿ ಕುಂಕುಮ ಕೇಸರಿಗಳಿಂದ ಮಿಶ್ರಿತವಾಗಿ ಸುವಾಸನೆ-ಯಿಂದ ಯುಕ್ತವಾಗಿರುವ ಅನುಲೇಪವನ್ನು ಸ್ವೀಕರಿಸು.

ವನಸ್ಪತಿ ರಸೋತ್ಪನ್ನವಾದ ಪಾರ್ಥಿವದ್ರವ್ಯಯುಕ್ತ ಅಂಗಾರದಿಂದ ಎದ್ದ ಧೂಪವನ್ನು ಸ್ವೀಕರಿಸು.

ಅಂಧಕಾರದಲ್ಲಿ ಭಯಪರಿಹಾರಕವಾದ ಪ್ರಕಾಶಮಯವಾದ ರತ್ನದೀಪವನ್ನು ಸ್ವೀಕರಿಸು.

ಗಂಧಚಂದನಯುಕ್ತ ಸುಂದರ ಮಂಗಳಕರ ಪಾರಿಜಾತ ಪುಷ್ಪವನ್ನು ಸ್ವೀಕರಿಸು.

ಸುಗಂಧ ನೆಲ್ಲಿಕಾಯಿ ಪುಡಿ ವಿಷ್ಣುತೈಲಗಳಿಂದ ಯುಕ್ತವಾದ ಮನೋಹರವಾದ ಸ್ನಾನೀಯಜಲವನ್ನು ಸ್ವೀಕರಿಸು.

ಅಮೂಲ್ಯ ರತ್ನಖಚಿತವಾದ ಕೇಯೂರ ವಲಯಾದಿ ಆಭರಣಗಳನ್ನು ಸ್ವೀಕರಿಸು.

ಕಾಲದೇಶಾನುಗುಣವಾಗಿ ಪಕ್ವವಾಗಿರುವ ಫಲಗಳನ್ನೂ ಲಡ್ಡು ಪಾಯಸ ಭಕ್ಷ್ಯಗಳನ್ನೂ ನೈವೇದ್ಯವಾಗಿ ಸ್ವೀಕರಿಸು.

ಕರ್ಪೂರಾದಿ ವಾಸಿತವಾದ ಸರ್ವಭೋಗಕ್ಕೆ ಮೂಲವಾದ ರುಚಿಕರ ತಾಂಬೂಲವನ್ನು ಸ್ವೀಕರಿಸು.

ರತ್ನಪಾತ್ರದಲ್ಲಿ ರುಚಿಕರವಾದ ಮನೋಹರವಾದ ಅನ್ನ ನೀಡುತ್ತೇನೆ ಸ್ವೀಕರಿಸು.

ಬೆಂಕಿಯಂತೆ ಶುದ್ಧವಾದ ಬಟ್ಟೆ ಹಾಸಿ ಹೂ ಚಂದನಗಳನ್ನು ಚೆಲ್ಲಿ ಸಿದ್ಧ ಪಡಿಸಿರುವ ರತ್ನಖಚಿತವಾದ ಪರ್ಯಂಕವನ್ನು ಸ್ವೀಕರಿಸು.

ಹೀಗೆ ಷೋಡಶೋಪಚಾರಗಳಿಂದ ದೇವಿಯನ್ನು ಅರ್ಚಿಸಿ ಮೂರುಬಾರಿ ಪುಷ್ಪಾಂಜಲಿಯನ್ನರ್ಪಿಸಬೇಕು. ದೇವಿಯ ಸುತ್ತಲೂ ಪ್ರದಕ್ಷಿಣಾಕಾರವಾಗಿ ಪೂರ್ವಾದಿ ದಿಕ್ಕುಗಳಲ್ಲಿ ದೇವಿಯ ಪರಿಚಾರಿಕೆಯರನ್ನೂ ಪಂಚೋಪಚಾರದಿಂದ ಪೂಜಿಸಬೇಕು. ಆ ಪರಿಚಾರಿಕೆಯರ ಹೆಸರುಗಳು ಹೀಗೆ-

ಮಾಲಾವತೀ, ಮಾಧವೀ, ರತ್ನಮಾಲಾ, ಸುಶೀಲಾ, ಶಶಿಕಲಾ, ಪಾರಿಜಾತಾ, ಪದ್ಮಾವತೀ ಮತ್ತು ಸುಂದರೀ.

ಗಿರಿಮಲ್ಲಿಗೆ ಜಾಜಿ ತಾವರೆ ಮುಂತಾದ ಹೂಗಳನ್ನು ದೇವಿಗೆ ಅರ್ಪಿಸಿ ಕ್ಷಮಾಯಾಚನೆ ಮಾಡಬೇಕು—

ಜಗನ್ಮಾತೆ, ವಿಷ್ಣುಮಾಯೆಯೆನಿಸಿದ ದೇವಿ ರಾಧೆ, ನೀನು ಕೃಷ್ಣನ ಪ್ರಾಣೇಶ್ವರಿ. ಪ್ರಾಣಕ್ಕಿಂತ ಅಧಿಕಳು. ಕೃಷ್ಣಪ್ರೇಮಮಯಿಯಾಗಿದ್ದು ಕೃಷ್ಣನ ಸೌಭಾಗ್ಯರೂಪ-ಳಾಗಿರುವೆ. ಕೃಷ್ಣಭಕ್ತಿ ಪ್ರದಳಾದ ದೇವಿಯೆ ನಿನಗೆ ನಮಸ್ಕಾರ.

ಇಂದು ನನ್ನ ಜನ್ಮ ಸಫಲವಾಯಿತು, ಸಾರ್ಥಕವೆನಿಸಿತು. ಏಕೆಂದರೆ ಕೃಷ್ಣನಿಂದ ಪೂಜಿತಳಾದ ನಿನ್ನನ್ನು ನಾನು ಪೂಜಿಸಿದ್ದೇನೆ. ಕೃಷ್ಣನ ಎದೆಯಲ್ಲಿದ್ದು ಸರ್ವಸೌಭಾಗ್ಯ-

ಯುಕ್ತಳಾದ ನೀನು ರಾಸದಲ್ಲಿ ರಾಸೇಶ್ವರಿಯಾಗಿರುವೆ. ವೃಂದಾವನದಲ್ಲಿ ವೃಂದೆ, ಗೋಲೋಕದಲ್ಲಿ ಕೃಷ್ಣಪ್ರಿಯೆಯಾದ ತುಲಸಿ, ಚಂಪಕವನದಲ್ಲಿ ಚಂಪಾವತಿ, ಚಂದ್ರ-ವನದಲ್ಲಿ ಚಂದ್ರಾವತಿ, ಶತಶೃಂಗದಲ್ಲಿ ಸತಿ, ವಿರಜಾತೀರವನದಲ್ಲಿ ವಿರಜಾದರ್ಪ-ಹಂತ್ರಿ, ಪದ್ಮವನದಲ್ಲಿ ಪದ್ಮಾವತಿ, ಕೃಷ್ಣ ಸರೋವರದಲ್ಲಿ ಕೃಷ್ಣೆ, ಕುಂಜಕುಟೀರದಲ್ಲಿ ಭದ್ರೆ, ಕಾಮ್ಯಕವನದಲ್ಲಿ ಕಾಮ್ಯೆ, ವೈಕುಂಠದಲ್ಲಿ ಮಹಾಲಕ್ಷ್ಮಿ, ನಾರಾಯಣ ವನದಲ್ಲಿ ವಾಣಿ, ಕ್ಷೀರಸಮುದ್ರದಲ್ಲಿ ಸಿಂಧುಕನ್ಯೆ, ಮರ್ತ್ಯಲೋಕದಲ್ಲಿ ಲಕ್ಷ್ಮಿ, ಸ್ವರ್ಗದಲ್ಲಿ ಸ್ವರ್ಗ-ಲಕ್ಷ್ಮಿ, ಶಂಕರನೆದೆಯಲ್ಲಿ ದುರ್ಗೆ, ಬ್ರಹ್ಮನೆದೆಯಲ್ಲಿ ವೇದಮಾತೆ ಸಾವಿತ್ರಿಯೂ ನೀನೆ.

ಧರ್ಮಪತ್ನಿ ಮೂರ್ತಿದೇವಿ, ತುಲಸಿ, ಗಂಗೆ, ಗೋಪಿಯರು, ರೋಹಿಣಿ, ರತಿ ಶತರೂಪೆ, ಶಚಿ ದಿತಿ ಅದಿತಿ ದೇವಿಯರು ಮುನಿಪತ್ನಿಯರು ಎಲ್ಲರೂ ನಿನ್ನ ಅಂಶ-ಭೂತರು. ನೀನು ನನಗೆ ಕೃಷ್ಣಭಕ್ತಿಯನ್ನೂ ಕೃಷ್ಣದಾಸ್ಯವನ್ನೂ ಅನುಗ್ರಹಿಸು.

ಹೀಗೆ ಸ್ತೋತ್ರಮಾಡಿ ಕವಚವನ್ನೂ ಪಠಿಸಬೇಕು. ಹೀಗೆ ನಿತ್ಯ ರಾಧೆಯನ್ನು ಪೂಜಿಸುವವ ವಿಷ್ಣುತುಲ್ಯನೆನಿಸಿ ಜೀವನ್ಮುಕ್ತನಾಗುವನು, ಗೋಲೋಕವನ್ನು ಪಡೆಯುವನು. ಪ್ರತಿವರ್ಷ ಕಾರ್ತಿಕ ಹುಣ್ಣಿಮೆಯಂದು ಪೂಜೆ ಮಾಡಿದರೆ ರಾಜಸೂಯದ ಫಲ ಉಂಟು.

ಹೀಗೆ ಕೃಷ್ಣನೆ ಮೊದಲ ಬಾರಿಗೆ ವೃಂದಾವನದ ರಾಜಸಮಂಡಲದಲ್ಲಿ ರಾಧೆಯನ್ನು ಪೂಜಿಸಿದ. ಎರಡನೇ ಬಾರಿ ಬ್ರಹ್ಮ ಪೂಜಿಸಿ ಅವಳ ವರಬಲದಿಂದ ಸಾವಿತ್ರಿಯನ್ನು ಪಡೆದ. ವೈಕುಂಠದ ನಾರಾಯಣ ರಾಧೆಯನ್ನು ಪೂಜಿಸಿ ಮಹಾಲಕ್ಷ್ಮಿ ಸರಸ್ವತಿ ಗಂಗೆ ತುಲಸಿಯರನ್ನು ಪಡೆದ. ಕ್ಷೀರಸಮುದ್ರದಲ್ಲಿ ಮಲಗಿದ ಮಹಾವಿಷ್ಣುವೂ ರಾಧೆ-ಯನ್ನರ್ಚಿಸಿ ಸಿಂಧು ಕನ್ಯೆಯನ್ನು ಪಡೆದ.

ಪಾರ್ವತಿ, ಹಿಂದೆ ದಕ್ಷಪುತ್ರಿ ಸತಿ ದೇಹತ್ಯಾಗ ಮಾಡಿದಾಗ ನಾನೂ ಕೃಷ್ಣನ ಆಜ್ಞೆಯಂತೆ ಪುಷ್ಕರ ಕ್ಷೇತ್ರದಲ್ಲಿ ರಾಧೆಯನ್ನರ್ಚಿಸಿಯೆ ನಿನ್ನನ್ನು ಪಡೆದೆ.

ಕಶ್ಯಪ ಅದಿತಿಯನ್ನು, ಚಂದ್ರ ರೋಹಿಣಿಯನ್ನು, ಮನ್ಮಥ ರತಿಯನ್ನು, ಧರ್ಮ ಮೂರ್ತಿಯನ್ನು, ದೇವತೆಗಳೂ ಮುನಿಗಳೂ ಧರ್ಮಾರ್ಥಕಾಮ ಮೋಕ್ಷಗಳನ್ನು ರಾಧೆಯ ಅನುಗ್ರಹದಿಂದಲೆ ಪಡೆದರು.

ರಾಧಾ ಪೂಜಾಕ್ರಮವನ್ನು ವಿವರಿಸಿದ್ದೇನೆ. ಇನ್ನು ಸ್ತೋತ್ರವನ್ನು ಕೇಳು. ಒಮ್ಮೆ ತುಲಸೀ ವನದಲ್ಲಿ ತುಲಸಿಯೊಡನೆ ಕೃಷ್ಣ ವಿಹರಿಸುತ್ತಿದ್ದುದನ್ನು ಕಂಡು ಅಭಿಮಾನ-ವತಿಯಾದ ರಾಧೆ ಅದೃಶ್ಯಳಾದಳು. ಅವಳು ಲೀಲೆಯಿಂದ ತನ್ನ ಬೇರೆ ಬೇರೆ ಅಂಶ ಕಲೆಗಳನ್ನೆಲ್ಲ ತನ್ನಲ್ಲಿ ಲಯ ಮಾಡಿಕೊಂಡಳು. ಒಡನೆ ಬ್ರಹ್ಮ ವಿಷ್ಣು ಶಿವಾದಿ ಎಲ್ಲದೇವತೆಗಳೂ ಸಂಪತ್ತನ್ನು ಕಳೆದುಕೊಂಡು ದುಃಖಿಸುತ್ತ ಕೃಷ್ಣನನ್ನು ಮೊರೆ

ಹೊಕ್ಕರು. ಅವರ ಸ್ತೋತ್ರಕ್ಕೆ ಮೆಚ್ಚಿದ ಕೃಷ್ಣ ಸ್ನಾನ ಮಾಡಿ ಶುಚಿಯಾಗಿ ರಾಧೆಯನ್ನು ಪೂಜಿಸಿ ಸ್ತುತಿಸಿದ—

''ನಾನು ನಿನಗೆ ಪ್ರಿಯನೆನ್ನುವುದು ನನ್ನಲ್ಲಿಯೆ ನಿನಗೆ ಸುಖವೆನ್ನುವುದು ಸುಳ್ಳಾಯಿತು. ನಿನ್ನದು ವಂಚನೆಯ ಮಾತು ಎಂಬುದು ಈಗ ಚೆನ್ನಾಗಿ ವ್ಯಕ್ತವಾಯಿತು. ಕೃಷ್ಣ ನೀನು ನನ್ನ ಪ್ರಾಣ, ನೀನು ನನ್ನ ಜೀವ ಎಂದೆಲ್ಲ ಸದಾ ನೀನು ಹೇಳುತ್ತಿದ್ದುದು ಈಗ ಒಂದು ಕ್ಷಣದಲ್ಲಿಯೆ ಸುಳ್ಳೆಂದು ಸಿದ್ಧವಾಯಿತು. ಆದ್ದರಿಂದ ನೀನಾಡುವ ಮಾತೆಲ್ಲ ಸುಳ್ಳು, ಸ್ತ್ರೀಜಾತಿಯ ಹೃದಯವೆ ಹೀಗೆ. ಕತ್ತಿಯ ಅಲುಗಿನಂತೆ ಕ್ರೂರ.

ಈಗ ನಾನು ಹೇಳುವ ಮಾತುಕೇಳು. ನಾನು ಸುಳ್ಳಾಡುವುದಿಲ್ಲ. ನೀನು ನನ್ನ ಪ್ರಾಣಾಧಿಕ ದೇವತೆ, ಪ್ರಾಣಕ್ಕಿಂತ ಅಧಿಕ. ಅಂಥ ನಿನ್ನನ್ನು ನನ್ನ ಬಳಿ ಕಾಪಾಡಿಕೊಳ್ಳಲಾಗದ ನನ್ನ ಪ್ರಾಣ ನಿನ್ನ ಬಳಿಗೇ ಹೋಗುತ್ತಿವೆ. ಪ್ರಾಣದ ಅಧಿದೇವತೆ ಹೊರಟುಹೋದರೆ ಪ್ರಾಣ ಹೇಗೆ ನಿಲ್ಲುತ್ತದೆ ?

ಮಹಾವಿಷ್ಣುವಿನ ಮಾತೆ ಮೂಲಪ್ರಕೃತಿ ನೀನು. ಅಂಶದಲ್ಲಿ ಸಗುಣಳಾದರೂ ಮೂಲರೂಪದಲ್ಲಿ ನಿರ್ಗುಣಳು. ಜ್ಯೋತೀರೂಪ ನಿರಾಕಾರಳು. ಭಕ್ತರ ಮೇಲೆ ಅನುಗ್ರಹ ಮಾಡುವುದಕ್ಕಾಗಿ ಅವರ ಇಷ್ಟಾನುಸಾರ ನಾನಾ ರೂಪ ಧರಿಸುವವಳು. ವೈಕುಂಠದಲ್ಲಿ ಮಹಾಲಕ್ಷ್ಮಿ, ಭಾರತದಲ್ಲಿ ಭಾರತೀ ತುಲಸಿ ಗಂಗೆಯರು, ಬ್ರಹ್ಮಲೋಕದಲ್ಲಿ ಸಾವಿತ್ರಿ ನೀನೆ. ಭೂದೇವಿಯೂ ನಿನ್ನ ಅಂಶ. ಗೋಲೋಕದಲ್ಲಿ ರಾಧೆ ಎನಿಸಿದ ನೀನು ಹೊರಟುಹೋದರೆ ನಾನು ನಿರ್ಜೀವನಂತೆ ಯಾವುದೇ ಕೆಲಸಕ್ಕೂ ಅಶಕ್ತ. ಶಕ್ತಿರೂಪಳಾದ ನೀನಿದ್ದರೆ ಶಿವ ಶಕ್ತ. ಇಲ್ಲದಿದ್ದರೆ ಶವದಂತೆ. ವೇದಮಾತೆಯಾದ ನೀನಿದ್ದರೆ ವಿಷ್ಣು ಜಗತ್ತನ್ನು ಪಾಲಿಸುವ. ದಕ್ಷಿಣೆಯಾದ ನೀನಿದ್ದರೆ ಯಜ್ಞರೂಪನಾಗಿ ಯಜ್ಞಕ್ಕೆ ಫಲ ನೀಡಬಲ್ಲ. ನಿನಗೆ ತಲೆ ಬಾಗಿಯೆ ಶೇಷನೂ ಪ್ರಪಂಚವನ್ನು ಹೊರುತ್ತಾನೆ. ನಿನಗೆ ನಮಿಸಿಯೆ ಶಿವ ತಲೆಯಲ್ಲಿ ಗಂಗೆಯನ್ನು ಹೊರುತ್ತಾನೆ. ಜಗತ್ತೆಲ್ಲ ನೀನಿದ್ದರೇ ಶಕ್ತಿಯುಕ್ತ. ಇಲ್ಲದಿದ್ದರೆ ಶವರೂಪವಾಗುತ್ತದೆ. ನೀನು ವಾಣಿಯಾಗಿ ನಾಲಿಗೆಯಲ್ಲಿದ್ದರೆ ಮಾತ್ರ ಎಲ್ಲರೂ ವಾಗ್ಮಿಗಳು. ಇಲ್ಲದಿದ್ದರೆ ಮೂಕರು. ಕುಂಬಾರ ಮಣ್ಣಿಲ್ಲದೆ ಗಡಿಗೆಯನ್ನು ಹೇಗೆ ಮಾಡಲಾರನೋ ಹಾಗೇ ಪ್ರಕೃತಿಯಾದ ನೀನು ಇಲ್ಲದಿದ್ದರೆ ನಾನೂ ಸೃಷ್ಟಿ ಮಾಡಲಾರೆ. ನೀನಿಲ್ಲದಿದ್ದರೆ ನಾನು ಜಡ, ಎಲ್ಲ ಕಾರ್ಯಗಳಲ್ಲೂ ಅಶಕ್ತ. ಶಕ್ತಿಸ್ವರೂಪಳಾದ ನೀನು ನನ್ನ ಬಳಿಗೆ ಬಾ. ಬೆಂಕಿಯಲ್ಲಿ ಸುಡುವ ಶಕ್ತಿ ನೀನು. ನೀನಿಲ್ಲದೆ ತಾನೆ ಸುಡಲಾರದು. ಚಂದ್ರನಲ್ಲಿ ಶೋಭೆ ನೀನೆ. ನೀನಿಲ್ಲದಿದ್ದರೆ ಚಂದ್ರನೂ ಆಹ್ಲಾದ ಉಂಟುಮಾಡಲಾರ. ಸೂರ್ಯನಲ್ಲಿ ಕಿರಣರೂಪಳು ನೀನೆ. ನೀನಿಲ್ಲದಿದ್ದರೆ ಸೂರ್ಯನಲ್ಲಿ ಬೆಳಕಿಲ್ಲ. ನೀನು ರತಿಯಾಗಿ ಮನ್ಮಥನ ಬಳಿ ಇರದಿದ್ದರೆ ಮನ್ಮಥ ಸ್ತ್ರೀಯರನ್ನು ಆಕರ್ಷಿಸಲಾರ.'

ಹೀಗೆ ಕೃಷ್ಣ ಸ್ತೋತ್ರ ಮಾಡಿ ರಾಧೆಯನ್ನು ತಿರುಗಿ ಪಡೆದ. ದೇವತೆಗಳೂ ಪತ್ನೀಸಮೇತರಾದರು. ಸಂಪದ್ಭರಿತರಾದರು. ಜಗತ್ತೆಲ್ಲವೂ ಸಂಪತ್‌ಸಮೃದ್ಧ-ವಾಯಿತು. ಗೋಲೋಕವೂ ಗೋಪಿಯರಿಂದ ತುಂಬಿತು. ಈ ಸ್ತೋತ್ರದ ಬಲದಿಂದಲೆ ರಾಜಾ ಸುಯಜ್ಞನೂ ಗೋಲೋಕವನ್ನು ಪಡೆದ.

ಕೃಷ್ಣನು ಮಾಡಿದ ಈ ರಾಧಾ ಸ್ತೋತ್ರವನ್ನು ಯಾರು ಪಠಿಸುವನೋ ಅವನು ಕೃಷ್ಣಭಕ್ತಿಯನ್ನೂ ಕೃಷ್ಣದಾಸ್ಯವನ್ನೂ ಪಡೆಯುವನು. ಹೆಂಡತಿಯ ವಿಯೋಗವಾದಾಗ ಒಂದು ತಿಂಗಳು ಈ ಸ್ತೋತ್ರವನ್ನು ಶ್ರವಣಮಾಡಿದರೆ ಸುಶೀಲೆಯಾದ ಸುಂದರಿ-ಯಾದ ಹೆಂಡತಿ ಲಭಿಸುವಳು. ಹಿಂದೆ ನಾನು ಈ ಸ್ತೋತ್ರದ ಬಲದಿಂದಲೆ ನಿನ್ನನ್ನು ಪಡೆದೆ. ಹಿಂದೆ ದೂರ್ವಾಸಶಾಪದಿಂದ ದೇವತೆಗಳ ಸಂಪತ್ತು ನಷ್ಟವಾದಾಗ ಈ ಸ್ತೋತ್ರದ ಬಲದಿಂದಲೆ ಅವರಿಗೆ ಸಂಪತ್ತು ಲಭಿಸಿತು. ಒಂದು ವರ್ಷ ಶ್ರವಣ ಮಾಡಿದರೆ ಪುತ್ರಾರ್ಥಿಗೆ ಪುತ್ರಪ್ರಾಪ್ತಿ. ರೋಗಾರ್ತನಿಗೆ ರೋಗಮುಕ್ತಿ. ಕಾರ್ತಿಕ ಹುಣ್ಣಿಮೆಯಂದು ಪೂಜೆಮಾಡಿ ಈ ಸ್ತೋತ್ರ ಪಠಿಸಿದರೆ ಸ್ಥಿರವಾದ ಸಂಪತ್ತು ಲಭಿಸುವುದು. ರಾಜಸೂಯಯಾಗದ ಪುಣ್ಯ ಬರುವುದು. ಸ್ತ್ರೀಯರು ಈ ಸ್ತೋತ್ರ ಶ್ರವಣ ಮಾಡಿದರೆ ಪತಿ ಸೌಭಾಗ್ಯ ಲಾಭ. ಬಂಧನಕ್ಕೊಳಗಾದವರು ಭಕ್ತಿಯಿಂದ ಶ್ರವಣ ಮಾಡಿದರೆ ಬಂಧಮುಕ್ತಿಯಾಗುವುದು. ನಿತ್ಯ ದೇವಿಯನ್ನು ಪೂಜಿಸಿ ಈ ಸ್ತೋತ್ರವನ್ನು ಪಠಿಸುವವನು ಸಂಸಾರ ಬಂಧನದಿಂದ ಮುಕ್ತನಾಗಿ ಗೋಲೋಕ ಪಡೆಯುವನು.

**ಇಲ್ಲಿಗೆ ಶ್ರೀ ಬ್ರಹ್ಮವೈವರ್ತ ಮಹಾಪುರಾಣದಲ್ಲಿ ಎರಡನೆಯದಾದ ಪ್ರಕೃತಿಖಂಡದ ನಾರದನಾರಾಯಣ ಸಂವಾದದಲ್ಲಿ ಬರುವ ಹರಗೌರೀ ಸಂವಾದದಲ್ಲಿ ರಾಧೋಪಾಖ್ಯಾನದಲ್ಲಿ ರಾಧಾ ಪೂಜಾ ಸ್ತೋತ್ರಾದಿ ಕಥನವೆಂಬ ಐವತ್ತೈದನೆ ಅಧ್ಯಾಯ ಮುಗಿಯಿತು.**

## ರಾಧಾಕವಚ ಮಂತ್ರಾದಿ ಕಥನ

ಅಧ್ಯಾಯ-೫೬

ಪಾರ್ವತಿ— ನಾಥ, ರಾಧಾ ಪೂಜಾಕ್ರಮ ಸ್ತೋತ್ರಗಳನ್ನು ಕೇಳಿದ್ದಾಯಿತು. ಇನ್ನು ಕವಚವನ್ನು ಹೇಳು.

ಶಿವ— ರಾಧಾಕವಚವನ್ನು ಹೇಳುತ್ತೇನೆ, ಕೇಳು. ಇದು ಬಹಳ ಅದ್ಭುತ. ಹಿಂದೆ ಗೋಲೋಕದಲ್ಲಿ ಪರಮಾತ್ಮ ನನಗೆ ಉಪದೇಶಿಸಿದುದು. ಅತ್ಯಂತ ಗೋಪ್ಯ ಸರ್ವ-ಮಂತ್ರಗಳಿಂದ ಗರ್ಭಿತವಾದುದು.

ಈ ಕವಚಧಾರಣದಿಂದ ಬ್ರಹ್ಮ ಸಾವಿತ್ರಿಯನ್ನು ಪಡೆದ. ನಾನು ನಿನ್ನನ್ನು ಪಡೆದೆ. ನಾರಾಯಣ ಮಹಾಲಕ್ಷ್ಮಿಯನ್ನು, ಕೃಷ್ಣ ಸೃಷ್ಟಿ ಶಕ್ತಿಯನ್ನು, ವಿಷ್ಣು ಸಿಂಧುಕನ್ಯೆಯನ್ನು ಶೇಷ ಬ್ರಹ್ಮಾಂಡಧಾರಣ ಶಕ್ತಿಯನ್ನು, ಮಹಾವಿರಾಟ್ ರೋಮಕೂಪದಲ್ಲಿ ಬ್ರಹ್ಮಾಂಡ ಧರಿಸುವ ಶಕ್ತಿಯನ್ನು ಪಡೆದುದು ಈ ಕವಚಧಾರಣದಿಂದ.

ಈ ಕವಚ ಧರಿಸಿಯೆ ಧರ್ಮ ಸರ್ವಸಾಕ್ಷಿಯೆನಿಸಿದ. ಕುಬೇರ ಧನಾಧಿಪತಿಯಾದ. ಇಂದ್ರ ಸುರೇಶನಾದ. ಮನು ಚಕ್ರವರ್ತಿಗಳಿಗೆ ಒಡೆಯನಾದ. ಚಂದ್ರ ರಾಜಸೂಯ ಮಾಡಿದ. ಸೂರ್ಯ ಮೂಲೋಕ ಪೂಜ್ಯನಾದ. ಅಗ್ನಿ ಲೋಕಪಾವನನಾದ. ವಾಯು ಮೂಲೋಕಪಾವನನೆನಿಸಿದ. ಮೃತ್ಯು ಪ್ರಾಣಿಗಳಲ್ಲಿ ನೆಲೆಸಿದ. ಪರಶುರಾಮ ಇಪ್ಪತ್ತೊಂದು ಬಾರಿ ಕ್ಷತ್ರಿಯಸಂಹಾರ ಮಾಡಿದ. ಅಗಸ್ತ್ಯ ಸಮುದ್ರಪಾನ ಮಾಡಿದ. ಸನತ್ಕುಮಾರ ಶ್ರೇಷ್ಠ ಜ್ಞಾನಿಯೆನಿಸಿದ. ನರ ನಾರಾಯಣರು ಜೀವನ್ಮುಕ್ತರು ಋಷಿ-ಗಳಾದರು. ವಸಿಷ್ಠ ತಪಃಸಿದ್ಧಿ ಪಡೆದ. ಕಪಿಲ ಸಿದ್ಧೇಶನೆನಿಸಿದ. ದಕ್ಷ ಪ್ರಜಾಪತಿ ಎನಿಸಿದ. ಭೃಗು ನನ್ನನ್ನು ದ್ವೇಷಿಸಲು ಶಕ್ತನಾದ. ಕೂರ್ಮ ಶೇಷನನ್ನು ಹೊರಲು ಶಕ್ತನಾದ. ವಾಯು ಸರ್ವಾಧಾರನೆನಿಸಿದ. ಈಶಾನ ದಿಕ್ಪಾಲಕನಾದ. ಯಮ ಶಾಸಕ-ನಾದ. ಕಾಲ ಕಾಲಾಗ್ನಿರುದ್ರರು ಸಂಹಾರಕರಾದರು. ಗೌತಮ ತಪಃಸಿದ್ಧನಾದ. ಕಶ್ಯಪ ಪ್ರಜಾಪತಿಯಾದ. ದೂರ್ವಾಸ ಪತ್ನೀವಿಯೋಗವಾದಾಗ ವಸುದೇವನ ಮಗಳನ್ನು ಪತ್ನಿಯಾಗಿ ಪಡೆದ. ರಾವಣನಿಂದ ಅಪಹೃತಳಾದ ಸೀತೆಯನ್ನು ರಾಮ ತಿರುಗಿ ಪಡೆದ. ನಲ ದಮಯಂತಿಯನ್ನು ಪಡೆದ. ಶಂಖಚೂಡ ದೈತ್ಯಚಕ್ರವರ್ತಿಯಾದ. ವೃಷಭ ನನ್ನನ್ನು ಗರುಡ ಹರಿಯನ್ನು ಹೊರಲು ಶಕ್ತರಾದರು. ಹೀಗೆ ಸಿದ್ಧರೂ ಮುನಿಗಳೂ ದೇವತೆಗಳೂ ಈ ಕವಚಧಾರಣದಿಂದಲೆ ತಪಃಸಿದ್ಧರಾದರು.

ಮಹಾಲಕ್ಷ್ಮಿ ಸರ್ವಸಂಪತ್ ಪ್ರದಳೆನಿಸುದುದು, ಸರಸ್ವತಿ ರತಿ ಸಾವಿತ್ರಿಯರು ಸಿದ್ಧಿ ಪಡೆದುದು, ಸಿಂಧುಕನ್ಯೆ ಮರ್ತ್ಯಲಕ್ಷ್ಮಿಯರು ವಿಷ್ಣುವನ್ನು ಪಡೆದುದು ತುಲಸಿ ಗಂಗೆಯರು ಲೋಕಪಾವನೆಯರೆನಿಸಿದುದು, ಭೂಮಿ ಸರ್ವಸಸ್ಯಭರಿತಳಾಗಿ ಸರ್ವಾಧಾರಳೆನಿಸಿದುದು, ಮನಸಾದೇವಿ ಲೋಕಪೂಜ್ಯಳಾದುದು, ಅದಿತಿ ವಿಷ್ಣುವನ್ನು

ಮಗನನ್ನಾಗಿ ಪಡೆದುದು, ಲೋಪಾಮುದ್ರೆ ಅರುಂಧತಿಯರು ಪತಿವ್ರತೆಯರಾದುದು, ದೇವಹೂತಿ ಕಪಿಲನನ್ನು ಮಗನನ್ನಾಗಿ ಪಡೆದುದು, ಶತರೂಪೆ ಪ್ರಿಯವ್ರತ ಉತ್ತಾನ-ಪಾದರನ್ನು ಮಕ್ಕಳನ್ನಾಗಿ ಪಡೆದುದು, ಮೇನೆ ನಿನ್ನನ್ನು ಮಗಳನ್ನಾಗಿ ಪಡೆದುದು ಎಲ್ಲ ಸಿದ್ಧರು ಸರ್ವೈಶ್ವರ್ಯ ಪಡೆದುದು ಈ ಕವಚಧಾರಣದಿಂದಲೆ.

ಮೂಲೋಕಕ್ಕೆ ಮಂಗಳಕರವಾದ ಈ ರಾಧಾಕವಚಕ್ಕೆ ಪ್ರಜಾಪತಿ ಋಷಿ. ಗಾಯತ್ರಿ ಛಂದಸ್ಸು. ರಾಸೇಶ್ವರಿ ದೇವಿ ರಾಧೆಯೆ ದೇವತೆ. ಶ್ರೀಕೃಷ್ಣಭಕ್ತಿ ಪ್ರಾಪ್ತಿಗಾಗಿ ಇದನ್ನು ಧರಿಸಬೇಕು. ಬ್ರಾಹ್ಮಣನೂ ಕೃಷ್ಣಭಕ್ತನೂ ಆದ ಶಿಷ್ಯನಿಗೆ ಮಾತ್ರ ಇದನ್ನು ಉಪದೇಶಿಸಬೇಕು. ದುಷ್ಟರಿಗೆ ದುಷ್ಟರ ಕಡೆಯವರಿಗೆ ಉಪದೇಶಿಸಿದರೆ ಮರಣ ಪ್ರಾಪ್ತಿಯಾಗುವುದು. ಒಬ್ಬನಿಗೆ ರಾಜ್ಯವನ್ನು ಕೊಡಬಹುದು. ತನ್ನ ತಲೆಯನ್ನೇ ಕೊಡಬಹುದು. ಈ ಕವಚವನ್ನು ಮಾತ್ರ ಕೊಡಲಾಗದು. ಕೃಷ್ಣನೂ ಇದನ್ನು ಭಕ್ತಿಯಿಂದ ಕಂಠದಲ್ಲಿ ಧರಿಸಿದ್ದಾನೆ. ನಾನೂ ಬ್ರಹ್ಮವಿಷ್ಣುಗಳೂ ಗೋಲೋಕದಲ್ಲಿ ಇದನ್ನು ಕಂಡಿದ್ದೇವೆ.

'ಓಂ ರಾಧಾಯೈ ಸ್ವಾಹಾ' ಎಂಬ ಮಂತ್ರ ಕೃಷ್ಣನಿಂದ ಉಪಾಸಿತವಾದುದು ಕಲ್ಪವೃಕ್ಷ ಸದೃಶ. ಇದು ನನ್ನ ಶಿರಸ್ಸನ್ನು ಕಾಪಾಡಲಿ.

ಓಂ ಹ್ರೀಂ ಶ್ರೀಂ ರಾಧಿಕಾಯೈ ಸ್ವಾಹಾ ಎಂಬ ಮಂತ್ರ ಕಪೋಲ ಕಣ್ಣು ಕಿವಿಗಳನ್ನು ಕಾಪಾಡಲಿ.

ಓಂ ಐಂ ಹ್ರೀಂ ಶ್ರೀಂ ರಾಧಿಕಾಯೈ ಸ್ವಾಹಾ ಎಂಬ ಮಂತ್ರ ಮಸ್ತಕ ಮತ್ತು ಕೇಶಪಾಶಗಳನ್ನು ರಕ್ಷಿಸಲಿ.

'ಓಂ ರಾಂ ರಾಧಾಯೈ ಸ್ವಾಹಾ' ಎಂಬ ಸರ್ವಸಿದ್ಧಿಪ್ರದವಾದ ಮಂತ್ರ ಕಪೋಲ ಮೂಗು ಬಾಯಿಗಳನ್ನು ಕಾಪಾಡಲಿ.

'ಕ್ಲೀಂ ಶ್ರೀಕೃಷ್ಣ ಪ್ರಿಯಾಯೈ ನಮಃ' ಎಂಬ ಮಂತ್ರ ಕಂಠವನ್ನು ಕಾಪಾಡಲಿ.

'ಓಂ ರಾಂ ರಾಸೇಶ್ವರ್ಯೈ ನಮಃ' ಎಂಬ ಮಂತ್ರ ಹೆಗಲನ್ನು ಕಾಪಾಡಲಿ.

'ಓಂ ರಾಂ ರಾಸವಿಲಾಸಿನ್ಯೈ ಸ್ವಾಹಾ' ಎಂಬ ಮಂತ್ರ ಎದೆಯನ್ನು ಕಾಪಾಡಲಿ.

'ವೃಂದಾವನ ವಿಲಾಸಿನ್ಯೈ ಸ್ವಾಹಾ' ಎಂಬ ಮಂತ್ರ ನಿತಂಬವನ್ನು ರಕ್ಷಿಸಲಿ.

'ಓಂ ಕೃಷ್ಣಪ್ರಾಣಾಧಿಕಾಯೈ ಸ್ವಾಹಾ' ಎಂಬ ಮಂತ್ರ ಪಾದಗಳನ್ನೂ ಸರ್ವಾಂಗಗಳನ್ನೂ ಕಾಪಾಡಲಿ.

ಪೂರ್ವದಲ್ಲಿ ರಾಧೆ ಆಗ್ನೇಯದಲ್ಲಿ ಕೃಷ್ಣಪ್ರಿಯೆ, ದಕ್ಷಿಣದಲ್ಲಿ ರಾಸೇಶ್ವರಿ, ನೈಋತ್ಯದಲ್ಲಿ ಗೋಪೀಶಳು, ಪಶ್ಚಿಮದಲ್ಲಿ ನಿರ್ಗುಣಳು, ವಾಯವ್ಯದಲ್ಲಿ ಕೃಷ್ಣ

ಪೂಜಿತಳು. ಉತ್ತರದಲ್ಲಿ ಮೂಲಪ್ರಕೃತಿ, ಈಶಾನ್ಯದಲ್ಲಿ ಸರ್ವೇಶ್ವರಿ ಸದಾ ನನ್ನನ್ನು ರಕ್ಷಿಸಲಿ.

ನೀರಲ್ಲಿ ನೆಲದಲ್ಲಿ ಅಂತರಿಕ್ಷದಲ್ಲಿ ಸ್ವಪ್ನದಲ್ಲಿ ಜಾಗರದಲ್ಲಿ ಮಹಾವಿಷ್ಣು ಜನನಿ ಎಲ್ಲೆಡೆ ನನ್ನನ್ನು ಕಾಪಾಡಲಿ.

ಇದು ಜಗನ್ಮಂಗಲಕರವಾದ ರಾಧಾಕವಚ. ಅತ್ಯಂತ ಗೋಪ್ಯವಾದ ಈ ಕವಚ ಯಾರು ಯಾರಿಗೋ ಕೊಡುವಂತಹುದಲ್ಲ. ನಿನ್ನಲ್ಲಿರುವ ಪ್ರೀತಿಯಿಂದ ನಾನು ನಿನಗೆ ಹೇಳಿದ್ದೇನೆ. ನೀನು ಯಾರಿಗೂ ಹೇಳಬೇಡ. ಗುರುವನ್ನು ವಿಧ್ಯುಕ್ತವಾಗಿ ವಸ್ತ್ರಾಭರಣ ಗಂಧಗಳಿಂದ ಪೂಜಿಸಿ ಈ ಕವಚವನ್ನು ಕಂಠದಲ್ಲಿ ಅಥವಾ ಬಲಭುಜದಲ್ಲಿ ಧರಿಸಿದರೆ ವಿಷ್ಣುಸಮನಾಗುವನು.

ನೂರು ಲಕ್ಷಬಾರಿ ಜಪಿಸಿದರೆ ಕವಚ ಸಿದ್ಧಿಯಾಗುವುದು. ಸಿದ್ಧಕವಚನನ್ನು ಬೆಂಕಿಯೂ ಸುಡಲಾರದು. ಈ ಕವಚದ ಪ್ರಭಾವದಿಂದಲೆ ರಾಜಾ ದುರ್ಯೋಧನ ಜಲಸ್ತಂಭ ವಹ್ನಿಸ್ತಂಭ ವಿದ್ಯೆಗಳಲ್ಲಿ ನಿಪುಣನೆನಿಸಿದ. ನಾನು ಇದನ್ನು ಪುಷ್ಕರದಲ್ಲಿ ಸೂರ್ಯಗ್ರಹಣಕಾಲದಲ್ಲಿ ಸನತ್ಕುಮಾರನಿಗೆ ಉಪದೇಶಿಸಿದೆ. ಅವನು ಸಾಂದೀಪ-ನಿಗೆ, ಅವನು ಬಲ್ಲನಿಗೆ, ಬಲ್ಲ ದುರ್ಯೋಧನನಿಗೆ ಉಪದೇಶಿಸಿದ. ಈ ಕವಚದ ಪ್ರಭಾವದಿಂದ ಮಾನವ ಜೀವನ್ಮುಕ್ತನಾಗುತ್ತಾನೆ. ನಿತ್ಯ ಪಠಿಸಿದರೆ ವಿಷ್ಣು ತುಲ್ಯ-ನೆನಿಸುತ್ತಾನೆ. ರಾಜಸೂಯಯಾಗದ ಪುಣ್ಯವನ್ನು ಪಡೆಯುತ್ತಾನೆ. ಸರ್ವತೀರ್ಥಸ್ನಾನ, ಸರ್ವದಾನ, ಸರ್ವವ್ರತೋಪವಾಸ, ಭೂಪ್ರದಕ್ಷಿಣ, ಸರ್ವಯಜ್ಞದೀಕ್ಷೆ, ನಿತ್ಯಸತ್ಯ ಪಾಲನೆ, ನಿತ್ಯ ಶ್ರೀಕೃಷ್ಣಸೇವೆ. ಕೃಷ್ಣನೈವೇದ್ಯ ಭಕ್ಷಣ ಮತ್ತು ಚತುರ್ವೇದ ಪಾರಾಯಣಗಳ ಫಲವನ್ನು ಈ ಕವಚಪಠನದಿಂದ ಪಡೆಯಲು ಸಾಧ್ಯವಿದೆ.

ರಾಜದ್ವಾರ, ಸ್ಮಶಾನ, ಸಿಂಹ, ಹುಲಿಗಳಿರುವ ಕಾಡು, ಕಾಳ್ಗಿಚ್ಚು, ಘೋರ ಆಪತ್ತು, ಭಯಂಕರ ರೋಗಗಳಲ್ಲಿ ಈ ಕವಚ ರಕ್ಷಣೆ ನೀಡುವುದು.

ಪಾರ್ವತಿ, ನಿನಗೆ ಈ ಕವಚವನ್ನು ಹೇಳಿದ್ದೇನೆ. ನೀನು ಸರ್ವರೂಪಳಾದ ಮಾಯೆ. ಮಾಯೆಯಿಂದಲೆ ನನ್ನನ್ನು ಕೇಳುತ್ತಿರುವೆ.

ನಾರಾಯಣ— ನಾರದ, ಶಿವ ಈ ರೀತಿಯಾಗಿ ರಾಧೆಯ ಚರಿತ್ರೆಯನ್ನು ಹೇಳಿ ಕೃಷ್ಣಸ್ಮರಣೆಯಿಂದ ಪುಲಕಿತನಾಗಿ ಕಣ್ಣಲ್ಲಿ ಆನಂದ ಬಾಷ್ಪ ಹರಿಸಿದ.

**ನ ಕೃಷ್ಣ ಸದೃಶೋ ದೇವೋ ನ ಗಂಗಾ ಸದೃಶೀ ಸರಿತ್ ।**
**ನ ಪುಷ್ಕರಾತ್ ಪರಂ ತೀರ್ಥಂ ನ ವರ್ಣೋ ಬ್ರಾಹ್ಮಣಾತ್ ಪರಃ ॥**

ಕೃಷ್ಣನಿಗೆ ಸಮನಾದ ದೇವನಿಲ್ಲ. ಗಂಗೆಗೆ ಸಮಾನ ನದಿಯಿಲ್ಲ. ಪುಷ್ಕರಕ್ಕೆ ಮಿಗಿಲಾದ ಪುಣ್ಯಕ್ಷೇತ್ರವಿಲ್ಲ. ಬ್ರಾಹ್ಮಣನಿಗಿಂತ ಮಿಗಿಲಾದ ಜಾತಿ ಇಲ್ಲ.

**ಪರಮಾಣುವಿಗಿಂತ ಸೂಕ್ಷ್ಮ, ಮಹಾವಿಷ್ಣುವಿಗಿಂತ ಮಹತ್ತು, ಆಕಾಶಕ್ಕಿಂತ ವಿಸ್ತಾರವಾದುದು ಹೇಗೆ ಬೇರೆ ಇಲ್ಲವೋ ಹಾಗೆ ವಿಷ್ಣುಭಕ್ತನಿಗಿಂತ ಹೆಚ್ಚಿನ ಜ್ಞಾನಿ ಬೇರೆ ಇಲ್ಲ. ಶಿವನಿಗಿಂತ ಹೆಚ್ಚಿನ ಯೋಗಿ ಬೇರೆ ಇಲ್ಲ. ಕಾಮಕ್ರೋಧ ಲೋಭ-ಮೋಹಗಳನ್ನು ಅವನು ಗೆದ್ದಿದ್ದಾನೆ.** ಮಲಗಿರಲಿ ಎಚ್ಚತ್ತಿರಲಿ ಸದಾ ಕೃಷ್ಣನದೇ ಧ್ಯಾನ ಅವನಿಗೆ. ಕೃಷ್ಣನಂತೆಯೇ ಶಿವ. ಕೃಷ್ಣ ಶಿವರೊಳಗೆ ಭೇದವಿಲ್ಲ.

**ವಿಷ್ಣುಭಕ್ತರಲ್ಲಿ ಶಿವ ಹೇಗೋ, ದೇವತೆಗಳಲ್ಲಿ ಕೃಷ್ಣ ಹೇಗೋ ಹಾಗೇ ಕವಚಗಳಲ್ಲಿ ಈ ಕವಚ ಶ್ರೇಷ್ಠ.**

'ಶಿ' ಎಂದರೆ ಮಂಗಳ. 'ವ' ಎಂದರೆ ದಾಯಕ. ಮಂಗಲದಾಯಕನಾದ್ದರಿಂದ ಶಿವ 'ಶಿವ'ನೆನಿಸಿದ. 'ಶಂ' ಎಂದರೂ ಮಂಗಳ. ಮಂಗಳಕರನಾದ್ದರಿಂದ 'ಶಂಕರ.' ಬ್ರಹ್ಮಾದಿದೇವತೆಗಳು ವೇದವಾದಿಗಳಾದ ಮುನಿಗಳೂ ಮಹಾತ್ಮರು. ಅವರಿಗೂ ದೇವನಾದ್ದರಿಂದ 'ಮಹಾದೇವ.' ಮಹಾತ್ಮಳಾದ ಮೂಲಪ್ರಕೃತಿರೂಪಳಾದ ಪಾರ್ವತಿಗೆ ದೇವನಾದ್ದರಿಂದಲೂ ಮಹಾದೇವನೆನಿಸಿದ. ಲೋಕದ ಎಲ್ಲ ಮಹಾತ್ಮ-ರಿಗೂ ಒಡೆಯನಾದ್ದರಿಂದ ಮಹೇಶ್ವರನೆನಿಸಿದ. ನಾರದ, ನೀನು ಧನ್ಯ. ನಿನಗೆ ಈ ಶಿವ ಗುರುವಾಗಿ ಲಭಿಸಿದ. ಕೃಷ್ಣಭಕ್ತಿ ನೀಡಿದ.

**ಇಲ್ಲಿಗೆ ಶ್ರೀ ಬ್ರಹ್ಮವೈವರ್ತ ಮಹಾಪುರಾಣದಲ್ಲಿ ಎರಡನೆಯದಾದ ಪ್ರಕೃತಿಖಂಡದ ನಾರದನಾರಾಯಣ ಸಂವಾದದಲ್ಲಿ ರಾಧೋಪಾಖ್ಯಾನದಲ್ಲಿ ರಾಧಾಮಂತ್ರಾದಿ ಕಥನವೆಂಬ ಐವತ್ತಾರನೆ ಅಧ್ಯಾಯ ಮುಗಿಯಿತು.**

## ದುರ್ಗಾದಿ ನಮಾವ್ಯುತ್ಪತ್ಯಾದಿ ಕಥನ

**ಅಧ್ಯಾಯ-೫೭**

ನಾರದ— ಪ್ರಭು, ಎಲ್ಲ ಆಖ್ಯಾನಗಳನ್ನೂ ಕೇಳಿದ್ದಾಯಿತು. ಮುಂದೆ ದುರ್ಗೋಪಾಖ್ಯಾನವನ್ನು ಹೇಳು.

ದುರ್ಗಾ ನಾರಾಯಣೀ ಈಶಾನಾ ವಿಷ್ಣುಮಾಯಾ ಶಿವಾ ಸತೀ ನಿತ್ಯಾ ಸತ್ಯಾ ಭಗವತೀ ಶರ್ವಾಣೀ ಸರ್ವಮಂಗಲಾ ಅಂಬಿಕಾ ವೈಷ್ಣವೀ ಗೌರೀ ಪಾರ್ವತೀ ಸನಾತನೀ -ಈ ಹದಿನಾರು ನಾಮಗಳು ಕೌಥುಮಶಾಖೆಯಲ್ಲಿ ಹೇಳಿದವು, ಎಲ್ಲರಿಗೂ ಶುಭದಾಯಕಗಳು. ಅವುಗಳಿಗೆ ವೇದೋಕ್ತ ಸರ್ವಸಮ್ಮತ ಅರ್ಥಗಳನ್ನು ಹೇಳು. ದುರ್ಗೆಯನ್ನು ಮೊದಲಿಗೆ ಎರಡನೆ ಬಾರಿ ಮೂರನೆ ಬಾರಿ ನಾಲ್ಕನೆ ಬಾರಿ ಯಾರೆಲ್ಲ ಪೂಜಿಸಿದರು ?

ನಾರಾಯಣ— ದುರ್ಗೆಯ ಹದಿನಾರು ನಾಮಗಳಿಗೆ ಅರ್ಥವನ್ನು ವಿಷ್ಣು ವೇದದಲ್ಲಿ ಹೇಳಿರುವುದು ನಿನಗೆ ತಿಳಿದೇ ಇದೆ. ತಿಳಿದೂ ಕೇಳುತ್ತಿರುವೆ.

'ದುರ್ಗ' ಎಂದರೆ ಅನೇಕ ಅರ್ಥಗಳಿವೆ. ಒಬ್ಬ ರಾಕ್ಷಸ, ಮಹಾವಿಘ್ನ, ಭವಬಂಧ, ಕರ್ಮ, ಶೋಕ, ದುಃಖ, ನರಕ, ಯಮದಂಡ, ಜನ್ಮ, ಮಹಾಭಯ, ಅತಿವೇಗ ಇವೆಲ್ಲ ದುರ್ಗಗಳು. 'ಆ' ಎಂದರೆ ನಾಶ ಮಾಡುವವಳು. ಈ ಎಲ್ಲ ಅನಿಷ್ಟಗಳನ್ನೂ ನಾಶ ಮಾಡುವುದರಿಂದ ದುರ್ಗೆ ಎನಿಸುವಳು.

ಯಶಸ್ಸು ತೇಜಸ್ಸು ರೂಪಗುಣಗಳಿಂದ ನಾರಾಯಣನಿಗೆ ಸಮಾನಳಾದ್ದರಿಂದ ನಾರಾಯಣ ಶಕ್ತಿಸ್ವರೂಪಳಾದ್ದರಿಂದ ನಾರಾಯಣೀ ಎನಿಸುವಳು.

'ಈಶಾನ' ಎಂದರೆ ಸರ್ವಸಿದ್ಧಿ. 'ಆ' ಎಂದರೆ ದಾಯಕಳು. ಸರ್ವಸಿದ್ಧಿ-ದಾಯಕಳಾದ್ದರಿಂದ ಈಶಾನಾ ಎನಿಸುವಳು.

ಮಾಯೆಯಾದ ಇವಳನ್ನು ಮೊದಲಿಗೆ ವಿಷ್ಣು ಸೃಜಿಸಿದ. ಇವಳು ವಿಶ್ವವನ್ನು ಮೋಹಗೊಳಿಸಿದಳು. ಅದರಿಂದ ವಿಷ್ಣುಮಾಯೆ ಎನಿಸುವಳು.

'ಶಿವ' ಎಂದರೆ ಮಂಗಳ. ಮಂಗಳ ಸ್ವರೂಪಳಾದ್ದರಿಂದ 'ಶಿವಾ' ಅಥವಾ 'ಆ' ಎಂದರೆ ದಾಯಕಳು, ಪ್ರಿಯಳು ಮಂಗಳದಾಯಕಳು, ಶಿವನಿಗೆ ಪ್ರಿಯಳು. ಅದರಿಂದ ಶಿವೆ ಎನಿಸುವಳು.

ಸದ್ಬುದ್ಧಿಗೆ ಅಧಿಷ್ಠಾತ್ರಿ. ಪ್ರತಿಯುಗದಲ್ಲಿ ಇರುವವಳು ಪತಿವ್ರತೆ. ಮತ್ತು ಸುಶೀಲೆ. ಈ ಕಾರಣಗಳಿಂದ 'ಸತೀ' ಎನಿಸುವಳು.

ಭಗವಂತ ಹೇಗೆ ನಿತ್ಯನೋ ಹಾಗೇ ದುರ್ಗೆಯೂ ನಿತ್ಯಳು. ಲಯಕಾಲದಲ್ಲಿ ತನ್ನ ಮಾಯೆಯಿಂದ ತಿರೋಧಾನ ಹೊಂದಿ ಭಗವಂತನಲ್ಲಿರುತ್ತಾಳೆ. ಆದ್ದರಿಂದ 'ನಿತ್ಯಾ' ಎನಿಸುವಳು.

ಬ್ರಹ್ಮನಿಂದ ತೊಡಗಿ ಹುಲ್ಲುಕಡ್ಡಿವರೆಗೂ ಎಲ್ಲವೂ ಕೃತ್ರಿಮವಾಗಿದ್ದು ಅಶಾಶ್ವತ. ದುರ್ಗೆ ಭಗವಂತನಂತೆ ಸದಾ ಇರುವವಳಾದ್ದರಿಂದ 'ಸತ್ಯಾ' ಎನಿಸುವಳು.

ಐಶ್ವರ್ಯ ವೀರ್ಯ ಯಶಸ್ ಶ್ರೀ ಜ್ಞಾನ ವಿಜ್ಞಾನಗಳೆಂಬ ಆರು ಗುಣಗಳಿಗೆ ಭಗ ಎಂದು ಹೆಸರು. ದೇವಿ ಪ್ರತಿಯುಗದಲ್ಲಿಯೂ ಭಗದಿಂದ ಯುಕ್ತಳಾಗುವುದರಿಂದ ಭಗವತಿ ಎನಿಸುವಳು.

ವಿಶ್ವದ ಸಮಸ್ತ ಚರ ಅಚರ ಪ್ರಾಣಿಗಳ ಜನನ ಮರಣಜರೆ ಮುಂತಾದವುಗಳನ್ನು ನಾಶಪಡಿಸಿ ಮೋಕ್ಷ ನೀಡುವುದರಿಂದ ಶರ್ವಾಣಿ ಎನಿಸುವಳು.

ಮಂಗಲವೆಂದರೆ ಮೋಕ್ಷ. 'ಆ' ಎಂದರೆ ದಾಯಕಳು. ಸರ್ವರಿಗೂ ಮಂಗಳ-ದಾಯಕಳಾದ್ದರಿಂದ ಸರ್ವಮಂಗಳಾ ಎನಿಸುವಳು. ಅಥವಾ ಮಂಗಳವೆಂದರೆ ಸಂತೋಷ, ಸಂಪತ್ತು, ಶುಭ. ಎಲ್ಲರಿಗೂ ಇಂಥ ಮಂಗಳವನ್ನು ಕೊಡುವುದರಿಂದ ಸರ್ವಮಂಗಳಾ.

ಅಂಬಿಕೆ ಎಂದರೆ ತಾಯಿ, ವಂದ್ಯಳು, ಪೂಜ್ಯಳು. ಜಗತ್ತಿಗೇ ತಾಯಿ ವಂದ್ಯಳು ಪೂಜ್ಯಳು ದುರ್ಗೆ. ಆದ್ದರಿಂದ ಅಂಬಿಕೆ ಎನಿಸುವಳು.

ವಿಷ್ಣುಭಕ್ತಳು, ವಿಷ್ಣುರೂಪಳು, ವಿಷ್ಣುವಿನ ಶಕ್ತಿ ಸ್ವರೂಪಳು, ಸೃಷ್ಟಿಯಲ್ಲಿ ವಿಷ್ಣುವಿನಿಂದ ಜನಿಸಿದವಳು. ಅದರಿಂದ ವೈಷ್ಣವೀ ಎನಿಸುವಳು.

ಗೌರ ಎಂದರೆ ಹೊಂಬಣ್ಣದ್ದು, ನಿರ್ಮಲವಾದುದು, ಅಂಥ ಪರಬ್ರಹ್ಮ. ಪರಬ್ರಹ್ಮಶಕ್ತಿ ಸ್ವರೂಪಳಾದ್ದರಿಂದ ಗೌರಿ ಎನಿಸುವಳು. ಅಥವಾ ಗುರು ಎಂದರೆ ಜಗದ್ಗುರುವಾದ ಶಿವ. ಅವನ ಪ್ರಿಯಳಾದ್ದರಿಂದ ಗೌರಿ. ಅಥವಾ ಗುರು ಜಗದ್ಗುರು-ವಾದ ಕೃಷ್ಣ. ಅವನ ಮಾಯಾರೂಪಳಾದ್ದರಿಂದ ಗೌರಿ.

ಪರ್ವವೆಂದರೆ ಕೆಲವು ತಿಥಿಗಳು. ಚತುರ್ದಶೀ ಅಷ್ಟಮೀ ಹುಣ್ಣಿಮೆ ಅಮಾವಾಸ್ಯೆ-ಗಳು. ತ ಎಂದರೆ ಖ್ಯಾತಿ. ಪರ್ವಗಳಲ್ಲಿ ಪೂಜ್ಯಳಾಗಿ ಖ್ಯಾತಿವೆತ್ತುದರಿಂದ ಪಾರ್ವತಿ ಅಥವಾ ಪರ್ವವೆಂದರೆ ಹಬ್ಬಗಳು. ಹಬ್ಬಗಳ ಅಧಿದೇವತೆಯಾದುದರಿಂದ 'ಪಾರ್ವತಿ' ಅಥವಾ ಪರ್ವತರಾಜನ ಮಗಳಾದ್ದರಿಂದ ಪರ್ವತದಲ್ಲಿ ಅವತರಿಸಿದ್ದರಿಂದ ಪರ್ವತಗಳ ಅಧಿಷ್ಠಾತ್ರಿಯಾದ್ದರಿಂದ 'ಪಾರ್ವತಿ.'

'ಸನಾ' ಸದಾಕಾಲ 'ತನೀ' ಎಂದರೆ ಹರಡಿರುವವಳು. ಎಲ್ಲ ಕಾಲ ದೇಶಗಳಲ್ಲಿ ಹರಡಿರುವುದರಿಂದ ಸನಾತನೀ ಎಂದು ಹೆಸರು.

ಈ ದುರ್ಗೆಯನ್ನು ಮೊತ್ತಮೊದಲಿಗೆ ಗೋಲೋಕದ ರಾಸಮಂಡಲದಲ್ಲಿರುವ ವೃಂದಾವನದಲ್ಲಿ ಕೃಷ್ಣ ಪೂಜಿಸಿದ. ಎರಡನೆ ಬಾರಿ ಮಧುಕೈಟಭರಿಂದ ಭೀತನಾದ ಬ್ರಹ್ಮ ಪೂಜಿಸಿದ. ತ್ರಿಪುರಾಸುರನಿಗೆ ಭೀತನಾಗಿ ಶಿವ ಮೂರನೇ ಬಾರಿ ಪೂಜಿಸಿದ. ನಾಲ್ಕನೇ ಬಾರಿ ದೂರ್ವಾಸಶಾಪದಿಂದ ಸಂಪತ್ತನ್ನು ಕಳೆದುಕೊಂಡ. ದೇವೇಂದ್ರ ಪೂಜಿಸಿದ. ಆಗಲೆ ಮುನಿಗಳು ಸಿದ್ಧರು ದೇವತೆಗಳು ಋಷಿಗಳು ಎಲ್ಲಕಡೆ ದುರ್ಗೆಯನ್ನು ಪೂಜಿಸಿದರು. ಹಿಂದೊಮ್ಮೆ ಎಲ್ಲ ದೇವತೆಗಳ ತೇಜಸ್ಸುಗಳಿಂದ ದುರ್ಗೆ ಆವಿರ್ಭವಿಸಿದಳು. ಎಲ್ಲ ದೇವತೆಗಳೂ ಅವಳಿಗೆ ಶಸ್ತ್ರ ಆಭರಣಗಳನ್ನಿತ್ತರು. ಬಳಿಕ ದೇವಿ ದುರ್ಗ ಮುಂತಾದ ಅಸುರರನ್ನು ಕೊಂದು ದೇವತೆಗಳಿಗೆ ಅವರ ರಾಜ್ಯವನ್ನಿ-ತ್ತಳು. ಅವಳನ್ನು ಸುಮೇಧ ಮುನಿಯ ಶಿಷ್ಯನಾದ ಸುರಥನೆಂಬ ರಾಜ ನದೀತೀರದಲ್ಲಿ ಮೃಣ್ಮಯ ಪ್ರತಿಮೆಯಲ್ಲಿ ಅರ್ಚಿಸಿದ. ಜೊತೆಗೆ ಒಬ್ಬ ವೈಶ್ಯನೂ ದೇವಿಯನ್ನು

ಅರ್ಚಿಸಿದ. ಅದರಿಂದ ರಾಜ ತನ್ನ ಕಳೆದುಹೋದ ರಾಜ್ಯವನ್ನು ಹಿಂತಿರುಗಿ ಪಡೆದು ಅರವತ್ತು ಸಾವಿರ ವರ್ಷಕಾಲ ಆಳಿ ಹೆಂಡತಿಯನ್ನೂ ರಾಜ್ಯವನ್ನೂ ಮಗನ ವಶದಲ್ಲಿ ಬಿಟ್ಟು ಕಾಲವಶನಾಗಿ ಸಾವರ್ಣಿಮನುವಾಗಿ ಹುಟ್ಟಿದ. ವೈಶ್ಯನೂ ಶರೀರತ್ಯಾಗ ಮಾಡಿ ಮುಂದಿನ ಜನ್ಮದಲ್ಲಿ ಪುಷ್ಕರದಲ್ಲಿ ತಪಸ್ಸು ಮಾಡಿ ದೇವಿಯ ವರದಿಂದ ಗೋಲೋಕ ಸೇರಿದ.

ನಾರದ, ಸಂಕ್ಷೇಪವಾಗಿ ದುರ್ಗಾದೇವಿಯ ಚರಿತ್ರೆಯನ್ನು ವರ್ಣಿಸಿದ್ದೇನೆ. ಇನ್ನೇನು ಕೇಳಬಯಸುವಿ ?

**ಇಲ್ಲಿಗೆ ಶ್ರೀ ಬ್ರಹ್ಮವೈವರ್ತ ಮಹಾಪುರಾಣದಲ್ಲಿ ಎರಡನೆಯದಾದ ಪ್ರಕೃತಿಖಂಡದ ನಾರದನಾರಾಯಣ ಸಂವಾದದಲ್ಲಿ ದುರ್ಗೋಪಾಖ್ಯಾನದಲ್ಲಿ ದುರ್ಗಾದಿನಾಮವ್ಯುತ್ಪತ್ತ್ಯಾದಿಕಥನವೆಂಬ ಐವತ್ತೇಳನೆ ಅಧ್ಯಾಯ ಮುಗಿಯಿತು.**

# ತಾರಾದೇವಿಯ ಶೀಲಭಂಗ ಮಾಡಿದ ಚಂದ್ರನ ವ್ಯಭಿಚಾರ ದೋಷವನ್ನು ಶುಕ್ರಾಚಾರ್ಯರು ಪಾಪಿಗಳಿಗೆ ಹಂಚಿದ್ದು

**ಅಧ್ಯಾಯ-೫೮**

ನಾರದ— ರಾಜಾ ಸುರಥ ಯಾರ ವಂಶದವ ? ಅವನು ಸುಮೇಧನಿಂದ ಜ್ಞಾನವನ್ನು ಹೇಗೆ ಪಡೆದ ? ಸುಮೇಧ ಮುನಿಯಾರ ವಂಶದವ ? ಇಬ್ಬರಿಗೂ ಸಂಭಾಷಣೆ ಎಲ್ಲಿ ನಡೆಯಿತು ? ರಾಜನಿಗೂ ವೈಶ್ಯನಿಗೂ ಮೈತ್ರಿ ಎಲ್ಲ ಉಂಟಾಯಿತು ? ಎಲ್ಲವನ್ನೂ ವಿಸ್ತಾರವಾಗಿ ಕೇಳಲು ಬಯಸುತ್ತೇನೆ, ಹೇಳು.

ನಾರಾಯಣ— ಬ್ರಹ್ಮಪುತ್ರನಾದ ಅತ್ರಿಯ ಮಗ ಚಂದ್ರ. ಅವನು ರಾಜಸೂಯ-ಯಾಗ ಮಾಡಿ ದ್ವಿಜರಿಗೆ ಒಡೆಯನಾದ. ಅವನಿಗೆ ಗುರುಪತ್ನಿಯಾದ ತಾರೆಯಲ್ಲಿ ಬುಧ ಮಗನಾಗಿ ಹುಟ್ಟಿದ. ಬುಧನ ಮಗ ಚೈತ್ರ. ಚೈತ್ರನ ಮಗನೆ ಸುರಥ.

ನಾರದ— ಗುರುಪತ್ನಿಯಾದ ತಾರೆಯಲ್ಲಿ ಚಂದ್ರನಿಗೆ ಮಗ ಹೇಗೆ ಹುಟ್ಟಿದ ? ಇದು ವೇದದ ವಿಧಿ ನಿಷೇಧಗಳ ಅತಿಕ್ರಮವಲ್ಲವೆ ?

ನಾರಾಯಣ— ಚಂದ್ರ ಸಂಪತ್ತಿನಿಂದ ಮತ್ತನಾಗಿ ಮಹಾಕಾಮಿಯಾಗಿ ಒಮ್ಮೆ ಗಂಗಾತೀರದಲ್ಲಿ ಸುತ್ತಾಡುತ್ತಿದ್ದಾಗ ದೇವಗುರು ಬೃಹಸ್ಪತ್ಯಾಚಾರ್ಯರ ಪತ್ನಿಯಾದ

ಪತಿವ್ರತೆಯಾದ ತಾರೆ ಗೋಚರಳಾದಳು. ಆಕೆ ಸುಂದರಿ ಕೋಮಲಾಂಗಿ. ನವಯೌವನ ಶಾಲಿನಿ. ತೆಳುವಾದ ಸೀರೆಯುಟ್ಟು ಕಸ್ತೂರಿಯ ಬೊಟ್ಟು ಇಟ್ಟು-ಕೊಂಡು ರತ್ನಾಭರಣಗಳಿಂದ ಅಲಂಕೃತಳಾಗಿದ್ದಳು. ಅವಳು ಉಟ್ಟ ಬಟ್ಟೆ ಗಾಳಿಗೆ ಅಸ್ತವ್ಯಸ್ತವಾದಾಗ ಚಂದ್ರ ನೋಡಿದ. ಆಕೆ ಲಜ್ಜಿತಳಾದಳು. ಚಂದ್ರ ಕಾಮವಶನಾಗಿ ಲಜ್ಜೆ ತೊರೆದು ನುಡಿದ—

'ಸುಂದರಿ, ಒಂದು ಕ್ಷಣ ನಿಲ್ಲು. ನೀನು ರಸಿಕಳು, ಕಾಮಕಲಾನಿಪುಣಳು. ನಿನ್ನನ್ನು ಪಡೆಯಲು ಬೃಹಸ್ಪತಿ ಸಾವಿರ ಜನ್ಮಗಳಲ್ಲಿ ತಪಸ್ಸು ಮಾಡಿರಬೇಕು. ಆದರೆ ನನಗೆ ಆಶ್ಚರ್ಯ. ನಿನ್ನಂಥ ರಸಿಕಳನ್ನು ಸದಾ ತಪಸ್ಸು ಮಾಡುವ ಬೃಹಸ್ಪತಿಯೊಡನೆ ಸೇರಿಸಿದ್ದಾನೆ ಆ ಬ್ರಹ್ಮ. ಅವನು ಎಂಥ ಬುದ್ಧಿಶೂನ್ಯ! ಕಾಮಕಲೆಯಲ್ಲಿ ನಿಪುಣಳಾದ ನೀನು ಅಜ್ಞನಾದ ಪತಿಯಲ್ಲಿ ಏನು ಸುಖಕಾಣುವೆ ? ಕಾಮದ ಬೆಂಕಿಯಲ್ಲಿ ನೀನು ವ್ಯರ್ಥವಾಗಿ ಸುಟ್ಟುಹೋಗುವೆ. ನಿನ್ನ ಯೌವನ ವ್ಯರ್ಥವಾಗಿ ಕಳೆಯುತ್ತಿದೆ. ನವಯೌವನವತಿಯಾದ ನಿನಗೆ ವೃದ್ಧನಾದ ಪತಿಯಿಂದೇನು ಸುಖ ಸಿಕ್ಕೀತು ? ಆತ ನಿದ್ದೆಯಲ್ಲೂ ಎಚ್ಚರದಲ್ಲೂ ಕೃಷ್ಣಧ್ಯಾನದಲ್ಲೇ ಮುಳುಗಿರುತ್ತಾನೆ. ನೀನು ಶೃಂಗಾರ-ಲೀಲೆಯನ್ನು ಧ್ಯಾನಿಸುವಿ. ನಿನ್ನ ಬಯಕೆ ಬೇರೆ, ಅವನ ಬಯಕೆಯೆ ಬೇರೆ. ನಿಮ್ಮಿಬ್ಬರ ಸಮಾಗಮದಲ್ಲಿ ಏನು ಸೊಗಸಿದೆ ? ಬಾ, ನನ್ನನ್ನು ಸೇರು. ಈ ವಸಂತಕಾಲದಲ್ಲಿ ಮಲ್ಲಿಗೆ ತೋಟದಲ್ಲಿ ಹೂವಿನ ಹಾಸಿಗೆ ಮೇಲೆ ರಮಿಸೋಣ. ಶ್ರೀಗಂಧದ ಕಾಡಿನ ನಿರ್ಜನ ಪ್ರದೇಶದಲ್ಲಿ ವಿಹರಿಸೋಣ. ಸಂಪಿಗೆ ವನದಲ್ಲಿ ತಂಗಾಳಿ ಸೇವಿಸೋಣ.

ಹೀಗೆ ಹೇಳುತ್ತ ಚಂದ್ರ ತಾರೆಯ ಕಾಲುಗಳಿಗೆ ಬಿದ್ದ. ತಾರೆ ಕೋಪದಿಂದ ನುಡಿದಳು—

ಚಂದ್ರ, ಪರಸ್ತ್ರೀಲಂಪಟನಾದ ನಿನಗೆ ಧಿಕ್ಕಾರ. ನೀನು ಅತ್ರಿ ಮುನಿಗೆ ಮಗನಾಗಿ ಜನಿಸಿದುದು ಅವನ ದುರದೃಷ್ಟ. ನಿನ್ನ ಜೀವನ ವ್ಯರ್ಥವಾಯಿತು. ರಾಜಸೂಯ-ಯಾಗ ಮಾಡಿದ ಬಲಿಷ್ಠ ರಾಜ ನೀನೆಂದು ಕೊಳ್ಳುವಿ. ಆದರೆ ನಿನ್ನ ಆ ಪುಣ್ಯವೆಲ್ಲ ವಿಪ್ರಸ್ತ್ರೀ ಕಾಮನೆಯಿಂದ ನಶಿಸಿ ಹೋಯಿತು.

ಯಸ್ಯ ಚಿತ್ತಂ ಪರಸ್ತ್ರೀಷು ಸೋಽಶುಚಿಃ ಸರ್ವಕರ್ಮಸು ।
ನ ಕರ್ಮಫಲಭಾಕ್ ಪಾಪೀ ನಿಂದ್ಯೋ ವಿಶ್ವೇಷು ಸರ್ವತಃ ॥

ಪರಸ್ತ್ರೀಯನ್ನು ಬಯಸುವವ ಎಲ್ಲ ಕರ್ಮಗಳಲ್ಲಿಯೂ ಅಶುಚಿ, ಕರ್ಮಮಾಡಿ ಏನೂ ಫಲವಿಲ್ಲ. ನೀನು ನನ್ನ ಶೀಲ ಕಳೆದರೆ ಕ್ಷಯರೋಗಗ್ರಸ್ತನಾಗುವೆ. ಬಹಳ ಮೇಲೇರಿದವ ಕೆಳಗೆ ಬೀಳುತ್ತಾನೆ ಎಂದು ಶ್ರುತಿಯು ಹೇಳುವುದಕ್ಕೆ ನೀನೆ ಸರಿಯಾದ ಉದಾಹರಣೆಯಾಗುವೆ. ದುಷ್ಟರ ದರ್ಪ ಮುರಿವ ಆ ಕೃಷ್ಣ ನಿನ್ನ ದರ್ಪವನ್ನು

ಮುರಿಯುತ್ತಾನೆ. ಬೇಡ, ಚಂದ್ರ, ನನ್ನ ಸಂಗಬೇಡ. ನಿನ್ನ ತಾಯಿಗೆ ಸಮಾನಳು ನಾನು. ಬಿಟ್ಟುಬಿಡು. ಆಗ ನಿನಗೆ ಒಳ್ಳೆಯದಾಗುವುದು.'

ಹೀಗೆ ಹೇಳಿ ತಾರೆ ಅತ್ತು ಧರ್ಮ ಸೂರ್ಯ ವಾಯು ಅಗ್ನಿ ಬ್ರಹ್ಮ ಪರಮಾತ್ಮ ಆಕಾಶ ಭೂಮಿ ದಿನ ರಾತ್ರಿ ಸಂಧ್ಯೆ ಮತ್ತು ಎಲ್ಲ ದೇವತೆಗಳನ್ನೂ ಕರೆದು ಸಾಕ್ಷಿಯಾಗಿರೆಂದು ಬೇಡಿದಳು. ಚಂದ್ರ ಭಯಪಡಲಿಲ್ಲ. ತಾರೆಯನ್ನು ಹಿಡಿದು ಎತ್ತಿ ರಥದಲ್ಲಿರಿಸಿಕೊಂಡು ಮನೋವೇಗದಿಂದ ಸಂಚರಿಸಿ ನಂದನವನದಲ್ಲಿ ವಿಹರಿಸಿದ. ಹೂವಿನ ಹಾಸಿಗೆಯಲ್ಲಿ ಕ್ರೀಡಿಸಿದ. ರಮ್ಯವಾದ ನಿರ್ಜನವಾದ ಬೆಟ್ಟಗಳಲ್ಲಿ ನದೀ-ತೀರಗಳಲ್ಲಿ ಶೃಂಗಾರರಸಮಗ್ನವಾಗಿ ಚಂದ್ರ ತಾರೆಯರ ಜೋಡಿ ನೂರು ವರ್ಷ-ಗಳನ್ನು ಮುಹೂರ್ತದಂತೆ ಕಳೆಯಿತು.

ಚಂದ್ರ ತಾರೆಯನ್ನು ಬಿಟ್ಟಿರಲಾರದೆ ದೇವತೆಗಳ ಭಯದಿಂದ ದೈತ್ಯರನ್ನು ಮೊರೆಹೊಕ್ಕ. ಅವರ ಗುರುವಾದ ಶುಕ್ರಾಚಾರ್ಯರಲ್ಲಿ ಶರಣಾದ. ಶುಕ್ರ 'ಬೃಹಸ್ಪತಿ ಏತರವನು ? ನೀನು ಭಯಪಡಬೇಡ. ನಾನು ನಿನ್ನನ್ನು ಕಾಪಾಡುವೆ'ನೆಂದು ಅಭಯ ನೀಡಿದ. ದೈತ್ಯರೂ 'ದೇವತೆಗಳೇನು ಮಾಡಬಲ್ಲರು' ? ಎನ್ನುತ್ತ ಚಂದ್ರನಿಗೆ ಅಭಯ ನೀಡಿದರು. ಆದರೆ ಪತಿವ್ರತೆಯ ಶೀಲಭಂಗ ಮಾಡಿದ ಪಾಪದಿಂದ ಚಂದ್ರನಲ್ಲಿ ಮೊಲದ ಆಕಾರದ ಕಳಂಕ ಆಗಲೆ ಕಾಣಿಸಿಕೊಂಡಿತ್ತು. ಚಂದ್ರ ಭಯದಿಂದ ತಲ್ಲಣಿಸಿದ. ಶುಕ್ರಾಚಾರ್ಯರು ಅವನಿಗೆ ಹಿತ ನುಡಿದರು—

'ಚಂದ್ರ, ನೀನು ಬ್ರಹ್ಮನ ಮೊಮ್ಮಗನಾಗಿ ಅತ್ರಿಯ ಮಗನಾಗಿ ನೀಚನಂತೆ ಇಂಥ ಕೆಟ್ಟ ಕೆಲಸವೇಕೆ ಮಾಡಿದೆ ? ಇದರಿಂದ ಯಶಸ್ಸಿಲ್ಲ. ರಾಜಸೂಯ ಮಾಡಿ ಗಳಿಸಿದ ನಿರ್ಮಲವಾದ ನಿನ್ನ ಕೀರ್ತಿಮಂಡಲದಲ್ಲಿ ಒಂದು ಕಳಂಕವನ್ನು ಅಮೃತಸಾಗರದಲ್ಲಿ ಮದ್ಯದ ಒಂದು ಹನಿಯಂತೆ ಏಕೆ ತಂದುಕೊಂಡೆ ? ತಾರೆಯನ್ನು ಬಿಡು. ಅವಳು ನಿನಗೆ ತಾಯಿಗೆ ಸಮಾನಳು. ಪತಿವ್ರತೆ. ಆ ಬೃಹಸ್ಪತಿಯೂ ಮಹಾಧರ್ಮಿಷ್ಠ. ಬ್ರಾಹ್ಮಣರಲ್ಲಿ ಶ್ರೇಷ್ಠ. ದೇವಶ್ರೇಷ್ಠನಾದ ಶಿವನಿಗೂ ಗುರುಪುತ್ರ. ಬ್ರಹ್ಮನ ಪೌತ್ರ, ಅಂಗಿರಸನ ಪುತ್ರ. ಬ್ರಹ್ಮವರ್ಚಸ್ಸಿನಿಂದ ಜ್ವಲಿಸುತ್ತಿದ್ದಾನೆ. ಗುಣ ಶತ್ರುವಿನಲ್ಲಿದ್ದರೂ ಹೊಗಳಬೇಕು. ದೋಷ ಗುರುವಿನಲ್ಲಿದ್ದರೂ ತೆಗಳಬೇಕು. ಇದು ಸಜ್ಜನ ಸ್ವಭಾವ. ಬೃಹಸ್ಪತಿ ದೇವತೆಗಳ ಗುರುವಾದ್ದರಿಂದ ನನಗೆ ಶತ್ರುವೆ. ಆದರೂ ಅವನ ಗುಣಗಳನ್ನು ಹೊಗಳಬೇಕು. ಎಲ್ಲಿ ಧರ್ಮಿಷ್ಠರಿರುವರೋ ಅಲ್ಲಿ ಧರ್ಮವಿದೆ. ಎಲ್ಲಿ ಧರ್ಮವಿದೆಯೋ ಅಲ್ಲಿ ಕೃಷ್ಣನ ಅನುಗ್ರಹವಿದೆ. ಎಲ್ಲಿ ಕೃಷ್ಣನ ಅನುಗ್ರಹವಿದೆಯೋ ಅಲ್ಲಿ ಜಯ ನಿಶ್ಚಿತ—

ಯತ್ರ ಲೋಕಾಶ್ಚ ಧರ್ಮಿಷ್ಠಾ ಸ್ತತ್ರ ಧರ್ಮಃ ಸನಾತನಃ ।
ಯತೋ ಧರ್ಮಸ್ತತಃ ಕೃಷ್ಣೋ ಯತಃ ಕೃಷ್ಣಸ್ತತೋ ಜಯಃ ॥

ಇದಕ್ಕೆ ಉದಾಹರಣೆ— ಗೋವು ಒಮ್ಮೆಗೆ ಒಂದು ಕರುವನ್ನು ಈಯುತ್ತದೆ. ಹುಲಿ ಐದು ಮರಿಗಳನ್ನು, ಸಿಂಹ ಏಳು ಮರಿಗಳನ್ನು. ಆದರೂ ಹಿಂಸಾಸ್ವಭಾವದ ಹುಲಿ ಸಿಂಹಗಳ ಮರಿಗಳ ನಾಶವಾಗುವುವು, ಗೋವಿನ ಕರುವಿಗೆ ರಕ್ಷಣೆ ದೊರೆಯುವುದು. ಅದೇ ರೀತಿ ಧರ್ಮಿಷ್ಠರಾದವರನ್ನು ಧರ್ಮವೆ ರಕ್ಷಿಸುವುದು. ದೇವತೆಗಳೂ ಗುರುಗಳಾದ ಮುನಿಗಳೂ ಪಾಪಿಗಳನ್ನೂ ರಕ್ಷಿಸಲು ಸಮರ್ಥರು. ಆದರೂ ರಕ್ಷಿಸುವುದಿಲ್ಲ. ಏಕೆಂದರೆ ಅವರು ಧರ್ಮವಿರೋಧಿಗಳು.

ದೇವತೆಗಳಾಗಲಿ ಮುನಿಗಳಾಗಲಿ ಶೀಲವಿಲ್ಲದ ಬ್ರಾಹ್ಮಣಸ್ತ್ರೀಯರ ಸಂಗ-ಮಾಡಿದರೆ ಬ್ರಹ್ಮಹತ್ಯೆಯ ಹದಿನಾರನೆ ಒಂದಂಶ ಪಾಪವಿದೆ. ಅವರು ತಾವಾಗಿ ಬಂದಿದ್ದರೆ ಅದರ ನಾಲ್ಕನೆ ಒಂದಂಶ ಪಾಪ. ಪತಿವ್ರತೆಯರಾದ ಬ್ರಾಹ್ಮಣಸ್ತ್ರೀಯರನ್ನು ಬಲಾತ್ಕಾರದಿಂದ ಕೆಡಿಸಿದರೆ ನೂರು ಬ್ರಹ್ಮಹತ್ಯಾಪಾಪ ನಿಶ್ಚಿತ.

ಆದ್ದರಿಂದ ಚಂದ್ರ, ನೀನು ಧರ್ಮ ಮಾರ್ಗದಲ್ಲಿ ನಡೆ. ಬ್ರಾಹ್ಮಣ ಸ್ತ್ರೀಯನ್ನು ಬಿಡು. ಪಶ್ಚಾತ್ತಾಪ ಪಟ್ಟು ಪಾಪಕರ್ಮವನ್ನು ತೊರೆದರೆ ಮಹಾಫಲವಿದೆ. ಈ ಒಂದು ಉಪಾಯದಿಂದ ನಿನ್ನ ಪಾಪವೆಲ್ಲ ದೂರವಾಗುತ್ತಿರುವಾಗ ಏಕೆ ಹಿಂಜರಿಯುವೆ ? ಇರಲಿ. ಶರಣಾಗತನಾದ ನಿನ್ನನ್ನು ರಕ್ಷಿಸುವುದು ನನ್ನ ಧರ್ಮ. ಇದಕ್ಕೆ ತಪ್ಪಿದರೆ ಕುಂಭೀಪಾಕ ನರಕ ತಪ್ಪದು. ತಪ್ಪದೆ ನಡೆಸಿದರೆ ನೂರು ರಾಜಸೂಯ ಯಾಗದ ಫಲ. ಪರಮೈಶ್ವರ್ಯಲಾಭ.''

ಹೀಗೆ ಹೇಳಿ ಶುಕ್ರಾಚಾರ್ಯರು ದೇವಗಂಗೆಯಲ್ಲಿ ಮಿಂದು ಚಂದ್ರನನ್ನೂ ಮೀಯಿಸಿ ವಿಷ್ಣುಪೂಜೆ ವಿಷ್ಣುನೈವೇದ್ಯ ಭಕ್ಷಣಗಳನ್ನೂ ಮಾಡಿಸಿ ಹರಿಸ್ಮರಣ-ಪೂರ್ವಕವಾಗಿ ಹೀಗೆ ನುಡಿದರು—

''ನನ್ನಲ್ಲಿ ತಪಸ್ಸು ಹರಿಪೂಜೆ ವ್ರತ ಸತ್ಯ ತೀರ್ಥಸ್ನಾನ ದಾನ ಉಪವಾಸಗಳ ಪುಣ್ಯವಿರುವುದು ನಿಜವಾಗಿದ್ದಲ್ಲಿ ನಿನ್ನ ಪಾಪ ದೂರವಾಗಲಿ.

ನಿನ್ನ ಪಾಪ ಸಂಧ್ಯಾವಂದನೆ ಹರಿಪೂಜೆ ಮಾಡದವನನ್ನು ಸೇರಲಿ. ದುಶ್ಶೀಲೆಯಾಗಿ ಪತಿಗೆ ಕಠೋರನುಡಿ ನುಡಿಯುವ ಸ್ತ್ರೀಯನ್ನು ಸೇರಲಿ. ಅವಳು ಅದರಿಂದ ಲಾಲಾಮುಖ ನರಕವನ್ನು ಹೊಂದಲಿ. ಹರಿಗೆ ಅಸಮರ್ಪಿತವಾದ ಅನ್ನ ಉಣ್ಣುವವ ಚಂದ್ರಪಾಪಕ್ಕೊಳಗಾಗಿ ನಾಲ್ಕು ಯುಗಗಳ ಕಾಲ ಕಾಲಸೂತ್ರನರಕ ಹೊಂದಲಿ. ಭೂಮಿ ರಜಸ್ವಲೆಯಾದಾಗ ನೆಲ ಅಗೆಯುವ ನೀಚ ಚಂದ್ರಪಾಪದಿಂದ ನೂರು ಯುಗಗಳ ಕಾಲ ಕಾಲಸೂತ್ರನರಕ ಹೊಂದಲಿ. ಪತಿಯನ್ನು ವಂಚಿಸಿ ಪರಪುರುಷರನ್ನು ಸೇರುವವಳು ಚಂದ್ರಪಾಪದಿಂದ ನಾಲ್ಕು ಯುಗಗಳ ಕಾಲ ವಹ್ನಿಕುಂಡನರಕ ಹೊಂದಲಿ. ಪರರ ಕೀರ್ತಿಯನ್ನು ನಾಶ ಮಾಡುವವ ಯುಗಪರ್ಯಂತ ಕುಂಭೀಪಾಕ

ಹೊಂದಲಿ. ತಂದೆ ತಾಯಿ ಗುರುಪತ್ನಿಯರನ್ನು ಪೋಷಿಸದವ ಚಂಡಾಲನಾಗಲಿ. ಕುಲಟೆಯ ಪತಿಪುತ್ರರಿಲ್ಲದವಳ ಋತುಸ್ನಾತಳ ಅನ್ನ ಉಣ್ಣುವವ ನಾಲ್ಕು ಯುಗಕಾಲ ಕುಂಭೀಪಾಕ ಹೊಂದಲಿ. ಬಳಿಕ ಚಂಡಾಲನಾಗಲಿ. ದಿವಾಸಂಭೋಗ ಗರ್ಭಿಣಿ ಅಥವಾ ರಜಸ್ವಲೆಯ ಸಂಗ ಮಾಡುವವ ನಾಲ್ಕು ಯುಗಕಾಲ ಕಾಲಸೂತ್ರನರಕ ಹೊಂದಲಿ. ಪರಸ್ತ್ರೀಯ ಮುಖ ನಿತಂಬ ಸ್ತನಗಳನ್ನು ಕಾಮದಿಂದ ನೋಡುವವ ನಾಲ್ಕು ಯುಗಕಾಲ ಲಾಲಾಭಕ್ಷ್ಯ ನರಕ ಹೊಂದಲಿ. ಬಳಿಕ ಅಂಧ ನಪುಂಸಕ ಚಂಡಾಲನಾಗಿ ಜನಿಸಲಿ.

ಅಮಾವಾಸ್ಯೆ ಹುಣ್ಣಿಮೆ ಸಂಕ್ರಮಣ ಚತುರ್ದಶಿ ಅಷ್ಟಮೀ ಭಾನುವಾರ ದಿನಗಳಲ್ಲಿ ಮಾಂಸ ಕಿರುಗಡಲೆ ಗಜನಿಂಬೆ ಭಕ್ಷಣ ಸ್ತ್ರೀಸಂಗ ಮಾಡುವವ ನಾಲ್ಕುಯುಗಕಾಲ ಕಾಲಸೂತ್ರದಲ್ಲಿ ಬೀಳಲಿ. ಏಳುಜನ್ಮ ಚಂಡಾಲನಾಗಲಿ. ಏಕಾದಶಿ ಕೃಷ್ಣಜನ್ಮಾಷ್ಟಮೀ ಶಿವರಾತ್ರಿಗಳಲ್ಲಿ ಉಣ್ಣುವವ ಹದಿನಾಲ್ಕು ಮನ್ವಂತರ ಕುಂಭಿಪಾಕದಲ್ಲಿ ಬಿದ್ದಿರಲಿ. ಬಳಿಕ ಚಂಡಾಲನಾಗಲಿ. ತಾಮ್ರಪಾತ್ರೆಯಲ್ಲಿರುವ ಹಾಲು ಜೇನುಗಳನ್ನು, ಕಂಚಿನ ಪಾತ್ರೆಯಲ್ಲಿರುವ ಎಳನೀರನ್ನು ಉಪ್ಪು ಬೆರೆಸಿದ ಹಾಲನ್ನು ಒಬ್ಬರು ಕುಡಿದುಳಿದ ನೀರನ್ನು ತಿಂದುಳಿದ ಅನ್ನವನ್ನು ಒಂದು ಹಗಲಲ್ಲಿ ಅನೇಕ ಸಲ ಅನ್ನವನ್ನು ಸೇವಿಸುವವ ನಾಲ್ಕು ಯುಗಕಾಲ ಅಂಧಕೂಪದಲ್ಲಿ ಬಿದ್ದಿರಲಿ. ಕನ್ಯಾವಿಕ್ರಯ ದೇವರ ಪೂಜೆಯಿಂದ ಜೀವಿಸುವುದು ಎತ್ತುಗಳಿಂದ ಜೀವಿಸುವುದು ಶೂದ್ರರಿಗೆ ಶವದಾಹ ಮಾಡಿಸುವುದು ಅವರಿಗೆ ಅಡಿಗೆ ಮಾಡುವುದು ಅಶ್ವತ್ಥವೃಕ್ಷ ಕಡಿಯುವುದು ವಿಷ್ಣು ವೈಷ್ಣವ ನಿಂದೆ ಮಾಡುವುದು ಈ ಪಾಪಗಳಿಂದ ತಪ್ತ ಸೂರ್ಮಿ ನರಕದಲ್ಲಿ ಹದಿನಾಲ್ಕು ಮನ್ವಂತರ ಬಳಲುತ್ತಿರಲಿ. ಬಳಿಕ ಚಂಡಾಲಾದಿ ಜನ್ಮ ಬರಲಿ. ಬಡ್ಡಿ ಹಣದಿಂದ ಜೀವಿಸುವುದು ಪತ್ನಿಯ ಶರೀರ ವಿಕ್ರಯ ಹರಿನಾಮ ವಿಕ್ರಯ ತನ್ನ ಶರೀರ ವಿಕ್ರಯ, ತನ್ನನ್ನು ತನ್ನ ಧರ್ಮಕಾರ್ಯವನ್ನು ಹೊಗಳಿಕೊಳ್ಳುವುದು ಅಗಸನ ವೃತ್ತಿ ವೇಶ್ಯಾವಾಟಿಕೆ ನಡೆಸುವುದು ಈ ಪಾಪಗಳಿಂದ ಹದಿನಾಲ್ಕು ಮನ್ವಂತರ ಕಾಲ ಶೂಲಪ್ರೋತನರಕವಾಗಲಿ.

ಅರಗು ಮಾಂಸ ರಸಪದಾರ್ಥ ಎಳ್ಳು ಉಪ್ಪು ಕುದುರೆ ಲೋಹಗಳನ್ನು ಮಾರುವುದು, ನರಹತ್ಯೆ ಕುಂಬಾರವೃತ್ತಿ ಕಳವು ಈ ಪಾಪಗಳಿಂದ ಬ್ರಾಹ್ಮಣ ಸಾವಿರ ಮನ್ವಂತರಕಾಲ ಕ್ಷುರಧಾರದಲ್ಲಿ ದುಃಖಿಸಲಿ. ಬಳಿಕ ನರಿ ಬೆಕ್ಕುನಾಯಿಗಳಾಗಿ ಹುಟ್ಟಲಿ.

ಹೀಗೆ ಲೋಕದ ಎಲ್ಲ ಪಾಪಕರ್ಮಿಗಳಿಗೆ ಚಂದ್ರನ ಪಾಪವನ್ನು ಹಂಚಿಕೊಟ್ಟು ಚಂದ್ರನನ್ನು ಶುದ್ಧನನ್ನಾಗಿ ಮಾಡಿ ಶುಕ್ರಾಚಾರ್ಯರು ತಾರೆಗೆ ಹೇಳಿದರು-

'ಸಾಧ್ವಿ, ನೀನು ಚಂದ್ರನನ್ನು ಬಿಟ್ಟು ನಿನ್ನ ಪತಿಯ ಬಳಿಗೇ ಹೋಗು. ನಿನಗೆ ಪ್ರಾಯಶ್ಚಿತ್ತ ಬೇಕಾಗಿಲ್ಲ. ಪ್ರಾಯಶ್ಚಿತ್ತವಿಲ್ಲದೆಯೆ ಶುದ್ಧಳಾಗಿರುವಿ. ಏಕೆಂದರೆ ನಿನ್ನ ಮನಸ್ಸು ಶುದ್ಧವಿದೆ.

ಇದಕ್ಕೆ ಉದಾಹರಣೆ— ಗೋವು ಒಮ್ಮೆಗೆ ಒಂದು ಕರುವನ್ನು ಈಯುತ್ತದೆ. ಹುಲಿ ಐದು ಮರಿಗಳನ್ನು, ಸಿಂಹ ಏಳು ಮರಿಗಳನ್ನು. ಆದರೂ ಹಿಂಸಾಸ್ವಭಾವದ ಹುಲಿ ಸಿಂಹಗಳ ಮರಿಗಳ ನಾಶವಾಗುವುವು, ಗೋವಿನ ಕರುವಿಗೆ ರಕ್ಷಣೆ ದೊರೆಯುವುದು. ಅದೇ ರೀತಿ ಧರ್ಮಿಷ್ಠರಾದವರನ್ನು ಧರ್ಮವೆ ರಕ್ಷಿಸುವುದು. ದೇವತೆಗಳೂ ಗುರುಗಳಾದ ಮುನಿಗಳೂ ಪಾಪಿಗಳನ್ನೂ ರಕ್ಷಿಸಲು ಸಮರ್ಥರು. ಆದರೂ ರಕ್ಷಿಸುವುದಿಲ್ಲ. ಏಕೆಂದರೆ ಅವರು ಧರ್ಮವಿರೋಧಿಗಳು.

ದೇವತೆಗಳಾಗಲಿ ಮುನಿಗಳಾಗಲಿ ಶೀಲವಿಲ್ಲದ ಬ್ರಾಹ್ಮಣಸ್ತ್ರೀಯರ ಸಂಗ-ಮಾಡಿದರೆ ಬ್ರಹ್ಮಹತ್ಯೆಯ ಹದಿನಾರನೆ ಒಂದಂಶ ಪಾಪವಿದೆ. ಅವರು ತಾವಾಗಿ ಬಂದಿದ್ದರೆ ಅದರ ನಾಲ್ಕನೆ ಒಂದಂಶ ಪಾಪ. ಪತಿವ್ರತೆಯರಾದ ಬ್ರಾಹ್ಮಣಸ್ತ್ರೀಯರನ್ನು ಬಲಾತ್ಕಾರದಿಂದ ಕೆಡಿಸಿದರೆ ನೂರು ಬ್ರಹ್ಮಹತ್ಯಾಪಾಪ ನಿಶ್ಚಿತ.

ಆದ್ದರಿಂದ ಚಂದ್ರ, ನೀನು ಧರ್ಮ ಮಾರ್ಗದಲ್ಲಿ ನಡೆ. ಬ್ರಾಹ್ಮಣ ಸ್ತ್ರೀಯನ್ನು ಬಿಡು. ಪಶ್ಚಾತ್ತಾಪ ಪಟ್ಟು ಪಾಪಕರ್ಮವನ್ನು ತೊರೆದರೆ ಮಹಾಫಲವಿದೆ. ಈ ಒಂದು ಉಪಾಯದಿಂದ ನಿನ್ನ ಪಾಪವೆಲ್ಲ ದೂರವಾಗುತ್ತಿರುವಾಗ ಏಕೆ ಹಿಂಜರಿಯುವೆ ? ಇರಲಿ. ಶರಣಾಗತನಾದ ನಿನ್ನನ್ನು ರಕ್ಷಿಸುವುದು ನನ್ನ ಧರ್ಮ. ಇದಕ್ಕೆ ತಪ್ಪಿದರೆ ಕುಂಭೀಪಾಕ ನರಕ ತಪ್ಪದು. ತಪ್ಪದೆ ನಡೆಸಿದರೆ ನೂರು ರಾಜಸೂಯ ಯಾಗದ ಫಲ. ಪರಮೈಶ್ವರ್ಯಲಾಭ.''

ಹೀಗೆ ಹೇಳಿ ಶುಕ್ರಾಚಾರ್ಯರು ದೇವಗಂಗೆಯಲ್ಲಿ ಮಿಂದು ಚಂದ್ರನನ್ನೂ ಮೀಯಿಸಿ ವಿಷ್ಣುಪೂಜೆ ವಿಷ್ಣುನೈವೇದ್ಯ ಭಕ್ಷಣಗಳನ್ನೂ ಮಾಡಿಸಿ ಹರಿಸ್ಮರಣ-ಪೂರ್ವಕವಾಗಿ ಹೀಗೆ ನುಡಿದರು—

''ನನ್ನಲ್ಲಿ ತಪಸ್ಸು ಹರಿಪೂಜೆ ವ್ರತ ಸತ್ಯ ತೀರ್ಥಸ್ನಾನ ದಾನ ಉಪವಾಸಗಳ ಪುಣ್ಯವಿರುವುದು ನಿಜವಾಗಿದ್ದಲ್ಲಿ ನಿನ್ನ ಪಾಪ ದೂರವಾಗಲಿ.

ನಿನ್ನ ಪಾಪ ಸಂಧ್ಯಾವಂದನೆ ಹರಿಪೂಜೆ ಮಾಡದವನನ್ನು ಸೇರಲಿ. ದುಶ್ಶೀಲೆಯಾಗಿ ಪತಿಗೆ ಕಠೋರನುಡಿ ನುಡಿಯುವ ಸ್ತ್ರೀಯನ್ನು ಸೇರಲಿ. ಅವಳು ಅದರಿಂದ ಲಾಲಾಮುಖ ನರಕವನ್ನು ಹೊಂದಲಿ. ಹರಿಗೆ ಅಸಮರ್ಪಿತವಾದ ಅನ್ನ ಉಣ್ಣುವವ ಚಂದ್ರಪಾಪಕ್ಕೊಳಗಾಗಿ ನಾಲ್ಕು ಯುಗಗಳ ಕಾಲ ಕಾಲಸೂತ್ರನರಕ ಹೊಂದಲಿ. ಭೂಮಿ ರಜಸ್ವಲೆಯಾದಾಗ ನೆಲ ಅಗೆಯುವ ನೀಚ ಚಂದ್ರಪಾಪದಿಂದ ನೂರು ಯುಗಗಳ ಕಾಲ ಕಾಲಸೂತ್ರನರಕ ಹೊಂದಲಿ. ಪತಿಯನ್ನು ವಂಚಿಸಿ ಪರಪುರುಷರನ್ನು ಸೇರುವವಳು ಚಂದ್ರಪಾಪದಿಂದ ನಾಲ್ಕು ಯುಗಗಳ ಕಾಲ ವಹ್ನಿಕುಂಡನರಕ ಹೊಂದಲಿ. ಪರರ ಕೀರ್ತಿಯನ್ನು ನಾಶ ಮಾಡುವವ ಯುಗಪರ್ಯಂತ ಕುಂಭೀಪಾಕ

ಹೊಂದಲಿ. ತಂದೆ ತಾಯಿ ಗುರುಪತ್ನಿಯರನ್ನು ಪೋಷಿಸದವ ಚಂಡಾಲನಾಗಲಿ. ಕುಲಟೆಯ ಪತಿಪುತ್ರರಿಲ್ಲದವಳ ಋತುಸ್ನಾತಳ ಅನ್ನ ಉಣ್ಣುವವ ನಾಲ್ಕು ಯುಗಕಾಲ ಕುಂಭೀಪಾಕ ಹೊಂದಲಿ. ಬಳಿಕ ಚಂಡಾಲನಾಗಲಿ. ದಿವಾಸಂಭೋಗ ಗರ್ಭಿಣಿ ಅಥವಾ ರಜಸ್ವಲೆಯ ಸಂಗ ಮಾಡುವವ ನಾಲ್ಕು ಯುಗಕಾಲ ಕಾಲಸೂತ್ರನರಕ ಹೊಂದಲಿ. ಪರಸ್ತ್ರೀಯ ಮುಖ ನಿತಂಬ ಸ್ತನಗಳನ್ನು ಕಾಮದಿಂದ ನೋಡುವವ ನಾಲ್ಕು ಯುಗಕಾಲ ಲಾಲಾಭಕ್ಷ್ಯ ನರಕ ಹೊಂದಲಿ. ಬಳಿಕ ಅಂಧ ನಪುಂಸಕ ಚಂಡಾಲನಾಗಿ ಜನಿಸಲಿ.

ಅಮಾವಾಸ್ಯೆ ಹುಣ್ಣಿಮೆ ಸಂಕ್ರಮಣ ಚತುರ್ದಶಿ ಅಷ್ಟಮೀ ಭಾನುವಾರ ದಿನಗಳಲ್ಲಿ ಮಾಂಸ ಕಿರುಗಡಲೆ ಗಜನಿಂಬೆ ಭಕ್ಷಣ ಸ್ತ್ರೀಸಂಗ ಮಾಡುವವ ನಾಲ್ಕುಯುಗಕಾಲ ಕಾಲಸೂತ್ರದಲ್ಲಿ ಬೀಳಲಿ. ಏಳುಜನ್ಮ ಚಂಡಾಲನಾಗಲಿ. ಏಕಾದಶಿ ಕೃಷ್ಣಜನ್ಮಾಷ್ಟಮೀ ಶಿವರಾತ್ರಿಗಳಲ್ಲಿ ಉಣ್ಣುವವ ಹದಿನಾಲ್ಕು ಮನ್ವಂತರ ಕುಂಭಿಪಾಕದಲ್ಲಿ ಬಿದ್ದಿರಲಿ. ಬಳಿಕ ಚಂಡಾಲನಾಗಲಿ. ತಾಮ್ರಪಾತ್ರೆಯಲ್ಲಿರುವ ಹಾಲು ಜೇನುಗಳನ್ನು, ಕಂಚಿನ ಪಾತ್ರೆಯಲ್ಲಿರುವ ಎಳನೀರನ್ನು ಉಪ್ಪು ಬೆರೆಸಿದ ಹಾಲನ್ನು ಒಬ್ಬರು ಕುಡಿದುಳಿದ ನೀರನ್ನು ತಿಂದುಳಿದ ಅನ್ನವನ್ನು ಒಂದು ಹಗಲಲ್ಲಿ ಅನೇಕ ಸಲ ಅನ್ನವನ್ನು ಸೇವಿಸುವವ ನಾಲ್ಕು ಯುಗಕಾಲ ಅಂಧಕೂಪದಲ್ಲಿ ಬಿದ್ದಿರಲಿ. ಕನ್ಯಾವಿಕ್ರಯ ದೇವರ ಪೂಜೆಯಿಂದ ಜೀವಿಸುವುದು ಎತ್ತುಗಳಿಂದ ಜೀವಿಸುವುದು ಶೂದ್ರರಿಗೆ ಶವದಾಹ ಮಾಡಿಸುವುದು ಅವರಿಗೆ ಅಡಿಗೆ ಮಾಡುವುದು ಅಶ್ವತ್ಥವೃಕ್ಷ ಕಡಿಯುವುದು ವಿಷ್ಣು ವೈಷ್ಣವ ನಿಂದೆ ಮಾಡುವುದು ಈ ಪಾಪಗಳಿಂದ ತಪ್ತ ಸೂರ್ಮಿ ನರಕದಲ್ಲಿ ಹದಿನಾಲ್ಕು ಮನ್ವಂತರ ಬಳಲುತ್ತಿರಲಿ. ಬಳಿಕ ಚಂಡಾಲಾದಿ ಜನ್ಮ ಬರಲಿ. ಬಡ್ಡಿ ಹಣದಿಂದ ಜೀವಿಸುವುದು ಪತ್ನಿಯ ಶರೀರ ವಿಕ್ರಯ ಹರಿನಾಮ ವಿಕ್ರಯ ತನ್ನ ಶರೀರ ವಿಕ್ರಯ, ತನ್ನನ್ನು ತನ್ನ ಧರ್ಮಕಾರ್ಯವನ್ನು ಹೊಗಳಿಕೊಳ್ಳುವುದು ಅಗಸನ ವೃತ್ತಿ ವೇಶ್ಯಾವಾಟಿಕೆ ನಡೆಸುವುದು ಈ ಪಾಪಗಳಿಂದ ಹದಿನಾಲ್ಕು ಮನ್ವಂತರ ಕಾಲ ಶೂಲಪ್ರೋತನರಕವಾಗಲಿ.

ಅರಗು ಮಾಂಸ ರಸಪದಾರ್ಥ ಎಳ್ಳು ಉಪ್ಪು ಕುದುರೆ ಲೋಹಗಳನ್ನು ಮಾರುವುದು, ನರಹತ್ಯೆ ಕುಂಬಾರವೃತ್ತಿ ಕಳವು ಈ ಪಾಪಗಳಿಂದ ಬ್ರಾಹ್ಮಣ ಸಾವಿರ ಮನ್ವಂತರಕಾಲ ಕ್ಷುರಧಾರದಲ್ಲಿ ದುಃಖಿಸಲಿ. ಬಳಿಕ ನರಿ ಬೆಕ್ಕುನಾಯಿಗಳಾಗಿ ಹುಟ್ಟಲಿ.

ಹೀಗೆ ಲೋಕದ ಎಲ್ಲ ಪಾಪಕರ್ಮಿಗಳಿಗೆ ಚಂದ್ರನ ಪಾಪವನ್ನು ಹಂಚಿಕೊಟ್ಟು ಚಂದ್ರನನ್ನು ಶುದ್ಧನನ್ನಾಗಿ ಮಾಡಿ ಶುಕ್ರಾಚಾರ್ಯರು ತಾರೆಗೆ ಹೇಳಿದರು-

'ಸಾಧ್ವಿ, ನೀನು ಚಂದ್ರನನ್ನು ಬಿಟ್ಟು ನಿನ್ನ ಪತಿಯ ಬಳಿಗೇ ಹೋಗು. ನಿನಗೆ ಪ್ರಾಯಶ್ಚಿತ್ತ ಬೇಕಾಗಿಲ್ಲ. ಪ್ರಾಯಶ್ಚಿತ್ತವಿಲ್ಲದೆಯೆ ಶುದ್ಧಳಾಗಿರುವಿ. ಏಕೆಂದರೆ ನಿನ್ನ ಮನಸ್ಸು ಶುದ್ಧವಿದೆ.

**ಅಕಾಮಾ ಯಾ ಬಲಿಷ್ಠೇನ ನ ಸ್ತ್ರೀ ಜಾರೇಣ ದುಷ್ಯತಿ**

ತಾನು ಕಾಮಿಸದೆ ಇದ್ದು ಬಲಾತ್ಕಾರಕ್ಕೊಳಪಟ್ಟರೆ ಸ್ತ್ರೀಯ ಪಾತಿವ್ರತ್ಯಕ್ಕೆ ನಾಶವಿಲ್ಲ. ಹೀಗೆ ಹೇಳಿ ಶುಕ್ರಾಚಾರ್ಯರು ಚಂದ್ರತಾರೆಯರಿಗೆ ಶುಭಾಶೀರ್ವಾದ ಮಾಡಿ ಅವರ ಮುಖದಲ್ಲಿ ನಸುನಗೆ ತರಿಸಿದರು.

**ಇಲ್ಲಿಗೆ ಶ್ರೀ ಬ್ರಹ್ಮವೈವರ್ತ ಮಹಾಪುರಾಣದಲ್ಲಿ ಎರಡನೆಯದಾದ ಪ್ರಕೃತಿಖಂಡದ ನಾರದನಾರಾಯಣ ಸಂವಾದದಲ್ಲಿ ದುರ್ಗೋಪಾಖ್ಯಾನದಲ್ಲಿ ತಾರಾಚಂದ್ರರ ದೋಷ ನಿವಾರಣವೆಂಬ ಐವತ್ತೆಂಟನೆ ಅಧ್ಯಾಯ ಮುಗಿಯಿತು.**

## ಮಡದಿಯನ್ನು ಕಳೆದುಕೊಂಡ ಬೃಹಸ್ಪತಿ ಬ್ರಹ್ಮನ ಆಜ್ಞೆಯಂತೆ ಕೈಲಾಸಕ್ಕೆ ನಡೆದ

**ಅಧ್ಯಾಯ-೫೯**

ನಾರದ— ತಾರೆಯನ್ನು ಚಂದ್ರ ಅಪಹರಿಸಿ ವೈಯ್ದಾಗ ಬೃಹಸ್ಪತಿ ಏನು ಮಾಡಿದ ? ಅವಳನ್ನು ತಿರುಗಿ ಹೇಗೆ ಪಡೆದ ?

ನಾರಾಯಣ— ತಾರೆ ಸ್ನಾನಮಾಡಿ ಬರುವುದು ವಿಲಂಬವಾದಾಗ ತಾನೆ ಶಿಷ್ಯರನ್ನು ತಾರೆಯ ಬಗ್ಗೆ ತಿಳಿದುಬರಲು ಗಂಗಾತೀರಕ್ಕೆ ಕಳಿಸಿದ. ಶಿಷ್ಯ ಜನರಾಡುತ್ತಿದ್ದ ಮಾತಿನಿಂದ ಚಂದ್ರ ತಾರೆಯನ್ನು ಅಪಹರಿಸಿದ ಸಮಾಚಾರ ತಿಳಿದು ಬಂದು ಹೇಳಿದರು. ಬೃಹಸ್ಪತಿ ಒಂದು ಮುಹೂರ್ತ ಕಾಲ ಮೂರ್ಛಿತನಾಗಿದ್ದು ಎದ್ದು ಅಳ- ತೊಡಗಿದ. ಅವನಿಗೆ ಒಂದೆಡೆ ಪತ್ನೀವಿಯೋಗದ ಶೋಕ, ಇನ್ನೊಂದೆಡೆ ಪರಪುರುಷ ಅವಳನ್ನು ಅಪಹರಿಸಿದನೆಂದು ಲಜ್ಜೆ. ಅತಿ ವಿಹ್ವಲನಾಗಿ ವಿಲಾಪಮಾಡಿದ. ಗುರು ಅಳುವುದನ್ನು ಕಂಡು ಶಿಷ್ಯರೂ ಅಳತೊಡಗಿದರು. ಕಣ್ಣೀರು ಸುರಿಸುತ್ತ ಅವರಿಗೆ ಹೇಳತೊಡಗಿದ ಬೃಹಸ್ಪತಿ—

ನನಗಿದು ಯಾರ ಶಾಪವೋ ಕಾಣೆ. ಇದಕ್ಕೆ ಕಾರಣವಾದರೂ ಏನು? ಧರ್ಮಕ್ಕೆ ವಿರುದ್ಧವಾಗಿ ನಡೆವವನು ತಾನೆ ದುಃಖಭಾಗಿಯಾಗುತ್ತಾನೆ ?

ಯಸ್ಯ ನಾಸ್ತಿ ಸತೀ ಭಾರ್ಯಾ ಗೃಹೇಷು ಪ್ರಿಯವಾದಿನೀ ।
ಅರಣ್ಯಂ ತೇನ ಗಂತವ್ಯಂ ಯಥಾರಣ್ಯಂ ತಥಾಗೃಹಂ ॥

ಯಾರಿಗೆ ಮನೆಯಲ್ಲಿ ಸವಿ ಮಾತಿನ ಮಡದಿ ಇಲ್ಲವೋ ಅವನು ಕಾಡಿಗೇ ಹೋಗಬಹುದು. ಕಾಡಿಗೂ ಮನೆಗೂ ಏನೂ ವ್ಯತ್ಯಾಸವಿಲ್ಲ. ಹೃದಯದಲ್ಲಿ ಅನುರಾಗದಿಂದ ಕೂಡಿದ ಸತಿಯನ್ನು ಶತ್ರು ಅಪಹರಿಸಿದರೆ, ಸುಶೀಲೆ ಸುಂದರಿ-ಯಾದ ಪತ್ನಿ ಮನೆಯಿಂದ ಹೊರಗೆ ಹೋದರೆ, ಆ ಮನೆ ಎಲ್ಲ ಬಂಧುಗಳಿಂದಲೂ ಸಂಪತ್ತಿನಿಂದಲೂ ತುಂಬಿದ್ದರೇನು ? ಮಮತೆಯ ತಾಯಾಗಲಿ ಪ್ರೀತಿಯ ಹೆಂಡತಿಯಾಗಲಿ ಇಲ್ಲದ ಮನೆ ಸುಮ್ಮನೆ. ಅದಕ್ಕಿಂತ ಕಾಡೇ ಲೇಸು.

ಭಾರ್ಯಾಶೂನ್ಯಾ ವನಸಮಾಃ ಸಭಾರ್ಯಾಶ್ಚ ಗೃಹಾ ಗೃಹಾಃ ।
ಗೃಹಿಣೀ ಚ ಗೃಹಂ ಪ್ರೋಕ್ತಂ ನ ಗೃಹಂ ಗೃಹಮುಚ್ಯತೇ ॥

ಹೆಂಡತಿ ಇಲ್ಲದ ಮನೆ ಕಾಡಿಗೆ ಸಮಾನ. ಅವಳಿದ್ದರೆಯೆ ಮನೆ ಮನೆಯೆನಿಸುತ್ತದೆ. ಗೃಹಿಣಿ ಇದ್ದರೆ ತಾನೆ ಅದು ಗೃಹ ? ಕೇವಲ ಗೃಹ ಗೃಹವೆನಿಸುವುದಿಲ್ಲ.

ಹೆಂಡತಿ ಇಲ್ಲದವ ಅಶುಚಿ. ದೇವಪಿತೃಕಾರ್ಯಗಳಲ್ಲಿ ಅನರ್ಹ. ಯಾವ ಕರ್ಮಕ್ಕೂ ಆತ ಫಲಭಾಗಿಯಾಗುವುದಿಲ್ಲ. ಸುಡುವ ಶಕ್ತಿ ಇಲ್ಲದ ಸಣ್ಣ ಬೆಂಕಿ, ಪ್ರಕಾಶವಿಲ್ಲದ ಸೂರ್ಯ, ಕಾಂತಿ ಇಲ್ಲದ ಚಂದ್ರ, ಶಕ್ತಿಯಿಲ್ಲದ ಜೀವ, ದೇಹವಿಲ್ಲದ ಆತ್ಮ, ಆಧಾರವಿಲ್ಲದ ವಸ್ತು, ಪ್ರಕೃತಿರಹಿತನಾದ ಪುರುಷ, ದಕ್ಷಿಣೆಯಿಲ್ಲದ ಯಜ್ಞ, ಬಂಗಾರವಿಲ್ಲದ ಅಕ್ಕಸಾಲಿಗ, ಮಣ್ಣಿಲ್ಲದ ಕುಂಬಾರ, ಹೇಗೋ ಹಾಗೇ ಗೃಹಿಣಿ ಇಲ್ಲದ ಗೃಹಸ್ಥ. ಅವನಿಂದ ಏನೂ ಕಾರ್ಯಸಾಧನೆಯಾಗದು.

ಭಾರ್ಯಾಮೂಲಾಶ್ಚ ಪುತ್ರಾಶ್ಚ ಭಾರ್ಯಾಮೂಲಾ ಗೃಹಾಸ್ತಥಾ
ಭಾರ್ಯಾಮೂಲಂ ಸುಖಂ ಸರ್ವಂ ಗೃಹಸ್ಥಾನಾಂ ಗೃಹೇ ಸದಾ ।

ಮಕ್ಕಳು ಮನೆ ಸುಖಭೋಗವೆಲ್ಲ ಗೃಹಸ್ಥರಿಗೆ ಮನೆಯಲ್ಲಿ ಮಡದಿಯಿದ್ದರೆ ಮಾತ್ರ ಲಭ್ಯ.

ಮನೆಯೆಂಬ ರಥಕ್ಕೆ ಮಡದಿಯೆ ಸಾರಥಿ.

ಎಲ್ಲ ರತ್ನಗಳಿಗಿಂತ ಸ್ತ್ರೀರತ್ನ ಶ್ರೇಷ್ಠ. ಕೆಟ್ಟಕುಲದಿಂದ ಬಂದಿದ್ದರೂ ಅದು ಗ್ರಾಹ್ಯ. ಕಾಂತಿ ಇಲ್ಲದ ಕಮಲದಂತೆ, ಕಮಲವಿಲ್ಲದ ನೀರಿನಂತೆ, ಮಡದಿ ಇಲ್ಲದ ಮನೆ.'' ಹೀಗೆ ಹೇಳಿ ಬೃಹಸ್ಪತಿ ಶೋಕಾವಿಷ್ಟನಾಗಿ ಮನೆಯ ಒಳಗೆ ಹೊರಗೆ ಮತ್ತೆ ಮತ್ತೆ ನಡೆದ. ಗಟ್ಟಿಯಾಗಿ ಅತ್ತ. ಶಿಷ್ಯರೂ ಬೇರೆ ಮುನಿಗಳೂ ಬಹಳ ಸಮಾಧಾನ ಮಾಡಿದಮೇಲೆ ಬೃಹಸ್ಪತಿ ಇಂದ್ರನ ಬಳಿಗೆ ಹೋಗಿ ತನ್ನೆದೆಯನ್ನು ಈಟಿಯಂತೆ ಚುಚ್ಚುತ್ತಿದ್ದ ಈ ದುಃಖ ಸಮಾಚಾರವನ್ನು ತಿಳಿಸಿದ. ಇಂದ್ರನ ಕಣ್ಣು ಕೋಪದಿಂದ ಕೆಂಪಾಯಿತು. ತುಟಿ ಅದುರಿತು. ಚಂದ್ರತಾರೆಯರ ವೃತ್ತಾಂತ ತಿಳಿಯಲು ಸಾವಿರಾರು ದೂತರನ್ನು ಗೂಢಚಾರರನ್ನು ಅಟ್ಟಿದ.

'ಗುರುಗಳೆ, ಆ ಪಾಪಿ ಚಂದ್ರ ಎಲ್ಲಿಯೆ ಇರಲಿ. ನನ್ನ ತಾಯಿಯನ್ನು ಬಯಸಿದ ಆತನ ಮೇಲೆ ಎಲ್ಲ ದೇವಗಣಗಳೊಂದಿಗೆ ದಂಡೆತ್ತಿ ಹೋಗುವೆನು. ನೀವು ಚಿಂತಿಸ-ಬೇಡಿ, ಎಲ್ಲ ಒಳ್ಳೆಯದಾಗುವುದು. ಈ ದುಃಖ ಸುಖಕ್ಕೇ ದಾರಿಯಾಗುವುದು. ಕಷ್ಟ-ಪಡದೆ ಇಷ್ಟ ಯಾರಿಗೆ ಲಭಿಸುತ್ತಿದೆ' ? ಹೀಗೆ ಹೇಳಿ ಇಂದ್ರ ಗುರುವನ್ನು ಸಂತೈಸಿದ. ಸಾವಿರಾರು ದೂತರು ನೂರು ವರ್ಷಕಾಲ ಎಲ್ಲ ನಿರ್ಜನ ಪ್ರದೇಶಗಳಲ್ಲಿ ಚಂದ್ರ-ತಾರೆಯರನ್ನು ಹುಡುಕಿದರೂ ಕಾಣದೆ, ಕೊನೆಯಲ್ಲಿ ಶುಕ್ರನ ಮನೆಯಲ್ಲಿ ಅವರನ್ನು ಕಂಡು ಇಂದ್ರನಿಗೆ ತಿಳಿಸಿದರು.

ಇಂದ್ರ ಮರುಗಿದ. ತಲೆ ತಗ್ಗಿಸಿ ದುಃಖದಿಂದ ನುಡಿದ, 'ಗುರುಗಳೆ, ಶುಕ್ರಾಚಾರ್ಯರು ನಿಮಗೆ ಸೋಲುವುದಿಲ್ಲ, ದೈತ್ಯರು ನನಗೆ ಸೋಲುವುದಿಲ್ಲ. ಇದನ್ನು ಆಲೋಚಿಸಿಯೆ ಚಂದ್ರ ಶುಕ್ರಾಚಾರ್ಯರನ್ನು ಮೊರೆ ಹೊಕ್ಕಿದ್ದಾನೆ. ಆದರೂ ಭಯ ಪಡಬೇಕಾಗಿಲ್ಲ. ಎಲ್ಲವೂ ಶುಭವಾಗುವುದು. ನಾವೀಗ ಬ್ರಹ್ಮಲೋಕಕ್ಕೆ ಹೋಗೋಣ. ಬ್ರಹ್ಮನ ಜೊತೆಗೆ ಕೈಲಾಸಕ್ಕೂ ಹೋಗೋಣ.'

ಇಂದ್ರ ಬೃಹಸ್ಪತಿಗಳು ಬ್ರಹ್ಮಲೋಕಕ್ಕೆ ಹೋಗಿ ಬ್ರಹ್ಮನಿಗೆ ನಮಿಸಿ ಎಲ್ಲ ವೃತ್ತಾಂತ-ವನ್ನೂ ಹೇಳಿದರು. ಬ್ರಹ್ಮ ನಕ್ಕು ನುಡಿದ—

''ಪರರಿಗೆ ಕೇಡೆಣಿಸುವವನಿಗೆ ಆ ಕೃಷ್ಣನೆ ಶಿಕ್ಷೆ ಮಾಡುತ್ತಾನೆ. ಅವನಾಜ್ಞೆಯಂತೆ ನಾನು ಸೃಷ್ಟಿ ಮಾಡುತ್ತೇನೆ. ವಿಷ್ಣು ಪಾಲನ ಮಾಡುತ್ತಾನೆ. ರುದ್ರ ಸಂಹಾರ ಮಾಡುತ್ತಾನೆ. ಶಿವ ಮಂಗಳ ನೀಡುತ್ತಾನೆ. ಧರ್ಮ ಸರ್ವಸಾಕ್ಷಿಯಾಗುತ್ತಾನೆ. ಹೀಗೆ ಎಲ್ಲ ದೇವತೆಗಳೂ ಅವನ ಆಜ್ಞೆಯಂತೆಯೆ ನಡೆಯುತ್ತಾರೆ.

ಬೃಹಸ್ಪತಿ ಉತಥ್ಯ ಸಂವರ್ತ ಈ ಮೂವರು ಅಂಗಿರಸನ ಪುತ್ರರು. ಕಿರಿಯನಾದ ಸಂವರ್ತನಿಗೆ ತಂದೆ ಏನೂ ಕೊಡಲಿಲ್ಲ. ಆತ ಕೃಷ್ಣಧ್ಯಾನ ಮಾಡುತ್ತ ತಪಸ್ವಿಯಾದ. ನಡುವಿನವನಾದ ಉತಥ್ಯನ ಮಡದಿಯನ್ನು ಬೃಹಸ್ಪತಿ ಅಪಹರಿಸಿದ. ಆಗ ಆಕೆ ಗರ್ಭಿಣಿ. ತನ್ನನ್ನು ಬಯಸದಿದ್ದ ಗರ್ಭಿಣಿಯಾದ ನಾದಿನಿಯನ್ನು ಅಪಹರಿಸಿದ್ದ ಬೃಹಸ್ಪತಿ. ಇದು ಸಾವಿರ ಬ್ರಹ್ಮಹತ್ಯೆಗೆ ಸಮಾನ. ಕುಂಭೀಪಾಕ ನರಕದಲ್ಲಿ ಬೀಳಬೇಕಾಗುತ್ತದೆ. ಸೋದರನ ಮಡದಿಯನ್ನು ಬಯಸಿದರೆ ಹೆತ್ತತಾಯನ್ನು ಬಯಸಿದಂತೆ. ಚಂದ್ರಸೂರ್ಯರಿರುವಷ್ಟುಕಾಲ ಕುಂಭೀಪಾಕದಲ್ಲಿ ಬಿದ್ದು ಸಾವಿರ-ಕೋಟಿವರ್ಷ ಮಲಕ್ರಿಮಿಯಾಗಿದ್ದು ಬಳಿಕ ಸಾವಿರ ಕೋಟಿ ವರ್ಷ ಹಂದಿ-ನಾಯಿಗಳಾಗಿ ಬಾಳಬೇಕಾಗುತ್ತದೆ.

ನಾಽಭುಕ್ತಂ ಕ್ಷೀಯತೇ ಕರ್ಮ ಕಲ್ಪಕೋಟಿ ಶತೈರಪಿ ।
ಅವಶ್ಯಮೇವ ಭೋಕ್ತವ್ಯಂ ಕೃತಂ ಕರ್ಮ ಶುಭಾಶುಭಂ ॥

ಮಾಡಿದ ಕರ್ಮ ನೂರು ಕೋಟಿ ಕಲ್ಪಕಳೆದರೂ ಉಣ್ಣದೆ ಸವೆಯದು. ಶುಭ-ವಿರಲಿ ಅಶುಭವೆ ಇರಲಿ ಅದನ್ನು ಉಣಲೇಬೇಕು. ಜಗದ್ಗುರುವಾದ ಶಿವನಿಗೂ ಗುರುಪುತ್ರ ಈ ಬೃಹಸ್ಪತಿ. ಅವನೆ ಶಿವನಿಗೆ ಅರಿಕೆ ಮಾಡಿಕೊಳ್ಳಲಿ. ಎಲ್ಲ ದೇವತೆಗಳೂ ಯುದ್ಧಸನ್ನದ್ಧರಾಗಿ ನರ್ಮದಾ ತೀರದಲ್ಲಿ ಸೇರಲಿ. ಮಧ್ಯಸ್ಥರಾದ ಮುನಿಗಳೂ ಅಲ್ಲಿಗೇ ಹೋಗಲಿ. ಅನಂತರ ನಾನೂ ಹೋಗುವೆ. ಈಗ ಬೃಹಸ್ಪತಿ ಕೈಲಾಸಕ್ಕೆ ಹೋಗಲಿ.

ಇಂದ್ರ— ಸಿದ್ಧರಿಗೂ ಯೋಗಿಗಳಿಗೂ ಗುರುವಾಗಿದ್ದು ವೇದೋಪದೇಶ ಮಾಡುವ ಮೃತ್ಯುಂಜಯ ಶಿವನಿಗೆ ಬೃಹಸ್ಪತಿ ಗುರುಪುತ್ರನೆನ್ನುವುದು ಹೇಗೆ ? ಅಂಗಿರಸ್ ನಿನ್ನ ಪುತ್ರ. ಅವನ ಪುತ್ರ ಬೃಹಸ್ಪತಿ. ಶಿವ ನಿನ್ನಿಂದ ಜ್ಞಾನಪಡೆದವ. ಆತ ಬೃಹಸ್ಪತಿಯ ತಂದೆಯಾದ ಅಂಗಿರಸನ ಶಿಷ್ಯನೆನಿಸುವುದು ಹೇಗೆ ?

ಬ್ರಹ್ಮ— ಈ ಕಥೆ ಪುರಾಣಗಳಲ್ಲಿ ಬಹಳ ಗುಪ್ತವಾಗಿದೆ. ನಾನು ಹೇಳುತ್ತೇನೆ ಕೇಳು. ಅಂಗಿರಸನ ಮಡದಿ ದುಷ್ಕರ್ಮಫಲವಾಗಿ ಶಿಶುವನ್ನು ಕಳೆದುಕೊಂಡು ಕೃಷ್ಣನನ್ನು ಕುರಿತು ಒಂದುವರ್ಷಕಾಲ ಪುಂಸವನ ವ್ರತ ಮಾಡಿದಳು. ಸನತ್ಕುಮಾರ ಅವಳಿಂದ ಮಾಡಿಸಿದ. ಆಗ ಕೃಷ್ಣ ಗೋಲೋಕದಿಂದ ಬಂದು ವ್ರತಫಲವನ್ನು ಅನುಗ್ರಹಿಸಿದ—

'ಈ ಫಲವನ್ನು ತಿನ್ನು. ಅದು ನನ್ನ ತೇಜಸ್ಸಿನಿಂದ ಯುಕ್ತವಾಗಿದೆ. ಅದರಿಂದ ನನ್ನ ಅಂಶಭೂತನಾದ ಒಬ್ಬ ಜ್ಞಾನಿಯಾದ ಪುತ್ರ ಜನಿಸುತ್ತಾನೆ. ಮಹಾಜ್ಞಾನಿಗಳಾದ ದೇವತೆಗಳಿಗೂ ಆತ ಗುರುವಾಗುತ್ತಾನೆ. ಆತ ನನ್ನ ಪುತ್ರನೇ ಎನಿಸುತ್ತಾನೆ. ಚಿರಂಜೀವಿಯಾಗುತ್ತಾನೆ.

ಪುತ್ರರು ಏಳು ಬಗೆಯಾಗಿರುತ್ತಾರೆ. ತನ್ನ ವರದಿಂದ ಹುಟ್ಟಿದವ, ತನ್ನ ವೀರ್ಯ-ದಿಂದ ಹುಟ್ಟಿದವ, ತನ್ನ ಪತ್ನಿಯಲ್ಲಿ ಅನ್ಯರಿಂದ ಹುಟ್ಟಿದವ, ತನ್ನಿಂದ ರಕ್ಷಿತನಾದವ, ತನ್ನಿಂದ ವಿದ್ಯೆ ಕಲಿತವ, ತನ್ನಿಂದ ಮಂತ್ರೋಪದೇಶ ಪಡೆದವ, ದತ್ತಪುತ್ರ. ನನ್ನ ವರದಿಂದ ನಿನ್ನಲ್ಲಿ ಹುಟ್ಟುವ ಮಗ ನನ್ನ ಮಗನೆ ಆಗುತ್ತಾನೆ.'

ಹೀಗೆ ಹೇಳಿ ಕೃಷ್ಣ ತನ್ನ ಲೋಕಕ್ಕೆ ತೆರಳಿದ. ಬೃಹಸ್ಪತಿ ಜನಿಸಿದ. ದೇವತೆಗಳಿಗೆ ಗುರುವಾದ. ಶಿವ ಮೂರುಲಕ್ಷ ದಿವ್ಯವರ್ಷಕಾಲ ಹಿಮಾಲಯದಲ್ಲಿ ತಪಸ್ಸು ಮಾಡಿ ಕೃಷ್ಣನಿಂದ ಮೃತ್ಯುಂಜಯವಾದ ಮಹಾಜ್ಞಾನ ಪಡೆದ. ಕೃಷ್ಣ ಅವನಿಗೆ ತನ್ನ ಶಕ್ತಿಯಾದ ವಿಷ್ಣುಮಾಯೆಯನ್ನೂ ತನ್ನ ಅಂಶವಾದ ವೃಷಭವಾಹನವನ್ನೂ ತನ್ನ ಶೂಲಕವಚ ದ್ವಾದಶಾಕ್ಷರಮಂತ್ರಗಳನ್ನೂ ಕೊಟ್ಟ. ಆ ವಿಷ್ಣುಮಾಯೆ ಎಲ್ಲ ದೇವತೆಗಳ ತೇಜಸ್ಸು-ಗಳಲ್ಲಿ ಆವಿರ್ಭವಿಸಿ ದೈತ್ಯರನ್ನು ಸಂಹರಿಸಿ ಅವರ ಪದವಿಗಳನ್ನು ತಿರುಗಿಕೊಟ್ಟಳು.

ಕಲ್ಪದ ಕೊನೆಯಲ್ಲಿ ದಕ್ಷಕನ್ಯೆಯಾಗಿ ಹುಟ್ಟಿ ದಕ್ಷಯಜ್ಞ ಸಂದರ್ಭದಲ್ಲಿ ಪತಿನಿಂದೆ ಕೇಳಿ ಸಹಿಸಲಾರದೆ ಶರೀರತ್ಯಾಗ ಮಾಡಿ ಪಾರ್ವತಿಯಾಗಿ ಜನಿಸಿದಳು. ಆಗ ಕೃಷ್ಣನನ್ನು ಕುರಿತು ತಪಸ್ಸುಮಾಡಿ ಶಿವನನ್ನು ಪಡೆದಳು. ಹೀಗೆ ಶ್ರೀಕೃಷ್ಣ ಶಿವನಿಗೆ ಗುರು. ಅವನ ವರದಿಂದ ಜನಿಸಿದ ವರ ಪುತ್ರ ಬೃಹಸ್ಪತಿ. ಹೀಗೆ ಶಿವನಿಗೆ ಗುರುಪುತ್ರನೆನಿಸುತ್ತಾನೆ ಬೃಹಸ್ಪತಿ. ಇದು ಶಿವನಿಗೂ ಬೃಹಸ್ಪತಿಗೂ ಇರುವ ಮುಖ್ಯಸಂಬಂಧ.

ದೂರದ ಸಂಬಂಧದಿಂದಲೂ ಬೃಹಸ್ಪತಿ ಶಿವನಿಗೆ ಗುರುಪುತ್ರ. ಹೇಗೆಂದರೆ ದೂರ್ವಾಸನೂ ಗರುಡನೂ ರುದ್ರಾಂಶರು. ಅವರಿಬ್ಬರೂ ಅಂಗಿರಸನ ಶಿಷ್ಯರು. ಹೀಗಾಗಿ ಶಿವನಿಗೆ ಗುರುಪುತ್ರ ಬೃಹಸ್ಪತಿ.

ಅಥವಾ ದಕ್ಷಶಾಪದಿಂದ ಶಿವನ ಪ್ರಾಣಾಧಿಕಳಾದ ಸತೀದೇವಿ ಮೃತಳಾದಾಗ ಶಿವ ಶೋಕದಿಂದ ಮೂರ್ಛಿತನಾಗಿ ಜ್ಞಾನಶೂನ್ಯನಾದ. ಆಗ ಅಂಗಿರಸ್ ಕೃಷ್ಣನ ಪ್ರೇರಣೆ-ಯಿಂದ ಶಿವನಿಗೆ ಪೂರ್ವಸ್ಮರಣೆ ತಂದುಕೊಟ್ಟು ಜ್ಞಾನಿಯನ್ನಾಗಿ ಮಾಡಿದ. ಅದರಿಂದ ಅಂಗಿರಸ್ ಶಿವನಿಗೆ ಗುರು. ಬೃಹಸ್ಪತಿ ಗುರುಪುತ್ರ. ಸ್ವತಃ ಅವನೆ ಬೇಗ ಕೈಲಾಸಕ್ಕೆ ಹೋಗಲಿ. ನೀನು ದೇವತೆಗಳೊಡನೆ ನರ್ಮದಾ ತೀರದಲ್ಲಿ ಯುದ್ಧಸನ್ನದ್ಧನಾಗು.

ಹೀಗೆ ಹೇಳಿ ಬ್ರಹ್ಮ ಸುಮ್ಮನಾದ. ಬೃಹಸ್ಪತಿ ಕೈಲಾಸಕ್ಕೂ ಇಂದ್ರ ನರ್ಮದಾ ತೀರಕ್ಕೂ ನಡೆದರು.

**ಇಲ್ಲಿಗೆ ಶ್ರೀ ಬ್ರಹ್ಮವೈವರ್ತ ಮಹಾಪುರಾಣದಲ್ಲಿ ಎರಡನೆಯದಾದ ಪ್ರಕೃತಿಖಂಡದ ನಾರದನಾರಾಯಣ ಸಂವಾದದಲ್ಲಿ ದುರ್ಗೋಪಾಖ್ಯಾನದಲ್ಲಿ ಬೃಹಸ್ಪತಿಯ ಕೈಲಾಸಗಮನವೆಂಬ ಐವತ್ತೊಂಬತ್ತನೆ ಅಧ್ಯಾಯ ಮುಗಿಯಿತು.**

# ಚಂದ್ರನಿಂದ ತಾರೆಯನ್ನು ಬೃಹಸ್ಪತಿಗೆ ಕೊಡಿಸಲು ಬ್ರಹ್ಮನ ಮಧ್ಯಸ್ಥಿಕೆ

ಅಧ್ಯಾಯ-೬೦

ನಾರಾದ— ಬೃಹಸ್ಪತಿ ಕೈಲಾಸಕ್ಕೆ ಹೋಗಿ ಶಿವನಲ್ಲಿ ಅದಕ್ಕೆ ಪ್ರತಿಯಾಗಿ ಏನು ಹೇಳಿದ ?

ನಾರಾಯಣ— ಬೃಹಸ್ಪತಿ ಬೇಗನೆ ಕೈಲಾಸಕ್ಕೆ ಧಾವಿಸಿ ಶಿವನ ಮುಂದೆ ಪ್ರಣಾಮ ಮಾಡಿ ಲಜ್ಜೆಯಿಂದ ತಲೆ ತಗ್ಗಿಸಿ ನಿಂತ. ಗುರುಸುತನೆಂದು ಅದರಿಂದ ಶಿವ ತನ್ನ ದರ್ಭಾಸನದಿಂದ ಎದ್ದು ನಿಂತು ಆಲಿಂಗಿಸಿ ಶುಭಾಶೀರ್ವಾದ ನೀಡಿದ. ತನ್ನ ಆಸನದಲ್ಲಿ ಕೂಡಿಸಿ ಕುಶಲಪ್ರಶ್ನೆ ಮಾಡಿದ. ಮಧುರವಾಗಿ ನುಡಿದ-

ಶಿವ— ತಮ್ಮ, ಇದೇನು ಕಣ್ಣೀರು ? ಏಕೆ ಈ ಲಜ್ಜೆ ? ಸಂಧ್ಯಾವಂದನ, ತಪಸ್ಸು ಕೃಷ್ಣಸೇವೆ ಗುರುಭಕ್ತಿ ದೈವಭಕ್ತಿಗಳಿಗೆ ವ್ಯತ್ಯಯವೇನಾದರೂ ಉಂಟಾಯಿತೆ ? ಶರಣಾಗತನನ್ನು ರಕ್ಷಣಮಾಡಲು ಅಶಕ್ಯವಾಯಿತೆ ? ಅತಿಥಿ ಬಂದು ಕೋಪಗೊಂಡು ಹೊರಟುಹೋದನೆ ? ಮನೆ ಮಂದಿ ಹೊಟ್ಟೆಗಿಲ್ಲದೆ ಇರುವರೆ ? ಮಡದಿ ಸ್ವಚ್ಛಂದ-ವಾಗಿ ವರ್ತಿಸುವಳೆ ? ಮಗ ಅವಿಧೇಯನಾಗಿರುವನೆ ? ಶಿಷ್ಯ ಅವಿನೀತನಾಗಿರುವನೆ? ಸೇವಕರು ಉದ್ಧಟತನದಿಂದ ವರ್ತಿಸುವರೆ ? ಲಕ್ಷ್ಮಿಯ ಅನುಗ್ರಹ ತಪ್ಪಿತೆ ? ಗುರು ಕುಪಿತನಾದನೆ ? ಇಷ್ಟದೇವನಾಗಲಿ ಬ್ರಾಹ್ಮಣರಾಗಲಿ ವಿಷ್ಣು ಭಕ್ತರಾಗಲಿ ನಿನ್ನಲ್ಲಿ ಕುಪಿತರಾದರೆ ? ಶತ್ರು ಪ್ರಬಲನಾದನೆ ? ಬಂಧುವಿಯೋಗವಾಗಲಿ, ಪ್ರಬಲರ ವಿರೋಧವಾಗಲಿ, ಪದವಿಯ ಅಪಹಾರವಾಗಲಿ ನಡೆಯಿತೆ ? ಪಾಪಿಗಳು ಯಾರಾದರೂ ನಿಂದಿಸಿದರೆ ? ಬಂಧುಗಳು ಯಾರಾದರೂ ನಿನ್ನನ್ನು ಪರಿತ್ಯಜಿಸಿದರೆ ? ಅಥವಾ ನೀನೆ ವೈರಾಗ್ಯದಿಂದಾಗಲಿ ಕೋಪದಿಂದಾಗಲಿ ಬಂಧುವನ್ನು ತ್ಯಜಿಸಿದೆಯ ? ತೀರ್ಥಸ್ನಾನ ದಾನಗಳನ್ನು ಲೋಪಗಳಿಸಿದೆಯ ? ದುರ್ಜನರ ಮುಖದಿಂದ ಗುರು-ನಿಂದೆ ಬಂಧು ನಿಂದೆಗಳನ್ನೇನಾದರೂ ಕೇಳಿದೆಯ ? ಗುರುನಿಂದೆ ಸಜ್ಜನರಿಗೆ ಮರಣಕ್ಕಿಂತ ಹೆಚ್ಚಿನದು. ದುಷ್ಕುಲದಲ್ಲಿ ಹುಟ್ಟಿದ ದುಷ್ಟರಿಗೆ ಗುರುನಿಂದೆ ಸ್ವಭಾವ. ಸಜ್ಜನರು ಗುರುಜನರ ಪ್ರಶಂಸೆಯಿಂದ ಸದಾ ಮಂಗಲಭಾಜನರಾಗುತ್ತಾರೆ.

ಮನುಷ್ಯರ ಮನಸ್ಸು ಅವರಲ್ಲಿ ಪುತ್ರಸಂಪತ್ತು ಯಶಸ್ಸು ನೀರು ಪರಾಕ್ರಮ ಐಶ್ವರ್ಯ ಪ್ರತಾಪ ಪ್ರಜೆಗಳು ಭೂಮಿ ಧನಗಳ ಸಮೃದ್ಧಿಯಲ್ಲಿಯೂ ಅವರ ಮಾತು ಬುದ್ಧಿ ಸ್ವಭಾವ ಚರಿತ್ರೆ ಆಚಾರ ವ್ಯವಹಾರಗಳಲ್ಲಿಯೂ ಎದ್ದುಕಾಣುವುದು. ಯಾರ ಹೃದಯ ಹೇಗೆ ಇರುತ್ತದೋ ಹಾಗೆ ಅವರ ಶ್ರೇಯಸ್ಸು ಇರುತ್ತದೆ. ಯಾರ ಪೂರ್ವಜನ್ಮದ ಪುಣ್ಯ ಹೇಗೆ ಇರುತ್ತದೋ ಹಾಗೆ ಅವರ ಮನಸ್ಸು ಇರುತ್ತದೆ.

ಬೃಹಸ್ಪತಿ— ಈಶ್ವರ, ನನ್ನ ವೃತ್ತಾಂತ ಹೇಳಲಾಗದುದು. ಹೇಗೆ ಹೇಳಲಿ ? ಲೋಕ ಕರ್ಮವಶದಿಂದ ನಾನಾ ಜನ್ಮಗಳಲ್ಲಿ ಮಾಡಿದ ತನ್ನ ಕರ್ಮವನ್ನೆ ಪ್ರತಿಜನ್ಮದಲ್ಲಿ ಉಣ್ಣುತ್ತದೆ. ಮಾಡಿದ ಕರ್ಮ ಉಣದೆ ಹಿಂಗದು.

ಸುಖದುಃಖ ಭಯಶೋಕಗಳು ಕರ್ಮಾಧೀನವೆಂದು ಕೆಲವರು ಹೇಳುತ್ತಾರೆ. ದೈವಾದೀನವೆಂದು ಕೆಲವರು. ಸ್ವಭಾವದಿಂದ ಎಂದು ಕೆಲವರು. ವಸ್ತುತಃ ಮೂರೂ ಕಾರಣ. ಜೀವ ಸ್ವತಃ ಕರ್ಮ ಮಾಡುತ್ತಾನೆ. ಆ ಕರ್ಮಕ್ಕೆ ದೈವವೂ ಕಾರಣ. ಪೂರ್ವಕರ್ಮಾನುಗುಣವಾಗಿ ಸ್ವಭಾವವೂ ಉಂಟಾಗುತ್ತದೆ. ಸುಖದುಃಖಾದಿಗಳೂ ಉಂಟಾಗುತ್ತವೆ. ತನ್ನ ಕರ್ಮದ ಫಲ ಉಣ್ಣುವ ಜೀವ ಗುಣಬದ್ಧನಾಗಿರುತ್ತಾನೆ. ಉಣಿಸುವ ಪರಮಾತ್ಮ ಪ್ರಕೃತಿಯಿಂದ ದೂರವಿರುತ್ತಾನೆ. ಅವನೆ ದೈವ ಸ್ವಭಾವ ಕರ್ಮಗಳನ್ನು ಸೃಜಿಸಿ ಫಲವನ್ನೂ ನೀಡುತ್ತಾನೆ.

ಕರ್ಮದಿಂದಲೆ ಜೀವರಿಗೆ ಲಜ್ಜೆ, ಪ್ರಶಂಸೆ, ಉಲ್ಲಾಸಗಳುಂಟಾಗುತ್ತವೆ. ಈಗ ನನಗೆ ಲಜ್ಜೆಗೆ ಕಾರಣವಾದ ವೃತ್ತಾಂತವನ್ನು ಹೇಳುತ್ತೇನೆ.'

ಹೀಗೆ ಹೇಳಿ ಬೃಹಸ್ಪತಿ ಎಲ್ಲ ವೃತ್ತಾಂತವನ್ನೂ ತಿಳಿಸಿದ. ಶಿವನಿಗೂ ಅದನ್ನು ಕೇಳಿ ಲಜ್ಜೆ ಬಂದಿತು. ತಲೆತಗ್ಗಿಸಿದ. ಜೊತೆಗೆ ಕೋಪವೂ ಉಂಟಾಯಿತು. ಕಣ್ಣು ಕೆಂಪಾಯಿತು. ಜಪಮಾಲೆ ಕೈಯಿಂದ ಜಾರಿತು. ಕೋಪದಿಂದ ನುಡಿದ "ವಿಷ್ಣುಭಕ್ತರಾದ ಸಜ್ಜನರಿಗೆ ಶುಭವಾಗಲಿ. ದುಷ್ಟರಿಗೆ ಪದೇಪದೇ ಅಶುಭವಾಗಲಿ. ವಿಷ್ಣುಭಕ್ತರಾದ ಸಜ್ಜನರಿಗೆ ಶುಭವಾಗಲಿ. ದುಷ್ಟರಿಗೆ ಪದೇ ಪದೇ ಅಶುಭವಾಗಲಿ. ವಿಷ್ಣುಭಕ್ತರಿಗೆ ದುಃಖ ನೀಡುವವನನ್ನು ಕೃಷ್ಣನೆ ನಾಶಮಾಡುತ್ತಾನೆ. ವಿಷ್ಣುಭಕ್ತಿಹೀನನಾದವನ ಮನಸ್ಸು ಎಂದೂ ನಿರ್ಮಲವಿರುವುದಿಲ್ಲ. ಮನೋನೈರ್ಮಲ್ಯಕ್ಕೆ ಕಾರಣವೆ ಕೃಷ್ಣಸ್ಮರಣೆ. ವಿಷ್ಣುಮಂತ್ರೋಪಾಸನೆಯಿಂದ ಹೃದಯದ ಬಂಧನ ಹರಿಯುವುದು, ಸಂಶಯ ದೂರವಾಗುವುದು, ಕರ್ಮ ಕ್ಷಯಿಸುವುದು.

ಕೃಷ್ಣಭಕ್ತರ ಸ್ವಭಾವವೆಷ್ಟು ನಿರ್ಮಲವೆಂಬುದನ್ನು ಆಲೋಚಿಸಿದರೆ ಆಶ್ಚರ್ಯವಾಗುವುದು. ಏಕೆಂದರೆ ಹೆಂಡತಿಯನ್ನು ಅಪಹರಿಸಿದ ವೃತ್ತಾಂತ ಕೇಳಿ ನೀನು ಶೋಕದಿಂದ ಮೂರ್ಛಿತನಾದೆ. ಇಷ್ಟು ಶೋಕಾವಿಷ್ಟನಾದರೂ ಚಂದ್ರನನ್ನು ನೀನು ಶಪಿಸಲಿಲ್ಲ! ನಿನ್ನ ಶೋಕದ ಒಂದು ನಿಟ್ಟುಸಿರಿಂದ ನೂರು ಚಂದ್ರರು ಕ್ಷಣದಲ್ಲಿ ಸುಟ್ಟು ಬೂದಿಯಾಗಬಹುದು. ಆದರೂ ನೀನು ಶಪಿಸಲಿಲ್ಲ. ಶಪಿಸಿದ್ದರೆ ನಿನ್ನ ಪುಣ್ಯನಾಶವಾಗುತ್ತಿತ್ತು.

ಅತ್ರಿಮುನಿ ಎಂಥ ತಪಸ್ವಿ, ವಿಷ್ಣುಭಕ್ತನಾದ ಬ್ರಹ್ಮನ ಪುತ್ರ! ಅವನಿಗೆ ತಪಸ್ವಿ ವಿಷ್ಣುಭಕ್ತ ಬ್ರಾಹ್ಮಣಪುತ್ರನಾದ ನಿನ್ನ ಹೆಂಡತಿಯನ್ನೂ ಬಯಸುವ ದುಷ್ಟನಾದ ಚಂದ್ರನಂಥ ಮಗನೆಂದರೆ ಎಂಥ ಆಶ್ಚರ್ಯ !

ಬ್ರಹ್ಮನ ಮಕ್ಕಳೆಲ್ಲ ಬ್ರಾಹ್ಮಣರಾಗಿದ್ದು ಧರ್ಮಿಷ್ಠರೂ ವಿಷ್ಣುಭಕ್ತರೂ ಆಗಿದ್ದಾರೆ. ಮೊಮ್ಮಕ್ಕಳು ಮತ್ರ ದೇವ ದ್ವಿಜ ದೈತ್ಯರೆಂದು ಮೂರು ಬಗೆ. ದ್ವಿಜರು ಸಾತ್ವಿಕರು, ದೇವತೆಗಳು ರಾಜಸರು, ದೈತ್ಯರು ತಾಮಸರು. ಸಾತ್ವಿಕರಾದ ದ್ವಿಜರು ಸ್ವಧರ್ಮ-ನಿರತರು ವಿಷ್ಣುವಿನ ಆರಾಧಕರು. ಅವರು ಕೃಷ್ಣನ ದಾಸ್ಯ ಒಂದನ್ನುಳಿದು ಇನ್ನೇನೂ ಬಯಸರು. ರಾಜಸರಾದ ದೇವತೆಗಳು ಶಿವಶಕ್ತಿಯರನ್ನು ಆರಾಧಿಸುತ್ತ ಐಶ್ವರ್ಯ-ಭೋಗ ಬಯಸುತ್ತಾರೆ. ದೈತ್ಯರು ಬಲಿಷ್ಠರು ಉದ್ಧತರು ಯಾರನ್ನೂ ಪೂಜಿಸುವುದಿಲ್ಲ. ಪ್ರಾಕೃತಲಯದಲ್ಲಿ ವಿಷ್ಣುಭಕ್ತರಾದ ಬ್ರಾಹ್ಮಣರು ನೇರವಾಗಿ ವಿಷ್ಣುಲೋಕಸೇರುವರು. ಅನ್ಯದೇವತೆಗಳ ಉಪಾಸಕರು ಆ ದೇವತೆಗಳ ಮೂಲಕ ವಿಷ್ಣುವನ್ನು ಸೇರುವರು.

ವಿಷ್ಣುಭಕ್ತಿ ಒಂದಿದ್ದರೆ ಬ್ರಾಹ್ಮಣ ಎಲ್ಲ ವರ್ಣಗಳಲ್ಲಿ ಶ್ರೇಷ್ಠ. ಅದಿಲ್ಲದಿದ್ದರೆ ಆತ ಚಂಡಾಲನಿಗಿಂತ ಕಡೆ. ವಿಷ್ಣುಭಕ್ತಿ ಪಕ್ವವಿರಲಿ ಅಪಕ್ವವೆ ಇರಲಿ, ಅದು ಇದ್ದರೆ ವಿಷ್ಣುವಿನ ಸುದರ್ಶನ ಚಕ್ರ ಅವನಿಗೆ ರಕ್ಷಣೆ ನೀಡುವುದು. ಬೆಂಕಿಗೆ ಬಿದ್ದ ದರಗೆಲೆ-ಯಂತೆ ವಿಷ್ಣುಭಕ್ತನ ಪಾಪ ಸುಟ್ಟುಹೋಗುವುದು. ತಂದೆತಾಯಿಗಳ ಕಡೆಯ ನೂರಾರು ತಲೆಮಾರಿನ ಪೂರ್ವಜರ ಉದ್ಧಾರವಾಗುವುದು. ವಿಷ್ಣುಮಂತ್ರ ಒಂದನ್ನು ಉಪದೇಶ ಪಡೆದ ಮಾತ್ರಕ್ಕೆ ಜೀವನ್ಮುಕ್ತಿ ಕರಗತವಾಗುವುದು. ಅವನನ್ನು ಕಂಡರೆ ಯಮ ಗರುಡನನ್ನು ಕಂಡ ಹಾವಿನಂತೆ ದೂರ ಓಡುವನು.

ಗಂಗಾದಿ ಪವಿತ್ರನದಿಗಳೂ ಕೃಷ್ಣಮಂತ್ರೋಪಾಸಕರೂ ಸ್ಪರ್ಶಮಾತ್ರದಿಂದ ಪಾಪ-ಪರಿಹಾರಕರು. ಆದರೆ ಆ ಪವಿತ್ರ ನದಿಗಳಲ್ಲಿ ಬಂದುಸೇರಿದ ಪಾಪಿಗಳ ಪಾಪವನ್ನು ಕೃಷ್ಣಮಂತ್ರೋಪಾಸಕರೆ ಕಳೆಯಬೇಕು. ಹೀಗೇ ವಾಯು ಅಗ್ನಿ ಸೂರ್ಯರು ಎಲ್ಲವನ್ನೂ ಪವಿತ್ರಗೊಳಿಸುತ್ತಾರೆ. ಆದರೆ ಅವರನ್ನು ವೈಷ್ಣವರ ಸ್ಪರ್ಶವೆ ಪವಿತ್ರ-ಗೊಳಿಸಬೇಕು.

ಕರ್ಮಕ್ಕೆ ಅನುರೂಪವಾಗಿ ಫಲ ಎಲ್ಲರಿಗೂ ಬರುತ್ತದೆ. ಆದರೆ ವೈಷ್ಣವರಲ್ಲಿ ಹಾಗಿಲ್ಲ. ಹುರಿದ ಧಾನ್ಯದ ಕಾಳು ಅಂಕುರ ಹುಟ್ಟಿಸದಿರುವಂತೆ ಅವರ ಕರ್ಮಫಲ ಉಂಟು ಮಾಡುವುದಿಲ್ಲ. ಅವರ ಕರ್ಮವನು ಭಕ್ತವತ್ಸಲನಾದ ಕೃಷ್ಣ ಕೃಪೆಯಿಂದ ತಾನೆ ನಾಶ ಮಾಡುತ್ತಾನೆ.

ಇಂಥ ವೈಷ್ಣವನಾದ ತೇಜಸ್ವಿಯಾದ ಶುಕ್ರನನ್ನು ಚಂದ್ರ ಮೊರೆ ಹೊಕ್ಕಿದ್ದಾನೆ. ಸುದರ್ಶನ ಚಕ್ರವೂ, ಬಲಿಷ್ಠನಾದ ಶುಕ್ರನನ್ನು ಗೆಲ್ಲಲಾರದು. ಆದರೂ ತಾರೆಯನ್ನು ಮಂತ್ರಪ್ರಭಾವದಿಂದ ಉದ್ಧರಿಸುತ್ತೇನೆ. ಬೃಹಸ್ಪತಿ, ನೀನು ಕೃಷ್ಣನನ್ನು ಭಜಿಸು, ಅವನು ಪ್ರಸನ್ನನಾದರೆ ನಿನ್ನ ಪತ್ನಿಯನ್ನು ನೀನು ಸುಲಭವಾಗಿ ಪಡೆಯುವಿ. ಕಲ್ಪವೃಕ್ಷದಂತಿರುವ ಅವನ ಒಂದು ಮಂತ್ರವನ್ನು ನಿನಗೆ ಉಪದೇಶಿಸುತ್ತೇನೆ. ಅದು

ಕೋಟಿಜನ್ಮಗಳ ಪಾಪ ಪರಿಹರಿಸಿ ಸರ್ವಮಂಗಳಗಳನ್ನು ತಂದುಕೊಡಬಲ್ಲುದು. ಈ ಜಗತ್ತೆಲ್ಲ ನಿಸ್ಸಾರ. ಸಾರರೂಪನಾದ ಗೋವಿಂದನನ್ನೆ ಶರಣುಹೊಂದು.

**ತಾವದ್ ಭವೇಚ್ಛಾ ಭೋಗೇಚ್ಛಾ ಸ್ತ್ರೀಸುಖೇಚ್ಛಾ ನೃಣಾಮಿಹ ।**
**ಯಾವದ್ ಗುರುಮುಖಾಂಭೋಜಾದ್ ನ ಪ್ರಾಪ್ನೋತಿ ಮನುಂ ಹರೇಃ ॥**

ಜನರಿಗೆ ಸಂಸಾರದಲ್ಲಿ ಭೋಗದಲ್ಲಿ ಸ್ತ್ರೀಸಂಗದಲ್ಲಿ ಇಚ್ಛೆ ಬರುವುದು ಗುರುಮುಖದಿಂದ ವಿಷ್ಣುಮಂತ್ರ ಉಪದೇಶ ಪಡೆಯದಿರುವವರೆಗೆ ಮಾತ್ರ. ವಿಷ್ಣು-ಮಂತ್ರ ದೊರಕಿತೆಂದರೆ ವಿಷಯಾಸೆ ಬತ್ತಿ ಹೋಗುವುದು. ದೇವತ್ವವೂ ಬೇಡ ಇಂದ್ರಪದವಿಯೂ ಬೇಡವೆನಿಸುವುದು. ಕೃಷ್ಣನ ದಾಸ್ಯ ಒಂದಿಲ್ಲವಾದರೆ ಮೋಕ್ಷವೂ ಬೇಡವಾಗುವುದು.

**ಭಕ್ತಿಂ ವಿಹಾಯ ಕೃಷ್ಣಸ್ಯ ವಿಷಯಂ ಯೋ ಹಿ ವಾಂಛತಿ ।**
**ವಿಷಮತ್ತಿ ಸುಧಾಂ ತ್ಯಕ್ತ್ವಾ ವಂಚಿತೋ ವಿಷ್ಣುಮಾಯಯಾ ॥**

ಕೃಷ್ಣಭಕ್ತಿಯನ್ನು ತೊರೆದು ವಿಷಯಭೋಗವನ್ನರಸುವವ ಅಮೃತವನ್ನು ಬಿಟ್ಟು ವಿಷಪಾನಮಾಡುವ ಮೂರ್ಖನೆ ಸರಿ. ವಿಷ್ಣುಮಾಯೆಯಿಂದ ಆತ ವಂಚಿತ-ನಾಗಿರುತ್ತಾನೆ.

ನಾನು, ಬ್ರಹ್ಮ, ವಿಷ್ಣು, ಧರ್ಮ, ಅನಂತ, ಕಶ್ಯಪ, ಕಪಿಲ, ಷಣ್ಮುಖ, ನರ, ನಾರಾಯಣ, ಸ್ವಾಯಂಭುವಮನು, ಪ್ರಹ್ಲಾದ, ಪರಾಶರ, ಭೃಗು, ಶುಕ್ರ, ದೂರ್ವಾಸ, ವಸಿಷ್ಠ, ಕ್ರತು, ಅಂಗಿರಸ್, ಬಲಿ, ವಾಲಖಿಲ್ಯರು, ವರುಣ, ಅಗ್ನಿ, ವಾಯು, ಸೂರ್ಯ, ಗರುಡ, ದಕ್ಷ, ಗಣಪತಿ ಮುಂತಾದವರು ಕೃಷ್ಣನ ಅಂಶ-ಸಂಭೂತರು ಕೃಷ್ಣನ ಭಕ್ತರಾಗಿರುತ್ತೇವೆ.''

ಹೀಗೆ ಹೇಳಿ ಶಿವ ಬೃಹಸ್ಪತಿಗೆ ಕೃಷ್ಣಮಂತ್ರವನ್ನು ಉಪದೇಶಿಸಿದ- ''ಶ್ರೀಂ ಹ್ರೀಂ ಕ್ಲೀಂ ಕೃಷ್ಣಾಯ ನಮಃ' ಎಂಬುದೆ ಆ ಮಂತ್ರ. ಗಂಗಾತೀರದಲ್ಲಿ ಈ ಮಂತ್ರವನ್ನೂ ಅದರ ಪುರಶ್ಚರಣ ಧ್ಯಾನಗಳನ್ನೂ ಪೂಜಾವಿಧಾನಸ್ತೋತ್ರ ಕವಚಗಳನ್ನೂ ಜಗದ್ಗುರುವಾದ ಶಿವನಿಂದ ದೇವಗುರು ಉಪದೇಶ ಪಡೆದು ಹೇಳಿದ-

'ಜಗದೀಶ್ವರ, ನಾನು ಹರಿಯ ಕುರಿತು ತಪಸ್ಸು ಮಾಡಲು ಹೋಗುತ್ತೇನೆ. ಅನುಜ್ಞೆ ನೀಡು. ತಾರೆ ಅಲ್ಲಿಯೆ ಇರಲಿ. ನನಗೆ ಅವಳಿಂದ ಏನೂ ಆಗಬೇಕಾಗಿಲ್ಲ. ನನಗೆ ಹರಿಯನ್ನುಳಿದು ಬೇರೆಲ್ಲ ವಿಷದಂತೆ ಕಾಣುವುದು. ಆ ಹರಿಯನ್ನೆ ನಾನು ಶರಣು ಹೊಂದುತ್ತೇನೆ.'

ಶಿವ ಒಪ್ಪಲಿಲ್ಲ, 'ಅನ್ಯರ ವಶಳಾದ ಹೆಂಡತಿಯನ್ನು ಹಾಗೇ ಬಿಟ್ಟು ತಪಸ್ಸು ಮಾಡುವುದನ್ನು ಯಾರೂ ಮೆಚ್ಚಿ ಹೊಗಳುವುದಿಲ್ಲ. ಗೌರವಾರ್ಹನಾದ ವ್ಯಕ್ತಿಗೆ ಅಪಮಾನಕರವಾದ ಮಾತು ಮರಣಕ್ಕಿಂತ ಹೆಚ್ಚಿನದು. ಆದ್ದರಿಂದ ನೀನು ನರ್ಮದಾ ತೀರಕ್ಕೆ ಹೋಗು. ಅಲ್ಲಿಗೆ ಬ್ರಹ್ಮಾದಿ ದೇವತೆಗಳು ಬರುತ್ತಾರೆ. ನಾನೂ ಬೇಗನೆ ಬರುತ್ತೇನೆ.'

ಶಿವನ ಮಾತನ್ನು ಕೇಳಿ ಬೃಹಸ್ಪತಿ ನರ್ಮದಾ ತೀರವನ್ನು ಸೇರಿದ. ಅಲ್ಲಿಗೆ ಶಿವನೂ ಗಣಗಳೊಂದಿಗೆ ಬಂದಾಗ ಎಲ್ಲ ದೇವತೆಗಳೂ ಮನುಗಳೂ, ಮುನಿಗಳೂ ನಮಿಸಿದರು. ಶಿವ ವಿಷ್ಣುವಿಗೂ ಬ್ರಹ್ಮನಿಗೂ ತಲೆಬಾಗಿ ವಂದಿಸಿದ. ವಿಷ್ಣು ಬ್ರಹ್ಮ ಶಿವರಿಗೆ ಹೀಗೆ ಹೇಳಿದ—

ನೀವೂ ಮುನಿಗಳೂ ಸೇರಿ ಒಬ್ಬ ಮಧ್ಯಸ್ಥನನ್ನು ಶುಕ್ರನ ಬಳಿಗೆ ಕಳಿಸಿ, ಯುದ್ಧ ಬೇಡ. ಅದರಿಂದ ಅನರ್ಥವೆ ಆದೀತು. ಸಂಶಯವಿಲ್ಲ. ನನ್ನ ಅನುಗ್ರಹದಿಂದ ಬೃಹಸ್ಪತಿಗೆ ತಾರೆ ನಿಶ್ಚಿತವಾಗಿ ದೊರೆಯುತ್ತಾಳೆ. ದೇವತೆಗಳು ಸ್ತೋತ್ರ ಮಾಡಿದರೆ ಶುಕ್ರ ಸಂತುಷ್ಟನಾಗುತ್ತಾನೆ. ಯುದ್ಧದಿಂದ ಅವನನ್ನು ದೇವತೆಗಳು ಗೆಲ್ಲಲಾರರು. ಅವನಿಗೆ ಕೃಷ್ಣಚಕ್ರದ ರಕ್ಷಣೆ ಇದೆ. ಶತ್ರು ಬಲಿಷ್ಠನಾಗಿದ್ದರೆ ಅವನನ್ನು ಸ್ತೋತ್ರದಿಂದಲೆ ವಶೀಕರಿಸಿಕೊಳ್ಳಬೇಕೆಂದು ಶ್ರುತಿ ಹೇಳುತ್ತದೆ.'

ಹೀಗೆ ಹೇಳಿ ಜಗನ್ನಾಥ ಅಂತರ್ಧಾನ ಹೊಂದಿದ.

ಬ್ರಹ್ಮ ದೇವತೆಗಳಿಗೆ ಉಪದೇಶ ಮಾಡಿದ—

'ನನಗೂ ಶಿವನಿಗೂ ಧರ್ಮನಿಗೂ ಸರ್ವಸಾಕ್ಷಿಯಾದ ವಿಷ್ಣುವಿಗೂ ದೇವ ದಾನವರೊಳಗೆ ಸಮಾನವಾದ ಸ್ನೇಹ ಉಂಟು. ಚಂದ್ರ ದಾನವರ ಗುರುವಾದ ಶುಕ್ರನನ್ನು ಮೊರೆಹೊಕ್ಕಿದ್ದಾನೆ, ಶುಕ್ರ ದೇವತೆಗಳಿಗೆ ಎಂದೂ ಸೋತವನಲ್ಲ. ದಾನವರಿಗಿಂತೂ ಆತ ಪೂಜ್ಯ. ಆದ್ದರಿಂದ ತಾರೆಯನ್ನು ಮರಳಿ ಪಡೆಯಲು ಮಧ್ಯಸ್ಥನಾಗಿ ನಾನು ಹೋಗುತ್ತೇನೆ. ನೀವೆಲ್ಲ ವಿಷ್ಣುವಿನಾಜ್ಞೆಯಂತೆ ಸಮುದ್ರ ತೀರಕ್ಕೆ ಹೋಗಿರಿ.'

ಹೀಗೆ ಹೇಳಿ ಬ್ರಹ್ಮ ಶುಕ್ರನ ಬಳಿಗೂ ದೇವತೆಗಳು ಸಮುದ್ರತೀರಕ್ಕೂ ಹೋದರು.

**ಇಲ್ಲಿಗೆ ಶ್ರೀ ಬ್ರಹ್ಮವೈವರ್ತ ಮಹಾಪುರಾಣದಲ್ಲಿ ಎರಡನೆಯದಾದ ಪ್ರಕೃತಿಖಂಡದ ನಾರದನಾರಾಯಣ ಸಂವಾದದಲ್ಲಿ ಶ್ರೀಕೃಷ್ಣೋಪದಿಷ್ಟತಾರೋದ್ಧರಣೋಪಾಯಜ್ಞಾನ ವೆಂಬ ಅರವತ್ತನೆ ಅಧ್ಯಾಯ ಮುಗಿಯಿತು.**

## ಗುರುವಿಗೆ ತಾರಾಪ್ರಾಪ್ತಿ, ಬುಧನ ಉತ್ಪತ್ತಿ

## ಅಧ್ಯಾಯ-೬೧

ನಾರದ— ಪೂಜ್ಯನೆ, ಮುಂದೆ ದೇವಾಸುರರೊಳಗೆ ನಡೆದ ವೃತ್ತಾಂತವೇನು ಹೇಳು.

ನಾರಾಯಣ— ಬ್ರಹ್ಮ ಶುಕ್ರನ ಮನೆಗೆ ಹೋಗಿ ಐವತ್ತುಕೋಟಿ ಶಿಷ್ಯರಿಂದ ಪರಿವೃತನಾದ ಶುಕ್ರನನ್ನು ಅಲ್ಲಿ ಕಂಡ. ಅವನ ಮನೆ ಏಳುಕಂದಕಗಳಿಂದ ದುರ್ಗಮ-ವಾಗಿತ್ತು. ರತ್ನ ಮಂಟಪಗಳಿಂದ ಪದ್ಮರಾಗಮಣಿಮಯವಾದ ಪ್ರಾಕಾರಗಳಿಂದಲೂ ಶೋಭಿಸುವ ಆ ಮನೆಯನ್ನು ನೂರುಕೋಟಿ ದಾನವರು ರಕ್ಷಿಸುತ್ತಿದ್ದರು. ಅಲ್ಲಿ ಸ್ತೋತ್ರ ಮಾಡುತ್ತಿರುವ ಮುನಿಗಳಿಂದ ದೈತ್ಯರಿಂದ ಪರಿವೃತನಾಗಿ ಬ್ರಹ್ಮತೇಜಸ್ಸಿನಿಂದ ಪ್ರಜ್ವಲಿಸುತ್ತ ಕೋಟಿಸೂರ್ಯರ ಪ್ರಭೆಯಿಂದ ಹೊಳೆಯುತ್ತ ರತ್ನಸಿಂಹಾಸನವನ್ನು ಮಂಡಿಸಿರುವ ತನ್ನ ಮೊಮ್ಮಗನನ್ನು ಕಂಡು ಬ್ರಹ್ಮ ಆನಂದಿತನಾದ. ತಾನೂ ಮಗನೂ ಮೊಮ್ಮಗನೂ ಮೂವರೂ ಧನ್ಯರೆಂದುಕೊಂಡ.

ತನ್ನ ತಾತ ಬಂದುದನ್ನು ಕಂಡು ಶುಕ್ರ ಸಂಭ್ರಮಗೊಂಡು ಎದ್ದು ಕೈಮುಗಿದು ಪ್ರಣಾಮಮಾಡಿದ. ಷೋಡಶೋಪಚಾರಗಳನ್ನಿತ್ತು ಭಕ್ತಿಯಿಂದ ಸ್ತುತಿಸಿದ- 'ಜಗತ್ತಿಗೇ ವಿದ್ಯೆ ನೀಡುವವ ಮಂತ್ರೋಪದೇಶ ನೀಡುವವ ಸರ್ವಸಂಪತ್ತನ್ನು ಕೊಡುವವ, ಅವರವರ ಕರ್ಮಗಳಿಗೆ ಫಲ ಕೊಡುವವ ಎಲ್ಲರಿಗಿಂತ ಶ್ರೇಷ್ಠ ಜಗದೀಶ್ವರ ಬ್ರಹ್ಮ'

ಶುಕ್ರ ರತ್ನಸಿಂಹಾಸನದಲ್ಲಿ ಬ್ರಹ್ಮನನ್ನು ಕೂಡಿಸಿ ಉಪಚಾರ ಮಾಡಿದ ಕುಮಾರ, ಕ್ರತು, ವಸಿಷ್ಠ, ಮರೀಚಿ, ಸನಂದನ, ಸನಾತನ, ಕಪಿಲ, ಪಂಚಶಿಖ, ಓಢು, ಅಂಗಿರಸ, ಧರ್ಮ, ನರ, ನಾರಾಯಣರಿಗೆ ನಮಿಸಿ ಪೂಜಿಸಿ ರತ್ನಸಿಂಹಾಸನದಲ್ಲಿ ಕೂಡಿಸಿದ.

ರೋಮಾಂಚಗೊಂಡು ಕಣ್ಣಲ್ಲಿ ನೀರುತಂದುಕೊಂಡು ವಿನಯದಿಂದ ತಲೆಬಾಗಿ ಶುಕ್ರ ನುಡಿದ- 'ಇಂದು ನನ್ನ ಜನ್ಮ ಸಫಲವಾಯಿತು. ಬಾಳು ಬಂಗಾರವಾಯಿತು. ನನ್ನ ಮನೆಯಲ್ಲಿಯೆ ನನಗೆ ಭಗವಾನ್ ವಿಧಾತನ ಸಾಕ್ಷಾದ್ ದರ್ಶನವಾಯಿತು. ಅವನ ಪುತ್ರರ ಸಾಕ್ಷಾದ್ ದರ್ಶನವಾಯಿತು. ಪರಮಾತ್ಮ ಕೃಷ್ಣನ ಅನುಗ್ರಹ ನನ್ನ ಮೇಲಾಯಿತು. ನನ್ನನ್ನು ಕೃತಾರ್ಥನನ್ನಾಗಿಸುವ ನಿಮಗಿದೋ ಸ್ವಾಗತ. ಸ್ವಾತ್ಮಾರಾಮ-ರಾದ ನಿಮ್ಮನ್ನು 'ಕುಶಲವೆ'? ಎಂದು ಕೇಳುವುದು ಸರಿಯಾಗದು. ನನ್ನನ್ನು ಪವಿತ್ರ-ನನ್ನಾಗಿಸುತ್ತ ನೀವು ಬಂದ ಕಾರಣವೇನು ಹೇಳಿ. ನಾನೇನುಮಾಡಬೇಕೆಂದು ಆಜ್ಞಾಪಿಸಿ.'

ಬ್ರಹ್ಮ— ನಿನ್ನನ್ನು ನೋಡಿ ಬಹುದಿನಗಳಾದ್ದರಿಂದ ವಿರಹ ತಡೆಯಲಾರದೆ ಬಂದಿದ್ದೇನೆ. ಪುತ್ರ ಪೌತ್ರರ ವಿರಹದುಃಖ ಮರಣಕ್ಕಿಂತ ಹೆಚ್ಚಿನದು. ಅದಿರಲಿ, ನಿನಗೂ ನಿನ್ನ ಹೆಂಡತಿ ಮಕ್ಕಳಿಗೂ ಕ್ಷೇಮವೆ ? ನಿನ್ನ ಧರ್ಮಾಚರಣೆ ತಪಸ್ಸು

ಕೃಷ್ಣಾರ್ಚನೆ, ಗುರುಸೇವೆ ಇಷ್ಟದೇವತಾರ್ಚನೆಗಳೆಲ್ಲವೂ ನಿರ್ವಿಘ್ನವಾಗಿ ನಿರಂತರ ನಡೆಯುತ್ತಿದೆಯೆ ?

ಗುರು ಇಷ್ಟದೇವತೆಗಳನ್ನು ಪೂಜಿಸುವುದು ಸಕಲ ಮಂಗಲಗಳಿಗೆ ಕಾರಣ. ಪಾಪಾದಿಪರಿಹಾರಕ. ಪುಣ್ಯಕರ. ಏಕೆಂದರೆ ಗುರು ಸಂತುಷ್ಟನಾದರೆ ಇಷ್ಟದೇವ ಸಂತುಷ್ಟನಾಗುತ್ತಾನೆ. ಇಷ್ಟದೇವ ತುಷ್ಟನಾದರೆ ಎಲ್ಲ ದೇವತೆಗಳೂ ಸಂತುಷ್ಟ-ರಾಗುತ್ತಾರೆ. ಗುರುವೂ ಇಷ್ಟದೇವನೂ ಕುಪಿತನಾದರೆ ಕ್ಷೇಮವಿಲ್ಲ. ಪದೇಪದೇ ವಿಘ್ನಗಳುಂಟಾಗುವುವು.

ಮಗು, ನಿನ್ನ ಭಕ್ತಿಗೆ ಕೃಷ್ಣ ಮೆಚ್ಚಿದ್ದಾನೆ. ಏಕೆಂದರೆ ನಿನ್ನ ಗುರುವಾದ ನಾನು ಮೆಚ್ಚಿದ್ದೇನೆ. ನಾನು ಮೆಚ್ಚಿದರೆ ಹರಿ ಮೆಚ್ಚುತ್ತಾನೆ. ಹರಿ ಮೆಚ್ಚಿದರೆ ಎಲ್ಲ ದೇವತೆಗಳೂ ಮೆಚ್ಚುತ್ತಾರೆ.

ಈಗ ನಾನು ಬಂದಕಾರಣವನ್ನು ಹೇಳುತ್ತೇನೆ ಕೇಳು. ಬೃಹಸ್ಪತಿ ಶಿವನ ಗುರುಪುತ್ರ. ಅವನ ಪತಿವ್ರತೆಯಾದ ಮಡದಿಯನ್ನು ಚಂದ್ರ ಅಪಹರಿಸಿ ಈಗ ನಿನ್ನನ್ನು ಮೊರೆಹೊಕ್ಕಿದ್ದಾನೆ. ಇದರ ಪರಿಣಾಮವಾಗಿ ಶಿವ, ಧರ್ಮ, ಸೂರ್ಯ, ಇಂದ್ರ, ಅನಂತ, ಆದಿತ್ಯರು, ವಸುಗಳು, ರುದ್ರರು, ದಿಕ್ಪಾಲಕರು, ಮೂರುಕೋಟಿ ದೇವತೆ-ಗಳು, ನಾಗರು, ಕಿಂಪುರುಷರು, ಯಕ್ಷರು, ರಾಕ್ಷಸರು, ಗುಹ್ಯಕರು, ಭೂತಪ್ರೇತ ಪಿಶಾಚಾದಿಗಳು, ಕೂಷ್ಮಾಂಡರು, ಬ್ರಹ್ಮರಾಕ್ಷಸರು, ಕಿರಾತರು, ಗಂಧರ್ವರು ಇವರೆಲ್ಲರೂ ಸಮುದ್ರದ ಬಳಿ ಯುದ್ಧ ಸನ್ನದ್ಧರಾಗಿ ನಿಂತಿದ್ದಾರೆ. ಈ ಮಹಾಯುದ್ಧದ ಸಂದರ್ಭದಲ್ಲಿ ನಾನು ನನ್ನ ಮಕ್ಕಳೊಂದಿಗೆ ಮಧ್ಯಸ್ಥಿಕೆಗಾಗಿ ಬಂದಿದ್ದೇನೆ. 'ಈಗ ಹೇಳು, ತಾರೆಯನ್ನು ಬಿಟ್ಟುಕೊಡುವೆಯಾ ಯುದ್ಧವಾಗಲಿ ಎನ್ನುವೆಯ ? ನಾನು ಹೇಳುತ್ತೇನೆ, ಗುರುಪತ್ನಿಯನ್ನು ಕಾಮಿಸಿದ ಚಂದ್ರನನ್ನು ಕೈಬಿಡು.

ಶುಕ್ರ— ದುರಹಂಕಾರಿಗಳಾದ ದೇವತೆಗಳೆಲ್ಲ ಯುದ್ಧಕ್ಕೆ ಬರಲಿ. ಶಿವ ಎಲ್ಲರಿಗೂ ಗುರು ಅವನೊಬ್ಬನನ್ನು ಹೊರತು ಎಲ್ಲರೊಡನೆ ಯುದ್ಧ ಸಾರುವೆನು.

ದೈತ್ಯರು— ದೇವ ದಾನವರಿಬ್ಬರಿಗೂ ಸರ್ವದಾ ಮಾನನೀಯರು, ವಂದ್ಯರು. ಗುರುವಾದ ಶಿವ, ಸರ್ವಸಾಕ್ಷಿಯಾದ ಧರ್ಮ ಮತ್ತು ಪಿತಾಮಹನಾದ ನೀನು. ಇನ್ನುಳಿದವರೆಲ್ಲ ತೃಣಸಮಾನರು. ನಾವು ಅವರಿಗೆ ಏನೂ ಬೆಲೆ ಕೊಡಲಾರೆವು. ಅವರು ಬರಲಿ. ನಾವು ಹೋರಾಡುವೆವು. ಹೋಗಿ ಅವರ ಮುಂದೆ ಹಾಗೇ ಹೇಳು. ಒಂದು ವೇಳೆ ಗುರುಪುತ್ರನೆಂದು ಕರುಣೆಯಿಂದ ಬೃಹಸ್ಪತಿಗಾಗಿ ಶಿವ ಹೋರಾಡಲು ಬಂದರೆ ಆಗ್ನೇಯಾಸ್ತ್ರ ಪ್ರಯೋಗಿಸಿ ಅನಂತರ ಹೋರಾಡುವೆವು.'

ಬ್ರಹ್ಮ— ಪ್ರಪಂಚ ಲಯಕಾರನಾದ ಕಾಲಾಗ್ನಿ ರುದ್ರನೊಡನೆ ಹೋರಾಡ-ಬಲ್ಲವರು ಯಾರಿದ್ದಾರೆ ? ಜಗನ್ಮಾತೆ ಭದ್ರಕಾಳಿ ಖಡ್ಗ ಕಪಾಲಧಾರಿಣಿಯಾಗಿ

ರಣರಂಗಕ್ಕಿಳಿದರೆ ಯಾರು ತಾನೆ ಹೋರಾಡಬಲ್ಲರು ? ದೇವಿ ಸಾವಿರ ಕೈಯವಳು. ರುಂಡಮಾಲೆ ಧರಿಸಿದವಳು. ಹತ್ತು ಯೋಜನ ಎತ್ತರದವಳು. ಮುಖ ಒಂದು ಯೋಜನ ವಿಸ್ತಾರವಾಗಿದೆ. ಹಲ್ಲುಗಳು ಏಳು ತಾಳೆ ಮರದಷ್ಟು ಉದ್ದ. ನಾಲಿಗೆ ಒಂದು ಹರದಾರಿ ಉದ್ದ. ಹೀಗೆ ಭಯಂಕರಳು ದೇವಿ. ಶಿವಗಣದವರೂ ಅತ್ಯಂತ ಭೀಕರರು. ಮಹಾಬಲಪರಾಕ್ರಮಿಗಳು. ವೀರಭದ್ರಾದಿಗಳೂ ಶೂರರು ಕೋಟಿ-ಸೂರ್ಯ ಸಮಾನ ಪ್ರಭೆ ಉಳ್ಳವರು. ಸಾವಿರ ಹೆಡೆಗಳುಳ್ಳ ಶೇಷ ಇಡಿ ಪ್ರಪಂಚವನ್ನು ಹೆಡೆಯ ಮೇಲೆ ಒಂದು ಸಾಸಿವೆ ಕಾಳಿನಂತೆ ಧರಿಸುವವ. ಇವರೆಲ್ಲರನ್ನೂ ಯುದ್ಧದಲ್ಲಿ ನೀವು ಇದಿರಿಸುವಿರಾ ? ಶಿವನ ಪಾಶುಪತಾಸ್ತ್ರಕ್ಕೆ ಇದಿರೆ ಇಲ್ಲ. ಇಡಿ ವಿಶ್ವವನ್ನು ಸುಡಬಲ್ಲುದು. ಇನ್ನು ದೈತ್ಯರ ಪಾಡೇನು ? ಶಿವನ ಶೂಲ ಶಂಖಚೂಡನನ್ನು ಸೀಳಿತ್ತು. ಆ ಶಂಖಚೂಡ ಕೃಷ್ಣಪರಮಾತ್ಮನ ಪಾರ್ಷದ ಸುದಾಮನಾಗಿದ್ದ. ರಾಧಾ-ಕವಚವನ್ನು ಕಂಠದಲ್ಲಿ ಧರಿಸಿ ಮೂರುಕೋಟಿ ಸೂರ್ಯರ ತೇಜಸ್ಸಿನಿಂದ ಜ್ವಲಿಸುವ ದೈತ್ಯಚಕ್ರವರ್ತಿಯಾಗಿದ್ದ. ಇಂಥ ಶಂಖಚೂಡನನ್ನು ಸೀಳಿದ ಶೂಲ ಶಿವನದು. ಅವನೊಡನೆ ಯಾರು ಹೋರಾಡುವರು ? ಮಧುಕೈಟಭರನ್ನೂ ಹಿರಣ್ಯಕಶಿಪುವನ್ನೂ ಸಂಹರಿಸಿದ ಪ್ರಭು ವಿಷ್ಣು ಸ್ವತಃ ಶ್ವೇತದ್ವೀಪದಿಂದ ಬರುತ್ತಾನೆ. ಅವನನ್ನೂ ಇದಿರಿಸಬಲ್ಲಿರ ?

ಬ್ರಹ್ಮನ ಈ ಮಾತನ್ನು ಕೇಳಿ ನಕ್ಕು ದೈತ್ಯಚಕ್ರವರ್ತಿ ಪ್ರಹ್ಲಾದ ನುಡಿದ— 'ಸೃಷ್ಟಿಕರ್ತನೆ, ನಿನಗೆ ನಮಸ್ಕಾರ. ಸಕಲರಿಗೂ ಪಿತಾಮಹ ನೀನು. ಸರ್ವಪೂಜ್ಯ, ಸರ್ವೇಶ್ವರ. ನಿನ್ನ ಮುಂದೆ ನಾನೇನು ನುಡಿಯಲಿ. ಆದರೂ ಇಷ್ಟನ್ನು ಮಾತ್ರ ಹೇಳಬಲ್ಲೆ, ಹಿರಣ್ಯಕಶಿಪುವನ್ನೂ ಮಧುಕೈಟಭರನ್ನೂ ಕೊಂದ ವಿಷ್ಣು ಯಾವ ಕೃಷ್ಣನ ಒಂದಂಶವೋ ಆ ಪರಿಪೂರ್ಣ ಪರಮಾತ್ಮನ ಸುದರ್ಶನ ಚಕ್ರ ನಮ್ಮನ್ನೂ ನಮ್ಮ ಲೋಕವನ್ನೂ ರಕ್ಷಿಸುತ್ತಿದೆ. ಶಿವನಾಗಲಿ, ಶಿವನ ಪಾಶುಪತಾಸ್ತ್ರವಾಗಲಿ ಚಕ್ರಕ್ಕಿಂತ ಬಲಿಷ್ಠರಲ್ಲ. ಭದ್ರಕಾಳಿಯಾಗಲಿ ಶೇಷನಾಗಲಿ ರುದ್ರಾದಿಗಳಾಗಲಿ ಹೆಚ್ಚು ಶಕ್ತಿಶಾಲಿ-ಗಳಲ್ಲ. ರೋಮಕೂಪದಲ್ಲಿ ನಿಖಿಲ ವಿಶ್ವವನ್ನೆ ಧರಿಸಿದ ಮಹತೋಮಹೀಯನಾದ ಮಹಾವಿರಾಟ್ ಪುರುಷನೂ ಯಾರ ಹದಿನಾರನೆ ಒಂದಂಶವಾಗಿರುವನೋ ಆ ಕೃಷ್ಣಪರಮಾತ್ಮನಿಗಿಂತಲೂ ಅನಂತನಾಗಲಿ ಭದ್ರಕಾಳಿಯಾಗಲಿ ದೊಡ್ಡವರೆ ? ಬರಲಿ, ಎಲ್ಲ ದೇವತೆಗಳೂ ಬಂದು ಯುದ್ಧ ಮಾಡಲಿ. ನಾನು ಬೆದರುವುದಿಲ್ಲ. ಅವರ ಬಾಣಗಳಿಗೂ ಶಿವನ ಪಾಶುಪತಕ್ಕೂ ನಾನು ಮಣಿಯುವುದಿಲ್ಲ. ವಿಷ್ಣುಭಕ್ತರಾದ ಶಿವ ಅನಂತರಿಗೂ ಎಲ್ಲ ಸಜ್ಜನರಿಗೂ ನಮಸ್ಕಾರ ಮಾಡುತ್ತೇನೆ. ಕೃಷ್ಣನ ಅನುಗ್ರಹದಿಂದ ನಿರ್ಭಯನಾಗಿ ಹೋರಾಡುತ್ತೇನೆ. ಕೇವಲ ನನ್ನ ಬಲದಿಂದ ನಾನು ಹೋರಾಡುತ್ತಿಲ್ಲ. ಪರಮಾತ್ಮನ ಬಲದಿಂದ ಹೋರಾಡುತ್ತೇನೆ. ನಮ್ಮ ತಂದೆ ಹಿರಣ್ಯಕಶಿಪು ಸತ್ತಿದ್ದರೆ ಅದಕ್ಕೆ ವಿಷ್ಣುನಿಂದೆ ಕಾರಣ. ಶಂಖಚೂಡ ಸತ್ತಿದ್ದರೆ ದೇವತೆಗಳ ರಾಜ್ಯ ತನ್ನದೇ ಎಂಬ

ನಿರ್ಬಂಧ ಅದಕ್ಕೆ ಕಾರಣ. ಮಧುಕೈಟಬರು ಸಾಯಲು ಅವರ ಅಹಂಕಾರ ಕಾರಣ. ತ್ರಿಪುರಾಸುರ ನಮ್ಮ ಕಿಂಕರನಾಗಿದ್ದ. ಅವನನ್ನು ವೀರನೆಂದೇ ನಾವು ಪರಿಗಣಿಸಿರಲಿಲ್ಲ. ಆದರೂ ಅವನ ವಧೆಗಾಗಿ ಶಿವ ರಥವನ್ನೇರಿದ್ದ.'

ಬ್ರಹ್ಮ— ಮಗು ಪ್ರಹ್ಲಾದ, ಯುದ್ಧ ಎರಡುಕಡೆಗೂ ಹಾನಿಕರ. ಪರಸ್ಪರ ಪ್ರೀತಿಯಿಂದಿದ್ದರೆ ಸಕಲಮಂಗಲ ಪ್ರಾಪ್ತಿಯಾಗುವುದು. ಆದ್ದರಿಂದ ನಾನು ಭಿಕ್ಷುಕನಾಗಿ ಬಂದಿದ್ದೇನೆ. ನನಗೆ ಭಿಕ್ಷೆಯಾಗಿ ತಾರೆಯನ್ನು ನೀಡು. ಭಿಕ್ಷುಕ ನಿರಾಸೆಯಿಂದ ಹಿಂತಿರುಗಿದರೆ ಮನೆಯ ಯಜಮಾನ ಸಕಲ ಪಾಪಗಳಿಗೂ ಭಾಜನನಾಗುತ್ತಾನೆ.

ಸನತ್ಕುಮಾರ— ರಾಜನ್, ನೀನು ನಿನ್ನ ಕೀರ್ತಿಯನ್ನು ರಕ್ಷಿಸಿಕೊಳ್ಳು, ದೇವದಾನವರಲ್ಲೆಲ್ಲ ಸಿಂಹ ನೀನು. ನಿನ್ನ ಮನೆಗೆ ಸೃಷ್ಟಿಕರ್ತನೆ ಭಿಕ್ಷುಕನಾಗಿ ಬಂದಿರುವನೆಂದರೆ ನಿನ್ನ ಕೀರ್ತಿಗೆ ಎಣೆಯುಂಟೆ ?

ಸನಾತನ— ನೀನು ವಿಷ್ಣುಭಕ್ತ ಪುಣ್ಯಶಾಲಿ, ಕೃಷ್ಣಚಕ್ರದಿಂದ ರಕ್ಷಿತನಾಗಿರುವಿ. ಇಂಥ ನಿನ್ನನ್ನು ಬ್ರಹ್ಮ ಶಿವರಂಥ ದೊಡ್ಡ ದೇವತೆಗಳೂ ಪರಾಜಯಗೊಳಿಸಲಾರರು.

ಸನಂದನ— ಪ್ರಕೃತಿಗೆ ದೂರನಾದ ಕೃಷ್ಣ ಪರಮಾತ್ಮ ನಿನ್ನ ಇಷ್ಟದೈವ. ಎಷ್ಟು ಭಕ್ತನಾದ ಶುಕ್ರನೆ ಗುರು. ಇಂಥ ನಿನ್ನನ್ನು ಸೋಲಿಸುವವರಾರು?

ಸನಕ— ಪುಣ್ಯವಂತನನ್ನು ಯಾರೂ ಗೆಲ್ಲರು. ಪಾಪಿಯನ್ನು ಅವನ ಪಾಪಗಳೇ ಗೆಲ್ಲುವುವು. ಪುಣ್ಯದ ದೀಪ ನಾಸ್ತಿಕ್ಯದ ಬಿರುಗಾಳಿಗೆ ಆರಿಹೋಗುವುದಿಲ್ಲ.

ಋಷಿಗಳು— ಬೃಹಸ್ಪತಿಯ ಪ್ರಾಣಾಧಿಕಳಾದ ತಾರೆಯನ್ನು ಅವನಿಗೇ ಬಿಟ್ಟುಬಿಡು.ನಿನ್ನ ಕೀರ್ತಿಯನ್ನು ಕಾಪಾಡಿಕೊಳ್ಳು. ನಾವು ನಿನ್ನನ್ನು ಪುನಃ ಪುನಃ ಬೇಡುತ್ತೇವೆ.

ಪ್ರಹ್ಲಾದ— ನೀವು ಯಾರೂ ನನ್ನನ್ನು ಕೇಳಬೇಡಿ. ನಮ್ಮ ಗುರು ಶುಕ್ರಾಚಾರ್ಯರಿರುವಾಗ ಸೇವಕರಾದ ನಮಗೆ ಎಲ್ಲಿಯ ಸ್ವಾತಂತ್ರ್ಯ? ಅವರ ಮುಂದೆ ನಿವೇದಿಸಿಕೊಳ್ಳಿ, ಒಳ್ಳೆಯ ಶಿಷ್ಯರಿಗೆ ಗುರುವೆ ಒಡೆಯನಾಗುತ್ತಾನೆ. ನಮ್ಮೆಲ್ಲ ಐಶ್ವರ್ಯವನ್ನೂ ನಾವು ಹಿಂದೆಯೆ ಗುರುಗಳಿಗೆ ಸಮರ್ಪಿಸಿದ್ದೇವೆ. ನಾವು ಅವರ ಭೃತ್ಯರು, ಅವರ ಪೋಷಣೆಯಲ್ಲಿರುವವರು. ಅವರ ಪರಿಚಾರಕರು. ಗುರುವಿನಾಜ್ಞೆಯಂತೆ ನಡೆಯುವ ಶಿಷ್ಯರಿಗೇ ಸದಾ ಕ್ಷೇಮ ತಾನೆ?

ಪ್ರಹ್ಲಾದನ ಮಾತನ್ನು ಕೇಳಿ ಎಲ್ಲರೂ ಶುಕ್ರನನ್ನೆ ಕೇಳಿಕೊಂಡರು. ಶುಕ್ರ ತಾರೆಯನ್ನು ಬೃಹಸ್ಪತಿಗೆ ಕೊಡಿಸಿದ. ಚಂದ್ರನನ್ನು ಹಿಂದೆ ಕಳಿಸಿದ. ಬ್ರಹ್ಮನಿಗೂ ಮಹರ್ಷಿಗಳಿಗೂ ಪ್ರಣಾಮ ಮಾಡಿದ. ಪ್ರಹ್ಲಾದನೂ ಎಲ್ಲರನ್ನೂ ನಮಿಸಿದ.

ತಾರೆ ಬ್ರಹ್ಮನ ಪಾದಗಳಿಗೆರಗಿದಳು. ಲಜ್ಜೆಯಿಂದ ತಲೆತಗ್ಗಿಸಿ ನಿಂತಳು. ಕಣ್ಣೀರು ಸುರಿಸಿದಳು. ಆಗ ಆಕೆ ಗರ್ಭಿಣಿಯಾಗಿದ್ದಳು. ಚಂದ್ರನೂ ಬಂದು ಬ್ರಹ್ಮನನ್ನು ವಂದಿಸಿದ. ಬ್ರಹ್ಮ ಇಬ್ಬರನ್ನೂ ಸಂತೈಸಿ ನುಡಿದ—

ತಾರೆ, ಭಯಪಡಬೇಡ, ನಾನಿರುವಾಗ ನಿನಗೇತರ ಭಯ? ನನ್ನ ವರದಿಂದ ನೀನು ಸೌಭಾಗ್ಯವತಿಯಾಗಿ ಪತಿಯೊಡನೆ ಬಾಳುವಿ.

ಅಬಲೆಯಾದ ಹೆಣ್ಣು ಬಲಿಷ್ಠನಾದ ಪುರುಷನಿಂದ ಬಲಾತ್ಕಾರಕ್ಕೊಳಗಾದ ಮಾತ್ರಕ್ಕೆ ಅವಳು ಕೆಡುವುದಿಲ್ಲ. ಪ್ರಾಯಶ್ಚಿತ್ತದಿಂದ ಅವಳು ಶುದ್ಧಳೆ ಆಗುತ್ತಾಳೆ. ಆದರೆ ಅವಳು ತಾನಾಗಿ ಆ ಪರಪುರುಷನನ್ನು ಬಯಸಿದ್ದರೆ ಕೆಡುತ್ತಾಳೆ. ಪ್ರಾಯಶ್ಚಿತ್ತ-ದಿಂದಲೂ ಅವಳಿಗೆ ಶುದ್ಧಿಯಾಗದು. ಚಂದ್ರ ಸೂರ್ಯರಿರುವಷ್ಟು ಕಾಲ ಅವಳು ಕುಂಭೀಪಾರದಲ್ಲಿ ನರಳುವಳು. ಅವಳ ಅನ್ನ ನೀರು ಮಲಮೂತ್ರಗಳಂತೆ ಅಗ್ರಾಹ್ಯ. ಅವಳ ಸ್ಪರ್ಶ ಸರ್ವರಿಗೂ ಪಾಪಕರ. ನೀನು ಪವಿತ್ರಳೆಂದು ನನಗೆ ಗೊತ್ತು. ನಿನ್ನ ಹೊಟ್ಟೆಯುಲ್ಲಿರುವ ಗರ್ಭ ಯಾರದೆಂದು ಹೇಳು, ಲಜ್ಜೆಪಡಬೇಡ. ಎಲ್ಲವೂ ಪ್ರಾಚೀನ ಕರ್ಮದ ಫಲ.

ತಾರೆ— ತಾತ, ನಾನು ಧರಿಸಿರುವುದು ಚಂದ್ರನ ಗರ್ಭವನ್ನು. ಇದು ನನ್ನ ಪ್ರಾಚೀನ ಕರ್ಮಫಲ. ನಾನು ಅಬಲೆ ದುರ್ಬುದ್ಧಿಯಿಂದ ನಿಷ್ಕರುಣೆಯಿಂದ ಚಂದ್ರನೇ ನನ್ನನ್ನು ಕೆಡಿಸಿದ. ಇದಕ್ಕೆ ಎಲ್ಲರೂ ಸಾಕ್ಷಿಗಳಾಗಿದ್ದಾರೆ.

ಹೀಗೆ ಹೇಳಿ ತಾರೆ ಬಂಗಾರದಂತೆ ಹೊಳೆವ ಬ್ರಹ್ಮತೇಜಸ್ಸಿನಿಂದ ಜ್ವಲಿಸುವ ಸುಂದರನಾದ ಬಾಲಕನನ್ನು ಪ್ರಸವಿಸಿದಳು. ಆಬಾಲಕನನ್ನು ಚಂದ್ರ ಸ್ವೀಕರಿಸಿ ಬ್ರಹ್ಮನನ್ನು ನಮಿಸಿದ. ಬ್ರಹ್ಮ ತಾರೆಯನ್ನು ಬೃಹಸ್ಪತಿಗೆ ಕೊಟ್ಟು ದೇವತೆಗಳಿಗೆ ಅಭಯ ನೀಡಿ ಶಿವ ಧರ್ಮರನ್ನು ಆಶೀರ್ವದಿಸಿ ತನ್ನ ಲೋಕಕ್ಕೆ ತೆರಳಿದ. ತನ್ನ ಪ್ರೀತಿಯ ಮಡದಿಯನ್ನು ತಿರುಗಿ ಪಡೆದು ಬೃಹಸ್ಪತಿ ಆನಂದಿತನಾದ.

ತಾರೆಯ ಗರ್ಭದಲ್ಲಿ ಹುಟ್ಟಿದ ಈ ಕುಮಾರನೆ ಬುಧ. ಅವನು ಒಮ್ಮೆ ಕುಬೇರನಿಂದ ಘೃತಾಚಿಯಲ್ಲಿ ಜನಿಸಿದ ಚಿತ್ರಾ ಎಂಬ ಅಪ್ಸರೆಯನ್ನು ನಂದನವನದ ನಿರ್ಜನ ಪ್ರದೇಶದಲ್ಲಿ ಕಂಡು ಗಾಂಧರ್ವವಿಧಿಯಿಂದ ಮದುವೆಯಾದ. ಆಗ ಜನಿಸಿ-ದವನೆ ಚೈತ್ರನೆಂಬ ಚಕ್ರವರ್ತಿ. ಧರ್ಮದಿಂದ ಸಪ್ತದ್ವೀಪಯುತವಾದ ಇಡೀ ಭೂಮಿ-ಯನ್ನಾಳಿದ. ಅವಳ ಆಳ್ವಿಕೆಯಲ್ಲಿ ಎಲ್ಲೆಡೆ ಹಾಲು ಮೊಸರು ತುಪ್ಪ ಜೇನು ತೈಲಗಳ ನೂರಾರು ಹೊಳೆಗಳೆ ಹರಿಯುತ್ತಿದ್ದುವು. ಭಕ್ಷ್ಯಭೋಜ್ಯಗಳ ರಾಶಿಗಳೆ ಎಲ್ಲೆಡೆ ಕಂಡು ಬರುತ್ತಿದ್ದುವು. ಗೋವುಗಳು, ಮಣಿಗಳು, ರತ್ನಗಳು, ವಸ್ತ್ರಾಭರಣಗಳನ್ನು ಲಕ್ಷ-ಗಟ್ಟಲೆಯಾಗಿ ಬ್ರಾಹ್ಮಣರಿಗೆ ನಿತ್ಯದಾನ ಮಾಡುತ್ತಿದ್ದ ರಾಜ.

ಚೈತ್ರನ ಮಗ ಅಧಿರಥ. ಅಧಿರಥನ ಮಗನೆ ಸುರಥ. ಅವನು ಸುಮೇಧ ಮುನಿಯಿಂದ ಮಹಾಜ್ಞಾನವನ್ನು ಹೊಂದಿ ವಿಷ್ಣುಮಾಯೆಯನ್ನು ಕುರಿತು ತಪಸ್ಸು ಮಾಡಿದ. ಶರತ್ಕಾಲದಲ್ಲಿ ನದೀತೀರದಲ್ಲಿ ದೇವಿಯನ್ನು ಅರ್ಚಿಸಿದ. ಅವನ ಜೊತೆಗೆ ದ್ರುಮಿಣನೆಂಬ ಒಬ್ಬ ವೈಶ್ಯನೂ ತಪಸ್ಸು ಮಾಡಿದ. ಅವನು ಕಲಿಂಗ ದೇಶದ ದೊರೆಯಾದ ವಿರಾಧನ ಮಗ. ವಿಷ್ಣುಭಕ್ತನಾದ ಜ್ಞಾನಿ. ಧನ ಲೋಭದಿಂದ ಹೆಂಡತಿ ಮಕ್ಕಳು ಅವನನ್ನು ದೂರ ಮಾಡಿದಾಗ, ವೈರಾಗ್ಯ ಹೊಂದಿ ಸುಮೇಧನ ಉಪದೇಶ-ದಿಂದ ದೇವಿಯನ್ನಾರಾಧಿಸಿದ್ದನಾತ. ಹಿಂದೆ ಹೆಂಡತಿ ಮಕ್ಕಳ ಇಚ್ಛೆಗೆ ವಿರುದ್ಧವಾಗಿ ನಿತ್ಯ ಕೋಟಿ ಸುವರ್ಣ ದಾನ ಮಾಡಿ ಜಲಪಾನ ಮಾಡುತ್ತ ವೈರಾಗ್ಯ ಜೀವನವನ್ನೇ ನಡೆಸಿದವ. ಈಗ ಪೂರ್ಣ ವೈರಾಗ್ಯ ಹೊಂದಿದ. ಮುಕ್ತಿ ಪಡೆದ. ಸುರಥ ರಾಜ ಸಾವರ್ಣಿ ಮನುಪದವಿ ಪಡೆದ. ನಿಷ್ಕಂಟಕವಾಗಿ ರಾಜ್ಯವಾಳಿದ.

**ಇಲ್ಲಿಗೆ ಶ್ರೀ ಬ್ರಹ್ಮವೈವರ್ತ ಮಹಾಪುರಾಣದಲ್ಲಿ ಎರಡನೆಯದಾದ ಪ್ರಕೃತಿಖಂಡದಲ್ಲಿ ನಾರದನಾರಾಯಣ ಸಂವಾದದಲ್ಲಿ ದುರ್ಗೋಪಾಖ್ಯಾನದಲ್ಲಿ ಗುರುವಿಗೆ ತಾರಾಪ್ರಾಪ್ತಿ ಬುಧೋತ್ಪತ್ತ್ಯಾದಿ ವರ್ಣನವೆಂಬ ಅರವತ್ತೊಂದನೇ ಅಧ್ಯಾಯ ಮುಗಿಯಿತು.**

## ಸುರಥ ಮೇಧಃ ಸಂವಾದ. ಸುರಥ ವೈಶ್ಯರ ಅಭೀಷ್ಟಸಿದ್ಧಿ

**ಅಧ್ಯಾಯ-೬೨**

ನಾರದ— ಸುರಥ ರಾಜ ಸುಮೇಧ ಮುನಿಯಿಂದ ಮಹಾಜ್ಞಾನವನ್ನು ಹೇಗೆ ಪಡೆದ ? ವೈಶ್ಯ ಹೇಗೆ ಮುಕ್ತಿ ಪಡೆದ ?

ನಾರಾಯಣ— ಸ್ವಾಯಂಭುವ ಮನುವಿನ ವಂಶದಲ್ಲಿ ಧ್ರುವನ ಮೊಮ್ಮಗ, ಉತ್ಕಲನ ಮಗ ನಂದಿ ಎಂಬ ರಾಜ ನೂರು ಅಕ್ಷೋಹಿಣೀ ಸೈನ್ಯ ಸಮೇತನಾಗಿ ಸುರಥರಾಜನ ಕೋಲಾನಗರಿಯನ್ನು ಮುತ್ತಿದ. ಒಂದು ವರ್ಷ ಯುದ್ಧ ನಡೆಯಿತು. ಕೊನೆಗೆ ವಿಷ್ಣುಭಕ್ತನಾದ ನಂದಿ ಸುರಥನನ್ನು ಪರಾಭವಗೊಳಿಸಿದ. ಏಕಾಕಿಯಾದ ಸುರಥ ಕುದುರೆಯೇರಿ ಗಹನವಾದ ಅರಣ್ಯವನ್ನು ಹೊಕ್ಕ. ಅಲ್ಲಿ ಪುಷ್ಪಭದ್ರಾನದೀ ತೀರದಲ್ಲಿ ಅವನಿಗೆ ದ್ರುಮಿಣನೆಂಬ ವೈಶ್ಯನ ಪರಿಚಯವಾಯಿತು. ಕ್ರಮೇಣ ಮೈತ್ರಿಯೂ ಬೆಳೆಯಿತು. ಇಬ್ಬರೂ ಪುಷ್ಕರಕ್ಷೇತ್ರದಲ್ಲಿ ಸುಮೇಧನ ಆಶ್ರಮ ಕಂಡು ಮುನಿಗೆ ನಮಿಸಿದರು. ಬ್ರಹ್ಮತತ್ವವನ್ನು ಶಿಷ್ಯರಿಗೆ ಉಪದೇಶಿಸುತ್ತಿದ್ದ ಮುನಿ ರಾಜನನ್ನು

ವೈಶ್ಯನನ್ನು ಆಶೀರ್ವದಿಸಿ ಕುಶಲ ಪ್ರಶ್ನೆ ಮಾಡಿ ಅವರ ಪರಿಚಯವನ್ನು ಕೇಳಿದ. ಸುರಥ **ಹೀಗೆ ಅರಿಕೆ ಮಾಡಿದ—**

'ನಾನು ಸುರಥ ರಾಜ. ಚೈತ್ರವಂಶದಲ್ಲಿ ಉದ್ಭವಿಸಿದವ. ಬಲಿಷ್ಠನಾದ ನಂದಿರಾಜ ನನ್ನ ರಾಜ್ಯವನ್ನು ಕಸಿದುಕೊಂಡಿದ್ದಾನೆ. ಅದನ್ನು ನಾನು ತಿರುಗಿ ಪಡೆವ ಬಗೆ ಹೇಗೆ ಎಂಬುದನ್ನು ಹೇಳು. ನಾನು ನಿನ್ನನ್ನೆ ಮೊರೆಹೊಕ್ಕಿದ್ದೇನೆ.

**ಈ ವೈಶ್ಯನು ಹೆಂಡತಿ ಮಕ್ಕಳ ಇಚ್ಛೆಗೆ ವಿರುದ್ಧವಾಗಿ ನಿತ್ಯ ಕೋಟಿರತ್ನ ದಾನವನ್ನು ಬ್ರಾಹ್ಮಣರಿಗೆ ಕೊಡುತ್ತಿದ್ದ. ಧನಲೋಭದಿಂದ ಹೆಂಡತಿ, ಮಕ್ಕಳು ಇವನನ್ನು ಮನೆಯಿಂದ ಹೊರಗೆ ನೂಕಿದರು. ಅದರಿಂದ ವಿರಕ್ತನಾಗಿ ಈತ ಹೊರಟುಹೋದ. ಹೆಂಡತಿ ಮಕ್ಕಳು ಪಶ್ಚಾತ್ತಾಪದಿಂದ ಈತನನ್ನು ತಿರುಗಿ ಬಾರೆಂದು ಬೇಡಿದರೂ ವಿರಕ್ತಿಯಿಂದ ಅವರ ಬೇಡಿಕೆಯನ್ನು ನಿರಾಕರಿಸಿದ. ಅವರು ಪಿತೃಶೋಕದಿಂದ ಮನೆಯನ್ನು ತೊರೆದು ಕಾಡಿಗೆ ಹೋದರು. ಈಗ ಈತ ನಿಷ್ಕಾಮನೆಯಿಂದ** ಹರಿದಾಸ್ಯನನ್ನು ಬಯಸುತ್ತಿದ್ದಾನೆ. ಅದನ್ನು ಹೇಗೆ ಪಡೆಯಬೇಕು? ಹೇಳು'.

ಸುಮೇಧ ಮುನಿ ನುಡಿದ— ವಿಷ್ಣುಮಾಯೆಯನ್ನು ಯಾರೂ ಮೀರಲಾರರು. ಅವಳು ಯಾರನ್ನು ಅನುಗ್ರಹಿಸುವಳೋ ಅವರಿಗೆ ದುರ್ಲಭವಾದ ವಿಷ್ಣುಭಕ್ತಿಯನ್ನು ನೀಡುತ್ತಾಳೆ. ಯಾರನ್ನು ಅನುಗ್ರಹಿಸುವುದಿಲ್ಲವೋ ಅವರನ್ನು ಮೋಹಜಾಲದಲ್ಲಿ ಬಂಧಿಸುತ್ತಾಳೆ. ಅನಿತ್ಯವಾದ ಸಂಸಾರವನ್ನು ನಿತ್ಯವೆಂದು ಬಗೆದು ಅವರು ಮೋಸ ಹೋಗುತ್ತಾರೆ. ಕೃಷ್ಣನನ್ನು ಬೇಡುತ್ತಾರೆ. ಬೇರೆ ದೇವತೆಗಳನ್ನು ಭಜಿಸುತ್ತಾರೆ. ಅವರ ಮಂತ್ರ ಜಪಿಸುತ್ತಾರೆ. ನಾನಾ ಭೋಗ ಪದಾರ್ಥಗಳನ್ನು ಬಯಸಿ ಲೋಭದಿಂದ ಏಳು ಜನ್ಮಗಳಲ್ಲಿ ಅನ್ಯ ದೇವತೆಗಳನ್ನು ಉಪಾಸನೆ ಮಾಡುತ್ತಾರೆ. ಕೊನೆಗೆ ಪ್ರಕೃತಿದೇವಿಯ ಅನುಗ್ರಹವಾಯಿತೆಂದರೆ ಏಳುಜನ್ಮಗಳಲ್ಲಿ ದೇವಿಯನ್ನು ಭಜಿಸಿ ಶಿವಭಕ್ತಿ ಪಡೆಯುತ್ತಾರೆ. ಶಿವನ ಉಪಾಸನೆಯಿಂದ ವಿಷ್ಣು ಭಕ್ತಿಯನ್ನು ಪಡೆಯುತ್ತಾರೆ. ಅದರಿಂದ ನಿರ್ಮಲ ಜ್ಞಾನ, ನಿರ್ಮಲ ಜ್ಞಾನದಿಂದ ನಿರ್ಮಲ ಭಕ್ತಿ ಪಡೆದು ಗೋಲೋಕದಲ್ಲಿ ವಿಷ್ಣುದಾಸರಾಗುತ್ತಾರೆ. ಕೃಷ್ಣಭಕ್ತನಿಂದ ಕೃಷ್ಣಮಂತ್ರ ಉಪದೇಶ ಪಡೆವ ಉತ್ತಮ ಜೀವ ತನ್ನ ಕುಲದ ಸಾವಿರ ತಲೆಮಾರಿನವರನ್ನು ಉದ್ಧರಿಸುತ್ತಾನೆ. ತಾನೂ ಗೋಲೋಕ ಪಡೆಯುತ್ತಾನೆ.

ಸಂಸಾರವೆಂಬ ಘೋರ ಸಾಗರದಲ್ಲಿ ನಾವಿಕಳಂತಿರುವ ದೇವಿ ಕೃಷ್ಣಭಕ್ತಿಯೆಂಬ ಹಡಗಿನಿಂದ ದೀನಭಕ್ತರನ್ನು ಪಾರಗಾಣಿಸುತ್ತಾಳೆ. ವೈಷ್ಣವರಲ್ಲೇ ಪರಮವೈಷ್ಣವಳಾದ ಆ ದೇವಿ ಕರ್ಮಬಂಧಚ್ಛೇದನದಲ್ಲಿ ಕೃಷ್ಣನಿಗೆ ಕತ್ತಿಯಂತಿರುವವಳು.

ವಿಷ್ಣುಮಾಯೆಗೆ ವಿವೇಚನಶಕ್ತಿ ಆವರಣಶಕ್ತಿ ಎಂದು ಎರಡು ಬಗೆಯಾದ ಶಕ್ತಿ ಇದೆ. ಕೃಷ್ಣನೊಬ್ಬನೆ ನಿತ್ಯ. ಉಳಿದುದೆಲ್ಲ ಅನಿತ್ಯವೆಂಬ ವಿವೇಚನ ಶಕ್ತಿಯನ್ನು ದೇವಿ

ವಿರಕ್ತರಾದ ವಿಷ್ಣುಭಕ್ತರಿಗೆ ನೀಡುವಳು. ಲೌಕಿಕಸಂಪತ್ತು ಶಾಶ್ವತವೆನ್ನುವ ಬುದ್ಧಿ ಆವರಣಶಕ್ತಿ. ಇದನ್ನು ದೇವಿ ಇತರರಿಗೆ ನೀಡುವಳು.

ನಾನು ವರುಣನ ಪುತ್ರ, ಬ್ರಹ್ಮನ ಪೌತ್ರ. ಶಿವನಿಂದ ಜ್ಞಾನೋಪದೇಶ ಪಡೆದು ಕೃಷ್ಣನನ್ನು ಭಜಿಸುತ್ತಿದ್ದೇನೆ. ರಾಜನೆ, ನೀನು ನದೀತೀರಕ್ಕೆ ಹೋಗಿ ದೇವಿಯ-ನ್ನಾರಾಧಿಸು. ನೀನು ರಾಜ್ಯವನ್ನು ಬಯಸುವುದರಿಂದ ಆವರಣಶಕ್ತಿ ನೀಡುವಳು. ವಿರಕ್ತನಾದ ಈ ವೈಶ್ಯನಿಗೆ ವಿವೇಚನಶಕ್ತಿ ನೀಡುವಳು.

ಹೀಗೆ ಹೇಳಿ ಮುನಿ ಅವರಿಗೆ ದುರ್ಗಾಪೂಜಾವಿಧಾನ ಸ್ತೋತ್ರಕವಚಗಳನ್ನು ಉಪದೇಶಿಸಿದ. ಅದರಿಂದ ವೈಶ್ಯ ಮುಕ್ತಿಯನ್ನು ಹೊಂದಿದ. ರಾಜ ರಾಜ್ಯವನ್ನೂ ಮನುಪದವಿಯನ್ನೂ ಪಡೆದ. ಇದು ಉತ್ತಮವಾದ ಮೋಕ್ಷದಾಯಕವಾದ ದುರ್ಗೋಪಾಖ್ಯಾನ.

**ಇಲ್ಲಿಗೆ ಶ್ರೀ ಬ್ರಹ್ಮವೈವರ್ತ ಮಹಾಪುರಾಣದಲ್ಲಿ ಎರಡನೆಯದಾದ ಪ್ರಕೃತಿಖಂಡದ ನಾರದನಾರಾಯಣ ಸಂವಾದದಲ್ಲಿ ದುರ್ಗೋಪಾಖ್ಯಾನದಲ್ಲಿ ಸುರಥಮೇಧಃ ಸಂವಾದದಲ್ಲಿ ಸುರಥ ವೈಶ್ಯರ ಅಭೀಷ್ಟಸಿದ್ಧಿ ಎಂಬ ಅರವತ್ತೆರಡನೆ ಅಧ್ಯಾಯ ಮುಗಿಯಿತು.**

## ದೇವಿ ಪ್ರಸನ್ನಳಾಗಿ ರಾಜನಿಗೂ ವೈಶ್ಯನಿಗೂ ಇಷ್ಟಾರ್ಥಗಳನ್ನು ಕೊಟ್ಟಳು

**ಅಧ್ಯಾಯ-೬೩**

ನಾರದ— ರಾಜಾ ಸುರಥ ಮತ್ತು ವೈಶ್ಯರು ಹೇಗೆ ದುರ್ಗೆಯನ್ನು ಆರಾಧಿಸಿದರು ? ಪೂಜಾವಿಧಾನ ಧ್ಯಾನ ಮಂತ್ರ ಸ್ತೋತ್ರ ಕವಚಗಳೇನೆಂಬುದನ್ನು ವರ್ಣಿಸು. ವೈಶ್ಯನಿಗೆ ದೇವಿ ಕೊಟ್ಟ ಜ್ಞಾನ ಯಾವುದು ? ರಾಜ ವೈಶ್ಯರು ಯಾವ ಸದ್ಗತಿ ಪಡೆದರು ಎಂಬುದನ್ನೂ ಹೇಳು.

ನಾರಾಯಣ— ರಾಜನೂ ವೈಶ್ಯನೂ ಸುಮೇಧ ಮುನಿಯಿಂದ ದೇವಿಯ ಮಂತ್ರ ಸ್ತೋತ್ರ ಕವಚ ಧ್ಯಾನ ಪೂಜಾವಿಧಿಗಳನ್ನು ತಿಳಿದು ಅದರಂತೆ ಮೂರುವರ್ಷಕಾಲ ಉಪಾಸನೆ ಮಾಡಿದರು. ದುರ್ಗೆ ಪ್ರತ್ಯಕ್ಷಳಾದಳು. ರಾಜನಿಗೆ ರಾಜ್ಯವನ್ನೂ ಮನುಪದವಿಯನ್ನು ನೀಡಿದಳು. ವೈಶ್ಯನಿಗೆ ಹಿಂದೆ ಕೃಷ್ಣ ಶಿವನಿಗೆ ಉಪದೇಶಿಸಿದ್ದ ನಿಗೂಢವಾದ ದುರ್ಲಭವಾದ ಜ್ಞಾನವನ್ನು ನೀಡಿದಳು.

ವೈಶ್ಯ ನಿರಾಹಾರನಾಗಿ ಅತ್ಯಂತ ಕ್ಲಿಷ್ಟವಾದ ತಪಸ್ಸುಮಾಡಿ ನಿಶ್ಶೀಷ್ಟನಾಗಿದ್ದ. ಶ್ವಾಸಸಂಚಾರವೂ ಇರಲಿಲ್ಲ. ದೇವಿ ಪ್ರತ್ಯಕ್ಷಳಾಗಿ ಬಂದು ಅವನನ್ನು ಮಡಿಲಲ್ಲಿರಿಸಿ-ಕೊಂಡು 'ಮಗು, ಎದ್ದೇಳು' ಎಂದು ಹೇಳುತ್ತ ಚೈತನ್ಯ ನೀಡಿದಳು. ಆತ ಹಿಂದಿ-ನಂತಾಗಿ ದೇವಿಯ ಮುಂದೆ ನಿಂತಾಗ ದೇವಿ ನುಡಿದಳು-

'ಮಗು, ನಿನ್ನ ಅಭೀಷ್ಟವೇನು, ಹೇಳು. ಬ್ರಹ್ಮತ್ವವೆ, ಅಮರತ್ವವೆ, ಇನ್ನೂ ಅದಕ್ಕಿಂತ ದುರ್ಲಭವಾದುದು ಏನಾದರೂ ಬೇಕೆ, ಹೇಳು. ಇಂದ್ರತ್ವವನ್ನೊ ಮನುತ್ವವನ್ನೋ ಸರ್ವಸಿದ್ಧಿಯನ್ನೋ ನಿನಗೆ ಕೊಡುತ್ತೇನೆ ಹೊರತು, ಬಾಲಕರನ್ನು ವಂಚಿಸುವಂಥ ಅಲ್ಪವಾದ ವರವೇನನ್ನೂ ಕೊಡಲಾರೆ.'

ವೈಶ್ಯ ನುಡಿದ— ಬ್ರಹ್ಮತ್ವವಾಗಲಿ ಅಮರತ್ವವಾಗಲಿ ನನಗೆ ಬೇಡ. ಅದಕ್ಕಿಂತ ದುರ್ಲಭವಾದ ವರವೇನೆಂಬುದನ್ನು ನಾನರಿಯೆ. ನಾನು ನಿನ್ನನ್ನೆ ಶರಣಾಗಿದ್ದೇನೆ. ನಿನಗೆ ಇಷ್ಟವಾದುದನ್ನು ಕೊಡು. ಶಾಶ್ವತವಾದ ಅತ್ಯುತ್ತಮವಾದ ವರವನ್ನೆ ನೀಡು.

ದೇವಿ— ನನಗೆ ಇಷ್ಟವಾದುದನ್ನೆ ನಾನು ನಿನಗೆ ನೀಡುತ್ತೇನೆ. ದುರ್ಲಭವಾದ ಗೋಲೋಕವನ್ನೆ ನೀನು ಪಡೆ. ದೇವತೆಗಳಿಗೂ ಮುನಿಗಳಿಗೂ ದುರ್ಲಭವಾದ ಅತ್ಯುತ್ತಮವಾದ ಜ್ಞಾನವಿದು, ಕೇಳು.

**ಸ್ಮರಣಂ ವಂದನಂ ಧ್ಯಾನಮರ್ಚನಂ ಗುಣಕೀರ್ತನಂ ।**
**ಶ್ರವಣಂ ಭಾವನಂ ಸೇವಾ ಕೃಷ್ಣೇ ಸರ್ವನಿವೇದನಂ ॥**

**ಏತದೇವ ವೈಷ್ಣವಾನಾಂ ನವಧಾ ಭಕ್ತಿಲಕ್ಷಣಂ**
**ಜನ್ಮಮೃತ್ಯು ಜರಾವ್ಯಾಧಿ ಯಮತಾಡನ ಖಂಡನಂ ॥**

ಹಿರಿಯ ಸ್ಮರಣ, ವಂದನ, ಧ್ಯಾನ, ಅರ್ಚನ, ಗುಣಕೀರ್ತನ, ಶ್ರವಣ, ಭಾವನ, ಸೇವೆ, ಸರ್ವಸ್ವ ಸಮರ್ಪಣ ಇವೇ ವಿಷ್ಣುಭಕ್ತಿಯ ಒಂಬತ್ತು ಲಕ್ಷಣಗಳು. ಜನನ ಮರಣ ಜರೆ ವ್ಯಾಧಿ ಯಮದಂಡನಗಳನ್ನು ತಡೆಯುವವುಗಳು. ಈ ನವವಿಧ ಭಕ್ತಿ ಇಲ್ಲದವರ ಆಯುಷ್ಯವಿಡೀ ಕ್ಷೀಣವಾಗಿ ವ್ಯರ್ಥವಾಗಿಯೆ ಕಳೆಯುವುದು. ಭಕ್ತರು ಜೀವನ್ಮುಕ್ತರಾಗಿ ಜನ್ಮಾದಿರಹಿತರಾಗಿ ಚಿರಜೀವಿಗಳಾಗುತ್ತಾರೆ.

ಶಿವ, ಶೇಷ, ಧರ್ಮ, ಬ್ರಹ್ಮ, ವಿಷ್ಣು, ಮಹಾವಿರಾಟ್, ಸನತ್ಕುಮಾರ, ಕಪಿಲ, ಸನಕ, ಸನಂದನ, ವೋಢು, ಪಂಚಶಿಖಿ, ದಕ್ಷ, ನಾರದ, ಸನಾತನ, ಭೃಗು, ಮರೀಚಿ, ದೂರ್ವಾಸ, ಕಶ್ಯಪ, ಪುಲಹ, ಅಂಗಿರಸ್, ಮೇಧಾವಿ, ಲೋಮಶ, ಶುಕ್ರ, ವಸಿಷ್ಠ ಕ್ರತು, ಬೃಹಸ್ಪತಿ, ಕರ್ದಮ, ಶಕ್ತಿ, ಅತ್ರಿ, ಪರಾಶರ, ಮಾರ್ಕಂಡೇಯ, ಬಲಿ, ಪ್ರಹ್ಲಾದ, ಗಣೇಶ, ಯಮ, ಸೂರ್ಯ, ವರುಣ, ವಾಯು, ಚಂದ್ರ, ಅಗ್ನಿ, ಸಮುದ್ರ, ಉಲೂಕ, ನಾಡೀಜಂಘ, ಹನುಮಂತ, ನರ, ನಾರಾಯಣ, ಕೂರ್ಮ,

ಇಂದ್ರದ್ಯುಮ್ನ, ವಿಭೀಷಣ ಇವರೆಲ್ಲ ನವವಿಧ ಭಕ್ತಿ ಉಳ್ಳವರು, ಧರ್ಮಿಷ್ಠರು. ಅವರ ಸಂಪರ್ಕದಿಂದ ತೀರ್ಥಕ್ಷೇತ್ರಗಳೂ ಪವಿತ್ರವಾಗುವುದು.

ಸಪ್ತದ್ವೀಪಯುಕ್ತವಾದ ಭೂಮಂಡಲ, ಅದರ ಮೇಲೆ ಇರುವ ಊರ್ಧ್ವಲೋಕಗಳು ಕೆಳಗಿನ ಪಾತಾಳಲೋಕಗಳು ಎಲ್ಲವೂ ಸೇರಿ ಬ್ರಹ್ಮಾಂಡವೆನಿಸುವುವು. ಇಂಥ ಅಸಂಖ್ಯ ಬ್ರಹ್ಮಾಂಡಗಳು ಬ್ರಹ್ಮವಿಷ್ಣುಶಿವಾದಿಗಳಿಂದ ದೇವತೆಗಳು ಋಷಿಗಳು ಮನುಗಳು ಮಾನವರು ಮುಂತಾದವರಿಂದ ತುಂಬಿದ್ದು ಯಾವ ಮಹಾವಿಷ್ಣುವಿನ ರೋಮಕೂಪಗಳಲ್ಲಿ ಅಡಗುವವೋ ಆ ಮಹಾವಿರಾಟ್ ಪುರುಷನೂ ಕೃಷ್ಣನ ಹದಿನಾರನೆ ಒಂದು ಅಂಶ. ಆದರಿಂದ ನಿತ್ಯ ನಿರ್ಗುಣ ಅವಿನಾಶಿಯಾದ ಪ್ರಕೃತಿಗೆ ಅತೀತನಾದ ಕೃಷ್ಣನನ್ನು ಆಶ್ರಯಿಸು. ಅವನು ಪ್ರಾಕೃತ ಆಕಾರವಿಲ್ಲದವ ನಿರ್ದುಷ್ಟ, ನಿತ್ಯಾನಂದ, ಭಕ್ತರ ಅನುಗ್ರಹಕ್ಕಾಗಿ ತೋರುವ ಸಕಲ ರೂಪಗಳುಳ್ಳವ. ಸರ್ವಪುರುಷಾರ್ಥಪ್ರದ. ಶಿವಾದಿಗಳಿಗೂ ಧ್ಯಾನಕ್ಕೆ ನಿಲುಕದವ. ಸರ್ವೇಶ್ವರ, ಸರ್ವಪೂಜ್ಯ , ಸರ್ವಜ್ಞ, ಸರ್ವಾಧಾರ, ಭಕ್ತಿದಾಯಕ, ಮುಕ್ತಿದಾಯಕ, ದಾಸ್ಯಪ್ರದ, ಸರ್ವಸಿದ್ಧಿಪ್ರದ. ಪರಾತ್ಪರ, ಪರಿಪೂರ್ಣತಮ. ಇಂಥ ಕೃಷ್ಣನನ್ನು ಉಪಾಸನೆ ಮಾಡು. ಕೃಷ್ಣ ಎಂಬ ದ್ವ್ಯಕ್ಷರಮಂತ್ರ ಉಪದೇಶ ಪಡೆದು ಪುಷ್ಕರದಲ್ಲಿ ಹತ್ತುಲಕ್ಷ ಜಪಿಸು. ಸಿದ್ಧಿ ಉಂಟಾಗುವುದು' ಹೀಗೆ ಹೇಳಿ ದೇವಿ ಅಂತರ್ಧಾನಳಾದಳು. ವೈಶ್ಯ ದೇವಿಯ ಆಜ್ಞೆಯಂತೆ ಪುಷ್ಕರದಲ್ಲಿ ತಪಸ್ಸು ಮಾಡಿ ಕೃಷ್ಣನನ್ನು ಕಂಡು ಅವನ ದಾಸನಾದ.

**ಇಲ್ಲಿಗೆ ಶ್ರೀ ಬ್ರಹ್ಮವೈವರ್ತ ಮಹಾಪುರಾಣದಲ್ಲಿ ಎರಡನೆಯದಾದ ಪ್ರಕೃತಿಖಂಡದ ನಾರದನಾರಾಯಣ ಸಂವಾದದಲ್ಲಿ ದುರ್ಗೋಪಾಖ್ಯಾನದಲ್ಲಿ ಸುರಥ ಸಮಾಧಿ ಸುಮೇಧಃ ಸಂವಾದದಲ್ಲಿ ಪ್ರಕೃತಿವೈಶ್ಯ ಸಂವಾದವೆಂಬ ಅರವತ್ತ ಮೂರನೆ ಅಧ್ಯಾಯ ಮುಗಿಯಿತು.**

# ದುರ್ಗೆಯ ಪೂಜಾವಿಧಿ

**ಅಧ್ಯಾಯ-೬೪**

ನಾರಾಯಣ— ರಾಜಾ ಸುರಥ ದೇವಿ ದುರ್ಗೆಯನ್ನು ವೇದೋಕ್ತ ಕ್ರಮದಿಂದ ಆರಾಧಿಸಿದ. ಆಕ್ರಮ ಹೀಗಿದೆ— ಸ್ನಾನಾಚಮನಗಳನ್ನು ಮಾಡಿ ಆಸನ ಕರಶುದ್ಧಿ ಭೂತೋಚ್ಚಾಟನ ಪ್ರಾಣಾಯಾಮಗಳನ್ನೂ ಮಾಡಿ ದೇವಿಯನ್ನು ಧ್ಯಾನಿಸಿ ಮೃಣ್ಮಯ ಪ್ರತಿಮೆಯಲ್ಲಿ ಆವಾಹಿಸಿ ಪುನಃ ಧ್ಯಾನಪೂರ್ವಕವಾಗಿ ಭಕ್ತಿಯಿಂದ ಪೂಜಿಸಿದ. ಮೊದಲಿಗೆ ದೇವಿಯ ಬಲಭಾಗದಲ್ಲಿ ಕಲಶದಲ್ಲಿ ಲಕ್ಷ್ಮಿಯನ್ನೂ ಮುಂಭಾಗದಲ್ಲಿ ಗಣಪತಿ ಸೂರ್ಯ ಅಗ್ನಿ ವಿಷ್ಣು ಶಿವ ಪಾರ್ವತಿ ಈ ಆರು ದೇವತೆಗಳನ್ನೂ ಆವಾಹಿಸಿ ಪೂಜಿಸಿದ.

ಬಳಿಕ ದೇವಿಯನ್ನು ಧ್ಯಾನಿಸಿದ—

ಬ್ರಹ್ಮವಿಷ್ಣುಶಿವಾದಿ ಪೂಜ್ಯಳಾದ ನಾರಾಯಣೀ ವಿಷ್ಣುಮಾಯಾ ವೈಷ್ಣವೀ ಎನಿಸಿರುವ ವಿಷ್ಣುಭಕ್ತಿದಾಯಕಳಾದ ದೇವಿ ದುರ್ಗೆಯನ್ನು ಧ್ಯಾನಿಸುವೆನು. ದೇವಿ ಕೃಷ್ಣನ ಅರ್ಧಾಂಗದಿಂದ ಬಂದವಳು. ಕೃಷ್ಣಪ್ರಿಯೆ ಕೃಷ್ಣನ ಶಕ್ತಿಸ್ವರೂಪಳು, ಕೃಷ್ಣನಿಗೆ ಪೂಜ್ಯಳು, ವಂದ್ಯಳು. ಪುಟಕ್ಕಿಟ್ಟ ಚಿನ್ನದಂಥ ಮೈಯವಳು. ಕೋಟಿ ಸೂರ್ಯರ ಪ್ರಭೆ ಉಳ್ಳವಳು. ನೂರು ಭುಜಗಳು, ಮೂರು ಕಣ್ಣುಗಳು, ತಲೆಯಲ್ಲಿ ಅರ್ಧಚಂದ್ರ ಧರಿಸಿದ್ದಾಳೆ. ಹೆರಳಲ್ಲಿ ಜಾಜಿಯ ಹೂಮಾಲೆ ಮುಡಿದಿದ್ದಾಳೆ. ಮುಕ್ಕಣ್ಣ ಶಿವನ ಪ್ರಾಣಸ್ವರೂಪಳು, ಮನಮೋಹಿನಿ, ಅಗ್ನಿಯಂತೆ ಶುದ್ಧವಾದ ಬಟ್ಟೆ ಉಟ್ಟು, ಮೈಗೆ ಚಂದನಗಂಧ ಲೇಪಿಸಿಕೊಂಡು, ರತ್ನಾಭರಣಭೂಷಿತಳಾಗಿ ಶರತ್ಕಾಲದ ಚಂದ್ರನಂಥ ಮುಖದಲ್ಲಿ ಹಣೆಗೆ ಕಸ್ತೂರಿಕುಂಕುಮ ಚಂದನಗಳ ಬೊಟ್ಟು ಇಟ್ಟುಕೊಂಡು ಕಣ್ಣಿಗೆ ಕಾಡಿಗೆ ಹಚ್ಚಿಕೊಂಡು ಕೋಟಿಮನ್ಮಥರನ್ನು ಧಿಕ್ಕರಿಸುವ ಲಾವಣ್ಯವತಿ ದೇವಿ ರತ್ನಸಿಂಹಾಸನದಲ್ಲಿ ಕುಳಿತಿದ್ದಾಳೆ. ರತ್ನಕಿರೀಟದಿಂದ ಶೋಭಿಸುತ್ತಿದ್ದಾಳೆ. ಸೃಷ್ಟಿಕಾಲದಲ್ಲಿ ಬ್ರಹ್ಮನ ಸೃಷ್ಟಿಶಕ್ತಿರೂಪಳಾಗಿ, ಪಾಲನಕಾಲದಲ್ಲಿ ಹರಿಯ ಪಾಲನಶಕ್ತಿರೂಪಳಾಗಿ ಲಯಕಾಲದಲ್ಲಿ ರುದ್ರನ ಲಯಶಕ್ತಿಯಾಗಿ ಸೃಷ್ಟಿಸ್ಥಿತಿಲಯಗಳನ್ನು ಮಾಡುತ್ತಾಳೆ. ಶುಂಭ ನಿಶುಂಭ ಮಹಿಷಾಸುರಮರ್ದಿನಿ ಇವಳೆ. ತ್ರಿಪುರ ಯುದ್ಧದಲ್ಲಿ ಶಿವನಿಂದ ಸ್ತುತಿಸಲ್ಪಟ್ಟವಳು ಇವಳೆ. ಮಧುಕೈಟಭರ ಯುದ್ಧದಲ್ಲಿ ವಿಷ್ಣುಶಕ್ತಿಸ್ವರೂಪಳಾಗಿದ್ದುದು ಇವಳೆ. ಹಿರಣ್ಯಕಶಿಪು ವಧಕಾಲದಲ್ಲಿ ನೃಸಿಂಹ ಶಕ್ತಿರೂಪಳೂ, ಹಿರಣ್ಯಾಕ್ಷವಧದಲ್ಲಿ ವರಾಹಶಕ್ತಿರೂಪಳೂ, ಇವಳೆ. ಪರಬ್ರಹ್ಮಸ್ವರೂಪಳಾಗಿ ಸರ್ವಶಕ್ತಿಸ್ವರೂಪಳಾಗಿರುವ ದೇವಿ ದುರ್ಗೆಯನ್ನು ಧ್ಯಾನಿಸುತ್ತೇನೆ.''

ಹೀಗೆ ಧ್ಯಾನಿಸಿ ಪ್ರತಿಮೆಯಲ್ಲಿ ದೇವಿಯನ್ನು ಆವಾಹಿಸಬೇಕು— 'ಬಾ, ಭಗವತಿ ಜಗನ್ಮಾತೆಯೆ, ಬಾ, ಶಿವಲೋಕದಿಂದ ಬಂದು ಶರತ್ಕಾಲದ ನನ್ನ ಪೂಜೆಯನ್ನು

ಸ್ವೀಕರಿಸು. ಜಗತ್ಪೂಜ್ಯಳಾದ ಮಹೇಶ್ವರಿಯೆ, ಈ ಪ್ರತಿಮೆಯಲ್ಲಿ ಬಂದು ನೆಲೆಸು. ನಿನ್ನ ಮುಖ್ಯ ಪ್ರಾಣ ಉಪಪ್ರಾಣಗಳೂ ಸರ್ವಶಕ್ತಿಗಳೂ ಪ್ರತಿಮೆಯಲ್ಲಿ ನೆಲೆಸಲಿ.

**ಓಂ ಹ್ರೀಂ ಶ್ರೀಂ ಕ್ಲೀಂ ದುರ್ಗಾಯೈ ಸ್ವಾಹಾ**

ಎದೆಯಲ್ಲಿ ಪ್ರಾಣಗಳು ನೆಲೆಸಲಿ. ಸಕಲೇಂದ್ರಿಯಗಳೂ ಸಕಲಶಕ್ತಿಗಳೂ ನೆಲೆಸಲಿ. ಜಗದೀಶ್ವರನಾದ ಕೃಷ್ಣ ಬಂದು ನೆಲೆಸಲಿ.

ಹೀಗೆ ಆವಾಹನೆ ಮಾಡಿ ಸ್ತುತಿಸಬೇಕು—

'ಭಗವತಿ, ಜಗನ್ಮಾತೆಯೆ, ನಿನಗೆ ಸ್ವಾಗತ. ಭದ್ರಕಾಳಿ, ನನ್ನಲ್ಲಿ ಪ್ರಸನ್ನಳಾಗು. ನಿನಗೆ ನಮಸ್ಕರಿಸುವೆನು. ಮಹೇಶ್ವರಿ, ನನ್ನ ಮನೆಗೆ ನೀನು ಬಂದಿರುವುದರಿಂದ ನಾ ಧನ್ಯನಾದೆ, ಕೃತಕೃತ್ಯನಾದೆ, ನನ್ನ ಜೀವನ ಸಫಲವಾಯಿತು. ದೇವಿ ದುರ್ಗೆ, ನಿನ್ನ ಪೂಜೆ ಮಾಡುವವನಿಗೆ ಗೋಲೋಕ ಸಿಗುವುದು. ವೈಷ್ಣವಿ, ನಿನ್ನ ಪೂಜೆಯಿಂದ ವಿಷ್ಣುಲೋಕ ಲಭಿಸುವುದು. ಮಾಹೇಶ್ವರಿ, ನಿನ್ನ ಪೂಜೆಯಿಂದ ಶಿವಲೋಕ ದೊರಕುವುದು.

ನಿನ್ನ ಪೂಜೆ ಸಾತ್ವಿಕ ರಾಜಸ ತಾಮಸ ಎಂದು ಮೂರುವಿಧ. ಸಾತ್ವಿಕ ಪೂಜೆ ಉತ್ತಮ, ರಾಜಸ ಪೂಜೆ ಮಧ್ಯಮ. ಮತ್ತು ತಾಮಸ ಪೂಜೆ ಅಧಮ. ವೈಷ್ಣವರು ಮಾಡುವ ಪೂಜೆ ಸಾತ್ವಿಕ. ಶಾಕ್ತರು ಮುಂತಾದವರು ಮಾಡುವ ಪೂಜೆ ರಾಜಸ. ದೀಕ್ಷಾರಹಿತರಾದ ದುಷ್ಟರು ಮಾಡುವ ಪೂಜೆ ತಾಮಸ. ಜೀವಹತ್ಯೆ ಇಲ್ಲದ ಉತ್ತಮವಾದ ಪೂಜೆ ವೈಷ್ಣವರದು. ಸಾತ್ವಿಕವಾದ ಈ ಪೂಜೆಯಿಂದ ಸಾತ್ವಿಕರಾದ ವೈಷ್ಣವರು ಗೋಲೋಕ ಪಡೆಯುವರು. ಪ್ರಾಣಿಬಲಿಯಿಂದ ಕೂಡಿದ ಪೂಜೆ ಶಾಕ್ತರು ಮುಂತಾದವರದು. ರಾಜಸವಾದ ಈ ಪೂಜೆಯಿಂದ ರಾಜಸರಾದ ಅವರು ಕೈಲಾಸ ಸೇರುತ್ತಾರೆ. ತಾಮಸ ಪೂಜೆಯಿಂದ ಕಿರಾತರು ಮುಂತಾದ ತಾಮಸ ಜನರು ಸ್ವರ್ಗ ಪಡೆಯುತ್ತಾರೆ. ಧರ್ಮ ಅರ್ಥಕಾಮ ಮೋಕ್ಷ ರೂಪ ಚತುರ್ವರ್ಗಫಲ ನೀಡುವ-ವಳು ನೀನು. ಕೃಷ್ಣಪರಮಾತ್ಮನ ಸರ್ವಶಕ್ತಿ ಸ್ವರೂಪಳು ನೀನು. ಜನನ ಮರಣ ಜರೆ ವ್ಯಾಧಿಗಳನ್ನು ಕಳೆವವಳು ನೀನು. ಕೃಷ್ಣಭಕ್ತಿ ನೀಡುವವಳು ನೀನು. ನಾರಾಯಣಿ, ಮಹಾಮಾಯೆ, ದುರ್ಗೇ, ನಿನ್ನ ಸ್ಮರಣಮಾತ್ರದಿಂದ ಎಲ್ಲ ದುರ್ಗತಿ ಪರಿಹಾರ-ವಾಗುತ್ತದೆ.'

ಹೀಗೆ ಸ್ತೋತ್ರ ಮಾಡಿದ ಬಳಿಕ ದೇವಿಯ ಎಡದಲ್ಲಿ ತ್ರಿಪಾದ ಪೀಠದಲ್ಲಿ ಶಂಖವನ್ನು ತೊಳೆದಿಟ್ಟು ನೀರು ತುಂಬಿ ಗಂಧ ಪುಷ್ಪಾಕ್ಷತೆಗಳಿಂದ ಪೂಜಿಸಬೇಕು. 'ಹೇ ಶಂಖವೆ, ನೀನು ಅತ್ಯಂತ ಪುಣ್ಯಕರ, ಮಂಗಳಕರನಾಗಿರುವೆ. ಪೂರ್ವಕಲ್ಪದಲ್ಲಿ ಶಂಖಚೂಡನಿಂದ ಪ್ರಾದುರ್ಭವಿಸಿದ ಪವಿತ್ರವಸ್ತು ನೀನು,' ಎಂದು ಸ್ತುತಿಸಬೇಕು.

ಅರ್ಘ್ಯ ಪಾತ್ರೆಯನ್ನು ಸಿದ್ಧಪಡಿಸಿ ದೇವಿಗೆ ಷೋಡಶೋಪಚಾರಗಳನ್ನರ್ಪಿಸ-ಬೇಕು. ಸಜಲ ಕುಶದಿಂದ ತ್ರಿಕೋಣಮಂಡಲ ಬರೆದು ಅದರಲ್ಲಿ ಕೂರ್ಮಶೇಷ ಭೂದೇವಿಯರನ್ನು ಪೂಜಿಸಬೇಕು. ಆ ಮಂಡಲದ ಮೇಲೆ ತ್ರಿಪಾದ ಪೀಠವಿಟ್ಟು ಅದರಲ್ಲಿ ಶಂಖವಿರಿಸಿ ಮೂರನೆ ಒಂದುಭಾಗ ನೀರು ತುಂಬಿಸಿ ನೀರಲ್ಲಿ ಹೀಗೆ ದೇವತೆಗಳನ್ನು ಪೂಜಿಸಬೇಕು-

'ಗಂಗೆ, ಯಮುನೆ, ಗೋದಾವರಿ ಸರಸ್ವತಿ ನರ್ಮದೆ ಸಿಂಧು ಕಾವೇರಿ ಚಂದ್ರಭಾಗೆ ಕೌಶಿಕ, ಸ್ವರ್ಣರೇಖೆ, ಕನಖಲೆ, ಪಾರಿಭದ್ರೆ ಗಂಡಕಿ, ಶ್ವೇತಗಂಗೆ, ಚಂದ್ರರೇಖೆ ಪಂಪೆ ಚಂಪೆ ಗೋಮತಿ ಪ್ರಭೆ ಶತಹ್ರದೇ ಚೇಲಗಂಗೆ ನೀವು ಈ ನೀರಲ್ಲಿ ಸನ್ನಿಹಿತರಾಗಿರಿ.'

ಬಳಿಕ ಶಂಖದಲ್ಲಿ ಅಗ್ನಿ ಸೂರ್ಯ ಚಂದ್ರ ವಿಷ್ಣು ವರುಣ ಶಿವರನ್ನು ತುಲಸಿ ಚಂದನಗಂಧಗಳಿಂದ ಪೂಜಿಸಿ, ಆ ಶಂಖೋದಕದಿಂದ ಎಲ್ಲ ನೈವೇದ್ಯ ಪದಾರ್ಥ-ಗಳನ್ನು ಪ್ರೋಕ್ಷಿಸಬೇಕು.

ಆಸನ ವಸ್ತ್ರ ಪಾದ್ಯ ಸ್ನಾನೀಯ ಅನುಲೇಪನ ಮಧುಪರ್ಕ ಗಂಧ ಅರ್ಘ್ಯ ಪುಷ್ಪ ನೈವೇದ್ಯ ಪುನರಾಚಮನೀಯ ತಾಂಬೂಲ ರತ್ನಾಭರಣ ಧೂಪ ದೀಪ ಶಯ್ಯೆ -ಈ ಹದಿನಾರು ಉಪಚಾರಗಳನ್ನು ದೇವಿಗೆ ಸಮರ್ಪಿಸಬೇಕು.

ಶಂಕರಪ್ರಿಯೆ, ಅಮೂಲ್ಯರತ್ನ ಖಚಿತವಾದ ವಿಚಿತ್ರ ಸಿಂಹಾಸನವನ್ನು ನಿನಗರ್ಪಿಸುವೆನು, ಸ್ವೀಕರಿಸು.

ಮಂಗಳಾಂಗಿ, ಅಸಂಖ್ಯದಾರಗಳಿಂದ ನಿರ್ಮಿತವಾದ, ಜ್ವಲಿಸುವ ಅಗ್ನಿಯಂತೆ ಶುದ್ಧವಾದ ವಸ್ತ್ರವನ್ನು ಸ್ವೀಕರಿಸು.

ದುರ್ಗೇ, ಅಮೂಲ್ಯ ರತ್ನಕಲಶದಲ್ಲಿ ತುಂಬಿದ ಪವಿತ್ರಗಂಗೋದಕವನ್ನು ಪಾದ್ಯವಾಗಿ ಸ್ವೀಕರಿಸು.

ಪರಮೇಶ್ವರಿ, ಸುಗಂಧದ ನೆಲ್ಲಿಪುಡಿಯಿಂದ ಯುಕ್ತವಾದ ಸ್ನಾನೀಯ ಜಲವನ್ನೂ ತೈಲವನ್ನೂ ಸ್ವೀಕರಿಸು.

ಜಗನ್ಮಾತೆ, ಕಸ್ತೂರೀ ಕುಂಕುಮ ಯುಕ್ತವಾದ ಸುಗಂಧದ ಚಂದನರಸವನ್ನು ಅನುಲೇಪನಕ್ಕಾಗಿ ಸ್ವೀಕರಿಸು.

ಮಹಾದೇವಿ, ರತ್ನಪಾತ್ರೆಯಲ್ಲಿ ತುಂಬಿದ ಮಧುಪರ್ಕವನ್ನು ಸ್ವೀಕರಿಸು. ದೇವಿ, ಸುಗಂಧ ದ್ರವ್ಯಯುಕ್ತವಾದ ಸುಗಂಧಮೂಲ ಚೂರ್ಣವನ್ನು ಸ್ವೀಕರಿಸು.

ಚಂಡಿಕೆ, ದೂರ್ವಾಪುಷ್ಪಾಕ್ಷತೆಗಳಿಂದ ಯುಕ್ತವಾಗಿ ಶಂಖದಲ್ಲಿ ತುಂಬಿದ ದೇವಗಂಗಾಜಲವನ್ನು ಅರ್ಘ್ಯವಾಗಿ ಸ್ವೀಕರಿಸು.

ಜಗದಂಬಿಕೆ, ಪಾರಿಜಾತ ವೃಕ್ಷದಿಂದ ಉದ್ಭವಿಸಿದ ನಾನಾ ಪುಷ್ಪಗಳಿಂದ ಕೂಡಿದ ಸುಗಂಧಯುಕ್ತವಾದ ಹೂಮಾಲೆಗಳನ್ನು ಸ್ವೀಕರಿಸು.

ಶಿವೆ, ಸಿದ್ಧಾನ್ನ ಮಾಷಾನ್ನ ಪಿಷ್ಟಕ ಪಾಯಸ ಮುಂತಾದ ಮಿಷ್ಟಾನ್ನವನ್ನೂ ಲಡ್ಡು ಮತ್ತು ಫಲಗಳನ್ನೂ ನೈವೇದ್ಯವಾಗಿ ಸಮರ್ಪಿಸುತ್ತೇನೆ, ಸ್ವೀಕರಿಸು.

ಪಾರ್ವತಿ, ಪಚ್ಚಕರ್ಪೂರಾದಿಗಳಿಂದ ಸುಗಂಧಿತವಾದ ಶೀತಲ ಜಲವನ್ನು ಸ್ವೀಕರಿಸು.

ದೇವಿ, ಪಚ್ಚಕರ್ಪೂರಾದಿಗಳಿಂದ ಸುಗಂಧಿತವಾದ ಅಡಕೆ ಎಲೆ ಸುಣ್ಣಗಳಿಂದ ಮಾಡಿದ ರುಚಿಕರವಾದ ತಾಂಬೂಲವನ್ನು ಸ್ವೀಕರಿಸು.

ಅಮೂಲ್ಯರತ್ನಖಚಿತ ಸರ್ವಾಂಗಶೋಭೆ ಉಂಟುಮಾಡುವ ಆಭರಣ ಸ್ವೀಕರಿಸು.

ಅಗುರು ಮುಂತಾದ ಚೂರ್ಣಗಳಿಂದ ಉದಿಸುವ ಗಂಧಯುಕ್ತವಾದ ಅಗ್ನಿಜ್ವಾಲೆಯಂತೆ ಪವಿತ್ರವಾದ ಧೂಪವನ್ನು ಸ್ವೀಕರಿಸು.

ಪರಮೇಶ್ವರಿ, ದಿವ್ಯರತ್ನಮಯವಾದ ಗಾಢಾಂಧಕಾರ ನಿವಾರಕವಾದ ಪವಿತ್ರ ದೀಪವನ್ನು ಸ್ವೀಕರಿಸು.

ತೆಳುವಾದ ಬಟ್ಟೆಗಳನ್ನು ಹಾಸಿ ಸಿದ್ಧಪಡಿಸಿದ ಅಮೂಲ್ಯ ರತ್ನಖಚಿತವಾದ ದಿವ್ಯ ಪರ್ಯಂಕವನ್ನು ಸ್ವೀಕರಿಸು.'

-ಹೀಗೆ ದೇವಿಯನ್ನು ಪೂಜಿಸಿ ಪುಷ್ಪಾಂಜಲಿ ನೀಡಬೇಕು.

ಬಳಿಕ ದೇವಿಯ ಸಹಚರಿಯರಾದ ಉಗ್ರಚಂಡಾ ಪ್ರಚಂಡಾ ಚಂಡೋಗ್ರಾ ಚಂಡನಾಯಿಕಾ ಅತಿಚಂಡಾ ಚಾಮುಂಡಾ ಚಂಡಾ ಚಂಡವತೀ ಎಂಬ ಅಷ್ಟನಾಯಿಕೆ-ಯರನ್ನು ಅಷ್ಟ ದಳ ಪದ್ಮದಲ್ಲಿ ಪೂರ್ವದಿಕ್ಕಿನಿಂದ ಕ್ರಮವಾಗಿ ಅಷ್ಟದಿಕ್ಕುಗಳಲ್ಲಿ ಆವಾಹಿಸಿ ಪಂಚೋಪಚಾರಗಳಿಂದ ಪೂಜಿಸಬೇಕು.

ಪದ್ಮದಲ್ಲಿ ಮಹಾಭೈರವ ಸಂಹಾರ ಭೈರವ ಅಸಿತಾಂಗ ಭೈರವ ರುರುಭೈರವ ಕಾಲಭೈರವ ಕ್ರೋಧಭೈರವ ತಾಮ್ರಚೂಡ ಭೈರವ ಚಂದ್ರಚೂಡ ಭೈರವರನ್ನು ಪೂಜಿಸಿ ಅವರ ನಡುವೆ ಎಂಟು ದಳಗಳಲ್ಲಿ ಮತ್ತು ಮಧ್ಯದಲ್ಲಿ ಬ್ರಹ್ಮಾಣೀ ವೈಷ್ಣವೀ ರೌದ್ರೀ ಮಾಹೇಶ್ವರೀ ನಾರಸಿಂಹೀ ವಾರಾಹೀ ಇಂದ್ರಾಣೀ ಕಾರ್ತಿಕೀ ಸರ್ವಮಂಗಲಾ ಎಂಬ ನವಶಕ್ತಿಗಳನ್ನು ಪೂಜಿಸಬೇಕು.

ಬಳಿಕ ಕಲಶದಲ್ಲಿ ಶಿವ ಷಣ್ಮುಖ ಸೂರ್ಯ ಚಂದ್ರ ಅಗ್ನಿ ವಾಯು ವರುಣ ದೇವಿಯ ಚೇಟಿ ವಟು ಚತುಃಷಷ್ಟಿ ಯೋಗಿನಿಯರು ಇವರನ್ನು ಪೂಜಿಸಿ ಯಥಾಶಕ್ತಿ ಬಲಿನೀಡಿ ಸ್ತೋತ್ರಮಾಡಬೇಕು. ಕವಚಧಾರಣ ಮಾಡಿ ಸ್ತೋತ್ರ ನಮಸ್ಕಾರಗಳನ್ನು ಅರ್ಪಿಸಬೇಕು. ದೇವಿಗೆ ಬಲಿ ಕೊಡುವುದಾದರೆ ಪಿಷ್ಟದಿಂದ ಪಶುವನ್ನು

ಮಾಡಿಕೊಡಬೇಕು. ಪಿಷ್ಟಪಶುಗಳಿಂದ ಆರುತಿಂಗಳು, ಆರುತಿಂಗಳ ದೇವಿಗೆ ತೃಪ್ತಿ. ಪಕ್ವಫಲಗಳಿಂದ ಒಂದು ತಿಂಗಳು ದೇವಿಗೆ ತೃಪ್ತಿ.

ಮನುಷ್ಯ ಪಶುವಿನ ಸ್ವರೂಪ ಅಥರ್ವವೇದೋಕ್ತವಾದುದು ಹೀಗಿದೆ— ಆ ಮನುಷ್ಯನಿಗೆ ತಂದೆ ತಾಯಿಗಳಿರಕೂಡದು. ಯುವಕನಾಗಿರಬೇಕು. ವ್ಯಾಧಿವರ್ಜಿತನಾಗಿರಬೇಕು. ವಿವಾಹಿತ ದೀಕ್ಷಿತನೂ ಆಗಿರಬೇಕು. ಪರಸ್ತ್ರೀ ಸಂಗಿಯಾಗಿರಬಾರದು. ವ್ಯಭಿಚಾರದಿಂದ ಹುಟ್ಟಿದವನಾಗಿರಬಾರದು, ಶುದ್ಧನಾಗಿರಬೇಕು. ಸಚ್ಛೂದ್ರನಿಂದ ಪೋಷಿತನಾಗಿರಬೇಕು. ಇಂಥ ಮನುಷ್ಯನ ಬಂಧುಗಳಿಗೆ ಅವರು ಕೇಳಿದ್ದಕ್ಕಿಂತಲೂ ಹೆಚ್ಚು ಹಣಕೊಟ್ಟು ಅವನನ್ನು ಕೊಂಡುಕೊಳ್ಳಬೇಕು. ಸ್ನಾನಮಾಡಿಸಿ ವಸ್ತ್ರ ಗಂಧಮಾಲ್ಯ ಧೂಪ ಕುಂಕುಮ ಮೊಸರು ಗೋರೋಚನಾದಿಗಳಿಂದ ಪೂಜಿಸಿ ಒಂದು ವರ್ಷ ಸೇವಕರ ಮೂಲಕ ತೀರ್ಥಕ್ಷೇತ್ರ ಸಂಚಾರ ಮಾಡಿಸಿ ವರ್ಷದ ಕೊನೆಯಲ್ಲಿ ಉತ್ಸರ್ಜನ ಪೂರ್ವಕವಾಗಿ ದೇವಿಗೆ ಸಮರ್ಪಿಸಬೇಕು. ಹೊರತು ಕೊಲ್ಲಕೂಡದು. ಅಷ್ಟಮೀ ನವಮೀ ತಿಥಿಗಳ ಸಂಧಿಯಲ್ಲಿ ಈ ನರಬಲಿ ಕೊಡಬೇಕು. ಬಲಿಪಶುವನ್ನು ಮೊದಲಿಗೆ ಸ್ತುತಿಸಿ ಅದನ್ನು ದೇವಿಗೆ ಸಮರ್ಪಿಸಿ ಕವಚಧಾರಣ ಮಾಡಬೇಕು. ದಂಡಪ್ರಣಾಮ ಮಾಡಬೇಕು. ವಿಪ್ರರಿಗೆ ದಕ್ಷಿಣೆ ನೀಡಬೇಕು. ದೇವಿಯ ಉದ್ದೇಶದಿಂದ ಮನುಷ್ಯರನ್ನಾಗಲಿ ಪಶುವನ್ನಾಗಲಿ ಬಲಿ ಎಂದು ಕೊಲ್ಲಕೂಡದು.

**ಇಲ್ಲಿಗೆ ಶ್ರೀ ಬ್ರಹ್ಮವೈವರ್ತ ಮಹಾಪುರಾಣದಲ್ಲಿ ಎರಡನೆಯದಾದ ಪ್ರಕೃತಿಖಂಡದ ನಾರದನಾರಾಯಣ ಸಂವಾದದಲ್ಲಿ ದುರ್ಗೋಪಾಖ್ಯಾನದಲ್ಲಿ ಪೂಜಾವಿಧಿ ಬಲಿಪಶು ಲಕ್ಷಣವಿಶೇಷವೆಂಬ ಅರವತ್ತನಾಲ್ಕನೆ ಅಧ್ಯಾಯ ಮುಗಿಯಿತು.**

## ಪ್ರಕೃತಿ ಸುರಥ ಸಂವಾದ ಜ್ಞಾನ ಕಥನ ಅಧ್ಯಾಯ-೬೫

ನಾರದ— ದೇವಿಯ ಸ್ತೋತ್ರಕವಚಗಳನ್ನೂ ಪೂಜಾಫಲ ಪೂಜಾಕಾಲಗಳನ್ನೂ ಹೇಳು.

ನಾರಾಯಣ— ಆರ್ದ್ರಾನಕ್ಷತ್ರದಲ್ಲಿ ದೇವಿಯನ್ನು ಬೋಧನೆಗೊಳಿಸಿ ಮೂಲಾ-ನಕ್ಷತ್ರದಲ್ಲಿ ಆವಾಹಿಸಿ ಉತ್ತರಾನಕ್ಷತ್ರದಲ್ಲಿ ಪೂಜಿಸಿ ಶ್ರವಣ ನಕ್ಷತ್ರದಲ್ಲಿ ವಿಸರ್ಜಿಸಬೇಕು.

ಆರ್ದ್ರಾಯುಕ್ತವಾದ ನವಮಿಯಲ್ಲಿ ದೇವಿಯ ಬೋಧನೆ ಮಾಡಿದರೆ ನೂರುವರ್ಷದ ಪೂಜೆಯ ಫಲ ಸಿಗುವುದು. ಮೂಲಾನಕ್ಷತ್ರದಲ್ಲಿ ಆವಾಹನೆ ಮಾಡಿದರೆ ನರಮೇಧಯಾಗದ ಫಲ. ಉತ್ತರಾನಕ್ಷತ್ರದಲ್ಲಿ ಪೂಜೆ ಮಾಡಿದರೆ ವಾಜಪೇಯ ಯಾಗದ ಫಲ. ಶ್ರವಣ ನಕ್ಷತ್ರದಲ್ಲಿ ವಿಸರ್ಜನೆ ಮಾಡುವುದರಿಂದ ಸಂಪತ್ತನ್ನೂ ಪುತ್ರಪೌತ್ರ ಸಂತತಿಯನ್ನೂ ಪಡೆಯುತ್ತಾನೆ. ಭೂಪ್ರದಕ್ಷಿಣೆಯ ಫಲವನ್ನೂ ಪಡೆಯುತ್ತಾನೆ.

ನವಮ್ಯಾದಿ ತಿಥಿಗಳಿಗೆ ಆರ್ದ್ರಾದಿ ನಕ್ಷತ್ರಗಳ ಯೋಗ ಸಿಗದಿದ್ದರೂ ಕೇವಲ ನವಮಿಯಲ್ಲಿ ಬೋಧನೆ ಮಾಡಿ ಒಂದು ಪಕ್ಷಕಾಲ ಪೂಜಿಸಿ ದಶಮೀದಿನ ವಿಸರ್ಜಿಸಬೇಕು. ಅಶ್ವಮೇಧಯಾಗದ ಫಲ ಸಿಗುತ್ತದೆ. ಬಲಿಯನ್ನು ಸಪ್ತಮೀದಿನ ಪೂಜಾನಂತರದಲ್ಲಿ ಕೊಡಬೇಕು. ಅಷ್ಟಮೀದಿನ ಕೇವಲ ಪೂಜೆ. ಅಂದು ಬಲಿದಾನ ಕೊಡಕೂಡದು. ಕೊಟ್ಟರೆ ಆಪತ್ತು ಬರುವುದು. ನವಮಿಯಂದೂ ವಿಧ್ಯುಕ್ತವಾಗಿ ಬಲಿಕೊಡಬೇಕು.

ಬಲಿದಾನದಿಂದ ದುರ್ಗೆಗೆ ಪ್ರೀತಿಯಾಗುವುದು, ನಿಜ. ಆದರೂ ಅದು ರಾಜಸ. ಸಾತ್ವಿಕವಲ್ಲ. ಯಜ್ಞಕರ್ಮದಲ್ಲಿಯೂ ಹಿಂಸಾಜನ್ಯಪಾಪವಿದೆ. ಏಕೆಂದರೆ ಉತ್ಸರ್ಜನೆ ಮಾಡುವವನು, ದಾನ ಮಾಡುವವನು, ಕಡಿಯುವವನು, ಪೋಷಿಸುವವನು, ರಕ್ಷಿಸು-ವವನು, ಯೂಪದಲ್ಲಿ ಮುಂದೆ ಬಂಧಿಸುವವನು, ಹಿಂದೆ ಬಂಧಿಸುವವನು ಈ ಏಳು ಮಂದಿಯೂ ವಧಕರ್ತೃಗಳೇ ಆಗುವರು. ಈ ಜನ್ಮದಲ್ಲಿ ಈತ ಪಶುವನ್ನು ಕೊಂದರೆ ಮುಂದಿನ ಜನ್ಮದಲ್ಲಿ ಪಶು ಈತನನ್ನು ಕೊಲ್ಲುತ್ತದೆ ಎಂದು ವೇದದಲ್ಲಿ ಹೇಳಿದೆ. ಅದರಿಂದಲೆ ವೈಷ್ಣವರು ಹಿಂಸಾರಹಿತವಾದ ಸಾತ್ವಿಕ ವೈಷ್ಣವಪೂಜೆ ಮಾಡುವರು. ಅದರಿಂದಲೇ ದೇವ ದೇವಿಯರು ಪ್ರೀತರಾಗುವರು.

ಸುರಥರಾಜ ಒಂದು ವರ್ಷ ಭಕ್ತಿಯಿಂದ ದುರ್ಗೆಯನ್ನಾರಾಧಿಸಿ ಸಾಕ್ಷಾತ್ಕರಿಸಿ-ಕೊಂಡ. ದೇವಿ ಗ್ರೀಷ್ಮಕಾಲದ ಸೂರ್ಯನಂತೆ ತೇಜಃಸ್ವರೂಪಳಾಗಿ ಮನೋಹರ-ರೂಪದಿಂದ ಪ್ರತ್ಯಕ್ಷಳಾದಳು. ರಾಜ ಭಕ್ತಿಯಿಂದ ತಲೆಬಾಗಿ ಸ್ತೋತ್ರ ಮಾಡಿದ.

ಸಂತುಷ್ಟಳಾದ ದೇವಿ ದಯೆಯಿಂದ ನುಡಿದಳು— ರಾಜನೆ, ನಾನು ಸಾಕ್ಷಾತ್ತಾಗಿ ಬಂದು ನಿಂತಿರುವಾಗ ನೀನು ಸಂಪತ್ತನ್ನು ಬೇಡುತ್ತಿರುವೆ. ಆದರೂ ಈಗ ನಾನು ನಿನಗೆ ನೀನು ಬಯಸಿದ ಸಂಪತ್ತನ್ನು ಕೊಡುತ್ತೇನೆ. ನೀನು ಎಲ್ಲ ಶತ್ರುಗಳನ್ನು ಗೆದ್ದು ನಿಷ್ಕಂಟಕವಾದ ರಾಜ್ಯವಾಳಿ ಎಂಟನೆಯವನಾದ ಸಾವರ್ಣಿ ಮನುವಾಗುವೆ. ಜೊತೆಗೆ ಜ್ಞಾನವನ್ನೂ ನೀಡುತ್ತೇನೆ. ಆದರಿಂದ ಮುಂದೆ ಮುಕ್ತಿಯನ್ನೂ ಶ್ರೀಕೃಷ್ಣನ ದಾಸ್ಯವನ್ನೂ ನೀಡುತ್ತೇನೆ.

ನನ್ನನ್ನು ಪ್ರತ್ಯಕ್ಷ ಕಂಡೂ ಸಂಪತ್ತನ್ನು ಬೇಡುವ ಮಂದಬುದ್ಧಿಯವನು ಮಾಯೆಯಿಂದ ವಂಚಿತನಾಗಿರುತ್ತಾನೆ. ಆದರಿಂದಲೆ ವಿಷ್ಣುಭಕ್ತಿಯನ್ನು ಬಿಡುತ್ತಾನೆ. ಆದರೆ ನಾನೊಲಿದರೆ ಜ್ಞಾನಭಕ್ತಿಗಳನ್ನು ನೀಡುತ್ತೇನೆ.

ಬ್ರಹ್ಮನಿಂದ ತೊಡಗಿ ಹುಲ್ಲುಕಡ್ಡಿಯವರೆಗಿನ ಈ ಸಮಸ್ತ ಪ್ರಪಂಚವೂ ನಶ್ವರ. ಕೃಷ್ಣಪರಮಾತ್ಮನೊಬ್ಬನೆ ಶಾಶ್ವತ. ನಾನು ಬ್ರಹ್ಮ ವಿಷ್ಣು ಶಿವಾದಿಗಳಿಗೆ ಕಾರಣಳು. ಮೂಲಪ್ರಕೃತಿ. ಪ್ರಪಂಚಸೃಷ್ಟಿಗೆ ಬೀಜರೂಪಳು. ಗೋಲೋಕದ ರಾಸಮಂಡಲದ ವೃಂದಾವನದಲ್ಲಿ ಕೃಷ್ಣನ ಪ್ರಾಣಾಧಿಕಳಾದ ರಾಧೆ ನಾನೆ. ವಿಷ್ಣುಮಯೆ. ಬುದ್ಧಿಯ ಅಧಿಷ್ಠಾತ್ರಿ ನಾನೆ. ವೈಕುಂಠದಲ್ಲಿ ಲಕ್ಷ್ಮಿಯೂ ಸರಸ್ವತಿಯೂ ನಾನೆ. ಬ್ರಹ್ಮಲೋಕದಲ್ಲಿ ವೇದಮಾತೆ ಸರಸ್ವತಿ ನಾನೆ. ಗಂಗಾ ತುಲಸಿ ವಸುಂಧರೆಯರೂ ನಾನೆ. ಎಲ್ಲ ಸ್ತ್ರಿಯಲ್ಲಿಯೂ ಒಂದೊಂದು ಅಂಶದಿಂದ ನಾನಿದ್ದೇನೆ. ಕೃಷ್ಣ ತನ್ನ ಹುಬ್ಬಿನ ಕುಣಿತದಿಂದಲೆ ನನ್ನನ್ನು ಬಹುರೂಪಗಳಿಂದ ಸೃಷ್ಟಿಸಿದ್ದಾನೆ. ರೋಮಕೂಪದಲ್ಲಿ ವಿಶ್ವವನ್ನೆ ಧರಿಸುವ ಮಹಾವಿರಾಟ್ ಪುರುಷನನ್ನೂ ಕೃಷ್ಣನೆ ತನ್ನ ಹುಬ್ಬಿನ ಕುಣಿತದಿಂದ ಸೃಷ್ಟಿಸಿದ್ದಾನೆ. ಸಪ್ತಸಾಗರಯುಕ್ತವಾದ ಸಪ್ತದ್ವೀಪಾತ್ಮಕ ಭೂಲೋಕ ಕೆಳಗೆ ಸಪ್ತಪಾತಾಳಲೋಕಗಳು ಮೇಲೆ ಸಪ್ತಸ್ವರ್ಗಲೋಕಗಳು ಹೀಗೆ ವಿಸ್ತಾರವಾದ ಬ್ರಹ್ಮಾಂಡ, ಅದರೊಳಗೆ ಸೃಷ್ಟರಾದ ಬ್ರಹ್ಮ ವಿಷ್ಣು ಶಿವಾದಿಗಳು ಇವೆಲ್ಲಕ್ಕೂ ಕೃಷ್ಣನೆ ಒಡೆಯನೆಂಬ ಜ್ಞಾನವೆ ಅತ್ಯುತ್ತಮ.

ವೇದಾನಾಂ ಚ ವ್ರತಾನಾಂ ಚ ತೀರ್ಥಾನಾಂ ತಪಸಾಂ ತಥಾ ।
ದೇವಾನಾಂ ಚೈವ ಸರ್ವೇಷಾಂ ಸಾರಃ ಕೃಷ್ಣ ಇತಿ ಸ್ಮೃತಃ ।
ತದ್ಭಕ್ತಿಹೀನೋ ಯೋ ಮೂಢಃ ಸ ಚ ಜೀವನ್ಮೃತೋ ಧ್ರುವಂ ।

ಸಕಲ ವೇದಾಧ್ಯಯನ, ವ್ರತಾನುಷ್ಠಾನ ತೀರ್ಥಸ್ನಾನ ತಪಸ್ಸು ದೇವತಾರಾಧನೆಗಳಿಗೂ ಪರಮಧ್ಯೇಯ ಕೃಷ್ಣಭಕ್ತಿಯೊಂದೇ. ಅದಿಲ್ಲದ ಮೂಢ ಜೀವನ್ಮೃತನೆ ಸರಿ.

ವಿಷ್ಣುಭಕ್ತನನ್ನು ಸ್ಪರ್ಶಿಸಿದ ವಾಯುವಿನ ಸ್ಪರ್ಶದಿಂದ ತೀರ್ಥಗಳು ಪವಿತ್ರವಾಗುತ್ತವೆ. ವಿಷ್ಣುಮಂತ್ರ, ಗ್ರಹಣ ಮಾತ್ರದಿಂದಲೆ ನರ ನಾರಾಯಣನಾಗುತ್ತಾನೆ.

ಜಪ ತಪ ತೀರ್ಥಯಾತ್ರೆ ಪೂಜೆಗಳಿಂದೇನು ? ಪಿತೃಮಾತೃಗಳ ಕಡೆಯ ಸಾವಿರಮಂದಿ ಪೂರ್ವಜರನ್ನು ವಿಷ್ಣುಭಕ್ತ ಉದ್ಧರಿಸಿ ತಾನು ಗೋಲೋಕಕ್ಕೆ ಹೋಗುತ್ತಾನೆ.

ಇದು ಉತ್ತಮವಾದ ಜ್ಞಾನ. ಇನ್ನು ಮನ್ವಂತರದ ಕೊನೆಯಲ್ಲಿ ವಿಷ್ಣುಭಕ್ತಿಯನ್ನೂ ನೀಡುತ್ತೇನೆ. ಅಂದಿನವರೆಗೆ ನಿನ್ನ ಪ್ರಾರಬ್ಧ ಕರ್ಮ ಅನುಭವಿಸಲೆ ಬೇಕು.

ನಾನು ಒಲಿದರೆ ಹೀಗೆ ತತ್ವಜ್ಞಾನ ನೀಡುತ್ತೇನೆ. ಮುನಿದರೆ ವಂಚಿಸಿ ಕೇವಲ ಲೌಕಿಕ ಸಂಪತ್ತನ್ನು ನೀಡುತ್ತೇನೆ. ಅದು ಹಗಲುಗನಸಿನಂತೆ ಕೇವಲ ಭ್ರಮೆ-ಯಾಗಿರುತ್ತದೆ.

ಹೀಗೆ ಹೇಳಿ ದೇವಿ ಅಂತರ್ಧಾನಳಾದಳು. ರಾಜ ದೇವಿಯಿಂದ ವರ ಪಡೆದು ಮನೆಗೆ ತೆರಳಿದ. ನಾರದ, ಇದು ದುರ್ಗೋಪಾಖ್ಯಾನ.

**ಇಲ್ಲಿಗೆ ಶ್ರೀ ಬ್ರಹ್ಮವೈವರ್ತ ಮಹಾಪುರಾಣದಲ್ಲಿ ಎರಡನೆಯದಾದ ಪ್ರಕೃತಿಖಂಡದ ನಾರದನಾರಾಯಣ ಸಂವಾದದಲ್ಲಿ ದುರ್ಗೋಪಾಖ್ಯಾನದಲ್ಲಿ ಪ್ರಕೃತಿಸುರಥ ಸಂವಾದದಲ್ಲಿ ಜ್ಞಾನಕಥನವೆಂಬ ಅರವತ್ತೈದನೆ ಅಧ್ಯಾಯ ಮುಗಿಯಿತು.**

## ದುರ್ಗಾಸ್ತೋತ್ರ

**ಅಧ್ಯಾಯ-೬೬**

ನಾರದ— ಎಲ್ಲವನ್ನೂ ಕೇಳಿದ್ದಾಯಿತು. ಇನ್ನು ದುರ್ಗೆಯ ಕವಚಸ್ತೋತ್ರಗಳನ್ನು ಮಾತ್ರ ಹೇಳು.

ನಾರಾಯಣ— ಹಿಂದೆ ಗೋಲೋಕದಲ್ಲಿ ವಸಂತಮಾಸದಲ್ಲಿ ಕೃಷ್ಣ ದುರ್ಗೆ-ಯನ್ನು ಸ್ತುತಿಸಿದ್ದ. ಬಳಿಕ ಎರಡನೆ ಬಾರಿ ಮಧುಕೈಟಭರೊಡನೆ ಯುದ್ಧ ಮಾಡುವಾಗ ವಿಷ್ಣು ಸ್ತುತಿಸಿದ. ಅದೇ ಸಂದರ್ಭದಲ್ಲಿ ಬ್ರಹ್ಮನೂ ಪ್ರಾಣಸಂಕಟದಲ್ಲಿ ನನ್ನ ಸ್ತುತಿಸಿದ. ನಾಲ್ಕನೆ ಬಾರಿ ತ್ರಿಪುರರೊಡನೆ ಅತ್ಯಂತ ಘೋರಯುದ್ಧ ಮಾಡುವಾಗ ಶಿವ ನನ್ನನ್ನು ಸ್ತುತಿಸಿದ. ಐದನೇ ಬಾರಿ ಇಂದ್ರ ವೃತ್ರವಧಕಾಲದಲ್ಲಿ ನನ್ನನ್ನು ಸ್ತುತಿಸಿದ. ಅಂದಿನಿಂದ ಕಲ್ಪಕಲ್ಪಗಳಲ್ಲಿ ಮುನಿಗಳು ಮನುಗಳು ಮಾನವರು ನನ್ನನ್ನು ಪೂಜಿಸಿ ಸ್ತುತಿಸಿದರು. ಮೋಕ್ಷದಾಯಕವಾದ ಆ ಸ್ತೋತ್ರವನ್ನು ಹೇಳುತ್ತೇನೆ ಕೇಳು.

'ದೇವಿ, ನೀನೆ ಜಗನ್ಮಾತೆ. ಮೂಲಪ್ರಕೃತಿ, ತ್ರಿಗುಣಾತ್ಮಕಳು. ಸೃಷ್ಟಿಗೆ ಮೊದಲಿಗಳು. ನಿರ್ಗುಣಳಾಗಿದ್ದರೂ ಸೃಷ್ಟ್ಯಾದಿಕಾರ್ಯಗಳಿಗಾಗಿ ಗುಣಗಳನ್ನು

ಸ್ವೀಕರಿಸುವೆ. ತೇಜಸ್ಸ್ವರೂಪಳು. ಭಕ್ತರನ್ನು ಅನುಗ್ರಹಿಸಲು ನಾನಾ ರೂಪ ಧರಿಸುವವಳು. ಸರ್ವಪೂಜ್ಯಳು. ಸರ್ವಜ್ಞಳು. ಸರ್ವಮಂಗಲ ದಾಯಕಳು. ಸರ್ವರಿಗೂ ಜ್ಞಾನಪ್ರದಳು. ದೇವತೆಗಳಿಗೆ ಸ್ವಾಹೆ, ಪಿತೃಗಳಿಗೆ ಸ್ವಧೆ, ಸರ್ವದಾನಗಳಲ್ಲಿ ದಕ್ಷಿಣೆ ನೀನೆ. ನಿದ್ರಾ ದಯಾ ಕ್ಷುತ್ ಕ್ಷಾಂತಿ ಶಾಂತಿ ಕಾಂತಿ ಸೃಷ್ಟಿ ತಂದ್ರಾ ಲಜ್ಜಾ ಶೋಭಾರೂಪಳಾಗಿ ಎಲ್ಲೆಡೆ ನೀನಿರುವೆ. ಸಜ್ಜನರಿಗೆ ಸಂಪತ್ತೂ ದುರ್ಜನರಿಗೆ ವಿಪತ್ತೂ ನೀನೆ. ಪುಣ್ಯವಂತರಿಗೆ ಪ್ರೀತಿ ಪಾಪಿಗಳಿಗೆ ಕಲಹರೂಪಳು ನೀನೆ. ಎಲ್ಲ ಜೀವಿಗಳಲ್ಲಿ ಕರ್ಮಶಕ್ತಿ ನೀನೆ. ದೇವತೆಗಳಿಗೆ ತಮ್ಮ ಪದವಿ ನೀಡುವವಳು, ದೇವಹಿತಕ್ಕಾಗಿ ಅಸುರರನ್ನು ಕೊಲ್ಲುವವಳು ದಯಾಮಯಿಯಾದ ನೀನೆ. ಯೋಗನಿದ್ರೆ ನೀನೆ. ಯೋಗಿಗಳಿಗೆ ಯೋಗದಾಯಕಳು ನೀನೆ. ಸಿದ್ಧರಿಗೆ ಸಿದ್ಧಿದಾಯಕಳೂ ನೀನೆ.

ಬ್ರಹ್ಮಾಣೀ ಮಾಹೇಶ್ವರೀ ವಿಷ್ಣುಮಾಯಾ ವೈಷ್ಣವೀ ಭದ್ರಕಾಲಿ ಎಂದು ಮುಂತಾಗಿಯೂ ಗ್ರಾಮಗ್ರಾಮಗಳಲ್ಲಿ ಗ್ರಾಮದೇವತೆಯಾಗಿಯೂ ಪ್ರತಿಗೃಹದಲ್ಲಿ ಗೃಹದೇವತೆಯಾಗಿಯೂ ಪೂಜಿಸಲ್ಪಡುವವಳು. ಸಜ್ಜನರ ಕೀರ್ತಿಪ್ರತಿಷ್ಠೆಗಳೂ ದುರ್ಜನರ ಅಪಕೀರ್ತಿಯೂ ನೀನೆ. ಮಹಾಯುದ್ಧದಲ್ಲಿ ದುಷ್ಟಸಂಹಾರ ಮಾಡುವ ಮಹಾಮಾರಿ ನೀನೆ. ಸಜ್ಜನರ ರಕ್ಷಣೆ ಮಾಡುವ ತಾಯಿ ನೀನೆ. ಸಜ್ಜನರ ವಿದ್ಯೆ ಬುದ್ಧಿ ಮೇಧೆ ಸ್ಮೃತಿ ಪ್ರತಿಭೆಗಳೆಲ್ಲ ನೀನೆ. ರಾಜರಲ್ಲಿ ಪ್ರತಾಪ, ವೈಶ್ಯರಲ್ಲಿ ವಾಣಿಜ್ಯಶಕ್ತಿ ನೀನೆ. ಸೃಷ್ಟಿಕಾಲದಲ್ಲಿ ಸೃಷ್ಟಿ, ಪಾಲನಕಾಲದಲ್ಲಿ ಪಾಲನೆ, ಲಯಕಾಲದಲ್ಲಿ ಮಹಾಮಾರಿ ನೀನೆ. ಕಾಲರಾತ್ರಿ ಮಹಾರಾತ್ರಿ ಮೋಹರಾತ್ರಿ ಸ್ವರೂಪಳು ನೀನೆ. ಯಾರೂ ಮೀರಲಾರದ ವಿಷ್ಣುಮಾಯೆ ನೀನು. ನಿನ್ನಿಂದ ಮೋಹಿತರಾದವರು ಯಾರೂ ಮೋಕ್ಷಮಾರ್ಗ ಕಾಣರು.'

ಹೀಗೆ ಶ್ರೀಕೃಷ್ಣ ಮಾಡಿದ ದುರ್ಗಾಸ್ತೋತ್ರವನ್ನು ಪೂಜಾಕಾಲದಲ್ಲಿ ಪಠಿಸುವವನು ತನ್ನ ಎಲ್ಲ ಅಭೀಷ್ಟಗಳನ್ನೂ ಪಡೆಯುತ್ತಾನೆ.

ಬಂಜೆಯೂ, ಏಕಮಾತ್ರ ಪುತ್ರಳೂ, ಮೃತಪುತ್ರಳೂ, ಒಂದು ವರ್ಷ ಈ ಸ್ತೋತ್ರಶ್ರವಣ ಮಾಡಿದರೆ ಸತ್ಪುತ್ರರನ್ನು ಪಡೆಯುವಳು. ಬಂಧನದಲ್ಲಿರುವವರು ಒಂದು ತಿಂಗಳು ಶ್ರವಣಮಾಡಿದರೆ ಬಂಧಮುಕ್ತರಾಗುವರು. ಕ್ಷಯ ಕುಷ್ಠ ಶೂಲ ಮಹಾಜ್ವರಗಳಲ್ಲಿ ಒಂದು ವರ್ಷ ಶ್ರವಣದಿಂದ ರೋಗಪರಿಹಾರ. ಪತ್ನೀ ಪುತ್ರರ ಪ್ರಜೆಗಳ ವಿಯೋಗದಲ್ಲಿ ಒಂದು ತಿಂಗಳ ಶ್ರವಣದಿಂದ ವಿಯೋಗ ಪರಿಹಾರ. ರಾಜದ್ವಾರ ಸ್ಮಶಾನ ಮಹಾ ಅರಣ್ಯ ಯುದ್ಧರಂಗ ಹಿಂಸ್ರ ಜಂತು ಪ್ರದೇಶಗಳಲ್ಲಿ ಈ ಸ್ತೋತ್ರ ಶ್ರವಣದಿಂದ ಕಷ್ಟ ಪರಿಹಾರ. ಮನೆ ಸುಟ್ಟಾಗ, ಕಾಳ್ಗಿಚ್ಚು ಉರಿದಾಗ

ಶತ್ರುಸೈನ್ಯ ಮುತ್ತಿದಾಗ ಈ ಸ್ತೋತ್ರಶ್ರವಣ ಮಾಡಿದರೆ ಭಯವಿಲ್ಲ. ಮಹಾ-ದರಿದ್ರನೂ ಮೂರ್ಖನೂ ಒಂದು ವರ್ಷ ಪಠನದಿಂದ ವಿದ್ಯಾವಂತನೂ ಧನಿಕನೂ ಆಗುತ್ತಾನೆ. ಸಂಶಯವಿಲ್ಲ.

**ಇಲ್ಲಿಗೆ ಶ್ರೀ ಬ್ರಹ್ಮವೈವರ್ತ ಮಹಾಪುರಾಣದಲ್ಲಿ ಎರಡನೆಯದಾದ ಪ್ರಕೃತಿಖಂಡದ ನಾರದನಾರಾಯಣ ಸಂವಾದದಲ್ಲಿ ದುರ್ಗೋಪಾಖ್ಯಾನದಲ್ಲಿ ದುರ್ಗಾಸ್ತೋತ್ರವೆಂಬ ಅರವತ್ತಾರನೆ ಅಧ್ಯಾಯ ಮುಗಿಯಿತು.**

## ಬ್ರಹ್ಮಾಂಡಮೋಹನ ಕವಚ

**ಅಧ್ಯಾಯ-೬೭**

ನಾರದ— ಭಗವನ್, ಬ್ರಹ್ಮಾಂಡಮೋಹಕವಾದ ದುರ್ಗಾಕವಚವನ್ನು ಉಪದೇಶಿಸು.

ನಾರಾಯಣ— ಮಗು, ಕೇಳು, ದುರ್ಲಭವಾದ ದುರ್ಗಾಕವಚವನ್ನು ಕೃಷ್ಣನೆ ಹಿಂದೆ ಬ್ರಹ್ಮನಿಗೆ ಉಪದೇಶಿಸಿದ್ದ. ಬ್ರಹ್ಮ ಧರ್ಮನಿಗೆ, ಧರ್ಮ ನನಗೆ ಅದನ್ನೆ ಉಪದೇಶಿಸಿದ್ದ. ಈ ಕವಚಧಾರಣದಿಂದಲೆ ಶಿವ ತ್ರಿಪುರರನ್ನು ಗೆದ್ದ. ಬ್ರಹ್ಮ ಮಧುಕೈಟಭರ ಭಯದಿಂದ ಮುಕ್ತನಾದ. ಭದ್ರಕಾಳಿ ರಕ್ತಬೀಜಾಸುರನನ್ನು ಕೊಂದಳು. ದೇವೇಂದ್ರ ಲಕ್ಷ್ಮಿಯನ್ನು ಪಡೆದ. ಮಹಾಕಾಲ ಚಿರಂಜೀವಿಯಾದ. ನಂದಿ ಮಹಾಜ್ಞಾನಿಯಾದ. ರಾಮ ಮಹಾಯೋಧನೆನಿಸಿದ. ದುರ್ವಾಸ ಶಿವನಂತೆ ಮಹಾಜ್ಞಾನಿಯಾದ.

'ಓಂ ದುರ್ಗಾಯೈ ಸ್ವಾಹಾ' ಎಂಬ ಷಡಕ್ಷರ ಮಂತ್ರ ಕಲ್ಪವೃಕ್ಷದಂತೆ ಇದೆ. ಇದನ್ನು ಉಪದೇಶ ಪಡೆದ ಮಾತ್ರಕ್ಕೆ ಮಾನವ ಶಿವನಂತಾಗುತ್ತಾನೆ.

'ಓಂ ದುರ್ಗಾಯೈ ಸ್ವಾಹಾ' ಎಂಬ ಈ ಮಂತ್ರ ನನ್ನ ಶಿರಸ್ಸನ್ನು ಕಾಪಾಡಲಿ.
'ಓಂ ದುರ್ಗಾಯೈ ನಮಃ' ಮುಖವನ್ನು ಕಾಪಾಡಲಿ.
'ಓಂ ದುರ್ಗೇ ರಕ್ಷ' ಕಂಠವನ್ನು ಕಾಪಾಡಲಿ.
'ಓಂ ಹ್ರೀಂ ಶ್ರೀಂ' ಹೆಗಲನ್ನು ರಕ್ಷಿಸಲಿ.
'ಓಂ ಹ್ರೀಂ ಶ್ರೀಂ ಕ್ಲೀಂ'. ಬೆನ್ನನ್ನು ರಕ್ಷಿಸಲಿ.
'ಹ್ರೀಂ' ಎದೆಯನ್ನು ರಕ್ಷಿಸಲಿ.
'ಶ್ರೀಂ' ಕೈಯನ್ನು ಕಾಪಾಡಲಿ.
'ಓಂ ಶ್ರೀಂ ಹ್ರೀಂ ಕ್ಲೀಂ' ಸರ್ವಾಂಗಗಳನ್ನು ರಕ್ಷಿಸಲಿ.

ಪೂರ್ವದಲ್ಲಿ ಪ್ರಕೃತಿ, ಆಗ್ನೇಯದಲ್ಲಿ ಚಂಡಿಕಾ, ದಕ್ಷಿಣದಲ್ಲಿ ಭದ್ರಕಾಳಿ, ನೈಋತ್ಯದಲ್ಲಿ ಮಹೇಶ್ವರಿ, ಪಶ್ಚಿಮದಲ್ಲಿ ವಾರಾಹಿ, ವಾಯವ್ಯದಲ್ಲಿ ಸರ್ವಮಂಗಲಾ, ಉತ್ತರದಲ್ಲಿ ವೈಷ್ಣವಿ, ಈಶಾನ್ಯದಲ್ಲಿ ಶಿವಪ್ರಿಯಾ, ಜಲಸ್ಥಲ ಅಂತರಿಕ್ಷಗಳಲ್ಲಿ ಜಗದಂಬಿಕೆ ನನ್ನನ್ನು ರಕ್ಷಿಸುತ್ತಿರಲಿ.

-ಈ ಕವಚ ಬಹಳ ದುರ್ಲಭ. ಯಾರಾರಿಗೋ ಉಪದೇಶಿಸುವಂಥದ್ದಲ್ಲ. ನೀನು ಯಾರಿಗೂ ಹೇಳಬೇಡ.

ಗುರುವನ್ನು ವಿಧ್ಯುಕ್ತವಾಗಿ ವಸ್ತ್ರಾಭರಣ ಗಂಧಗಳಿಂದ ಪೂಜಿಸಿ ಕವಚಧಾರಣ ಮಾಡಿದರೆ ವಿಷ್ಣುತುಲ್ಯನಾಗುತ್ತಾನೆ. ಸರ್ವತೀರ್ಥಾಟನ ಭೂಪ್ರದಕ್ಷಿಣಗಳ ಫಲ ಹೊಂದುತ್ತಾನೆ. ಐದುಲಕ್ಷ ಜಪದಿಂದ ಸಿದ್ಧಿಯಾಗುವುದು. ಸಿದ್ಧಕವಚನನ್ನು ಯಾವ ಶಸ್ತ್ರವೂ ಭೇದಿಸಲಾರದು. ನೀರಲ್ಲಾಗಲಿ ಬೆಂಕಿಯಲ್ಲಾಗಲಿ ಅವನ ಮರಣ ಸಂಭವಿಸದು. ಜೀವನ್ಮುಕ್ತನಾಗುತ್ತಾನೆ. ಸರ್ವಸಿದ್ಧಿ ಸಂಪನ್ನನಾಗುತ್ತಾನೆ.

ಇದು ಪ್ರಕೃತಿಖಂಡ. ಅಮೃತಕ್ಕಿಂತ ಹೆಚ್ಚು ಮಧುರ. ಈ ಮೂಲಪ್ರಕೃತಿ ಕೃಷ್ಣವ್ರತ ಮಾಡಿ ಗಣಪತಿಯನ್ನು ಮಗನನ್ನಾಗಿ ಪಡೆದಳು. ಕೃಷ್ಣನೆ ಒಂದಂಶದಿಂದ ಗಣೇಶನಾದ.

ಈ ಪ್ರಕೃತಿಖಂಡವನ್ನು ಶ್ರವಣಮಾಡಿ ಗುರುವಿಗೆ ದಧ್ಯನ್ನ ಸುವರ್ಣ-ಗೋದಾನಗಳನ್ನು ನೀಡಬೇಕು. ವಸ್ತ್ರಾಭರಣ ರತ್ನಗಳನ್ನೂ ಪುಷ್ಪಾಲಂಕಾರಗಳನ್ನೂ ಕೊಟ್ಟು ಸಂತೋಷ ಪಡಿಸಬೇಕು. ಪುಸ್ತಕವನ್ನೂ ಪೂಜಿಸಬೇಕು. ಹೀಗೆ ಮಾಡಿದರೆ ವಿಷ್ಣು ಪ್ರಸನ್ನನಾಗುತ್ತಾನೆ. ಪುತ್ರ ಪೌತ್ರಾದಿ ಸಂತತಿ ಯಶಸ್ಸು ಮತ್ತು ಸಂಪತ್ತು ಲಭಿಸುವುವು. ಕೃಷ್ಣಭಕ್ತಿಯೂ ಗೋಲೋಕದಲ್ಲಿ ಕೃಷ್ಣನ ದಾಸ್ಯವೂ ದೊರಕುವುದು.

**ಇಲ್ಲಿಗೆ ಶ್ರೀ ಬ್ರಹ್ಮವೈವರ್ತ ಮಹಾಪುರಾಣದಲ್ಲಿ ಎರಡನೆಯದಾದ ಪ್ರಕೃತಿಖಂಡದ ನಾರದನಾರಾಯಣ ಸಂವಾದದಲ್ಲಿ ದುರ್ಗೋಪಾಖ್ಯಾನ ಬ್ರಹ್ಮಾಂಡಮೋಹನ ಕವಚವೆಂಬ ಅರವತ್ತೇಳನೆ ಅಧ್ಯಾಯ ಮುಗಿಯಿತು.**

## ಪ್ರಕೃತಿಖಂಡ ಮುಗಿಯಿತು

# ಗಣಪತಿ ಖಂಡ

## ಶಿವಪಾರ್ವತಿಯರ ವಿಹಾರ. ಸ್ಕಂದನ ಜನನ

**ಅಧ್ಯಾಯ-೧**

ನಾರದ— ಅಮೃತದ ಸಾಗರದಂಥ ಪ್ರಕೃತಿಖಂಡವನ್ನು ಕೇಳಿದ್ದಾಯಿತು. ಅದು ಮಂದ ಬುದ್ಧಿಯವರಿಗೂ ಜ್ಞಾನವರ್ಧನ ಮಾಡುವಂತಿತ್ತು. ಈಗ ಶ್ರೀ ಗಣಪತಿ-ಖಂಡವನ್ನು ಕೇಳಬಯಸುತ್ತೇನೆ. ಗಣೇಶನ ಜನ್ಮ ಚರಿತ್ರೆ ಸರ್ವಮಂಗಳಕಾರಣ. ಆ ದೇವೋತ್ತಮ ಪಾರ್ವತಿಯ ಉದರದಲ್ಲಿ ಹೇಗೆ ಜನಿಸಿದ ? ಅಂಥ ಮಗನನ್ನು ದೇವಿ ಹೇಗೆ ಪಡೆದಳು ? ಅವನು ಯಾವ ದೇವತೆಯ ಅಂಶ ? ಅವನು ಗರ್ಭವಾಸ ಮಾಡಿ ಜನಿಸಿದನೆ, ಹಾಗೇ ಜನಿಸಿದನೆ ? ಅವನ ಬ್ರಹ್ಮತೇಜಸ್ಸು ಪರಾಕ್ರಮ ತಪಸ್ಸು ಜ್ಞಾನ ಯಶಸ್ಸುಗಳೇನು ? ನಾರಾಯಣ ಶಿವ ಬ್ರಹ್ಮರಿರುವಾಗ ಅವನಿಗೇ ಮೊದಲ ಪೂಜೆ ಲಭಿಸಲು ಕಾರಣವೇನು ? ಅವನ ಜನ್ಮವೃತ್ತಾಂತ ಪುರಾಣಗಳಲ್ಲಿ ನಿಗೂಢವಾಗಿದೆ. ಅವನಿಗೆ ಆನೆಯ ಮುಖ, ಏಕದಂತ, ದೊಡ್ಡ ಹೊಟ್ಟೆ ಬರಲು ಕಾರಣವೇನು. ಇವೆಲ್ಲವನ್ನೂ ವಿಸ್ತಾರವಾಗಿ ಹೇಳು. ಕೇಳಲು ಕುತೂಹಲ ಉಂಟಾಗಿದೆ.

ನಾರಾಯಣ— ನಾರದ, ಪಾಪ ಪರಿಹಾರಕ, ಸರ್ವವಿಘ್ನನಿವಾರಕ, ಮೋಕ್ಷ-ದಾಯಕವಾದ ಗಣೇಶನ ಜನ್ಮವೃತ್ತಾಂತವನ್ನು ಹೇಳುತ್ತೇನೆ, ಕೇಳು.

ದೈತ್ಯರ ಪೀಡೆಗೊಳಗಾದ ದೇವತೆಗಳ ತೇಜೋರಾಶಿಯಿಂದ ದೇವಿ ದುರ್ಗೆ ಪ್ರಾದುರ್ಭವಿಸಿ ದೈತ್ಯರನ್ನು ಸಂಹರಿಸಿದಳು. ದಕ್ಷ ಪುತ್ರಿ ಸತೀದೇವಿಯಾಗಿ ಜನಿಸಿ ಶಿವನನ್ನು ವರಿಸಿ ಪತಿನಿಂದೆ ಕೇಳಿ ತಡೆಯಲಾಗದೆ ಶರೀರತ್ಯಾಗ ಮಾಡಿ ಪಾರ್ವತಿ-ಯಾಗಿ ಜನಿಸಿದಳು. ಪರ್ವತರಾಜ ಪಾರ್ವತಿಯನ್ನು ಶಿವನಿಗೆ ಮದುವೆ ಮಾಡಿಕೊಟ್ಟ. ಶಿವ ದೇವಿಯೊಡನೆ ನರ್ಮದಾ ತೀರದ ಪುಷ್ಪೋದ್ಯಾನದಲ್ಲಿ ದೇವಮಾನದ ಸಾವಿರ-ವರ್ಷ ಪರ್ಯಂತ ವಿಹರಿಸಿದ. ಅನ್ಯೋನ್ಯ ಆಲಿಂಗನದಲ್ಲಿ ಇಬ್ಬರೂ ಮೈಮರೆತರು. ಹಂಸ ಕೋಗಿಲೆಗಳ ಧ್ವನಿ, ದುಂಬಿಗಳ ಇಂಚರ, ದಿವ್ಯ ಕುಸುಮಗಳ ಸುವಾಸನೆ, ಏಕಾಂತಸ್ಥಳ ಇವುಗಳಿಂದ ಉಲ್ಲಸಿತರಾದ ದಂಪತಿಗಳು ಹೂವಿನ ಹಾಸಿಗೆಯಲ್ಲಿ ಶೃಂಗಾರಲೀಲೆಯಲ್ಲಿ ಮಗ್ನರಾದುದನ್ನು ಕಂಡು ದೇವತೆಗಳು ಚಿಂತಾಕ್ರಾಂತರಾದರು. ಬ್ರಹ್ಮನನ್ನು ಮುಂದೆ ಮಾಡಿಕೊಂಡು ನಾರಾಯಣನ ಬಳಿಗೆ ಹೋದರು.

ಬ್ರಹ್ಮ ನಾರಾಯಣನಿಗೆ ನಮಿಸಿ ಹೇಳತೊಡಗಿದ. ದೇವತೆಗಳೆಲ್ಲರೂ ಚಿತ್ರದ ಬೊಂಬೆಗಳಂತೆ ನಿಂತರು.

ಬ್ರಹ್ಮ— ಜಗನ್ನಾಥ, ದೇವಮಾನದ ಸಾವಿರವರ್ಷಗಳು ಕಳೆದುವು. ಇನ್ನೂ ಶಿವ ಪಾರ್ವತಿಯೊಡನೆ ಶೃಂಗಾರಮಗ್ನನಾಗಿದ್ದಾನೆ. ಎಂಥ ಮಗು ಹುಟ್ಟುವುದೊ ! ನಮಗೆ ಚಿಂತೆಯಾಗಿದೆ.

ನಾರಾಯಣ— ಬ್ರಹ್ಮ, ನೀವೇನೂ ಚಿಂತಿಸಬೇಕಾಗಿಲ್ಲ. ಎಲ್ಲವೂ ಒಳ್ಳೆಯದಾಗುವುದು, ನನ್ನನ್ನು ಮೊರೆ ಹೊಕ್ಕವರಿಗೆ ಎಲ್ಲಿ ದುಃಖ ? ಈಗ ನೀವು ಶಿವನ ವೀರ್ಯ ನೆಲಕ್ಕೆ ಬೀಳುವ ಹಾಗೆ ಮಾಡಬೇಕು. ಈ ಕಾರ್ಯವನ್ನು ಉಪಾಯದಿಂದ ಸಾಧಿಸಬೇಕು. ವೀರ್ಯ ಪಾರ್ವತಿಯ ಗರ್ಭವನ್ನು ಸೇರಿದರೆ ಹುಟ್ಟುವ ಮಗು ದೇವ ದಾನವರನ್ನೆಲ್ಲ ನಾಶಮಾಡೀತು.

ಇದನ್ನು ಕೇಳಿ ಇಂದ್ರಾದಿ ದೇವತೆಗಳು ನರ್ಮದಾತೀರವನ್ನು ಸೇರಿದರು. ಬ್ರಹ್ಮ ತನ್ನ ಲೋಕಕ್ಕೆ ತೆರಳಿದ. ದೇವತೆಗಳು ಪರ್ವತದ ಕಣಿವೆಯ ಬಳಿ ಕುಳಿತು ಶಿವ ಪಾರ್ವತಿಯರ ಶೃಂಗಾರಕ್ಕೆ ಭಂಗ ತರಲು ಒಬ್ಬರನ್ನೊಬ್ಬರು ನೀ ಹೋಗು ನೀ ಹೋಗೆಂದು ಒತ್ತಾಯಿಸಿದರು. ಇಂದ್ರ ಕುಬೇರನಿಗೆ ಹೇಳಿದರೆ, ಕುಬೇರ ವರುಣನಿಗೆ ಹೇಳುತ್ತಾನೆ. ವರುಣ ವಾಯುವಿಗೆ, ವಾಯು ಯಮನಿಗೆ ಹೇಳುತ್ತಾನೆ. ಯಮ ಅಗ್ನಿಗೆ, ಅಗ್ನಿ ಸೂರ್ಯನಿಗೆ, ಸೂರ್ಯ ಚಂದ್ರನಿಗೆ, ಚಂದ್ರ ರುದ್ರನಿಗೆ, ಹೀಗೆ ಯಾರೂ ಧೈರ್ಯ ತಳೆಯದಿದ್ದಾಗ ಇಂದ್ರ ತಾನೆ ಧೈರ್ಯಮಾಡಿ ಶಿವನ ಮುಂದೆ ತಲೆಬಾಗಿ ನಿಂತು 'ಮಹಾದೇವ, ಜಗದೀಶ್ವರ, ಭಕ್ತರ ಭಯ ಪರಿಹಾರಕ, ಇದೇನು ಮಾಡುತ್ತಿರುವೆ ?' ಎಂದ. ಒಡನೆ ಸೂರ್ಯ ಚಂದ್ರ ವಾಯುಗಳು ಒಬ್ಬೊಬ್ಬರಾಗಿ ಬಂದು ಭಯಭೀತರಾಗಿ ಸ್ತೋತ್ರ ಮಾಡಿದರು. ಶಿವ ಯೋಗಬಲದಿಂದ ಎಲ್ಲವನ್ನೂ ತಿಳಿಯಬಲ್ಲವ. ದೇವತೆಗಳ ಭಯವನ್ನು ತಿಳಿದು ರತಿಕ್ರೀಡೆ ನಿಲ್ಲಿಸಲು ಬಯಸಿದ. ಪಾರ್ವತಿ ಕುಪಿತಳಾಗಬಹುದೆಂದು ಹಾಗೆ ಮಾಡಲಿಲ್ಲ. ಪುನಃ ದೇವತೆಗಳು ಸ್ತೋತ್ರ ಮಾಡತೊಡಗಿದರು. ಈಗ ಶಿವ ಪಾರ್ವತಿಯನ್ನು ಬಿಟ್ಟು ಎದ್ದುನಿಂತ. ಅವನ ವೀರ್ಯ ನೆಲಕ್ಕೆ ಬಿದ್ದಿತು. ಅದರಿಂದ ಸ್ಕಂದನ ಜನನವಾಯಿತು.

**ಇಲ್ಲಿಗೆ ಶ್ರೀ ಬ್ರಹ್ಮವೈವರ್ತ ಮಹಾಪುರಾಣದಲ್ಲಿ ಮೂರನೆಯದಾದ ಗಣಪತಿ ಖಂಡದಲ್ಲಿ ನಾರದನಾರಾಯಣ ಸಂವಾದದಲ್ಲಿ ಮೊದಲನೆ ಅಧ್ಯಾಯ ಮುಗಿಯಿತು.**

# ಸಂಗಸುಖ ಭಂಗವಾದುದಕ್ಕಾಗಿ ಪಾರ್ವತಿಯ ಕೋಪ ಹಾಗೂ ವಿಲಾಪ

## ಅಧ್ಯಾಯ-೨

ನಾರಾಯಣ— ಶಿವನು ಪಾರ್ವತಿಯ ಭಯದಿಂದ ದೇವತೆಗಳಿಗೆ ಬೇಗನೆ ಓಡಿ ಹೋಗಲು ಆಜ್ಞಾಪಿಸಿದ. ಪಾರ್ವತಿ ಶಾಪಕೊಡುವಳೆಂದು ದೇವತೆಗಳು ಹೆದರಿ ಓಡಿಹೋದರು. ಹಾಸಿಗೆಯಿಂದ ಎದ್ದ ದೇವಿ ದೇವತೆಗಳನ್ನು ಕಾಣದೆ ತನ್ನ ಕೋಪಾಗ್ನಿಯನ್ನು ತಡೆದುಕೊಂಡಳು. ಆದರೂ ಕೋಪದಿಂದ 'ದೇವತೆಗಳ ವೀರ್ಯ ವ್ಯರ್ಥವಾಗಲಿ' ಎಂದು ಶಪಿಸಿದಳು. ಶಿವನ ಮುಂದೆ ತಲೆಬಾಗಿ ದುಃಖದಿಂದ ಕಣ್ಣೀರು ಸುರಿಸುತ್ತ, ಕಾಲ ಉಗುರಿನಿಂದ ನೆಲ ಕೆರೆಯುತ್ತ ನಿಂತ ದೇವಿಯನ್ನು ಶಿವ ಬರಸೆಳೆದು ಅಪ್ಪಿಕೊಂಡ. 'ನನ್ನ ಪ್ರಾಣೇಶ್ವರಿ, ಕೋಪ ಮಾಡಬೇಡ. ನನ್ನದೇನೂ ತಪ್ಪಿಲ್ಲ. ದೈವಾತ್ ತಿಳಿಯದೆ ತಪ್ಪು ಮಾಡಿದೆ, ಕ್ಷಮಿಸು. ನೀನು ಜೊತೆಗಿದ್ದರೆ ಮಾತ್ರ ನಾನು ಲೋಕಕ್ಕೆ ಮಂಗಳ ಉಂಟುಮಾಡುತ್ತ 'ಶಿವ'ನೆನಿಸುವೆನು. ನೀನಿಲ್ಲದಿದ್ದರೆ ನಾನು ಶವಸದೃಶನಾಗಿ ಅಶಿವನೆನಿಸುತ್ತೇನೆ. ಪ್ರಕೃತಿ, ಬುದ್ಧಿ, ಶಕ್ತಿ, ಕ್ಷಮಾ, ದಯಾ, ತುಷ್ಟಿ, ಪುಷ್ಟಿ, ಶಾಂತಿ, ಕ್ಷಾಂತಿ, ಕ್ಷುತ್, ಛಾಯಾ, ನಿದ್ರಾ, ತಂದ್ರಾ, ಶ್ರದ್ಧಾಸ್ವರೂಪಳಾಗಿದ್ದು ಸರ್ವಾಧಾರಳಾಗಿ ಸರ್ವಬೀಜಸ್ವರೂಪಳಾಗಿರುವವಳು ನೀನೆ. ನೀನೊಮ್ಮೆ ನಗು. ಸರಸವಾದ ಮಾತನ್ನಾಡಿ ನನ್ನನ್ನು ಬದುಕಿಸು. ನಿನ್ನ ಕೋಪದ ವಿಷಾಗ್ನಿಗೆ ನಾನು ಸುಟ್ಟು ಹೋಗುತ್ತಿದ್ದೇನೆ,' ಎಂದು ಬೇಡಿದ.

ಶಿವನ ಮಾತನ್ನು ಕೇಳಿ ಪಾರ್ವತಿ ಕೋಪವನ್ನು ಮರೆತು ದುಃಖದಿಂದ ಮಧುರವಾಗಿ ನುಡಿದಳು, 'ಮಹೇಶ, ನಾನೇನು ಹೇಳಲಿ ? ನೀನು ಎಲ್ಲ ತಿಳಿದವ. ಆತ್ಮಾರಾಮ, ಪೂರ್ಣಕಾಮ. ಎಲ್ಲರ ಹೃದಯವನ್ನು ತಿಳಿಯಬಲ್ಲವ. ಆದರೂ ಲೋಕದ ಎಲ್ಲ ನಾರಿಯರ ಒಂದು ಗೋಪ್ಯವಾದ ಅಪೇಕ್ಷೆಯನ್ನು ಅದು ಹೇಳು-ವಂಥಹುದಲ್ಲವಾದರೂ ಹೇಳುತ್ತೇನೆ, ಕೇಳು. ಎಲ್ಲ ಸುಖಗಳಲ್ಲಿ ಎಲ್ಲ ವೈಭವಗಳಲ್ಲಿ ಸ್ತ್ರೀಗೆ ಪುರುಷನೊಡನೆ ರತಿಸುಖವೇ ಉತ್ತಮ. ಅದು ತಪ್ಪಿದಾಗ ಉಂಟಾಗುವ ದುಃಖಕ್ಕೆ ಸಮವಾದ ದುಃಖ ಇನ್ನೊಂದಿಲ್ಲ. ಪತಿವಿರಹವಾಯಿತೆಂದರೆ ಸ್ತ್ರೀ ಕೃಷ್ಣಪಕ್ಷದ ಚಂದ್ರನಂತೆ ದಿನೇ ದಿನೇ ಸೊರಗುತ್ತಾಳೆ. ನನಗೆ ಈಗ ದುಃಖಕರವಾದ ರತಿಭಂಗ ಒಂದೆಡೆ, ವೀರ್ಯಪಾತವಿನ್ನೊಂದೆಡೆ, ಎಲ್ಲಕ್ಕಿಂತ ಹೆಚ್ಚಾಗಿ ನನಗೆ ಮಕ್ಕಳಾಗದಿದ್ದುದು ಮೂರನೆ ದುಃಖ. ತ್ರಿಲೋಕ ಸುಂದರನಾದ ನಿನ್ನನ್ನು ಪಡೆದೂ ನನಗೆ ಮಕ್ಕಳಾಗಲಿಲ್ಲ. ಮಕ್ಕಳಿಲ್ಲದ ನಾರಿಯ ಬದುಕೇ ಅರ್ಥಹೀನ.

ಜನ್ಮಾಂತರಸುಖಂ ಪುಣ್ಯಂ ತಪೋದಾನಸಮುದ್ಭವಂ ।
ಸದ್ವಂಶಜಾತಃ ಪುತ್ರಶ್ಚ ಪರತ್ರೇಹ ಸುಖಪ್ರದಃ ॥

ತಪಸ್ಸು ದಾನಗಳಿಂದ ಪುಣ್ಯ ಸಂಪಾದಿಸಿದರೂ ಅದು ಜನ್ಮಾಂತರದಲ್ಲಿ ಸುಖ ಕೊಟ್ಟೀತು. ಸದ್ವಂಶದಲ್ಲಿ ಹುಟ್ಟುವ ಮಗ ಇಹದಲ್ಲೂ ಪರದಲ್ಲೂ ಸುಖ ನೀಡಬಲ್ಲ.'

ಒಳ್ಳೆಯ ಮಗ ಪತಿಯ ಅಂಶದಿಂದ ಜನಿಸಿ ಪತಿಯಂತೆಯೆ ಪ್ರೀತಿಯಿಂದ ನೋಡಿಕೊಳ್ಳುತ್ತಾನೆ. ಕೆಟ್ಟ ಮಗ ಕುಲನಾಶಕಾರಿ. ತಾಯಿಗೆ ಸದಾ ಮನೋವ್ಯಥೆ ತರುತ್ತಾನೆ. ಪತಿ ಒಂದು ಅಂಶದಿಂದ ತಾನೆ ಸತಿಯ ಗರ್ಭದಲ್ಲಿ ಹುಟ್ಟುವುದರಿಂದಲೆ ಸತಿ ಪತಿಯನ್ನು ತಾಯಿಯಂತೆ ಪ್ರೀತಿಯಿಂದ ನೋಡಿಕೊಳ್ಳುತ್ತಾಳೆ. ಆದ್ದರಿಂದ ಸತ್ಪುತ್ರನನ್ನು ಪಡೆಯಲು ನಾನು ಏನು ಮಾಡಬೇಕು, ಹೇಳು.'

ಶಿವ ಸತ್ಪುತ್ರಪ್ರಾಪ್ತಿಗೆ ಸಾಧನವೇನೆಂಬುದನ್ನು ಪಾರ್ವತಿಗೆ ಹೇಳತೊಡಗಿದ.

**ಇಲ್ಲಿಗೆ ಶ್ರೀ ಬ್ರಹ್ಮವೈವರ್ತ ಮಹಾಪುರಾಣದಲ್ಲಿ ಮೂರನೆಯದಾದ ಗಣಪತಿ ಖಂಡದಲ್ಲಿ ನಾರದನಾರಾಯಣ ಸಂವಾದದಲ್ಲಿ ಎರಡನೆ ಅಧ್ಯಾಯ ಮುಗಿಯಿತು.**

## ಮಹಾದೇವರಿಂದ ಸತೀದೇವಿಗೆ ಪುಣ್ಯಕ ವ್ರತಾಚರಣೆಯ ಸಂದೇಶ

**ಅಧ್ಯಾಯ-೩**

ಶಿವ— ಪಾರ್ವತಿ, ಉಪಾಯದಿಂದ ಮೂರೋಕದಲ್ಲಿಯೂ ಕಾರ್ಯ ಸಾಧಿಸಿಕೊಳ್ಳಬಹುದು. ಸರ್ವಾಭೀಷ್ಟಸಿದ್ಧಿಗೆ ಕಾರಣವಾದ ಮನಸ್ಸಿಗೆ ಸಂತೋಷಕರ-ವಾದ ಮಂಗಳಕರವಾದ ಒಂದು ಉಪಾಯವನ್ನು ನಾನು ನಿನಗೆ ಹೇಳುತ್ತೇನೆ. ಹರಿಯ ಆರಾಧನೆ ಮಾಡಿ ಒಂದು ವರ್ಷಕಾಲ ಪುಣ್ಯಕವ್ರತ ಮಾಡು. ಅದು ಕಲ್ಪವೃಕ್ಷದಂತೆ ಸಕಲಾಭೀಷ್ಟ ನೀಡುತ್ತದೆ. ಪುತ್ರಸಂಪತ್ತನ್ನೂ ಸರ್ವಸೌಖ್ಯವನ್ನೂ ನೀಡುತ್ತದೆ.

ನದಿಗಳಲ್ಲಿ ಗಂಗೆ, ದೇವತೆಗಳಲ್ಲಿ ವಿಷ್ಣು, ವೈಷ್ಣವರಲ್ಲಿ ನಾನು, ದೇವಿಯರಲ್ಲಿ ನೀನು ಹೇಗೆ ಶ್ರೇಷ್ಠರೊ ಹಾಗೆ ವ್ರತಗಳಲ್ಲಿ ಈ ಪುಣ್ಯಕವ್ರತ ಶ್ರೇಷ್ಠ. ವರ್ಣಗಳಲ್ಲಿ ಬ್ರಾಹ್ಮಣ, ತೀರ್ಥಕ್ಷೇತ್ರಗಳಲ್ಲಿ ಪುಷ್ಕರ, ಪುಷ್ಪಗಳಲ್ಲಿ ಪಾರಿಜಾತ, ಪತ್ರಗಳಲ್ಲಿ ತುಲಸಿ, ತಿಥಿಗಳಲ್ಲಿ ಏಕಾದಶೀ, ವಾರಗಳಲ್ಲಿ ಭಾನುವಾರ, ಮಾಸಗಳಲ್ಲಿ ಮಾರ್ಗಶೀರ್ಷ, ಋತುಗಳಲ್ಲಿ ವಸಂತ, ವತ್ಸರಗಳಲ್ಲಿ ಸಂವತ್ಸರ, ಯುಗಗಳಲ್ಲಿ ಕೃತಯುಗ, ಪೂಜ್ಯರಲ್ಲಿ ವಿದ್ಯೋಪದೇಶಕ, ಗುರುಹಿರಿಯರಲ್ಲಿ ತಾಯಿ, ಆಪ್ತರಲ್ಲಿ ಪತಿವ್ರತೆಯಾದ ಮಡದಿ, ವಿಶ್ವಾಸಾರ್ಹ ವಸ್ತುಗಳಲ್ಲಿ ಮನಸ್ಸು, ಧನಗಳಲ್ಲಿ ರತ್ನ, ಪ್ರಿಯರಲ್ಲಿ ಪತಿ, ಬಂಧುಗಳಲ್ಲಿ

ಪುತ್ರ, ವೃಕ್ಷಗಳಲ್ಲಿ ಕಲ್ಪವೃಕ್ಷ, ಫಲಗಳಲ್ಲಿ ಮಾವಿನಹಣ್ಣು, ವರ್ಷಗಳಲ್ಲಿ ಭಾರತವರ್ಷ, ವನಗಳಲ್ಲಿ ವೃಂದಾವನ, ಸ್ತ್ರೀಯರಲ್ಲಿ ಶತರೂಪೆ, ನಗರಗಳಲ್ಲಿ ಕಾಶಿ, ತೇಜಸ್ವಿಗಳಲ್ಲಿ ಸೂರ್ಯ, ಆಹ್ಲಾದಕರರಲ್ಲಿ ಚಂದ್ರ, ಸುಂದರರಲ್ಲಿ ಮನ್ಮಥ, ಶಾಸ್ತ್ರಗಳಲ್ಲಿ ವೇದ, ಸಿದ್ಧರಲ್ಲಿ ಕಪಿಲ, ವಾನರರಲ್ಲಿ ಹನುಮಂತ, ಕ್ಷೇತ್ರಗಳಲ್ಲಿ ಬ್ರಾಹ್ಮಣನ ಮುಖ, ಯಶೋದಾಯಕಗಳಲ್ಲಿ ವಿದ್ಯೆ , ಮನೋಹಾರಿಗಳಲ್ಲಿ ಕವಿತೆ, ವ್ಯಾಪಕಗಳಲ್ಲಿ ಆಕಾಶ. ಅಂಗಗಳಲ್ಲಿ ಕಣ್ಣು, ಸಂಪತ್ತುಗಳಲ್ಲಿ ಹರಿಕಥೆ, ಸುಖಗಳಲ್ಲಿ ಹರಿಧ್ಯಾನ, ಸ್ಪರ್ಶಗಳಲ್ಲಿ ಪುತ್ರಸ್ಪರ್ಶ, ಹಿಂಸಕಗಳಲ್ಲಿ ದುರ್ಜನ, ಪಾಪಗಳಲ್ಲಿ ಸುಳ್ಳು, ಪಾಪಿಗಳಲ್ಲಿ ವ್ಯಭಿಚಾರಿಣಿ, ಪುಣ್ಯಗಳಲ್ಲಿ ಸತ್ಯ, ತಪಸ್ಸುಗಳಲ್ಲಿ ಹರಿಯ ಆರಾಧನೆ, ಗವ್ಯಗಳಲ್ಲಿ ಘೃತ, ತಪಸ್ವಿಗಳಲ್ಲಿ ಬ್ರಹ್ಮ, ಭಕ್ಷ್ಯಗಳಲ್ಲಿ ಅಮೃತ, ಸಸ್ಯಗಳಲ್ಲಿ ಕೊತ್ತಂಬರಿ, ಪುಣ್ಯಕರ ವಸ್ತು-ಗಳಲ್ಲಿ ನೀರು, ಶುದ್ಧ ವಸ್ತುಗಳಲ್ಲಿ ಬೆಂಕಿ, ತೇಜಸ್ಸುಗಳಲ್ಲಿ ಸುವರ್ಣ, ಸವಿವಸ್ತುಗಳಲ್ಲಿ ಸವಿನುಡಿ, ಪಕ್ಷಿಗಳಲ್ಲಿ ಗರುಡ, ಆನೆಗಳಲ್ಲಿ ಐರಾವತ, ಯೋಗಿಗಳಲ್ಲಿ ಷಣ್ಮುಖ, ದೇವರ್ಷಿಗಳಲ್ಲಿ ನಾರದ, ಗಂಧರ್ವದಲ್ಲಿ ಚಿತ್ರರಥ, ಬುದ್ಧಿಶಾಲಿಗಳಲ್ಲಿ ಬೃಹಸ್ಪತಿ, ಕವಿಗಳಲ್ಲಿ ಶುಕ್ರ, ಕಾವ್ಯಗಳಲ್ಲಿ ಪುರಾಣಕಾವ್ಯ, ಜಲಾಶಯಗಳಲ್ಲಿ ಸಮುದ್ರ, ಕ್ಷಮಾಶೀಲರಲ್ಲಿ ಪೃಥಿವಿ, ಲಾಭಗಳಲ್ಲಿ ಮುಕ್ತಿಲಾಭ, ಸಂಪತ್ತುಗಳಲ್ಲಿ ಹರಿಭಕ್ತಿ, ಪವಿತ್ರರಲ್ಲಿ ವೈಷ್ಣವರು, ಅಕ್ಷರಗಳಲ್ಲಿ ಓಂಕಾರ, ಮಂತ್ರಗಳಲ್ಲಿ ವಿಷ್ಣುಮಂತ್ರ, ಬೀಜಗಳಲ್ಲಿ ಪ್ರಕೃತಿ, ವಿದ್ವಾಂಸರಲ್ಲಿ ಸರಸ್ವತಿ, ಛಂದಸ್ಸುಗಳಲ್ಲಿ ಗಾಯತ್ರೀಛಂದಸ್ಸು, ಯಕ್ಷರಲ್ಲಿ ಕುಬೇರ, ಸರ್ಪಗಳಲ್ಲಿ ವಾಸುಕಿ, ಪರ್ವತಗಳಲ್ಲಿ ಹಿಮಾಲಯ, ಗೋವು-ಗಳಲ್ಲಿ ಕಾಮಧೇನು, ವೇದಗಳಲ್ಲಿ ಸಾಮವೇದ, ತೃಣಗಳಲ್ಲಿ ದರ್ಭೆ, ಸುಖದಾಯಕ-ರಲ್ಲಿ ಲಕ್ಷ್ಮಿ, ಶೀಘ್ರಗಾಮಿಗಳಲ್ಲಿ ಮನಸ್ಸು, ಅಕ್ಷರಗಳಲ್ಲಿ ಅಕಾರ, ಹಿತೈಷಿಗಳಲ್ಲಿ ತಂದೆ, ವಿಗ್ರಹಗಳಲ್ಲಿ ಶಾಲಗ್ರಾಮ, ಕವಚಗಳಲ್ಲಿ ವಿಷ್ಣುಪಂಜರ, ಚತುಷ್ಪಾದಿಗಳಲ್ಲಿ ಸಿಂಹ, ಜೀವಿಗಳಲ್ಲಿ ಮಾನವ, ಇಂದ್ರಿಯಗಳಲ್ಲಿ ಮನಸ್ಸು, ರೋಗಗಳಲ್ಲಿ ಅಗ್ನಿಮಾಂದ್ಯ, ಬಲಿಷ್ಠರಲ್ಲಿ ಶಕ್ತಿದೇವತೆ, ಶಕ್ತಿಶಾಲಿಗಳಲ್ಲಿ ಶಿವ, ಸ್ಥೂಲ ವಸ್ತುಗಳಲ್ಲಿ ಮಹಾವಿರಾಟ್, ಸೂಕ್ಷ್ಮ ವಸ್ತುಗಳಲ್ಲಿ ಪರಮಾಣು, ಆದಿತ್ಯರಲ್ಲಿ ಇಂದ್ರ, ದೈತ್ಯರಲ್ಲಿ ಬಲಿ, ದಾನಿಗಳಲ್ಲಿ ದಧೀಚ, ಸಜ್ಜನರಲ್ಲಿ ಪ್ರಹ್ಲಾದ, ಅಸ್ತ್ರಗಳಲ್ಲಿ ಬ್ರಹ್ಮಾಸ್ತ್ರ, ಚಕ್ರಗಳಲ್ಲಿ ಸುದರ್ಶನಚಕ್ರ, ರಾಜರಲ್ಲಿ ರಾಮಚಂದ್ರ, ಬಿಲ್ಲುಗಾರರಲ್ಲಿ ಲಕ್ಷ್ಮಣ, ಎಲ್ಲ ಆಧಾರಗಳಲ್ಲಿ ಎಲ್ಲ ಪೂಜ್ಯರಲ್ಲಿ, ಎಲ್ಲ ಕಾರಣಗಳಲ್ಲಿ, ಎಲ್ಲ ಉತ್ತಮ ವಸ್ತುಗಳಲ್ಲಿ ಕೃಷ್ಣ ಹೇಗೋ ಹಾಗೇ ಎಲ್ಲ ವ್ರತಗಳಲ್ಲಿ ಈ ಪುಣ್ಯಕ ವ್ರತ ಶ್ರೇಷ್ಠ.

ಈ ವ್ರತದಲ್ಲಿ ಆರಾಧ್ಯ ವಿಷ್ಣು. ಅವನು ಎಲ್ಲರಿಗೂ ಅಭೀಷ್ಟದಾಯಕ. ಅವನ ಸೇವೆ ಮಾಡಿದರೆ ಕೋಟಿ ಪಿತೃಗಳೊಡನೆ ತಾನೂ ಮುಕ್ತನಾಗುತ್ತಾನೆ. ವಿಷ್ಣುಮಂತ್ರ ಉಪದೇಶ ಪಡೆದು, ವಿಷ್ಣುವಿನ ಆರಾಧನೆ ಮಾಡಿದರೆ ಮಾತ್ರ ಭಾರತ ಭೂಮಿಯಲ್ಲಿ ಜನ್ಮವೆತ್ತುವುದರ ಸಾಫಲ್ಯ ಲಭಿಸುವುದು. ಆತ ತನ್ನ ಸೋದರ ಭೃತ್ಯ ಬಂಧು-

ಬಾಂಧವರೆಲ್ಲರನ್ನೂ ಉದ್ಧರಿಸಿ ತಾನೂ ವೈಕುಂಠದಲ್ಲಿ ಕೃಷ್ಣನ ಪಾರ್ಷದನಾಗಿ ಸುಖವಾಗಿರುತ್ತಾನೆ. ಆದ್ದರಿಂದ ಪಾರ್ವತಿ, ನೀನು ವಿಷ್ಣುಮಂತ್ರ ಸ್ವೀಕರಿಸಿ ಜಪಿಸು, ವ್ರತವನ್ನಾಚರಿಸು.'

ಹೀಗೆ ಹೇಳಿ ಶಿವ ಪಾರ್ವತಿಯೊಡನೆ ಗಂಗಾತೀರಕ್ಕೆ ಹೋಗಿ ಹರಿಯ ಮಂತ್ರ ಕವಚ ಸ್ತೋತ್ರ ಪೂಜಾವಿಧಿಗಳನ್ನು ಅವಳಿಗೆ ಉಪದೇಶಿಸಿದ.

**ಇಲ್ಲಿಗೆ ಶ್ರೀ ಬ್ರಹ್ಮವೈವರ್ತ ಮಹಾಪುರಾಣದಲ್ಲಿ ಮೂರನೆಯದಾದ ಗಣಪತಿ ಖಂಡದಲ್ಲಿ ನಾರದನಾರಾಯಣ ಸಂವಾದದಲ್ಲಿ ಮೂರನೆ ಅಧ್ಯಾಯ ಮುಗಿಯಿತು.**

## ಪುಣ್ಯಕ ವ್ರತದ ವಿಧಾನ ಮತ್ತು ಫಲ

**ಅಧ್ಯಾಯ-೪**

ನಾರಾಯಣ— ಪಾರ್ವತಿ ಶಿವನಿಂದ ವ್ರತಮಹಿಮೆಯನ್ನು ಕೇಳಿ ತಿಳಿದು ಹರ್ಷಪಟ್ಟು ವ್ರತಾಚರಣೆಯ ಕ್ರಮವನ್ನು ಕೇಳಲು ತೊಡಗಿದಳು.

ಪಾರ್ವತಿ— ನಾಥ, ನನಗೆ ಪುಣ್ಯಕವ್ರತದ ಆಚರಣ ವಿಧಾನವನ್ನು ತಿಳಿಸು. ವ್ರತಕ್ಕೆ ಬೇಕಾಗುವ ಪೂಜಾಸಾಮಗ್ರಿಗಳೇನು ? ಭಕ್ಷ್ಯಗಳು ಫಲಗಳು ಮುಂತಾದುವು ಯಾವುವು ? ವ್ರತದ ಫಲವೇನು ? ಹೇಳು. ಒಳ್ಳೆಯ ಪುರೋಹಿತನನ್ನು ದೊರಕಿಸು. ಹೂ ಹಣ್ಣುಗಳನ್ನೂ ಇತರ ಸಾಮಗ್ರಿಗಳನ್ನೂ ಸಿದ್ಧಪಡಿಸಿಕೊಡುವ ಬ್ರಾಹ್ಮಣರನ್ನೂ ಸೇವಕರನ್ನೂ ನೇಮಿಸು. ನನಗೆ ತಿಳಿಯದಿರುವ ಬೇರೆ ಎಲ್ಲ ಆವಶ್ಯಕತೆಗಳನ್ನೂ ಪೂರೈಸಿಕೊಡು. ಸ್ತ್ರೀಗೆ ಅವೆಲ್ಲವನ್ನೂ ಪತಿ ತಾನೆ ನಿರ್ವಹಿಸಬೇಕು ? ಅವಳಿಗೆಲ್ಲಿಯ ಸ್ವಾತಂತ್ರ್ಯ ?

ಪಿತಾ ಕೌಮಾರಕಾಲೇ ಚ ಸದಾ ಪಾಲನಕಾರಕಃ ।
ಭರ್ತಾ ಮಧ್ಯೇ ಸುತಃ ಶೇಷೇ ತ್ರಿಧಾವಸ್ಥಾ ಸುಯೋಷಿತಾಂ ॥

ಎಳೆವಯಸ್ಸಿನಲ್ಲಿ ತಂದೆ, ನಡುವಯಸ್ಸಿನಲ್ಲಿ ಪತಿ, ಮುದಿವಯಸ್ಸಿನಲ್ಲಿ ಪುತ್ರ ಸ್ತ್ರೀಗೆ ಸದಾ ರಕ್ಷಣೆ ನೀಡುತ್ತಿರಬೇಕು. ಮೂರು ಅವಸ್ಥೆಯಲ್ಲಿಯೂ ಅವಳು ಅನಾಥೆಯಾಗಿರಬಾರದು.

ತಾತೋಽಶೋಕಃ ಪ್ರಾಣತುಲ್ಯಾಂ ದತ್ವಾ ಸತ್‌ಸ್ವಾಮಿನೇ ಸುತಾಂ ।
ಸ್ವಾಮೀ ನಿವೃತ್ತಿಮಾಪ್ನೋತಿ ಸಂನ್ಯಸ್ಯ ಸ್ವಸುತೇ ಪ್ರಿಯಾಂ ॥

ಪ್ರಾಣತುಲ್ಯಳಾದ ಮಗಳನ್ನು ಒಳ್ಳೆಯ ಪತಿಗೆ ಕೊಟ್ಟು ತಂದೆ ನಿಶ್ಚಿಂತನಾಗಬೇಕು. ಪತಿ ತನ್ನ ಮಗನ ವಶಕ್ಕೆ ಅವಳನ್ನು ಒಪ್ಪಿಸಿ ಸನ್ಯಾಸ ಸ್ವೀಕರಿಸಿ ನಿವೃತ್ತಿ ಮಾರ್ಗ-ವನ್ನಾಶ್ರಯಿಸಬೇಕು. ತಂದೆಯಾಗಲಿ ಪತಿಯಾಗಲಿ ಸ್ತ್ರೀಯರನ್ನು ಅನಾಥೆಯನ್ನಾಗಿ ಮಾಡಬಾರದು.

ಬಂಧುತ್ರಯಯುತಾ ಯಾ ಸ್ತ್ರೀ ಸಾ ಚ ಭಾಗ್ಯವತೀ ಪರಾ ।
ಕಿಂಚಿದ್ ವಿಹೀನಾ ಮಧ್ಯಾ ಚ ಸರ್ವಹೀನಾಽಧಮಾ ಭುವಿ ॥

ತಂದೆ ಪತಿ ಸುತರೆಂಬ ಮೂರು ಮಂದಿ ಬಂಧುಗಳ ರಕ್ಷಣೆಯಲ್ಲಿರುವ ಸ್ತ್ರೀಯೆ ಅತ್ಯಂತ. ಭಾಗ್ಯವತಿ. ಯಾರಾದರೊಬ್ಬರ ರಕ್ಷಣೆ ಇಲ್ಲದಿದ್ದರೆ ಅವಳು ಮಧ್ಯಮಳು. ಯಾರ ರಕ್ಷಣೆಯೂ ಇಲ್ಲದವಳು ಅಧಮಳು.

ಈ ಮೂವರು ಬಂಧುಗಳ ರಕ್ಷಣೆಯಲ್ಲಿದ್ದರೇ ಸ್ತ್ರೀ ಪ್ರಶಂಸಾರ್ಹಳು. ಬೇರೆ-ಯವರ ಜೊತೆಗೆ ಇದ್ದರೆ ನಿಂದಾರ್ಹಳೆನಿಸುವಳು. ಇದೆಲ್ಲವೂ ಶ್ರುತಿಯಲ್ಲಿ ಹೇಳಿದೆ.

ಸರ್ವಾತ್ಮ, ಸರ್ವಸಾಕ್ಷಿ, ಸರ್ವಜ್ಞನಾದ ನೀನು ನನಗೆ ಒಬ್ಬ ಒಳ್ಳೆಯ ಮಗನನ್ನು ಕೊಡು. ಇದು ನನ್ನ ಮನದ ಇಂಗಿತ ಅರಿಯಬಲ್ಲ ನಿನಗೆ ಹೆಚ್ಚೇನು ಹೇಳಬೇಕು ?

ಮಹಾದೇವ— ದೇವಿ, ಕೇಳು. ವ್ರತದ ವಿಧಾನ, ನಿಯಮ, ಫಲ, ವ್ರತ-ಯೋಗ್ಯವಾದ ದ್ರವ್ಯಗಳು, ಫಲ ಮುಂತಾದುವನ್ನು ಹೇಳುತ್ತೇನೆ. ಹೂಹಣ್ಣು ಮುಂತಾದುವನ್ನು ತರುವ ನೂರು ಮಂದಿ ಬ್ರಾಹ್ಮಣರನ್ನೂ ಬೇರೆ ಸಾಮಗ್ರಿಗಳನ್ನು ತರುವ ನೂರಾರು ಲಕ್ಷ ಸೇವಕರನ್ನೂ ದಾಸಿಯರನ್ನೂ ನೇಮಿಸುತ್ತೇನೆ. ವೇದ ವೇದಾಂತ ಪಾರಂಗತನಾದ, ವ್ರತವಿಧಾನವೆಲ್ಲವನ್ನೂ ಬಲ್ಲ, ಹರಿಭಕ್ತನಾದ, ಸರ್ವಜ್ಞನಾಗಿದ್ದು ನನಗೆ ಸಮಾನನಾಗಿರುವ ಸನತ್ಕುಮಾರನನ್ನು ಪುರೋಹಿತನನ್ನಾಗಿ ನೇಮಿಸುತ್ತೇನೆ. ಮಾಘಶುದ್ಧ ತ್ರಯೋದಶಿಯಂದು ನಿಯಮಪೂರ್ವಕವಾಗಿ ವ್ರತಾರಂಭ ಮಾಡುವುದು ಪ್ರಶಸ್ತ. ಹಿಂದಿನ ದಿನ ಶರೀರವನ್ನು ಶುದ್ಧಿಗೊಳಿಸಿ ತಲೆಗೂದಲಿಗೆ ತೈಲಾದಿ ಸಂಸ್ಕಾರ ಮಾಡಿಕೊಂಡು ಉಪವಾಸ ಮಾಡಿರಬೇಕು. ಬಟ್ಟೆಗಳನ್ನು ಶುದ್ಧಿಗೊಳಿಸಿರಬೇಕು. ವ್ರತಸ್ವೀಕಾರದ ದಿನದಲ್ಲಿ ಬೆಳಿಗ್ಗೆ ಅರುಣೋದಯಕಾಲದಲ್ಲಿ ಹಾಸಿಗೆಯಿಂದ ಎದ್ದು, ಮುಖ ತೊಳೆದು, ನಿರ್ಮಲವಾದ ನೀರಲ್ಲಿ ಮಿಂದು ಹರಿಸ್ಮರಣ ಪೂರ್ವಕ ಆಚಮನಮಾಡಿ, ಸೂರ್ಯನಿಗೆ ಅರ್ಘ್ಯ ನೀಡಿ, ಮನೆಗೆ ಬಂದು ಮಡಿಯುಟ್ಟು ಶುಚಿಯಾದ ಆಸನದಲ್ಲಿ ಕುಳಿತುಕೊಳ್ಳಬೇಕು. ಆಚಮನ, ತಿಲಕಧಾರಣ, ಆಹ್ನಿಕ-ಗಳನ್ನು ಮುಗಿಸಿ ಸ್ವಸ್ತಿವಾಚನ ಪೂರ್ವಕ ಕಲಶ ಸ್ಥಾಪನ ಮಾಡಬೇಕು. ಪುರೋಹಿತ-ನನ್ನು ವರಣಮಾಡಿ ವ್ರತವನ್ನು ಸಂಕಲ್ಪಿಸಬೇಕು. ಕೃಷ್ಣಪರಮಾತ್ಮನಿಗೆ ನಿತ್ಯ ಷೋಡ-ಶೋಪಚಾರಗಳನ್ನು ಸಮರ್ಪಿಸಬೇಕು.

**ಆಸನಂ ಸ್ವಾಗತಂ ಪಾದ್ಯಮರ್ಘ್ಯಂ ಆಚಮನೀಯಕಂ**
**ಸ್ನಾನೀಯಂ ಮಧುಪರ್ಕಂ ಚ ವಸ್ತ್ರಾಣ್ಯಾಭರಣಾನಿ ಚ ।**
**ಸುಗಂಧಿ ಪುಷ್ಪಂ ಧೂಪಂ ಚ ದೀಪ ನೈವೇದ್ಯ ಚಂದನಂ**
**ಯಜ್ಞಸೂತ್ರಂ ಚ ತಾಂಬೂಲಂ ಕರ್ಪೂರಾದಿ ಸುವಾಸಿತಂ ॥**

ಆಸನ, ಸ್ವಾಗತ, ಪಾದ್ಯ, ಅರ್ಘ್ಯ, ಆಚಮನೀಯ, ಸ್ನಾನೀಯ, ಮಧುಪರ್ಕ, ವಸ್ತ್ರ, ಆಭರಣ, ಸುಗಂಧಪುಷ್ಪ, ಧೂಪ, ದೀಪ, ನೈವೇದ್ಯ, ಗಂಧ, ಯಜ್ಞೋಪವೀತ, ಕರ್ಪೂರಾದಿ ಸುಗಂಧಯುಕ್ತವಾದ ತಾಂಬೂಲ -ಇವೆ ಆ ಷೋಡಶ ಉಪಚಾರಗಳು. ಇವುಗಳಲ್ಲಿ ಒಂದೆರಡು ಕಡಿಮೆಯಾದರೂ ವ್ರತದಲ್ಲಿ ನ್ಯೂನತೆ ಬರುತ್ತದೆ. ಹೇಗೆ ಒಂದು ಅಂಗವಿಲ್ಲದಿದ್ದರೂ ಜನರು ಅಂಗವಿಕಲರೆನಿಸುವರೋ ಹಾಗೆ. ವ್ರತದಲ್ಲಿ ನ್ಯೂನತೆ ಬಂದರೆ ಫಲ ಸಿಗಲಾರದು.

ರೂಪಸೌಂದರ್ಯ ಬಯಸುವವರು ವಿಷ್ಣುವಿಗೆ ನಿತ್ಯ ನೂರೆಂಟು ಪುಷ್ಪ ಸಮರ್ಪಿಸಬೇಕು. ಶರೀರದ ವರ್ಣಸೌಂದರ್ಯಕ್ಕಾಗಿ ಒಂದು ಲಕ್ಷ ಬಿಳಿ ಸಂಪಿಗೆ ಹೂಗಳನ್ನು, ಮುಖಸೌಂದರ್ಯಕ್ಕಾಗಿ ಒಂದು ಲಕ್ಷ ಕಮಲಗಳನ್ನು, ಕಣ್ಣಿನ ದೀಪ್ತಿ-ಗಾಗಿ ಒಂದು ಸಾವಿರ ಅಮೂಲ್ಯರತ್ನಖಚಿತ ದರ್ಪಣಗಳನ್ನು, ಕಣ್ಣಿನ ಸೌಂದರ್ಯ-ಕ್ಕಾಗಿ ಒಂದು ಲಕ್ಷ ಕನ್ನೈದಿಲೆಗಳನ್ನು, ಕೇಶಸೌಂದರ್ಯಕ್ಕಾಗಿ ಹಿಮಾಲಯದಲ್ಲಿ ಉದ್ಭವಿಸಿದ ಒಂದು ಲಕ್ಷ ಬಿಳಿ ಚಾಮರಗಳನ್ನು, ತುಟಿಗಳ ಮೃದುತ್ವ ವರ್ಣ-ಸೌಂದರ್ಯಗಳಿಗಾಗಿ ಲಕ್ಷ ಬಂಧೂಕ ಪುಷ್ಪಗಳನ್ನು, ಹಲ್ಲುಗಳ ಸೌಂದರ್ಯಕ್ಕಾಗಿ ಒಂದುಲಕ್ಷ ಮುತ್ತುಗಳನ್ನು, ಕಪೋಲ ಸೌಂದರ್ಯಕ್ಕೆ ಒಂದು ಲಕ್ಷ ರತ್ನಕನ್ನಡಿಗಳನ್ನು, ತುಟಿಯ ಕೆಳಭಾಗದ ಸೌಂದರ್ಯಕ್ಕೆ ಒಂದು ಲಕ್ಷ ರತ್ನ ಕರಡಿಗೆಗಳನ್ನು, ಕಿವಿಗಳ ಸೌಂದರ್ಯಕ್ಕೆ ಒಂದು ಲಕ್ಷ ರತ್ನಕುಂಡಲಗಳನ್ನು, ಕಂಠಧ್ವನಿ ಮಾಧುರ್ಯಕ್ಕೆ ಒಂದು ಲಕ್ಷ ರತ್ನಕಲಶಗಳಲ್ಲಿ ಮಧುವನ್ನು, ಮಾತಿನ ಸೌಂದರ್ಯ ವೃದ್ಧಿಗೆ ಒಂದು ಸಾವಿರ ರತ್ನಕಲಶಗಳಲ್ಲಿ ಅಮೃತವನ್ನು, ದೃಷ್ಟಿ ಸೌಂದರ್ಯಕ್ಕೆ ಲಕ್ಷರತ್ನ ದೀಪಗಳನ್ನು, ಶರೀರದ ಬಲ ಸೌಂದರ್ಯಕ್ಕೆ ಧತ್ತೂರ ಕುಸುಮದಂಥ ಒಂದು ಸಾವಿರ ರತ್ನಪಾತ್ರೆ-ಗಳನ್ನು, ಬಾಹುಸೌಂದರ್ಯಕ್ಕೆ ಸಾವಿರ ಸಾವಿರ ಕಮಲನಾಳಗಳನ್ನು, ಕೈಯ-ಸೌಂದರ್ಯಕ್ಕೆ ಲಕ್ಷ ಕೆಂದಾವರೆಗಳನ್ನು, ಬೆರಳುಗಳ ಸೌಂದರ್ಯಕ್ಕೆ ಲಕ್ಷ ರತ್ನ-ದುಂಗುರಗಳನ್ನು, ಉಗುರುಗಳ ಸೌಂದರ್ಯಕ್ಕೆ ಬಿಳಿಯಾದ ಲಕ್ಷರತ್ನಗಳನ್ನು, ವಕ್ಷಃ-ಸ್ಥಲ ಸೌಂದರ್ಯಕ್ಕೆ ಲಕ್ಷರತ್ನಹಾರಗಳನ್ನು, ಸ್ತನಸೌಂದರ್ಯಕ್ಕೆ ಲಕ್ಷ ಬಿಲ್ವಫಲಗಳನ್ನು, ಶರೀರ ಸೌಂದರ್ಯಕ್ಕೆ ಲಕ್ಷರತ್ನಪತ್ರಗಳನ್ನು, ನಾಭಿ ಸೌಂದರ್ಯಕ್ಕೆ ಸಾವಿರ ರತ್ನ-ನಾಭಿಗಳನ್ನು, ನಿತಂಬ ಸೌಂದರ್ಯಕ್ಕಾಗಿ ಸಾವಿರ ರತ್ನಮಯ ರಥಚಕ್ರಗಳನ್ನು, ತೊಡೆಗಳ ಸೌಂದರ್ಯಕ್ಕೆ ಲಕ್ಷ ರತ್ನದ ಬಾಳೆಕಂಬಗಳನ್ನು, ಪಾದಸೌಂದರ್ಯಕ್ಕೆ

ಲಕ್ಷಕಮಲಗಳನ್ನು, ನಡಿಗೆಯ ಸೌಂದರ್ಯಕ್ಕೆ ಚೆನ್ನದ ಸಾವಿರ ದಾಸರಿ ಹಕ್ಕಿಗಳನ್ನು, ಸಾವಿರ ರಾಜಹಂಸಗಳನ್ನು ಮತ್ತು ಸಾವಿರ ಆನೆಗಳನ್ನು ಶಿರಸ್ಸಿನ ಸೌಂದರ್ಯಕ್ಕೆ ಲಕ್ಷ ಸುವರ್ಣ ಛತ್ರಗಳನ್ನು, ನಗುವಿನ ಸೌಂದರ್ಯಕ್ಕೆ ಲಕ್ಷ ಜಾಜಿ ಹೂಗಳನ್ನು ಶೀಲ ಸೌಂದರ್ಯಕ್ಕೆ ಮತ್ತು ವ್ರತ ಪೂರ್ತಿಗೆ ಲಕ್ಷ ರತ್ನಗಳನ್ನು ಮನಃ ಸೌಂದರ್ಯಕ್ಕೆ ಸ್ಫಟಿಕದಲ್ಲಿ ಲಕ್ಷ ಮಣಿಗಳನ್ನು, ಪತಿಪ್ರೇಮ ವೃದ್ಧಿಗೆ ಹವಳದಂಥ ಸಾವಿರ ಮಣಿಗಳನ್ನು, ಕೋಟಿಜನ್ಮ ಪರ್ಯಂತ ಪತಿಸೌಭಾಗ್ಯಕ್ಕಾಗಿ ಲಕ್ಷ ಮಾಣಿಕ್ಯಗಳನ್ನು, ಪುತ್ರಲಾಭಕ್ಕಾಗಿ ಬೂದುಗುಂಬಳ ತೆಂಗಿನಕಾಯಿ ನಿಂಬೆ ಬಿಲ್ವಗಳನ್ನು, ಅಸಂಖ್ಯ ಜನ್ಮ-ಪರ್ಯಂತ ಪತಿಗೆ ಧನವೃದ್ಧಿಯಾಗಲು ಲಕ್ಷರತ್ನಗಳನ್ನು, ಸಂಪತ್ತು ವೃದ್ಧಿಯಾಗಲು ನಾನಾ ಪ್ರಕಾರದ ತಾಳವಾದ್ಯಗಳನ್ನು, ಪತಿಯ ಭೋಗವೃದ್ಧಿಗಾಗಿ ಪಾಯಸ ತಂಬಿಟ್ಟು ತುಪ್ಪ ಸಕ್ಕರೆ ಮುಂತಾದುವನ್ನು ಹರಿಭಕ್ತಿ ವೃದ್ಧಿಗಾಗಿ ಲಕ್ಷಸುಗಂಧ ಮಾಲೆಗಳನ್ನು, ಶ್ರೀಕೃಷ್ಣ ಪ್ರೀತಿಪ್ರಾಪ್ತಿಗಾಗಿ ರುಚಿಕರವಾದ ಮಧುರವಾದ ನಾನಾ ಬಗೆಯ ನೈವೇದ್ಯ-ಗಳನ್ನು, ನಾನಾವಿಧ ಪುಷ್ಪ ತುಳಸಿಗಳನ್ನು, ಸಸ್ಯವೃದ್ಧಿಗಾಗಿ ಸಾವಿರ ಬ್ರಾಹ್ಮಣರಿಗೆ ಅನ್ನ-ದಾನವನ್ನೂ ಭಕ್ತಿವೃದ್ಧಿಗಾಗಿ ನೂರು ಪುಷ್ಪಾಂಜಲಿ ಪೂರ್ವಕ ನಮಸ್ಕಾರಗಳನ್ನು ಸಮರ್ಪಿಸಬೇಕು.

ಈ ವ್ರತಕಾಲದಲ್ಲಿ ಆರು ತಿಂಗಳು ಹವಿಷ್ಯಾನ್ನ, ಐದು ತಿಂಗಳು ಹಣ್ಣು ಹಂಪಲು ಹದಿನೈದು ದಿನ ಹವಿಸ್ಸನ್ನು, ಉಳಿದ ಹದಿನೈದು ದಿನ ಕೇವಲ ನೀರನ್ನು ಸೇವಿಸಬೇಕು. ರಾತ್ರಿ ಕುಶಾಸನದಲ್ಲಿ ಜಾಗರಣ ಮಾಡಬೇಕು. ಸ್ಮರಣ, ಕೀರ್ತನ, ವಿಹಾರ, ಪ್ರೇಕ್ಷಣ, ರಹಸ್ಯಾಲಾಪ, ಮೈಥುನದ ಸಂಕಲ್ಪ ಮತ್ತು ಆಚರಣ ಹೀಗೆ ಎಂಟು ಬಗೆಯಾದ ಮೈಥುನವನ್ನು ವರ್ಜಿಸಬೇಕು. ಮುನ್ನೂರ ಅರವತ್ತು ಬ್ರಾಹ್ಮಣರಿಗೆ ಭೋಜನ, ಮುನ್ನೂರ ಅರವತ್ತು ಸುವರ್ಣದಾನಗಳನ್ನು ನೀಡಬೇಕು. ಈ ವ್ರತದ ಫಲ ದೃಢವಾದ ಹರಿಭಕ್ತಿ ಮತ್ತು ವಿಷ್ಣುತುಲ್ಯ ತ್ರಿಲೋಕ ಪ್ರಸಿದ್ಧ ಪುತ್ರಲಾಭ ಜೊತೆಗೆ, ಪತಿ ಸೌಭಾಗ್ಯ, ಐಶ್ವರ್ಯ, ಸೌಂದರ್ಯ, ವಿಪುಲ ಧನಲಾಭ. ಹೀಗೆ ಹೇಳಿ ಶಿವ ಸುಮ್ಮನಾದ.

**ಇಲ್ಲಿಗೆ ಶ್ರೀ ಬ್ರಹ್ಮವೈವರ್ತ ಮಹಾಪುರಾಣದಲ್ಲಿ ಮೂರನೆಯದಾದ ಗಣಪತಿ ಖಂಡದಲ್ಲಿ ನಾರದನಾರಾಯಣ ಸಂವಾದದಲ್ಲಿ ಪುಣ್ಯಕ ವ್ರತವಿಧಾನವೆಂಬ ನಾಲ್ಕನೆ ಅಧ್ಯಾಯ ಮುಗಿಯಿತು.**

# ಪುಣ್ಯಕ ವ್ರತಾನುಷ್ಠಾನದಿಂದ ಜನಿಸಿದ ಶ್ರೇಷ್ಠ ಪುತ್ರರತ್ನರು

**ಅಧ್ಯಾಯ-೫**

ನಾರಾಯಣ— ಪುಣ್ಯಕ ವ್ರತವಿಧಾನವನ್ನು ಶಿವನ ಮುಖದಿಂದ ಕೇಳಿದ ಪಾರ್ವತಿ ಸಂತುಷ್ಟಳಾಗಿ ಪುನಃ ವ್ರತಕಥೆಯನ್ನು ಕೇಳಬಯಸಿದಳು. ಶಿವ ನುಡಿದ-

ಮನುವಿನ ಪತ್ನಿ ಶತರೂಪೆ ಮಕ್ಕಳಿಲ್ಲದೆ ಕೊರಗಿ ಬ್ರಹ್ಮದೇವರಲ್ಲಿ ಕೇಳಿದಳು, 'ದೇವ, ನೀನು ಸೃಷ್ಟಿಕರ್ತ. ಬಂಜೆಯಾದ ನನಗೆ ಪುತ್ರಲಾಭವಾಗಲು ನಾನೇನು ಮಾಡಬೇಕು ? ಹೇಳು. ಮಕ್ಕಳಿಲ್ಲದ ಮನೆಯಲ್ಲಿ ಐಶ್ವರ್ಯ ಧನವಿಷ್ಟಿದ್ದರೂ ಶೋಭಿಸುವುದಿಲ್ಲ. ಪುತ್ರನಿಲ್ಲದವಳ ಜನ್ಮ ವ್ಯರ್ಥ. ತಪಸ್ಸು ದಾನಗಳಿಂದ ಬರುವ ಪುಣ್ಯ ಜನ್ಮಾಂತರದಲ್ಲಿ ಸುಖ ಕೊಟ್ಟೀತು. ಒಳ್ಳೆಯ ಪುತ್ರ ಮುಖ ಕಂಡು ನೂರು ಅಶ್ವಮೇಧಗಳ ಪುಣ್ಯ ಪಡೆದು ಪುತ್ ಎಂಬ ನರಕದಿಂದ ಪಾರಾಗುವನು. ಆದ್ದರಿಂದ ಪುತ್ರೋತ್ಪತ್ತಿಗೆ ಉಪಾಯವನ್ನು ಹೇಳು. ಅದನ್ನು ಮಾಡಿಯೂ ಫಲಿಸದಿದ್ದಲ್ಲಿ ನಾನು ಪತಿಯೊಂದಿಗೆ ಕಾಡಿಗೇ ಹೋಗುತ್ತೇನೆ. ನಮ್ಮ ರಾಜ್ಯ ಐಶ್ವರ್ಯ ಧನ ಭೂಮಿ-ಗಳನ್ನೆಲ್ಲ ನೀನೆ ಇಟ್ಟುಕೊ. ಮಕ್ಕಳಿಲ್ಲದ ನಮಗೆ ಅದರಿಂದೇನು ಪ್ರಯೋಜನ ? ಮಕ್ಕಳಿಲ್ಲದವನ ಮುಖವನ್ನು ನೋಡಲೂ ವಿದ್ವಾಂಸರು ಬಯಸುವುದಿಲ್ಲ. ಅವನೂ ತನ್ನ ಮುಖ ತೋರಿಸಲು ನಾಚುತ್ತಾನೆ. ನೀನು ನಮಗೆ ಈಗ ದಾರಿ ತೋರದಿದ್ದರೆ ನಾನು ವಿಷಪಾನ ಮಾಡುತ್ತೇನೆ ಅಥವಾ ಬೆಂಕಿಗೆ ಹಾರುತ್ತೇನೆ. ನಮ್ಮ ಮನೆ ಈಗಲೆ ಪುತ್ರಪೌತ್ರರಿಲ್ಲದೆ ಅಮಂಗಳಕರವಾಗಿದೆ. ಇನ್ನು ಸ್ತ್ರೀರಹಿತವೂ ಆಗುವುದು.' ಹೀಗೆ ಹೇಳಿ ಶತರೂಪೆ ಬ್ರಹ್ಮನ ಮುಂದೆ ಕಣ್ಣೀರು ಗರೆದಳು. ಕೃಪಾನಿಧಿಯಾದ ಬ್ರಹ್ಮ ಹೇಳತೊಡಗಿದ.

ಬ್ರಹ್ಮ— ಮಗಳೆ, ಪುತ್ರನನ್ನು ಪಡೆವ ಉಪಾಯವನ್ನು ಹೇಳುತ್ತೇನೆ, ಕೇಳು. ಅದು ಸರ್ವೈಶ್ವರ್ಯಾದಿದಾಯಕ ಸರ್ವಾಭೀಷ್ಟಪ್ರದ. ಮಾಘಶುದ್ಧ ತ್ರಯೋದಶೀದಿನ ಈ ವ್ರತ ಪ್ರಾರಂಭಿಸಿ ಕೃಷ್ಣನನ್ನು ಆರಾಧಿಸಬೇಕು. ಒಂದು ವರ್ಷಕಾಲ ವ್ರತ ಮಾಡಬೇಕು. ವೇದೋಕ್ತ ರೀತಿಯಿಂದ ದ್ರವ್ಯಗಳನ್ನು ದಾನ ಮಾಡಬೇಕು. ಈ ವ್ರತ ಕಾಣ್ವಶಾಖೋಕ್ತವಾದುದು. ವಿಷ್ಣು ತುಲ್ಯ ಪರಾಕ್ರಮ ಉಳ್ಳ ಪುತ್ರ ಈ ವ್ರತದ ಫಲವಾಗಿ ಜನಿಸುತ್ತಾನೆ.'

ಬ್ರಹ್ಮನ ಮಾತನ್ನು ಕೇಳಿ ಶತರೂಪೆ ವ್ರತಮಾಡಿ ಪ್ರಿಯವ್ರತ ಉತ್ತಾನಪಾದರೆಂಬ ಮನೋಹರರಾದ ಇಬ್ಬರು ಪುತ್ರರನ್ನು ಪಡೆದಳು. ಇದೇ ರೀತಿ ದೇವಹೂತಿಯೂ ಈ ವ್ರತದಿಂದ ನಾರಾಯಣಾಂಶನಾದ ಕಪಿಲನನ್ನು ಪುತ್ರನನ್ನಾಗಿ ಪಡೆದಳು. ಅರುಂಧತಿ ಶಕ್ತಿಯನ್ನು ಹಡೆದಳು. ಶಕ್ತಿಯ ಪತ್ನಿ ಪರಾಶರನನ್ನು ಹಡೆದಳು. ಅದಿತಿಯೂ ಈ

ವ್ರತದಿಂದಲೆ ವಾಮನನನ್ನು ಮಗನನ್ನಾಗಿ ಪಡೆದಳು. ಶಚಿ ಜಯಂತನನ್ನು ಉತ್ತಾನ-ಪಾದನ ಪತ್ನಿ ಧ್ರುವನನ್ನು, ಕುಬೇರಪತ್ನಿ ನಲಕೂಬರನನ್ನು, ಸೂರ್ಯಪತ್ನಿ ವೈವಸ್ವತ-ಮನುವನ್ನು, ಅತ್ರಿಪತ್ರಿ ಚಂದ್ರನನ್ನು, ಅಂಗಿರಸನ ಪತ್ನಿ ಬೃಹಸ್ಪತಿಯನ್ನು, ಭೃಗುಪತ್ನಿ ಶುಕ್ರನನ್ನು ಮಗನನ್ನಾಗಿ ಪಡೆದುದು ಈ ವ್ರತದ ಫಲ. ಪಾರ್ವತಿ, ನೀನೂ ಕೂಡ ಈ ವ್ರತಮಾಡಿ ಕೃಷ್ಣನನ್ನು ಒಲಿಸಿಕೊಳ್ಳು, ಅವನೆ ಒಂದು ಅಂಶದಿಂದ ನಿನ್ನ ಮಗ-ನಾಗುತ್ತಾನೆ.

ಹೀಗೆ ಶಿವ ಹೇಳಿದಾಗ ಪಾರ್ವತಿ ಸಂತೋಷದಿಂದ ಒಪ್ಪಿ ವ್ರತವನ್ನಾರಂಭಿಸಿದಳು.

**ಇಲ್ಲಿಗೆ ಶ್ರೀ ಬ್ರಹ್ಮವೈವರ್ತ ಮಹಾಪುರಾಣದಲ್ಲಿ ಮೂರನೆಯದಾದ ಗಣಪತಿ ಖಂಡದಲ್ಲಿ ನಾರದನಾರಾಯಣ ಸಂವಾದದಲ್ಲಿ ಪುಣ್ಯಕವ್ರತಕಥನವೆಂಬ ಐದನೆ ಅಧ್ಯಾಯ ಮುಗಿಯಿತು.**

## ಪಾರ್ವತಿ ವ್ರತಾಚರಣೆಯ ವೈಭವ, ಗಣೇಶೋತ್ಪತ್ತಿಯ ಸೂಚನೆ

**ಅಧ್ಯಾಯ-೬**

ನಾರದ— ಪಾರ್ವತಿ ವ್ರತವನ್ನು ಹೇಗೆ ಮಾಡಿದಳು, ಗಣಪತಿ ಹೇಗೆ ಜನಿಸಿದ-ನೆಂದು ಹೇಳು.

ನಾರಾಯಣ— ಶಿವ ವ್ರತವಿಧಾನವನ್ನು. ದೇವಿಗೆ ಉಪದೇಶಿಸಿ ತಪಸ್ಸಿಗೆ ಹೊರಟುಹೋದ. ಸದಾ ಹರಿಯ ಆರಾಧನೆ, ಹರಿಯ ಧ್ಯಾನಗಳಲ್ಲಿಯೆ ತನ್ಮಯನಾಗಿ ತಪಸ್ಸಿನಲ್ಲಿ ಮಗ್ನನಾದ. ಹಗಲು ರಾತ್ರಿಗಳ ಪರಿವೆಯಿಲ್ಲದೆ ಹರಿಮಂತ್ರ ಜಪಿಸುತ್ತ ಪರಮಾನಂದ ಪೂರ್ಣನಾದ. ಇತ್ತ ದೇವಿ ಪರಿಚಾರಕರಿಂದಲೂ ಬ್ರಾಹ್ಮಣರಿಂದಲೂ ವ್ರತದ ಸಿದ್ಧತೆ ಮಾಡಿಕೊಂಡು ವ್ರತವನ್ನಾರಂಭಿಸಿದಳು. ಬ್ರಹ್ಮಪುತ್ರನಾದ ಪೂಜ್ಯ ಸನತ್ಕುಮಾರ ಮೂರ್ತಿಮತ್ತಾದ ತೇಜೋರಾಶಿಯಂತೆ ಬ್ರಹ್ಮವರ್ಚಸ್ಸಿನಿಂದ ಜ್ವಲಿಸುತ್ತ ಬಂದ. ಬ್ರಹ್ಮ ಸಪತ್ನೀಕನಾಗಿ ಬ್ರಹ್ಮಲೋಕದಿಂದ ಬಂದ. ಮಹೇಶ್ವರನೂ ಬಂದ. ಕ್ಷೀರಸಾಗರ ಶಾಯಿಯಾದ ಭಗವಾನ್ ನಾರಾಯಣನೂ ಚತುರ್ಭುಜ ನೀಲಮೇಘ-ಶ್ಯಾಮ, ಉರದಲ್ಲಿ ವನಮಾಲೆ ಧರಿಸಿ, ರತ್ನಾಭರಣ ಭೂಷಿತನಾಗಿ ಲಕ್ಷ್ಮೀದೇವಿ-ಯೊಡನೆ ಸಕಲ ಪರಿವಾರದೊಡನೆ ರತ್ನಯಾನವೇರಿ ಬಂದ. ಬಳಿಕ ಸನಕ, ಸನಂದನ, ಸನಾತನ, ಕಪಿಲ, ಆಸುರಿ, ಕ್ರತು, ಹಂಸ, ವೋಢು, ಪಂಚಶಿಖಿ, ಆರುಣಿ, ಯತಿ, ಸುಮತಿ, ವಸಿಷ್ಠ, ಪುಲಸ್ತ್ಯ, ಅತ್ರಿ, ಭೃಗು, ಅಂಗಿರಸ್, ಅಗಸ್ತ್ಯ ಪ್ರಚೇತಸ್,

ದೂರ್ವಾಸ, ಚ್ಯವನ, ಮರೀಚಿ, ಕಶ್ಯಪ, ಕಣ್ವ, ಜರತ್ಕಾರು, ಗೌತಮ, ಬೃಹಸ್ಪತಿ, ಉತಥ್ಯ, ಸಂವರ್ತ, ಸೌಭರಿ, ಜಾಬಾಲಿ, ಜಮದಗ್ನಿ, ಜೈಗೀಷವ್ಯ, ದೇವಲ, ಗೋಕಾ-ಮುಖ, ಚಕ್ರಕರ, ಪಾರಿಭದ್ರ, ಪರಾಶರ, ವಿಶ್ವಾಮಿತ್ರ, ವಾಮದೇವ, ಋಷ್ಯಶೃಂಗ, ವಿಭಾಂಡಕ, ಮಾರ್ಕಂಡೇಯ, ಮೃಕಂಡು, ಪುಷ್ಕರ, ಲೋಮಶ, ಕೌತ್ಸ, ವತ್ಸ, ದಕ್ಷ, ಬಾಲಾಗ್ನಿ, ಅಘಮರ್ಷಣ, ಕಾತ್ಯಾಯನ, ಕಣಾದ, ಪಾಣಿನಿ, ಶಾಕಟಾಯನ, ಶಂಕು, ಆಪಿಶಾಲಿ, ಶಾಕಲ್ಯ, ಶಂಖ ಮೊದಲಾದ ಮುನಿಗಳು ಬಂದರು.

ಧರ್ಮಪುತ್ರರಾದ ನರ ನಾರಾಯಣರು ನಾವೂ ಬಂದೆವು. ಅಷ್ಟದಿಕ್ಪಾಲಕರು, ಸಕಲ ದೇವತೆಗಳು ಯಕ್ಷಗಂಧರ್ವಕಿನ್ನರರು ಬಂದರು. ಪರ್ವತರಾಜ ಹಿಮಾಲಯನೂ ಹೆಂಡತಿ ಮಕ್ಕಳೊಡನೆ ಪರಿವಾರದೊಡನೆ ಬಂದ. ಬೇರೆ ಪರ್ವತಗಳೂ ಸಪರಿವಾರ-ರಾಗಿ ಬಂದರು.

ಹಿಮಾಲಯನು ವ್ರತಕ್ಕೆ ಯೋಗ್ಯವಾದ ದುರ್ಲಭವಾದ ನಾನಾ ಅಮೂಲ್ಯ ದ್ರವ್ಯಗಳನ್ನು ಜೊತೆಗೆ ತಂದಿದ್ದ. ಒಂದು ಲಕ್ಷ ಆನೆಗಳು ಮೂರುಲಕ್ಷ ಕುದುರೆಗಳು, ಹತ್ತುಲಕ್ಷ ಗೋವುಗಳು, ನೂರು ಲಕ್ಷ ಚಿನ್ನದ ನಾಣ್ಯಗಳು, ಲಕ್ಷಗಟ್ಟಲೆ ಮುತ್ತು-ವಜ್ರಗಳ ಹಾರಗಳು ಸಾವಿರಾರು ಕೌಸ್ತುಭ ಮಣಿಗಳು. ರುಚಿಕರವಾದ ನಾನಾ ದ್ರವ್ಯ-ಗಳ ಲಕ್ಷಾಂತರ ಮೂಟೆಗಳು, ಇವನ್ನೆಲ್ಲ ಅನಂತರತ್ನ ಪ್ರಭವನೆನಿಸಿದ ಹಿಮಾಲಯ ತನ್ನ ಮಗಳು ಕೈಗೊಂಡ ವ್ರತಕ್ಕಾಗಿ ತಂದಿದ್ದ.

ವಿದ್ಯಾಧರಿಯರೂ ನರ್ತಕ ನರ್ತಕಿಯರೂ ಅಪ್ಸರೆಯರೂ ನಾನಾ ವಿಧ ವಾದ್ಯ-ಗಳೊಂದಿಗೆ ಬಂದರು. ಕೈಲಾಸದ ರಾಜಮಾರ್ಗ ಚಂದನ, ಮಾವಿನ ತಳಿರುತೋರಣ, ಬಾಳೆ ಕಂಬಗಳು, ಗರಿಕೆಹಲ್ಲು, ಮುತ್ತುಗ ಎಲೆಗಳು, ಅರಳು ಧಾನ್ಯಕಾಳುಗಳು ಫಲ-ಪುಷ್ಪಗಳು ಇವುಗಳಿಂದ ಅಲಂಕೃತವಾಗಿತ್ತು. ಪದ್ಮರಾಗ ಮಣಿಯಿಂದ ನಿರ್ಮಿತವಾಗಿತ್ತು.

ಬಂದ ಅತಿಥಿ ಅಭ್ಯಾಗತರೆಲ್ಲ ಶಂಕರನಿಂದ ಸತ್ಕೃತರಾಗಿ ಉನ್ನತವಾದ ಸಿಂಹಾಸನ-ಗಳಲ್ಲಿ ಕುಳಿತರು. ಈ ಸಮಾರಂಭದಲ್ಲಿ ದಾನಾಧ್ಯಕ್ಷ ಇಂದ್ರ. ಕೋಶಾಧ್ಯಕ್ಷ ಕುಬೇರ, ಮೇಲ್ವಿಚಾರಕ ಸೂರ್ಯ, ವಿತರಣ ಮಾಡುವವ ವರುಣ. ಹೀಗೆ ಅಧಿಕಾರ ವಹಿಸಿದ್ದರು.

ಸಾವಿರಾರು ಹಾಲು ಮೊಸರಿನ ಹೊಳೆಗಳೆ ಹರಿದುವು. ನೂರಾರು ಬೆಲ್ಲ ತುಪ್ಪಗಳ ಹೊಳೆಗಳು, ಸಾವಿರಾರು ಜೇನಿನ ಹೊಳೆಗಳು, ನೂರಾರು ಎಣ್ಣೆಯ ಹೊಳೆಗಳು ಲಕ್ಷಾಂತರ ಮಜ್ಜಿಗೆ ಹೊಳೆಗಳು, ನೂರು ಲಕ್ಷ ಅಮೃತ ಕಲಶಗಳು, ಲಕ್ಷಾಂತರ ಸಕ್ಕರೆಯ ಮಿಷ್ಟಾನ್ನ ರಾಶಿಗಳು, ಲಕ್ಷಾಂತರ ತುಪ್ಪದಲ್ಲಿ ಕರಿದ ಅಕ್ಕಿ ಗೋಧಿ ಹಿಟ್ಟುಗಳ ಭಕ್ಷ್ಯಗಳು, ಲಕ್ಷಾಂತರ ಸ್ವಸ್ತಿಕ ವಾಯನಗಳು, ಕೋಟಿ ಬೆಲ್ಲದ ಅರಳಿನ ರಾಶಿಗಳು,

ಅವಲಕ್ಕಿಯ ಹತ್ತುಕೋಟಿ ರಾಶಿಗಳು, ಅಸಂಖ್ಯ ಅಕ್ಕಿರಾಶಿಗಳು, ಪರ್ವತಾಕಾರದ ಚಿನ್ನ ಬೆಳ್ಳಿ ಹವಳಗಳ ರಾಶಿಗಳು ಎಲ್ಲೆಲ್ಲೂ ಕಂಡುಬಂದುವು.

ಲಕ್ಷ್ಮೀದೇವಿ ಪಾಯಸ, ತಂಬಿಟ್ಟು, ಶಾಲ್ಯನ್ನ ಮತ್ತು ತುಪ್ಪದಲ್ಲಿ ಮಾಡಿದ ವ್ಯಂಜನ ಪದಾರ್ಥಗಳನ್ನು ಭೋಜನಕ್ಕೆ ಸಿದ್ಧಪಡಿಸಿದಳು. ಶಂಕರ ನಾರಾಯಣರೂ ಎಲ್ಲ ದೇವತೆಗಳೂ ಋಷಿಗಳೂ ಉಂಡರು. ಲಕ್ಷ ಬ್ರಾಹ್ಮಣರು ಬಡಿಸಿದರು. ಉಂಡು ರತ್ನ ಸಿಂಹಾಸನಗಳಲ್ಲಿ ಕುಳಿತ ಎಲ್ಲರಿಗೂ ಆ ಬ್ರಾಹ್ಮಣರು ಪಚ್ಚಕರ್ಪೂರ ಸುವಾಸಿತ-ವಾದ ತಾಂಬೂಲವಿತ್ತರು. ಬಳಿಕ ರತ್ನಸಿಂಹಾಸನದಲ್ಲಿ ಮಂಡಿಸಿ ಪಾರ್ಷದರಿಂದ ಚಾಮರಸೇವೆ ಕೈಗೊಳ್ಳುತ್ತ ಪ್ರಸನ್ನನಾಗಿ ಕುಳಿತಿದ್ದ ನಾರಾಯಣನ ಮುಂದೆ ವಿದ್ಯಾಧರಿಯರ ನರ್ತನ ಸೇವೆಯೂ ನಡೆಯಿತು. ಗಂಧರ್ವರ ಗಾನ ನಡೆಯಿತು.

ಶಿವ ಬ್ರಹ್ಮನ ಅನುಮತಿ ಪಡೆದು ನಾರಾಯಣನ ಮುಂದೆ ಕೈಮುಗಿದು ಹೇಳಿದ—

'ಶ್ರೀನಿವಾಸ ಪ್ರಭೋ, ನನ್ನ ಮಾತನ್ನಾಲಿಸು. ಎಲ್ಲ ವ್ರತ ಜಪ ಯಜ್ಞ ಪೂಜೆ-ಗಳಲ್ಲಿಯೂ ನೀನೆ ಪೂಜಿತನಾಗುವವ. ಸರ್ವಾಭೀಷ್ಟ ಫಲ ಕೊಡುವವನೂ ನೀನೆ. ಈಗ ಮಕ್ಕಳಿಲ್ಲದೆ ಕೊರಗುತ್ತಿರುವ ಪಾರ್ವತಿ ಪುತ್ರ ಪ್ರಾಪ್ತಿಗಾಗಿ ಪುಣ್ಯಕ ವ್ರತ ಮಾಡುತ್ತಿದ್ದಾಳೆ. ದೇವತೆಗಳು ನಮ್ಮ ರತಿಕ್ರೀಡೆಗೆ ಭಂಗತಂದಾಗ ನನ್ನ ವೀರ್ಯ ವ್ಯರ್ಥವಾದುದನ್ನು ಕಂಡು ಪಾರ್ವತಿ ದುಃಖಿಸಿದಳು. ನಾನು ಸವಿನುಡಿಗಳಿಂದ ಸಂತೈಸಿ ಈ ವ್ರತ ಮಾಡಲು ಪ್ರೇರಿಸಿದೆ. ಈ ವ್ರತದಿಂದ ಸತ್ಪುತ್ರನನ್ನೂ ಪತಿ ಸೌಭಾಗ್ಯವನ್ನೂ ಅವಳು ಬಯಸುತ್ತಿದ್ದಾಳೆ. ಅವೆರಡೂ ಸಿಗದಿದ್ದಲ್ಲಿ ಅವಳು ಪ್ರಾಣಗಳನ್ನೆ ತೊರೆಯುತ್ತಾಳೆ. ಹಿಂದೆ ದಕ್ಷಪುತ್ರಿಯಾಗಿದ್ದಾಗ ತನ್ನ ತಂದೆ ನನ್ನನ್ನು ನಿಂದಿಸಿದುದನ್ನು ಕೇಳಿ ದೇಹತ್ಯಾಗ ಮಾಡಿದ ಮಾನಿನಿ ಈಕೆ. ಎಲ್ಲವನ್ನೂ ಬಲ್ಲ ನಿನಗೆ ನಾನು ಹೇಳಬೇಕಾದುದೇನು ? ದೀನಳಾದ ಈಕೆಗೆ ನೀನು ಹಿತ ನುಡಿಯಬೇಕು.

ಸ್ತ್ರೀ ಸ್ವಭಾವದಲ್ಲೆ ಇರುವ ಚಾಪಲ್ಯ ಯಾರಿಗೂ ತಡೆಯಲಸಾಧ್ಯ. ಅವರು ಎಂಥಹ ಯೋಗಿಗಳನ್ನೂ, ತಪಸ್ವಿಗಳನ್ನೂ, ಜಿತೇಂದ್ರಿಯರಾದ ಕೋಪವನ್ನು ಗೆದ್ದ ಸಿದ್ಧರನ್ನೂ ಮೋಹಗೊಳಿಸಬಲ್ಲರು. ಎಲ್ಲ ಮಾಯೆಗೂ ಮೂಲಾಧಾರ, ಕಾಮವರ್ಧಕ, ಕಾಮದೇವನ ಬ್ರಹ್ಮಾಸ್ತ್ರ ಸ್ತ್ರೀರೂಪ. ಮೋಕ್ಷದ ಬಾಗಿಲನ್ನು ಮುಚ್ಚುತ್ತದೆ. ಹರಿಭಕ್ತಿ-ಯನ್ನು ಪ್ರತಿಬಂಧಿಸುತ್ತದೆ. ಸಂಸಾರದಲ್ಲಿ ಬಂಧಿಸಿಡುವ ಹಗ್ಗದಂತಿರುತ್ತದೆ. ವೈರಾಗ್ಯ-ನಾಶಕ, ರಾಗವರ್ಧಕ, ಸಾಹಸಗಳಿಗೆ ದೋಷಗಳಿಗೆ ಮನೆ, ಅವಿಶ್ವಾಸದ ಕ್ಷೇತ್ರ, ಸ್ವತಃ ಕಪಟ- ರೂಪ. ಅಹಂಕಾರಾಶ್ರಯ, ಮೇಲೆ ಅಮೃತ, ಒಳಗೆ ವಿಷ ತುಂಬಿದ ಕೊಡ ಸ್ತ್ರೀರೂಪ. ಅದನ್ನು ಯಾರೂ ಪರಿಹರಿಸಿಕೊಳ್ಳಲಾರರು, ತಮಗೆ ಅನುಕೂಲ-ವಾಗುವಂತೆ ಉಪಯೋಗಿಸಿಕೊಳ್ಳಲೂ ಶಕ್ತರಾಗಲಾರರು.

ನಾರಾಯಣ— ಪುತ್ರಪ್ರಾಪ್ತಿ ಮತ್ತು ಪತಿ ಸೌಭಾಗ್ಯಗಳಿಗಾಗಿ ಪಾರ್ವತಿ ಪುಣ್ಯಕ-ವ್ರತ ಕೈಗೊಂಡಿದ್ದಾಳೆ. ಅದು ಸರ್ವಾಭೀಷ್ಟದಾಯಕ. ಆದರೆ ಅಷ್ಟೇ ಕಷ್ಟಸಾಧ್ಯ. ಸರ್ವಸಾಕ್ಷಿ ಜ್ಯೋತಿರೂಪ ಸನಾತನನಾದ ಪರಮಾತ್ಮ ಭಕ್ತಾನುಗ್ರಹಕಾರಕ. ಅನ್ಯರಿಗೆ ಅವನನ್ನು ಒಲಿಸಲು ಸಾಧ್ಯವಿಲ್ಲ. ಆತ ಭಕ್ತಿಗೆ ಅಧೀನನಾಗುವವ. ಬ್ರಹ್ಮ ವಿಷ್ಣು ಮಹೇಶ್ವರರು ಅವನ ಅಂಶಭೂತರು. ಮಹಾವಿರಾಟ್ ಪುರುಷನೂ ಅವನ ಅಂಶ. ಏಳು ಜನ್ಮಗಳಲ್ಲಿ ಅನ್ಯ ಕ್ಷುದ್ರದೇವತೆಗಳನ್ನು ಭಜಿಸಿದರೆ ಆ ದೇವತೆಗಳ ಅನುಗ್ರಹ-ದಿಂದ ಸೂರ್ಯ ಮಂತ್ರ ಲಾಭವಾಗುವುದು. ಮೂರು ಜನ್ಮ ಸೂರ್ಯಮಂತ್ರವನ್ನು ಭಜಿಸಿದರೆ ಸೂರ್ಯಾನುಗ್ರಹದಿಂದ ಶಿವಮಂತ್ರಲಾಭ. ಏಳು ಜನ್ಮಗಳಲ್ಲಿ ಶಿವಮಂತ್ರ ಜಪಿಸಿದರೆ ಮಾಯಾಮಂತ್ರ ಲಭಿಸುವುದು. ನೂರು ಜನ್ಮ ಮಾಯಾಮಂತ್ರ ಉಪಾಸನೆ ಮಾಡಿದರೆ ಕೃಷ್ಣಭಕ್ತಿ ಲಭಿಸುವುದು. ಕೃಷ್ಣಭಕ್ತರ ಸಂಗಡದಿಂದ ಭಕ್ತಿ ಪರಿಪಕ್ವ-ವಾಗುವುದು. ದೇವತೆಗಳ ಅನುಗ್ರಹವೂ ಉಂಟಾಗುವುದು. ಆಗ ಕೃಷ್ಣಮಂತ್ರ ಲಭಿಸುವುದು. ಬಹುಕಾಲ ಕೃಷ್ಣನ ಉಪಾಸನೆ ಮಾಡಿ ಆತ ಕೃಷ್ಣಸದೃಶನಾಗುವನು. ಮಹಾಪ್ರಳಯದಲ್ಲಿ ಎಲ್ಲರಿಗೂ ಲಯ ಉಂಟಾದರೂ ಇಂಥ ಕೃಷ್ಣಭಕ್ತನಿಗೆ ಲಯವಿಲ್ಲ. ಆತ ಶಾಶ್ವತವಾದ ಗೋಲೋಕವನ್ನ ಸೇರಿರುತ್ತಾನೆ. ಅಲ್ಲಿ ಕೃಷ್ಣಸೇವೆ ಮಾಡುತ್ತ ಆನಂದದಿಂದಿರುತ್ತಾನೆ. ನಿಶ್ಚಿಂತೆಯಿಂದ ಇರುತ್ತಾನೆ. ಬ್ರಹ್ಮಾದಿ ದೇವತೆ-ಗಳಿನ್ನೂ ಸಂಸಾರದಲ್ಲಿರುವುದನ್ನು ಕಂಡು ನಗುತ್ತಾನೆ.

ಶಿವ, ನೀನು ಬೇರೆ ಎಲ್ಲರನ್ನೂ ಸಂಹರಿಸಿದ್ದರೂ ನನ್ನ ಭಕ್ತರನ್ನೂ ಸಂಹರಿಸಲಾರೆ. ಮಾಯೆ ಎಲ್ಲರನ್ನೂ ಆವರಿಸುವುದು, ನನ್ನ ಭಕ್ತರಿಗೆ ನನ್ನ ಕೃಪೆಯಿಂದ ಮಾಯೆಯ ತೊಡಕು ಇರುವುದಿಲ್ಲ. ಮಾಯೆ ನನ್ನ ಭಕ್ತರಿಗೆ ಕೃಷ್ಣಭಕ್ತಿಯನ್ನೆ ನೀಡುತ್ತಾನೆ.

**ಮಾಯಾ ನಾರಾಯಣೀ ಮಾತಾ ಸರ್ವೇಷಾಂ ಕೃಷ್ಣಭಕ್ತಿದಾ ।**
**ನ ಕೃಷ್ಣಭಕ್ತಿಂ ಪ್ರಾಪ್ನೋತಿ ವಿನಾ ಮಾಯಾ ನಿಷೇವಣಂ ॥**

ಮಾಯೆ ಎಂದರೆ ನಾರಾಯಣನ ಮಡದಿ. ಜಗನ್ಮಾತೆ. ಎಲ್ಲರಿಗೂ ಕೃಷ್ಣಭಕ್ತಿ ನೀಡುವವಳು ಅವಳೆ. ಅವಳ ಸೇವೆ ಮಾಡದೆ ಯಾರಿಗೂ ಕೃಷ್ಣಭಕ್ತಿ ದೊರಕದು.

ಈ ಮಾಯೆಯೆ ಮೂಲಪ್ರಕೃತಿ. ಕೃಷ್ಣನಿಗೆ ಪ್ರಿಯಳು. ಕೃಷ್ಣನಂತೆ ಅವಿನಾಶಿನಿ. ಚಿನ್ಮಯಸ್ವರೂಪಳು. ಸ್ವೇಚ್ಛೆಯಿಂದ ತನ್ನ ಚಿನ್ಮಯ ರೂಪವನ್ನು ಭಕ್ತರಿಗೆ ತೋರುವಳು. ದೇವತೆಗಳೆಲ್ಲರ ತೇಜಸ್ಸುಗಳಿಂದ ಆವಿರ್ಭವಿಸಿ ದೈತ್ಯರನ್ನು ಕೊಂದವಳು ಅವಳೆ. ಮುಂದೆ ದಕ್ಷನು ಅನೇಕ ಜನ್ಮಗಳಲ್ಲಿ ತಪಸ್ಸು ಮಾಡಿದ್ದರ ಫಲವಾಗಿ ಅವನ ಪತ್ನಿಯಲ್ಲಿ ಸತಿಯಾಗಿ ಹುಟ್ಟಿ ತಂದೆಯ ಮುಖದಿಂದ ಪತಿನಿಂದೆ ಕೇಳಿ ಸಹಿಸದೆ ಯೋಗ-ಬಲದಿಂದ ಶರೀರತ್ಯಾಗ ಮಾಡಿದಳು. ನೀನು ಅವಳ ಶರೀರವನ್ನು ಹೊತ್ತು ಎಲ್ಲೆಡೆ ತಿರುಗಲಾರಂಭಿಸಿದಾಗ ನಿನ್ನನ್ನು ಸಂತೈಸಿದೆ. ಆ ಸತೀದೇವಿ ಹಿಮಾಲಯನ ಮಗಳಾಗಿ

ಹುಟ್ಟಿ ಈಗ ಪುಣ್ಯಕ ವ್ರತ ಮಾಡುತ್ತಿದ್ದಾಳೆ. ಇದು ಸಾವಿರ ರಾಜಸೂಯ ಯಾಗಕ್ಕೆ ಸಮಾನ. ಅಷ್ಟೇ ಧನವ್ಯಯ ಮಾಡಬೇಕಾಗುವುದರಿಂದ ಎಲ್ಲ ಸ್ತ್ರೀಯರಿಗೆ ಇದು ಸಾಧ್ಯವಲ್ಲ. ಈ ವ್ರತದಿಂದಲೆ ನೀನೂ ಭೂತಪತಿ ಎನಿಸಿರುವೆ. ಈಗ ಪಾರ್ವತಿಯ ಗರ್ಭದಿಂದ ಒಬ್ಬ ಶ್ರೇಷ್ಠ ಪುತ್ರನೂ ಉದಿಸುವನು. ಆ ಬಾಲಕನೆ ದೇವಗಣಗಳಿಗೆ ಈಶನಾಗುವುದರಿಂದ ಗಣೇಶನೆನಿಸುವನು. ಸ್ಮರಣಮಾತ್ರದಿಂದ ವಿಘ್ನನಾಶ ಮಾಡುವುದರಿಂದ ವಿಘ್ನನಿಘ್ನನೆನಿಸುವನು. ಪುಣ್ಯಕ ವ್ರತದಲ್ಲಿ ಭಕ್ತರು ಅರ್ಪಿಸುವ ನೈವೇದ್ಯ ಉಂಡು ಹೊಟ್ಟೆ ಬೆಳೆವುದರಿಂದ ಲಂಬೋದರನೆನಿಸುವನು. ಶನಿದೃಷ್ಟಿಯಿಂದ ತಲೆ ಬೀಳುವಾಗ ಆನೆಯ ತಲೆ ಸೇರಿಸುವುದರಿಂದ ಗಜಾನನನೆನಿಸುವನು. ಪರಶುರಾಮನ ಕೊಡಲಿಯಿಂದ ಒಂದು ದಂತಭಂಗವಾಗುವುದರಿಂದ ಏಕದಂತನೆನಿಸುವನು.

ಗಣೇಶ ಸರ್ವದೇವತೆಗಳಿಗೂ ಪೂಜ್ಯನೆನಿಸುವನು. ನನ್ನ ವರಬಲದಿಂದ ಎಲ್ಲ ದೇವತೆಗಳಿಗಿಂತಲೂ ಮೊದಲಿಗೆ ಪೂಜೆ ಅವನಿಗೇ ಸಲ್ಲುವುದು. ಅವನನ್ನು ಪೂಜಿಸಿ ಬೇರೆ ದೇವತೆಗಳ ಪೂಜೆ ಮಾಡಿದರೆ ಮಾತ್ರ ಪೂಜೆ ನಿರ್ವಿಘ್ನವಾಗಿ ನಡೆಯುವುದು. ಫಲವೂ ಬರುವುದು.

ಗಣೇಶ, ಸೂರ್ಯ, ವಿಷ್ಣು, ಶಿವ, ಅಗ್ನಿ, ದುರ್ಗೆ ಈ ದೇವತೆಗಳನ್ನು ಮೊದಲು ಪೂಜಿಸಿಯೆ ಇತರ ದೇವತೆಗಳನ್ನು ಪೂಜಿಸಬೇಕು. ಗಣೇಶಪೂಜೆಯಿಂದ ವಿಘ್ನಪರಿಹಾರ. ಸೂರ್ಯಪೂಜೆಯಿಂದ ವ್ಯಾಧಿ ಪರಿಹಾರ. ವಿಷ್ಣು ಪೂಜೆಯಿಂದ ಆತ್ಮಶುದ್ಧಿ, ಮೋಕ್ಷ, ಪಾಪನಾಶ, ಯಶಸ್ಸು, ಐಶ್ವರ್ಯಗಳುಂಟಾಗುವುವು. ತೃಪ್ತಿಕಾರಣವಾದ ತತ್ವಜ್ಞಾನ ಶಿವಪೂಜಾಫಲ. ಮನಸ್ಸು ನಿರ್ಮಲವಾಗುವುದು ಅಗ್ನಿಪೂಜೆಯ ಫಲ. ವಿಧ್ಯುಕ್ತವಾಗಿ ಸಂಸ್ಕಾರಮಾಡಿರುವ ಅಗ್ನಿಯನ್ನು ಪೂಜಿಸಿದರೆ ಜ್ಞಾನ ಲಭಿಸುವುದು. ದುರ್ಗಾಪೂಜೆಯಿಂದ ಹರಿಭಕ್ತಿ ಲಭಿಸುವುದು. ಈ ದೇವತೆಗಳನ್ನು ಪೂಜಿಸದಿದ್ದರೆ ವಿಪರೀತ ಫಲ. ಇವರು ನಿತ್ಯರಾಗಿದ್ದು ಸೃಷ್ಟ್ಯಾದಿಕಾರ್ಯ ಮಾಡುತ್ತಾರೆ. ಕೃಷ್ಣನ ಇಚ್ಛಾನುಸಾರ ಆವಿರ್ಭಾವ ತಿರೋಭಾವಗಳನ್ನು ಹೊಂದುತ್ತಾರೆ.

ಹೀಗೆ ಹೇಳಿ ಹರಿ ಸುಮ್ಮನಾದ. ಶಿವ ಪಾರ್ವತಿಯರೂ ಎಲ್ಲ ದೇವತೆಗಳೂ ಋಷಿಗಳೂ ಹರಿಯ ಮಾತಿನಿಂದ ಸಂತುಷ್ಟರಾದರು.

**ಇಲ್ಲಿಗೆ ಶ್ರೀ ಬ್ರಹ್ಮವೈವರ್ತ ಮಹಾಪುರಾಣದಲ್ಲಿ ಮೂರನೆಯದಾದ ಗಣಪತಿ ಖಂಡದಲ್ಲಿ ನಾರದನಾರಾಯಣ ಸಂವಾದದಲ್ಲಿ ವ್ರತಾಜ್ಞಾಗ್ರಹಣವೆಂಬ ಆರನೆ ಅಧ್ಯಾಯ ಮುಗಿಯಿತು.**

# ಸನತ್‌ಕುಮಾರರು ಸತಿಗೆ ಪತಿಯನ್ನೇ ದಾನಕೊಡು ಎಂದಾಗ ಪಾರ್ವತಿ ಮತ್ತು ದೇವತೆಗಳ ಸಂವಾದ, ಪಾರ್ವತಿಯಿಂದ ವಿಷ್ಣುಸ್ತುತಿ

**ಅಧ್ಯಾಯ-೭**

ನಾರಾಯಣ— ನಾರದ, ಹೀಗೆ ಶ್ರೀಹರಿಯ ಆಜ್ಞೆ ಸ್ವೀಕರಿಸಿ ಶಿವ ಪಾರ್ವತಿಗೆ ವ್ರತ ಆರಂಭಿಸಲು ಅನುಮತಿ ನೀಡಿದ. ಪಾರ್ವತಿ ಮಂಗಳವಾದ್ಯ ಮಾಡಿಸಿ ಸ್ನಾನಮಾಡಿ ಮಡಿಯುಟ್ಟು ಬಿಳಿಧಾನ್ಯದ ಮೇಲೆ ರತ್ನಕಲಶ ಸ್ಥಾಪಿಸಿದಳು. ಅದರಲ್ಲಿ ಮಾವಿನ ಚಿಗುರು ತೆಂಗಿನಕಾಯಿ ಅಕ್ಷತೆಗಳಿಟ್ಟು ಚಂದನ ಅಗುರು ಕಸ್ತೂರಿ ಕುಂಕುಮಗಳಿಂದ ಅಲಂಕರಿಸಿದಳು.

ರತ್ನೋದ್ಭವನಾದ ಹಿಮಾಲಯನ ಮಗಳು. ರತ್ನಾಭರಣ ಭೂಷಿತಳು ರತ್ನ ಸಿಂಹಾಸನದಲ್ಲಿ ಮಂಡಿಸುವವಳು ಪಾರ್ವತಿ. ಅವಳು ಈಗ ರತ್ನ ಸಿಂಹಾಸನಗಳಲ್ಲಿ ಮುನಿಗಳನ್ನೂ ಪುರೋಹಿತನನ್ನೂ ದಿಕ್ಪಾಲರನ್ನೂ ದೇವ ನರ ನಾಗಾದಿಗಳನ್ನೂ ಕೂಡಿಸಿ ಚಂದನ ಅಗುರು ಕಸ್ತೂರಿ ರತ್ನಾಭರಣಗಳಿಂದ ಪೂಜಿಸಿದಳು. ಬ್ರಹ್ಮ ವಿಷ್ಣು ಮಹೇಶ್ವರರನ್ನೂ ಭಕ್ತಿಯಿಂದ ಪೂಜಿಸಿದಳು. ಬಳಿಕ ಸ್ವಸ್ತಿವಾಚನಪೂರ್ವಕವಾಗಿ ವ್ರತವನ್ನಾರಂಭಿಸಿ ಇಷ್ಟ ದೇವತೆಯಾದ ಶ್ರೀಕೃಷ್ಣನನ್ನು ಮಂಗಳಕಲಶದಲ್ಲಿ ಆವಾಹಿಸಿ ಭಕ್ತಿಯಿಂದ ಷೋಡಶೋಪಚಾರಗಳನ್ನು ಅರ್ಪಿಸಿದಳು. ವ್ರತದಲ್ಲಿ ವಿಹಿತವಾದ ದುರ್ಲಭವಾದ ಎಲ್ಲ ದ್ರವ್ಯಗಳನ್ನೂ ವೇದಮಂತ್ರಗಳಿಂದ ಅರ್ಪಿಸಿದಳು. ಎಳ್ಳು ತುಪ್ಪಗಳ ಮೂರುಲಕ್ಷ ಆಹುತಿಗಳಿಂದ ಹೋಮಮಾಡಿಸಿ ಬ್ರಾಹ್ಮಣರಿಗೂ ಅತಿಥಿಗಳಿಗೂ ಭೋಜನ ಮಾಡಿಸಿದಳು. ಹೀಗೆ ಒಂದು ವರ್ಷಕಾಲ ಪ್ರತಿದಿನ ವ್ರತವನ್ನಾಚರಿಸಿದಳು.

ವ್ರತ ಸಮಾಪ್ತಿಯ ದಿನ ಪುರೋಹಿತನಾದ ಸನತ್ಕುಮಾರ ದೇವಿಯಲ್ಲಿ ಪತಿದಕ್ಷಿಣೆ ಕೇಳಿದ. ದೇವಿ ಇದನ್ನು ಕೇಳಿ ತಬ್ಬಿಬ್ಬಾದಳು. ಅಳತೊಡಗಿದಳು. ಮೂರ್ಛಿತಳಾಗಿ ಬಿದ್ದಳು. ಮುನಿಗಳೆಲ್ಲ ದೇವಿಯನ್ನು ಸಂತೈಸಲು ಶಿವನನ್ನೆ ಕಳಿಸಿದರು. ಶಿವ ದೇವಿಯನ್ನು ಸಂತೆಸುತ್ತ ಹೇಳಿದ— 'ದೇವಿ, ಏಳು. ನಿನಗೆ ಶುಭವಾಗುತ್ತದೆ. ಈಗ ಸ್ವಲ್ಪ ಧೈರ್ಯ ಮಾಡಿ ನನ್ನ ಮಾಡು ಕೇಳು. ಎಲ್ಲ ಕರ್ಮಗಳಿಗೂ ಅತ್ಯಂತ ಆವಶ್ಯಕವಾದುದು ದಕ್ಷಿಣೆ. ಅದು ಯಶಸ್ಸಿಗೂ ಕಾರಣ, ಫಲಕ್ಕೂ ಕಾರಣ. ದೇವತಾ ಕಾರ್ಯವಿರಲಿ ಪಿತೃಕಾರ್ಯವಿರಲಿ, ನಿತ್ಯಕರ್ಮವಿರಲಿ, ನೈಮಿತ್ತಿಕ ಕರ್ಮವಿರಲಿ ದಕ್ಷಿಣೆ ಇಲ್ಲದಿದ್ದರೆ ಅದು ವ್ಯರ್ಥವೆ. ಆ ಕರ್ಮಕರ್ತನೂ ಕಾಲಸೂತ್ರ ನರಕಕ್ಕೆ ಹೋಗುತ್ತಾನೆ.

ಕರ್ಮದ ಕೊನೆಯಲ್ಲಿ ಕೊಡಬೇಕಾಗಿರುವ ದಕ್ಷಿಣೆಯನ್ನು ಆಗಲೆ ಕೊಡದಿದ್ದರೆ ಒಂದು ಮುಹೂರ್ತ ಕಳೆದಾಗ ಅದರ ಎರಡರಷ್ಟು ಕೊಡಬೇಕಾಗುವುದು. ಒಂದು ದಿನ ಕಳೆದಾಗ ನಾಲ್ಕರಷ್ಟು, ಒಂದು ಪಕ್ಷ ಕಳೆದಾಗ ನೂರರಷ್ಟು. ಒಂದು ತಿಂಗಳು ಕಳೆದಾಗ ಐನೂರರಷ್ಟು, ಆರು ತಿಂಗಳು ಕಳೆದಾಗ ಅದರ ನಾಲ್ಕರಷ್ಟು. ಒಂದು

ವರ್ಷವೆ ಕಳೆದರೆ ಮಾಡಿದ ಕರ್ಮ ವ್ಯರ್ಥವೆ. ಕರ್ಮಕರ್ತನು ಪುತ್ರ ಪೌತ್ರಧನ ಐಶ್ವರ್ಯಗಳನ್ನು ಕಳೆದುಕೊಂಡು ಸಾವಿರವರ್ಷಕಾಲ ನರಕದಲ್ಲಿ ವಾಸ ಮಾಡುವನು. ಕರ್ಮ ಧರ್ಮಹೀನವಾದಾಗ ಧರ್ಮನಾಶವಾಗುವುದು.

ವಿಷ್ಣು— ದೇವಿ, ನೀನು ಧರ್ಮವನ್ನು ರಕ್ಷಿಸಿಕೊಳ್ಳಬೇಕು. ಒಬ್ಬರು ತಮ್ಮ ಸ್ವಧರ್ಮ ರಕ್ಷಿಸಿದರೆ ಎಲ್ಲರಿಗೂ ರಕ್ಷಣೆ ದೊರಕುತ್ತದೆ.

ಬ್ರಹ್ಮ— ಧರ್ಮವನ್ನು ರಕ್ಷಣೆ ಮಾಡದಿದ್ದರೆ ಅದರ ಕರ್ತನೂ ನಾಶ ಹೊಂದುತ್ತಾನೆ.

ಧರ್ಮ— ದೇವಿ, ಪತಿದಕ್ಷಿಣೆಯಿತ್ತು ನನ್ನನ್ನು ರಕ್ಷಿಸು. ನಾನಿದ್ದರೆ ತಾನೆ ಎಲ್ಲ ಸನ್ಮಂಗಲಗಳುಂಟಾಗುವುವು ?

ಮುನಿಗಳು— ದೇವಿ, ಪೂರ್ಣಾಹುತಿಯಾಗಿ ಹೋಗಿದೆ. ಈಗ ನೀನು ದಕ್ಷಿಣೆ ಕೊಡಲೇಬೇಕು. ನಾವೆಲ್ಲ ಇರುವಾಗ ನಿನಗೆ ಏನು ಕೆಟ್ಟದಾದೀತು ?

ಸನತ್ಕುಮಾರ— ದೇವಿ, ನನಗೆ ಶಿವನನ್ನು ಕೊಡು. ಇಲ್ಲವಾದರೆ ವ್ರತದ ಫಲವನ್ನು ಕಳೆದುಕೊಳ್ಳುವಿ. ಬಹುಕಾಲದಿಂದ ಸಂಪಾದಿಸಿರುವ ತಪಸ್ಸಿನ ಫಲವನ್ನೆಲ್ಲ ಕಳೆದುಕೊಳ್ಳುವಿ. ದಕ್ಷಿಣೆ ಕೊಡದಿದ್ದರೆ ಕರ್ಮದ ಪೂರ್ಣಫಲಕ್ಕೆ ನಾನೆ ಭಾಗಿಯಾಗುವೆನು.

ಪಾರ್ವತಿ— ದೇವತೆಗಳೆ ಕೇಳಿ, ಪುರೋಹಿತರೆ ಕೇಳಿ, ಪತಿಯನ್ನೇ ದಕ್ಷಿಣೆಯಾಗಿ ಕೊಡುವುದಾದರೆ ಅಂಥ ಕರ್ಮ ನನಗೇಕೆ ? ಅಂಥ ಧರ್ಮ ರಕ್ಷಿಸಿ ನನಗೇನಾಗಬೇಕಾಗಿದೆ ? ಅದರಿಂದ ಪುತ್ರನನ್ನು ಪಡೆದಾದರೂ ನಾನೇನು ಮಾಡಬೇಕಾಗಿದೆ ? ಭೂಮಿಗೆ ಆರೈಕೆ ಮಾಡದೆ ವೃಕ್ಷದ ಆರೈಕೆ ಮಾಡಿ ಏನು ಪ್ರಯೋಜನ ? ಬೀಜವೆ ಇಲ್ಲದಿದ್ದರೆ ಗಿಡವೆಲ್ಲಿ ? ಫಲವೆಲ್ಲಿ ? ಪ್ರಾಣವನ್ನೆ ಸ್ವೇಚ್ಛೆಯಿಂದ ತೊರೆದರೆ ದೇಹವಿನ್ನೇಕೆ ? ದೃಷ್ಟಿಶಕ್ತಿಯನ್ನು ಕಳೆದುಕೊಂಡರೆ ಕಣ್ಣಿಂದೇನು ? ಪತಿವ್ರತೆಯರಿಗೆ ಪತಿ ಒಬ್ಬನೆ ನೂರು ಮಕ್ಕಳಿಗೆ ಸಮಾನ. ಅಂಥ ಪತಿಯನ್ನು ದಾನಕೊಟ್ಟ ಮೇಲೆ ಪುತ್ರನಿಂದೇನು ? ಪುತ್ರ ಸಂತತಿಗೆ ಪತಿ ಮೂಲ. ಮೂಲಧನ ಕಳೆದುಹೋದರೆ ವ್ಯಾಪಾರ ನಿಷ್ಫಲವೆ ತಾನೆ ?

ವಿಷ್ಣು— ಪುತ್ರನಿಗಿಂತ ಪತಿ ಶ್ರೇಷ್ಠನೆಂದು ನೀನು ಹೇಳುವುದು ಸರಿಯೆ. ಆದರೆ ಧರ್ಮರಕ್ಷಣೆ ಪತಿಗಿಂತ ಹೆಚ್ಚಿನದು. ಧರ್ಮನಾಶವಾದರೆ ಪತಿಯಿಂದೇನು, ಪುತ್ರನಿಂದೇನು ?

ಬ್ರಹ್ಮ— ಪತಿಗಿಂತ ಧರ್ಮಶ್ರೇಷ್ಠ. ಹಾಗೇ ಧರ್ಮಕ್ಕಿಂತಲೂ ಸತ್ಯ ಶ್ರೇಷ್ಠ. ಆದ್ದರಿಂದ ನೀನು ಸಂಕಲ್ಪಮಾಡಿದ ಕರ್ಮವನ್ನು ಸತ್ಯಗೊಳಿಸು. ಭ್ರಷ್ಟ ಗೊಳಿಸಬೇಡ.

ಪಾರ್ವತಿ— ವೇದಗಳಲ್ಲಿ 'ಸ್ವ' ಎಂದರೆ ಧನವೆಂದೂ 'ಸ್ವಾಮಿ' ಎಂದರೆ ಅದಕ್ಕೆ ಒಡೆಯನೆಂದೂ ಹೇಳಿದೆ. ಪತಿ ಪತ್ನಿಗೆ ಒಡೆಯ. ಆದ್ದರಿಂದಲೆ 'ಸ್ವಾಮಿ' ಎನಿಸಿ-ಕೊಳ್ಳುತ್ತಾನೆ. ಪತ್ನಿ ಪತಿಗೆ ಒಡೆಯಳಲ್ಲ. ಅವಳು ಪತಿಯನ್ನು ಹೇಗೆ ದಾನ ಮಾಡಬಲ್ಲಳು.

ಧರ್ಮ— ಪತಿ ಪತ್ನಿಯರಿಗೆ ದಂಪತಿ ಎಂದು ಹೆಸರಿದೆ. ದಂಪತಿಗಳಿಗೆ ಕರ್ಮ-ದಲ್ಲಿ ಸಮಾನ ಅಧಿಕಾರ. ಅದರಿಂದ ಇಬ್ಬರೂ ಸಮಾನರು. ಅದರಿಂದ ಪತ್ನಿ ಪತಿಯನ್ನು ದಾನಮಾಡಬಹುದು. ಪತಿಪತ್ನಿಯನ್ನೂ ದಾನಮಾಡಬಹುದು.

ಪಾರ್ವತಿ— ಪತಿಪತ್ನಿಯರು ಸಮಾನರೆನ್ನುವುದು ಶ್ರುತಿಗೆ ಸಮ್ಮತವಲ್ಲ. ತಂದೆ ಮಗಳನ್ನು ಅಳಿಯನಿಗೆ ದಾನ ಮಾಡುತ್ತಾನೆ. ಅದರಿಂದ ಪತ್ನಿ ಪತಿಯ ಸೊತ್ತು. ಪತಿ ಪತ್ನಿಯ ಸೊತ್ತಲ್ಲ.

ದೇವತೆಗಳು— ದೇವಿ ದುರ್ಗೆ. ನೀನು ಸಾಕ್ಷಾತ್ ಬುದ್ಧಿಸ್ವರೂಪಳು. ನಿನ್ನ ಅನುಗ್ರಹ-ದಿಂದ ನಮಗೆ ಬುದ್ಧಿಲಾಭ. ಅಂಥ ನಾವು ವೇದವಿಚಾರದಲ್ಲಿ ನಿನ್ನನ್ನು ಗೆಲ್ಲಬಲ್ಲೆವೆ ? ಪುಣ್ಯಕ ವ್ರತದಲ್ಲಿ ಪತ್ನಿ ಪತಿಯನ್ನು ದಾನ ಮಾಡಬೇಕೆಂದು ಶ್ರುತಿಯಲ್ಲಿ ಹೇಳಿದೆ. ಶ್ರುತಿಯಲ್ಲಿ ಹೇಳಿದ್ದು ಧರ್ಮ. ಅದಕ್ಕೆ ವಿರುದ್ಧವಾದುದು ಅಧರ್ಮ.

ಪಾರ್ವತಿ— ಕೇವಲ ವೇದವನ್ನೆ ಅವಲಂಬಿಸಿ ಯಾವ ವಿವೇಕಿ ನಿರ್ಣಯ ಸ್ವೀಕರಿಸುತ್ತಾನೆ ? ವೇದಕ್ಕಿಂತಲೂ ಲೋಕಾಚಾರ ಪ್ರಬಲ. ಅಂಥ ಲೋಕಾಚಾರವನ್ನು ಯಾರು ಬಿಡಬಲ್ಲರು ? ವೇದದಲ್ಲಿಯೂ ಪ್ರಕೃತಿಪುರುಷರು ಸಮಾನರಲ್ಲ; ಪುರುಷನೆ ಉತ್ತಮ ಎನ್ನಲಾಗಿದೆ. ದೇವತೆಗಳೆ ನೀವು ತಿಳಿದವರು. ನಾನು ಬಾಲೆ. ನಿಮಗೆ ನಾನೇನು ಹೇಳಲಿ ?

ಬೃಹಸ್ಪತಿ— ಪುರುಷನಿಲ್ಲದಿದ್ದರೂ ಸೃಷ್ಟಿಯಿಲ್ಲ, ಪ್ರಕೃತಿ ಇಲ್ಲದಿದ್ದರೂ ಸೃಷ್ಟಿ ಇಲ್ಲ. ಇಬ್ಬರೂ ಸಮಾನರು. ಇಬ್ಬರಿಗೂ ಒಬ್ಬನೆ ಕೃಷ್ಣ ತಂದೆ.

ಪಾರ್ವತಿ— ಸರ್ವಸೃಷ್ಟಿಕರ್ತನಾದ ಕೃಷ್ಣನ ಅಂಶ ಪುರುಷ. ಆದ್ದರಿಂದ ಅವನೆ ಪ್ರಕೃತಿಗಿಂತ ಶ್ರೇಷ್ಠ. ಪ್ರಕೃತಿ ಅವನಿಗೆ ಎಂದೂ ಸಮಾನಳಾಗಲಾರಳು.

ಹೀಗೆ ವಾದವಿವಾದಗಳು ಆಗುತ್ತಿದ್ದಂತೆಯೇ ಎಲ್ಲರೂ ಆಕಾಶದಲ್ಲಿ ಒಂದು ದಿವ್ಯ ರತ್ನವಿಮಾನ ಬರುತ್ತಿರುವುದನ್ನು ಕಂಡರು. ಆ ವಿಮಾನದಿಂದ ಚತುರ್ಭುಜ ಶಂಖಚಕ್ರ-ಗದಾಪದ್ಮಧಾರಿ ವೈಕುಂಠಪತಿ ಲಕ್ಷ್ಮೀಸರಸ್ವತೀರಮಣನಾದ ನಾರಾಯಣ ಅವನಂತೆಯೆ ಚತುರ್ಭುಜ ವನಮಾಲಾ ಭೂಷಿತರಾದ ಪಾರ್ಷದರೊಡನೆ ಬಂದಿಳಿದ. ಕೋಟಿ ಮನ್ಮಥಲಾವಣ್ಯದಿಂದೊಪ್ಪುವ ಕೋಟಿಚಂದ್ರ ಸಮಾನ ಕಾಂತಿಯಿಂದ ಹೊಳೆವ, ಭಕ್ತರಿಗೆ ಸುಲಭವಾಗಿ ಗೋಚರನಾಗುತ್ತ ಇತರರಿಗೆ ಕೋಟಿಜನ್ಮಗಳಲ್ಲಿಯೂ

ಅದೃಶ್ಯನಾಗುವ, ಬ್ರಹ್ಮಾದಿವಂದ್ಯನಾದ ಆ ದೇವನನ್ನು ರತ್ನ ಸಿಂಹಾಸನದಲ್ಲಿ ಕೂಡಿಸಿ ಬ್ರಹ್ಮಶಕ್ತಿಶಿವಾದಿಗಳು ತಲೆಬಾಗಿ ನಮಿಸಿದರು. ಮೈ ರೋಮಾಂಚಗೊಂಡು ಕಣ್ಣಲ್ಲಿ ಆನಂದದ ನೀರು ಸುರಿಸುತ್ತ ಕೈಮುಗಿದು ನಿಂತರು. ದೇವ ನಸುನಗುತ್ತ ಹೇಳತೊಡಗಿದ—

'ಬುದ್ಧಿಸ್ವರೂಪಳಾದ ದೇವಿಯೊಡನೆ ಬುದ್ಧಿವಂತರಾದ ನೀವು ವಾದಿಸುವುದು ಉಚಿತವಲ್ಲ. ಶಕ್ತಿಸ್ವರೂಪಳಾದ ಅವಳಿಂದಲೆ ಎಲ್ಲ ಜೀವಿಗಳಿಗೂ ಶಕ್ತಿ. ಬ್ರಹ್ಮಾದಿ ತೃಣ ಪರ್ಯಂತವಾದ ಈ ಸಮಸ್ತ ಪ್ರಪಂಚ ಪ್ರಾಕೃತ. ನಾನು ಪ್ರಕೃತಿಯಿಂದ ಬದ್ಧನಲ್ಲ. ಪ್ರಕೃತಿಗೆ ನಾನು ಪ್ರಕಾಶಕ. ಸೃಷ್ಟಿಯಲ್ಲಿ ಪ್ರಕೃತಿ ನನ್ನಿಚ್ಛೆಯಂತೆ ಪ್ರಾದುರ್ಭವಿಸುವಳು. ಲಯದಲ್ಲಿ ತಿರೋಹಿತಳಾಗುವಳು. ಇವಳೆ ಸರ್ವಸೃಷ್ಟಿ-ಕಾರಣಳು. ಸರ್ವರಿಗೂ ಜನನಿ. ನನಗೆ ಸಮಾನಳು, ನಾರಾಯಣೀ ಎನಿಸುವಳು. ಶಿವ ನನ್ನನ್ನು ಧ್ಯಾನಿಸುತ್ತ ಬಹುಕಾಲ ತಪಸ್ಸು ಮಾಡಿದ್ದರಿಂದ ಆ ತಪಸ್ಸಿಗೆ ಫಲರೂಪವಾಗಿ ಪ್ರಕೃತಿಯನ್ನೆ ಪಾರ್ವತೀ ರೂಪದಿಂದ ಕೊಟ್ಟೆ. ಇಂಥ ದೇವಿಗೆ ವಾಸ್ತವದಲ್ಲಿ ಏನು ವ್ರತ ಮಾಡಬೇಕಾಗಿದೆ ? ನಿಮಗೆಲ್ಲರಿಗೂ ಮಾಯೆ ಕವಿದಿದ್ದಾಳೆ. ಅದರಿಂದ ಮೋಹಿತರಾಗಿರುವಿರಿ.

ಬ್ರಹ್ಮಶಕ್ತಿಮಹೇಶ್ವರರು ದೇವೋತ್ತಮರು, ನನ್ನ ಅಂಶಭೂತರು. ದೇವಾದಿ ಸರ್ವಜೀವರೂ ನನ್ನ ಕಲೆಗಳೂ ಕಲಾಂಶರೂ ಆಗಿರುವರು. ಆದರೂ ಮಣ್ಣಿಲ್ಲದೆ ಕುಂಬಾರ ಗಡಿಗೆಯನ್ನು ಹೇಗೆ ಮಾಡಲಾರನೋ ಹಾಗೇ ನಾನೂ ಶಕ್ತಿ ಇಲ್ಲದೆ ಲೋಕಸೃಷ್ಟಿ ಮಾಡಲಾರೆ. ಅದರಿಂದ ಸೃಷ್ಟಿಯಲ್ಲಿ ಶಕ್ತಿಪ್ರಧಾನ. ನಾನು ಅಂತರ್ಯಾಮಿಯಾಗಿ ಪ್ರಕೃತಿಯಿಂದ ನಿರ್ಲಿಪ್ತನಾದರೂ ನೀವು ಪ್ರಾಕೃತರು. ನಾನು ನಿತ್ಯಶರೀರಿ, ನಿತ್ಯ ಹೊಳೆವ ಚಿನ್ಮಯರೂಪಿ. ಪ್ರಕೃತಿ ಸರ್ವಾಧಾರಳು. ನಾನು ಅಂತರ್ಯಾಮಿ. ಬ್ರಹ್ಮ ಮನಸ್ಸಿಗೆ ನಿಯಾಮಕ. ಶಿವ ಜ್ಞಾನಕ್ಕೆ ವಿಷ್ಣು ಪಂಚ-ಪ್ರಾಣಗಳಿಗೆ, ಪ್ರಕೃತಿ ಬುದ್ಧಿಗೆ ಮೇಧಾ ನಿದ್ರಾದಿಗಳಿಗೆ ನಿಯಾಮಕರು. ಆ ಪ್ರಕೃತಿಯೆ ಈ ಪಾರ್ವತಿ.

ಗೋಲೋಕಪತಿ ಕೃಷ್ಣನೂ ವೈಕುಂಠಪತಿ ನಾನೂ ಒಬ್ಬನೆ. ಆತ ದ್ವಿಭುಜ, ಗೋಪ ಗೋಪಿಯರಿಂದ ಪರಿವೃತನಾಗಿದ್ದಾನೆ. ನಾನು ಚತುರ್ಭುಜ, ಲಕ್ಷ್ಮೀಶನಾಗಿ ಪಾರ್ಷದರಿಂದ ಪರಿವೃತನಾಗಿದ್ದೇನೆ. ವೈಕುಂಠಕ್ಕಿಂತ ಐವತ್ತುಕೋಟಿ ಯೋಜನ ಎತ್ತರದಲ್ಲಿರುವ ಗೋಲೋಕದಲ್ಲಿ ನಾನು ಗೋಪಿಯರ ಪತಿಯಾಗಿದ್ದು ವ್ರತಗಳಲ್ಲಿ ಆರಾಧ್ಯನೂ ವ್ರತಗಳಿಗೆ ಫಲದಾಯಕನೂ ಆಗಿದ್ದೇನೆ.

ಪಾರ್ವತಿ, ನೀನು ಪತಿಯನ್ನು ದಕ್ಷಿಣೆಯಾಗಿ ನೀಡಿ ವ್ರತ ಪೂರ್ತಿ ಮಾಡು. ಬಳಿಕ ಪತಿಗೆ ಉಚಿತವಾದ ಮೂಲ್ಯವನ್ನು ತೆತ್ತು ಪತಿಯನ್ನು ತಿರುಗಿ ಪಡೆ. ಶಿವನೂ

ಗೋವುಗಳಂತೆಯೆ ವಿಷ್ಣುವಿನ ಶರೀರದಂತಿರುವುದರಿಂದ ಗೋವುಗಳನ್ನೇ ಮೂಲ್ಯ-ವಾಗಿ ಕೊಟ್ಟು ಶಿವನನ್ನು ಕೊಂಡುಕೊಳ್ಳಬಹುದು. ನಿನ್ನ ಪತಿ ಯಜ್ಞಗಳಲ್ಲಿ ಯಜ್ಞ-ಪತ್ನಿಯಾದ ದಕ್ಷಿಣೆಯನ್ನು ದಾನ ಮಾಡಬಲ್ಲನಾದರೆ ನೀನು ನಿನ್ನ ಪತಿಯನ್ನು ಏಕೆ ದಾನ ಮಾಡಲಾರೆ ? ಇದು ಶ್ರುತಿಸಮ್ಮತವಾದ ವಿಚಾರ.''

ಹೀಗೆ ಹೇಳಿ ನಾರಾಯಣ ಅಂತರ್ಧಾನ ಹೊಂದಿದ. ಎಲ್ಲರಿಗೂ ಆನಂದ-ವಾಯಿತು. ಪಾರ್ವತಿ ಆನಂದದಿಂದ ಶಿವನನ್ನು ಸನತ್ಕುಮಾರನಿಗೆ ದಾನ ಮಾಡಿದಳು. ಶುಭವಾಗಲೆನ್ನುತ್ತ ಆತ ದಾನವನ್ನು ಸ್ವೀಕರಿಸಿದ. ಒಡನೆ ಪಾರ್ವತಿ ನುಡಿದಳು. 'ನನ್ನ ಪತಿಗೆ ಉಚಿತವಾದ ಮೂಲ್ಯವನ್ನು ಗೋವಿನ ರೂಪದಲ್ಲಿ ಕೊಡಬಹುದೆಂದು ವೇದದಲ್ಲಿ ಹೇಳಿರುವುದರಿಂದ ನಾನೀಗ ಲಕ್ಷಗೋವುಗಳನ್ನು ನೀಡುತ್ತೇನೆ. ನನಗೆ ಪತಿಯನ್ನು ಹಿಂತಿರುಗಿಸು. ಆಗ ನಾನು ಮುಂದೆ ಎಲ್ಲ ಬ್ರಾಹ್ಮಣರಿಗೂ ನಾನಾ ಬಗೆಯ ದಾನ ನೀಡುತ್ತೇನೆ. ಪತಿಯಿಲ್ಲದ ನಾರಿ ಆತ್ಮನಿಲ್ಲದ ದೇಹದಂತೆ, ಏನು ಮಾಡಲಾದೀತು ?

ಸನತ್ಕುಮಾರ— ಲಕ್ಷಗೋವು ಏನಿದ್ದರೂ ಅಲ್ಪವೆ. ಅದನ್ನು ಪಡೆದು ನನಗೆ ಏನು ಫಲ ? ಬೆಲೆ ಕಟ್ಟಲಾಗದ ವಸ್ತುವನ್ನು ಕೊಟ್ಟು ಅದಕ್ಕೆ ಬದಲಾಗಿ ಗೋವುಗಳನ್ನು ಕೊಡುವುದೆಂದರೇನು ? ದಿಗಂಬರನಾದ ಶಿವನನ್ನು ಮುಂದೆ ಮಾಡಿಕೊಂಡು ಮೂರೂಲೋಕ ಸುತ್ತುವೆನು. ಬಾಲಕ ಬಾಲಿಕೆಯರಿಗೆಲ್ಲ ನಗು ಬರಿಸುವೆನು.

ಹೀಗೆ ಹೇಳಿ ಸನತ್ಕುಮಾರ ಶಿವನನ್ನು ಕರೆದು ತನ್ನ ಬಳಿ ಕುಳ್ಳಿರಿಸಿಕೊಂಡ. ಪಾರ್ವತಿಯ ಗಂಟಲು ನಾಲಿಗೆ ತುಟಿಗಳು ಒಣಗಿದುವು. ಅವಳಿಗೆ ಶರೀರತ್ಯಾಗ ಮಾಡಬೇಕೆಂದೆನಿಸಿತು. ಇತ್ತ ಪತಿ ಕೈತಪ್ಪಿಹೋದ. ಅತ್ತ ಇಷ್ಟದೈವವಾದ ಕೃಷ್ಣ ಗೋಚರಿಸಲೂ ಇಲ್ಲ, ಫಲವೂ ಸಿಗಲಿಲ್ಲ.

ಅಷ್ಟರಲ್ಲಿ ಪಾರ್ವತಿಯೂ ಎಲ್ಲ ದೇವತೆಗಳೂ ಆಕಾಶದಲ್ಲಿ ಕೋಟಿ ಸೂರ್ಯರ ಪ್ರಭೆಯಿಂದ ದಶದಿಕ್ಕುಗಳನ್ನು ಬೆಳಗುವ ತೇಜೋರಾಶಿಯೊಂದನ್ನು ಕಂಡರು. ದೊಡ್ಡ ವರ್ತುಲಾಕಾರದ ಆ ತೇಜಸ್ಸು ಕೈಲಾಸಪರ್ವತದ ಮುಂದೆ ಬೆಳಗಿತು. ದೇವತೆಗಳು ಒಬ್ಬೊಬ್ಬರಾಗಿ ಸ್ತೋತ್ರ ಮಾಡಿದರು.

ವಿಷ್ಣು— ಎಲ್ಲ ಬ್ರಹ್ಮಾಂಡಗಳನ್ನು ರೋಮಕೂಪದಲ್ಲಿಟ್ಟುಕೊಳ್ಳುವಂಥ ಮಹಾ ವಿರಾಟ್ ಪುರುಷನೂ ನಿನ್ನ ಹದಿನಾರನೆ ಅಂಶಕ್ಕೆ ಸಮಾನ. ಇನ್ನು ನಾವಾರು ?

ಬ್ರಹ್ಮ— ಯಾವುದು ವೇದೋಕ್ತವೊ ಯಾವುದು ಪ್ರತ್ಯಕ್ಷವೋ ಅವೆರಡನ್ನು ವರ್ಣಿಸಲು ಸ್ತುತಿಸಲು ನಾನು ಶಕ್ತ. ವೇದಕ್ಕೂ ಪ್ರತ್ಯಕ್ಷಕ್ಕೂ ಅತೀತನಾದ ನಿನ್ನನ್ನು ಏನೆಂದು ಸ್ತುತಿಸಲಿ ?

ಶಿವ— ಜ್ಞಾನಕ್ಕೆ ಅಧಿಷ್ಠಾತ ನಾನು. ಜ್ಞಾನಕ್ಕೆ ಅತೀತನಾದ ನಿನ್ನನ್ನು ಹೇಗೆ ಸ್ತುತಿಸಲಿ ?

ಧರ್ಮ— ಅದೃಶ್ಯ ತೇಜೋರೂಪನಾಗಿದ್ದು ಭಕ್ತರಿಗೆ ಅನುಗ್ರಹ ಮಾಡಲೆಂದೆ ಶರೀರವನ್ನು ತೋರುವ ನಿನ್ನನ್ನು ನಾನೇನು ಹೊಗಳಲಿ ?

ದೇವತೆಗಳು— ನಿನ್ನ ಕಲಾಂಶಭೂತರಾದ ನಾವು ನಿನ್ನನ್ನು ಏನು ಸ್ತೋತ್ರ ಮಾಡಬಲ್ಲೆವು ? ನಿನ್ನನ್ನು ಸ್ತುತಿಸಲು ವೇದಗಳೂ ಶಕ್ತವಲ್ಲ, ಸರಸ್ವತಿಯೂ ಶಕ್ತಳಲ್ಲ.

ಮುನಿಗಳು— ವೇದ ಓದಿ ವಿದ್ವಾಂಸರಾದ ನಾವು ವೇದಕ್ಕೆ ಕಾರಣನಾದ ನಿನ್ನನ್ನು ಸ್ತುತಿಸಬಲ್ಲೆವೆ ? ಮನಸ್ಸು ಮಾತುಗಳಿಗೆ ಅತೀತನಾದ ನಿನ್ನನ್ನು ವಾಣಿಯೂ ಸ್ತುತಿಸಲಾರಳು.

ಸರಸ್ವತೀ— ಮಾತಿಗೆ ನಿಯಾಮಕಳೆಂದು ವೈದಿಕರು ನನ್ನನ್ನು ಹೊಗಳಿದರೂ ಮಾತು ಮನಸ್ಸುಗಳಿಗೆ ಮೀರಿದ ನಿನ್ನನ್ನು ಸ್ತುತಿಸಲು ಸ್ವಲ್ಪವೂ ನಾನು ಶಕ್ತಳಲ್ಲ.

ಸಾವಿತ್ರಿ— ವೇದಮಾತೆಯಾಗಿದ್ದರೂ ನಿನ್ನಿಂದ ಹುಟ್ಟಿದವಳು ನಾನು. ಸರ್ವಕ್ಕೂ ಆದಿಕಾರಣನಾದ ನಿನ್ನನ್ನು ನಾನೇನು ಸ್ತುತಿಸಲಿ ?

ಲಕ್ಷ್ಮಿ— ನಿನ್ನ ಅಂಶನಾದ ವಿಷ್ಣುವಿನ ಪತ್ನಿಯಾದರೂ ನಿನ್ನಿಂದ ಹುಟ್ಟಿದವಳು ನಾನು. ಜಗತ್ತಿಗೆ ಮೂಲಕಾರಣನಾದ ನಿನ್ನನ್ನು ನಾನೇನು ಸ್ತುತಿಸಲಿ ?

ಹಿಮಾಲಯ— ಪೂರ್ವಕರ್ಮದಿಂದ ಸ್ಥಾವರನಾಗಿ ಹುಟ್ಟಿರುವ ನಾನು ನಿನ್ನನ್ನು ಸ್ತುತಿಸಲು ಹೊರಟರೆ ಸಜ್ಜನರು ನಗಬಹುದು. ನನ್ನಂಥಹ ಅಲ್ಪನು ನಿನ್ನನ್ನು ಹೇಗೆ ಸ್ತುತಿಸಬಲ್ಲ ? ನನಗೇನೂ ಸಾಮರ್ಥ್ಯವಿಲ್ಲ.

ಹೀಗೆ ದೇವತೆಗಳೆಲ್ಲ ಸ್ತೋತ್ರಮಾಡಿ ಸುಮ್ಮನಾದಾಗ ಪಾರ್ವತಿ ಸ್ತುತಿಸ-ತೊಡಗಿದಳು.

ಪಾರ್ವತಿ— ಕೃಷ್ಣ, ನೀನು ನನ್ನನ್ನು ಬಲ್ಲೆ. ನಾನು ನಿನ್ನನ್ನು ತಿಳಿಯಲಾರೆ. ವೇದಜ್ಞರಾದ ವೇದಕರ್ತೃಗಳಾಗಲಿ ವೇದಗಳಾಗಲಿ ತಿಳಿಯಲಾರರು. ಎಲ್ಲರೂ ನಿನ್ನ ಅಂಶರು. ಅಂಶರು ಹೇಗೆ ತಾನೆ ನಿನ್ನನ್ನು ತಿಳಿಯಬಲ್ಲರು ? ನೀನು ನಿನ್ನ ಸ್ವರೂಪ-ವನ್ನು ತಿಳಿಯಬಲ್ಲೆ. ಇತರರು ಹೇಗೆ ತಿಳಿದಾರು ? ನೀನು ಅವ್ಯಕ್ತನಾಗಿ ಸೂಕ್ಷ್ಮಕ್ಕಿಂತ ಅತಿಸೂಕ್ಷ್ಮ. ಮಹಾನ್ ಆಗಿ ಮಹತ್ತಿಗಿಂತ ಅತಿಮಹತ್ತು. ವಿಶ್ವಕ್ಕೆ ಬೀಜರೂಪ. ಸನಾತನ. ಕಾರ್ಯನೂ ನೀನೆ, ಕಾರಣನೂ ನೀನೆ. ಕಾರಣಗಳಿಗೆ ಕಾರಣನೂ ನೀನೆ. ತೇಜಃಸ್ವರೂಪ, ನಿರಾಕಾರ, ನಿರಾಶ್ರಯ, ನಿರ್ಲಿಪ್ತ, ನಿರ್ಗುಣ, ಸ್ವಾತ್ಮಾರಾಮ, ಪರಾತ್ಪರ ನೀನೆ. ಪ್ರಕೃತಿಯನ್ನಾಳುತ್ತ ವಿರಾಟ್ ಪುರುಷನಿಗೆ ಬೀಜರೂಪನಾಗಿ

ವಿರಾಟ್‌ಪುರುಷನೂ ನೀನೆ ಆಗುವೆ. ಸೃಷ್ಟಿಗಾಗಿ ಸಗುಣನೂ ಪ್ರಾಕೃತನೂ ಆಗುವೆ. ಪ್ರಕೃತಿಯೂ ನೀನೆ, ಪುರುಷನೂ ನೀನೆ. ಜೀವ ನಿನ್ನ ಪ್ರತಿಬಿಂಬ. ಕರ್ಮ ನೀನೆ, ಕರ್ಮಕಾರಣ ನೀನೆ, ಕರ್ಮಫಲದಾಯಕನೂ ನೀನೆ.

ಕೆಲವರು ಯೋಗಿಗಳು ನಿನ್ನ ಚತುರ್ಭುಜ ಶಂಖಚಕ್ರಗದಾಪದ್ಮಧಾರಿ ಪೀತಾಂಬರಧಾರಿ ಲಕ್ಷ್ಮೀಕಾಂತರೂಪವನ್ನೂ ಇನ್ನು ಕೆಲವರು ಯೋಗಿಗಳು ನಿನ್ನ ದ್ವಿಭುಜ ಬಾಲ ಗೋಪೀರಮಣ ರೂಪವನ್ನೂ ಧ್ಯಾನಿಸುತ್ತಾರೆ.

ನಾನು ಹಿಂದೆ ಅಸುರವಧಕ್ಕಾಗಿ ದೇವತೆಗಳ ತೇಜಸ್ಸುಗಳಿಂದ ಪ್ರಾದುರ್ಭವಿಸಿದೆ. ನಿನ್ನ ಮಾಯೆಯಾದ ನಾನು ನಿನ್ನ ಮಾಯೆಯಿಂದಲೆ ಅಸುರರನ್ನು ಮೋಹಿಸಿ ವಧಿಸಿದೆ. ಬಳಿಕ ಹಿಮಾಲಯದಲ್ಲಿ ನೆಲೆಸಿದೆ. ದಕ್ಷಪುತ್ರಿಯಾಗಿ ಜನಿಸಿ ಶಿವಪತ್ನಿಯಾಗಿ ದಕ್ಷಯಜ್ಞಕಾಲದಲ್ಲಿ ಶಿವನಿಂದೆ ಕೇಳಿ ತಡೆಯಲಾರದೆ ಶರೀರತ್ಯಾಗ ಮಾಡಿ ಪಾರ್ವತಿ- ಯಾಗಿ ಹುಟ್ಟಿದೆ. ಬಹಳ ತಪಸ್ಸು ಮಾಡಿ ಶಿವನನ್ನೆ ಮದುವೆಯಾದೆ. ಬ್ರಹ್ಮನ ಪ್ರಾರ್ಥನೆಯಂತೆ ಶಿವ ನನ್ನ ಕೈಹಿಡಿದ. ಆದರೆ ದೇವತೆಗಳು ವಂಚನೆ ಮಾಡಿದ್ದರಿಂದ ನಾನು ಶಿವನಿಂದ ಗರ್ಭಧರಿಸಲಾಗಲಿಲ್ಲ. ಅಪುತ್ರವತಿಯಾಗಿದ್ದೇನೆ. ನಿನ್ನನ್ನೆ ಮೊರೆ- ಹೊಕ್ಕಿದ್ದೇನೆ. ಈ ವ್ರತದಿಂದ ನಿನ್ನನ್ನೊಲಿಸಿಕೊಂಡು ನಿನ್ನಂಥ ಮಗನನ್ನು ಪಡೆಯಲು ಬಯಸಿದ್ದೇನೆ. ಆದರೆ ವ್ರತ ಸಾಂಗವಾಗಲು ಪತಿ ದಕ್ಷಿಣೆ ಕೊಡಬೇಕಾಗಿದೆ. ನಾನೇನು ಮಾಡಲಿ ಹೇಳು, ಅನುಗ್ರಹಿಸು.'

ಹೀಗೆ ಹೇಳಿ ಪಾರ್ವತಿ ಸುಮ್ಮನಾದಳು. ಪಾರ್ವತಿ ಮಾಡಿದ ಈ ವಿಷ್ಣುಸ್ತುತಿಯನ್ನು ಶ್ರವಣ ಮಾಡುವವ ವಿಷ್ಣುವಿನಂತೆ ಪರಾಕ್ರಮಿಯಾದ ಮಗನನ್ನು ಪಡೆಯುತ್ತಾನೆ. ಒಂದು ವರ್ಷಕಾಲ ಹವಿಷ್ಯಾನ್ನ ಉಣ್ಣುತ್ತ ಹರಿಯನ್ನು ಆರಾಧಿಸಿ ಈ ಸ್ತುತಿಯನ್ನು ಪಠಿಸಿದರೆ ಪುಣ್ಯಕವ್ರತದ ಫಲ ಲಭಿಸುವುದು. ಸರ್ವಸಂಪತ್ತು ವರ್ಧಿಸುವುದು. ಪತಿ ಸೌಭಾಗ್ಯ, ಸೌಂದರ್ಯ, ಯಶಸ್ಸು, ಹರಿಭಕ್ತಿ, ತತ್ವಜ್ಞಾನ, ಬುದ್ಧಿಗಳನ್ನು ಕೊಟ್ಟು ಕೊನೆಗೆ ಮುಕ್ತಿಯನ್ನೂ ಕೊಡುವಂಥಹುದು ಈ ವಿಷ್ಣುಸ್ತುತಿ.

**ಇಲ್ಲಿಗೆ ಶ್ರೀ ಬ್ರಹ್ಮವೈವರ್ತ ಮಹಾಪುರಾಣದಲ್ಲಿ ಮೂರನೆಯದಾದ ಗಣಪತಿ ಖಂಡದಲ್ಲಿ ನಾರದನಾರಾಯಣ ಸಂವಾದದಲ್ಲಿ ಪುಣ್ಯಕವ್ರತದಲ್ಲಿ ಪತಿದಾನಕಾಲದಲ್ಲಿ ಪಾರ್ವತಿ ಮಾಡಿದ ಕೃಷ್ಣಸ್ತೋತ್ರವೆಂಬ ಏಳನೇ ಅಧ್ಯಾಯ ಮುಗಿಯಿತು.**

# ಪಾರ್ವತಿಯಲ್ಲಿ ಕೃಷ್ಣನ ಅಂಶದಿಂದ ಗಣಪತಿಯ ಉತ್ಪತ್ತಿ

## ಅಧ್ಯಾಯ-೮

ನಾರಾಯಣ— ಕರುಣಾನಿಧಿಯಾದ ಶ್ರೀಕೃಷ್ಣ ಪಾರ್ವತಿಯು ಮಾಡಿದ ಸ್ತುತಿಯನ್ನು ಕೇಳಿ ತನ್ನ ನಿಜರೂಪವನ್ನು ತೋರಿದ. ಪೀತಾಂಬರ ವನಮಾಲೆ ರತ್ನಾಲಂಕಾರಗಳನ್ನು ಧರಿಸಿಕೊಳ್ಳಲು ಹಿಡಿದು, ನವಿಲುಗರಿಗಳಿಂದ ಅಲಂಕರಿಸಿಕೊಂಡು, ಗೋಪಾಂಗನೆಯರಿಂದ ಪರಿವೃತನಾಗಿ ರಾಧೆಯನ್ನಾಲಿಂಗಿಸಿಕೊಂಡು, ಕೋಟಿ ಮನ್ಮಥರ ಲಾವಣ್ಯದಿಂದ ಹೊಳೆಯುತ್ತ ದಿವ್ಯರತ್ನ ಸಿಂಹಾಸನದಲ್ಲಿ ಮಂಡಿಸಿದ್ದ ಕೃಷ್ಣನನ್ನು ಕಂಡು ''ನಿನ್ನಂತೆಯೇ ಇರುವ ಪುತ್ರನನ್ನು ಕೊಡೆಂದು'' ವರ ಬೇಡಿದಳು. ಕೃಷ್ಣ ವರ ನೀಡಿ ಅಂತರ್ಧಾನನಾದ.

ದೇವತೆಗಳು ಸನತ್ಕುಮಾರನಿಗೆ ತಿಳಿಹೇಳಿ ದಿಗಂಬರನಾದ ಅನುಪಮನಾದ ಶಿವನನ್ನು ಪಾರ್ವತಿಗೆ ಕೊಡಿಸಿದರು. ಪಾರ್ವತಿ ಬ್ರಾಹ್ಮಣರಿಗೆ ನಾನಾರತ್ನಗಳನ್ನು ದಾನಮಾಡಿದಳು. ಅನ್ನದಾನ ಮಾಡಿದಳು. ದೇವತೆಗಳನ್ನೂ ಪರ್ವತಗಳನ್ನೂ ಸತ್ಕರಿಸಿದಳು. ಶಿವನನ್ನು ಪೂಜಿಸಿದಳು. ಮಂಗಳವಾದ್ಯ ಮೊಳಗಿಸಿದಳು. ಶ್ರೀಹರಿಯ ಗುಣಗಳ ಸುಂದರಗಾನ ಮಾಡಿಸಿದಳು.

ವ್ರತ ಸಮಾಪ್ತಿಗೊಳಿಸಿ ಎಲ್ಲರಿಗೂ ಭೋಜನ ಮಾಡಿಸಿ ಪತಿಯೊಡನೆ ತಾನೂ ಉಂಡಳು. ಹಾಲಿನ ನೊರೆಯಂತೆ ಬಿಳಿಯಾದ ಹಾಸಿಗೆಯ ರತ್ನಮಂಚವೇರಿ ಏಕಾಂತದಲ್ಲಿ ಪತಿಯೊಡನೆ ಮಲಗಿದಳು. ಸುಗಂಧ ಕುಸುಮ ವಾಯುವಿನಿಂದ ಗಮಗಮಿಸುವ ಕೈಲಾಸದ ಚಂದನವನದಲ್ಲಿ ದುಂಬಿಯ ಧ್ವನಿಯನ್ನೂ ಕೋಗಿಲೆಯ ಗಾನವನ್ನಾಲಿಸುತ್ತ ಪತಿಯೊಡನೆ ವಿಹರಿಸುತ್ತ ಶೃಂಗಾರ ರಸವನ್ನು ಸವಿದಳು. ಅವಳು ಪತಿಯಿಂದ ಗರ್ಭಧರಿಸುವ ಕಾಲದಲ್ಲಿ ರತಿಗೃಹದ ದ್ವಾರಕ್ಕೆ ಶ್ರೀಕೃಷ್ಣ ಮಾಯೆಯಿಂದ ವೃದ್ಧ ಬ್ರಾಹ್ಮಣರೂಪಿಯಾಗಿ ಬಂದ.

ಎಣ್ಣೆಕಾಣದ ಜಟೆ, ಹರಿದ ಬಟ್ಟೆ, ಕೃಶವಾದ ಶರೀರ. ಆದರೆ ಅತ್ಯಂತ ಶುಭ್ರವಾದ ದಂತಪಂಕ್ತಿ. ಉಜ್ವಲವಾದ ಹಣೆಯ ತಿಲಕ. ಹಸಿವು ಬಾಯಾರಿಕೆಗಳಿಂದ ಬಳಲಿ ಕಂಪಿಸುವ ದನಿಯಿಂದ ದೈನ್ಯದಿಂದ ಮಹಾದೇವನನ್ನು ಕೂಗಿ ಕರೆದ, ಆ ಬ್ರಾಹ್ಮಣ-

'ಮಹಾದೇವ, ನೀನೇನು ಮಾಡುತ್ತಿರುವೆ ? ನನ್ನನ್ನು ರಕ್ಷಿಸು. ಏಳುದಿನ ಉಪವಾಸ ವ್ರತಮಾಡಿ ಹಸಿದಿದ್ದೇನೆ. ನನಗೆ ನೀನೇ ಗತಿ. ನೀನು ಅದೇನು ಮಾಡುತ್ತಿರುವೆ, ಮಹಾದೇವ ? ಒಮ್ಮೆ ಹೊರಗೆ ಬಂದು ನನ್ನನ್ನು ನೋಡು. ವೃದ್ಧನಾಗಿದ್ದೇನೆ. ಬಾಯಾರಿದ್ದೇನೆ. ಅಮ್ಮ ಪಾರ್ವತಿ, ಎದ್ದೇಳು. ನನಗೆ ಅನ್ನ ನೀರು ಕೊಡು. ಕಾಪಾಡು. ನಿನ್ನನ್ನು ಮೊರೆ ಹೊಕ್ಕಿದ್ದೇನೆ.'

ಬ್ರಾಹ್ಮಣನ ಧ್ವನಿ ಕೇಳಿ ಶಿವ ತಟ್ಟನೆ ಎದ್ದ. ಅವನ ವೀರ್ಯ ಹಾಸಿಗೆಯ ಮೇಲೆ ಬಿದ್ದಿತು. ಪಾರ್ವತಿಯೂ ಉದ್ವಿಗ್ನತೆಯಿಂದ ಎದ್ದು ಬಟ್ಟೆ ಹಾಕಿಕೊಂಡಳು. ದಂಪತಿ-ಗಳು ಬಾಗಿಲಿಗೆ ಬಂದು ವೃದ್ಧಬ್ರಾಹ್ಮಣನನ್ನು ಕಂಡರು. ಬ್ರಾಹ್ಮಣ ಇಬ್ಬರಿಗೂ ಭಕ್ತಿಯಿಂದ ನಮಿಸಿದ.

ಶಿವ ಕೇಳಿದ, 'ಬ್ರಾಹ್ಮಣ ನೀನಾರು, ನಿನ್ನ ಹೆಸರೇನು ? ವಾಸಸ್ಥಳ ಯಾವುದು ? ಹೇಳು.'

ಪಾರ್ವತಿಯೂ ಕೇಳಿದಳು 'ಬ್ರಾಹ್ಮಣ, ನೀನು ಎಲ್ಲಿಂದ ಆಗಮಿಸುತ್ತಿರುವೆ ? ನೀನು ಬಂದಿರುವುದು ನನ್ನ ಭಾಗ್ಯೋದಯ. ನನ್ನ ಜನ್ಮವಿಂದು ಸಫಲವಾಯಿತು. ಬ್ರಾಹ್ಮಣನೊಬ್ಬ ಅತಿಥಿಯಾಗಿ ನನ್ನ ಮನೆಗೆ ಬಂದಿದ್ದಾನೆ.

ಮನೆಗೆ ಬಂದ ಒಬ್ಬ ಅತಿಥಿಯನ್ನು ಸತ್ಕರಿಸಿದರೆ ಮೂಲೋಕವನ್ನೇ ಪೂಜಿಸಿದಂತೆ. ಅತಿಥಿಯಲ್ಲಿಯೆ ದೇವತೆಗಳು ಬ್ರಾಹ್ಮಣರು ಗುರುಗಳು ಸನ್ನಿಹಿತ-ರಾಗಿರುತ್ತಾರೆ. ಅತಿಥಿಯ ಪಾದಗಳಲ್ಲಿಯೆ ಎಲ್ಲ ತೀರ್ಥಗಳಿವೆ. ಅವನ ಕಾಲ್ತೊಳೆದ ನೀರ ಜೊತೆಗೆ ಆ ಎಲ್ಲ ತೀರ್ಥಗಳನ್ನೂ ಗೃಹಸ್ಥ ಸುಲಭವಾಗಿ ಪಡೆಯಬಲ್ಲ.

**ಸ ಸ್ನಾತಃ ಸರ್ವ ತೀರ್ಥೇಷು ಸರ್ವಯಜ್ಞೇಷು ದೀಕ್ಷಿತಃ ।**
**ಅತಿಥಿಃ ಪೂಜಿತೋ ಯೇನ ಸ್ವಾತ್ಮಶಕ್ತ್ಯಾ ಯಥೋಚಿತಂ ॥**

ತನ್ನ ಶಕ್ತ್ಯನುಸಾರ ಉಚಿತರೀತಿಯಲ್ಲಿ ಅತಿಥಿಯನ್ನು ಸತ್ಕರಿಸಿದರೆ ಸರ್ವತೀರ್ಥ ಸ್ನಾನದ ಮತ್ತು ಸರ್ವಯಜ್ಞಗಳ ಫಲ ದೊರಕುವುದು.

ವೇದೋಕ್ತ ಸಕಲ ಪುಣ್ಯಕರ್ಮಗಳೂ ಅತಿಥಿಸತ್ಕಾರದ ಹದಿನಾರನೆ ಒಂದಂಶಕ್ಕೆ ಸಮಾನವಾಗಲಾರವು.

**ಅಪೂಜಿತೋಽತಿಥಿರ್ಯಸ್ಯ ಭವನಾದ್ ವಿನಿವರ್ತತೇ ।**
**ಪಿತೃದೇವಾಗ್ನಯಃ ಪಶ್ಚಾದ್ ಗುರವೋ ಯಾಂತ್ಯಪೂಜಿತಾಃ ॥**

ಒಬ್ಬ ಅತಿಥಿ ಸತ್ಕಾರಹೊಂದದೆ ಮನೆಯಿಂದ ಹೊರಟುಹೋದರೆ ಅವನ ಬೆನ್ನ ಹಿಂದೆಯೆ ಆ ಗೃಹಸ್ಥನ ಪಿತೃಗಳು ದೇವತೆಗಳು ಅಗ್ನಿಗಳು ಗುರುಗಳು ಅತೃಪ್ತಿಯಿಂದ ಹೊರಟು ಹೋಗುವರು.

ಅತಿಥಿಸತ್ಕಾರ ಮಾಡದಿದ್ದರೆ ಬ್ರಹ್ಮಹತ್ಯಾದಿ ಸಕಲ ಪಾಪಗಳೂ ಬರುತ್ತವೆ.

ಬ್ರಾಹ್ಮಣ— ನೀನು ವೇದವನ್ನು ಬಲ್ಲವಳು. ವೇದೋಕ್ತವಾದುದೆಲ್ಲ ನಿನಗೆ ತಿಳಿದೇ ಇದೆ. ಆದ್ದರಿಂದ ವೇದೋಕ್ತ ರೀತಿಯಿಂದ ನನ್ನನ್ನು ಸತ್ಕರಿಸು. ಅಮ್ಮ, ನಾನು ಹಸಿವು ಬಾಯಾರಿಕೆಗಳಿಂದ ಬಳಲಿದ್ದೇನೆ.

ಪಾರ್ವತಿ— ಬ್ರಾಹ್ಮಣೋತ್ತಮ, ನೀನೇನು ಉಣಲು ಬಯಸುವೆ ? ಮೂಲೋಕದಲ್ಲಿ ದುರ್ಲಭವಾದರೂ ಸರಿಯೆ, ಅದನ್ನು ನಿನಗೆ ಉಣಬಡಿಸುವೆನು. ಅದರಿಂದ ನನ್ನ ವ್ರತ ಸಫಲವಾಗುವಂತೆ ಮಾಡು.

ಬ್ರಾಹ್ಮಣ— ವ್ರತಕ್ಕಾಗಿ ನೀನು ನಾನಾ ಬಗೆಯ ಮಿಷ್ಟಾನ್ನ ಸಿದ್ಧಪಡಿಸಿರುವಿ ಎಂದು ಕೇಳಿಯೆ ನಾನು ನಿನ್ನ ಬಳಿಗೆ ಬಂದಿದ್ದೇನೆ. ಆ ಅನ್ನವನ್ನೇ ನೀಡು.

ಅಮ್ಮ, ನಾನು ನಿನ್ನ ಮಗನೆಂದು ತಿಳಿ. ತ್ರೈಲೋಕ್ಯದಲ್ಲಿ ದುರ್ಲಭವಾದ ಮಿಷ್ಟಾನ್ನ-ದಿಂದ ನನ್ನನ್ನು ತೃಪ್ತಿ ಪಡಿಸು. ತಂದೆ ಐದು ವಿಧ, ತಾಯಿ ಅನೇಕ ವಿಧಳು ಪುತ್ರನೂ ಐದು ವಿಧವೆಂದು ವೈದಿಕರು ಹೇಳುತ್ತಾರೆ.

ವಿದ್ಯಾದಾತಾನ್ನದಾತಾ ಚ ಭಯತ್ರಾತಾ ಚ ಜನ್ಮದಃ ।
ಕನ್ಯಾದಾತಾ ಚ ವೇದೋಕ್ತಾ ನರಾಣಾಂ ಪಿತರಃ ಸ್ಮೃತಾಃ ॥

ವಿದ್ಯೋಪದೇಶಕ, ಅನ್ನದಾತ, ಆಪತ್ತಿನಲ್ಲಿ ರಕ್ಷಕ, ಜನ್ಮದಾತ, ಕನ್ಯಾದಾತ ಈ ಐವರು ತಂದೆಗಳು ಎಂದು ವೇದದಲ್ಲಿ ಹೇಳಿದೆ.

ಗುರುಪತ್ನೀ ಗರ್ಭಧಾತ್ರೀ ಸ್ತನದಾತ್ರೀ ಪಿತುಃ ಸ್ವಸಾ ।
ಸ್ವಸಾ ಮಾತುಃ ಸಪತ್ನೀ ಚ ಪುತ್ರ ಭಾರ್ಯಾನ್ನ ದಾಯಿಕಾ ॥

ಗುರುಪತ್ನಿ, ಗರ್ಭದಲ್ಲಿ ಹೊತ್ತವಳು, ಸ್ತನಪಾನ ಮಾಡಿಸಿದವಳು, ತಂದೆಯ ಸೋದರಿ, ತಾಯಿಯ ಸೋದರಿ. ತನ್ನ ಸೋದರಿ, ಸವತಿ ತಾಯಿ, ಸೊಸೆ, ಅನ್ನ-ದಾಯಕಳು ಇವರೆಲ್ಲ ತಾಯಂದಿರು.

ಭೃತ್ಯಃ ಶಿಷ್ಯಶ್ಚ ಪೋಷ್ಯಶ್ಚ ವೀರ್ಯಜಃ ಶರಣಾಗತಃ ।
ಧರ್ಮಭೃತ್ಯಾಶ್ಚ ಚತ್ವಾರೋ ವೀರ್ಯಜೋ ಧನಭಾಗಿತಿ ॥

ಸೇವಕ, ಶಿಷ್ಯ, ತನ್ನ ಪೋಷಣೆಯಲ್ಲಿರುವವ, ತನ್ನ ವೀರ್ಯದಿಂದ ಜನಿಸಿದವ, ಶರಣಾಗತ ಈ ಐವರು ಪುತ್ರರು. ಅವರಲ್ಲಿ ವೀರ್ಯದಿಂದ ಜನಿಸಿದವ ಆಸ್ತಿಗೆ ಹಕ್ಕುದಾರ. ಉಳಿದ ನಾಲ್ವರು ಧರ್ಮದೃಷ್ಟಿಯಿಂದ ಮಾತ್ರವೆ ಪುತ್ರರು.

ದೇವಿ, ಪಾರ್ವತಿ, ನಾನು ಮೊದಲೇ ವೃದ್ಧ. ಹಸಿವು ಬಾಯಾರಿಕೆಗಳಿಂದ ಬಳಲಿ ಬೆಂಡಾಗಿದ್ದೇನೆ. ಆದರಿಂದ ಶರಣಾಗತನಾಗಿ ಬಂದು ನಿನ್ನ ಪುತ್ರನೆನಿಸಿದ್ದೇನೆ. ನೀನು ಹೇಗೂ ಪುತ್ರನಿಲ್ಲದವಳು. ನಾನೂ ಅನಾಥ. ಆದರಿಂದ ನನ್ನನ್ನು ಮಗನೆಂದು ಸ್ವೀಕರಿಸಿ ಒಳ್ಳೆಯ ಪಾಯಸದ ಊಟ ಬಡಿಸು. ಹಾಲು ತುಪ್ಪ ಮೊಸರು ಶಾಲ್ಯನ್ನ ತುಪ್ಪದಲ್ಲಿ ಕರಿದ ಭಕ್ಷ್ಯಗಳು, ಎಳ್ಳಿನುಂಡೆ, ಬೆಲ್ಲದ ಮಿಷ್ಟಾನ್ನಗಳನ್ನುಣಿಸು. ಕರ್ಪೂರಾದಿಗಳಿಂದ ಗಮಗಮಿಸುವ ತಾಂಬೂಲವನ್ನೂ ನಿರ್ಮಲವಾದ ಸಿಹಿ

ನೀರನ್ನೂ ನೀಡು. ನಾನು ಎಲ್ಲವನ್ನೂ ಸೇವಿಸಿ ಲಂಬೋದರನೆನಿಸುವಂತೆ ಮಾಡು. ರಮ್ಯವಾದ ಅಮೂಲ್ಯ ರತ್ನಾಭರಣಗಳನ್ನೂ ಶುಭ್ರವಾದ ಸುಂದರವಾದ ವಸ್ತ್ರಗಳನ್ನೂ ರತ್ನಸಿಂಹಾಸನವನ್ನೂ ನೀಡು. ದುರ್ಲಭವಾದ ಜ್ಞಾನಭಕ್ತಿಗಳನ್ನೂ ವಿಷ್ಣುಮಂತ್ರ-ವನ್ನೂ ನೀಡು. ನಾನು ನಿರ್ಮಲ ಮನಸ್ಸಿನಿಂದ ನಿಷ್ಕಾಮಕರ್ಮ ಮಾಡುತ್ತ ತಪಸ್ಸಿನಲ್ಲಿ ನಿರತನಾಗುವಂತೆ ಮಾಡು.

ಕಾಮ್ಯಕರ್ಮಗಳಿಂದ ಪುಣ್ಯಪಾಪಗಳೂ ಅವುಗಳಿಂದ ಸುಖದುಃಖ ಭೋಗಗಳೂ ಉಂಟಾಗುವುವು. ಆದರಿಂದ ತಿಳಿದವರು ಕಾಮ್ಯಕರ್ಮಗಳನ್ನು ತೊರೆದು ಭಗವದಾ-ರಾಧನೆ ಮಾಡುತ್ತಾರೆ. ಭಗವದ್ಭಕ್ತರ ಸಂಗದಲ್ಲಿ ತಪಸ್ಸು ಮಾಡುತ್ತಾರೆ. ಪಂಚೇಂದ್ರಿಯ ವಿಷಯಭೋಗದಿಂದ ಬರುವ ಸುಖ ಶಾಶ್ವತವಲ್ಲ. ಹರಿಕೀರ್ತನ-ದಿಂದ ಉದಿಸುವ ಸುಖ ಶಾಶ್ವತವಾದುದು.

ಸದಾ ಹರಿಸ್ಮರಣ ಮಾಡುವ ಭಕ್ತರ ಆಯುಸ್ಸು ಎಂದೂ ಕ್ಷೀಣಿಸುವುದಿಲ್ಲ. ಅವರನ್ನು ಸೆಳೆದೊಯ್ಯಲು ಮೃತ್ಯುವಾಗಲಿ ಮೃತ್ಯುಂಜಯನಾಗಲಿ ಶಕ್ತರಾಗಲಾರರು. ಅವರು ಚಿರಜೀವಿಗಳಾಗಿ ಸರ್ವಸಿದ್ಧಿಗಳಾಗಿ ಸರ್ವತ್ರ ಸ್ವಚ್ಛಂದ ವಿಹಾರ ಮಾಡ-ಬಲ್ಲರು. ಅವರು ತಮ್ಮ ಹಿಂದಿನ ಕೋಟಿ ಜನ್ಮಗಳ ಅನುಭವವನ್ನು ನೆನಪಿಸಿಕೊಳ್ಳ-ಬಲ್ಲರು. ಕೋಟಿ ಜನ್ಮಗಳ ಕಥೆಯನ್ನು ಹೇಳಬಲ್ಲರು. ತಮಗೆ ಬೇಕೆನಿಸಿದ ಜನ್ಮವನ್ನು ಸ್ವೇಚ್ಛೆಯಿಂದ ಹೊಂದಬಲ್ಲರು. ತೀರ್ಥಕ್ಷೇತ್ರಗಳನ್ನು ತಮ್ಮ ಪಾದಸ್ಪರ್ಶದಿಂದ ಪವಿತ್ರ-ಗೊಳಿಸುತ್ತ ಪರರ ಹಿತಕ್ಕಾಗಿ ಎಲ್ಲೆಡೆ ಸಂಚರಿಸುವರು. ಒಂದು ತೀರ್ಥಕ್ಷೇತ್ರದಲ್ಲಿ ಅವರು ಹಸು ಕರೆಯುವಷ್ಟು ಕಾಲ ನಿಂತರೂ ಸಾಕು ಅದು ಪವಿತ್ರವಾಗುತ್ತದೆ.

ಗುರುಮುಖದಿಂದ ಯಾರ ಕಿವಿಗೆ ವಿಷ್ಣುಮಂತ್ರ ಬೀಳುವುದೋ ಆ ವೈಷ್ಣವ ತೀರ್ಥಕ್ಷೇತ್ರವನ್ನೂ ಪವಿತ್ರಗೊಳಿಸಬಲ್ಲನೆಂದು ಪುರಾಣಬಲ್ಲವರು ಹೇಳುತ್ತಾರೆ. ಅಂಥ ವೈಷ್ಣವನೊಬ್ಬ ತನ್ನ ವಂಶದ ನೂರುಮಂದಿ ಹಿಂದಿನವರನ್ನೂ ನೂರುಮಂದಿ ಮುಂದಿನವರನ್ನೂ ಉದ್ಧರಿಸಬಲ್ಲ. ತಾಯಿಯ ಕಡೆಯ ಹತ್ತುಮಂದಿ ಹಿಂದಿನ-ವರನ್ನೂ ಹತ್ತುಮಂದಿ ಮುಂದಿನವರನ್ನೂ ಯಮದೂತರಿಂದ ಪಾರುಮಾಡಬಲ್ಲ.

ವಿಷ್ಣುಭಕ್ತರನ್ನು ಕಂಡು ಆಲಿಂಗಿಸಿದ ಮಾತ್ರಕ್ಕೆ ಸರ್ವತೀರ್ಥಸ್ನಾನ ಸರ್ವ-ಯಜ್ಞಾನುಷ್ಠಾನಗಳ ಫಲ ಸಿಗುವುದು.

ನ ಲಿಪ್ತಾಃ ಪಾತಕೈರ್ಭಕ್ತಾಃ ಸತತಂ ಹರಿಮಾನಸಾಃ ।
ಯಥಾಗ್ನಯಃ ಸರ್ವಭಕ್ಷ್ಯಾ ಯಥಾ ದ್ರವ್ಯೇಷು ವಾಯವಃ ॥

ಸದಾ ಹರಿಸ್ಮರಣ ಮಾಡುವ ಭಕ್ತರಿಗೆ ಪಾಪಲೇಪವಿಲ್ಲ. ಬೆಂಕಿ ಅಪವಿತ್ರ ವಸ್ತುಗಳನ್ನು ಸುಟ್ಟರೂ, ಗಾಳಿ ಅಪವಿತ್ರ ವಸ್ತುಗಳನ್ನು ಸಂಪರ್ಕಿಸಿದರೂ ಹೇಗೆ ಆ ವಸ್ತುಗಳ ಲೇಪವಿಲ್ಲವೋ ಹಾಗೆ.

ಮೂರುಕೋಟಿ ಜನ್ಮಗಳೆತ್ತಿದ ಬಳಿಕ ಮನುಷ್ಯಜನ್ಮ ಲಭಿಸುವುದು. ಮನುಷ್ಯ-ಜಾತಿಯಲ್ಲಿ ಒಂದು ಕೋಟಿ ಜನ್ಮಗಳಾದ ಬಳಿಕ ವಿಷ್ಣುಭಕ್ತರ ಸಂಗ ದೊರೆಯು-ವುದು. ಅದರಿಂದ ಭಕ್ತಿ ಅಂಕುರಿಸುವುದು. ಭಕ್ತಿ ಇಲ್ಲದವರ ಸಂಗ ಮಾಡಿದರೆ ಅದು ಕಮರಿಹೋಗುವುದು. ಪುನಃ ಭಕ್ತರ ಸಮಾಗಮವಾಯಿತೆಂದರೆ ಚಿಗುರುವುದು. ನಾಶ ಹೊಂದದೆ ಜನ್ಮ ಜನ್ಮಗಳಲ್ಲಿ ವೃದ್ಧಿ ಹೊಂದುವುದು. ಮರವಾಗಿ ಬೆಳೆಯುವುದು. ಹರಿದಾಸ್ಯವೆಂಬ ಫಲ ನೀಡುವುದು. ಕೊನೆಯಲ್ಲಿ ಭಕ್ತಿ ಪರಿಪಾಕ ಹೊಂದಿದಾಗ ಆ ಭಕ್ತ ಹರಿಯ ಪಾರ್ಷದನಾಗುವನು. ಅವನಿಗೆ ಮಹಾಪ್ರಳಯದಲ್ಲಿಯೂ ಮರಣ-ವಿಲ್ಲ. ಅದರಿಂದ ನನಗೆ ವಿಷ್ಣುಭಕ್ತಿ ನೀಡು. ವಿಷ್ಣುಮಾಯೆಯೆನಿಸಿರುವ ನಿನ್ನ ಅನುಗ್ರಹವಿಲ್ಲದೆ ವಿಷ್ಣುಭಕ್ತಿ ಉಂಟಾಗದು. ನೀನು ಎಲ್ಲರಿಗೂ ಫಲದಾಯಕ-ಳಾಗಿದ್ದೂ ಸ್ವತಃ ತಪಸ್ಸು ವ್ರತಗಳನ್ನು ಮಾಡುವುದು ಲೋಕಕ್ಕೆ ಮಾರ್ಗದರ್ಶನ ನೀಡುವ ಉದ್ದೇಶದಿಂದ.

ನೀನು ನಿನ್ನ ವ್ರತದ ಫಲವಾಗಿ ಗಣೇಶರೂಪದಿಂದ ಶ್ರೀಕೃಷ್ಣನನ್ನೆ ಮಗನನ್ನಾಗಿ ಪಡೆಯುವೆ. ಆತ ಬೇಗನೆ ನಿನ್ನ ಮಡಿಲನ್ನು ಸೇರಲಿದ್ದಾನೆ.'

ಇಷ್ಟು ಹೇಳಿ ಬ್ರಾಹ್ಮಣ ಅದೃಶ್ಯನಾದ. ಶಿಶುರೂಪತಾಳಿ ಪಾರ್ವತಿಯ ಹಾಸಿಗೆ-ಯಲ್ಲಿದ್ದ ಶಿವನ ವೀರ್ಯದೊಡನೆ ಮಿಶ್ರಿತನಾಗಿ ಆಗ ತಾನೆ ಹುಟ್ಟಿದ ಶಿಶುವಿನಂತೆ ಮೇಲುಮುಖವಾಗಿ ಮಲಗಿದ. ಮನೆಯ ಸೂರನ್ನು ನೋಡತೊಡಗಿದ. ಸಂಪಿಗೆ-ಯಂಥ ಮೈಬಣ್ಣ ಕೋಟಿ ಚಂದ್ರರ ಕಾಂತಿ. ಮನ್ಮಥನೂ ನೋಡಿದರೆ ಮೈಮರೆಯು-ವಂಥ ಸೌಂದರ್ಯ. ಶರತ್ಕಾಲದ ಚಂದ್ರನಂಥ ಮುಖ. ಕಮಲದಂಥ ಕಣ್ಣು. ತೊಂಡೆಹಣ್ಣಿನಂಥ ತುಟಿ. ಮೂಲೋಕದಲ್ಲಿಯೆ ಎಣೆ ಇಲ್ಲದಂಥ, ಕಣ್ಣಿಗೆ ಹಬ್ಬ ತರುವಂಥ ಸುಂದರ ಬಾಲಕ ಹಾಸಿಗೆಯಲ್ಲಿ ಮಲಗಿ ಕೈಕಾಲುಗಳನ್ನಾಡಿಸುತ್ತಿದ್ದ.

**ಇಲ್ಲಿಗೆ ಶ್ರೀ ಬ್ರಹ್ಮವೈವರ್ತ ಮಹಾಪುರಾಣದಲ್ಲಿ ಮೂರನೆಯದಾದ ಗಣಪತಿ ಖಂಡದಲ್ಲಿ ನಾರದನಾರಾಯಣ ಸಂವಾದದಲ್ಲಿ ಗಣೇಶೋತ್ಪತ್ತಿ ವರ್ಣನವೆಂಬ ಎಂಟನೆ ಅಧ್ಯಾಯ ಮುಗಿಯಿತು.**

# ಶಿವ ಸತಿಯರಿಗೆ ಪುತ್ರ ಗಣೇಶನ ದರ್ಶನದಿಂದ ಪರಮಾನಂದ

## ಅಧ್ಯಾಯ-೯

ನಾರಾಯಣ— ಹರಿ, ಅದೃಶ್ಯನಾದೊಡನೆ ಪಾರ್ವತಿ ಅವನನ್ನು ಸುತ್ತಲೂ ಹುಡುಕತೊಡಗಿದಳು— 'ಹೇ ಬ್ರಾಹ್ಮಣೋತ್ತಮ, ಎಲ್ಲಿಗೆ ಹೋದೆ ? ಹಸಿದು ಬಳಲಿರುವೆ. ಬಾ, ತಂದೆ, ನನ್ನ ಕಣ್ಣಿಗೆ ತೋರು, ನನ್ನ ಪ್ರಾಣ ಉಳಿಸು. ಶಿವನೆ, ಬೇಗನೆ ಎದ್ದೇಳು. ಆ ಬ್ರಾಹ್ಮಣನನ್ನು ಹುಡುಕು. ಒಂದು ಕ್ಷಣಮಾತ್ರ ನಮ್ಮ ಕಣ್ಣ-ಮುಂದೆ ಆತ ಕಂಡುಬಂದನಲ್ಲ !

ಹಸಿದುಬಂದ ಅತಿಥಿ ಉಣದೇ ಮನೆಯಿಂದ ಹೊರಟುಹೋದರೆ ಆ ಗೃಹಸ್ಥನ ಬಾಳೆ ವ್ಯರ್ಥವಲ್ಲವೆ ? ಅವನು ನೀಡುವ ಪಿಂಡ ತರ್ಪಣಗಳನ್ನು ಪಿತೃಗಳು ಸ್ವೀಕರಿಸ-ಲಾರರು. ಅವನ ಆಹುತಿಯನ್ನು ಅಗ್ನಿ ಸ್ವೀಕರಿಸಲಾರ. ಅವನ ಕೈಯಿಂದ ಹೂವನ್ನು ನೀರನ್ನು ದೇವತೆಗಳೂ ಸ್ವೀಕರಿಸರು. ಅವನು ನೀಡುವ ನೀರು ಹೆಂಡಕ್ಕೆ ಸಮ. ಅವನು ನೀಡುವ ಹವ್ಯಕವ್ಯಗಳು ಮಲಕ್ಕೆ ಸಮಾನ.'

ಹೀಗೆ ಪಾರ್ವತಿ ಶೋಕಿಸುತ್ತಿದ್ದಂತೆ ಒಂದು ಅಶರೀರವಾಣಿ ಕೇಳಿಸಿತು-

'ತಾಳು, ಜಗನ್ಮಾತೆ, ನಿನ್ನ ಪುಣ್ಯಕ ವ್ರತವೀಗಲೆ ಫಲಿಸಿತು. ಫಲರೂಪನಾಗಿ ಶ್ರೀಕೃಷ್ಣನೆ ನಿನ್ನ ಮನೆಗೇ ಬಂದಿದ್ದಾನೆ. ಮಗನಾಗಿ ಹಾಸಿಗೆಯಲ್ಲಿ ಮಲಗಿದ್ದಾನೆ. ಹೋಗಿನೋಡು. ಅವನಿಗೇ ಪ್ರತಿಕಲ್ಪದಲ್ಲಿಯೂ ಎಲ್ಲದೇವತೆಗಳಿಗಿಂತ ಮೊದಲು ಪೂಜೆ ಸಲ್ಲುವುದು. ಅವನ ಸ್ಮರಣಮಾತ್ರದಿಂದ ಎಲ್ಲ ವಿಘ್ನಪರಿಹಾರ. ನೀನು ಸದಾ ಜ್ಯೋತಿರೂಪನಾದ ಮೋಕ್ಷದಾಯಕನಾದ ಯಾವ ಸನಾತನ ಪರಮಾತ್ಮನನ್ನು ಧ್ಯಾನಿಸು-ವೆಯೋ ಅವನೆ ನಿನ್ನ ಮಗನಾಗಿ ಮನೆಯೊಳಗೆ ಬಂದಿದ್ದಾನೆ, ನೋಡು. ನಿನ್ನ ತಪಸ್ಸಿನ ಕಲ್ಪವೃಕ್ಷ ನೀಡಿದ ಫಲವೆ ಆತ. ಕೋಟಿ ಮನ್ಮಥರನ್ನು ಧಿಕ್ಕರಿಸುವ ಸ್ಫುರದ್ರೂಪಿ.

ದೇವಿ, ನೀನು ಕಂಡುದು ಹಸಿವಿಂದ ಬಳಲಿದ ವಿಪ್ರನನ್ನಲ್ಲ. ವಿಪ್ರರೂಪಿ ಜನಾರ್ದನನನ್ನು ಕಂಡಿರುವೆ. ಇನ್ನೂ ಏಕೆ ಅಳುವೆ ? ಇನ್ನೆಲ್ಲಿ ಆ ವೃದ್ಧ ? ಇನ್ನೆಲ್ಲಿ ಅತಿಥಿ' ?

ಈ ಮಾತನ್ನು ಕೇಳಿ ಪಾರ್ವತಿ ಚಕಿತಳಾಗಿ ಮನೆಯೊಳಗೆ ಓಡಿದಳು. ಹಾಸಿಗೆಯಲ್ಲಿ ಮಲಗಿ ಮನೆಯ ಸೂರನ್ನು ನೋಡುತ್ತ ನೂರು ಚಂದ್ರರ ಕಾಂತಿಯಿಂದ ಭೂತಳ-ವನ್ನು ಬೆಳಗುತ್ತ ಎದೆ ಹಾಲಿಗಾಗಿ ಉಮಾ ಎಂದು ಕೂಗಿ ಅಳುತ್ತಿದ್ದ ಬಾಲಕನನ್ನು ಕಂಡಳು. ಆ ಅದ್ಭುತವನ್ನು ಕಂಡು ಇನ್ನೂ ಚಕಿತಳಾದಳು ಪಾರ್ವತಿ. ಶಿವನೆಡೆಗೆ ಬಂದು ನುಡಿದಳು—

'ನಾಥ, ಮನೆಯೊಳಗೆ ಬಂದುನೋಡು. ಪ್ರತಿಕಲ್ಪದಲ್ಲಿ ನೀನು ತಪಸ್ಸುಗಳಿಗೆ ಫಲದಾಯಕನಾದ ಯಾವ ಪರಮಾತ್ಮನನ್ನು ಧ್ಯಾನಿಸುತ್ತಿರುವೆಯೋ ಅವನೇ ನಮ್ಮ ಮನೆಯೊಳಗೆ ಬಂದಿದ್ದಾನೆ. ನೋಡು, ಬೇಗನೆ ನಿನ್ನ ಮಗನ ಮುಖ ನೋಡು. ಪುಣ್ಯಕ್ಕೆ ಬೀಜರೂಪನಾಗಿ ಮಹಾನಂದದಾಯಕನಾಗಿ ಪುತ್ ಎಂಬ ನರಕದಿಂದ ರಕ್ಷಣೆ ನೀಡುವವನಾಗಿ ನಮ್ಮ ಬಳಿಗೆ ಬಂದಿದ್ದಾನೆ. ಸರ್ವತೀರ್ಥ ಸ್ನಾನವಾಗಲಿ ಸರ್ವ-ಯಜ್ಞಾನುಷ್ಠಾನವಾಗಲಿ ಪುತ್ರನ ಮುಖದರ್ಶನ ಪುಣ್ಯದ ಹದಿನಾರನೆ ಒಂದಂಶಕ್ಕೆ ಸಮಾನವಾಗದು.

**ಸರ್ವದಾನೇನ ಯತ್ ಪುಣ್ಯಂ ಕ್ಷ್ಮಾಪ್ರದಕ್ಷಿಣತಶ್ಚ ಯತ್ ।**
**ಪುತ್ರದರ್ಶನ ಪುಣ್ಯಸ್ಯ ಕಲಾಂ ನಾರ್ಹತಿ ಷೋಡಶೀಂ ॥**

ಸರ್ವಸ್ವ ದಾನದಿಂದಲೂ ಭೂಪ್ರದಕ್ಷಿಣೆಯಿಂದಲೂ ಬರುವ ಪುಣ್ಯ ಪುತ್ರಮುಖ ದರ್ಶನಪುಣ್ಯದ ಹದಿನಾರನೆ ಒಂದಂಶಕ್ಕೂ ಸಮಾನವಾಗದು.

**ಸರ್ವೈಸ್ತಪೋಭಿರ್ಯತ್ ಪುಣ್ಯಂ ಯದೇವಾನಶನೈರ್ವ್ರತೈಃ ।**
**ಸತ್ಪುತ್ರೋದ್ಭವ ಪುಣ್ಯಸ್ಯ ಕಲಾಂ ನಾರ್ಹತಿ ಷೋಡಶೀಂ ॥**

ಎಲ್ಲ ತಪಸ್ಸುಗಳಿಂದಲೂ ಎಲ್ಲ ಉಪವಾಸವ್ರತಗಳಿಂದಲೂ ಬರುವ ಪುಣ್ಯ ಸತ್ಪುತ್ರನನ್ನು ಪಡೆವ ಪುಣ್ಯದ ಹದಿನಾರನೆ ಒಂದಂಶಕ್ಕೂ ಸಮಾನವಾಗದು.

**ಯದ್ ವಿಪ್ರಭೋಜನೈಃ ಪುಣ್ಯಂ ಯದೇವ ಸುರಸೇವನೈಃ ।**
**ಸತ್ಪುತ್ರ ಪ್ರಾಪ್ತಿ ಪುಣ್ಯಸ್ಯ ಕಲಾಂ ನಾರ್ಹತಿ ಷೋಡಶೀಂ ॥**

ಬ್ರಾಹ್ಮಣ ಭೋಜನಗಳಿಂದ ದೇವತಾರಾಧನೆಗಳಿಂದ ಬರುವ ಪುಣ್ಯ ಸತ್ಪುತ್ರನನ್ನು ಪಡೆವ ಪುಣ್ಯದ ಹದಿನಾರನೆ ಒಂದಂಶಕ್ಕೂ ಸಮಾನವಾಗಲಾರದು.

ಪಾರ್ವತಿಯ ಮಾತುಕೇಳಿ ಶಿವ ಹರ್ಷಗೊಂಡು ಬೇಗನೆ ಮನೆಯೊಳಗೆ ಬಂದು ಪುಟಕ್ಕಿಟ್ಟ ಚಿನ್ನದಂತೆ ಹೊಳೆಯುತ್ತ ಹಾಸಿಗೆಯಲ್ಲಿ ಮಲಗಿದ್ದ ತನ್ನ ಕಂದನನ್ನು ಕಂಡ. ಪಾರ್ವತಿ ತನ್ನೆದೆಯೊಳಗೇ ಇದ್ದ ಮನೋಹರ ರೂಪವನ್ನು ಹಾಸಿಗೆ ಮೇಲೆ ಕಂಡು ಎತ್ತಿ ಎದೆಗೊತ್ತಿಕೊಂಡಳು. ಮುದ್ದಿಕ್ಕಿದಳು. ಆನಂದದ ಕಡಲಲ್ಲಿ ಮುಳುಗಿದಳು.

ಮಗು, ನನ್ನ ಅಮೂಲ್ಯ ರತ್ನ ನೀನು. ದರಿದ್ರನಿಗೆ ನಿಧಿ ಸಿಕ್ಕಂತೆ, ನೀನು ನನಗೆ ದೊರೆತಿರುವೆ. ಬಹುಕಾಲ ಅಗಲಿದ ನಲ್ಲನನ್ನು ಕಂಡ ಹೆಣ್ಣಂತೆ, ಬಹುಕಾಲ ಅಗಲಿದ ಮಗುವನ್ನು ಕಂಡ ತಾಯಂತೆ, ಬಹುಕಾಲದಿಂದ ಕಳೆದುಹೋಗಿದ್ದ ರತ್ನವನ್ನು, ಅನಾವೃಷ್ಟಿಯನ್ನು ಕಂಡ ಮಾನವನಂತೆ, ಬಹುಕಾಲ ಅಂಧಕಾರದಲ್ಲಿದ್ದು ಕಣ್ಣು ಪಡೆದ, ಅಂಧನಂತ ನಾನು ನಿನ್ನನ್ನು ಪಡೆದು ನಲಿಯುತ್ತಿದ್ದೇನೆ. ನನಗೆ ನೀ

ದೊರೆತದ್ದು ಸಾಗರದಲ್ಲಿ ಮುಳುಗುವವನಿಗೆ ದೋಣಿ ಸಿಕ್ಕಂತಾಗಿದೆ. ಬಾಯಾರಿ ಕಂಗೆಟ್ಟವನಿಗೆ ಕರ್ಪೂರ ಬೆರೆತ ಶೀತೋದಕ ದೊರೆತಂತಾಗಿದೆ. ಕಾಳ್ಗಿಚ್ಚಿನಿಂದ ಬೇಯುತ್ತಿದ್ದವನಿಗೆ ತಂಪಾದ ನೆಲೆ ಸಿಕ್ಕಂತಾಗಿದೆ. ಹಸಿದು ಕಂಗೆಟ್ಟವನಿಗೆ ಮಿಷ್ಟಾನ್ನ ದೊರೆತಂತಾಗಿದೆ.'

ಹೀಗೆ ಹೇಳಿ ಪಾರ್ವತಿ ಮಗುವನ್ನು ತಬ್ಬಿಕೊಂಡು ಪ್ರೀತಿಯಿಂದ ಪರಮಾನಂದ-ದಿಂದ ಎದೆ ಹಾಲುಣಿಸಿದಳು. ಮುದ್ದಿಕ್ಕಿದಳು. ವೇದೋಕ್ತ ಆಶೀರ್ವಾದಗಳ ಮಳೆ-ಗರೆದಳು.

**ಇಲ್ಲಿಗೆ ಶ್ರೀ ಬ್ರಹ್ಮವೈವರ್ತ ಮಹಾಪುರಾಣದಲ್ಲಿ ಮೂರನೆಯದಾದ ಗಣಪತಿ ಖಂಡದಲ್ಲಿ ನಾರದನಾರಾಯಣ ಸಂವಾದದಲ್ಲಿ ಬಾಲಗಣೇಶ ದರ್ಶನವೆಂಬ ಒಂಭತ್ತನೆ ಅಧ್ಯಾಯ ಮುಗಿಯಿತು.**

## ದೇವಾಧಿದೇವತೆಗಳಿಂದ ಮಗು ಗಣೇಶನಿಗೆ ಬಗೆಬಗೆಯ ಹರಕೆ ಹಾರೈಕೆಗಳು

### ಅಧ್ಯಾಯ-೧೦

ನಾರಾಯಣ— ದಂಪತಿಗಳು ಮನೆಯಿಂದ ಹೊರಬಂದು ಮಗನ ಶ್ರೇಯಸ್ಸಿ-ಗಾಗಿ ಬ್ರಾಹ್ಮಣರಿಗೆ ನಾನಾಬಗೆಯ ರತ್ನಗಳನ್ನು ದಾನವಿತ್ತರು. ಬಂದಿಗಳಿಗೂ ಭಿಕ್ಷು-ಗಳಿಗೂ ದಾನ ನೀಡಿದರು. ಮಂಗಳವಾದ್ಯ ಮೊಳಗಿಸಿದರು.

ಹಿಮಾಲಯನೂ ಬ್ರಾಹ್ಮಣರಿಗೆ ಲಕ್ಷ ರತ್ನಗಳನ್ನು ಸಾವಿರ ಆನೆಗಳನ್ನು ಮೂರು ಲಕ್ಷ ಕುದುರೆಗಳನ್ನು ಹತ್ತುಲಕ್ಷ ಗೋವುಗಳನ್ನು ಐದುಲಕ್ಷ ಚಿನ್ನದ ನಾಣ್ಯಗಳನ್ನು ಲೆಕ್ಕವಿಲ್ಲದಷ್ಟು ಮುತ್ತು ಮಾಣಿಕ್ಯಗಳನ್ನು ವಸ್ತ್ರಾಭರಣಗಳನ್ನು, ಹೆಚ್ಚೇಕೆ, ಕ್ಷೀರ-ಸಮುದ್ರದಲ್ಲಿ ಉತ್ಪನ್ನವಾದ ಎಲ್ಲ ರತ್ನಗಳನ್ನೂ ದಾನಮಾಡಿದ.

ವಿಷ್ಣು ಕೌಸ್ತುಭರತ್ನಗಳನ್ನು ದಾನ ಮಾಡಿದ. ಬ್ರಹ್ಮ ತನ್ನ ಸೃಷ್ಟಿಯಲ್ಲಿ ಉತ್ತಮ-ವಾಗಿರುವ ದುರ್ಲಭವಾಗಿರುವ ವಸ್ತುಗಳನ್ನೆಲ್ಲ ದಾನ ಮಾಡಿದ. ಹಾಗೆಯೆ ಧರ್ಮ ಸೂರ್ಯ ಇಂದ್ರ ದೇವತೆಗಳು ಮುನಿಗಳು, ಗಂಧರ್ವರು ಪರ್ವತಗಳೆಲ್ಲರೂ ದಾನ-ವಿತ್ತರು. ಮಾಣಿಕ್ಯ ಕೌಸ್ತುಭ ವಜ್ರ ಪಚ್ಚೆ ಮುಂತಾದ ರತ್ನಗಳನ್ನೂ ಗೋವು ಆನೆ ಕುದುರೆಗಳನ್ನೂ ದಾನವಿತ್ತರು.

ಮಾಣಿಕ್ಯ ವಜ್ರಗಳಿಂದಲೂ ಇತರ ಅಮೂಲ್ಯರತ್ನಗಳಿಂದಲೂ ನಿರ್ಮಿತವಾಗಿದ್ದು ನಡುವೆ ಕೌಸ್ತುಭ ರತ್ನದಿಂದ ಕೂಡಿದ ಸೂರ್ಯನಂತೆ ಬೆಳಗುವ ಹಾರವನ್ನು ಸರಸ್ವತಿ ಬ್ರಾಹ್ಮಣರಿಗೆ ದಾನ ಮಾಡಿದಳು.

ಮೂಲೋಕದಲ್ಲಿಯೆ ಶ್ರೇಷ್ಠವಾದ ಹಾರ ಮುಂತಾದ ಆಭರಣಗಳನ್ನು ಸಾವಿತ್ರಿಯೂ ದಾನ ಮಾಡಿದಳು.

ಲಕ್ಷ ಬಂಗಾರದ ಗಟ್ಟಿಗಳನ್ನೂ ನೂರಾರು ಅಮೂಲ್ಯ ರತ್ನಗಳನ್ನೂ ಕುಬೇರ ದಾನ ಮಾಡಿದ. ಹೀಗೆ ಎಲ್ಲರೂ ಬ್ರಾಹ್ಮಣರಿಗೆ ದಾನಮಾಡಿ ಆನಂದದಿಂದ ಬಾಲಕ ಗಣೇಶನನ್ನು ಕಂಡರು. ಬ್ರಾಹ್ಮಣರು ದಾನ ದ್ರವ್ಯಗಳನ್ನು ಹೊರಲಾರದೆ ದಾರಿಯಲ್ಲಿ ನಿಂತು ನಿಂತು ಕಷ್ಟದಿಂದ ಪ್ರಯಾಣ ಮಾಡಿದರು. ಅವರಲ್ಲಿ ವೃದ್ಧರು ಹಿಂದಿನ ದಾನಶೂರರ ಬಗ್ಗೆ ಕಥೆಗಳನ್ನು ಹೇಳುತ್ತಿದ್ದರು, ಯುವಕರು ಕೇಳುತ್ತಿದ್ದರು.

ವಿಷ್ಣು ದುಂದುಭಿ ಮೊಳಗಿಸಿದ. ಸಂಗೀತ ನೃತ್ಯ ವೇದಘೋಷ ಪುರಾಣ ಪ್ರವಚನಗಳನ್ನು ಮಾಡಿಸಿದ. ಮುನಿಗಳನ್ನು ಕರೆಸಿ ಸತ್ಕರಿಸಿ ಬಾಲಗಣೇಶನಿಗೆ ಆಶೀರ್ವಾದ ಕೊಡಿಸಿದ. ದೇವದೇವಿಯರೊಡನೆ ತಾನೂ ಶುಭಾಶೀರ್ವಾದ ಮಾಡಿದ.

ವಿಷ್ಣು— ಮಗು, ನೀನು ಶಿವನಂತೆ ಜ್ಞಾನಿಯಾಗು, ನನ್ನಂತೆ ಪರಾಕ್ರಮಿಯಾಗು. ಸರ್ವಸಿದ್ಧಿಗಳಿಗೆ ನಾಯಕನಾಗು.

ಬ್ರಹ್ಮ— ಲೋಕದಲ್ಲೆಲ್ಲ ಕೀರ್ತಿಶಾಲಿಯಾಗು, ಸರ್ವಪೂಜ್ಯನಾಗು. ಎಲ್ಲರಿಗಿಂತ ಮೊದಲ ಪೂಜೆ ನಿನ್ನದಾಗಲಿ.

ಧರ್ಮ— ನನ್ನಂತೆ ಧರ್ಮಿಷ್ಠ, ಸರ್ವಜ್ಞ, ದಯಾಶಾಲಿಯಾದ ಹರಿಭಕ್ತನಾಗು.

ಶಿವ— ನನ್ನಂತೆ ದಾನಶೀಲ, ಬುದ್ಧಿಶಾಲಿ ವಿದ್ಯಾವಂತ ಪುಣ್ಯವಂತ ಶಾಂತ ಮತ್ತು ದಾಂತನಾದ ಹರಿಭಕ್ತನಾಗು.

ಲಕ್ಷ್ಮಿ— ನನ್ನಂತೆ ಪತಿವ್ರತೆಯಾದ ಮಡದಿ ನಿನಗೆ ದೊರಕಲಿ. ನಿನ್ನ ಮನೆ ನಿನ್ನ ಶರೀರ ನನ್ನ ವಾಸಸ್ಥಾನವಾಗಲಿ.

ಸರಸ್ವತಿ— ನನ್ನಂತೆ ಕವಿತೆ ಧಾರಣಾಶಕ್ತಿ ಸ್ಮೃತಿ ವಿವೇಚನಾಶಕ್ತಿಗಳು ನಿನಗೆ ಲಭಿಸಲಿ.

ಸಾವಿತ್ರಿ— ನಾನೂ ವೇದಮಾತೆ. ನನ್ನ ಮಂತ್ರಜಪದಿಂದ ನೀನು ವೇದವಾದಿಗಳಲ್ಲೆಲ್ಲ ಶ್ರೇಷ್ಠನೆನಿಸು. ವೇದಜ್ಞಾನಿಯಾಗು.

ಹಿಮಾಲಯ— ಕೃಷ್ಣನಲ್ಲಿ ನಿಶ್ಚಲವಾದ ಭಕ್ತಿ ನಿನಗುಂಟಾಗಲಿ. ಆದರಿಂದ ಕೃಷ್ಣ ತುಲ್ಯಗುಣವಂತನಾಗು.

ಮೇನಕಾ— ಗಾಂಭೀರ್ಯದಲ್ಲಿ ಸಮುದ್ರನಿಗೆ ರೂಪದಲ್ಲಿ ಮನ್ಮಥನಿಗೆ ಕಾಂತಿಯಲ್ಲಿ ಶ್ರೀಪತಿಗೆ ಧರ್ಮದಲ್ಲಿ ಧರ್ಮನಿಗೆ ಸಮಾನನೆನಿಸು.

ವಸುಂಧರಾ— ನನ್ನಂತೆ ಕ್ಷಮಾಯುಕ್ತನಾಗು. ಶರಣಜನ ರಕ್ಷಕನಾಗು, ಸಕಲ ರತ್ನಗಳಿಗೆ ಆಶ್ರಯನಾಗು. ವಿಘ್ನ ರಹಿತನಾಗು, ವಿಘ್ನನಾಶಕನಾಗು.

ಪಾರ್ವತಿ— ಮಗೂ ನೀನು ತಂದೆಗೆ ತಕ್ಕ ಮಗನಾಗು. ಮಹಾಯೋಗಿಯಾಗು. ಸರ್ವಸಿದ್ಧಿದಾಯಕನಾಗು, ಮೃತ್ಯುಂಜಯನಾಗು, ಒಳ್ಳೆ ಜ್ಞಾನಿಯಾಗು.

ಹೀಗೆ ಋಷಿಮುನಿಗಳು ಸಿದ್ಧರು ಎಲ್ಲರೂ ಆಶೀರ್ವದಿಸಿದರು.

ನಾರದ, ಅತ್ಯಂತ ಮಂಗಳಕರವಾದ ಗಣೇಶ ಜನ್ಮವೃತ್ತಾಂತವನ್ನು ಹೇಳಿದ್ದೇವೆ. ಇದು ಸರ್ವವಿಘ್ನನಿವಾರಕ.

ಈ ಮಂಗಳಕರವಾದ ಅಧ್ಯಾಯ ಶ್ರವಣದಿಂದ ಎಲ್ಲ ಬಗೆಯ ಮಂಗಳ ಉಂಟಾಗುವುದು. ಮಕ್ಕಳಿಲ್ಲದವರಿಗೆ ಮಕ್ಕಳು, ದರಿದ್ರರಿಗೆ ಧನ, ದುರ್ಬಲರಿಗೆ ಬಲ, ಮದುವೆಯಾಗದವರಿಗೆ ಯೋಗ್ಯಕನ್ಯೆ, ರೋಗಿಗಳಿಗೆ ಆರೋಗ್ಯ , ದೌರ್ಭಾಗ್ಯವಂತರಿಗೆ ಸೌಭಾಗ್ಯ , ಶೋಕಾರ್ತರಿಗೆ ಆನಂದ ಲಭಿಸುವುದು.

ವೇದದಲ್ಲಿ ಗಣೇಶನ ಮಹಿಮೆ ಶ್ರವಣಮಾಡಿದರೆ ಬರುವ ಫಲ ಈ ಅಧ್ಯಾಯ ಶ್ರವಣದಿಂದಲೂ ಬರುತ್ತದೆ. ಈ ಮಂಗಳಕರವಾದ ಅಧ್ಯಾಯದ ಪುಸ್ತಕ ಯಾರ ಮನೆಯಲ್ಲಿರುವುದೋ ಅವನಿಗೆ ಸದಾ ಮಂಗಳವೆ. ಇದರಲ್ಲಿ ಸಂಶಯವಿಲ್ಲ. ಪ್ರಯಾಣಕ್ಕೆ ಹೊರಡುವಾಗ ಪುಣ್ಯದಿನದಲ್ಲಿ ಇದನ್ನು ಶ್ರವಣಮಾಡಿದರೆ ಗಣೇಶನ ಅನುಗ್ರಹದಿಂದ ಸಕಲಾಭೀಷ್ಟಸಿದ್ಧಿಯಾಗುವುದು.

**ಇಲ್ಲಿಗೆ ಶ್ರೀ ಬ್ರಹ್ಮವೈವರ್ತ ಮಹಾಪುರಾಣದಲ್ಲಿ ಮೂರನೆಯದಾದ ಗಣಪತಿ ಖಂಡದಲ್ಲಿ ನಾರದನಾರಾಯಣ ಸಂವಾದದಲ್ಲಿ ಗಣೇಶೋದ್ಭವ ಮಂಗಳವೆಂಬ ಹತ್ತನೆ ಅಧ್ಯಾಯ ಮುಗಿಯಿತು.**

# ಶನಿಯ ಅಧೋದೃಷ್ಟಿಯ ಕಾರಣಕಥನ

## ಅಧ್ಯಾಯ-೧೧

ನಾರಾಯಣ— ಶ್ರೀಹರಿ ಗಣೇಶನಿಗೆ ಆಶೀರ್ವದಿಸಿ ದೇವತೆಗಳು ಮತ್ತು ಋಷಿ-ಗಳೊಂದಿಗೆ ರತ್ನಸಿಂಹಾಸನದಲ್ಲಿ ಮಂಡಿಸಿದ. ಅವನಿಗೆ ಬಲಭಾಗದಲ್ಲಿ ಶಿವ, ಎಡ-ಭಾಗದಲ್ಲಿ ಬ್ರಹ್ಮ, ಮುಂಭಾಗದಲ್ಲಿ ಧರ್ಮ ಸೂರ್ಯ ಇಂದ್ರ ಚಂದ್ರ ಮುಂತಾದ ದೇವತೆಗಳೂ ಮುನಿಗಳೂ ಪರ್ವತಗಳೂ ಕುಳಿತರು. ಗಂಧರ್ವ ಅಪ್ಸರೆಯರ ಕಿನ್ನರಿ-ಯರ ಗಾನ ನೃತ್ಯಗಳು ನಡೆದುವು. ಶ್ರುತಿಗಳು ಮಧುರ ಧ್ವನಿಯಿಂದ ಹರಿಯನ್ನು ಸ್ತುತಿಸಿದುವು.

ಆಗ ಗಣೇಶನನ್ನು ಕಾಣಲು ಸೂರ್ಯಪುತ್ರನಾದ ಮಹಾಯೋಗಿ ಶನಿ ಬಂದ. ಕೃಷ್ಣನನ್ನೇ ಧ್ಯಾನಿಸುತ್ತ ಒಳಗೆ ಹೊರಗೆ ಕೃಷ್ಣನನ್ನೇ ಸ್ಮರಿಸುತ್ತ ತಲೆ ತಗ್ಗಿಸಿ ನಿಂತ. ತಪಸ್ಸಿನ ತೇಜಸ್ಸಿನಿಂದ ಉರಿವ ಬೆಂಕಿಯಂತೆ ಬೆಳಗುತ್ತ ಶನಿಯು ಸುಂದರ ಶ್ಯಾಮ-ವರ್ಣದಿಂದ ಶೋಭಿಸುತ್ತಿದ್ದ. ಪೀತಾಂಬರ ಧರಿಸಿದ್ದ. ಅರೆ ತೆರೆದ ಕಣ್ಣುಗಳಿಂದ ನೋಡಿ ವಿಷ್ಣು ಬ್ರಹ್ಮ ಶಿವ ಧರ್ಮ ಸೂರ್ಯ ಮುಂತಾದ ದೇವತೆಗಳನ್ನು ಮುನಿ-ಗಳನ್ನೂ ನಮಿಸಿ ಅವರ ಅನುಜ್ಞೆ ಪಡೆದು ಬಾಲಗಣೇಶನನ್ನು ಮುನಿಗಳನ್ನೂ ನಮಿಸಿ ಅವರ ಅನುಜ್ಞೆ ಪಡೆದು ಬಾಲಗಣೇಶನನ್ನು ನೋಡಲು ಹೊರಟ. ಪ್ರಧಾನ ದ್ವಾರದಲ್ಲಿ ಶಿವನಂತೆ ಪರಾಕ್ರಮಿಯಾದ ಶೂಲಧಾರಿಯಾದ ವಿಶಾಲಾಕ್ಷ ನಿಂತಿದ್ದ. ಶನಿ ಹೇಳಿದ- 'ವಿಷ್ಣು ಮುಂತಾದ ದೇವತೆಗಳ ಹಾಗೂ ಶಿವನ ಅನುಜ್ಞೆ ಪಡೆದು ಮಗುವನ್ನು ನೋಡಲು ಬಂದಿದ್ದೇನೆ. ಒಳಗೆ ಪಾರ್ವತಿಯ ಬಳಿಗೆ ಹೋಗಲು ಅನುಮತಿ ನೀಡು. ಮಗುವನ್ನು ನೋಡಿ ಹಿಂತಿರುಗುತ್ತೇನೆ.'

ವಿಶಾಲಾಕ್ಷ ''ನಾನು ದೇವತೆಗಳ ಅಥವಾ ಶಿವನ ಸೇವಕನಲ್ಲ, ಮಾತೆಯಾದ ಪಾರ್ವತಿಯ ಅನುಮತಿ ಇಲ್ಲದೆ ನಾನು ಯಾರನ್ನೂ ಒಳಗೆ ಬಿಡಲಾರೆ'' ಎಂದು ಹೇಳಿ ಒಳಗೆ ನಡೆದು ದೇವಿಯ ಅನುಮತಿಯಿಂದ ಶನಿಯನ್ನು ಒಳಗೆ ಬಿಟ್ಟ. ಶನಿ ಒಳಗೆ ಹೋಗಿ ರತ್ನಸಿಂಹಾಸನದಲ್ಲಿ ಮಂಡಿಸಿದ್ದ ಪಾರ್ವತಿಗೆ ತಲೆಭಾಗಿ ನಮಿಸಿದ. ದೇವಿ ಶುಭ್ರವಸ್ತ್ರ ಧರಿಸಿ ರತ್ನಾಭರಣ ಭೂಷಿತಳಾಗಿ, ಸಖಿಯರು ಕೊಟ್ಟ ತಾಂಬೂಲ ಮೆಲ್ಲುತ್ತ, ಐದು ಮಂದಿ ಸಖಿಯರು ಬೀಸುವ ಬಿಳಿ ಚಾಮರ ಸೇವೆ ಕೈಗೊಳ್ಳುತ್ತ, ಬಾಲಗಣೇಶನನ್ನು ಅಪ್ಪಿಕೊಂಡು ನರ್ತಕಿಯರ ನೃತ್ಯ ನೋಡುತ್ತ ಸಿಂಹಾಸನದಲ್ಲಿ ಕುಳಿತಿದ್ದಳು. ತಲೆಬಾಗಿ ನಮಿಸಿ ನಿಂತ ಶನಿಯನ್ನು ಕಂಡು ಅವಳು ಆಶೀರ್ವದಿಸಿ ಅವನ ಕ್ಷೇಮವನ್ನು ವಿಚಾರಿಸಿದಳು. 'ಇದೇಕೆ ತಲೆ ಬಾಗಿ ನಿಂತೆ ? ನನ್ನನ್ನು ನನ್ನ ಮಗುವನ್ನೂ ಏಕೆ ನೋಡುವುದಿಲ್ಲ' ? ಎಂದು ಕೇಳಿದಳು. ಶನಿ ಹೇಳತೊಡಗಿದ—

'ದೇವಿ, ಎಲ್ಲರೂ ಅವರವರ ಕರ್ಮದ ಫಲ ಉಣಲೇ ಬೇಕು. ಕೋಟಿಕಲ್ಪಕಳೆದರೂ ಅದು ಹಾಗೇ ಸವೆಯದು. ಬ್ರಹ್ಮಲೋಕ ಇಂದ್ರಲೋಕ

ಸೂರ್ಯಲೋಕ ಮನುಷ್ಯಲೋಕ ಪಶ್ವಾದಿಗಳಲ್ಲಿ ಹುಟ್ಟುವುದಾಗಲಿ, ನರಕಕ್ಕೆ ಅಥವಾ ವೈಕುಂಠಕ್ಕೆ ಹೋಗುವುದಾಗಲಿ, ದೊಡ್ಡ ರಾಜನಾಗುವುದು ಸೇವಕನಾಗುವುದು, ಸುಂದರನಾಗಿರುವುದು, ಸದಾ ವ್ಯಾಧಿಯಿಂದ ಬಳಲುವುದು, ವಿಷಯಾಸಕ್ತನಾಗುವುದು, ನಿರ್ಲಿಪ್ತನಾಗಿರುವುದು, ಶ್ರೀಮಂತನಾಗುವುದು, ದೀನನಾಗುವುದು, ಒಳ್ಳೆಯ ಕುಟುಂಬ ಹೊಂದುವುದು, ಬಂಧುಪೀಡೆಗೊಳಗಾಗುವುದು, ಒಳ್ಳೆಯ ಹೆಂಡತಿ ಮಕ್ಕಳನ್ನು ಪಡೆಯುವುದು, ಹೆಂಡದಿ ಮಕ್ಕಳನ್ನು ಕಳೆದುಕೊಳ್ಳುವುದು ಅಥವಾ ಕೆಟ್ಟ ಹೆಂಡತಿ ಮಕ್ಕಳಿಂದ ದುಃಖ ಪಡುವುದು ಎಲ್ಲವೂ ಕರ್ಮಾಧೀನ.

ದೇವಿ, ಪಾರ್ವತಿ, ನನ್ನದೊಂದು ರಹಸ್ಯ ವೃತ್ತಾಂತವಿದೆ. ತಾಯಿಯ ಮುಂದೆ ಅದು ಹೇಳುವಂತಹುದಲ್ಲ. ಹೇಳಲು ಲಜ್ಜೆಯಾಗುತ್ತದೆ. ಆದರೂ ಹೇಳುತ್ತೇನೆ, ಕೇಳು. ನಾನು ಬಾಲ್ಯದಿಂದಲೂ ಕೃಷ್ಣಭಕ್ತ. ಕೃಷ್ಣನ ಧ್ಯಾನದಲ್ಲಿಯೆ ಮನಸ್ಸಿಟ್ಟವ. ತಪಸ್ಸಿನಲ್ಲಿಯೂ ನನಗೆ ಆಸಕ್ತಿ, ವಿಷಯ ಸುಖದಲ್ಲಿಯೂ ಆಸಕ್ತಿ. ತಂದೆ ನನಗೆ ಚಿತ್ರರಥನ ಕನ್ಯೆಯನ್ನು ಮದುವೆ ಮಾಡಿದ. ಆಕೆ ತೇಜಸ್ವಿನಿ, ತಪೋನಿರತಳು, ಒಂದು ದಿನ ಅವಳು ಋತುಸ್ನಾನಮಾಡಿ ಸುಂದರ ವೇಷಭೂಷಣಗಳನ್ನು ಧರಿಸಿ ಮುನಿಗಳ ಮನಸ್ಸನ್ನೂ ಸೂರೆಗೊಳ್ಳುವಂತೆ ಮುಗುಳುನಗು ನಗುತ್ತ ನನ್ನ ಸಂಗ ಬಯಸಿ ಬಂದಳು. ನಾನು ಆಗ ಹರಿಪಾದ ಧ್ಯಾನದಲ್ಲಿ ಲೀನನಾಗಿದ್ದು ಅವಳನ್ನು ಕಣ್ಣೆತ್ತಿಯೂ ನೋಡಲಿಲ್ಲ. ಋತುನಾಶದಿಂದ ಕುಪಿತಳಾದ ಆಕೆ ನನ್ನನ್ನು ಶಪಿಸಿದಳು, 'ಋತುಸ್ನಾತಳಾಗಿ ಬಂದ ನನ್ನನ್ನು ನೀನು ಕಣ್ಣೆತ್ತಿಯೂ ನೋಡಲಿಲ್ಲ, ನನ್ನ ಋತುವನ್ನೂ ಕಾಪಾಡಲಿಲ್ಲ, ಇಂಥ ಮೂಢನಾದ ನೀನು ನೋಡಿದ್ದೆಲ್ಲ ನಾಶವಾಗಲಿ' ಎಂದು. ಒಡನೆ ನಾನು ಧ್ಯಾನ ಬಿಟ್ಟೆದ್ದು ಅವಳನ್ನು ತೃಪ್ತಿ ಪಡಿಸಿದೆ. ಅವಳಿಗೆ ಪಶ್ಚಾತ್ತಾಪವಾಯಿತು. ಆದರೂ ಕೊಟ್ಟ ಶಾಪವನ್ನು ಹಿಂತೆಗೆದು ಕೊಳ್ಳದಾದಳು. ಅದರಿಂದ ನಾನು ಯಾರನ್ನೂ ನೋಡುವುದನ್ನೇ ಬಿಟ್ಟೆ. ಪ್ರಾಣಿ ಹಿಂಸೆಯಾಗುವುದೆಂದು ಭಯ.

ಶನಿ ಆಡಿದ ಈ ಮಾತು ಕೇಳಿ ಪಾರ್ವತಿ ನಕ್ಕಳು. ನಾಟ್ಯವಾಡುವ ಕಿನ್ನರಿಯರೂ ಜೋರಾಗಿ ನಕ್ಕರು.

ಇಲ್ಲಿಗೆ ಶ್ರೀ ಬ್ರಹ್ಮವೈವರ್ತ ಮಹಾಪುರಾಣದಲ್ಲಿ ಮೂರನೆಯದಾದ ಗಣಪತಿ ಖಂಡದಲ್ಲಿ
ನಾರದನಾರಾಯಣ ಸಂವಾದದಲ್ಲಿ ಶನಿಯ ಅಧೋದೃಷ್ಟಿಕಾರಣ ಕಥನವೆಂಬ
ಹನ್ನೊಂದನೆ ಅಧ್ಯಾಯ ಮುಗಿಯಿತು.

# ಶನಿಯ ದೃಷ್ಟಿಕ್ಷೇಪದಿಂದ ಗಣೇಶನ ಶಿರಶ್ಛೇದ, ಹರಿಯಿಂದ ಗಣೇಶನಿಗೆ ಆನೆಯ ಶಿರೋಯೋಜನೆ, ಸತಿಯಿಂದ ಶನಿಗೆ ಶಾಪ

**ಅಧ್ಯಾಯ-೧೨**

ನಾರಾಯಣ— ಶನಿಯ ಮಾತನ್ನು ಕೇಳಿ ಒಂದು ಕ್ಷಣ ಪಾರ್ವತಿ ಎಲ್ಲವೂ ಭಗವದಿಚ್ಛೆ ಎಂದುಕೊಂಡಳು. ಆದರೂ ದೈವವಶದಿಂದ 'ನೀನು ನನ್ನನ್ನೂ ನನ್ನ ಮಗುವನ್ನೂ ನೋಡು' ಎಂದು ಶನಿಯನ್ನು ಒತ್ತಾಯಿಸಿದಳು. ದೈವವನ್ನು ಯಾರು ಮೀರಬಲ್ಲರು ? ಶನಿ ಆಲೋಚಿಸಿದ, 'ನಾನು ಮಗುವನ್ನು ನೋಡಲೆ ? ಇಲ್ಲ, ನೋಡಿದರೆ ನಿಶ್ಚಯವಾಗಿಯೂ ಮಗುವಿಗೆ ಕೇಡುಂಟಾಗುವುದು. ಆದರೂ ದೇವಿ ಹೇಳಿದಂತೆ ಮಾಡಿದರೆ ಅವಳ ಮುಂದೆಯೆ ಅನಿಷ್ಟ ಸಂಭವಿಸಿದರೆ ಆತ್ಮರಕ್ಷಣೆ ಸುಲಭವಾಗಿ ದೊರಕೀತು. ಆದರಿಂದ ಮಗುವನ್ನು ಮಾತ್ರ ನೋಡುತ್ತೇನೆ' ಎಂದುಕೊಂಡು ಶನಿ ಎಡಗಣ್ಣ ಕುಡಿನೋಟದಿಂದ ಗಣೇಶನ ಮುಖ ನೋಡಿದ. ಒಡನೆ ಗಣೇಶನ ತಲೆ ಕತ್ತರಿಸಿ ಹೋಯಿತು. ಶನಿ ತಲೆ ತಗ್ಗಿಸಿ ಕಣ್ಣು ಮುಚ್ಚಿಕೊಂಡ. ಪಾರ್ವತಿಯ ಮಡಿಲಲ್ಲಿ ಈಗ ಗಣೇಶನ ರಕ್ತಸಿಕ್ತವಾದ ಮುಂಡ ಮಾತ್ರವಿತ್ತು. ರುಂಡ ಗೋಲೋಕಕ್ಕೆ ಹೋಗಿ ಕೃಷ್ಣನನ್ನು ಪ್ರವೇಶಿಸಿತ್ತು. ದೇವಿ ಮಗುವಿನ ಶರೀರವನ್ನು ಎದೆಗೊತ್ತಿಕೊಂಡು ಹುಚ್ಚಳಂತೆ ವಿಲಾಪ ಮಾಡುತ್ತ ಮೂರ್ಛಿತಳಾದಳು. ದೇವತೆ-ಗಳೆಲ್ಲ ಈ ದೃಶ್ಯವನ್ನು ಕಂಡು ಚಿತ್ರದ ಬೊಂಬೆಗಳಂತಾದರು. ದೇವಿಯರೂ ಗಂಧರ್ವರೂ ಪರ್ವತಗಳೂ ಎಲ್ಲ ಕೈಲಾಸವಾಸಿಗಳೂ ಹೀಗೇ ಮೈಮರೆತು ನಿಂತರು.

ಶ್ರೀಹರಿ ಗರುಡನ ಬೆನ್ನೇರಿ ಕೈಲಾಸದಿಂದ ಉತ್ತರಕ್ಕಿರುವ ಪುಷ್ಪಭದ್ರಾನದೀತೀರಕ್ಕೆ ಹೋಗಿ ಅಲ್ಲಿ ಕಾಡಿನಲ್ಲಿ ಮಲಗಿದ್ದ ಒಂದು ಆನೆಯನ್ನು ಕಂಡ. ಅದು ಹೆಣ್ಣಾನೆಯೊಡನೆ ರತಿಕ್ರೀಡೆಯಾಗಿ ಆಯಾಸದಿಂದ ಆ ಹೆಣ್ಣಾನೆಯ ಮತ್ತು ಮರಿಗಳ ಜೊತೆಗೆ ಆನಂದದಿಂದ ಮಲಗಿತ್ತು. ಉತ್ತರಕ್ಕೆ ತಲೆಹಾಕಿ ಮಲಗಿ ನಿದ್ರಿಸುತ್ತಿತ್ತು. ಶ್ರೀಹರಿ ಅದರ ತಲೆಯನ್ನು ಸುದರ್ಶನ ಚಕ್ರದಿಂದ ಕತ್ತರಿಸಿ ಗರುಡನ ಮೇಲಿಟ್ಟು-ಕೊಂಡ. ಆನೆಯ ಮುಂಡ ನೆಲದ ಮೇಲೆ ಹೊರಳಾಡಿದಾಗ ಅದರ ಸ್ಪರ್ಶದಿಂದ ಹೆಣ್ಣಾನೆ ಎಚ್ಚೆತ್ತು ಅಪಾಯದ ಕೂಗಿನಿಂದ ಮರಿಗಳನ್ನೂ ಎಬ್ಬಿಸಿತು. ಅವುಗಳೊಂದಿಗೆ ಒಂದೇಸಮನೆ ಅತ್ತು ಅತ್ತು ಮಂದಹಾಸದಿಂದ ಎದುರಿಗೇ ನಿಂತಿದ್ದ ಶ್ರೀಹರಿಯನ್ನು ಸ್ತುತಿಸತೊಡಗಿತು. ಹರಿ ಇನ್ನೊಂದು ಆನೆಯ ತಲೆಯನ್ನು ಕತ್ತರಿಸಿ ಈ ಆನೆಯ ಮುಂಡಕ್ಕೆ ಜೋಡಿಸಿ ಬದುಕಿಸಿಕೊಟ್ಟ. ಆ ಆನೆಗೆ ಪರಿವಾರ ಸಮೇತನಾಗಿ ಕಲ್ಪ-ಪರ್ಯಂತ ಬದುಕಿರುವಂತೆ ವರವಿತ್ತು ಕೈಲಾಸಕ್ಕೆ ತೆರಳಿದ. ಪಾರ್ವತಿಯ ಕೈಯಿಂದ ಮಗುವಿನ ಶರೀರವನ್ನು ಎತ್ತಿಕೊಂಡು ಅದಕ್ಕೆ ಆನೆಯ ತಲೆಯನ್ನು ಜೋಡಿಸಿದ.

'ಹುಂ' ಎಂದು ಉಚ್ಚರಿಸಿ ಮಗುವಿನ ಶರೀರಕ್ಕೆ ಜೀವವಿತ್ತು ಪಾರ್ವತಿಯ ಕೈಗಿತ್ತ. ಅವಳನ್ನು ಸಂತೈಸಿದ—

'ಪಾರ್ವತಿ, ಬ್ರಹ್ಮನಿಂದ ತೊಡಗಿ ಕೀಟದ ವರೆಗೂ ಎಲ್ಲ ಜೀವರೂ ತಮ್ಮ ಕರ್ಮದ ಫಲ ತಾವು ಉಣ್ಣುವರೆಂಬುದು ಜಗತ್ತಿಗೇ ಬುದ್ಧಿರೂಪಳಾದ ನಿನಗೆ ತಿಳಿಯದೆ ? ದೇವೇಂದ್ರ ಕೀಟವಾಗಿ, ಕೀಟ ದೇವೇಂದ್ರನಾಗಿ ಜನಿಸಬಹುದು. ಸಿಂಹ ನೊಣವನ್ನು ಕೊಲ್ಲಲು ಅಶಕ್ತವಾಗಬಹುದು, ನೊಣ ಆನೆಯನ್ನೂ ಕೊಂದೀತು. ಎಲ್ಲವೂ ಕರ್ಮಾಧೀನ. ಸುಖ ದುಃಖ ಭಯ ಶೋಕ ಆನಂದ ಎಲ್ಲವೂ ಕರ್ಮಫಲ. ಸುಖ ನೆಮ್ಮದಿಗಳು ಸತ್ಕರ್ಮದ ಫಲ. ದುಃಖ ಶೋಕಗಳು ದುಷ್ಕರ್ಮದ ಫಲ. ಕರ್ಮಕ್ಷೇತ್ರ ಭಾರತ. ಇಲ್ಲಿ ಮಾಡಿದ ಶುಭಾಶುಭ ಕರ್ಮಗಳಿಗೆ ಶುಭಾಶುಭ ಫಲಗಳು ಇಹದಲ್ಲಾದಲಿ ಪರದಲ್ಲಾಗಲಿ ಅವಶ್ಯ ಬಂದೇ ತೀರುವುದು. ಕರ್ಮಫಲ ದಾತ ಶ್ರೀಕೃಷ್ಣ. ಅವನೆ ಮೃತ್ಯುವಿಗೆ ಮೃತ್ಯು. ಕಾಲನಿಗೆ ಕಾಲ. ಲಯಕಾರಕನಿಗೆ ಲಯಕಾರಕ. ಪಾಲಕನಿಗೆ ಪಾಲಕ. ನಾವು ಬ್ರಹ್ಮವಿಷ್ಣು ಮಹೇಶ್ವರರು ಅವನ ಅಂಶಭೂತರು. ಅವನ ಅಂಶಭೂತನೆ ಆದ ಮಹಾವಿರಾಟ್ ಪುರುಷ ರೋಮಕೂಪದಲ್ಲಿ ಸಮಸ್ತ ಪ್ರಪಂಚವನ್ನು ಧರಿಸುತ್ತಾನೆ.

ಹರಿಯ ಮಾತು ಕೇಳಿ ಪಾರ್ವತಿ ಸಮಾಧಾನಗೊಂಡು ಮಗುವಿಗೆ ಸ್ತನಪಾನ ಮಾಡಿಸಿದಳು. ಕೈ ಮುಗಿದು ಭಕ್ತಿಯಿಂದ ಹರಿಯನ್ನು ಸ್ತುತಿಸಿದಳು. ಹರಿ ತಾಯಿಗೂ ಮಗುವಿಗೂ ಆಶೀರ್ವದಿಸಿದ. ಮಗುವಿನ ಕೊರಳಿಗೆ ಕೌಸ್ತುಭಮಣಿಯನ್ನು ತೊಡಿಸಿದ. ಬ್ರಹ್ಮ ಕಿರೀಟವನ್ನಿಟ್ಟ. ಧರ್ಮ ರತ್ನಾಭರಣವಿತ್ತ. ದೇವಿಯರೆಲ್ಲ ರತ್ನಗಳನ್ನು ತೊಡಿಸಿ-ದರು. ಶಿವ ಸಂತೋಷದಿಂದ ಮಗುವನ್ನು ಕೊಂಡಾಡಿದ. ದೇವತೆಗಳೂ ಮುನಿಗಳು ಪರ್ವತಗಳೂ ಗಂಧರ್ವರೂ ಎಲ್ಲ ದೇವಸ್ತ್ರೀಯರೂ ಆನಂದಿತರಾದರು.

ಶಿವ ಪಾರ್ವತಿಯರು ತಮ್ಮ ಮಗ ಸತ್ತು ಬದುಕಿದುದನ್ನು ಕಂಡು ಬ್ರಾಹ್ಮಣರಿಗೆ ಕೋಟಿ ರತ್ನಗಳನ್ನು ದಾನ ಮಾಡಿದರು. ಸಾವಿರಾರು ಆನೆ ಕುದುರೆಗಳನ್ನಿತ್ತರು. ಹಿಮಾಲಯನೂ ಎಲ್ಲ ದೇವತೆಗಳೂ ದೇವಿಯರೂ ಹಾಗೇ ದಾನ ಮಾಡಿದರು. ಶ್ರೀಹರಿಯೂ ಬ್ರಾಹ್ಮಣರಿಗೆ ಭೋಜನವಿತ್ತು ವೇದಪುರಾಣ ಘೋಷಣಗಳನ್ನು ಮಾಡಿಸಿದ.

ಲಜ್ಜೆಯಿಂದ ತಲೆತಗ್ಗಿಸಿ ನಿಂತಿದ್ದ ಶನಿಯನ್ನು ಕಂಡು ಪಾರ್ವತಿ ಕೋಪದಿಂದ ಅಂಗಹೀನನಾಗೆಂದು ಶಪಿಸಿದಳು. ಆಗ ಸೂರ್ಯ ಕಶ್ಯಪ ಮತ್ತು ಯಮರು ಕೋಪ-ಗೊಂಡರು. ಪಾರ್ವತಿಯನ್ನೂ ವಿಷ್ಣುವನ್ನೂ ಶಪಿಸಲು ಉದ್ಯುಕ್ತರಾದರು. ಬ್ರಹ್ಮ ನಡುವೆ ಬಂದು ಅವರನ್ನು ಸಮಾಧಾನ ಮಾಡಿದ. ಇನ್ನೂ ಕೋಪದಿಂದಿದ್ದ ಪಾರ್ವತಿಗೂ ಸಮಾಧಾನ ಹೇಳಿದ. ಕಶ್ಯಪಾದಿಗಳೂ ಹೇಳಿದರು—

ಕಶ್ಯಪ— ಶನಿಯ ದೃಷ್ಟಿ ಅವನ ಪ್ರಾರಬ್ಧಕರ್ಮದಿಂದ ಮತ್ತು ಪತ್ನಿಯ ಶಾಪ-ದಿಂದ ಕೆಟ್ಟದಾಗಿದ್ದುದು ನಿಜ. ಆದರೆ ಆತ ಪಾರ್ವತಿಯ ಆಜ್ಞೆಯಿಂದಲೆ ಬಲುಕಷ್ಟ-ದಿಂದ ಮಗುವನ್ನು ನೋಡಿದ್ದ.

ಸೂರ್ಯ- ನನ್ನ ಮಗನಾದ ಶನಿ ಪಾರ್ವತಿಯ ಆಜ್ಞೆಯಿಂದಲೆ ಧರ್ಮ-ಸಾಕ್ಷಿಯಾಗಿ ಬಹುಕಷ್ಟದಿಂದ ಮಗುವನ್ನು ನೋಡಿದ. ಇದರಲ್ಲಿ ಅವನ ತಪ್ಪೇನೂ ಇಲ್ಲ. ಆದರೂ ಪಾರ್ವತಿ ಅವನಿಗೆ ಅಂಗಭಂಗವಾಗಲೆಂದು ಶಪಿಸಿದ್ದಾಳೆ. ಅದರಿಂದ ಅವಳ ಮಗುವಿಗೂ ಅಂಗಭಂಗವಾಗಲಿ.

ಯಮ— ತಾನೇ ಆಜ್ಞೆಮಾಡಿ ತಾನೇ ಶಾಪ ಕೊಟ್ಟಿದ್ದಾಳೆ, ಪಾರ್ವತಿ. ನಾವೂ ಶಾಪಕೊಡುತ್ತೇವೆ. ಹಿಂಸಕರಿಗೆ ಹಿಂಸೆ ಮಾಡುವುದರಲ್ಲಿ ತಪ್ಪೇನಿದೆ ?

ಬ್ರಹ್ಮ— ಪಾರ್ವತಿ ಕೋಪದಿಂದ ಶಾಪ ನೀಡಿದರೂ ಸ್ತ್ರೀ ಸ್ವಭಾವದಲ್ಲಿಯೆ ಇರುವ ಚಾಪಲ್ಯ ಅದಕ್ಕೆ ಕಾರಣವೆಂದು ಸಜ್ಜನರಾದ ತಾವೆಲ್ಲ ಕ್ಷಮಿಸಬೇಕು. ಪಾರ್ವತಿ, ನಿನ್ನಲ್ಲಿಯೆ ತಪ್ಪು ಇದೆ. ಮಗುವನ್ನು ನೋಡೆಂದು ನೀನೆ ಶನಿಗೆ ಆಜ್ಞೆ ಮಾಡಿದ್ದರಿಂದ ಆತನಲ್ಲಿ ಏನೂ ತಪ್ಪಿಲ್ಲ. ಅತಿಥಿಯಾಗಿ ನಿನ್ನ ಮನೆಗೆ ಬಂದಿದ್ದಾನೆ, ನಿರಪರಾಧಿ, ಅಂಥವನನ್ನು ನೀನು ಶಪಿಸಬಹುದೆ'?

ಬ್ರಹ್ಮ ಹೀಗೆ ಹೇಳಿ ಶಾಪವಿಮೋಚನೆ ಮಾಡೆನ್ನುತ್ತ ಶನಿಯನ್ನು ದೇವಿಯ ಕಡೆಗೆ ಕಳಿಸಿದ. ದೇವಿ ಸಮಾಧಾನಗೊಂಡು ಹೇಳಿದಳು-

'ಶನಿಯೆ, ನೀನು ಹರಿಭಕ್ತ. ಹರಿಭಕ್ತನಿಗೆ ಎಲ್ಲಿಯ ಆಪತ್ತು ? ನಿನ್ನ ಹರಿಭಕ್ತಿಗೆ ವಿಘ್ನ ಬಾರದಿರಲಿ. ಅದು ದೃಢವಾಗಿ ಬೆಳೆಯಲಿ. ನೀನು ಗ್ರಹಗಳಲ್ಲಿ ಶ್ರೇಷ್ಠನಾಗಿ ಚಿರಂಜೀವಿಯಾಗಿ ಮಹಾಯೋಗಿಯಾಗಿ ಬಾಳು. ನನ್ನ ಶಾಪ ಅಮೋಘವಾದ್ದರಿಂದ ಸ್ವಲ್ಪಮಾತ್ರ ಕುಂಟನಾಗುವೆ.'

ಶನಿ ದೇವಿಗೆ ನಮಿಸಿ ಸಂತೋಷದಿಂದ ಹಿಂತಿರುಗಿದ.

**ಇಲ್ಲಿಗೆ ಶ್ರೀ ಬ್ರಹ್ಮವೈವರ್ತ ಮಹಾಪುರಾಣದಲ್ಲಿ ಮೂರನೆಯದಾದ ಗಣಪತಿ ಖಂಡದಲ್ಲಿ ನಾರದನಾರಾಯಣ ಸಂವಾದದಲ್ಲಿ ಶನಿಕೃತ ಗಣೇಶದರ್ಶನ, ತಜ್ಜಾತ ಗಣೇಶ ಶಿರಃಪತನ, ವಿಷ್ಣುಕೃತ ಗಣೇಶ ಶಿರೋ ಯೋಜನ, ಶನಿಶಾಪಾದಿ ಕಥನವೆಂಬ ಹನ್ನೆರಡನೆ ಅಧ್ಯಾಯ ಮುಗಿಯಿತು.**

# ಗಣೇಶ ಪೂಜಾಸ್ತೋತ್ರ ಹಾಗೂ ಕವಚಾದಿ ಕಥನ

ಅಧ್ಯಾಯ-೧೩

ನಾರಾಯಣ— ಬಳಿಕ ವಿಷ್ಣು ಒಂದು ಮಂಗಳ ಮುಹೂರ್ತದಲ್ಲಿ ದೇವತೆಗಳ ಮತ್ತು ಮುನಿಗಳ ಜೊತೆಗೂಡಿ ಗಣೇಶನನ್ನು ಪೂಜಿಸಿ 'ಮಗು, ನಿನಗೆ ಎಲ್ಲ ದೇವತೆಗಳಿಗಿಂತ ಮೊದಲ ಪೂಜೆ ಲೋಕದಲ್ಲಿ ಸಿಗಲಿ' ಎಂದು ವರನೀಡಿದ. ಮೋಕ್ಷದಾಯಕವಾದ ಬ್ರಹ್ಮಜ್ಞಾನವನ್ನೂ ಸರ್ವಯೋಗಸಿದ್ಧಿಯನ್ನೂ ಅನುಗ್ರಹಿಸಿದ. ವನಮಾಲೆ ತೊಡಿಸಿ ಅವನನ್ನು ತನಗೆ ಸದೃಶನಾಗುವಂತೆ ಮಾಡಿದ.

ವಿಘ್ನೇಶಶ್ಚ ಗಣೇಶಶ್ಚ ಹೇರಂಬಶ್ಚ ಗಜಾನನಃ ।
ಲಂಬೋದರಶ್ಚೈಕದಂತಃ ಶೂರ್ಪಕರ್ಣೋ ವಿನಾಯಕಃ ॥

ವಿಘ್ನೇಶ, ಗಣೇಶ, ಹೇರಂಬ, ಗಜಾನನ, ಲಂಬೋದರ, ಏಕದಂತ, ಶೂರ್ಪ-ಕರ್ಣ, ವಿನಾಯಕ ಈ ಎಂಟು ಹೆಸರುಗಳಿಂದ ಗಣೇಶನನ್ನು ಹೊಗಳಿದ. ಆಶೀರ್ವದಿಸಿದ.

ಧರ್ಮ ಗಣೇಶನಿಗೆ ಸಿದ್ಧಾಸನವನ್ನಿತ್ತ. ಬ್ರಹ್ಮ ಕಮಂಡಲುವನ್ನು ಕೊಟ್ಟ. ಶಂಕರ ಯೋಗಪಟ್ಟವನ್ನೂ ತತ್ತ್ವಜ್ಞಾನವನ್ನೂ ನೀಡಿದ. ಇಂದ್ರ ರತ್ನಸಿಂಹಾಸನವನ್ನೂ, ಸೂರ್ಯ ಮಣಿಕುಂಡಲವನ್ನೂ, ಚಂದ್ರ ಮಾಣಿಕ್ಯಮಾಲೆಯನ್ನೂ, ಕುಬೇರ ಕಿರೀಟವನ್ನೂ, ಅಗ್ನಿ ವಸ್ತ್ರವನ್ನೂ, ವರುಣ ರತ್ನಛತ್ರವನ್ನೂ, ವಾಯು ರತ್ನದುಂಗುರವನ್ನೂ ಕೊಟ್ಟರು.

ಕ್ಷೀರಸಾಗರದಿಂದ ಉದಿಸಿದ ರತ್ನಕಂಕಣವನ್ನೂ ಗೆಜ್ಜೆ ತೋಳುಬಳೆಗಳನ್ನೂ ಲಕ್ಷ್ಮಿ ನೀಡಿದಳು. ಕಂಠಾಭರಣವನ್ನು ಸಾವಿತ್ರಿ, ಹಾರವನ್ನು ಭಾರತಿ, ಹೀಗೆ ಎಲ್ಲ ದೇವಿಯರೂ ಆಭರಣಗಳನ್ನು ಗಣೇಶನಿಗೆ ನೀಡಿದರು. ಮುನಿಗಳೂ ಪರ್ವತಗಳೂ ನಾನಾ ರತ್ನಗಳನ್ನು ನೀಡಿದರು. ವಸುಂಧರೆ ವಾಹನದ ಇಲಿಯನ್ನಿತ್ತಳು.

ಪಾರ್ವತಿ ಗಣೇಶನನ್ನು ರತ್ನಸಿಂಹಾಸನದಲ್ಲಿ ಕೂಡಿಸಿ ರತ್ನಕಲಶಗಳಲ್ಲಿ ತುಂಬಿದ ಸರ್ವತೀರ್ಥಜಲದ ಅಭಿಷೇಕಗಳನ್ನು ವೇದಮಂತ್ರಪೂರ್ವಕವಾಗಿ ಮುನಿಗಳಿಂದ ಮಾಡಿಸಿದಳು. ಶುದ್ಧವಸ್ತ್ರ ನೀಡಿದಳು. ಗೋದಾವರೀ ಜಲದಿಂದ ಪಾದ್ಯವನ್ನೂ ಗಂಗೋದಕದಿಂದ ಅರ್ಘ್ಯವನ್ನೂ, ಪುಷ್ಕರಜಲದಿಂದ ಪುನರಾಚಮನವನ್ನೂ, ರತ್ನ-ಪಾತ್ರೆಗಳಲ್ಲಿ ಸಕ್ಕರೆಗೂಡಿದ ಮಧುಪರ್ಕವನ್ನೂ, ದೇವವೈದ್ಯರಾದ ಅಶ್ವಿನೀ-ದೇವತೆಗಳು ಸಿದ್ಧಪಡಿಸಿದ ವಿಷ್ಣುತೈಲ ಸಹಿತವಾದ ಸ್ನಾನಜಲವನ್ನೂ, ಅಮೂಲ್ಯ ರತ್ನಾಭರಣಗಳನ್ನೂ, ಪಾರಿಜಾತ ಮಾಲತೀ ಚಂಪಕಾದಿ ಪುಷ್ಪಗಳನ್ನೂ, ತುಲಸೀ ಸಹಿತವಾದ ಪೂಜಾರ್ಹವಾದ ಪತ್ರಗಳನ್ನೂ, ಚಂದನಾಗರು ಕಸ್ತೂರೀ ಕುಂಕುಮ-ಗಳನ್ನೂ, ಅನೇಕ ರತ್ನ ದೀಪ ಧೂಪಗಳನ್ನೂ, ನೀಡಿ ನೈವೇದ್ಯವನ್ನೂ ಬಡಿಸಿದಳು.

ಗಣೇಶನಿಗೆ ಪ್ರಿಯವಾದ ಎಳ್ಳು ಯವೆ ಗೋದಿ ಹಿಟ್ಟುಗಳ ಉಂಡೆಗಳು, ಪಕ್ವಾನ್ನ-ಗಳು, ಸಕ್ಕರೆ ಬೆಲ್ಲಗಳ ಭಕ್ಷ್ಯಗಳು, ಹಾಲು ಮೊಸರು, ತುಪ್ಪ, ಜೇನು, ದಾಳಿಂಬ, ಬಿಲ್ವ ಖರ್ಜೂರ, ನೇರಳೆ, ಮಾವು ಹಲಸು ಬಾಳೆಹಣ್ಣು ತೆಂಗಿನಕಾಯಿ ಮುಂತಾದ ಫಲಗಳು ಇವುಗಳನ್ನು ಬೆಟ್ಟದಷ್ಟು ರಾಶಿರಾಶಿಯಾಗಿ ನೈವೇದ್ಯವಾಗಿ ಬಡಿಸಿದಳು ಪಾರ್ವತಿ. ಮುಂದೆ ಪಾನೀಯವಾಗಿ ಮತ್ತು ಪುನರಾಚಮನೀಯವಾಗಿ ಪಚ್ಚ-ಕರ್ಪೂರಾದಿಗಳಿಂದ ಸುವಾಸಿತವಾದ ನಿರ್ಮಲ ಗಂಗಾಜಲ, ಏಲಕ್ಕಿ ಪಚ್ಚ-ಕರ್ಪೂರಾದಿಗಳಿಂದ ಗಮಗಮಿಸುವ ತಾಂಬೂಲ, ಭಕ್ಷ್ಯದಿಂದ ತುಂಬಿದ ನೂರಾರು ಚಿನ್ನದ ಪಾತ್ರಗಳು ಇವೆಲ್ಲವನ್ನೂ ಪಾರ್ವತಿ ಮೇನಕೆ ಹಿಮಾಲಯ ಮೈನಾಕರು ಗಣಪತಿಗೆ ನೀಡಿದರು.

**ಓಂ ಶ್ರೀಂ ಹ್ರೀಂ ಕ್ಲೀಂ ಗಣೇಶಾಯ ಬ್ರಹ್ಮರೂಪಾಯ ಚಾರವೇ ।**
**ಸರ್ವಸಿದ್ಧಿ ಪ್ರದೇಶಾಯ ವಿಘ್ನೇಶಾಯ ನಮೋ ನಮಃ ॥**

ಎಂಬ ಮಂತ್ರದಿಂದ ಬ್ರಹ್ಮವಿಷ್ಣುಶಿವಾದಿಗಳೆಲ್ಲರೂ ಗಣೇಶನನ್ನು ಪೂಜಿಸಿದರು. ಮೂವತ್ತೆರಡು ಅಕ್ಷರ ಈ ಮಾಲಾಮಂತ್ರ ಸರ್ವಾಭೀಷ್ಟಪ್ರದ. ಧರ್ಮ ಅರ್ಥ ಕಾಮ. ಮೋಕ್ಷಗಳನ್ನು ನೀಡುವುದು. ಐದು ಲಕ್ಷ ಜಪದಿಂದ ಮಂತ್ರಸಿದ್ಧಿ. ಮಂತ್ರಸಿದ್ಧಿ-ಯಾಯಿತೆಂದರೆ ಆತ ವಿಷ್ಣುವಿನಂತೆ ತನ್ನ ನಾಮಸ್ಮರಣೆಯಿಂದಲೆ ವಿಘ್ನಗಳನ್ನು ಓಡಿಸಬಲ್ಲ. ಮಹಾವಾಗ್ಮಿ, ಮಹಾಸಿದ್ಧಿ, ಮಹಾಕವಿ, ವಿದ್ವಾಂಸರಲ್ಲಿ ಅಗ್ರಗಣ್ಯ-ನೆನಿಸುತ್ತಾನೆ. ಈ ಮಂತ್ರದಿಂದ ದೇವತೆಗಳೆಲ್ಲ ಗಣೇಶನನ್ನು ಪೂಜಿಸಿದರು. ಮಂಗಳ-ವಾದ್ಯಘೋಷ ಮಾಡಿಸಿದರು. ಬ್ರಾಹ್ಮಣರಿಗೆ ಭೋಜನ ಮಾಡಿಸಿದರು. ದಾನ-ಗಳನ್ನಿತ್ತರು.

ನಾರಾಯಣ ಸಭಾಮಧ್ಯದಲ್ಲಿ ಗಣೇಶನನ್ನು ಹೀಗೆ ಸ್ತುತಿಸಿದ— (ಲೋಕ-ವಿಡಂಬನಾರ್ಥವಾಗಿ)

'ಜಗದೀಶ, ನಿನ್ನನ್ನು ನಾನು ಸ್ತುತಿಸಲು ಬಯಸುತ್ತೇನೆ. ಆದರೆ ನಿನಗೆ ತಕ್ಕುದಾದ ಸ್ತೋತ್ರ ಮಾಡಲು ನಾನು ಸಮರ್ಥನಲ್ಲ. ನೀನು ಎಲ್ಲ ದೇವತೆಗಳಲ್ಲಿ ಸಿದ್ಧರಲ್ಲಿ ಯೋಗಿಗಳಲ್ಲಿ ಅಗ್ರಗಣ್ಯ. ಸರ್ವಸ್ವರೂಪ, ಸರ್ವೇಶ. ಜ್ಞಾನರಾಶಿ ಸ್ವರೂಪ, ಅವ್ಯಕ್ತ, ಅಕ್ಷರ, ನಿತ್ಯಸತ್ಯ, ಆತ್ಮಸ್ವರೂಪಿ, ವಾಯುವಿನಂತೆ ನಿರ್ಲಿಪ್ತ. ಸರ್ವಸಾಕ್ಷಿ. ಸಂಸಾರ ಸಮುದ್ರದಿಂದ ಜೀವರನ್ನು ದಾಟಿಸುವಲ್ಲಿ ನಾವಿಕನಂತಿರುವವ. ಭಕ್ತರನ್ನು ಅನುಗ್ರಹಿಸುವವ. ಅಭೀಷ್ಟವರ ನೀಡುವವ, ಸಿದ್ಧನೂ ಸಿದ್ಧಿಸ್ವರೂಪನೂ ಆಗಿದ್ದು ಸಿದ್ಧಿಸಾದಕನೂ ಸಿದ್ಧಿದಾಯಕನೂ ಆದವ. ಧರ್ಮಜ್ಞ, ಧರ್ಮಅಧರ್ಮಗಳಿಗೆ ಫಲ ನೀಡುವವ. ಸಂಸಾರ ವೃಕ್ಷದ ಬೀಜ ಅಂಕುರ ರೂಪನೂ ನೀನೆ. ಅವುಗಳಿಗೆ ಆಶ್ರಯನೂ ನೀನೆ. ಎಲ್ಲರಿಗೂ ಮೊದಲಿಗ, ಮೊದಲ ಪೂಜೆಗೆ ಅರ್ಹ. ಎಲ್ಲರಿಗೂ

ಪೂಜ್ಯ, ಗುಣಸಾಗರ, ಸ್ವೇಚ್ಛೆಯಿಂದ ಸಗುಣನೂ ನಿರ್ಗುಣನೂ ಆಗಬಲ್ಲವ, ಪ್ರಕೃತಿಯೂ ನೀನೆ, ಪ್ರಾಕೃತನೂ ನೀನೆ. ಪ್ರಕೃತಿಗೆ ಅತೀತನೂ ನೀನೆ. ಇಂಥ ನಿನ್ನನ್ನು ಸಾವಿರ ಮುಖಗಳ ಶೇಷನೂ ಸ್ತುತಿಸಲು ಶಕ್ತನಲ್ಲ. ಐದು ಮುಖದ ಶಿವನೂ ಶಕ್ತನಲ್ಲ, ನಾಲ್ಕು ಮುಖದ ಬ್ರಹ್ಮನೂ ಶಕ್ತನಲ್ಲ. ಸರಸ್ವತಿಯಾಗಲಿ ನಾನಾಗಲಿ, ನಾಲ್ಕು ವೇದಗಳಾಗಲಿ ಸಮರ್ಥರಲ್ಲ. ವೇದಗಳಿಂದಲೆ ಜ್ಞಾನ ಸಂಪಾದಿಸುವ ಇತರರ ಪಾಡೇನು ?

ಹೀಗೆ ವಿಷ್ಣು ಗಣೇಶನನ್ನು ಸ್ತುತಿಸಿ ಸುಮ್ಮನಾದ. ಈ ಸ್ತೋತ್ರವನ್ನು ಸಂಜೆ ಬೆಳಿಗ್ಗೆ ಮಧ್ಯಾಹ್ನಗಳಲ್ಲಿ ಭಕ್ತಿಯಿಂದ ಪಠಿಸಿದರೆ ವಿಘ್ನೇಶ್ವರ ವಿಘ್ನಗಳನ್ನು ಪರಿಹರಿಸುತ್ತಾನೆ. ಸಮಸ್ತ ಮಂಗಳಗಳನ್ನು ಅಭಿವೃದ್ಧಿಗೊಳಿಸುತ್ತಾನೆ. ದುಃಸ್ವಪ್ನವನ್ನು ಸುಸ್ವಪ್ನಗೊಳಿಸುತ್ತಾನೆ. ಕ್ರೂರಗ್ರಹ ಪೀಡೆಯನ್ನು ತಡೆಯುತ್ತಾನೆ. ಶತ್ರುಗಳನ್ನು ನಾಶಗೊಳಿಸಿ ಬಂಧುಗಳನ್ನು ಹೆಚ್ಚಿಸುತ್ತಾನೆ. ಮನೆಯಲ್ಲಿ ಲಕ್ಷ್ಮಿ ಸ್ಥಿರವಾಗಿ ನಿಲ್ಲುತ್ತಾಳೆ. ಪುತ್ರಪೌತ್ರರ ಸಂತತಿ ಬೆಳೆಯುತ್ತದೆ. ಇಹದಲ್ಲಿ ಸರ್ವೈಶ್ವರ್ಯ ಲಾಭ. ಕೊನೆಯಲ್ಲಿ ವಿಷ್ಣುಲೋಕ ಪ್ರಾಪ್ತಿ. ತೀರ್ಥಸ್ನಾನ ಯಜ್ಞ ಮಹಾದಾನಗಳ ಫಲ ಗಣೇಶನ ಅನುಗ್ರಹದಿಂದ ಉಂಟಾಗುತ್ತದೆ.

ನಾರದ— ಪ್ರಭು, ಗಣೇಶನ ಸ್ತೋತ್ರ ಪೂಜೆಗಳನ್ನು ನಾನು ಕೇಳಿದ್ದಾಯಿತು. ಇನ್ನು ಕವಚವನ್ನು ಕೇಳಬಯಸುತ್ತೇನೆ.

ನಾರಾಯಣ— ಗಣೇಶ ಪೂಜೆ ಮುಗಿದೊಡನೆ ಸಭಾಮಧ್ಯದಲ್ಲಿ ಶನಿಯು ಜಗದ್ಗುರು ಸರ್ವಮೋಕ್ಷದಾಯಕನಾದ ವಿಷ್ಣುವನ್ನು ಪ್ರಾರ್ಥಿಸಿದ. "ಸರ್ವದುಃಖಗಳು ನಾಶಹೊಂದುವಂತೆ, ಪಾಪಗಳೆಲ್ಲ ಪರಿಹಾರವಾಗುವಂತೆ ಗಣೇಶನ ಕವಚವನ್ನು ಉಪದೇಶಿಸು. ನನಗೂ ಪಾರ್ವತಿಗೂ ಈಗ ಕಲಹ ಉಂಟಾಯಿತು. ಇಂಥ ವಿಘ್ನಗಳನ್ನು ಪರಿಹರಿಸಲು ಗಣೇಶ ಕವಚವನ್ನು ನಾನು ಧರಿಸಲು ಬಯಸುತ್ತೇನೆ."

ವಿಷ್ಣು— ವಿನಾಯಕ ಕವಚ ಮೂಲೋಕದಲ್ಲಿ ದುರ್ಲಭ. ಅತ್ಯಂತ ಗೋಪ್ಯ. ಪುರಾಣಗಳಲ್ಲಾಗಲಿ ಆಗಮಗಳಲ್ಲಾಗಲಿ ದುರ್ಲಭ. ಸಾಮವೇದ ಕೌಥುಮಶಾಖೆಯಲ್ಲಿ ಮನೋಹರವಾಗಿ ವರ್ಣಿತವಾಗಿದೆ. ಮಗು, ಶನಿಯೆ, ನೀನು ಯಾರಿಗಾದರೂ ರಾಜ್ಯ ಕೊಡು, ನಿನ್ನ ತಲೆಕೊಡು, ಪ್ರಾಣವನ್ನೆ ಕೊಡು, ಈ ಕವಚವನ್ನು ಮಾತ್ರ ಯಾರಿಗೂ ಪ್ರಾಣಸಂಕಟದಲ್ಲಿಯೂ ಕೊಡಬೇಡ. ಗಣೇಶನಿನಾಗಲಿ ಅವನ ಕವಚಕ್ಕಾಗಲಿ ಸ್ವೇಚ್ಛೆಯಿಂದ ಮಾಯಾಪ್ರಭಾವದಿಂದ ಆವಿರ್ಭಾವ ತಿರೋಭಾವಗಳು ಮಾತ್ರ ಆಗುತ್ತವೆ. ನಾಶವಿಲ್ಲ. ಗಣೇಶನ ಪೂಜೆ ಸ್ತೋತ್ರಗಳೂ ನಿತ್ಯ. ಪ್ರತಿಕಲ್ಪದಲ್ಲಿಯೂ ಇವೆ. ಪೂರ್ವಜನ್ಮದಲ್ಲಿಯೂ ಮುನಿಗಳು ಗಣೇಶನನ್ನು ಸೇವಿಸಿದ್ದಾರೆ. ನಾನು ಅವತಾರಗಳಲ್ಲಿ ಹೇಗೆ ಶರೀರ ಧಾರಣೆ ಮಾಡುವೆನೋ ಹಾಗೆಯೆ ಗಣೇಶನೂ ಪಾರ್ವತಿಯ ಉದರದಲ್ಲಿ ಶರೀರಧಾರಣೆ ಮಾಡುತ್ತಾನೆ.

ಗಣೇಶಕವಚ ಧಾರಣ ಮಾಡುವವರಿಗೆ ಮೃತ್ಯು ಭಯದಿಂದ ಸಮೀಪಕ್ಕೂ ಸುಳಿಯುವುದಿಲ್ಲ. ಅವರ ಆಯುಸ್ಸು ಕ್ಷೀಣಿಸುವುದಿಲ್ಲ. ಯಾವುದೇ ಅನಿಷ್ಟವಾಗಲಿ ಪರಾಜಯವಾಗಲಿ ಆಗುವುದಿಲ್ಲ. ಹತ್ತುಲಕ್ಷ ಜಪಮಾಡಿದರೆ ಕವಚ ಸಿದ್ಧಿಸುವುದು. ಮೃತ್ಯುವನ್ನು ಜಯಿಸುವ ಸಾಮರ್ಥ್ಯ ಲಭಿಸುವುದು. ವಾಗ್ಮಿಯಾಗಿ ಚಿರಂಜೀವಿಯಾಗಿ ಸರ್ವತ್ರ ವಿಜಯ ಸಂಪಾದಿಸಬಹುದು. ಕವಚ ಒಂದು ಮಂಗಲಕರವಾದ ಮಾಲಾ-ಮಂತ್ರ. ಸರ್ವಪಾಪಹರ. ಈ ಕವಚಮಂತ್ರದ ಧ್ವನಿ ಕೇಳಿದರೆ ಭೂತಪ್ರೇತ ಪಿಶಾಚ, ಕೂಷ್ಮಾಂಡ, ಬ್ರಹ್ಮರಾಕ್ಷಸ, ಡಾಕಿನಿ, ಯೋಗಿನಿ, ಯಕ್ಷ, ಬೇತಾಳ, ಭೈರವ, ಬಾಲಗ್ರಹ, ಕ್ಷೇತ್ರಪಾಲಾದಿಗಳು ಭಯದಿಂದ ಓಡುವುವು. ಆದಿವ್ಯಾಧಿ ಶೋಕಭಯಗಳೂ ಗರುಡನನ್ನು ಕಂಡ ಹಾವುಗಳಂತೆ ಅಂಜುವುವು. ಭಕ್ತನೂ ಋಜು ಬುದ್ಧಿಯವನೂ ಆದ ತನ್ನ ಶಿಷ್ಯನಿಗೆ ಮಾತ್ರ ಈ ಕವಚಮಂತ್ರವನ್ನು ಉಪದೇಶಿಸಬೇಕು. ದುಷ್ಟನಾದ ಪರಶಿಷ್ಯನಿಗೆ ಉಪದೇಶಿಸಿದರೆ ಮೃತ್ಯು ಪ್ರಾಪ್ತಿಯಾಗುವುದು.

ಸಂಸಾರ ಮೋಚಕವಾದ ಈ ಗಣೇಶ ಕವಚಕ್ಕೆ ಪ್ರಜಾಪತಿ ಋಷಿ. ಬೃಹತಿಯೆ ಛಂದಸ್ಸು. ಲಂಬೋದರನೆ ದೇವತೆ. ಧರ್ಮಾರ್ಥಕಾಮ ಮೋಕ್ಷಪ್ರಾಪ್ತಿಗಾಗಿ ಇದನ್ನು ಜಪಿಸಬೇಕು.

'ಓಂ ಗಂ ಹುಂ ಶ್ರೀಗಣೇಶಾಯ ಸ್ವಾಹಾ' ಎಂಬ ಮಂತ್ರ ನನ್ನ ಶಿರಸ್ಸನ್ನು ಕಾಪಾಡಲಿ. ಹಿಂದೆ ಹೇಳಿದ ಮೂವತ್ತೆರಡು ಅಕ್ಷರಗಳ ಮಂತ್ರ ಹಣೆಯನ್ನು ಕಾಪಾಡಲಿ.

'ಓಂ ಹ್ರೀಂ ಕ್ಲೀಂ ಶ್ರೀಂ ಗಂ' ಎಂಬ ಮಂತ್ರ ಕಣ್ಣನ್ನು ರಕ್ಷಿಸಲಿ. ತಾಲುವನ್ನು ರಕ್ಷಿಸಲಿ.

'ಓಂ ಹ್ರೀಂ ಶ್ರೀಂ ಕ್ಲೀಂ' ಮೂಗನ್ನು ರಕ್ಷಿಸಲಿ.

'ಓಂ ಗಂ ಗಂ ಶೂರ್ಪಕರ್ಣಾಯ ಸ್ವಾಹಾ' ತುಟಿ ಹಲ್ಲು ನಾಲಿಗೆಗಳನ್ನೂ ಕಾಪಾಡಲಿ.

'ಲಂ ಶ್ರೀಂ ಲಂಬೋದರಾಯ ಸ್ವಾಹಾ' ಕಪೋಲವನ್ನು ರಕ್ಷಿಸಲಿ.

'ಓಂ ಕ್ಲೀಂ ಹ್ರೀಂ ವಿಘ್ನನಾಶಾಯ ಸ್ವಾಹಾ' ಕಿವಿಯನ್ನು ಕಾಪಾಡಲಿ.

'ಶ್ರೀಂ ಗಂ ಗಜಾನನಾಯ ಸ್ವಾಹಾ' ಹೆಗಲನ್ನು ಕಾಪಾಡಲಿ.

'ಓಂ ಹ್ರೀಂ ವಿನಾಯಕಾಯ ಸ್ವಾಹಾ' ಬೆನ್ನನ್ನು ರಕ್ಷಿಸಲಿ.

'ಓಂ ಕ್ಲೀಂ ಹ್ರೀಂ' ಎದೆಯನ್ನು ಕಾಪಾಡಲಿ. ಹಸ್ತಪಾದಾದಿ ಸರ್ವಾಂಗಗಳನ್ನು ರಕ್ಷಿಸಲಿ. ಪೂರ್ವದಲ್ಲಿ ಲಂಬೋದರ, ಆಗ್ನೇಯದಲ್ಲಿ ವಿಘ್ನನಾಯಕ, ದಕ್ಷಿಣದಲ್ಲಿ ವಿಘ್ನೇಶ, ನೈಋತ್ಯದಲ್ಲಿ ಗಜಾನನ, ಪಶ್ಚಿಮದಲ್ಲಿ ಪಾರ್ವತೀ ಪುತ್ರ, ವಾಯವ್ಯದಲ್ಲಿ

**ಶಂಕರಾತ್ಮಜ, ಉತ್ತರದಲ್ಲಿ ಕೃಷ್ಣಾಂಶ, ಈಶಾನ್ಯದಲ್ಲಿ ಏಕದಂತ, ಊರ್ಧ್ವದಲ್ಲಿ ಹೇರಂಬ, ಕೆಳಗೆ ಗಣಾಧಿಪ, ಎಲ್ಲದಿಕ್ಕುಗಳಲ್ಲಿ ಸರ್ವಪೂಜ್ಯ, ಸ್ವಪ್ನ ಜಾಗರಗಳಲ್ಲಿ ಯೋಗಿಗಳಿಗೆ ಗುರುವಾದ ಗಣೇಶ ನನ್ನನ್ನು ರಕ್ಷಿಸಲಿ.**

ಇದು ಬಲು ಅದ್ಭುತವಾದ ಗಣೇಶ ಕವಚ. ಈ ಒಂದು ಕವಚದಲ್ಲಿ ಎಲ್ಲ ಮಂತ್ರ-ಗಳೂ ಗರ್ಭಿತವಾಗಿವೆ. ಸಂಸಾರ ಮೋಚಕವಾದ ಈ ಕವಚವನ್ನು ಹಿಂದೆ ಗೋಲೋಕದಲ್ಲಿ ರಾಸಮಂಡಲದ ವೃಂದಾವನದಲ್ಲಿ ವಿನೀತವಾದ ನನಗೆ ಕೃಷ್ಣ ಉಪದೇಶಿಸಿದ. ಅದನ್ನೆ ನಾನು ನಿನಗೆ ಉಪದೇಶಿಸಿದ್ದೇನೆ. ಇದು ಯಾರಾರಿಗೋ ಹೇಳುವಂಥದ್ದಲ್ಲ. ಗುರುವನ್ನು ಪೂಜಿಸಿ ವಿಧ್ಯುಕ್ತವಾಗಿ ಈ ಕವಚವನ್ನು ಕಂಠದಲ್ಲಿ-ಯಾಗಲಿ ಬಲತೋಳಲ್ಲಾಗಲಿ ಧರಿಸಿದರೆ ವಿಷ್ಣುವಿನಂತಾಗುತ್ತಾನೆ. ಸಾವಿರಾರು ಅಶ್ವಮೇಧಗಳೂ ನೂರಾರು ವಾಜಪೇಯಗಳೂ ಈ ಕವಚದ ಹದಿನಾರನೆ ಒಂದಂಶಕ್ಕೆ ಸಮಾನವಾಗಲಾರವು. ಈ ಕವಚವನ್ನು ತಿಳಿಯದೆ ಗಣೇಶನನ್ನು ಪೂಜಿಸುವವನು ನೂರಾರು ಲಕ್ಷ ಜಪ ಮಾಡಿದರೂ ಯಾವುದೇ ಮಂತ್ರ ಸಿದ್ಧಿಸದು.

ಹೀಗೆ ವಿಷ್ಣು ಶನಿಗೆ ಗಣೇಶ ಕವಚವನ್ನು ಉಪದೇಶಿಸಿದ. ಆಗ ದೇವತೆಗಳು ಪರಮಾನಂದದಿಂದ ಬಳಿಯಲ್ಲಿ ನಿಂತಿದ್ದರು.

**ಇಲ್ಲಿಗೆ ಶ್ರೀ ಬ್ರಹ್ಮವೈವರ್ತ ಮಹಾಪುರಾಣದಲ್ಲಿ ಮೂರನೆಯದಾದ ಗಣಪತಿ ಖಂಡದಲ್ಲಿ ನಾರದನಾರಾಯಣ ಸಂವಾದದಲ್ಲಿ ಗಣೇಶ ಪೂಜಾಸ್ತವ ಕವಚ ಕಥನವೆಂಬ ಹದಿಮೂರನೆಯ ಅಧ್ಯಾಯ ಮುಗಿಯಿತು.**

## ಷಣ್ಮುಖನಾದ ಕಾರ್ತಿಕೇಯನ ಜನ್ಮಕಥನ — ಅಧ್ಯಾಯ-೧೪

ನಾರಾಯಣ— ದೇವತೆಗಳು ಗಂಧರ್ವರು ಮುನಿಗಳು ಪರ್ವತಗಳು ಇವರೆಲ್ಲ-ರಿಂದ ತುಂಬಿದ ಸಭೆಯಲ್ಲಿ ಪಾರ್ವತಿ ವಿಷ್ಣುವನ್ನು ನಮಿಸಿ ಕೇಳಿದಳು—

'ಪ್ರಭು, ನೀನು ಜಗನ್ನಾಥ, ಸರ್ವಲೋಕರಕ್ಷಕ. ನಾನೂ ನಿನ್ನ ರಕ್ಷಣೆಗೊಳ-ಪಟ್ಟಿರುವವಳೆ. ಆದರೂ ನನ್ನ ಪತಿಯ ಅಮೋಘವಾದ ವೀರ್ಯ ದೇವತೆಗಳು ಮಾಡಿದ ರತಿಭಂಗದಿಂದಾಗಿ ನೆಲಕ್ಕೆ ಬಿದ್ದಿತ್ತು. ಅದನ್ನು ಅಪಹರಿಸಿದ ದೇವ ಯಾರು ? ಎಲ್ಲ ದೇವತೆಗಳೂ ನಿನ್ನ ಸಮಕ್ಷಮದಲ್ಲಿ ಹೇಳಲಿ. ನೀನು ಲೋಕಕ್ಕೆ ರಾಜನಾಗಿರುವಾಗ ಇಂಥ ಅರಾಜಕತೆ ಹೇಗೆ ಉಂಟಾಯಿತು' ?

ವಿಷ್ಣು ಈ ಮಾತನ್ನು ಕೇಳಿ ನಕ್ಕು ದೇವತೆಗಳಿಗೂ ಋಷಿಗಳಿಗೂ ಹೀಗೆ ಹೇಳಿದ- 'ದೇವತೆಗಳೆ, ಮುನಿಗಳೆ, ಪಾರ್ವತಿ ಹೇಳಿದ ಮಾತನ್ನು ನೀವು ಕೇಳಿದಿರಿ. ಈಗ ನೀವು ಹೇಳಿ, ಶಿವನ ಅಮೋಘ ವೀರ್ಯವನ್ನು ಯಾರು ಅಪಹರಿಸಿದಿರಿ ? ಬೇಗನೆ ಅದನ್ನು ಈ ಸಭೆಗೆ ತನ್ನಿ. ಇಲ್ಲವಾದರೆ ಶಿಕ್ಷಾರ್ಹರಾಗುವಿರಿ. ನಿಷ್ಪಕ್ಷಪಾತಿಯಾಗಿ ಪ್ರಜೆಗಳನ್ನು ಆಳದವ ಎಂಥ ರಾಜ ?

ವಿಷ್ಣುವಿನ ಈ ಮಾತು ಕೇಳಿ ಭೀತರಾದ ದೇವತೆಗಳೂ ಮುನಿಗಳೂ ಒಬ್ಬೊಬ್ಬರಾಗಿ ಹೇಳತೊಡಗಿದರು—

ಬ್ರಹ್ಮ— ಶಿವವೀರ್ಯವನ್ನು ಅಪಹರಿಸಿದವನು ಪುಣ್ಯದಿನಗಳಲ್ಲಿ ಮಾಡಿದ ಪುಣ್ಯಕರ್ಮಗಳಿಂದ ವಂಚಿತನಾಗಲಿ.

ಮಹಾದೇವ— ವಿಷ್ಣುಪೂಜೆ ವಿಷ್ಣುಸೇವೆಗಳಿಂದ ವಂಚಿತನಾಗಲಿ.

ಯಮ— ಶರಣಾಗತರಕ್ಷಣ ಏಕಾದಶೀ ವ್ರತಗಳಿಂದ ವಂಚಿತನಾಗಲಿ.

ಇಂದ್ರ— ಪುಣ್ಯಕರ್ಮಗಳಿಂದ ಬಂದ ಯಶಸ್ಸಿನಿಂದ ವಂಚಿತನಾಗಲಿ.

ವರುಣ— ಕಲಿಯುಗದಲ್ಲಿ ಭರತಖಂಡದಲ್ಲಿ ಶೂದ್ರನಿಗೆ ಯಾಗ ಮಾಡಿಸುವ ಬ್ರಾಹ್ಮಣನ ಪತ್ನಿಯಲ್ಲಿ ಜನಿಸಲಿ.

ಕುಬೇರ— ನಿಕ್ಷೇಪಹರಣ, ವಿಶ್ವಾಸಘಾತ, ಮಿತ್ರದ್ರೋಹ, ಅಸತ್ಯ, ಕೃತಘ್ನತೆಗಳ ಪಾಪಕ್ಕೆ ಗುರಿಯಾಗಲಿ.

ಈಶಾನ— ಪರದ್ರವ್ಯಾಪಹಾರ, ನರಹತ್ಯೆ, ಗುರುದ್ರೋಹಗಳ ಪಾಪಕ್ಕೆ ಗುರಿಯಾಗಲಿ.

ರುದ್ರರು— ಭರತಖಂಡದಲ್ಲಿ ಸುಳ್ಳಾಡುವುದು, ಪರಸ್ತ್ರೀಸಂಗ, ಗುರುನಿಂದೆಗಳ ಪಾಪಕ್ಕೆ ಗುರಿಯಾಗಲಿ.

ಕಾಮದೇವ— ಕೊಟ್ಟಮಾತಿಗೆ ತಪ್ಪಿದ ಪಾಪಕ್ಕೆ ಗುರಿಯಾಗಲಿ.

ಅಶ್ವಿನೀದೇವತೆಗಳು— ಮಾತಾಪಿತರ, ಗುರುಗಳ, ಹೆಂಡತಿಮಕ್ಕಳ ಪೋಷಣೆಯ ಪುಣ್ಯದಿಂದ ವಂಚಿತನಾಗಲಿ.

ಎಲ್ಲ ದೇವತೆಗಳು— ಸುಳ್ಳುಸಾಕ್ಷಿ ಹೇಳುವವನಾಗಲಿ, ಅಪುತ್ರನೂ ದರಿದ್ರನೂ ಆಗಲಿ.

ದೇವಪತ್ನಿಯರು— ಶಿವನ ವೀರ್ಯವನ್ನು ಅಪಹರಿಸಿದವಳು ಸ್ತ್ರೀಯಾಗಿದ್ದಲ್ಲಿ ಅವಳು ಪತಿನಿಂದಕಳೂ, ಪರಪುರುಷ ಕಾಮಿನಿಯೂ, ಬುದ್ಧಿವಿಹೀನಳೂ ಆಗಲಿ.

ಹೀಗೆ ದೇವ ದೇವಿಯರಾಡಿದ ಮಾತುಕೇಳಿ ಹರಿ ಕರ್ಮಸಾಕ್ಷಿಗಳಾದ ಧರ್ಮ ಸೂರ್ಯ ಚಂದ್ರ ಅಗ್ನಿ ವಾಯು ಪೃಥಿವಿ ಜಲ ಪ್ರಾತಃಸಾಯಂ ಸಂಧ್ಯೆಗಳು ರಾತ್ರಿ ಹಗಲುಗಳನ್ನು ಕರೆದು ಹೇಳಿದ—

'ದೇವತೆಗಳಾರೂ ಅಪಹರಿಸಿಲ್ಲವೆಂದರೆ ಇನ್ನಾರು ಅಪಹರಿಸಿದವರು ? ನೀವೆಲ್ಲ ಸರ್ವಕರ್ಮಸಾಕ್ಷಿಗಳು. ನೀವು ಅಪಹರಿಸಿಲ್ಲವಾದರೆ ಅದು ಏನಾಯಿತು, ಹೇಳಿ,'

ಕರ್ಮಸಾಕ್ಷಿಗಳಾದ ದೇವತೆಗಳು ಭಯದಿಂದ ನಡುಗುತ್ತ ಹೇಳಿದರು—

ಧರ್ಮ— ಅದು ನೆಲಕ್ಕೆ ಬಿದ್ದುದು ನನಗೆ ಗೊತ್ತು.

ಪೃಥಿವಿ— ನನಗೆ ಅದನ್ನು ಧರಿಸಲಾಗಲಿಲ್ಲ. ಅಗ್ನಿಯಲ್ಲಿ ಹಾಕಿಬಿಟ್ಟೆ, ಕ್ಷಮಿಸು.

ಅಗ್ನಿ— ನಾನೂ ಅದನ್ನು ಧರಿಸಲಾಗದೆ ಲಾಳದ ಗುತ್ತಿಯಲ್ಲಿ ಬಿಟ್ಟೆ. ಜಗನ್ನಾಥ, ಅಶಕ್ತನಾದ ನನಗೆ ಎಲ್ಲಿಯ ಪೌರುಷ? ಎಲ್ಲಿಯ ಯಶಸ್ಸು ?

ವಾಯು— ಶ್ರೀಹರಿ, ಸ್ವರ್ಣರೇಖಾನದೀತೀರದ ಆ ಲಾಳದ ಗುತ್ತಿಯಲ್ಲಿ ಅತ್ಯಂತ ಸುಂದರನಾದ ಬಾಲಕನೊಬ್ಬ ಜನಿಸಿದ.

ಸೂರ್ಯ— ಆ ಬಾಲಕ ಅಳುತ್ತಿದ್ದುದನ್ನು ನಾನು ಕಂಡೆ. ಒಡನೆ ಅಸ್ತಾಚಲವನ್ನು ಸೇರಿದೆ. ಕಾಲಚಕ್ರದ ಪ್ರಭಾವದಿಂದಾಗಿ ನಾನು ರಾತ್ರಿಯಲ್ಲಿ ನಿಲ್ಲಲು ಅಸಮರ್ಥ ತಾನೆ ?

ಚಂದ್ರ— ಅಳುತ್ತಿದ್ದ ಆ ಬಾಲಕನನ್ನು ಬದರಿಕಾಶ್ರಮದಿಂದ ಬಂದ ಕೃತ್ತಿಕಾ ಮಾತೆಯರು ನೋಡಿ ಎತ್ತಿಕೊಂಡು ತಮ್ಮ ಮನೆಗೆ ಒಯ್ದರು.

ಜಲ— ಪ್ರಭು, ಎದೆಹಾಲಿಗಾಗಿ ಅಳುತ್ತಿದ್ದ ಆ ಬಾಲಕನಿಗೆ ಅವರು ಎದೆಹಾಲಿತ್ತು ಪೋಷಿಸಿದರು.

ಪ್ರಾತಃ ಸಾಯಂ ಸಂಧ್ಯೆಯರು— ಈಗ ಆ ಬಾಲಕ ಅವರ ಸಾಕುಮಗನಾಗಿದ್ದಾನೆ. ಅವರು ಪ್ರೇಮದಿಂದ ಕಾರ್ತಿಕೇಯ ಎಂದೇ ಹೆಸರಿಟ್ಟಿದ್ದಾರೆ.

ರಾತ್ರಿ— ಅವರು ಬಾಲಕನನ್ನು ಎಂದೂ ಕಣ್ಣಿಂದ ದೂರವಾಗದಂತೆ ನೋಡಿ-ಕೊಳ್ಳುತ್ತಿದ್ದಾರೆ. ಅವರಿಗೆ ಪ್ರಾಣಕ್ಕಿಂತ ಪ್ರಿಯನಾಗಿದ್ದಾನೆ ಆತ.

ಹಗಲು— ಮೂಲೋಕದಲ್ಲಿ ದುರ್ಲಭವಾದ ರುಚಿಕರವಾದ ಭಕ್ಷ್ಯಗಳನ್ನೆ ಅವರು ಬಾಲಕನಿಗೆ ತಿನ್ನಿಸುತ್ತಿದ್ದಾರೆ.

ಹೀಗೆ ಕರ್ಮಸಾಕ್ಷಿಗಳಾದ ದೇವತೆಗಳು ಹೇಳಿದಾಗ ಶ್ರೀಹರಿ ಸಂತುಷ್ಟನಾದ. ಪಾರ್ವತಿಯೂ ಪುತ್ರೋತ್ಸವದ ಆನಂದದಿಂದ ಬ್ರಾಹ್ಮಣರಿಗೆ ಕೋಟಿ ರತ್ನಗಳನ್ನು ದಾನಮಾಡಿದಳು. ಹಾಗೆಯೇ ಲಕ್ಷ್ಮಿ ಸರಸ್ವತಿ ಮೇನೆ ಸಾವಿತ್ರಿ ಮುಂತಾದ ಎಲ್ಲ ದೇವಿಯರೂ ವಿಷ್ಣು ಮುಂತಾದ ದೇವತೆಗಳೂ ಬ್ರಾಹ್ಮಣರಿಗೆ ಧನದಾನಮಾಡಿದರು.

**ಇಲ್ಲಿಗೆ ಶ್ರೀ ಬ್ರಹ್ಮವೈವರ್ತ ಮಹಾಪುರಾಣದಲ್ಲಿ ಮೂರನೆಯದಾದ ಗಣಪತಿಖಂಡದ ನಾರದ ನಾರಾಯಣ ಸಂವಾದದಲ್ಲಿ ಕಾರ್ತಿಕೇಯಜನ್ಮ ಕಥನವೆಂಬ ಹದಿನಾಲ್ಕನೆ ಅಧ್ಯಾಯ ಮುಗಿಯಿತು.**

# ನಂದಿ ಸ್ಕಂದರ ಸಂವಾದ

**ಅಧ್ಯಾಯ-೧೫**

ನಾರಾಯಣ— ಪುತ್ರನ ವಾರ್ತೆಯನ್ನು ಕೇಳಿದ ಶಿವ ವಿಷ್ಣು ಮುಂತಾದ ದೇವತೆಗಳ ಮುನಿಗಳ ಮತ್ತು ಪರ್ವತಗಳ ಸಲಹೆಯಂತೆ ದೂತರನ್ನು ಕಳಿಸಿದ. ವೀರಭದ್ರ, ವಿಶಾಲಾಕ್ಷ, ಶಂಕುಕರ್ಣ, ಕಬಂಧಕ, ನಂದೀಶ್ವರ, ಮಹಾಕಾಲ, ವಜ್ರ-ದಂತ, ಭಗಂಧರ, ಗೋಧಾಮುಖ, ದಧಿಮುಖ ಮುಂತಾದವರ ನಾಯಕತ್ವದಲ್ಲಿ ಲಕ್ಷ ಕ್ಷೇತ್ರಪಾಲರು, ಮೂರುಲಕ್ಷ ಭೂತಗಳು ನಾಲ್ಕುಲಕ್ಷ ಬೇತಾಳಗಳು, ಐದುಲಕ್ಷ ಯಕ್ಷರು ನಾಲ್ಕುಲಕ್ಷ ಕೂಷ್ಮಾಂಡರು, ಮೂರುಲಕ್ಷ ಬ್ರಹ್ಮರಾಕ್ಷಸರು, ನಾಲ್ಕುಲಕ್ಷ ಡಾಕಿನಿಯರು, ಮೂರುಲಕ್ಷ ಯೋಗಿನಿಯರು ಮತ್ತು ವಿಕೃತಾಕಾರದ ರುದ್ರರು ಭೈರವರು ಮುಂತಾದ ಅಸಂಖ್ಯ ಗಣಗಳೂ ಕಾರ್ತಿಕೇಯನನ್ನು ಕರೆತರಲು ಕೃತ್ತಿಕಾ-ದೇವಿಯರ ಮಂದಿರವನ್ನು ಸುತ್ತುವರಿದರು. ದೇವಿಯರು ಭೀತರಾಗಿ ಬಾಲಕನನ್ನೆತ್ತಿ-ಕೊಂಡು ಕೇಳಿದರು—

'ಮಗು, ಇದೇನು, ಅಸಂಖ್ಯ ಸೇನೆಗಳು ನಮ್ಮ ಮನೆಯನ್ನು ಸುತ್ತುವರಿದು ನಿಂತಿವೆ! ಯಾರ ಸೈನ್ಯಗಳು ಇವು ? ನಮಗೊಂದು ತಿಳಿಯದು.'

ಕಾರ್ತಿಕೇಯ— ಮಾತೆಯರೆ, ಭಯಪಡಬೇಡಿ. ನಾನಿರುವಾಗ ನಿಮಗೇತರ ಭಯ ? ಕರ್ಮವಿಪಾಕವನ್ನು ಯಾರುತಾನೆ ತಡೆಯಬಲ್ಲರು ?

ಕಾರ್ತಿಕೇಯ ಹೀಗೆ ದೇವಿಯರನ್ನು ಸಮಾಧಾನಪಡಿಸುತ್ತಿದ್ದಾಗ ಸೇನಾಧಿಪತಿ ನಂದಿಕೇಶ್ವರ ಮುಂದೆ ಬಂದು ಹೇಳಿದ-

'ತಮ್ಮ, ಶಿವ ಪಾರ್ವತಿಯರು ಕಳಿಸಿರುವ ಸಂದೇಶವನ್ನು ನಿನಗೆ ಹೇಳುತ್ತೇನೆ, ಕೇಳು. ಕೈಲಾಸದಲ್ಲಿ ಬ್ರಹ್ಮವಿಷ್ಣು ಮಹೇಶ್ವರಾದಿ ಸಕಲದೇವತೆಗಳು ಗಣೇಶ ಜನ್ಮೋತ್ಸವವನ್ನಾಚರಿಸುತ್ತ ಸಭೆಯಲ್ಲಿ ಕುಳಿತಿದ್ದಾಗ ಪಾರ್ವತಿ ವಿಷ್ಣುವಿನಲ್ಲಿ ನಿನ್ನ ಅನ್ವೇಷಣೆ ಮಾಡಲು ಕೇಳಿಕೊಂಡಳು. ವಿಷ್ಣು ಎಲ್ಲ ದೇವತೆಗಳನ್ನೂ ಕೇಳಿದಾಗ ಅವರು ಎಲ್ಲರೂ ಪ್ರತ್ಯೇಕವಾಗಿ ತಮಗೆ ತಿಳಿದ ಅಂಶಗಳನ್ನು ಹೇಳಿದರು. ಸರ್ವ ಧರ್ಮ ಅಧರ್ವ ಸಾಕ್ಷಿಗಳಾದ ಧರ್ಮ ಮುಂತಾದ ಆ ದೇವತೆಗಳ ಮಾತಿನಿಂದ ನೀನು ಕೃತ್ತಿಕಾದೇವಿಯರ ಬಳಿ ಇರುವ ಅಂಶ ವ್ಯಕ್ತವಾಯಿತು. ನೀನು ಶಿವ-ಪಾರ್ವತಿಯರ ಪುತ್ರ. ಅವರು ಏಕಾಂತದಲ್ಲಿ ವಿಹರಿಸುತ್ತಿದ್ದಾಗ ದೇವತೆಗಳು ವಿಘ್ನ-ಮಾಡಿದರು. ಅದರಿಂದ ಶಿವನ ವೀರ್ಯ ನೆಲಕ್ಕೆ ಬಿದ್ದಿತು. ಅದನ್ನು ಭೂಮಿ ಅಗ್ನಿ-ಯಲ್ಲಿಯೂ ಅಗ್ನಿ ಲಾಳದ ಗುತ್ತಿಯಲ್ಲಿಯೂ ಹಾಕಿದರು. ಆಗ ಜನಿಸಿದವ ನೀನು. ಕೃತ್ತಿಕಾದೇವಿಯರು ನಿನ್ನನ್ನು ಎತ್ತಿಕೊಂಡರು. ಅದರಿಂದ ನೀನು ನಮ್ಮೊಡನೆ ಬರಬೇಕು. ವಿಷ್ಣುವೂ ಎಲ್ಲ ದೇವತೆಗಳೂ ನಿನ್ನನ್ನು ದೇವಸೇನಾಧಿಪತ್ಯದಲ್ಲಿ ಅಭಿಷೇಕ ಮಾಡುವರು. ಬಳಿಕ ತಾರಕಾಸುರನನ್ನು ನೀನು ಸಂಹರಿಸಬೇಕಾಗಿದೆ.

ಷಣ್ಮುಖ, ನೀನು ಪ್ರಪಂಚ ಲಯಕಾರಕನಾದ ಶಿವನ ಪುತ್ರ. ನಿನ್ನನ್ನು ಗೋಪ್ಯವಾಗಿ ತಮ್ಮ ಬಳಿ ಇಟ್ಟುಕೊಳ್ಳಲು ಈ ಕೃತ್ತಿಕಾದೇವಿಯರು ಶಕ್ತರಾಗಲಾರರು. ಒಣಗಿದ ಮರ ತನ್ನ ಪೊಟರೆಯೊಳಗಡೆ ಬೆಂಕಿಯನ್ನು ಮುಚ್ಚಿಟ್ಟುಕೊಳ್ಳಲು ಪ್ರಯತ್ನಿಸಿದಂತಾದೀತು.

ತೇಜಸ್ವಿಯಾದ ನೀನು ಈ ದೇವಿಯರ ಮನೆಯೊಳಗಿರುವುದು ಶೋಭಿಸುವುದೂ ಇಲ್ಲ. ಆಳವಾದ ಬಾವಿಯಲ್ಲಿ ಬಿದ್ದರೆ ಗಜರಾಜ ಶೋಭಿಸುವನೆ ?

ನಿನ್ನ ಶೌರ್ಯ ಪರಾಕ್ರಮಗಳನ್ನು ಮನೆಯೊಳಗೆ ಕಟ್ಟಿಹಾಕಲು ಈ ದೇವಿಯರಿಗೆ ಹೇಗೆ ತಾನೆ ಸಾಧ್ಯ ? ಸೂರ್ಯನ ಪ್ರಕಾಶವನ್ನು ಕೈಯಿಂದ ಮುಚ್ಚಿಡಲು ಸಾಧ್ಯವೆ ?

ವಿಷ್ಣುವೂ ನೀನೂ ಸರ್ವವ್ಯಾಪಕರು. ಸರ್ವವ್ಯಾಪಕವಾದ ಆಕಾಶವನ್ನು ಯಾರಿಗೂ ಹೇಗೆ ಆಚ್ಛಾದಿಸಲು ಶಕ್ಯವಿಲ್ಲವೋ ಹಾಗೇ ನಿನ್ನನ್ನು ತಮ್ಮಲ್ಲಿ ಅಡಗಿಸಿಟ್ಟುಕೊಳ್ಳಲು ಈ ದೇವಿಯರಿಗೂ ಅಶಕ್ಯವೆ.

ವಿಷ್ಣುವೂ ನೀನೂ ಜಗತ್ತಿಗೆ ಆಧಾರರು. ಅಂಥ ನೀನು ಈ ದೇವಿಯರ ಮಡಿಲಲ್ಲಿ ಇರಬಹುದೆ ? ನದಿಗಳಿಗೆ ಆಶ್ರಯನಾದ ಸಾಗರ ನದಿಯಲ್ಲಿರಬಹುದೆ ?

ಸರ್ವೇಶ್ವರನಾದ ನೀನು ಈ ದೇವಿಯರ ಮನೆಯೊಳಿರುವುದೆಂದರೆ ಸಣ್ಣ ಗುಬ್ಬಚ್ಚಿಯ ಉದರದಲ್ಲಿ ಗರುಡನಿರುವಂತಾಗುತ್ತದೆ.

ನಿನ್ನ ಮಹಿಮೆಯನ್ನು ದೇವತೆಗಳೂ ತಿಳಿಯಲಾರರು. ಯೋಗಿಗಳಲ್ಲದವರು ಜ್ಞಾನದ ಮಹತ್ವವನ್ನು ಹೇಗೆ ಅರಿಯರೋ ಹಾಗೆ. ಹರಿಭಕ್ತಿ ರಸದ ಸವಿಯನ್ನು ಭಕ್ತ-ರಲ್ಲದ ಮೂಢರು ಹೇಗೆ ಅರಿಯರೋ ಹಾಗೆ. ತಾವರೆಯ ಸೊಬಗನ್ನು ಬಳಿಯಲ್ಲೆ ಇರುವ ಕಪ್ಪೆ ಹೇಗೆ ಕಾಣದೋ ಹಾಗೆ. ಅದರಿಂದ ನಿನ್ನ ಮಹಿಮೆಯನ್ನು ಈ ಕೃತ್ತಿಕಾದೇವಿಯರು ಏನು ತಿಳಿಯಬಲ್ಲರು ?

ಕಾರ್ತಿಕೇಯ— ಅಣ್ಣ, ನನಗೆ ಎಲ್ಲಗೊತ್ತು. ನಾನು ತ್ರಿಕಾಲಜ್ಞನಿ. ನೀನೂ ಆ ಶಿವನ ಸೇವಕನೆಂದ ಮೇಲೆ ಜ್ಞಾನಿಯೆ ಆಗಿರುವೆ. ನಿನ್ನನ್ನು ಏನೆಂದು ಹೊಗಳಲಿ ? ಆದರೂ ಒಂದು ವಿಚಾರ ಹೇಳುತ್ತೇನೆ, ಕೇಳು. ಕರ್ಮವಶದಿಂದ ನಾನಾಜನ್ಮವೆತ್ತುವ ಸಂಸಾರಿ ಯಾವ ಜನ್ಮದಲ್ಲಿಯೂ ಶುದ್ಧವಾದ ಸುಖ ಹೊಂದುವುದಿಲ್ಲ. ಆದರೂ ಯಾವ ಜನ್ಮವನ್ನೂ ಆತ ಕೀಳೆಂದು ಕಾಣುವುದಿಲ್ಲ. ವಿಷ್ಣುಮಾಯೆಯೆ ಹಾಗೆ. ಅದು ಅವನನ್ನು ಮೋಹದಲ್ಲಿ ಕೆಡವುತ್ತದೆ.

ವಿಷ್ಣುಮಾಯೆಯೆನಿಸಿದ ಜಗನ್ಮಾತೆ ಪ್ರಕೃತಿ ಪಾರ್ವತಿಯಾಗಿ ಜನಿಸಿ ಶಿವನನ್ನು ಮದುವೆಯಾಗಿದ್ದಾಳೆ. ಅವಳೆ ನನಗೆ ಪ್ರತಿಕಲ್ಪದಲ್ಲಿ ತಾಯಿ. ಅವಳ ಅಂಶಭೂತರೆ ಲೋಕದ ಎಲ್ಲಸ್ತ್ರೀಯರೂ ಆಗಿದ್ದಾರೆ. ಕೆಲವರು ಸಾಕ್ಷಾತ್ ಅಂಶಭೂತರು. ಇವರು

ಅಂಶದ ಅಂಶಭೂತರು. ಕೃತ್ತಿಕಾದೇವಿಯರು ಸಾಕ್ಷಾತ್ ಅಂಶಭೂತರು, ಯೋಗಿನಿಯರು, ಸರ್ವಸಿದ್ಧಿ ಸಂಪನ್ನೆಯರು, ಬ್ರಹ್ಮನ ಪುತ್ರಿಯರು, ಮೂಲೋಕದಲ್ಲಿ ಪೂಜ್ಯರು. ಸಾಮಾನ್ಯರಲ್ಲ. ಅವರು ನನಗೆ ಎದೆ ಹಾಲಿತ್ತು ಪೋಷಿಸಿದ ಮಾತೆಯರು. ನಾನು ಅವರಿಗೆ ಪೋಷ್ಯ ಪುತ್ರ. ಶಿವನ ವೀರ್ಯದಿಂದ ಜನಿಸಿದ್ದರಿಂದ ಪ್ರಕೃತಿಗೂ ನಾನು ಪುತ್ರನೆ. ಅವಳ ಗರ್ಭದಲ್ಲಿ ನಾನು ಹುಟ್ಟಲಿಲ್ಲ. ಅದರಿಂದ ಅವಳಿಗೆ ನಾನು ಹೇಗೆ ಧರ್ಮದಿಂದ ಪುತ್ರನೋ ಹಾಗೇ ಕೃತ್ತಿಕಾ ದೇವಿಯರಿಗೂ ಧರ್ಮದಿಂದ ಪುತ್ರನೆ.

ಸ್ತನ್ಯಪಾನ ಮಾಡಿಸಿದವಳು, ಗರ್ಭದಲ್ಲಿ ಧರಿಸಿದವಳು, ಆಹಾರವಿತ್ತು ಪೋಷಿಸಿದವಳು, ಗುರುಪತ್ನಿ ಇಷ್ಟದೇವನ ಪತ್ನಿ, ತಂದೆಯ ಹೆಂಡತಿ, ತಂದೆಯ ಮಗಳು, ಸೋದರನ ಮಗಳು, ಸೋದರಿ, ಮಗನ ಹೆಂಡತಿ, ಹೆಂಡತಿಯ ತಾಯಿ, ತಾಯಿಯ ತಾಯಿ, ತಂದೆಯ ತಾಯಿ, ಸೋದರನ ಹೆಂಡತಿ, ತಾಯಿ ತಂದೆಯರ ಸೋದರಿ, ಸೋದರ ಮಾವನ ಹೆಂಡತಿ ಈ ಹದಿನಾರು ಮಂದಿ ತಾಯಿಯರೆನಿಸುತ್ತಾರೆ. ಇದು ವೇದವಿಹಿತವಾದುದು. ಆದ್ದರಿಂದ ಕೃತ್ತಿಕಾದೇವಿಯರನ್ನು ನನ್ನ ತಾಯಿಯರೆಂದು ನಾನು ಕಾಣುತ್ತೇನೆ. ಆದರೂ ನೀನು ಶಿವನಿಗೆ ಪುತ್ರಸಮಾನ. ವಿಷ್ಣು ನಿನ್ನನ್ನು ಕಳಿಸಿದ್ದಾನೆ. ಅದರಿಂದ ನಾನು ನಿನ್ನ ಜೊತೆಗೆ ಬರುತ್ತೇನೆ, ದೇವತೆಗಳನ್ನು ಕಾಣುತ್ತೇನೆ.

**ಇಲ್ಲಿಗೆ ಶ್ರೀ ಬ್ರಹ್ಮವೈವರ್ತ ಮಹಾಪುರಾಣದಲ್ಲಿ ಮೂರನೆಯದಾದ ಗಣಪತಿಖಂಡದ ನಾರದ ನಾರಾಯಣ ಸಂವಾದದಲ್ಲಿ ನಂದಿಕಾರ್ತಿಕೇಯ ಸಂವಾದವೆಂಬ ಹದಿನೈದನೆ ಅಧ್ಯಾಯ ಮುಗಿಯಿತು.**

## ತಂದೆತಾಯಂದಿರ ಬಳಿಗೆ ಸ್ಕಂದನ ಆಗಮನ — ಅಧ್ಯಾಯ-೧೬

ಷಣ್ಮುಖ ಹೀಗೆ ನಂದಿಗೆ ಹೇಳಿ ಕೃತ್ತಿಕಾದೇವಿಯರಿಗೂ ಹೀಗೆ ಹೇಳಿದ—

''ತಾಯಂದಿರೆ, ನನಗೆ ಅನುಜ್ಞೆ ನೀಡಿ. ನಾನು ಶಿವನ ಬಳಿಗೆ ಹೋಗುತ್ತೇನೆ. ನನ್ನ ತಾಯಿ ಪಾರ್ವತಿಯನ್ನೂ ಬಂಧುವರ್ಗದವರನ್ನೂ ನೋಡುತ್ತೇನೆ. ನನ್ನ ವಿಯೋಗಕ್ಕೆ ನೀವು ಕೊರಗಬೇಡಿರಿ. ಎಲ್ಲವೂ ದೈವಾಧೀನ. ವಿಯೋಗ ಸಮಾಗಮ ಜನ್ಮಕರ್ಮಗಳೆಲ್ಲಕ್ಕೂ ದೈವವೇ ಕಾರಣ. ಆ ದೈವವೂ ಕೃಷ್ಣನಿಗೆ ಅಧೀನ. ಕೃಷ್ಣನನ್ನು ಮೀರಿದುದು ಇನ್ನೊಂದಿಲ್ಲ. ಆದರಿಂದ ಸಜ್ಜನರು ಸದಾ ಕೃಷ್ಣನನ್ನೆ ಭಜಿಸುತ್ತಾರೆ. ದುಃಖಕ್ಕೆ ಕಾರಣವಾದ ಅತಿಯಾದ ಮೋಹವನ್ನು ಬಿಟ್ಟುಬಿಡಿ. ಆ ಕೃಷ್ಣ ಜನನ

ಮರಣಭಯಗಳನ್ನು ಕಳೆಯುತ್ತಾನೆ. ಮೋಕ್ಷ ನೀಡುತ್ತಾನೆ. ಮೋಹದ ಬಲೆಯನ್ನು ಕತ್ತರಿಸಿ ಪರಮಾನಂದ ಉಂಟುಮಾಡುತ್ತಾನೆ. ಅದರಿಂದಲೆ ಬ್ರಹ್ಮ ವಿಷ್ಣು ಶಿವಾದಿಗಳೆಲ್ಲ ಅವನನ್ನೆ ಭಜಿಸುತ್ತಾರೆ.

ಈ ಸಂಸಾರ ಸಮುದ್ರದಲ್ಲಿ ನಿಮಗೆ ನಾನು ಯಾರು ? ನನಗೆ ನೀವಾರು ? ವಿರಹ ಸಮಾಗಮಗಳೆಲ್ಲ ಕೃಷ್ಣನ ಇಚ್ಛೆಯಂತೇ ನಡೆಯುವುವು. ಇಡಿ ಬ್ರಹ್ಮಾಂಡವೆ ಅವನ ಅಧೀನ. ಸ್ವತಂತ್ರವಲ್ಲ. ನೀರಗುಳ್ಳೆಯಂತೆ ಎಲ್ಲವೂ ಅಶಾಶ್ವತ. ಅಶಾಶ್ವತವಾದ ಪ್ರಪಂಚದಲ್ಲಿ ಮಾಯಾಮೋಹಿತರಾದ ಮೂಢರು ಶಾಶ್ವತವೆಂದು ಭ್ರಮಿಸುತ್ತಾರೆ. ಸಜ್ಜನರು ಕೃಷ್ಣನಲ್ಲಿ ಮನಸ್ಸಿಟ್ಟು ವಾಯುವಿನಂತೆ ಪ್ರಪಂಚದಿಂದ ನಿರ್ಲಿಪ್ತರಾಗಿರುತ್ತಾರೆ. ಆದ್ದರಿಂದ ನೀವು ಪುತ್ರಮೋಹವನ್ನು ಬಿಟ್ಟು ನನ್ನನ್ನು ಬೀಳ್ಕೊಡಿರಿ.''

ಷಣ್ಮುಖ ಹೀಗೆ ಕೃತ್ತಿಕಾ ದೇವಿಯರಿಗೆ ಸಮಾಧಾನ ಮಾಡಿ ನಮಿಸಿ ಶಿವಗಣಗಳೊಂದಿಗೆ ಹೊರಟ. ಅವನಿಗಾಗಿ ವಿಶ್ವಕರ್ಮನಿರ್ಮಿತವಾದ ರಮ್ಯವಾದ ಒಂದು ರಥ ಬಂದಿತು. ಶ್ರೇಷ್ಠರತ್ನಗಳಿಂದ ನಿರ್ಮಿತವಾಗಿದ್ದು ಬಹು ವಿಸ್ತೀರ್ಣವಾದ ಆ ರಥಕ್ಕೆ ನೂರು ಚಕ್ರಗಳು. ರತ್ನಕನ್ನಡಿಗಳು, ಬಿಳಿ ಚಾಮರಗಳು, ಪಾರಿಜಾತ ಹೂಗಳ ಮಾಲೆಗಳು, ಕ್ರೀಡಾಗೃಹಗಳು ಇವುಗಳಿಂದ ಶೋಭಿಸುತ್ತಿತ್ತು ಆ ರಥ. ಮನೋವೇಗದಿಂದ ಓಡುತ್ತಿತ್ತು. ಪಾರ್ವತಿ ಕಳಿಸಿದ್ಧ ಆ ರಥವನ್ನು ಕೃಷ್ಣಧ್ಯಾನಪೂರ್ವಕವಾಗಿ ಷಣ್ಮುಖ ಏರುವುದನ್ನು ಕೃತ್ತಿಕಾದೇವಿಯರು ಕಂಡು ಒಂದುಕ್ಷಣ ದಿಙ್ಮೂಢರಾಗಿ ನಿಂತರು. ಒಡನೆ ಎಚ್ಚರಗೊಂಡು ತಲೆಕೂದಲು ಕೆದರಿಕೊಂಡು ಉನ್ಮತ್ತರಂತೆ ಪ್ರಲಾಪ ಮಾಡತೊಡಗಿದರು—

ಮಗು, ನಾವೇನು ಮಾಡಲಿ ? ಎಲ್ಲಿಗೆ ಹೋಗಲಿ ? ನಮಗೆ ನೀನೆ ಗತಿ. ನಮ್ಮನ್ನು ತೊರೆದು ಎಲ್ಲಿಗೆ ಹೋಗುವಿ ? ಇದು ನಿನಗೆ ಧರ್ಮವೆ ? ನಾವು ನಿನ್ನನ್ನು ಪ್ರೀತಿಯಿಂದ ಬೆಳೆಸಿದ್ದೇವೆ. ನೀನು ನಮಗೆ ಧರ್ಮದಿಂದ ಪುತ್ರನಾಗಿರುವಿ. ತಾಯಿಯರಾದ ನಮ್ಮನ್ನು ಹೀಗೆ ಪ್ರೀತಿಯಿಲ್ಲದೆ ಬಿಟ್ಟುಹೋಗುವುದು ಮಗನಾದವನ ಧರ್ಮವಲ್ಲ.'

ಹೀಗೆ ಹೇಳುತ್ತ ಆ ದೇವಿಯರೆಲ್ಲರೂ ಮಗನನ್ನು ತಬ್ಬಿಕೊಂಡು ಪುನಃ ಮೈಮರೆತರು. ಕುಮಾರ ಅವರಿಗೆ ಆಧ್ಯಾತ್ಮದ ಉಪದೇಶದಿಂದ ಸಮಾಧಾನ ಮಾಡಿ ಶಿವಗಣಗಳೊಂದಿಗೆ ರಥವೇರಿದ. ಪ್ರಯಾಣಕಾಲದಲ್ಲಿ ಶುಭಕರವಾದ ಈ ವಸ್ತುಗಳನ್ನು ಕಂಡ—

ಮುಂಭಾಗದಲ್ಲಿ ಜಲ ಪೂರ್ಣಕುಂಭ, ಬ್ರಾಹ್ಮಣ, ವೇಶ್ಯೆ, ಬಿಳಿ ಧಾನ್ಯ, ಕನ್ನಡಿ, ಮೊಸರು, ತುಪ್ಪ, ಜೇನು, ಅರಳು, ಹೂವು, ದೂರ್ವೆ, ಬಿಳಿ ಅಕ್ಷತೆಕಾಳುಗಳು, ಎತ್ತು, ಆನೆ, ಕುದುರೆ, ಉರಿವ ಬೆಂಕಿ, ಚಿನ್ನ, ಮಾಗಿದ ಹಣ್ಣುಗಳು, ಪತಿ ಪುತ್ರವತಿ ನಾರಿ,

ದೊಡ್ಡ ದೀಪ, ರತ್ನ, ಮುತ್ತು, ಹೂವಿನ ಮಾಲೆ, ಹೊಸದಾದ ಮಾಂಸ, ಗಂಧ, ಎಡಭಾಗದಲ್ಲಿ ನರಿ ಮುಂಗುಸಿ ಕಲಶ, ಶವ, ಬಲಭಾಗದಲ್ಲಿ ರಾಜಹಂಸ ನವಿಲು, ಖಂಜರೀಟ, ಗಿಳಿ, ಕೋಗಿಲೆ, ಪಾರಿವಾಳ, ಶಂಖಬಿಲ್ಲ, ಚಕ್ರವಾಕ, ಜಿಂಕೆ, ಗೋವು, ಚಮರೀಮೃಗ, ಧ್ವಜ.

ವಿವಿಧ ವಾದ್ಯಗಳ ಮಂಗಳಧ್ವನಿ, ಸಂಗೀತಧ್ವನಿ, ಘಂಟೆ, ಶಂಖಗಳ ಧ್ವನಿಗಳನ್ನು ಕೇಳಿದ. ವೇಗದಿಂದ ಕ್ಷಣಮಾತ್ರದಲ್ಲಿ ಶಿವನ ಬಳಿಗೆ ಸಾಗಿದ ಷಣ್ಮುಖ. ಇತ್ತ ಪಾರ್ವತಿ ಮಗನನ್ನು ಇದಿರುಗೊಳ್ಳಲು ರಾಜಮಾರ್ಗವನ್ನು ಪದ್ಮರಾಗ ಇಂದ್ರ ನೀಲ ಮಣಿಗಳಿಂದ ಸಿಂಗರಿಸಿ ಬಾಳೆ ಕಂಬಗಳು, ರೇಶಿಮೆ ಬಟ್ಟೆಗಳು ಗಂಧದ ಚಿಗುರಿನ ತೋರಣಗಳು, ಪೂರ್ಣಕುಂಭಗಳು, ರತ್ನದೀಪಗಳು, ನಟನರ್ತಕ ವೇಶ್ಯೆಯರ ಉತ್ಸವಗಳು, ದೂರ್ವೆ ಪುಷ್ಪಗಳನ್ನು ಹಿಡಿದ ಬಂದಿಗಳು, ಬ್ರಾಹ್ಮಣರು, ಪತಿಪುತ್ರ-ವತಿಯರಾದ ನಾರಿಯರು ಇವರಿಂದ ಶೋಭಿಸುವಂತೆ ಮಾಡಿದ್ದಳು.

ಕಾರ್ತಿಕೇಯ ಇಂಥ ಸುಂದರವಾದ ಮಂಗಳಕರವಾದ ರಾಜಮಾರ್ಗದಲ್ಲಿ ಲಕ್ಷ್ಮೀ ಸರಸ್ವತಿ, ದುರ್ಗಾ, ಸಾವಿತ್ರಿ, ತುಲಸಿ, ರತಿ, ಅರುಂಧತಿ, ಅಹಲ್ಯೆ, ದಿತಿ, ತಾರೆ, ಅದಿತಿ, ಶತರೂಪೆ, ಶಚಿ, ಸಂಧ್ಯೆ, ರೋಹಿಣಿ, ಅನಸೂಯೆ, ಸ್ವಾಹೆ, ಸಂಜ್ಞೆ, ವರುಣಾನಿ, ಆಕೂತಿ, ಪ್ರಸೂತಿ, ದೇವಹೂತಿ, ಮೇನಕೆ, ಏಕಪರ್ಣೆ, ವಸುಂಧರೆ, ಮನಸೆ ಇವರನ್ನು ಮುಂದೆ ಮಾಡಿಕೊಂಡು ನಡೆದ. ರಂಭೆ, ತಿಲೋತ್ತಮೆ, ಮೇನಕೆ, ಘೃತಾಚಿ, ಮೋಹಿನಿ, ಊರ್ವಶಿ, ರತ್ನಮಾಲೆ, ಸುಶೀಲೆ, ಲಲಿತೆ, ಕಲೆ, ಕದಂಬಮಾಲೆ, ಸುರಸೆ, ವನಮಾಲೆ ಮುಂತಾದ ಅಪ್ಸರೆಯರು ಸುಂದರವೇಷ ತೊಟ್ಟು ನಸುನಗುತ್ತ ಸಂಗೀತ-ನರ್ತನ ಪೂರ್ವಕ ಕೈಚಪ್ಪಾಳೆ ತಟ್ಟುತ್ತ ಆನಂದದಿಂದ ಕಾರ್ತಿಕೇಯನ ಜೊತೆಗೆ ನಡೆದರು. ದೇವತೆಗಳು ಮುನಿಗಳು ಪರ್ವತಗಳು ಗಂಧರ್ವರು ಕಿನ್ನರರು ಎಲ್ಲರೂ ಜೊತೆಗೆ ನಡೆದರು. ನಾನಾ ಪ್ರಕಾರದ ವಾದ್ಯಗಳನ್ನು ಮೊಳಗಿಸುತ್ತ ಬರುವ ರುದ್ರರು ಭೈರವರು ಕ್ಷೇತ್ರಪಾಲರು ಮುಂತಾದ ಪಾರ್ಷದರೊಡನೆ ಶಿವನೂ ಕುಮಾರನ ಜೊತೆಗೆ ನಡೆದ.

ಕುಮಾರ ಪಾರ್ವತಿಯ ಬಳಿಗೆ ಬೇಗನೆ ಬಂದು ತಲೆಬಾಗಿ ನಮಿಸಿದ. ಲಕ್ಷ್ಮೀ ಸರಸ್ವತೀ ಮುಂತಾದ ದೇವಿಯರಿಗೂ ಮುನಿಪತ್ನಿಯರಿಗೂ ಶಿವನಿಗೂ ಭಕ್ತಿಯಿಂದ ನಮಿಸಿದ. ಎಲ್ಲರನ್ನೂ ಮಾತನಾಡಿಸಿದ. ಪಾರ್ವತಿ ಅವನನ್ನು ಆಲಿಂಗಿಸಿ ಮುದ್ದಿಸಿದಳು. ಶಿವನೂ ಆಲಿಂಗಿಸಿ ಮುದ್ದಿಸಿದ. ಎಲ್ಲಾ ದೇವತೆಗಳೂ ದೇವಿಯರೂ ಪರ್ವತಗಳೂ ಪರ್ವತಸ್ತ್ರೀಯರೂ ಹಾಗೇ ಮಾಡಿದರು. ಎಲ್ಲರೂ ಪ್ರೀತಿಯಿಂದ ಶುಭಾಶೀರ್ವಾದಗಳನ್ನೂ ಮಾಡಿದರು.

ಸಭಾಮಧ್ಯದಲ್ಲಿ ಧರ್ಮ ಬ್ರಹ್ಮ ಇಂದ್ರ ಚಂದ್ರ ಸೂರ್ಯ ಅಗ್ನಿ ವಾಯು ಮುಂತಾದವರಿಂದ ಪರಿವೃತನಾಗಿ ರತ್ನಸಿಂಹಾಸನದಲ್ಲಿ ಕುಳಿತು ದೇವತೆಗಳು

ಋಷಿಗಳು ಮುಂತಾದವರಿಂದ ಸ್ತುತಿಸಲ್ಪಡುತ್ತಿದ್ದ ಶ್ರೀಹರಿಯ ಬಳಿಗೆ ಬಾಲಕ ಷಣ್ಮುಖ ಬಂದು ಭಕ್ತಿಯಿಂದ ತಲೆಬಾಗಿ ರೋಮಾಂಚಗೊಂಡು ಸಾಷ್ಟಾಂಗ ಪ್ರಣಾಮಸಲ್ಲಿಸಿದ. ಬ್ರಹ್ಮ ಧರ್ಮ ಮುಂತಾದ ದೇವತೆಗಳಿಗೂ ಮುನಿಗಳಿಗೂ ನಮಿಸಿ ಸುವರ್ಣಾಸನದಲ್ಲಿ ಮಂಡಿಸಿದ.

ಶಿವಪಾರ್ವತಿಯರು ಬ್ರಾಹ್ಮಣರಿಗೆ ದ್ರವ್ಯದಾನಗಳನ್ನಿತ್ತರು.

**ಇಲ್ಲಿಗೆ ಶ್ರೀ ಬ್ರಹ್ಮವೈವರ್ತ ಮಹಾಪುರಾಣದಲ್ಲಿ ಮೂರನೆಯದಾದ ಗಣಪತಿಖಂಡದ ನಾರದ ನಾರಾಯಣ ಸಂವಾದದಲ್ಲಿ ಕಾರ್ತಿಕೇಯಾಗಮನವೆಂಬ ಹದಿನಾರನೆ ಅಧ್ಯಾಯ ಮುಗಿಯಿತು.**

## ಷಣ್ಮುಖನ ಅಭಿಷೇಕ ಮತ್ತು ಷಣ್ಮುಖ ಗಣಪತಿಯರ ವಿವಾಹ

**ಅಧ್ಯಾಯ-೧೭**

ಬಳಿಕ ವಿಷ್ಣು ಷಣ್ಮುಖನನ್ನು ರತ್ನಸಿಂಹಾಸನದಲ್ಲಿ ಕುಳ್ಳಿರಿಸಿ ಮಂಗಳವಾದ್ಯ ಮತ್ತು ವೇದಮಂತ್ರ ಘೋಷಗಳೊಂದಿಗೆ ರತ್ನಕಲಶಗಳಲ್ಲಿ ತುಂಬಿದ ಸರ್ವತೀರ್ಥ ಜಲದಿಂದ ಅಭಿಷೇಕ ಮಾಡಿಸಿದ. ಅಮೂಲ್ಯ ರತ್ನಗಳಿಂದ ನಿರ್ಮಿತವಾದ ಕಿರೀಟ ಬಾಹುಪುರಿಗಳನ್ನೂ, ಅಗ್ನಿಯಂತೆ ಉಜ್ವಲವಾದ ಎರಡು ವಸ್ತ್ರಗಳನ್ನೂ, ಕೌಸ್ತುಭ ವನಮಾಲೆಗಳನ್ನೂ, ಚಕ್ರವನ್ನೂ ನೀಡಿದ. ಬ್ರಹ್ಮನು ಯಜ್ಞೋಪವೀತ ಕಮಂಡಲುಗಳನ್ನೂ ವೇದ, ವೇದ ಮಾತೆಯಾದ ಗಾಯತ್ರಿ, ಸಂಧ್ಯಾಮಂತ್ರ, ಕೃಷ್ಣಮಂತ್ರಸ್ತೋತ್ರ, ಶತ್ರುಗಳನ್ನು ಮರ್ದಿಸುವ ಬ್ರಹ್ಮಾಸ್ತ್ರವಿದ್ಯೆಗಳನ್ನೂ ನೀಡಿದ.

ಧರ್ಮ ಧರ್ಮಬುದ್ಧಿಯನ್ನೂ ಸರ್ವಭೂತದಯೆಯನ್ನೂ ನೀಡಿದ. ಶಿವಮೃತ್ಯು ಪರಿಹಾರಕವಾದ ಜ್ಞಾನವನ್ನೂ, ಸಕಲಶಾಸ್ತ್ರಗಳಲ್ಲಿ ಅಡಕವಾದ ಮೋಕ್ಷದಾಯಕ ತತ್ವಜ್ಞಾನವನ್ನೂ, ಯೋಗತತ್ವವನ್ನೂ, ಶೂಲಪಿನಾಕ ಪರಶುಶಕ್ತಿ ಪಾಶುಪತ ಧನುಸ್ಸುಗಳನ್ನೂ ನೀಡಿದ. ಅಸ್ತ್ರಪ್ರಯೋಗ ಉಪಸಂಹಾರ ಕ್ರಮಗಳನ್ನೂ ಉಪದೇಶಿಸಿದ. ವರುಣ ಶ್ವೇತಚ್ಛತ್ರ ರತ್ನಮಾಲೆಗಳನಿತ್ತ. ಆನೆ ಕುದುರೆಗಳನ್ನೂ ಅಮೃತಕಲಶವನ್ನೂ ಚಂದ್ರನಿತ್ತ. ಸೂರ್ಯ ಮನೋವೇಗ ಉಳ್ಳರಥವನ್ನಿತ್ತ. ಯಮ ದಂಡವನ್ನೂ ಅಗ್ನಿ ಶಕ್ತಿಯನ್ನೂ ನೀಡಿದರು. ಬೇರೆ ಎಲ್ಲ ದೇವತೆಗಳೂ ಶಸ್ತ್ರಾಸ್ತ್ರಗಳನ್ನಿತ್ತರು. ಮನ್ಮಥ ಕಾಮಶಾಸ್ತ್ರವನ್ನು ಉಪದೇಶಿಸಿದ. ಕ್ಷೀರಸಮುದ್ರ ರತ್ನನೂಪುರ ಮುಂತಾದ ಆಭರಣಗಳನ್ನಿತ್ತ.

ಪಾರ್ವತಿ ಮಗನಿಗೆ ವಿದ್ಯೆ ಶೀಲ ದಯೆ ಸ್ಮೃತಿ ಬುದ್ಧಿ ಶಾಂತಿ ತುಷ್ಟಿ ಪುಷ್ಟಿ ಕ್ಷಮಾ, ಧೃತಿ, ಹರಿಭಕ್ತಿ, ಹರಿದಾಸ್ಯಗಳನ್ನಿತ್ತಳು.

ಬ್ರಹ್ಮ ರತ್ನಭೂಷಣ ಭೂಷಿತಳೂ ವಿನೀತಳೂ ಸುಶೀಲೆಯೂ ಸುಂದರಿಯೂ ಆದ ದೇವಸೇನೆಯನ್ನು ವೇದಮಂತ್ರ ಪೂರ್ವಕವಾಗಿ ಷಣ್ಮುಖನಿಗೆ ವಿವಾಹ-ಮಾಡಿಕೊಟ್ಟ. ಶಿಶು ಸಂರಕ್ಷಕಳಾದ ಮಹಾಷಷ್ಠೀದೇವಿ ಎಂದರೆ ಇವಳೆ.

ಎಲ್ಲ ದೇವತೆಗಳೂ ಮುನಿಗಳೂ ಗಂಧರ್ವರೂ ಕುಮಾರನಿಗೆ ಅಭಿಷೇಕ ಮಾಡಿ ತಮ್ಮ ಲೋಕಗಳಿಗೆ ಹಿಂತಿರುಗಿದರು.

ನಾರಾಯಣ ಬ್ರಹ್ಮ ಧರ್ಮ ಹಿಮಾಲಯರಿಗೆ ಶಿವ ವಿಶೇಷ ಸತ್ಕಾರ ಮಾಡಿದ. ಅವರೂ ತಮ್ಮ ಲೋಕಗಳಿಗೆ ಹಿಂತಿರುಗಿದರು.

ಬಳಿಕ ಒಂದುದಿನ ಶಿವ ಅವರೆಲ್ಲರನ್ನೂ ತನ್ನಲ್ಲಿಗೆ ಕರೆಸಿಕೊಂಡು ಅವರ ಸಮಕ್ಷಮದಲ್ಲಿ ಗಣೇಶನಿಗೆ ಪುಷ್ಟಿದೇವಿಯನ್ನು ವಿವಾಹ ಮಾಡಿಕೊಟ್ಟ. ಇಬ್ಬರು ಮಕ್ಕಳ ಜೊತೆಗೆ ಪಾರ್ವತಿ ಪತಿಯ ಪಾದಕಮಲವನ್ನು ಸೇವಿಸುತ್ತ ಆನಂದಿಸಿದಳು.

ನಾರದ, ಕುಮಾರನ ಅಭಿಷೇಕ ವಿವಾಹ ಪೂಜೆಗಳನ್ನೂ ಗಣೇಶನ ವಿವಾಹ ಮುಂತಾದುವನ್ನೂ ವರ್ಣಿಸಿದ್ದೇನೆ. ಇನ್ನೇನು ಕೇಳ ಬಯಸುವೆ ?

**ಇಲ್ಲಿಗೆ ಶ್ರೀ ಬ್ರಹ್ಮವೈವರ್ತ ಮಹಾಪುರಾಣದಲ್ಲಿ ಮೂರನೆಯದಾದ ಗಣಪತಿಖಂಡದ ನಾರದ ನಾರಾಯಣ ಸಂವಾದದಲ್ಲಿ ಕುಮಾರ ಗಣೇಶ ವಿವಾಹ ಕುಮಾರಾಭಿಷೇಕ ಕಥನವೆಂಬ ಹದಿನೇಳನೆ ಅಧ್ಯಾಯ ಮುಗಿಯಿತು.**

# ವಿಘ್ನೇಶನ ಶಿರಶ್ಛೇದದ ಕಾರಣಕಥನ

## ಅಧ್ಯಾಯ-೧೮

ನಾರದ— ಪ್ರಭು ನಾರಾಯಣ, ದೇವಾಧಿಪತಿಯಾದ ಮಹಾತ್ಮ ಶಿವನ ಪುತ್ರ-ನಾಗಿದ್ದೂ, ಸ್ವತಃ ವಿಘ್ನೇಶ್ವರನಾಗಿದ್ದೂ ಗಣೇಶ ಶಿರಶ್ಛೇದರೂಪವಾದ ವಿಘ್ನವನ್ನು ಹೊಂದಲು ಏನು ಕಾರಣ ? ಗೋಲೋಕಾಧಿಪತಿಯಾದ ಪರಾತ್ಪರ ಶ್ರೀಕೃಷ್ಣ-ಪರಮಾತ್ಮನೆ ಒಂದು ಅಂಶದಿಂದ ಗಣೇಶನಾಗಿ ಜನಿಸಿರುವಾಗ ಅವನಿಗೆ ಒಬ್ಬ ಗ್ರಹನ ದೃಷ್ಟಿಮಾತ್ರದಿಂದ ಶಿರಶ್ಛೇದ ಹೇಗೆ ಉಂಟಾಯಿತು ?

ನಾರಾಯಣ— ವಿಘ್ನೇಶ್ವರನಿಗೆ ವಿಘ್ನ ಬಂದುದಕ್ಕೆ ಕಾರಣವಾಗಿ ಪುರಾತನವಾದ ಒಂದು ಇತಿಹಾಸವಿದೆ, ಕೇಳು. ಒಮ್ಮೆ ಮಾಲಿ ಸುಮಾಲಿ ಎಂಬ ರಾಕ್ಷಸರನ್ನು ಸೂರ್ಯ ಕೊಲ್ಲಲು ತೊಡಗಿದಾಗ ಶಿವ ಸೂರ್ಯನನ್ನು ಶೂಲದಿಂದ ಎದೆಯಲ್ಲಿ ಇರಿದ. ಆಗ ಸೂರ್ಯ ಸತ್ತು ರಥದಿಂದ ಕೆಳಕ್ಕೆ ಬಿದ್ದ. ಅವನ ತಂದೆ ಕಶ್ಯಪ ಮಗನನ್ನೆತ್ತಿ ಆಲಿಂಗಿಸಿ-ಕೊಂಡು ಶೋಕದಿಂದ ವಿಲಾಪ ಮಾಡತೊಡಗಿದ. ಲೋಕವೆಲ್ಲ ಅಂಧಕಾರದಿಂದ ಆವೃತವಾಯಿತು. ದೇವತೆಗಳೂ ಭಯದಿಂದ ಹಾಹಾಕಾರ ಮಾಡಿದರು. ಕಶ್ಯಪ ನಿಷ್ಪ್ರಭನಾಗಿ ಬಿದ್ದಿರುವ ಸೂರ್ಯನನ್ನು ದಿಟ್ಟಿಸುತ್ತ ಶಿವನನ್ನು ಶಪಿಸಿದ-

'ನೀನು ನನ್ನ ಮಗನ ಎದೆಯನ್ನು ಶೂಲದಿಂದ ಇರಿದೆ. ಅದರಿಂದ ನಿನ್ನ ಮಗನ ತಲೆ ಕಡಿದು ಬೀಳಲಿ.'

ಶಿವ ಒಡನೆ ಸೂರ್ಯನನ್ನು ಬದುಕಿಸಿಕೊಟ್ಟ. ಬ್ರಹ್ಮವಿಷ್ಣುಮಹೇಶ್ವರರ ಅಂಶ-ನಾದ ಸೂರ್ಯ ಎದ್ದು ನಿಂದ. ಭಕ್ತಿಯಿಂದ ತಂದೆಗೂ ಶಿವನಿಗೂ ನಮಸ್ಕರಿಸಿದ. ತಂದೆ ನೀಡಿದ ಶಾಪದ ವೃತ್ತಾಂತವನ್ನು ಕೇಳಿ ದುಃಖದಿಂದ ತಾನು ಇನ್ನುಮುಂದೆ ಅಮಂಗಳಕರವಾದ ತುಚ್ಛ ವಿಷಯ ಭೋಗವೆಲ್ಲವನ್ನೂ ತೊರೆದು ಕೃಷ್ಣನ ಕುರಿತು ತಪಸ್ಸು ಮಾಡುವೆನೆಂದು ಎದ್ದುಹೊರಟ. ಆಗ ಬ್ರಹ್ಮ ದೇವತೆಗಳ ಪ್ರಾರ್ಥನೆಯಂತೆ ಸೂರ್ಯನಿಗೆ ಸಮಾಧಾನ ಹೇಳಿ ವಿಷಯಭೋಗದಲ್ಲಿ ಪುನಃ ತೊಡಗಿಸಿದ. ಅವನಿಗೆ ಶಿವ ಬ್ರಹ್ಮರು ಆಶೀರ್ವದಿಸಿ ತಮ್ಮ ಲೋಕಗಳಿಗೆ ಹಿಂತಿರುಗಿದರು.

ಮಾಲಿ ಸುಮಾಲಿಗಳು ಸೂರ್ಯನ ಕೋಪದಿಂದ ವ್ಯಾಧಿಗ್ರಸ್ತರಾದರು. ಅವರ ಶರೀರವಿಡೀ ಕುಷ್ಠದಿಂದ ವ್ಯಾಪ್ತವಾಯಿತು. ಶಕ್ತಿಗುಂದಿತು. ಪ್ರಭೆಯನ್ನು ಕಳೆದು-ಕೊಂಡು, ಮಲಿನವಾಯಿತು. ಬ್ರಹ್ಮ ಅವರಿಗೆ ಬೋಧಿಸಿದ- 'ನೀವು ಸೂರ್ಯನನ್ನು ಆರಾಧಿಸಿರಿ' ಹೀಗೆ ಹೇಳಿ ಅವರಿಗೆ ಸೂರ್ಯನ ಕವಚ ಸ್ತೋತ್ರ ಪೂಜಾವಿಧಿಗಳನ್ನು ತಿಳಿಸಿದ. ಅವರು ಪುಷ್ಕರದಲ್ಲಿ ತ್ರಿಕಾಲಸ್ನಾನಮಾಡಿ ಭಕ್ತಿಯಿಂದ ಸೂರ್ಯ ಮಂತ್ರ ಜಪಿಸಿದರು. ಸೂರ್ಯನಿಂದ ವರ ಪಡೆದು ನಿಜರೂಪ ಹೊಂದಿದರು.

ನಾರದ, ಇನ್ನೇನು ಕೇಳಬಯಸುವೆ, ಹೇಳು.

ಇಲ್ಲಿಗೆ ಶ್ರೀ ಬ್ರಹ್ಮವೈವರ್ತ ಮಹಾಪುರಾಣದಲ್ಲಿ ಮೂರನೆಯದಾದ ಗಣಪತಿಖಂಡದ ನಾರದ ನಾರಾಯಣ ಸಂವಾದದಲ್ಲಿ ವಿಘ್ನೇಶ ವಿಘ್ನಕಥನವೆಂಬ ಹದಿನೆಂಟನೆ ಅಧ್ಯಾಯ ಮುಗಿಯಿತು.

# ಮಾಲಿಸುಮಾಲಿ ದೈತ್ಯರಿಗೆ ಬ್ರಹ್ಮನಿಂದ ಸೂರ್ಯಸ್ತೋತ್ರ, ಕವಚಗಳ ಉಪದೇಶ

ಅಧ್ಯಾಯ-೧೯

ನಾರದ— ಜಗನ್ನಾಥ, ಲೋಕಸಾಕ್ಷಿಯಾದ ಬ್ರಹ್ಮ ಮಾಲಿ ಸುಮಾಲಿ ದಾನವರಿಗೆ ಉಪದೇಶಿಸಿದ ಸೂರ್ಯಸ್ತೋತ್ರ ಕವಚಗಳಾವುವು ? ಪೂಜಾವಿಧಾನವೇನು ? ವ್ಯಾಧಿನಾಶಕವಾದ ಮಂತ್ರ ಯಾವುದು ? ಎಲ್ಲವನ್ನೂ ಹೇಳು.

ನಾರಾಯಣ— ನಾರದ, ಕೇಳು, ಹೇಳುತ್ತೇನೆ. ಮಾಲಿ ಸುಮಾಲಿ ದಾನವರು ವ್ಯಾಧಿಗ್ರಸ್ತರಾಗಿ ತಮಗೆ ಮಂತ್ರೋಪದೇಶಕನಾದ ಬ್ರಹ್ಮನನ್ನು ಧ್ಯಾನಿಸಿದರು. ಬ್ರಹ್ಮ ವೈಕುಂಠಕ್ಕೆ ಹೋಗಿ ಅಲ್ಲಿ ವಿಷ್ಣುವನ್ನೂ ಅವನ ಬಳಿ ಕುಳಿತಿದ್ದ ಶಿವನನ್ನೂ ಕಂಡು ವಿಷ್ಣುವನ್ನು ಕೇಳಿದ.

ಬ್ರಹ್ಮ— ಹರಿ, ಮಾಲಿ ಸುಮಾಲಿ ದೈತ್ಯರು ವ್ಯಾಧಿಗ್ರಸ್ತರಾದರು. ಆ ವ್ಯಾಧಿಯನ್ನು ನಿವಾರಿಸಲು ಏನು ಉಪಾಯ ?

ವಿಷ್ಣು— ಪುಷ್ಕರದಲ್ಲಿ ವ್ಯಾಧಿಪರಿಹಾರಕನಾದ ನನ್ನ ಅಂಶಭೂತನಾದ ಸೂರ್ಯ-ನನ್ನು ಒಂದು ವರ್ಷ ಭಜಿಸಲಿ. ಆಗ ಅವರು ವ್ಯಾಧಿಮುಕ್ತರಾಗುವರು.

ಶಿವ— ಜಗನ್ನಾಥ, ಆ ದೈತ್ಯರಿಗೆ ನೀನೆ ಸೂರ್ಯನ ಸ್ತೋತ್ರ ಕವಚ ಮಂತ್ರ-ಗಳನ್ನು ಬ್ರಹ್ಮನ ಮೂಲಕ ಉಪದೇಶಿಸು. ನಾವಿಬ್ಬರೂ ಸಂಪತ್ತನ್ನು ನೀಡಬಲ್ಲೆವು. ನೀನು ಸರ್ವಾಭೀಷ್ಟದಾಯಕ.

ಈ ಮಾತನ್ನು ಕೇಳಿ ವಿಷ್ಣು ಬ್ರಹ್ಮನಿಗೆ ಸೂರ್ಯಸ್ತೋತ್ರಾದಿಗಳನ್ನು ಕೊಟ್ಟು ಕಳಿಸಿದ. ಬ್ರಹ್ಮ ದೈತ್ಯರ ಬಳಿಗೆ ಹೋದಾಗ ಅವರು ಆಸನ ನೀಡಿ ನಮಿಸಿದರು. ದಯಾನಿಧಿಯಾದ ಬ್ರಹ್ಮ ಆಹಾರವಿಲ್ಲದೆ ಕೀವು ಮುಂತಾದವುಗಳಿಂದ ದುರ್ಗಂಧ-ಯುತರಾಗಿದ್ದ ಆ ದೈತ್ಯರಿಗೆ ಸೂರ್ಯಕವಚ ಸ್ತೋತ್ರಾದಿಗಳನ್ನು ಉಪದೇಶಿಸಿದ.

'ಓಂ ಹ್ರೀಂ ನಮೋ ಭಗವತೇ ಸೂರ್ಯಾಯ ಪರಮಾತ್ಮನೇ ಸ್ವಾಹಾ' ಎಂಬ ಮಂತ್ರದಿಂದ ಸೂರ್ಯನನ್ನು ಷೋಡಶೋಪಚಾರವಿತ್ತು ಪೂಜಿಸುತ್ತ ಪುಷ್ಕರದಲ್ಲಿ ಒಂದು ವರ್ಷ ತಪಸ್ಸು ಮಾಡಲು ಆದೇಶಿಸಿದ.

'ದೈತ್ಯರೆ, ನಿಮಗೆ ಹಿಂದೆ ಇಂದ್ರನಿಗೆ ಬೃಹಸ್ಪತಿ ಉಪದೇಶಿಸಿದ್ದ ಸೂರ್ಯ-ಕವಚವನ್ನು ಹೇಳುತ್ತೇನೆ. ಗೌತಮಮುನಿಯ ಶಾಪದಿಂದ ಇಂದ್ರ ಮೈಯಲ್ಲಿ ಸಾವಿರ ಯೋನಿಯನ್ನು ಹೊಂದಿದಾಗ ಆ ಸಂಕಟದಲ್ಲಿ ಅಹಲ್ಯಾಹರಣದ ಪಾಪನಿವೃತ್ತಿಗಾಗಿ ಈ ಕವಚವನ್ನು ಬೃಹಸ್ಪತಿ ಉಪದೇಶಿಸಿದ್ದ.

ಬೃಹಸ್ಪತಿ— ಇಂದ್ರ, ಕೇಳು, ಪರಮಾದ್ಭುತವಾದ ಸೂರ್ಯಕವಚವನ್ನು ಉಪದೇಶಿಸುತ್ತೇನೆ. ಅದನ್ನು ಧರಿಸಿ ಮುನಿಗಳು ಜೀವನ್ಮುಕ್ತರಾಗುತ್ತಾರೆ. ವ್ಯಾಧಿ ಭಯದಿಂದ ಅವರ ಸಮೀಪಕ್ಕೆ ಸುಳಿಯುವುದಿಲ್ಲ. ಗರುಡನನ್ನು ಕಂಡ ಹಾವಿನಂತೆ ದೂರ ಓಡುತ್ತದೆ. ಇದನ್ನು ಗುರುಭಕ್ತನಾದ ಶಿಷ್ಯನಿಗೆ ಮಾತ್ರ ಉಪದೇಶಿಸಬೇಕು. ಬೇರೆಯವರಿಗೆ ಉಪದೇಶಿದರೆ ಮರಣ ಪ್ರಾಪ್ತವಾಗುವುದು.

ಈ ಕವಚಕ್ಕೆ ಪ್ರಜಾಪತಿ ಋಷಿ. ಗಾಯತ್ರಿ ಛಂದಸ್ಸು. ಸೂರ್ಯ ದೇವತೆ. ವ್ಯಾಧಿಪರಿಹಾರಕ್ಕೆ ಮೈಕಾಂತಿಗಾಗಿ ಈ ಕವಚವನ್ನು ಜಪಿಸಬೇಕು. ಆಗ ಅದು ತಕ್ಷಣ ಸರ್ವಪಾಪಗಳನ್ನು ಪರಿಹರಿಸಿ ರೋಗವನ್ನು ದೂರಮಾಡುವುದು.

'ಓಂ ಕ್ಲೀಂ ಹ್ರೀಂ ಶ್ರೀಂ ಶ್ರೀ ಸೂರ್ಯಾಯ ಸ್ವಾಹಾ' ಎಂಬ ಮಂತ್ರ ನನ್ನ ಶಿರಸ್ಸನ್ನು ಕಾಪಾಡಲಿ. ಹಿಂದೆ ಹೇಳಿದ ಹದಿನೆಂಟು ಅಕ್ಷರಗಳ ಮಂತ್ರ ನನ್ನ ಕಪಾಲವನ್ನು ರಕ್ಷಿಸಲಿ. 'ಓಂ ಹ್ರೀಂ ಹ್ರೀಂ ಶ್ರೀಂ ಶ್ರೀಂ ಸೂರ್ಯಾಯ ಸ್ವಾಹಾ' ನನ್ನ ಮೂಗನ್ನು ರಕ್ಷಿಸಲಿ.

ಸೂರ್ಯ ನನ್ನ ಕಣ್ಣುಗಳನ್ನು, ವಿಕರ್ತನ ಕಣ್ಣುಗಡ್ಡೆಗಳನ್ನು, ಭಾಸ್ಕರ ತುಟಿಯನ್ನು ದಿನಕರ ದಂತಗಳನ್ನು, ಪ್ರಚಂಡ ಕಪೋಲವನ್ನು, ಮಾರ್ತಂಡ ಕಿವಿಗಳನ್ನು ಮಿಹಿರ ಹೆಗಲುಗಳನ್ನು, ಪೂಷ ಮಂಡಿಗಳನ್ನು, ರವಿ ಎದೆಯನ್ನು, ಸೂರ್ಯನಾಭಿಯನ್ನು ಸರ್ವದೇವ ನಮಸ್ಕೃತನು ಅಸ್ಥಿಗಳನ್ನು, ಬ್ರಧ್ನ ಕೈಗಳನ್ನು, ಪ್ರಭಾಕರಪಾದಗಳನ್ನು, ವಿಭಾಕರ ಸರ್ವಾಂಗಗಳನ್ನು ಸದಾ ರಕ್ಷಿಸುತ್ತಿರಲಿ.

ಇದು ಸೂರ್ಯ ಕವಚ. ಜಗದ್ವಿಲಕ್ಷಣವಾದ ದುರ್ಲಭವಾದ ಕವಚವೆಂದು ಪ್ರಸಿದ್ಧ. ಹಿಂದೆ ಪುಲಸ್ತ್ಯಮುನಿ ಮನುವಿಗೆ ಪುಷ್ಕರಕ್ಷೇತ್ರದಲ್ಲಿ ಇದನ್ನು ಉಪದೇಶಿಸಿದ್ದ. ಅದನ್ನೆ ಈಗ ನಿನಗೆ ಹೇಳಿದ್ದೇನೆ. ನೀನು ಯಾರಿಗೂ ಹೇಳಬೇಡ. ಈ ಕವಚದ ಪ್ರಭಾವದಿಂದ ವ್ಯಾಧಿಯಿಂದ ಮುಕ್ತನಾಗುವಿ, ಐಶ್ವರ್ಯಶಾಲಿಯೂ ಆಗುವಿ. ಲಕ್ಷವರ್ಷ ಹವಿಷ್ಯಾನ್ನ ಉಣ್ಣುವುದರ ಫಲ ಈ ಕವಚಧಾರಣದಿಂದಲೆ ಸಿಗುವುದು. ಈ ಕವಚವನ್ನು ತಿಳಿಯದೆ ಮೂಢತನದಿಂದ ಭಾಸ್ಕರನನ್ನು ಪೂಜಿಸಿದರೆ ಫಲವಿಲ್ಲ. ಹತ್ತುಲಕ್ಷ ಜಪದಿಂದಲೂ ಮಂತ್ರ ಸಿದ್ಧಿಸುವುದಿಲ್ಲ.''

ಹೀಗೆ ಬೃಹಸ್ಪತಿ ಇಂದ್ರನಿಗೆ ಉಪದೇಶಿಸಿದ. ದೈತ್ಯರೆ, ನೀವೂ ಈ ಕವಚವನ್ನು ಧರಿಸಿ ಸೂರ್ಯನನ್ನು ಸ್ತುತಿಸಿರಿ. ಆಗ ನಿಶ್ಚಯವಾಗಿ ವ್ಯಾಧಿಯಿಂದ ಮುಕ್ತರಾಗುವಿರಿ.

ಸಾಮವೇದೋಕ್ತವಾದ ಸೂರ್ಯಸ್ತೋತ್ರ ಸರ್ವಪಾಪಹರ, ವ್ಯಾಧಿಯನ್ನು ಕಳೆದು ಧನ ಆರೋಗ್ಯಗಳನ್ನು ಉಂಟುಮಾಡುವುದು. ಆ ಸ್ತೋತ್ರ ಹೀಗಿದೆ—

'ಹೇ ಸೂರ್ಯದೇವ, ನೀನು ಪರಬ್ರಹ್ಮಸ್ವರೂಪ, ಪರಂಜ್ಯೋತಿ ಸ್ವರೂಪ, ಸನಾತನ. ಭಕ್ತರನ್ನು ಅನುಗ್ರಹಿಸುವವ. ಮೂಲೋಕಕ್ಕೆ ಕಣ್ಣಿನಂತಿರುವವ. ಲೋಕ-ದೊಡೆಯ, ಪಾಪ ಪರಿಹಾರಕ, ತಪಸ್ಸುಗಳಿಗೆ ಫಲದಾತ. ಪಾಪಿಗಳಿಗೆ ದುಃಖ-ದಾಯಕ. ಕರ್ಮಾನುರೂಪ ಫಲದಾಯಕ. ಕರ್ಮಬೀಜರೂಪನೂ ಕರ್ಮರೂಪನೂ ನೀನೆ. ಬ್ರಹ್ಮ ವಿಷ್ಣು ಮಹೇಶ್ವರರ ಅಂಶರೂಪ. ತ್ರಿಗುಣಾತ್ಮಕ. ನೀನು ವ್ಯಾಧಿಯನ್ನು ಕೊಡಬಲ್ಲೆ, ವ್ಯಾಧಿಯನ್ನು ಕಳೆಯಲೂ ಬಲ್ಲೆ. ಶೋಕ ಮೋಹ ಭಯಗಳನ್ನು ದೂರ-ಮಾಡಬಲ್ಲೆ. ಭುಕ್ತಿ ಮುಕ್ತಿ ಭಕ್ತಿಗಳನ್ನು ನೀಡಬಲ್ಲೆ. ಎಲ್ಲ ಅಭೀಷ್ಟಗಳನ್ನೂ ಕೊಡಬಲ್ಲೆ. ನೀನು ಸರ್ವೇಶ್ವರ. ಸರ್ವಕರ್ಮಸಾಕ್ಷಿ. ಸರ್ವಲೋಕಕ್ಕೆ ಪ್ರತ್ಯಕ್ಷನೂ ಅಪ್ರತ್ಯಕ್ಷನೂ ಆಗಿರುವಿ. ನೀರನ್ನು ಆವಿಯಾಗಿ ಮಾಡಿ ಸೆಳೆಯುವವನೂ ನೀನೆ. ಮೋಡದಿಂದ ಮಳೆಯಾಗಿ ಕೊಡುವವನೂ ನೀನೆ. ಸಿದ್ಧಿಸ್ವರೂಪ, ಸಿದ್ಧಿದಾಯಕ, ಸಿದ್ಧರೊಡೆಯ, ಸಿದ್ಧರ ಪರಮಗುರುನೀನೆ.

ಈ ಉತ್ತಮವಾದ ಸ್ತೋತ್ರ ಅತ್ಯಂತ ಗೋಪ್ಯ. ಮೂರುಸಂಧ್ಯೆಗಳಲ್ಲಿ ಪಠಿಸಿದರೆ ವ್ಯಾಧಿಯಿಂದ ಬಿಡುಗಡೆ ದೊರೆಯುವುದು. ಕುರುಡು, ಕುಷ್ಠ, ದಾರಿದ್ರ್ಯ ರೋಗ ಶೋಕ, ಭಯ, ಕಲಿಬಾಧೆ, ವ್ರಣ, ಕ್ಷಯ, ಶೂಲ ಮುಂತಾದವು ಪರಿಹಾರ-ವಾಗುವುವು. ಒಂದು ತಿಂಗಳು ಹವಿಷ್ಯಾನ್ನ ಉಣ್ಣುತ್ತ ಈ ಸ್ತೋತ್ರ ಶ್ರವಣ ಮಾಡಿದರೆ ಸಕಲತೀರ್ಥಸ್ನಾನ ಮಾಡಿದ ಪುಣ್ಯ. ಸಕಲರೋಗ ಪರಿಹಾರ.

ದೈತ್ಯರೆ, ನೀವು ಬೇಗನೆ ಪುಷ್ಕರಕ್ಷೇತ್ರಕ್ಕೆ ಹೋಗಿ ಸೂರ್ಯನನ್ನು ಭಜಿಸಿರಿ.

ಹೀಗೆ ಹೇಳಿ ಬ್ರಹ್ಮ ತನ್ನ ಲೋಕಕ್ಕೆ ಹಿಂತಿರುಗಿದ. ಮಾಲಿ ಸುಮಾಲಿಯರು ಸೂರ್ಯನನ್ನು ಸೇವಿಸಿ ರೋಗಮುಕ್ತರಾದರು.

ನಾರದ, ಇನ್ನೇನು ಕೇಳಬಯಸುವೆ ?

**ಇಲ್ಲಿಗೆ ಶ್ರೀ ಬ್ರಹ್ಮವೈವರ್ತ ಮಹಾಪುರಾಣದಲ್ಲಿ ಮೂರನೆಯದಾದ ಗಣಪತಿಖಂಡದ ನಾರದ ನಾರಾಯಣ ಸಂವಾದದಲ್ಲಿ ವಿಘ್ನಕಾರಣಕಥನವೆಂಬ ಹತ್ತೊಂಬತ್ತನೆ ಅಧ್ಯಾಯ ಮುಗಿಯಿತು.**

# ದೇವೇಂದ್ರನೊಡನೆ ರಂಭೆಯ ರತಿಕ್ರೀಡೆ. ಗಣೇಶನಿಗೆ ಐರಾವತದ ಮಸ್ತಕದ ಜೋಡಣೆ

ಅಧ್ಯಾಯ-೨೦

ನಾರದ— ವಿಘ್ನೇಶ್ವರನಿಗೇ ವಿಘ್ನ ಬಂದುದು ಪರಮಾದ್ಭುತ. ಅದನ್ನು ಕೇಳಿ-ದ್ದಾಯಿತು. ಈಗ ನನಗೆ ಒಂದು ಸಂದೇಹ. ಬೇರೆ ಜಂತುಗಳು ನಾನಾ ರೂಪದವು ಸುಂದರವಾದುವು. ಅನೇಕ ಇರುವಾಗ ಆನೆಯ ಮುಖವನ್ನೆ ಗಣೇಶನಿಗೆ ಜೋಡಿ-ಸಲು ಕಾರಣವೇನು ?

ನಾರಾಯಣ— ಆನೆಯ ಮುಖವನ್ನು ಜೋಡಿಸಿದುದರ ರಹಸ್ಯ ಯಾವ ಪುರಾಣದಲ್ಲಿಯೂ ಸಿಗದು, ವೇದಗಳಲ್ಲಿಯೂ ಸಿಗದು. ಆದರೆ ಅದು ಸರ್ವದುಃಖ ಪರಿಹಾರಕ ಸರ್ವಸಂಪದ್ದಾಯಕ. ಪಾಪನಾಶಕ, ಆಪದ್ರಕ್ಷಕ. ಈ ವೃತ್ತಾಂತದೊಂದಿಗೆ ಮಹಾಲಕ್ಷ್ಮಿಯ ಚರಿತ್ರೆಯೂ ಹೆಣೆದುಕೊಂಡಿದೆ. ಅದು ಚತುರ್ವರ್ಗಫಲದಾಯಕ, ಮೋಕ್ಷದಾಯಕ.

ಈ ಇತಿಹಾಸ ಬಹು ಪುರಾತನ. ಪಾದ್ಮಕಲ್ಪದ ರಹಸ್ಯವಿದು. ನಮ್ಮ ತಂದೆ ಇದನ್ನು ಹೇಳಿದ್ದ.

ಒಮ್ಮೆ ಇಂದ್ರ ಪುಷ್ಪಭದ್ರಾ ನದೀತೀರಕ್ಕೆ ಬಂದ. ಮಹಾಸಂಪತ್ತಿನಿಂದ ಮದೋನ್ಮತ್ತನಾಗಿ ಸ್ತ್ರೀಲೋಲನಾಗಿದ್ದ ಆತ ಅಲ್ಲಿ ನಿರ್ಜನವಾದ ಮನೋಹರವಾದ ಒಂದು ಉದ್ಯಾನದಲ್ಲಿ ಸಂಚರಿಸುತ್ತಿದ್ದಾಗ. ದುಂಬಿಯ ಧ್ವನಿ ಕೋಗಿಲೆಯ ಹಾಡು-ಗಳು ಕಿವಿಗೆ ಬೀಳುತ್ತಿದ್ದುವು. ಗಮಗಮಿಸುವ ಹೂಗಳ ಸುವಾಸನೆಯನ್ನು ಹೊತ್ತು ತಂಗಾಳಿ ಬೀಸುತ್ತಿತ್ತು.

ಆಗ ಸುರತಕ್ರೀಡೆಯ ಆಯಾಸ ಪರಿಹಾರಕ್ಕಾಗಿ ಆಗತಾನೆ ಚಂದ್ರಲೋಕದಿಂದ ಬಂದ ರಂಭೆ ಇಂದ್ರನ ಕಣ್ಣಿಗೆ ಗೋಚರಿಸಿದಳು. ಆಕೆ ಪುನಃ ಕಾಮಕೇಳಿ-ಯಾಡುವುದಕ್ಕಾಗಿ ಆತುರದಿಂದ ಮನ್ಮಥನ ಬಳಿಗೆ ಹೊರಟಿದ್ದಳು. ಏಕಾಕಿನಿ-ಯಾಗಿದ್ದಳು. ಅಗ್ನಿಯಂತೆ ಉಜ್ಜ್ವಲವಾಗಿ ಬೆಳಗುವ ಬಟ್ಟೆ ಉಟ್ಟು ರತ್ನಾಭರಣ ತೊಟ್ಟು, ಜಾಜಿಯ ಹೂಮುಡಿದು, ಹಣೆಗೆ ಕುಂಕುಮ ಕಸ್ತೂರಿಯ ಬೊಟ್ಟು ಇಟ್ಟು, ಕಣ್ಣಿಗೆ ಕಪ್ಪಾದ ಕಾಡಿಗೆ ಹಚ್ಚಿಕೊಂಡು, ರಸಿಕರ ಕಣ್ಮನ ಸೆಳೆವ ಅಂದಗಾತಿ ರಂಬೆ, ಗಜಗಮನೆ, ದೇವತೆಗಳಿಗೆಲ್ಲ ಪ್ರಾಣಕ್ಕಿಂತ ಹೆಚ್ಚು. ಸ್ಥಿರಯೌವನ ಗುಣ-ರೂಪಗಳಿಂದ ಮುನಿಗಳ ಎದೆಯನ್ನೂ ಕಲಕುವ ಅಪ್ಸರೆ ಅವಳು. ಅವಳನ್ನು ಕಂಡು ಇಂದ್ರ ಇಂದ್ರಿಯ ಚಾಪಲ್ಯಕ್ಕೊಳಗಾದ. ಅವಳನ್ನು ಮಾತಾಡಿಸಿದ—

'ರಂಭೆ, ಎಲ್ಲಿಗೆ ಹೋಗುತ್ತಿರುವೆ ? ಎಲ್ಲಿಂದ ಬಂದೆ ? ನಿನ್ನನ್ನು ನಾನು ಕಂಡು ಬಹುಕಾಲವಾಯಿತು. ನಿನ್ನನ್ನೆ ಹುಡುಕುತ್ತ ಇಲ್ಲಿಗೆ ಬಂದಿದ್ದೇನೆ. ನೀನು ಈ

ಮಾರ್ಗವಾಗಿ ಬರುತ್ತಿ ಎಂದು ಕೇಳಿ ತಿಳಿದು ನಿನಗಾಗಿಯೆ ಬಂದಿದ್ದೇನೆ. ನನಗೆ ನೀನೇ ಬೇಕು. ಬೇರೆ ಹೆಣ್ಣುಬೇಡ. ಏಲಕ್ಕಿ ಪಚ್ಚಕರ್ಪೂರದಿಂದ ಸುವಾಸಿತವಾದ ನೀರನ್ನು ಬಿಟ್ಟು ಕೊಳಕಾದ ನೀರನ್ನು ಯಾರಾದರೂ ಬಯಸುವರೆ ? ಚಂದನಗಂಧವನ್ನು ಬಿಟ್ಟು ಕೆಸರನ್ನು ಮುಟ್ಟುವರೆ ? ಅಮೃತವನ್ನು ಬಿಟ್ಟು ಹೆಂಡವನ್ನು ಕುಡಿಯುವು-ದುಂಟೆ ? ಹಾಲನ್ನು ತೊರೆದು ಕೊಳಕು ನೀರನ್ನು ಸೇವಿಸುವುದುಂಟೆ ? ಹೂವಿನ ಹಾಸಿಗೆ ಬಿಟ್ಟು ಶರಶಯ್ಯೆಯಲ್ಲಿ ಮಲಗುವುದುಂಟೆ ? ಸ್ವರ್ಗದಲ್ಲಿರುವವನು ನರಕಕ್ಕೆ ಹೋಗಲು ಬಯಸುವನೆ ? ರತ್ನಾಭರಣವನ್ನು ಬಿಸುಟು ಕಬ್ಬಿಣದ ಬಳೆ ತೊಡುವನೆ? ಗಂಗೆಯನ್ನು ಬಿಟ್ಟು ಬೇರೆ ನದಿಯಲ್ಲಿ ಮುಳುಗುವನೆ ?

ಇಂದ್ರ ಹೀಗೆ ಹೇಳಿ ಐರಾವತದಿಂದ ಇಳಿದು ಕಾಮಾಸಕ್ತಿಯಿಂದ ರಂಭೆಯ ಮುಂದೆ ನಿಂತ. ರಂಭೆ ಮಹಾಶೃಂಗಾರ ಲೋಲುಪಳು. ಇಂದ್ರನ ಮಾತು ಕೇಳಿ ಮೈಯೆಲ್ಲ ರೋಮಾಂಚಗೊಂಡಳು. ನಗುಮೊಗದಿಂದ ಕಡೆಗಣ್ಣನೋಟದಿಂದ ಮೈ-ಮಾಟದ ಪ್ರದರ್ಶನದಿಂದ ಇಂದ್ರನ ಆಸೆಯನ್ನು ಇನ್ನಷ್ಟು ಬಡಿದೆಬ್ಬಿಸುತ್ತ ಮಧುರವಾಗಿ ನುಡಿದಳು-

'ನನಗೆ ಎಲ್ಲಿ ಸುಖಸಿಗುತ್ತದೋ ಅಲ್ಲಿಗೆ ನಾನು ಹೋಗುತ್ತೇನೆ. ಅದರಲ್ಲಿ ಪ್ರಶ್ನೆ ಮಾಡಿ ಫಲವಿಲ್ಲ. ದುಂಬಿ ಎಲ್ಲಿ ಮಕರಂದವಿದೆಯೊ ಅಲ್ಲಿಗೆ ಹೋಗುವುದು, ಎಲ್ಲಿ ಹೆಚ್ಚು ಸವಿ ಇದೆಯೋ ಅಲ್ಲಿ ಸ್ಥಿರವಾಗಿ ನಿಲ್ಲುವುದು. ರಸಿಕಳಾದ ಕಾಮಿನಿ ದುಂಬಿಯಂತೆ ಚಂಚಲೆಯಾಗಿದ್ದು, ರಸಿಕನಲ್ಲಿಯೆ ರಸ ಕಂಡುಕೊಳ್ಳುತ್ತಾಳೆ. ಅವಳಿಗೆ ರಸಿಕನಾದ ಪುರುಷ ಮರದ ಕೊಂಬೆಯಂತೆ. ಕಾಗೆ ಹಣ್ಣಿನಾಸೆಯಿಂದ ಕೊಂಬೆಯ ಮೇಲೆ ಕುಳಿತು ಹಣ್ಣು ತೀರಿದ ಬಳಿಕ ಹಾರಿಹೋಗುವಂತೆ ಹೆಣ್ಣು ಗಂಡಿನಲ್ಲಿ ಸುಖ ಉಂಡು ಬಳಿಕ ದೂರ ತೊಲಗುವಳು. ಬೆಂಕಿ ಕಾಷ್ಠದಲ್ಲಿ ಅದನ್ನು ಸುಡುವುದಕ್ಕಾಗಿ ಇರುತ್ತದೆ. ಸುಟ್ಟ ಬಳಿಕ ಇರುವುದಿಲ್ಲ. ಕೊಳದಲ್ಲಿ ನೀರಿದ್ದಷ್ಟು ಕಾಲ ಜಲಜಂತು-ಗಳಿರುತ್ತವೆ. ನೀರು ಬತ್ತಿದರೆ ಅವು ಹೊರಟುಹೋಗುತ್ತವೆ. ಹಾಗೇ ಹೆಣ್ಣು ತನ್ನ ಕಾರ್ಯಸಾಧನೆಯಾಗುವಷ್ಟು ಕಾಲ ಪುರುಷನ ಬಳಿ ಇರುತ್ತಾಳೆ. ಬಳಿಕ ಬೇರೆ ಕಡೆಗೆ ಹೋಗುತ್ತಾಳೆ.

ದೇವೇಂದ್ರ, ನೀನು ದೇವರಾಜ, ಕಾಮಿನಿಯರಿಗೆ ಬೇಕಾದವ. ಸುಂದರ, ಯುವಕ, ಧನಿಕ, ರಸಿಕ. ಇಂಥವನನ್ನೆ ರಸಿಕಳಾದ ಹೆಣ್ಣು ಬಯಸುತ್ತಾಳೆ. ರೋಗಿಯೋ ವೃದ್ಧನೋ ಆಗಿದ್ದು ದುರ್ಬಲನೂ ದರಿದ್ರನೂ ಕಾಮಕಲಾನಭಿಜ್ಞನೂ ಆದ ಪುರುಷನನ್ನು ಸ್ತ್ರೀ ಎಂದೂ ಬಯಸಲಾರಳು. ನಿನ್ನಂಥ ಗುಣಸಾಗರನಾದ ಪುರುಷನನ್ನು ಬೇಡವೆನ್ನುವ ಹೆಣ್ಣು ಮೂಢಳೆ ಸರಿ ಆದರಿಂದ ನಾನು ನಿನ್ನ ದಾಸಿ. ನನ್ನನ್ನು ನೀನು ಯಥೇಚ್ಛವಾಗಿ ಭೋಗಿಸಬಹುದು.'

ಹೀಗೆ ಹೇಳುತ್ತ ರಂಭೆ ಇಂದ್ರನನ್ನು ಕಡೆಗಣ್ಣನೋಟದಿಂದ ಕುಡಿದುಬಿಡುವಂತೆ ನೋಡಿದಳು. ಅವಳ ಮೈಯೆಲ್ಲ ಕಾಮಾಗ್ನಿಯಿಂದ ಜ್ವಲಿಸತೊಡಗಿತು. ಲಜ್ಜೆ ಜಾರಿ-ಹೋಯಿತು. ಇಂದ್ರ ಅವಳ ಮನೋರಥವನ್ನರಿತು ತನ್ನ ಬಳಿಗೆ ಸೆಳೆದುಕೊಂಡ. ಕಾಮಶಾಸ್ತ್ರ ವಿಶಾರದನಾದ್ದರಿಂದ ನಾನಾ ಬಗೆಯ ಶೃಂಗಾರಕ್ರೀಡೆಯಾಡುತ್ತ ಶೃಂಗಾರವೆ ಮೂರ್ತಿವೆತ್ತಂತೆ ಹಗಲು ರಾತ್ರಿ ಎನ್ನದೆ ವಿಹರಿಸಿದ. ಇಬ್ಬರೂ ಪರಸ್ಪರ ಆಸಕ್ತರಾಗಿ ಮೈಮರೆತರು. ಯಥೇಚ್ಛ ಜಲವಿಹಾರ ಉದ್ಯಾನವಿಹಾರಗಳನ್ನು ಮಾಡಿದರು.

ಆಗ ಒಂದುದಿನ ದೂರ್ವಾಸಮುನಿ ಶಿಷ್ಯರೊಂದಿಗೆ ವೈಕುಂಠದಿಂದ ಕೈಲಾಸಕ್ಕೆ ಆ ದಾರಿಯಾಗಿ ಬರುತ್ತಿದ್ದ. ಇಂದ್ರ ಅವನನ್ನು ಕಂಡು ನಮಿಸಿದ. ನಾರಾಯಣ ಕೊಟ್ಟಿದ್ದ ಒಂದು ಪಾರಿಜಾತದ ಹೂವನ್ನು ಮುನಿ ಇಂದ್ರನ ಕೈಗಿಟ್ಟು ಹೇಳಿದ-

'ದೇವೇಂದ್ರ, ಈ ಹೂವು ಸಾಮಾನ್ಯವಲ್ಲ. ಇದು ಯಾರ ತಲೆಯ ಮೇಲೆ ಏರುವುದೊ ಅವನಿಗೆ ಸರ್ವತ್ರಜಯ. ಎಲ್ಲರಿಗಿಂತ ಮೊದಲಿಗೆ ಅವನಿಗೇ ಪೂಜೆ. ಲಕ್ಷ್ಮಿ ನೆರಳಿನಂತೆ ಅವನ ಬಳಿಯೆ ಇರುತ್ತಾಳೆ. ಜ್ಞಾನಬುದ್ಧಿ ತೇಜಸ್ಸು ಪರಾಕ್ರಮ ಬಲಗಳಲ್ಲಿ ಅವನು ಎಲ್ಲ ದೇವತೆಗಳಿಗಿಂತ ಶ್ರೇಷ್ಠನೆನಿಸಿ ಹರಿಗೆ ಸಮಾನನಾಗುತ್ತಾನೆ. ಅಹಂಕಾರದಿಂದ ಯಾರು ತಲೆಯಲ್ಲಿ ಧರಿಸದೆ ಇರುವನೊ ಅವನನ್ನು ಲಕ್ಷ್ಮಿ ಬಿಟ್ಟುತೊಲಗುವಳು.'

ಹೀಗೆ ಹೇಳಿ ದೂರ್ವಾಸಮುನಿ ಕೈಲಾಸಕ್ಕೆ ತೆರಳಿದ. ಇಂದ್ರ ರಂಭೆಯ ಒಡನಾಟ-ದಲ್ಲಿ ಮೈಮರೆತು ಆ ಹೂವನ್ನು ಐರಾವತದ ತಲೆ ಮೇಲಿಟ್ಟ. ಒಡನೆ ಲಕ್ಷ್ಮಿ ಅವನಿಂದ ದೂರವಾದಳು. ಅದನ್ನು ನೋಡಿ ರಂಭೆಯೂ ಬಿಟ್ಟು ಹೋದಳು. ಐರಾವತವೂ ಇಂದ್ರನನ್ನು ತೊರೆದು ಕಾಡನ್ನು ಸೇರಿತು. ಒಂದು ಹೆಣ್ಣಾನೆಯೊಡನೆ ವಿಹರಿಸಿ ಅನೇಕ ಮರಿಗಳನ್ನು ಹುಟ್ಟಿಸಿತು. ಶ್ರೀಹರಿ ಆ ಆನೆಯ ತಲೆಯನ್ನು ಕತ್ತರಿಸಿ ಗಣೇಶನಿಗೆ ಸೇರಿಸಿದ. ಹೀಗೆ ಅವನು ಗಜಮುಖನಾದ. ಈ ಇತಿಹಾಸ ಪಾಪಪರಿಹಾರಕ. ಇನ್ನೇನು ಕೇಳಬಯಸುವೆ ?

**ಇಲ್ಲಿಗೆ ಶ್ರೀ ಬ್ರಹ್ಮವೈವರ್ತ ಮಹಾಪುರಾಣದಲ್ಲಿ ಮೂರನೆಯದಾದ ಗಣಪತಿಖಂಡದ ನಾರದ ನಾರಾಯಣ ಸಂವಾದದಲ್ಲಿ ಗಜಾಸ್ಯಯೋಜನಾಕಥನವೆಂಬ ಇಪ್ಪತ್ತನೆ ಅಧ್ಯಾಯ ಮುಗಿಯಿತು.**

# ನಾರಾಯಣ ಉಪದೇಶಿಸಿದ ಲಕ್ಷ್ಮೀಕವಚ ಸ್ತೋತ್ರದಿಂದ ಇಂದ್ರನಿಗೆ ರಾಜ್ಯಪ್ರಾಪ್ತಿ

ಅಧ್ಯಾಯ-೨೧

ನಾರದ— ದೂರ್ವಾಸನ ಶಾಪದಿಂದ ದೇವತೆಗಳು ಸಂಪತ್ತಿನಿಂದ ಭ್ರಷ್ಟರಾಗಲು ಕಾರಣವೇನು ? ಅವರು ಪುನಃ ಲಕ್ಷ್ಮಿಯನ್ನು ಹೇಗೆ ಪಡೆದರು ? ಶಾಪಗ್ರಸ್ತನಾದ ಇಂದ್ರ ಏನು ಮಾಡಿದ ?

ನಾರಾಯಣ— ದೇವೇಂದ್ರ ಲಕ್ಷ್ಮಿಯಿಂದ ಪರಿತ್ಯಕ್ತನಾದ. ಆನೆಯೂ ದೂರ ಹೋಯಿತು. ರಂಭೆಯೂ ಹೊರಟುಹೋದಳು. ದೈನ್ಯದಿಂದ ಅಮರಾವತಿಗೆ ಬಂದು ನೋಡಿದರೆ ಅದು ಶತ್ರುಗಳ ವಶವಾಗಿತ್ತು. ಬೃಹಸ್ಪತಿಯ ಮನೆಗೆ ಹೋಗಿ ಅವನನ್ನು ಮುಂದುಮಾಡಿಕೊಂಡು ಎಲ್ಲ ದೇವತೆಗಳೊಡನೆ ಬ್ರಹ್ಮಲೋಕಕ್ಕೆ ನಡೆದ ಇಂದ್ರ. ಬ್ರಹ್ಮ ಎಲ್ಲ ಸಮಾಚಾರ ಕೇಳಿ ತಿಳಿದು ಹೇಳಿದ-

'ದೇವೇಂದ್ರ, ಲಕ್ಷ್ಮಿಯಂತಿರುವ ಶಚಿಗೆ ಪತಿಯಾಗಿದ್ದೂ ನೀನು ಅಪ್ಸರೆಯರಲ್ಲಿ ಆಸಕ್ತನಾಗಿರುವಿ. ಒಮ್ಮೆ ಗೌತಮ ಶಾಪದಿಂದ ಮೈಯೆಲ್ಲ ಯೋನಿಯಾಕಾರ ಹೊಂದಿದ್ದರೂ ಲಜ್ಜೆ ಇಲ್ಲದೆ ಪುನಃ ಪರಸ್ತ್ರೀಯರಲ್ಲಿ ಆಸಕ್ತನಾಗಿರುವಿ. ಪರಸ್ತ್ರೀ-ಲೋಲುಪರು ಪಾಪಯುಕ್ತರಾಗಿ ಸಂಪತ್ತನ್ನು ಕಳೆದುಕೊಂಡು ಸಜ್ಜನ ಸಭೆಗಳಲ್ಲಿ ನಿಂದಾರ್ಹರೆನಿಸುತ್ತಾರೆ.

ದೂರ್ವಾಸಮುನಿ ಕೊಟ್ಟ ವಿಷ್ಣುಪ್ರಸಾದವನ್ನು ರಂಭೆಯ ಒಡನಾಟದಲ್ಲಿ ವಿವೇಕಭ್ರಷ್ಟನಾಗಿದ್ದ ನೀನು ಆನೆಯ ತಲೆಯ ಮೇಲಿಟ್ಟೆ. ಈಗ ಆ ರಂಭೆ ಎಲ್ಲಿ ? ನೀನೆಲ್ಲಿ ? ಸರ್ವ ಸೌಖ್ಯವನ್ನು ನೀಡುವ ಲಕ್ಷ್ಮಿ ಕ್ಷಣದಲ್ಲಿ ನಿನ್ನನ್ನು ಬಿಟ್ಟುಹೋದಳು. ವೇಶ್ಯೆಯರು ಎಂದಿಗೂ ಲಕ್ಷ್ಮಿ ಇದ್ದರೆ ಮಾತ್ರ ಜೊತೆಗಿರುವರು. ಲಕ್ಷ್ಮಿ ಇಲ್ಲದಿದ್ದರೆ ಇಲ್ಲ. ಅವರು ಹೊಸಹೊಸ ಶ್ರೀಮಂತ ಪುರುಷರನ್ನೆ ಅರಸುತ್ತ ಹೋಗುವವರು. ಇದ್ದ ಸಂಪತ್ತನ್ನೆಲ್ಲ ಕಳೆದುಕೊಂಡು ದರಿದ್ರನಾದ ನಿನ್ನಂಥವನನ್ನು ಕಣ್ಣೆತ್ತಿಯೂ ನೋಡ-ಲಾರರು. ಆದದ್ದು ಆಗಿಹೋಯಿತು. ಇನ್ನು ನೀನು ಲಕ್ಷ್ಮೀಪ್ರಾಪ್ತಿಗಾಗಿ ನಾರಾಯಣ-ನನ್ನೆ ಭಜಿಸು.'

ಹೀಗೆ ಹೇಳಿ ಬ್ರಹ್ಮ ಇಂದ್ರನಿಗೆ ನಾರಾಯಣನ ಸ್ತೋತ್ರ ಕವಚ ಮಂತ್ರಗಳನ್ನು ಉಪದೇಶವಿತ್ತ. ಇಂದ್ರ ಪುಷ್ಕರದಲ್ಲಿ ಒಂದು ವರ್ಷ ನಿರಾಹಾರನಾಗಿ ನಾರಾಯಣ-ನನ್ನು ಕುರಿತು ತಪಸ್ಸು ಮಾಡಿದ. ನಾರಾಯಣ ಮೈದೋರಿ ಅವನಿಗೆ ಐಶ್ವರ್ಯ-ವರ್ಧಕವಾದ ಲಕ್ಷ್ಮೀಸ್ತೋತ್ರ ಕವಚಮಂತ್ರಗಳನ್ನು ಉಪದೇಶಿಸಿದ. ಇಂದ್ರ ಕ್ಷೀರ-ಸಮುದ್ರದಿಂದ ಲಕ್ಷ್ಮಿಯನ್ನು ಪ್ರಾದುರ್ಭಾವಗೊಳಿಸಿ ಅವಳ ಕಟಾಕ್ಷದಿಂದ ಶತ್ರು-

**ಗಳನ್ನು ಹೊಡೆದೋಡಿಸಿ ಅಮರಾವತಿಯನ್ನು ಪುನಃ ವಶಪಡಿಸಿಕೊಂಡ. ಉಳಿದ ದೇವತೆಗಳೂ ಕೈತಪ್ಪಿಹೋಗಿದ್ದ ತಮ್ಮ ರಾಜ್ಯಗಳನ್ನು ಪುನಃ ಪಡೆದರು.**

**ಇಲ್ಲಿಗೆ ಶ್ರೀ ಬ್ರಹ್ಮವೈವರ್ತ ಮಹಾಪುರಾಣದಲ್ಲಿ ಮೂರನೆಯದಾದ ಗಣಪತಿಖಂಡದ ನಾರದ ನಾರಾಯಣ ಸಂವಾದದಲ್ಲಿ ಶಕ್ರಲಕ್ಷ್ಮೀಪ್ರಾಪ್ತಿ ಎಂಬ ಇಪ್ಪತ್ತೊಂದನೆ ಅಧ್ಯಾಯ ಮುಗಿಯಿತು.**

## ಲಕ್ಷ್ಮೀ ಕವಚಸ್ತೋತ್ರ ಪೂಜಾದಿ ಕಥನ — ಅಧ್ಯಾಯ-೨೨

ನಾರದ— ಶ್ರೀಹರಿ ಇಂದ್ರನಿಗೆ ಉಪದೇಶಿಸಿದ ಲಕ್ಷ್ಮೀಸ್ತೋತ್ರ ಕವಚಗಳಾವುವು? ಹೇಳು.

ನಾರಾಯಣ- ಪುಷ್ಕರದಲ್ಲಿ ತಪಸ್ಸು ಮಾಡುತ್ತಿದ್ದ ಇಂದ್ರನಿಗೆ ವಿಷ್ಣು ಮೈದೋರಿ ಏನು ವರ ಬೇಕೆಂದು ಕೇಳಿದಾಗ ಇಂದ್ರ ಕಳೆದುಹೋದ ತನ್ನ ಸಾಮ್ರಾಜ್ಯಲಕ್ಷ್ಮಿಯನ್ನು ಬೇಡಿದ. ಹಾಗೇ ಆಗಲಿ ಎನ್ನುತ್ತ ವಿಷ್ಣು ಲಕ್ಷ್ಮೀಕವಚವನ್ನು ಇಂದ್ರನಿಗೆ ಉಪದೇಶಿಸಿದ—

ಇಂದ್ರ, ನಾನು ನಿನಗೆ ಸರ್ವದುಃಖ ನಿವಾರಕವಾದ ಪರಮೈಶ್ವರ್ಯ ನೀಡುವ ಶತ್ರುಗಳನ್ನು ಮರ್ದಿಸುವ ಲಕ್ಷ್ಮೀ ಕವಚವನ್ನು ಉಪದೇಶಿಸುತ್ತೇನೆ. ಹಿಂದೆ ಪ್ರಳಯದಲ್ಲಿ ಲೋಕವೆಲ್ಲ ಜಲಮಯವಾಗಿದ್ದಾಗ ಬ್ರಹ್ಮನಿಗೆ ನಾನು ಈ ಕವಚವನ್ನೆ ಉಪದೇಶಿಸಿದ್ದೆ. ಇದರ ಪ್ರಭಾವದಿಂದಲೆ ಬ್ರಹ್ಮ ಸಕಲೈಶ್ವರ್ಯ ಸಂಪನ್ನನಾದ. ಮುಂದೆ ಮನುಗಳೂ ಈ ಕವಚಧಾರಣದಿಂದಲೆ ಸಕಲೈಶ್ವರ್ಯ ಪಡೆದರು.

ಇಂಥ ಸಕಲೈಶ್ವರ್ಯಪ್ರದವಾದ ಲಕ್ಷ್ಮೀಕವಚಕ್ಕೆ ಬ್ರಹ್ಮ ಋಷಿ. ಪಂಕ್ತಿ ಛಂದಸ್ಸು. ದೇವಿ ಲಕ್ಷ್ಮಿ ದೇವತೆ. ಸಿದ್ಧಿ, ಐಶ್ವರ್ಯ, ಸುಖಪ್ರಾಪ್ತಿಗಾಗಿ ಈ ಕವಚವನ್ನು ಜಪಿಸಬೇಕು. ಅದರಿಂದ ಲೋಕದಲ್ಲಿ ಸರ್ವತ್ರ ಜಯ ಲಭಿಸುವುದು.

''ಪದ್ಮೆ ನನ್ನ ಶಿರಸ್ಸನ್ನು ಕಾಪಾಡಲಿ. ಹರಿಪ್ರಿಯೆ ಕಂಠವನ್ನು ರಕ್ಷಿಸಲಿ. ಲಕ್ಷ್ಮಿ ಮೂಗನ್ನು ರಕ್ಷಿಸಲಿ. ಕಮಲೆ ಕಣ್ಣುಗಳನ್ನು ಕಾಪಾಡಲಿ. ಕೇಶಗಳನ್ನು ಕೇಶವಕಾಂತೆ ಕಾಪಾಡಲಿ. ಕಪಾಲವನ್ನು ಕಮಲಾಲಯೆ ಕಾಪಾಡಲಿ. ಜಗತ್ಸೂ ಕಪೋಲಗಳನ್ನು ಕಾಪಾಡಲಿ. ಸಂಪತ್ಪ್ರದೆ ಹೆಗಲನ್ನು ಕಾಪಾಡಲಿ.

'ಓಂ ಶ್ರೀಂ ಕಮಲವಾಸಿನ್ಯೈ ಸ್ವಾಹಾ' ಎಂಬ ಮಂತ್ರ ಬೆನ್ನನ್ನು ಕಾಪಾಡಲಿ.

'ಓಂ ಹ್ರೀಂ ಶ್ರೀ ಪದ್ಮಾಲಯಾಯೈ ಸ್ವಾಹಾ' ಎದೆಯನ್ನು ರಕ್ಷಿಸಲಿ.

ಶ್ರೀದೇವಿ ನನ್ನ ಅಸ್ಥಿಗಳನ್ನೂ ಎರಡು ತೋಳುಗಳನ್ನೂ ಕಾಪಾಡಲಿ.

'ಓಂ ಹ್ರೀಂ ಶ್ರೀಂ ಲಕ್ಷ್ಮ್ಯೈ ಸ್ವಾಹಾ' ಎಲ್ಲ ದಿಕ್ಕುಗಳಲ್ಲಿ ನನ್ನನ್ನು ಕಾಪಾಡಲಿ.

-ಇದು ಸರ್ವೈಶ್ವರ್ಯ ಸರ್ವಸಂಪತ್‌ಪ್ರದವಾದ ಪರಮಾದ್ಭುತವಾದ ಕವಚ. ಗುರುವನ್ನು ಪೂಜಿಸಿ ಈ ಕವಚವನ್ನು ಕಂಠದಲ್ಲಾಗಲಿ ಬಲತೋಳಿನಲ್ಲಾಗಲಿ ಧರಿಸಿ-ದರೆ ಸರ್ವತ್ರ ವಿಜಯ ಲಭಿಸುವುದು. ಮಹಾಲಕ್ಷ್ಮಿ ಜನ್ಮಜನ್ಮಗಳಲ್ಲಿ ಅವನನ್ನು ನೆರಳಿನಂತೆ ಹಿಂಬಾಲಿಸುತ್ತಾಳೆ. ಅವನ ಮನೆ ಬಿಟ್ಟು ಬೇರೆಡೆ ಹೋಗುವುದಿಲ್ಲ. ಈ ಕವಚವನ್ನು ತಿಳಿಯದೆ ಲಕ್ಷ್ಮಿಯನ್ನು ಪೂಜಿಸುವವ ನೂರು ಲಕ್ಷ ಜಪ ಮಾಡಿದರೂ ಮಂತ್ರ ಸಿದ್ಧಿದಾಯಕವಾಗದು.'

ಹೀಗೆ ಜಗನ್ನಾಥ ಇಂದ್ರನಿಗೆ ಲಕ್ಷ್ಮೀ ಕವಚವನ್ನು ಉಪದೇಶಿಸಿ ಜಗತ್ತಿಗೆ ಹಿತಕಾರಿಯಾದ ಲಕ್ಷ್ಮೀ ಷೋಡಶಾಕ್ಷರ ಮಂತ್ರವನ್ನೂ ಉಪದೇಶಿಸಿದ-

'ಓಂ ಹ್ರೀಂ ಶ್ರೀಂ ಕ್ಲೀಂ ನಮೋ ಮಹಾಲಕ್ಷ್ಮ್ಯೈ ಸ್ವಾಹಾ'

ಈ ಮಂತ್ರದ ಧ್ಯಾನ ಸಾಮವೇದೋಕ್ತವಾದುದು, ಗೋಪ್ಯ, ಬಹಳ ದುರ್ಲಭ. ಸಿದ್ಧರಾದ ಶ್ರೇಷ್ಠಮುನಿಗಳಿಗೂ ದುಷ್ಪ್ರಾಪ್ಯ ನಿಶ್ಚಯವಾಗಿ ಸಿದ್ಧಿದಾಯಕ, ಮಂಗಳಕರ.

''ಬಿಳಿ ಸಂಪಿಗೆಯಂಥ ಮೈಬಣ್ಣ, ನೂರುಚಂದ್ರರಿಗೆ ಸಮಾನವಾದ ಕಾಂತಿ, ಅಗ್ನಿಯಂತೆ ಉಜ್ವಲವಾದ ವಸ್ತ್ರ ಉಟ್ಟು ರತ್ನಾಭರಣಗಳನ್ನು ತೊಟ್ಟಿದ್ದಾಳೆ. ಮಂದ-ಹಾಸಯುಕ್ತ ಪ್ರಸನ್ನವದನಳಾಗಿ ಭಕ್ತರಿಗೆ ಅನುಗ್ರಹ ಮಾಡುತ್ತ ಸಹಸ್ರದಳ ಪದ್ಮದಲ್ಲಿ ಕುಳಿತಿದ್ದಾಳೆ. ಇಂಥ ಮನೋಹರ ಶಾಂತರೂಪಿನ ಜಗನ್ಮಾತೆಯಾದ ಶ್ರೀಹರಿಯ ರಾಣಿಯನ್ನು ಭಜಿಸುತ್ತೇನೆ.''

ದೇವೇಂದ್ರ, ಹೀಗೆ ಲಕ್ಷ್ಮಿಯನ್ನು ಧ್ಯಾನಿಸಿ ಭಕ್ತಿಯಿಂದ ಷೋಡಶೋ-ಪಚಾರಗಳನ್ನು ಸಲ್ಲಿಸಿ ಹೀಗೆ ಸ್ತೋತ್ರ ಮಾಡು—

'ದೇವಿ, ನಾನು ನಿನ್ನನ್ನು ಸ್ತುತಿಸಲು ಬಯಸುತ್ತೇನೆ. ಆದರೆ ಸ್ತುತಿಸುವ ಸಾಮರ್ಥ್ಯ ನನ್ನಲಿಲ್ಲ. ನೀನು ಬುದ್ಧಿಗೆ ಅಗೋಚರಳು. ಸೂಕ್ಷ್ಮ ತೇಜೋರೂಪಳು. ಸನಾತನಳು. ಸಕಲಗುಣಪೂರ್ಣಳಾದ ನಿನ್ನನ್ನು ಯಾರು ತಾನೆ ಸ್ತೋತ್ರ ಮಾಡಬಲ್ಲ ? ಪ್ರಾಕೃತ ಶರೀರವಿಲ್ಲದಿದ್ದರೂ ಭಕ್ತರಿಗೆ ಅನುಗ್ರಹಿಸಲು ಸ್ವೇಚ್ಛೆಯಿಂದ ಚಿನ್ಮಯ ಶರೀರವನ್ನು ತೋರುವ, ಮಾತು ಮನಗಳಿಗೆ ನಿಲುಕದಿರುವ ನಿನ್ನನ್ನು ನಾನೇನು ಸ್ತೋತ್ರ ಮಾಡಬಲ್ಲೆ ? ನೀನು ನಾಲ್ಕು ವೇದಗಳಿಗೂ ನಿಲುಕದವಳು. ಸಂಸಾರದಿಂದ ನಮ್ಮನ್ನು ಪಾರು ಮಾಡುವವಳು. ಎಲ್ಲ ಸಸ್ಯಗಳಿಗೆ ನಿಯಾಮಕಳು. ಎಲ್ಲ ಸಂಪತ್ತಿಗೆ ಒಡೆಯಳು.

ಯೋಗಿಗಳ ಯೋಗಗಳಿಗೆ, ಜ್ಞಾನಿಗಳ ಜ್ಞಾನಗಳಿಗೆ, ವೇದವೇತ್ತರ ವೇದಗಳಿಗೆ ನೀನೆ ಜನನಿ. ನಿನ್ನನ್ನು ಏನೆಂದು ವರ್ಣಿಸಲಿ. ನೀನಿಲ್ಲದೆ ಜಗತ್ತು ನಿಷ್ಫಲ. ಸುಖವಿಲ್ಲ. ತಾಯಿಯಿಲ್ಲದ ಎಳೆಗೂಸಿಗೆ ಎಲ್ಲಿಯ ಸುಖ ? ಜಗನ್ಮಾತೆ, ಪ್ರಸನ್ನಳಾಗು, ನಾವು ದುಃಖಿತರಾಗಿದ್ದೇವೆ, ಕಾಪಾಡು. ನಿನ್ನ ಪಾದಾರವಿಂದಗಳನ್ನೆ ನಂಬಿದ್ದೇವೆ. ನೀನು ಶಕ್ತಿಸ್ವರೂಪಳು. ಜ್ಞಾನಬುದ್ಧಿ ಮುಂತಾದುವೆಲ್ಲವನ್ನೂ ನೀಡುವವಳು. ಹರಿಭಕ್ತಿ ಮುಕ್ತಿಗಳನ್ನೂ ನೀಡುವವಳು. ಸರ್ವಜ್ಞಳು, ಸರ್ವದಾಯಕಳು. ಲೋಕದಲ್ಲಿ ಮಕ್ಕಳು ಕೆಟ್ಟವರಾಗುತ್ತಾರೆ. ತಾಯಿ ಎಂದೂ ಕೆಟ್ಟವಳಾಗುವುದಿಲ್ಲ. ಮಗ ಕೆಟ್ಟವನಿದ್ದರೂ ಅವನನ್ನು ತೊರೆದು ತಾಯಿ ದೂರ ಹೋಗುವುದು ಎಲ್ಲಿ ಕಂಡಿದೆ ? ನನ್ನನ್ನು ಎದೆಹಾಲುಣ್ಣುವ ಎಳೆಗೂಸೆಂದು ತಿಳಿದು ನನಗೆ ದರ್ಶನ ನೀಡು. ದಯಾಸಾಗರಳೂ, ಭಕ್ತವತ್ಸಲೆಯೂ ಆದ ದೇವಿಯೆ, ನನ್ನಲ್ಲಿ ದಯೆದೋರು.'

ಹೀಗೆ ಸ್ತೋತ್ರಮಾಡಿ ನಮಿಸು. ಆಗ ದೇವಿಯಿಂದ ವರಪಡೆದು ಸುಖಿಯಾಗುವಿ. ಈ ಸ್ತೋತ್ರ ಮಹಾಪುಣ್ಯಕರ. ಪೂಜಾಕಾಲದಲ್ಲಿ ಪಠಿಸಿದರೆ ಮಹಾಲಕ್ಷ್ಮಿ ಅವನ ಮನೆಯನ್ನು ಎಂದೂ ತೊರೆಯುವುದಿಲ್ಲ.

ಹೀಗೆ ಹೇಳಿ ಹರಿ ಅಂತರ್ಧಾನನಾದ. ದೇವೇಂದ್ರ ಅವನಾಜ್ಞೆಯಂತೆ ದೇವತೆಗಳೊಡನೆ ಕ್ಷೀರಸಮುದ್ರದ ತೀರವನ್ನು ಸೇರಿದ.

**ಇಲ್ಲಿಗೆ ಶ್ರೀ ಬ್ರಹ್ಮವೈವರ್ತ ಮಹಾಪುರಾಣದಲ್ಲಿ ಮೂರನೆಯದಾದ ಗಣಪತಿಖಂಡದ ನಾರದ ನಾರಾಯಣ ಸಂವಾದದಲ್ಲಿ ಲಕ್ಷ್ಮೀಸ್ತವಕವಚ ಪೂಜಾಕಥನವೆಂಬ ಇಪ್ಪತ್ತೆರಡನೆ ಅಧ್ಯಾಯ ಮುಗಿಯಿತು.**

## ಲಕ್ಷ್ಮಿಯು ಹೋಗದಿರುವ ಮನೆಗಳು

## ಅಧ್ಯಾಯ-೨೩

ನಾರಾಯಣ— ಇಂದ್ರ ಬೃಹಸ್ಪತಿಯೊಡನೆ, ಎಲ್ಲ ದೇವತೆಗಳೊಡನೆ ಸಂತೋಷದಿಂದ ಕ್ಷೀರಸಮುದ್ರ ತೀರಕ್ಕೆ ಧಾವಿಸಿದ. ರತ್ನದ ತಾಯಿತದಲ್ಲಿ ಕವಚವನ್ನು ಬರೆದಿಟ್ಟು ಅದನ್ನು ಕಂಠದಲ್ಲಿ ಧರಿಸಿ ದೇವಿಯನ್ನು ಸ್ತುತಿಸಿದ. ಎಲ್ಲ ದೇವತೆಗಳೂ ಭಕ್ತಿಯಿಂದ ತಲೆಬಾಗಿ ಕಣ್ಣಲ್ಲಿ ನೀರು ತುಂಬಿಕೊಂಡು ಸ್ತೋತ್ರ ಮಾಡಿದರು. ದೇವಿ ತಕ್ಷಣ ಆವಿರ್ಭೂತಳಾದಳು. ನೂರುಚಂದ್ರರಿಗೆ ಸಮಾನವಾದ ಕಾಂತಿಯಿಂದ ಪ್ರಪಂಚವನ್ನೆ ಬೆಳಗುತ್ತ ಸಹಸ್ರದಳ ಪದ್ಮದಲ್ಲಿ ಕುಳಿತ ದೇವಿ ದೇವತೆಗಳಿಗೆ ಹೇಳಿದಳು—

'ದೇವತೆಗಳೆ, ನಿಮ್ಮನ್ನು ಬಿಟ್ಟು ನಾನೆಲ್ಲಿಗೂ ಹೋಗಲು ಬಯಸಲಾರೆ. ಆದರೇನು? ನೀವು ಬ್ರಾಹ್ಮಣಶಾಪದಿಂದ ಭ್ರಷ್ಟರಾದಿರಿ. ನಾನು ಬ್ರಾಹ್ಮಣಶಾಪಕ್ಕೆ ಭಯಪಡುತ್ತೇನೆ. ನನಗೆ ಬ್ರಾಹ್ಮಣರೆಂದರೆ ಪ್ರಾಣಕ್ಕೆ ಸಮಾನರು. ಮಕ್ಕಳಿಗಿಂತ ಹೆಚ್ಚು ಪ್ರೀತಿಪಾತ್ರರು. ಅವರು ಏನು ಕೊಟ್ಟರೂ ಸಂತೋಷದಿಂದ ಸ್ವೀಕರಿಸುತ್ತೇನೆ. ಅವರು ನಿಮ್ಮಲ್ಲಿ ತಾವು ಪ್ರೀತರಾದೆವೆಂದು ಹೇಳಲಿ. ಆಗ ನಾನು ನಿಮ್ಮಲ್ಲಿಗೆ ಬರುತ್ತೇನೆ. ಸರ್ವೇಶ್ವರನಾದ ಭಗವಾನ್ ನಾರಾಯಣನೂ ಬ್ರಾಹ್ಮಣಶಾಪಕ್ಕೆ ಅಂಜುತ್ತಾನೆ ಎಂದಮೇಲೆ ನನ್ನ ಪಾಡೇನು'?

ಆಗ ಬ್ರಹ್ಮತೇಜಸ್ಸಿನಿಂದ ಜ್ವಲಿಸುವ ಬ್ರಾಹ್ಮಣರೆಲ್ಲರೂ ಸಂತೋಷದಿಂದ ನಗುತ್ತ ಅಲ್ಲಿಗೆ ಬಂದರು. ಅಂಗಿರಸ, ಪ್ರಚೇತಸ, ಕ್ರತು, ಭೃಗು, ಪುಲಹ, ಪುಲಸ್ತ್ಯ, ಮರೀಚಿ, ಅತ್ರಿ, ಸನಕ, ಸನಂದ, ಸನಾತನ, ಸನತ್ಕುಮಾರ, ಕಪಿಲ, ಆಸುರಿ, ವೋಢು, ಪಂಚಶಿಖ, ದೂರ್ವಾಸ, ಕಶ್ಯಪ, ಅಗಸ್ತ್ಯ, ಗೌತಮ, ಕಣ್ವ, ಔರ್ವ, ಕಾತ್ಯಾಯನ, ಕಣಾದ, ಪಾಣಿನಿ, ಮಾರ್ಕಂಡೇಯ, ಲೋಮಶ, ವಸಿಷ್ಠ ಮುಂತಾದ ಮುನಿ-ಗಳೆಲ್ಲರೂ ಬಂದು ದೇವಿಯನ್ನು ಭಕ್ತಿಯಿಂದ ಧ್ಯಾನಿಸಿ ಸ್ತೋತ್ರಮಾಡಿ 'ದೇವಿ, ಜಗನ್ಮಾತೆಯೆ, ದೇವಲೋಕಕ್ಕೂ ಮರ್ತ್ಯಲೋಕಕ್ಕೂ ಬಂದು ಅನುಗ್ರಹಿಸು' ಎಂದು ಪ್ರಾರ್ಥಿಸಿದರು. ಅವರ ಪ್ರಾರ್ಥನೆಯನ್ನು ಕೇಳಿ ದೇವಿ ಸಂತುಷ್ಟಳಾಗಿ ನುಡಿದಳು.

'ಬ್ರಾಹ್ಮಣರೆ, ನಿಮ್ಮ ಪ್ರಾರ್ಥನೆಯಂತೆ ನಾನು ದೇವ ಮರ್ತ್ಯ ಲೋಕಗಳಲ್ಲಿ ನೆಲೆಸುವೆನು. ಆದರೆ ಯಾರ ಮನೆಯಲ್ಲಿ ನಾನು ವಾಸಮಾಡಲಾರೆ ಎಂಬುದನ್ನು ಹೇಳುತ್ತೇನೆ, ಕೇಳಿ. ಒಳ್ಳೆಯ ನೀತಿಮಾರ್ಗ ತಿಳಿದ ಪುಣ್ಯವಂತರಾದ ಗೃಹಸ್ಥರ ಅಥವಾ ರಾಜರುಗಳ ಮನೆಯಲ್ಲಿ ನಾನು ಸ್ಥಿರವಾಗಿದ್ದು ಅವರನ್ನು ಮಕ್ಕಳಂತೆ ನೋಡಿ-ಕೊಳ್ಳುತ್ತೇನೆ. ಗುರು, ದೇವತೆ, ತಾಯಿ, ತಂದೆ, ಬಂಧುಗಳು, ಅತಿಥಿ, ಪಿತೃಗಳು ಇವರು ಯಾರಲ್ಲಿ ಕುಪಿತರಾಗುವರೋ ಅವರ ಮನೆಗೆ ನಾನು ಹೋಗುವುದಿಲ್ಲ. ಸುಳ್ಳು ಹೇಳುವವ, ವೇದಾಧ್ಯಯನ ಮಾಡದವ, ಸತ್ವಹೀನ, ದುಃಶೀಲ, ಸತ್ಯ-ಹೇಳದವ, ಅಡವಿಟ್ಟ ದ್ರವ್ಯವನ್ನು ಅಪಹರಿಸುವವ, ಸುಳ್ಳುಸಾಕ್ಷಿ ನೀಡುವವ, ವಿಶ್ವಾಸ-ದ್ರೋಹಿ, ಕೃತಘ್ನ ಚಿಂತಾಭಯಗ್ರಸ್ತ ಶತ್ರುಗ್ರಸ್ತ, ಸಾಲಗಾರ, ಲೋಭಿ, ದೀಕ್ಷೆ ಇಲ್ಲದವ, ಶೋಕಾರ್ತ, ಮಂದಬುದ್ಧಿಯವ, ಸ್ತ್ರೀಗೆ ಅಧೀನನಾದವ, ವೇಶ್ಯೆಯ ಪತಿ, ವೇಶ್ಯೆಯ ಪುತ್ರ, ಕಟುನುಡಿಯುವವ, ಕಲಹ ಮಾಡುವವ, ಇವರ ಮನೆಗೆ ನಾನು ಹೋಗಲಾರೆ.

ಯಾವ ಮನೆಯಲ್ಲಿ ವಿಷ್ಣುಪೂಜೆ, ಹರಿನಾಮ ಸಂಕೀರ್ತನೆಗಳು ನಡೆಯುವು-ದಿಲ್ಲವೋ ಅವರ ಮನೆಗಳಿಗೆ ನಾನು ಹೋಗುವುದಿಲ್ಲ. ವಿದ್ಯೆ ಮಾರಿ ಬದುಕುವವ, ಗ್ರಾಮಪುರೋಹಿತ, ವೈದ್ಯ, ಅಡಿಗೆಯವ, ಅರ್ಚಕ, ವಿವಾಹ ಅಥವಾ ಬೇರೆ

ಧರ್ಮಕಾರ್ಯವನ್ನು ತಡೆಯುವವ; ಹಗಲಲ್ಲಿ ಸ್ತ್ರೀಸಂಗ ಮಾಡುವವ, ಇವರ ಮನೆಗೆ ನಾನು ಹೋಗುವುದಿಲ್ಲ.'

ಹೀಗೆ ಹೇಳಿ ಮಹಾಲಕ್ಷ್ಮಿ ಅಂತರ್ಧಾನಗಳಾದಳು. ದೇವತೆಗಳ ಮನುಷ್ಯರ ಮನೆಗಳ ಮೇಲೆ ತನ್ನ ಪ್ರಸನ್ನ ದೃಷ್ಟಿ ಬೀರಿದಳು. ಎಲ್ಲ ದೇವತೆಗಳೂ ಮುನಿಗಳೂ ಸಂತುಷ್ಟರಾದರು. ಸ್ವರ್ಗದಲ್ಲಿ ದುಂದುಭಿಗಳು ಮೊಳಗಿದುವು. ಹೂಮಳೆಯಾಯಿತು. ದೇವತೆಗಳು ಸ್ಥಿರವಾದ ರಾಜ್ಯಪದವಿಗಳನ್ನು ಪಡೆದರು.

ನಾರದ, ಇದು ಸುಖಕರವಾದ ಮೋಕ್ಷದಾಯಕವಾದ ಉತ್ತಮವಾದ ಲಕ್ಷ್ಮೀ ಚರಿತ್ರೆ. ನೀನು ಇನ್ನೇನು ಕೇಳ ಬಯಸುವೆ ?

**ಇಲ್ಲಿಗೆ ಶ್ರೀ ಬ್ರಹ್ಮವೈವರ್ತ ಮಹಾಪುರಾಣದಲ್ಲಿ ಮೂರನೆಯದಾದ ಗಣಪತಿಖಂಡದ ನಾರದ ನಾರಾಯಣ ಸಂವಾದದಲ್ಲಿ ಗಣಪತಿಗೆ ಗಜಾಸ್ಯತ್ವ ಕಾರಣ ಲಕ್ಷ್ಮೀ ಬ್ರಾಹ್ಮಣ ವಿರೋಧಾದಿಲಕ್ಷ್ಮೀಚರಿತ್ರ ಕಥನವೆಂಬ ಇಪ್ಪತ್ತಮೂರನೆ ಅಧ್ಯಾಯ ಮುಗಿಯಿತು.**

## ಜಮದಗ್ನಿ ಕಾರ್ತವೀರ್ಯರಲ್ಲಿ ಕಾಮಧೇನುವಿಗಾಗಿ ಕಲಹ ಪ್ರಾರಂಭ

ನಾರದ— ಸರ್ವಜ್ಞನಾದ ನಾರಾಯಣನೆ, ಮಂಗಳಕರವಾದ ಗಣೇಶನ ಚರಿತೆಯನ್ನು ಕೇಳಿದ್ದಾಯಿತು. ಆದರೆ ವಿಷ್ಣು ಗಣೇಶನಿಗೆ ಜೋಡಿಸಿದುದು ಎರಡು ದಂತಗಳುಳ್ಳ ಆನೆಯ ತಲೆ. ಆದರೂ ಗಣೇಶ ಏಕದಂತನೆನಿಸಿದುದು ಹೇಗೆ ? ಆ ಇನ್ನೊಂದು ದಂತವೆಲ್ಲಿಗೆ ಹೋಯಿತು ? ಹೇಳು.

ನಾರಾಯಣ— ನಾರದ ಅದೊಂದು ಪುರಾತನ ಇತಿಹಾಸ. ಅದನ್ನೂ ಹೇಳುತ್ತೇನೆ, ಕೇಳು. ಒಮ್ಮೆ ಕಾರ್ತವೀರ್ಯಾರ್ಜುನ ಬೇಟೆಗೆ ಹೊರಟ. ಬಹಳ ಮೃಗಗಳನ್ನು ಬೇಟೆಯಾಡಿ ಆಯಾಸಗೊಂಡ. ಸಂಜೆಯಾದ್ದರಿಂದ ರಾಜಧಾನಿಗೆ ಹಿಂತಿರುಗದೆ ಸೈನ್ಯ ಸಮೇತನಾಗಿ ಕಾಡಿನಲ್ಲಿಯೆ ಉಳಿದ. ನಿರಾಹಾರನಾಗಿ ರಾತ್ರಿ- ಯನ್ನು ಕಳೆದು ಬೆಳಿಗ್ಗೆ ಒಂದು ಸರೋವರದಲ್ಲಿ ಮಿಂದು ಶುಚಿಯಾಗಿ ದತ್ತಾತ್ರೇಯ ಉಪದೇಶಿಸಿದ್ದ ಮಂತ್ರವನ್ನು ಭಕ್ತಿಯಿಂದ ಜಪಿಸಿದ.

ರಾಜನು ಉಳಿದುಕೊಂಡಿದ್ದ ಆ ಕಾಡು ಜಮದಗ್ನಿಯ ಆಶ್ರಮದ ಸಮೀಪದ ಪ್ರದೇಶವಾಗಿತ್ತು. ರಾಜ ಮಿಂದು ಆಹ್ನಿಕಗಳನ್ನು ಮಾಡುತ್ತಿದ್ದಾಗ ದೂರದಿಂದ ಮುನಿ

ಎಲ್ಲವನ್ನೂ ಗಮನಿಸಿದ. ಸಮೀಪಕ್ಕೆ ಬಂದು, ರಾಜ ಹಸಿದು ಬಾಯಾರಿರುವುದನ್ನು ತಿಳಿದು, ಪ್ರೀತ್ಯಾದರಗಳಿಂದ ಮೃದುವಾಗಿ ಕುಶಲಪ್ರಶ್ನೆ ಮಾಡತೊಡಗಿದ. ರಾಜ ಸಂಭ್ರಮದಿಂದೆದ್ದು ನಮಸ್ಕರಿಸಿದ. ಮುನಿ ಪ್ರೀತಿಯಿಂದ ಆಶೀರ್ವದಿಸಿದ.

ರಾಜನು ತಮ್ಮ ವೃತ್ತಾಂತವನ್ನೂ ತಾನೂ ತನ್ನ ಪರಿವಾರವೂ ನಿರಾಹಾರಿಯಾಗಿರುವುದನ್ನೂ ಮುನಿಗೆ ನಿವೇದಿಸಿದ. ಮುನಿ ರಾಜನನ್ನು ಆದರದಿಂದ ತನ್ನ ಆಶ್ರಮಕ್ಕೆ ಆಮಂತ್ರಿಸಿದ. ಆದರೆ ಮರುಕ್ಷಣ ಭಯಪಟ್ಟು ಕಾಮಧೇನುವಿನ ಬಳಿಗೆ ಹೋದ. ಕಾಮಧೇನು ಹೇಳಿದಳು, 'ಮುನಿಯೆ, ನಾನಿರುವಾಗ ನಿನಗೇತರ ಭಯ ? ನನ್ನೊಬ್ಬಳ ಸಹಾಯದಿಂದ ನೀನು ಜಗತ್ತಿಗೇ ಅನ್ನ ನೀಡಬಲ್ಲೆ. ಈ ರಾಜನೆಷ್ಟವನು ? ರಾಜನ ಭೋಜನಕ್ಕೆ ಬೇಕಾಗುವ ಅನ್ನ ಭಕ್ಷ್ಯಗಳನ್ನು ಏನು ಬೇಕಾದರೂ ಕೇಳು, ಮೂಲೋಕದಲ್ಲಿ ದುರ್ಲಭವೆನಿಸಿದ್ದರೂ ಸರಿಯೆ, ಅದನ್ನು ನಾನು ನಿನಗೆ ಒದಗಿಸಿಕೊಡುತ್ತೇನೆ. ಚಿನ್ನ ಬೆಳ್ಳಿಗಳ ಭೋಜನ ಪಾತ್ರೆಗಳು ಬೇಕೆ ? ರತ್ನಮಯವಾದ ಪಾನಪಾತ್ರಗಳು ಬೇಕೆ ? ರುಚಿಕರವಾದ ಪಕ್ವಫಲಗಳು ಬೇಕೆ ? ಎಲ್ಲವನ್ನೂ ಕೊಡುತ್ತೇನೆ' ಎಂದು ಹೇಳುತ್ತ ಕಾಮಧೇನು ಎಲ್ಲವನ್ನೂ ಕೊಟ್ಟಳು. ಹಲಸು, ಮಾವು, ಬೇಲ, ತೆಂಗಿನಕಾಯಿ ಮುಂತಾದ ಫಲಗಳು, ಲಡ್ಡುಗಳು, ಗೋದಿಹಿಟ್ಟಿನ ಭಕ್ಷ್ಯಗಳು, ಪಕ್ವಾನ್ನ ಪರಮಾನ್ನಗಳು, ಹಾಲು, ಮೊಸರು, ತುಪ್ಪಗಳು, ಮೋದಕಗಳು ಎಲ್ಲವೂ ಯಥೇಚ್ಛವಾಗಿ ಸೃಷ್ಟಿಗೊಂಡುವು. ಕರ್ಪೂರಾದಿಗಳಿಂದ ಗಮಗಮಿಸುವ ತಾಂಬೂಲ, ರಾಜಯೋಗ್ಯವಾದ ಸುಂದರ ವಸ್ತ್ರಾಭರಣಗಳು ಎಲ್ಲವೂ ಮೈದೋರಿದುವು. ಮುನಿ ಅನಾಯಾಸದಿಂದ ರಾಜನನ್ನೂ ಅವನ ಸೈನ್ಯವನ್ನು ಅನ್ನದಾನಾದಿಗಳಿಂದ ಉಪಚರಿಸಿ ತೃಪ್ತಿ ಪಡಿಸಿದ. ರಾಜನಿಗೆ ಪರಮಾಶ್ಚರ್ಯ. ಆತ ಮಂತ್ರಿಯನ್ನು ಕೇಳಿದ—

'ಮಂತ್ರಿಯೆ, ಮುನಿ ನಮಗೆ ನೀಡಿದ ಅನ್ನವಸ್ತ್ರಾದಿಗಳು ನಾವೆಂದೂ ಕಂಡು ಕೇಳರಿಯದವುಗಳು. ಅತ್ಯಂತ ದುರ್ಲಭವಾದವುಗಳು. ರಾಜನಾದ ನನಗೇ ಇವನ್ನು ಪಡೆಯುವುದು ಅಸಾಧ್ಯವಾಗಿರುವಾಗ ಮುನಿಗೆ ಅನಾಯಾಸವಾಗಿ ಅವು ಹೇಗೆ ದೊರಕಿದುವು ? ಇದನ್ನು ನೋಡಿ ತಿಳಿದು ಬಾ.'

ರಾಜಾಜ್ಞೆಯಂತೆ ಮಂತ್ರಿ ಮುನಿಯ ಆಶ್ರಮವನ್ನೆಲ್ಲ ಸೂಕ್ಷ್ಮವಾಗಿ ಅವಲೋಕಿಸಿ ತಾನು ಕಂಡ ಒಂದು ಅದ್ಭುತವನ್ನು ಹೇಳತೊಡಗಿದ—

'ರಾಜನೆ, ನಾನು ಮುನಿಯ ಆಶ್ರಮವನ್ನು ಪೂರ್ಣವಾಗಿ ಅವಲೋಕಿಸಿದೆ. ಅಗ್ನಿಕುಂಡ, ಯಜ್ಞಕಾಷ್ಠ, ಕುಶ, ಪುಷ್ಪಫಲಗಳನ್ನು ಕಂಡೆ. ಕೃಷ್ಣಾಜಿನ ಸ್ರುಕ್‌ಸ್ರುವಗಳನ್ನು ಕಂಡೆ. ನಾರುಡೆಯುಟ್ಟ ಜಟಾಧಾರಿಗಳಾದ ಶಿಷ್ಯರನ್ನು ಕಂಡೆ. ಆದರೆ ಆಶ್ರಮದಲ್ಲಿ ಒಂದುಕಡೆ ಒಂದು ಕಪಿಲೆ ಗೋವನ್ನೂ ಕಂಡೆ. ಬಲು ಮುದ್ದಾದ ಹಸು. ಚಂದ್ರನಂತೆ ಬೆಳ್ಳಗಿದೆ. ಕನ್ನೈದಿಲೆಯಂಥ ಕಣ್ಣುಗಳು. ಪೂರ್ಣಚಂದ್ರನ ಬೆಳದಿಂಗಳಿನಂಥ ಕಾಂತಿಯನ್ನು ಸುತ್ತಲೂ ಚೆಲ್ಲುತ್ತಿದೆ. ಆ ಗೋವು ಸಾಕ್ಷಾತ್ ಲಕ್ಷ್ಮಿಯಂತೆ ಕಾಣುತ್ತದೆ.'

ಇದನ್ನು ಕೇಳಿ ರಾಜನಿಗೆ ಒಂದು ದುರಾಲೋಚನೆ ಮೂಡಿತು. ಕಾಲಪಾಶದಿಂದ ಬದ್ಧನಾಗಿ ಮುನಿಯ ಕಾಮಧೇನುವನ್ನು ತನಗಾಗಿ ಬಯಸಿದ. ಮುನಿಯಲ್ಲಿ ಅದನ್ನು ಯಾಚನಮಾಡಿದ. ಮಾನವ ಎಷ್ಟು ಪುಣ್ಯಕರ್ಮ ಮಾಡಿದರೇನು ? ಎಷ್ಟು ಬುದ್ಧಿ-ಶಾಲಿಯಾಗಿದ್ದರೇನು ? ಕಾಲ ಎಲ್ಲಕ್ಕಿಂತ ಪ್ರಬಲ. ಪುಣ್ಯಕರ್ಮಿಯಾಗಿದ್ದರೂ ಬುದ್ಧಿ-ಶಾಲಿಯಾಗಿದ್ದರೂ ರಾಜ ಕಾಲಬಲದಿಂದ ಬ್ರಾಹ್ಮಣನಲ್ಲಿ ಹಸುವನ್ನು ಬೇಡಿದ.

ಪುಣ್ಯದಿಂದ ಪುಣ್ಯಕರ್ಮ, ಪಾಪದಿಂದ ಪಾಪಕರ್ಮ ಉಂಟಾಗುತ್ತದೆ. ಪುಣ್ಯ-ಕರ್ಮದಿಂದ ಸ್ವರ್ಗಸುಖ ಭೋಗ ಪಡೆದು ಪುಣ್ಯಸ್ಥಳದಲ್ಲಿಯೆ ಜನ್ಮ ತಳೆಯುತ್ತಾನೆ. ಪಾಪಕರ್ಮದಿಂದ ನರಕಯಾತನೆ ಪಡೆದು ಹೀನಜನ್ಮ ತಳೆಯುತ್ತಾನೆ. ಈ ಪುಣ್ಯಪಾಪ ಕರ್ಮಗಳು ಇರುವಷ್ಟು ಕಾಲ ಜೀವಿಗಳಿಗೆ ಮೋಕ್ಷವಿಲ್ಲ. ಅದರಿಂದ ಸಜ್ಜನರು ಕರ್ಮಕ್ಷಯಕ್ಕೇ ಯತ್ನಿಸುತ್ತಾರೆ. ಕರ್ಮಕ್ಷಯಕ್ಕೆ ಕಾರಣವಾಗಬಲ್ಲ ವಿದ್ಯೆಯೆ ನಿಜವಾದ ವಿದ್ಯೆ, ತಪಸ್ಸೆ ನಿಜವಾದ ತಪಸ್ಸು, ಜ್ಞಾನವೆ ನಿಜವಾದ ಜ್ಞಾನ. ಯಾರು ಕರ್ಮಕ್ಷಯದ ಮಾರ್ಗವನ್ನು ತೋರಿಸುವರೋ ಅವರೆ ನಿಜವಾದ ತಾಯಿತಂದೆಗಳು ಗುರುಗಳು ಬಂಧುಗಳು.

ಶುಭ ಅಶುಭ ಕರ್ಮಫಲ ಭೋಗವೆ ಜೀವಿಗಳಿಗೆ ದಾರುಣವಾದ ರೋಗ. ವಿಷ್ಣುಭಕ್ತನಾದ ಗುರುವೆ ಈ ರೋಗಕ್ಕೆ ವೈದ್ಯ. ಆತ ವಿಷ್ಣುಭಕ್ತಿ ಎಂಬ ರಸಾಯನ ನೀಡಿ ರೋಗ ಪರಿಹರಿಸುವನು. ಜಗನ್ಮಾತೆ ಮಾಯೆ ಒಲಿದರೆ ವಿಷ್ಣುಭಕ್ತಿ ನೀಡುವಳು. ಬುದ್ಧಿಯನ್ನೂ ನೀಡುವಳು. ಅವಳು ಮೋಹಗೊಳಿಸಿದರೆ ಮಾತ್ರ ಎಂದೂ ವಿವೇಕ ಬಾರದು.

ಕಾರ್ತವೀರ್ಯಾರ್ಜುನ ಮಾಯೆಯ ಮೋಹಜಾಲದಲ್ಲಿ ಸಿಲುಕಿ ವಿವೇಕವಿಲ್ಲದೆ ಮುನಿಯ ಮುಂದೆ ಕೈಮುಗಿದು ವಿನಯದಿಂದ ನುಡಿದ-

'ಮುನಿಯೆ, ನೀನು ಭಕ್ತರಿಗೆ ಬೇಡಿದ್ದನ್ನು ನೀಡುವ ಕಲ್ಪತರು. ನನಗೆ ಕಾಮಧೇನುವನ್ನು ಕೊಡು. ನಿನ್ನಂಥ ತಪಸ್ವಿಗಳಿಗೆ ಕೊಡಲಾಗದ ವಸ್ತುವೆ ಇಲ್ಲ. ದಧೀಚಮುನಿ ದೇವತೆಗಳಿಗೆ ತನ್ನ ಅಸ್ಥಿಯನ್ನೇ ದಾನ ಮಾಡಿದ! ನೀನೂ ತಪೋರಾಶಿ, ತಪೋಧನನಾಗಿದ್ದು ಒಂದು ಹುಬ್ಬಿನ ಕುಣಿತದಿಂದ ಕಾಮಧೇನುಗಳ ಹಿಂಡನ್ನೆ ಸೃಜಿಸಬಲ್ಲೆ.'

ಮುನಿ ಕೋಪಗೊಂಡು ನುಡಿದ—

'ರಾಜನೆ, ಇದೇನು ವಿಪರೀತವಾಗಿ ನುಡಿಯುತ್ತಿರುವೆ ? ನಾನು ಬ್ರಾಹ್ಮಣ. ಕ್ಷತ್ರಿಯನಾದ ನಿನಗೆ ದಾನವನ್ನು ಹೇಗೆ ಕೊಡಬಲ್ಲೆ ? ಮತ್ತು ಈ ಕಾಮಧೇನು ಸಾಮಾನ್ಯವಲ್ಲ. ಗೋಲೋಕದಲ್ಲಿ ಕೃಷ್ಣ ಬ್ರಹ್ಮನಿಗೆ ಇತ್ತ ಹಸು. ಅದನ್ನು ಬ್ರಹ್ಮ

ಭೃಗುವಿಗಿತ್ತ. ಭೃಗು ನನಗಿತ್ತ. ಹೀಗೆ ಗೋಲೋಕದ ಹಸು ಇದು ಮೂಲೋಕದಲ್ಲಿ ದುರ್ಲಭವಾದುದು. ನಾನು ಸುಲಭವಾಗಿ ಹೇಗೆ ಸೃಜಿಸಬಲ್ಲೆ ? ಹೇಳು. ನಾನೇನೂ ನಿನ್ನ ಮುಖಸ್ತುತಿಗೆ ಉಬ್ಬಿಹೋಗುವ ಮೂಢನಲ್ಲ. ಕೋಪದಿಂದ ಕ್ಷಣದಲ್ಲಿ ನಿನ್ನನ್ನು ಸುಟ್ಟು ಬೂದಿ ಮಾಡುತ್ತಿದ್ದೆ. ಅತಿಥಿ ಎಂದು ಸಹಿಸಿಕೊಂಡೆ. ಹೋಗು, ನಿನ್ನ ಅರಮನೆಗೇ ಹೋಗು. ನಿನ್ನ ಹೆಂಡತಿ ಮಕ್ಕಳ ಯೋಗಕ್ಷೇಮನೋಡು. ಇಲ್ಲಿ ನಿಂತು ನನ್ನ ಕೋಪವನ್ನು ಹೆಚ್ಚಿಸಬೇಡ.

ಮುನಿಯ ಮಾತನ್ನು ಕೇಳಿ ರಾಜನೂ ಕೋಪಗೊಂಡ. ತನ್ನ ಸೈನ್ಯದ ಬಳಿಗೆ ಹೋಗಿ ಕಾಮಧೇನುವನ್ನು ಬಲಾತ್ಕಾರದಿಂದ ಎಳೆದು ತನ್ನಿರೆಂದು ಆಜ್ಞಾಪಿಸಿದ. ಇತ್ತ ಮುನಿ ಕಾಮಧೇನುವಿನ ಬಳಿಗೆ ಹೋಗಿ ಕಣ್ಣೀರು ಸುರಿಸುತ್ತ ಎಲ್ಲ ಸಮಾಚಾರವನ್ನು ತಿಳಿಸಿತು. ಭಕ್ತರಲ್ಲಿ ಅನುಗ್ರಹ ಮಾಡುವ ಸಾಕ್ಷಾತ್ ಲಕ್ಷ್ಮೀಸ್ವರೂಪಳಾದ ಆ ಕಾಮಧೇನು ಮುನಿಯನ್ನು ಸಂತೈಸುತ್ತ ನುಡಿದಳು—

'ತಪೋಧನ, ದೇವೇಂದ್ರನಾಗಲಿ ಬಡರೈತನೆ ಆಗಲಿ ತನ್ನದಾದ ವಸ್ತುವನ್ನು ಇನ್ನೊಬ್ಬರಿಗೆ ದಾನಮಾಡಲು ಸಮರ್ಥನೆ. ನೀನು ಸ್ವೇಚ್ಛೆಯಿಂದ ರಾಜನಿಗೆ ನನ್ನನ್ನು ದಾನ ಮಾಡುವೆಯಾದರೆ ಮಾಡು. ನಾನು ನಿನ್ನಾಜ್ಞೆಯಂತೆ ಸ್ವೇಚ್ಛೆಯಿಂದಲೆ ಅವನ ಜೊತೆಗೆ ಹೋಗಲು ಸಿದ್ಧಳಿದ್ದೇನೆ. ಇಲ್ಲದಿದ್ದರೆ ಇಲ್ಲ. ನಿನಗೆ ಬೇಕಾದರೆ ಒಂದು ಸೈನ್ಯ ಸೃಷ್ಟಿ ಮಾಡಿ ಕೊಡುತ್ತೇನೆ. ಆದರಿಂದ ರಾಜನನ್ನು ದೂರಮಾಡು. ಕಣ್ಣೀರು ಹಾಕಬೇಡ. ಎಲ್ಲವನ್ನೂ ಬಲ್ಲ ನೀನು ಏಕೆ ಹೀಗೆ ಮಾಯೆಯ ಮೋಹ-ಕ್ಕೊಳಗಾಗುವೆ ? ಸಮಾಗಮ ವಿಯೋಗಗಳು ಕಾಲಕ್ಕೇ ಅಧೀನ, ನಮ್ಮ ಅಧೀನವಲ್ಲ. ನನಗೆ ನೀನಾರು ? ನಿನಗೆ ನಾನಾರು ? ನಾವು ಒಂದೆಡೆ ಸೇರಿರುವುದು ಕಾಲವಶ-ದಿಂದ. ಎಂದಿನವರೆಗೆ ಜೊತೆಗಿರುವೆವೊ ಅಂದಿನವರೆಗೆ ನಮ್ಮವರೆಂಬ ಅಭಿಮಾನ. ಅಭಿಮಾನವಿರುವಷ್ಟುಕಾಲ ವಿಯೋಗದಿಂದ ದುಃಖ ಉಂಟಾಗುವುದು.'

ಹೀಗೆ ಹೇಳಿ ಕಾಮಧೇನು ಶಸ್ತ್ರಾಸ್ತ್ರಗಳಿಂದ ಸಜ್ಜಾದ ಸೂರ್ಯನಂತಹ ತೇಜಸ್ಸಿನ ಅಸಂಖ್ಯ ಸೈನ್ಯಗಳನ್ನು ಸೃಜಿಸಿದಳು. ಅವಳ ಮುಖದಿಂದ ಖಡ್ಗಧಾರಿಗಳಾದ ಮೂರು-ಕೋಟಿ ಯೋಧರು. ಮೂಗಿನಿಂದ ಶೂಲಧಾರಿಗಳು ಐದುಕೋಟಿ, ಕಣ್ಣುಗಳಿಂದ ಧನುರ್ಧಾರಿಗಳು ನೂರುಕೋಟಿ, ಕಪಾಲದಿಂದ ದಂಡಧಾರಿಗಳು ಮೂರುಕೋಟಿ, ಎದೆಯಿಂದ ಶಕ್ತಿಧಾರಿಗಳು ಮೂರುಕೋಟಿ, ಬೆನ್ನಿನಿಂದ ಗದಾಧಾರಿಗಳು ನೂರು-ಕೋಟಿ, ಪಾದತಳದಿಂದ ವಾದ್ಯಧಾರಿಗಳು ಸಾವಿರಾರು, ಮಂಡಿಯಿಂದ ರಾಜಪುತ್ರರು ಮೂರುಕೋಟಿ, ಗುಹ್ಯದಿಂದ ಮ್ಲೇಚ್ಛರು ಮೂರುಕೋಟಿ ಹೀಗೆ ವೀರಯೋಧರು ಜನಿಸಿದರು. ಅವರನ್ನು ಮುನಿಯ ವಶಕ್ಕೊಪ್ಪಿಸಿ ಅಭಯ ನೀಡಿದಳು.

ಮುನಿಯ ಸೈನ್ಯ ರಾಜನ ಸೈನ್ಯವನ್ನು ಪರಾಭವಗೊಳಿಸಿತು. ರಾಜ ರಾಜಧಾನಿ-ಯಿಂದ ಹೆಚ್ಚು ಸೈನಿಕರನ್ನು ಕರೆತರಿಸಿದ.

**ಇಲ್ಲಿಗೆ ಶ್ರೀ ಬ್ರಹ್ಮವೈವರ್ತ ಮಹಾಪುರಾಣದಲ್ಲಿ ಮೂರನೆಯದಾದ ಗಣಪತಿಖಂಡದಲ್ಲಿ ನಾರದ ನಾರಾಯಣ ಸಂವಾದದಲ್ಲಿ ಏಕದಂತತ್ವ ಹೇತು ಪ್ರಶ್ನ ಪ್ರಸಂಗದಲ್ಲಿ ಜಮದಗ್ನಿ ಕಾರ್ತವೀರ್ಯ ಯುದ್ಧಾರಂಭ ವರ್ಣನವೆಂಬ ಇಪ್ಪತ್ತನಾಲ್ಕನೆ ಅಧ್ಯಾಯ ಮುಗಿಯಿತು.**

## ಸೋತರಾಜನನ್ನು ಸಂತೈಸಿ ಆತಿಥ್ಯ ನೀಡಿದ ಮಹಾಮುನಿ

**ಅಧ್ಯಾಯ-೨೫**

ಕಾರ್ತವೀರ್ಯ ಹರಿಯನ್ನು ಸ್ಮರಿಸುತ್ತ ಜಮದಗ್ನಿಯ ಬಳಿಗೆ ದೂತನನ್ನು ಕಳಿಸಿದ.

'ಮುನಿಯೆ, ನನಗೆ ಅಭೀಷ್ಟವಾದ ಕಾಮಧೇನುವನ್ನು ನನಗೆ ಕೊಡುವಿಯೋ ಅಥವಾ ನನ್ನೊಡನೆ ಯುದ್ಧಮಾಡುವಿಯೋ ? ನಾನು ನಿನ್ನ ಸೇವಕ. ಅತಿಥಿಯಾಗಿ ಬಂದಿದ್ದೇನೆ. ವಿಚಾರಮಾಡು. ಉಚಿತವಾದ ನಿರ್ಧಾರ ಕೈಗೊಳ್ಳು,' ಎಂದು ಸಂದೇಶ-ವನ್ನಿತ್ತ. ದೂತನ ಮಾತು ಕೇಳಿ ಮುನಿ ನಕ್ಕು ಹೇಳಿದ, 'ರಾಜ ಹಸಿದಿದ್ದುದನ್ನು ಕಂಡು ನನ್ನ ಆಶ್ರಮಕ್ಕೆ ಕರೆಸಿಕೊಂಡು ಯಥಾಶಕ್ತಿ ಭೋಜನ ನೀಡಿದ್ದೇನೆ. ಈಗ ಆತ ನನಗೆ ಪ್ರಾಣಕ್ಕಿಂತ ಪ್ರಿಯಳಾದ ಕಾಮಧೇನುವನ್ನೆ ಬೇಡುತ್ತಿದ್ದಾನೆ. ನಾನು ಕೊಡಲಾರೆ. ಯುದ್ಧ ಮಾಡಬೇಕೆಂದರೆ ಮಾಡಲು ಸಿದ್ಧನಿದ್ದೇನೆ ಎಂದು ಹೇಳು.'

ಬಳಿಕ ಮುನಿ ಕಾಮಧೇನುವಿನ ಬಳಿಗೆ ಬಂದು ಹೇಳಿದ. 'ಈಗ ನಾನೇನು ಮಾಡಲಿ? ನಾನು ಮುಂದೆ ನಿಂತು ಯುದ್ಧಮಾಡದಿದ್ದರೆ ನಮ್ಮ ಈ ಸೈನ್ಯ ನಾವಿಕೆ-ಯಿಲ್ಲದ ನೌಕೆಯಂತಾದೀತು.'

ಕಾಮಧೇನು ವಿವಿಧ ಶಸ್ತ್ರಾಸ್ತ್ರಗಳನ್ನಿತ್ತು ಯುದ್ಧಶಾಸ್ತ್ರವನ್ನೂ ಅಸ್ತ್ರಸಂಧಾನ-ಪ್ರಯೋಗ ಉಪಸಂಹಾರಗಳನ್ನೂ ತಿಳಿಸಿ ಯುದ್ಧಮಾಡಲು ಪ್ರೇರಿಸಿದಳು. 'ನಿನಗೆ ಜಯವಾಗಲಿ' ಎಂದೂ ಹರಸಿದಳು. ಆದರೆ 'ಮುನಿಯೆ, ನೀನು ಬ್ರಾಹ್ಮಣನಾಗಿದ್ದು ರಾಜನೊಡನೆ ಯುದ್ಧ ಮಾಡುವುದು ಯುಕ್ತವಾಗದು. ಆತ ದತ್ತಾತ್ರೇಯನ ಪ್ರಿಯ-ಶಿಷ್ಯನಾಗಿದ್ದು ದತ್ತನು ನೀಡಿರುವ ದಿವ್ಯಶಕ್ತಿಯನ್ನು ಧರಿಸಿದ್ದಾನೆ. ಅವನು ಅದನ್ನು ಪ್ರಯೋಗ ಮಾಡಿದರೆ ನಿನಗೆ ಮರಣ ಸಂಭವಿಸಬಹುದು. ಪ್ರಯೋಗ

ಮಾಡದಿದ್ದಲ್ಲಿ ನಿನಗೆ ಮರಣ ನಿಶ್ಚಯವಾಗಿಯೂ ಬರಲಾರದು' ಎಂದು ಎಚ್ಚರ ನೀಡಿದಳು.

ಮುನಿ ಮರಣಕ್ಕೆ ಅಂಜದೆ ಎಲ್ಲ ಸೈನ್ಯವನ್ನು ಕರೆದುಕೊಂಡು ರಣರಂಗದಲ್ಲಿ ಇಳಿದ. ರಾಜನೂ ಮುನಿಗೆ ನಮಸ್ಕರಿಸಿ ಯುದ್ಧಕ್ಕೆ ನಿಂತ. ಯುದ್ಧದಲ್ಲಿ ಕಾಮಧೇನು-ವಿನ ಸೈನ್ಯ ರಾಜನ ಸೈನ್ಯವನ್ನು ಹಿಮ್ಮೆಟ್ಟಿಸಿತು. ರಾಜನ ರಥವನ್ನು ಮುರಿಯಿತು. ಬಿಲ್ಲನ್ನು ಕತ್ತರಿಸಿತು. ಶಸ್ತ್ರಗಳ ಮಳೆಗರೆದು ರಾಜನನ್ನು ನಿರಾಯುಧನನ್ನಾಗಿ ಮಾಡಿತು. ರಾಜ ಮೂರ್ಛಿತನಾದ. ದಯಾನಿಧಿಯಾದ ಮುನಿ ತನ್ನ ಸೈನ್ಯವನ್ನೆಲ್ಲ ಹಿಂದೆ ಕರೆಸಿ-ಕೊಂಡು ಕಾಮಧೇನುವಿನಲ್ಲಿ ಲೀನಗೊಳಿಸಿದ. ರಾಜನಿಗೆ 'ಜಯವಾಗಲಿ' ಎಂದು ಆಶೀರ್ವದಿಸುತ್ತ ಕಮಂಡಲುವಿನ ನೀರನ್ನು ಪ್ರೋಕ್ಷಿಸಿ ಅವನನ್ನು ಎಚ್ಚರಗೊಳಿಸಿದ. ಆತ ಎದ್ದು ಕೈಮುಗಿದು ಭಕ್ತಿಯಿಂದ ಮುನಿಗೆ ತಲೆಬಾಗಿ ನಮಸ್ಕರಿಸಿದ. ಮುನಿ ಅವನನ್ನು ಆಲಿಂಗಿಸಿ, ಹರಸಿ, ಪುನಃ ಸ್ನಾನ ಮಾಡಿಸಿ ಭೋಜನವಿತ್ತ. ಬ್ರಾಹ್ಮಣನ ಹೃದಯವೇ ಹೀಗೆ. ಸದಾ ಬೆಣ್ಣೆಯಂತೆ ಬೇಗನೆ ಕರಗುವಂಥದ್ದು. ಕ್ಷತ್ರಿಯರದು ಹಾಗಲ್ಲ. ಕತ್ತಿಯ ಅಲುಗಿನಂತೆ ತೀಕ್ಷ್ಣ. 'ರಾಜನೆ, ಸಾಕುಮಾಡು ಈ ಯುದ್ಧವನ್ನು, ಮನೆಗೆ ಹೋಗು' ಎಂದ ಮುನಿ. ರಾಜ ತನ್ನ ಆಗ್ರಹ ಬಿಡಲಿಲ್ಲ, 'ಮುನಿಯೆ, ಕಾಮಧೇನುವನ್ನು ಕೊಡು, ಇಲ್ಲವೆ ಯುದ್ಧಮಾಡು,' ಎಂದ.

**ಇಲ್ಲಿಗೆ ಶ್ರೀ ಬ್ರಹ್ಮವೈವರ್ತ ಮಹಾಪುರಾಣದಲ್ಲಿ ಮೂರನೆಯದಾದ ಗಣಪತಿಖಂಡದಲ್ಲಿ ನಾರದ ನಾರಾಯಣ ಸಂವಾದದಲ್ಲಿ ಜಮದಗ್ನಿ ಕಾರ್ತವೀರ್ಯಾರ್ಜುನ ಯುದ್ಧವರ್ಣನವೆಂಬ ಇಪ್ಪತ್ತೈದನೆ ಅಧ್ಯಾಯ ಮುಗಿಯಿತು.**

# ಮುನಿ ಮಹಾರಾಜರಲ್ಲಿ ಘೋರಯುದ್ಧ, ಬ್ರಹ್ಮದೇವರಿಂದ ಯುದ್ಧ ಸ್ಥಗಿತ

ಅಧ್ಯಾಯ-೨೬

ಕಾರ್ತವೀರ್ಯಾರ್ಜುನನ ಮಾತನ್ನು ಕೇಳಿ ಜಮದಗ್ನಿ ಹರಿಸ್ಮರಣೆ ಮಾಡಿ ಹಿತನುಡಿ ನುಡಿದ, 'ರಾಜನೆ, ನೀನು ಯುದ್ಧನಿಲ್ಲಿಸಿ ಮನೆಗೇ ಹಿಂತಿರುಗು. ಧರ್ಮ-ವನ್ನು ಕಾಪಾಡು. ಧರ್ಮ ಉಳಿದರೆ ಮಾತ್ರ ಸಕಲ ಸಂಪತ್ತೂ ಸ್ಥಿರವಾಗಿ ನಿಲ್ಲುವುದು. ನೀನು ನಿರಾಹಾರನಾಗಿದ್ದುದನ್ನು ನೋಡಿ ನನ್ನ ಮನೆಗೆ ಕರೆಸಿ ಯಥಾಶಕ್ತಿ ಉಪಚರಿಸಿದ್ದೇನೆ. ಈಗ ಯುದ್ಧದಲ್ಲಿ ಮೂರ್ಛಿತನಾಗಿ ಬಿದ್ದಾಗಲೂ ನಿನಗೆ ಒಳ್ಳೆಯದಾಗಲೆಂದು ಹರಸುತ್ತ ನನ್ನ ಪಾದಧೂಳಿಯನ್ನು ನಿನ್ನ ಮೇಲೆ ಹಾಕಿ ಎಚ್ಚರ-ಗೊಳಿಸಿದ್ದೇನೆ. ನೀನು ಹೀಗೆ ಮಾಡನಾಡಬಾರದು.'

ರಾಜ ಮುನಿಗೆ ನಮಸ್ಕರಿಸಿ ಇನ್ನೊಂದು ರಥವನ್ನೇರಿ 'ಮುನಿಯೆ, ಯುದ್ಧ ಮಾಡು' ಎಂದ. ಮುನಿ ಯುದ್ಧ ಮಾಡತೊಡಗಿದ. ರಾಜನನ್ನು ನಿಃಶಸ್ತ್ರಗೊಳಿಸಿದ. ಕಾಮಧೇನು ಕೊಟ್ಟ ಶಕ್ತ್ಯಾಯುಧವನ್ನು ಪ್ರಯೋಗಿಸಿ ರಾಜನನ್ನು ಪುನಃ ಮೂರ್ಛೆ-ಗೊಳಿಸಿದ. ರಾಜ ಮೂರ್ಛೆಯಿಂದ ಎದ್ದು ಪುನಃ ಯುದ್ಧ ಮಾಡಿದ. ಆಗ್ನೇಯಾಸ್ತ್ರ ಪ್ರಯೋಗಿಸಿದ. ಮುನಿ ಅದಕ್ಕೆ ವಾರುಣಾಸ್ತ್ರವನ್ನೆಸೆದ. ರಾಜನ ವಾರುಣಾಸ್ತ್ರವನ್ನು ವಾಯುವ್ಯಾಸ್ತ್ರದಿಂದ, ಅವನ ವಾಯವ್ಯಾಸ್ತ್ರವನ್ನು ಗಂಧರ್ವಾಸ್ತ್ರದಿಂದ, ಸರ್ಪಾಸ್ತ್ರವನ್ನು ಗಾರುಡಾಸ್ತ್ರದಿಂದ, ಮಾಹೇಶ್ವರಾಸ್ತ್ರವನ್ನು ವೈಷ್ಣವಾಸ್ತ್ರದಿಂದ, ಇದಿರಿಸಿ ಕೊನೆಯಲ್ಲಿ ನಾರಾಯಣಾಸ್ತ್ರವನ್ನು ಪ್ರಯೋಗಿಸಿದ. ರಾಜ ಆ ಅಸ್ತ್ರಕ್ಕೆ ತಲೆಬಾಗಿ ಶರಣಾದ. ಪ್ರಳಯಾಗ್ನಿಯಂತೆ ಜ್ವಲಿಸುತ್ತಿದ್ದ ಅಸ್ತ್ರ ರಾಜನ ತಲೆಯ ಮೇಲ್ಗಡೆ ಸುತ್ತಾಡಿ ಹತ್ತು-ದಿಕ್ಕುಗಳನ್ನು ಕ್ಷಣಕಾಲ ಬೆಳಗಿ ಅಂತರ್ಧಾನ ಹೊಂದಿತು.

ಮುನಿ ಜೃಂಭಣಾಸ್ತ್ರ ಪ್ರಯೋಗಿಸಿದ. ಅದರಿಂದ ರಾಜನನ್ನು ಗಾಢವಾದ ನಿದ್ರೆ ಆವರಿಸಿತು. ಸತ್ತವನಂತೆ ಬಿದ್ದ. ಮುನಿ ಅರ್ಧಚಂದ್ರಾಸ್ತ್ರದಿಂದ ಅವನ ಸಾರಥಿ-ಯನ್ನೂ ಹೊಡೆದುರುಳಿಸಿ ರಥವನ್ನೂ ಧನುರ್ಬಾಣಗಳನ್ನೂ ಪುಡಿಗೈದ. ಕ್ಷುರಪ್ರ-ದಿಂದ ರಾಜನ ಕಿರೀಟ, ಛತ್ರ, ಬಾಣ ಬತ್ತಳಿಕೆಗಳನ್ನೂ ಕತ್ತರಿಸಿದ. ಕುದುರೆಗಳನ್ನೂ ಕೊಂದ. ಸರ್ಪಾಸ್ತ್ರದಿಂದ ಮಂತ್ರಿಗಳನ್ನು ಬಂಧಿಸಿ, ಮಂತ್ರದಿಂದ ರಾಜನನ್ನು ನಿದ್ದೆಯಿಂದ ಎಚ್ಚರಿಸಿದ. ಬದ್ಧರಾದ ಮಂತ್ರಿಗಳನ್ನು ತೋರಿಸಿ ಅವರನ್ನು ಬಿಡುಗಡೆ ಮಾಡಿದ. ರಾಜನಿಗೆ ಆಶೀರ್ವಾದ ಮಾಡುತ್ತ 'ಮನೆಗೆ ಹೋಗು' ಎಂದ.

ರಾಜ ಕೋಪದಿಂದ ಮುನಿಯ ಮೇಲೆ ಶೂಲವನ್ನೆಸೆದ. ಮುನಿ ಶಕ್ತ್ಯಾಯುಧದಿಂದ ಅದನ್ನು ಕತ್ತರಿಸಿದ. ಆಗ ಬ್ರಹ್ಮ ಅವರಿಬ್ಬರ ನಡುವೆ ಬಂದು ನಿಂತು ಇಬ್ಬರನ್ನೂ

ಸಮಾಧಾನ ಮಾಡಿದ. ಮುನಿ ಬ್ರಹ್ಮನನ್ನು ನಮಿಸಿದ. ರಾಜ ಬ್ರಹ್ಮನನ್ನೂ ಮುನಿಯನ್ನೂ ನಮಿಸಿ ತನ್ನ ರಾಜಧಾನಿಗೆ ತೆರಳಿದ.

**ಇಲ್ಲಿಗೆ ಶ್ರೀ ಬ್ರಹ್ಮವೈವರ್ತ ಮಹಾಪುರಾಣದಲ್ಲಿ ಮೂರನೆಯದಾದ ಗಣಪತಿಖಂಡದಲ್ಲಿ ನಾರದ ನಾರಾಯಣ ಸಂವಾದದಲ್ಲಿ ಜಮದಗ್ನಿ ಕಾರ್ತವೀರ್ಯ ಯುದ್ಧೋಪಶಮವರ್ಣನವೆಂಬ ಇಪ್ಪತ್ತಾರನೆ ಅಧ್ಯಾಯ ಮುಗಿಯಿತು.**

## ಜಮದಗ್ನಿ ಸಂಹಾರ, ಪರಶುರಾಮನಿಂದ ಕ್ಷತ್ರಿಯ ವಧ ಪ್ರತಿಜ್ಞೆ

ಅಧ್ಯಾಯ-೨೭

ಕಾರ್ತವೀರ್ಯಾರ್ಜುನನ ದರ್ಪವಿನ್ನೂ ಅಡಗಿರಲಿಲ್ಲ. ಆತ ಪುನಃ ನಾಲ್ಕುಲಕ್ಷ ರಥ ಸೈನ್ಯಗಳನ್ನೂ, ಹತ್ತುಲಕ್ಷ ರಥಿಕಯೋಧರನ್ನೂ, ಲೆಕ್ಕವಿಲ್ಲದಷ್ಟು ಕುದುರೆ ಆನೆ ಕಾಲಾಳು ಸೈನ್ಯಗಳನ್ನೂ, ಸಾವಿರ ರಾಜರುಗಳನ್ನೂ ಕೂಡಿಸಿ, ಈಗ ಮೂಲೋಕವನ್ನೆ ಗೆಲ್ಲಬಲ್ಲೆನೆಂಬ ದರ್ಪದಿಂದ ಜಮದಗ್ನಿಯ ಆಶ್ರಮವನ್ನು ಸುತ್ತುವರಿದು ನಿಂತ. ಒಡನೆ ರಣವಾದ್ಯ ಘೋಷಗಳಿಗೂ ಸೈನ್ಯದ ಮಹಾಕೋಲಾಹಲಕ್ಕೂ ಭಯದಿಂದ ತತ್ತರಿಸಿದ ಆಶ್ರಮದ ಜನರೆಲ್ಲರೂ ದಿಙ್ಮೂಢರಾಗಿ ನಿಂತರು. ರಾಜ ಬಲಾತ್ಕಾರದಿಂದ ಕಾಮಧೇನುವನ್ನು ಎಳೆದುಕೊಂಡು ಹೊರಟ. ಜಮದಗ್ನಿ ಹರಿಸ್ಮರಣೆ ಮಾಡಿ ಧನುರ್ಬಾಣಗಳನ್ನೆತ್ತಿಕೊಂಡ. ಆಶ್ರಮವಾಸಿಗಳನ್ನು ಸಂತೈಸುತ್ತ ಏಕಾಕಿಯಾಗಿ ನಿರ್ಭೀತನಾಗಿ ಕವಚವನ್ನೂ ಧರಿಸದೆ ಯುದ್ಧಕ್ಕೆ ನಿಂತ.

ಮೊದಲಿಗೆ ತನ್ನಾಶ್ರಮವನ್ನು ಸುತ್ತಲೂ ಶರಪಂಜರದಿಂದ ಸುರಕ್ಷಿತವಾಗಿ ಮುಚ್ಚಿಟ್ಟ, ಮಾನವ ತನ್ನ ಶರೀರವನ್ನು ಬಟ್ಟೆಯಿಂದ ಮುಚ್ಚುವ ಹಾಗೆ. ಬಳಿಕ ರಾಜನ ಸೈನ್ಯ ಮುಂದುವರಿಯದಂತೆ ಇನ್ನೊಂದು ಶರಪಂಜರದಿಂದ ದಿಗ್ಬಂಧ ಮಾಡಿದ. ರಾಜನ ಸೈನ್ಯವೀಗ ಪಂಜರದೊಳಗಿನ ಗಿಳಿಯಂತಾಯಿತು.

ರಾಜ ಮುನಿಯನ್ನು ಕಂಡೊಡನೆ ಎಲ್ಲ ರಾಜರುಗಳೊಂದಿಗೆ ರಥದಿಂದಿಳಿದು ಭಕ್ತಿಯಿಂದ ಕೈಮುಗಿದು ವಂದಿಸಿದ. ಮುನಿ ಮಂಗಳವಾಗಲೆಂದು ಆಶೀರ್ವದಿಸಿದ.

ಯುದ್ಧ ಪ್ರಾರಂಭವಾಯಿತು. ರಾಜನೂ ಅವನ ಕಡೆಯ ಎಲ್ಲ ರಾಜರೂ ಮುನಿಯ ಮೇಲೆ ಅಸ್ತ್ರಶಸ್ತ್ರಗಳನ್ನೂ ಗದೆ ಶಕ್ತ್ಯಾಯುಧಗಳನ್ನೂ ಎಸೆದರು. ಮುನಿ

ಎಲ್ಲವನ್ನೂ ಅನಾಯಾಸವಾಗಿ ತುಂಡರಿಸಿದ. ರಾಜನ ಶೂಲವನ್ನೂ ಮುರಿದು ಸೈನ್ಯವನ್ನೂ ಧ್ವಂಸಗೊಳಿಸಿದ. ಜೃಂಭಣಾಸ್ತ್ರವನ್ನು ಪ್ರಯೋಗಿಸಿ ರಾಜನೂ ಅವನ ಸೈನ್ಯವೂ ಗಾಢ ನಿದ್ರೆಯಲ್ಲಿ ಮೈಮರೆಯುವಂತೆ ಮಾಡಿ ಕಾಮಧೇನುವನ್ನು ಹಿಡಿದು ಅವಳ ಕಣ್ಣೊರಸಿ ಸಮಾಧಾನ ಮಾಡಿದ. ಅಷ್ಟರಲ್ಲಿ ರಾಜ ಎಚ್ಚತ್ತು ಮುನಿಯ ಮೇಲೆ ಆಕ್ರಮಣ ಮಾಡಿದ. ಕಾಮಧೇನು ಹೆದರಿ ರಣರಂಗದಿಂದ ಸ್ವಸ್ಥಾನಕ್ಕೆ ಧಾವಿಸಿದಳು. ಇತ್ತ ಮುನಿ ನಿರ್ಭಯದಿಂದ ಧನುರ್ಬಾಣಗಳನ್ನು ಹಿಡಿದು ನಿಂತ. ರಾಜನ ಬ್ರಹ್ಮಾಸ್ತ್ರವನ್ನು ತನ್ನ ಬ್ರಹ್ಮಾಸ್ತ್ರದಿಂದ ಶಾಂತಗೊಳಿಸಿದ. ಅವನ ಧನುರ್ಬಾಣ ಕವಚಗಳನ್ನೂ ಸಾರಥಿಯನ್ನೂ ರಥವನ್ನೂ ಮುರಿದ.

ರಾಜನ ಕೋಪ ಎಲ್ಲೆ ಮೀರಿತು. ಅವನ ಬಳಿಯಲ್ಲಿಯೆ ದತ್ತಾತ್ರೇಯನು ಅನುಗ್ರಹಿಸಿದ ಮಹಾಶಕ್ತ್ಯಾಯುಧವಿತ್ತು. ಅದು ನೂರು ಸೂರ್ಯರ ಪ್ರಭೆಯುಳ್ಳದ್ದು. ಒಬ್ಬ ಇದಿರಾಳಿಯನ್ನು ಮಾತ್ರ ಕೊಂದು ಶ್ರೀಹರಿಯನ್ನು ಸೇರುವಂಥಹುದು. ರಾಜ ಅದನ್ನು ನಮಸ್ಕರಿಸಿ ಅದರಲ್ಲಿ ಎಲ್ಲ ದೇವತೆಗಳ ಹಾಗೂ ನಾರಾಯಣ ಶಿವ ಬ್ರಹ್ಮ ಮಾಯೆ ಇವರೆಲ್ಲರ ತೇಜಸ್ಸುಗಳನ್ನು ಮಂತ್ರಪೂರ್ವಕವಾಗಿ ಆವಾಹಿಸಿದ. ದಶದಿಕ್ಕುಗಳನ್ನು ಬೆಳಗುವ ಆ ಶಕ್ತ್ಯಾಯುಧವನ್ನು ರಾಜ ಮುನಿಯ ಮೇಲೆ ಪ್ರಯೋಗಿಸಿದ. ಆಕಾಶದಲ್ಲಿ ನಿಂತು ಯುದ್ಧವನ್ನು ಅವಲೋಕಿಸುತ್ತಿದ್ದ ದೇವತೆಗಳು ಹಾಹಾಕಾರ ಮಾಡುತ್ತಿದ್ದಂತೆ ಆ ಶಕ್ತ್ಯಾಯುಧ ಮುನಿಯ ಎದೆಯನ್ನು ಸೀಳಿ ಶ್ರೀಹರಿಯ ಸನ್ನಿಧಿಗೆ ಹೊರಟುಹೋಯಿತು. ಮುನಿ ಅಸು ನೀಗಿದ. ಅವನ ತೇಜಸ್ಸು ಆಕಾಶದಲ್ಲಿ ತಿರುಗುತ್ತ ಬ್ರಹ್ಮಲೋಕಕ್ಕೆ ಹೋಯಿತು. ಮುನಿಯ ಮರಣವನ್ನು ಕಂಡು ಕಾಮಧೇನು ಅಯ್ಯೋ ಅಪ್ಪ, ಅಪ್ಪ ಎಂದು ಕಣ್ಣೀರು ಸುರಿಸಿ ಗೋಲೋಕಕ್ಕೆ ಹೊರಟುಹೋದಳು. ಅಲ್ಲಿ ಕೃಷ್ಣನ ಮುಂದೆ ಎಲ್ಲ ವೃತ್ತಾಂತವನ್ನೂ ಬಿನ್ನವಿಸಿದಳು. ಅವಳ ಕಣ್ಣೀರಿಂದ ಭೂಲೋಕದಲ್ಲಿ ರತ್ನಗಳ ಸೃಷ್ಟಿಯಾಯಿತು.

ರಾಜ ಮುನಿಯನ್ನು ಸಂಹರಿಸಿದುದಕ್ಕೆ ಪ್ರಾಯಶ್ಚಿತ್ತ ಮಾಡಿಕೊಂಡು ರಾಜಧಾನಿಗೆ ಹಿಂತೆರಳಿದ. ಇತ್ತ ಜಮದಗ್ನಿಯ ಪತ್ನಿ ರೇಣುಕೆ ಪತಿಯ ಶವವನ್ನು ತಬ್ಬಿಕೊಂಡು ಒಂದುಕ್ಷಣ ಮೂರ್ಛೆ ಹೊಂದಿದಳು. ಒಡನೆ ಎದ್ದು 'ಮಗು, ರಾಮ, ರಾಮ, ಎಲ್ಲಿರುವೆ, ಬಾ' ಎಂದಳು. ಪರಶುರಾಮ ಆಗ ಪುಷ್ಕರಕ್ಷೇತ್ರದಲ್ಲಿ ತಪಸ್ಸು ಮಾಡುತ್ತಿದ್ದ. ಯೋಗಶಕ್ತಿಯಿಂದಲೆ ತಾಯಿಯ ಕೂಗನ್ನು ಕೇಳಿ ಮನೋವೇಗದಿಂದ ಬಂದು ಭಕ್ತಿಯಿಂದ ನಮಿಸಿದ. ಮೃತನಾಗಿ ಬಿದ್ದಿರುವ ತಂದೆಯನ್ನೂ ಶೋಕಾರ್ತಳಾದ ತಾಯಿಯನ್ನೂ ಕಂಡ. ರಣವೃತ್ತಾಂತವನ್ನೂ ಕಾಮಧೇನು ದುಃಖದಿಂದ ಹೊರಟುಹೋದುದನ್ನೂ ತಿಳಿದ. 'ಅಪ್ಪ, ಅಮ್ಮ' ಎಂದು ಗೋಳಿಡುತ್ತ ಚಂದನಕಾಷ್ಠಗಳಿಗೆ ತುಪ್ಪ ಹೊಯ್ದು ಚಿತೆಯನ್ನು ಸಿದ್ಧಪಡಿಸಿದ. ರೇಣುಕೆ ಮಗನನ್ನು

ಅಪ್ಪಿ ಕಪೋಲ ಶಿರಸ್ಸುಗಳಲ್ಲಿ ಮುದ್ದಿಸಿ 'ಮಗು, ರಾಮ, ರಾಮ, ನಿನ್ನನ್ನು ಬಿಟ್ಟು ನಾನೆಲ್ಲಿಗೆ ಹೋಗಲಿ' ? ಎಂದು ಗೋಳಿಟ್ಟಳು. 'ನೀನು ನನಗೆ ಪ್ರಾಣಕ್ಕಿಂತ ಹೆಚ್ಚು. ನನ್ನ ಮಾತುಕೇಳು. ನಮ್ಮ ಉತ್ತರಕ್ರಿಯೆ ಮಾಡಿದ ಬಳಿಕ ಯುದ್ಧವನ್ನು ಮಾತ್ರ ಮಾಡಲೇಬೇಡ. ಮನೆಯಲ್ಲಿ ಸುಖವಾಗಿರು. ತಪಸ್ಸು ಮಾಡುತ್ತಿರು. ಕ್ಷತ್ರಿಯರು ಮಹಾಕ್ರೂರ ಸ್ವಭಾವದವರು. ಅವರೊಡನೆ ಯುದ್ಧದಿಂದ ಸುಖವಿಲ್ಲ' ಎಂದು ಉಪದೇಶಿಸಿದಳು. ಪರಶುರಾಮ ತಾಯಿಯ ಮಾತಿಗೆ ಕಿವಿಗೊಡದೆ 'ಇಪ್ಪತ್ತೊಂದು ಬಾರಿ ಭೂಪ್ರದಕ್ಷಿಣೆ ಮಾಡುವೆ, ಕ್ಷತ್ರಿಯರ ಸಂತತಿಯನ್ನೆ ಅಳಿಸುವೆ. ದುಷ್ಟಕ್ಷತ್ರಿಯ-ನಾದ ಆ ಕಾರ್ತವೀರ್ಯನನ್ನು ಅನಾಯಾಸದಿಂದ ಕೊಲ್ಲುವೆ. ಕ್ಷತ್ರಿಯರ ರಕ್ತದಿಂದಲೆ ಪಿತೃಗಳಿಗೆ ತರ್ಪಣ ನೀಡುವೆ' ಎಂದು ವೀರಪ್ರತಿಜ್ಞೆ ಮಾಡಿ ತಾಯಿಗೆ ಸಮಾಧಾನ ಹೇಳಿದ—

'ಅಮ್ಮ, ಕೇಳು, ತಂದೆಯ ಆಜ್ಞೆಯನ್ನು ಉಲ್ಲಂಘನೆ ಮಾಡುವವನನ್ನೂ ತಂದೆಯ ವಧೆ ಮಡುವವನನ್ನೂ ವಧೆ ಮಾಡದ ಮಗ ಮಹಾಮೂರ್ಖ. ರೌರವನರಕ ಭಾಗಿಯಾಗುತ್ತಾನೆ. ಅಗ್ನಿ ವಿಷ ಶಸ್ತ್ರಗಳಿಂದ ಕೊಲ್ಲುವವರು, ಹೊನ್ನು ಹೆಣ್ಣು ಮಣ್ಣುಗಳನ್ನು ಅಪಹರಿಸುವವರು, ತಂದೆ ತಾಯಿಗಳನ್ನೂ ಬಂಧುಗಳನ್ನೂ ಹಿಂಸಿಸು-ವವರು, ಸದಾ ಅಪಕಾರ ಮಾಡುವವ, ಸದಾ ನಿಂದೆ ಮಾಡುವವ, ಸದಾ ಕಟುನುಡಿ-ಗಳನ್ನಾಡುವವ, -ಹೀಗೆ ಹನ್ನೊಂದು ಬಗೆಯ ಮಹಾಪಾಪಿಗಳು ವಧಾರ್ಹರು. ಕಾರ್ತವೀರ್ಯ ತಂದೆಯನ್ನು ಕೊಂದ ಮಹಾಪಾಪಿ. ಬ್ರಹ್ಮ ಹತ್ಯೆಯನ್ನೂ ಮಾಡಿದ್ದಾನೆ. ಬ್ರಾಹ್ಮಣರ ಧನವನ್ನು ಅಪಹರಿಸುವುದು, ಅವರನ್ನು ಮನೆಯಿಂದ ಓಡಿಸುವುದು, ಮುಂಡನ ಮಾಡಿಸುವುದು, ಹೊಡೆಯುವುದು ಇವು ಕೂಡ ವಧೆಗೆ ಸಮಾನ. ರಾಜನೀಗ ಪ್ರತ್ಯಕ್ಷ ವಧೆಯನ್ನೆ ಮಾಡಿದ್ದಾನೆ. ಅವನನ್ನು ಬಿಟ್ಟು-ಬಿಡುವುದೆ ?' ಎನ್ನುತ್ತ ಶೋಕಿಸಿದ.

ಅಷ್ಟರಲ್ಲಿ ಭೃಗುಮುನಿ ಬಂದು ಪರಶುರಾಮನ ಶೋಕಾವೇಗವನ್ನು ಕಂಡು ಸಂತೈಸುತ್ತ ನುಡಿದ—

'ಮಗು, ರಾಮ, ನೀನು ನನ್ನ ವಂಶದಲ್ಲಿ ಹುಟ್ಟಿರುವೆ. ಜ್ಞಾನಿಯಾಗಿರುವೆ. ಇಂಥ ನೀನು ಶೋಕಿಸುವುದು ತರವಲ್ಲ. ಪ್ರಪಂಚದಲ್ಲಿ ಇರುವ ಚರಾಚರ ವಸ್ತುವೆಲ್ಲವೂ ನೀರಮೇಲಿನ ಗುಳ್ಳೆಯಂತೆ ಅಶಾಶ್ವತ. ಶಾಶ್ವತನಾದವ ಕೃಷ್ಣನೊಬ್ಬನೆ. ಅವನನ್ನೆ ಧ್ಯಾನಿಸುತ್ತಿರು. ಒಮ್ಮೆ ಹೋದುದು ಹೋಯಿತು. ತಿರುಗಿ ಬರಲಾರದು. ಏನು ಆಗುವುದೋ ಅದು ಆಗಿಯೆ ತೀರುವುದು. ಪೂರ್ವಾರ್ಜಿತ ಕರ್ಮಫಲವನ್ನು ಯಾರೂ ತಪ್ಪಿಸಿಕೊಳ್ಳಲಾರರು. ಭೂತಭವಿಷ್ಯ ವರ್ತಮಾನಗಳೆಲ್ಲ ಕೃಷ್ಣನ ಸಂಕಲ್ಪ-ದಂತಾಗುತ್ತದೆ. ಅವನ ಅಧೀನ ಎಲ್ಲರ ಕರ್ಮ. ಅದನ್ನು ಯಾರೂ ಮೀರಲಾರರು.

ಈ ಶರೀರ ಪಾಂಚಭೌತಿಕ. ಸ್ವಪ್ನದಂತೆ ಅಶಾಶ್ವತ. ಆತ್ಮ ಹೊರಟುಹೋದರೆ ಹಸಿವು ನಿದ್ದೆ ಶಾಂತಿ ಕ್ಷಮೆ ಎಲ್ಲವೂ ಇಲ್ಲವಾಗುತ್ತದೆ. ಶರೀರ-ಶರೀರ ಸಂಬಂಧವೂ ಇಲ್ಲವಾಗುತ್ತದೆ. ಯಾರು ಯಾರಿಗೆ ಶಾಶ್ವತ ತಂದೆ-ತಾಯಿಗಳು ? ಯಾರು ಯಾರಿಗೆ ಮಕ್ಕಳು ? ಸಂಸಾರದ ಸಮುದ್ರದಲ್ಲಿ ಕರ್ಮಗಳ ಅಲೆಗಳಿಗೆ ಸಿಕ್ಕು ಎಲ್ಲರೂ ಪರಸ್ಪರ ಸೇರುತ್ತಾರೆ, ಅಗಲುತ್ತಾರೆ. ಆದ್ದರಿಂದ ಜ್ಞಾನಿಗಳು ಬಂಧುಗಳ ಮರಣಕ್ಕೆ ಶೋಕಿಸುವುದಿಲ್ಲ. ನೀನೇಕೆ ಅಳುವೆ ? ಅತ್ತರೆ, ಕಣ್ಣೀರು ಸುರಿಸಿದರೆ, ಮೃತರು ನರಕದಲ್ಲಿ ಬೀಳುತ್ತಾರೆ. ತಾವೆ ಇಟ್ಟ ಹೆಸರಿನಿಂದ ಮೃತರನ್ನು ಕರೆಕರೆದು ನೂರುವರ್ಷ ಅತ್ತರೂ ಸರಿಯೆ. ಅವರು ಹಿಂತಿರುಗಿ ಬರುವುದಿಲ್ಲ. ಅವರು ಸತ್ತೊಡನೆ ಪಾಂಚ ಭೌತಿಕವಾದ ಶರೀರದ ಪಾರ್ಥಿವಾಂಶ ಪೃಥಿವಿಯನ್ನು ಸೇರುತ್ತದೆ. ಜಲ ತೇಜೋವಾಯು ಆಕಾಶಗಳ ಅಂಶಗಳೂ ಜಲ ತೇಜೋವಾಯು ಆಕಾಶಗಳಲ್ಲಿಯೆ ಸೇರುತ್ತವೆ. ಅತ್ತಮಾತ್ರಕ್ಕೆ ಅವೆಲ್ಲ ಹಿಂತಿರುಗಿ ಬರುತ್ತವೆ ಏನು ? ಆದ್ದರಿಂದ ನೀನು ಅಳಬೇಡ. ಮೃತನ ಆತ್ಮಶಾಂತಿಗಾಗಿ ವೇದೋಕ್ತವಾದ ಉತ್ತರಕ್ರಿಯೆ ಮಾಡು. ಪರಲೋಕದಲ್ಲಿ ಅವನಿಗೆ ಸುಖಸಿಗಲಿ. ಪರಲೋಕಸುಖಕ್ಕೆ ಬೇಕಾಗುವ ಕರ್ಮ ಮಾಡುವವನೆ ನಿಜವಾದ ಬಂಧು. ನಿಜವಾದ ಸುಪುತ್ರ.'

ಭೃಗುಮುನಿಯ ಈ ಮಾತುಗಳನ್ನು ಕೇಳಿ ಪರಶುರಾಮ ಅಳುವನ್ನು ನಿಲ್ಲಿಸಿದ. ರೇಣುಕೆ ಮುನಿಗೆ ಹೇಳತೊಡಗಿದಳು.

**ಇಲ್ಲಿಗೆ ಶ್ರೀ ಬ್ರಹ್ಮವೈವರ್ತ ಮಹಾಪುರಾಣದಲ್ಲಿ ಮೂರನೆಯದಾದ ಗಣಪತಿಖಂಡದ ನಾರದ ನಾರಾಯಣ ಸಂವಾದದಲ್ಲಿ ಜಮದಗ್ನಿ ಸಂಹಾರ ಪರಶುರಾಮ ಪ್ರತಿಜ್ಞಾದಿ ವರ್ಣನವೆಂಬ ಇಪ್ಪತ್ತೇಳನೆ ಅಧ್ಯಾಯ ಮುಗಿಯಿತು.**

# ರೇಣುಕೆಯ ಸಹಗಮನ, ಸಹಗಮನಕ್ಕೆ ಅನರ್ಹರಾದ ಸ್ತ್ರೀಯರು

**ಅಧ್ಯಾಯ-೨೮**

ರೇಣುಕೆ— ನನ್ನ ಅನೇಕ ಜನ್ಮಗಳ ಪುಣ್ಯದಿಂದ ತಾವು ಅನಿರೀಕ್ಷಿತವಾಗಿ ಇಲ್ಲಿಗೆ ಬಂದಿರುವಿರಿ. ನಾನು ಋತುಸ್ನಾತಳಾಗಿರುವ ಈ ದಿವಸ ಪತಿಮರಣ ಹೊಂದಿರುವುದರಿಂದ ಸಹಗಮನ ಮಾಡುತ್ತಿದ್ದೇನೆ. ಅದಕ್ಕೆ ಏನು ವ್ಯವಸ್ಥೆ ಮಾಡಬೇಕು, ಹೇಳು.

ಭೃಗು— ಮಹಾಪತಿವ್ರತೆಯಾದ ನೀನು ಸಹಗಮನ ಮಾಡುತ್ತಿರುವುದು ಪತಿಯು ಮಾಡಿದ ಪುಣ್ಯದ ಫಲವೆ ಸರಿ. ಋತುಸ್ನಾತಳಾದ ನೀನು ಪತಿಕಾರ್ಯದಲ್ಲಿ ಶುದ್ಧಳೇ ಆಗಿರುವೆ. ದೇವಕಾರ್ಯ ಪಿತೃಕಾರ್ಯಗಳಿಗೆ ಮಾತ್ರ ಋತುವಾದ ಐದನೆ ದಿವಸದವರೆಗೆ ಕಾಯಬೇಕಾಗುವುದು.

**ವ್ಯಾಲಗ್ರಾಹೀ ಯಥಾ ವ್ಯಾಲಂ ಬಿಲಾದುದ್ಧರತೇ ಬಲಾತ್ ।**
**ತದ್ವತ್ ಸ್ವಾಮಿನ ಮಾದಾಯ ಸಾಧ್ವೀ ಸ್ವರ್ಗಂ ಪ್ರಯಾತಿ ಚ ॥**

ಹಾವಾಡಿಗ ಹಾವನ್ನು ಬಿಲದಿಂದ ಹೇಗೆ ಬಲಾತ್ಕಾರದಿಂದ ಎತ್ತಿಕೊಳ್ಳುತ್ತಾನೋ ಹಾಗೇ ಪತಿವ್ರತೆ ತನ್ನ ಪತಿಯನ್ನು ಜೊತೆಗೆ ಕರೆದುಕೊಂಡೇ ಸ್ವರ್ಗಕ್ಕೆ ಹೋಗುತ್ತಾಳೆ.

ತಂದೆ ತಾಯಿಗಳಿಗೆ ಭಕ್ತಿಯಿಂದ ಪಿಂಡದಾನ ಮಾಡುವವನೆ ಪುತ್ರ. ಪತಿಯೊಡನೆ ಪರಲೋಕಕ್ಕೂ ನಡೆಯುವವಳೆ ಸತಿ. ಕಷ್ಟಕಾಲದಲ್ಲಿ ಸಹಾಯಹಸ್ತ ನೀಡುವವನೆ ಬಂಧು. ಗುರುವನ್ನು ಭಕ್ತಿಯಿಂದ ಆದರಿಸುವವನೆ ಶಿಷ್ಯ. ಆಪತ್ತುಗಳಲ್ಲಿ ರಕ್ಷಣೆ ನೀಡುವವನೆ ಇಷ್ಟದೈವ. ಪ್ರಜೆಗಳನ್ನು ಪ್ರೇಮದಿಂದ ಪಾಲಿಸುವವನೆ ರಾಜ. ಸತಿಗೆ ಧರ್ಮಬುದ್ಧಿ ನೀಡಬಲ್ಲವನೆ ಪತಿ. ಧರ್ಮೋಪದೇಶ ನೀಡುತ್ತ ಹರಿಭಕ್ತಿಯನ್ನು ಪ್ರಚೋದಿಸುವವನೆ ಗುರು. ವೇದ ಪುರಾಣಗಳಲ್ಲೆಲ್ಲ ಇವರನ್ನೆ ಪ್ರಶಂಸೆ ಮಾಡುವುದು ಕಂಡಿದೆ.

ರೇಣುಕೆ— ಪತಿಯೊಡನೆ ಸಹಗಮನಕ್ಕೆ ಯೋಗ್ಯಳಾದ ನಾರಿ ಯಾರು ? ಅಯೋಗ್ಯಳು ಯಾರು, ಹೇಳು.

ಭೃಗು— ಸಣ್ಣಮಗುವಿನ ತಾಯಿ, ಗರ್ಭಿಣಿ, ಋತುಮತಿಯಾಗದಿದ್ದವಳು, ಮುಟ್ಟಾದವಳು. ವ್ಯಭಿಚಾರಿಣಿ, ಕುಷ್ಠಾದಿರೋಗಗ್ರಸ್ತಳು, ಪತಿಸೇವೆ ಮಾಡದವಳು, ದೈವಭಕ್ತಿರಹಿತಳು, ಕಟುನುಡಿ ನುಡಿವವಳು ಇವರೆಲ್ಲ ಸಹಗಮನಕ್ಕೆ ಯೋಗ್ಯರಲ್ಲ. ಸಹಗಮನ ಮಾಡಿದರೂ ಪತಿಲೋಕ ಅವರಿಗೆ ಸಿಗುವುದಿಲ್ಲ. ಮೊದಲಿಗೆ ಪತಿಯ ಶರೀರವನ್ನು ಚಿತೆಯಲ್ಲಿ ಮಲಗಿಸಿ ಸಂಸ್ಕಾರಮಾಡಿದ ಅಗ್ನಿ ಇಟ್ಟು ಸಹಗಮನ ಮಾಡಿದರೆ ಪತಿಲೋಕ ಪ್ರಾಪ್ತವಾಗುವುದು. ಅವಳು ಸ್ವರ್ಗದಲ್ಲಿ ಪತಿಯೊಡನೆ ಸುಖ

ಅನುಭವಿಸಿ ಜನ್ಮಜನ್ಮಗಳಲ್ಲಿ ಪತಿಯನ್ನು ಹಿಂಬಾಲಿಸುವಳು. ಪತಿ ವಿಷ್ಣುಭಕ್ತನಾಗಿದ್ದಲ್ಲಿ ಅವನ ಜೊತೆಗೆ ವೈಕುಂಠಕ್ಕೂ ಹೋಗುವಳು. ಅವರಿಬ್ಬರೂ ಶಾಶ್ವತವಾಗಿ ವೈಕುಂಠದಲ್ಲಿ ಲಕ್ಷ್ಮೀನಾರಾಯಣರನ್ನು ಸೇವಿಸುತ್ತ ಸುಖವಾಗಿರುವರು. ಮಹಾಪ್ರಳಯದಲ್ಲಿಯೂ ಅವರಿಗೆ ಮರಣ ಉಂಟಾಗುವುದಿಲ್ಲ.'

ಭೃಗುಮುನಿ ಹೀಗೆ ರೇಣುಕೆಗೆ ಉಪದೇಶಿಸಿ ಪರಶುರಾಮನಿಗೂ ಸಮಯೋಚಿತವಾಗಿ ಹೀಗೆ ಹೇಳಿದ—

'ಮಗು, ಬಾ. ಶೋಕವನ್ನು ಬಿಡು. ಅದು ಮಂಗಳಕರವಲ್ಲ. ತಂದೆಯ ಶರೀರವನ್ನು ದಕ್ಷಿಣದಿಕ್ಕಿಗೆ ತಲೆ ಮಾಡಿ ಮೇಲ್ಮುಖವಾಗಿ ಮಲಗಿಸು. ಹೊಸವಸ್ತ್ರ ಉಡಿಸಿ ಯಜ್ಞೋಪವೀತವನ್ನೂ ಹಾಕು. ಕಣ್ಣೀರು ಹಾಕದೆ ದಕ್ಷಿಣಾಭಿಮುಖವಾಗಿ ನಿಂತು ಅರಣಿಮಥನದಿಂದ ಉತ್ಪನ್ನವಾದ ಅಗ್ನಿಯನ್ನು ಹಿಡಿದುಕೊಂಡು ಭೂಮಿಯಲ್ಲಿರುವ ಎಲ್ಲ ತೀರ್ಥಗಳನ್ನೂ ಸ್ಮರಿಸು. ಎಲ್ಲ ಪುಣ್ಯಕ್ಷೇತ್ರಗಳನ್ನೂ ಪರ್ವತಗಳನ್ನೂ ಸ್ಮರಿಸು. ಗಯಾ, ಕುರುಕ್ಷೇತ್ರ, ಕಾಶಿ, ಪುಷ್ಕರ, ವಾರಾಣಸಿ, ಪ್ರಯಾಗ, ವೃಂದಾವನ, ಹರಿದ್ವಾರ, ಬದರೀ, ರೈವತ, ವರಾಹ, ಶ್ರೀಶೈಲ, ಗಂಧಮಾದನ, ಹಿಮಾಲಯ, ಕೈಲಾಸ, ಮೇರು, ಗಂಗಾ, ಯಮುನಾ, ಕೌಶಿಕೀ, ಚಂದ್ರಭಾಗಾ, ಗಂಡಕೀ, ಪನಸಾ, ಸರಯೂ, ಪುಷ್ಪಭದ್ರಾ, ಭದ್ರಾ, ನರ್ಮದಾ, ಸರಸ್ವತೀ, ಗೋದಾವರೀ, ಕಾವೇರೀ, ಸ್ವರ್ಣರೇಖಾ ಇವುಗಳನ್ನು ಪುನಃ ಪುನಃ ಸ್ಮರಿಸಿ, ಚಂದನ ಅಗುರು ಕಸ್ತೂರಿ ಸುಗಂಧಪುಷ್ಪಗಳನ್ನು ತಂದೆಯ ಶರೀರದ ಮೇಲಿಟ್ಟು ಬಟ್ಟೆಹೊದಿಸಿ ಚಿತೆಯಮೇಲಿಡು. ಚಿನ್ನದ ಕಡ್ಡಿಯಿಂದ ಕಿವಿಕಣ್ಣು ಮೂಗು ಬಾಯಿಗಳಲ್ಲಿ ಮಥನಮಾಡಿ ಅದನ್ನು ಬ್ರಾಹ್ಮಣರಿಗೆ ದಾನಮಾಡು. ತಿಲಪೂರ್ಣ ತಾಮ್ರಪಾತ್ರೆ, ಗೋವು ಚಿನ್ನ ಬೆಳ್ಳಿಗಳನ್ನು ದಕ್ಷಿಣೆಯೊಂದಿಗೆ ಕೊಡು. ತಂದೆಯ ಶರೀರಕ್ಕೆ ಅಗ್ನಿ ನೀಡು.

ಓಂ ಕೃತ್ವಾ ದುಷ್ಕೃತಂ ಕರ್ಮ ಜಾನತಾ ವಾಪ್ಯಜಾನತಾ<br>
ಮೃತ್ಯುಕಾಲವಶಂ ಪ್ರಾಪ್ಯ ನರಂ ಪಂಚತ್ವಮಾಗತಂ ।<br>
ಧರ್ಮಾಧರ್ಮ ಸಮಾಯುಕ್ತಂ ಲೋಭಮೋಹ ಸಮಾವೃತಂ<br>
ದಹ ಸರ್ವಾಣಿ ಗಾತ್ರಾಣಿ ದಿವ್ಯಾಂಲ್ಲೋಕಾನ್ ಸ ಗಚ್ಛತು ॥

'ಈ ಮಾನವ ತಿಳಿದೋ ತಿಳಿಯದೆಯೋ ದುಷ್ಕರ್ಮ ಮಾಡಿರಬಹುದು. ಲೋಭಮೋಹಗಳಿಗೆ ವಶನಾಗಿ ಪುಣ್ಯವನ್ನೋ ಪಾಪವನ್ನೋ ಗಳಿಸಿರಬಹುದು. ಮೃತ್ಯುವಿಗೂ ಯಮನಿಗೂ ವಶನಾಗಿ ಮರಣ ಹೊಂದಿರುವ ಈತನ ಎಲ್ಲ ಅಂಗಗಳನ್ನೂ, ಓ ಅಗ್ನಿಯೆ, ನೀನು ಸುಡು. ಅದರಿಂದ ಅವನು ದಿವ್ಯಲೋಕವನ್ನು ಹೊಂದಲಿ.'

ಈ ಮಂತ್ರವನ್ನು ಹೇಳಿ ಚಿತೆಗೆ ಪ್ರದಕ್ಷಿಣೆ ಮಾಡಿ ಹರಿಸ್ಮರಣ ಪೂರ್ವಕವಾಗಿ 'ಓಂ ಅಸ್ಮತ್ಕುಲೇ ತ್ವಂ ಜಾತೋಽಸಿ ತ್ವದೀಯೋ ಜಾಯತಾಂ ಪುನಃ । ಅಸೌ ಸ್ವರ್ಗಾಯ ಲೋಕಾಯ ಸ್ವಾಹಾ.'

'ನೀನು ನಮ್ಮ ಕುಲದಲ್ಲಿ ಹುಟ್ಟಿದೆ. ನಿನ್ನವರು ಇನ್ನೂ ನಮ್ಮ ಕುಲದಲ್ಲಿ ಹುಟ್ಟಲಿ. ನೀನು ಸ್ವರ್ಗವನ್ನು ಸೇರು.' -ಈ ಮಂತ್ರದಿಂದ ಸೋದರರೊಂದಿಗೆ ನೀನು ತಂದೆಯ ತಲೆಯ ಮೇಲೆ ಅಗ್ನಿ ಇಡು.'

ಭೃಗುಮುನಿಯ ಆದೇಶದಂತೆ ಪರಶುರಾಮ ಸೋದರರೊಂದಿಗೆ ತಂದೆಯ ತಲೆಯ ಮೇಲೆ ಅಗ್ನಿಯನ್ನಿಟ್ಟ.

ರೇಣುಕೆ ಪರಶುರಾಮನನ್ನು ಆಲಿಂಗಿಸಿ ಹಿತೋಪದೇಶ ಮಾಡಿದಳು-

**'ಅವಿರೋಧೋ ಭವಾಬ್ಧೌ ಚ ಸರ್ವಮಂಗಲಮಂಗಲಂ ।**
**ವಿರೋಧೋ ನಾಶಬೀಜಂ ಚ ಸರ್ವೋಪದ್ರವಕಾರಣಂ ॥**

ಈ ಸಂಸಾರ ಸಾಗರದಲ್ಲಿ ಮುಳುಗಿರುವವರಿಗೆ ಪರಸ್ಪರ ವಿರೋಧವಿಲ್ಲದೆ ಸೌಹಾರ್ದದಿಂದಿರುವುದೆ ಪರಮ ಶ್ರೇಯಸ್ಕರ. ವಿರೋಧ ನಾಶಕ್ಕೆ ಕಾರಣ. ಸಕಲ ಉಪದ್ರವಗಳಿಗೂ ಕಾರಣ.

ಕ್ರೂರರಾದ ಕ್ಷತ್ರಿಯರ ಜೊತೆಗಂತೂ ವಿರೋಧ ಮಾಡಲೆಬಾರದು. ನನ್ನ ಮಾತು ಕೇಳಿ ಪ್ರತಿಜ್ಞೆಮಾಡು. ನಿನಗೆ ದಿವ್ಯವಾದ ಮಂತ್ರಾಲೋಚನೆ ಕೊಡುವ ಬ್ರಹ್ಮನೊಡನೆಯೂ ಈ ಭೃಗು ಮುನಿಯೊಡನೆಯೂ ಚೆನ್ನಾಗಿ ಆಲೋಚಿಸಿಯೆ ಕರ್ತವ್ಯ ನಿರ್ಧಾರ ಮಾಡು. ಸಜ್ಜನರೊಡನೆ ಸಮಾಲೋಚನೆ ನಡೆಸುವುದು ಯಾವಾಗಲೂ ಶುಭಕರ.'

ಹೀಗೆ ಮಗನಿಗೆ ಉಪದೇಶ ನೀಡಿ ರೇಣುಕೆ ಪತಿಯನ್ನು ಎದೆಗೆ ತಬ್ಬಿಕೊಂಡು ಅವನನ್ನೆ ನೋಡುತ್ತ ಹರಿಸ್ಮರಣೆ ಮಾಡುತ್ತ ಚಿತೆಯ ಮೇಲೆ ಮಲಗಿದಳು. ಅಗ್ನಿ ಪ್ರಜ್ವಲಿಸಿತು. ರಾಮ ರಾಮ ರಾಮ ಎನ್ನುತ್ತ, ಪರಶುರಾಮ ನೋಡುತ್ತಿದ್ದಂತೆಯೆ ರೇಣುಕೆ ಭಸ್ಮೀಭೂತಳಾದಳು. 'ರಾಮ' ಎಂಬ ಹರಿನಾಮದ ಉಚ್ಚಾರಣೆಯನ್ನು ಕೇಳಿದ ಮಾತ್ರಕ್ಕೆ ಶ್ಯಾಮವರ್ಣದ ಚತುರ್ಭುಜರಾದ ವಿಷ್ಣುದೂತರು ರಥದಲ್ಲಿ ಕುಳಿತು ಅಲ್ಲಿಗೆ ಬಂದರು. ರಥದಲ್ಲಿ ರೇಣುಕೆಯನ್ನೂ ಜಮದಗ್ನಿಯನ್ನೂ ಕುಳ್ಳಿರಿಸಿಕೊಂಡು ಹರಿಸನ್ನಿಧಿಗೊಯ್ದರು. ದಂಪತಿಗಳು ಅತ್ಯಂತ ಮಂಗಳಕರವಾದ ಹರಿಯ ಕೈಂಕರ್ಯ ಮಾಡತೊಡಗಿದರು.

ಇತ್ತ ಪರಶುರಾಮ ಭೃಗುಮುನಿಯ ಮತ್ತು ಬ್ರಾಹ್ಮಣರ ಸಮ್ಮುಖದಲ್ಲಿ ತಂದೆ ತಾಯಿಗಳ ಉತ್ತರಕ್ರಿಯೆ ಮಾಡಿ ಬ್ರಾಹ್ಮಣರಿಗೆ ಗೋ, ಭೂ, ಸುವರ್ಣ, ವಸ್ತ್ರ,

ಶಯ್ಯೆ, ಅನ್ನ, ಜಲ, ಗಂಧ, ರತ್ನದೀಪ, ಸುವರ್ಣದ ಆಸನ, ತಾಂಬೂಲ, ಛತ್ರ, ಪಾದುಕೆ, ಫಲ, ಮಾಲ್ಯ, ಮಿಷ್ಟಾನ್ನ ಮುಂತಾದುವನ್ನೂ ದ್ರವ್ಯವನ್ನೂ ದಾನಮಾಡಿ ಬ್ರಹ್ಮಲೋಕಕ್ಕೆ ತೆರಳಿದ.

ಬ್ರಹ್ಮಲೋಕವೆಲ್ಲ ಸುವರ್ಣಮಯ. ಸುವರ್ಣದ ಕೋಟೆಗಳಿಂದ, ಸುವರ್ಣದ ಸ್ತಂಭಗಳಿಂದ ಶೋಭಿಸುವ ಆ ಲೋಕದಲ್ಲಿ ರತ್ನಾಭರಣ ಭೂಷಿತನಾಗಿ ರತ್ನ-ಸಿಂಹಾಸನದಲ್ಲಿ ಕುಳಿತು ತಪಸ್ವಿಗಳಾದ ಮುನೀಂದ್ರರಿಂದ ಪರಿವೃತನಾಗಿ ವಿದ್ಯಾಧರಿ-ಯರ ಸಂಗೀತ ನೃತ್ಯಗಳನ್ನು ಸವಿಯುತ್ತ ವಿರಾಜಮಾನನಾಗಿದ್ದ ಬ್ರಹ್ಮನ ಬಳಿಗೆ ಪರಶುರಾಮ ಬಂದ. ತಪಸ್ಸುಗಳಿಗೆ ಫಲ ನೀಡುವವ ಸರ್ವಸಂಪತ್ತುಗಳನ್ನು ಕೊಡುವವ, ಸರ್ವ ಪ್ರಪಂಚ ನಿರ್ಮಾಣ ಮಾಡಿ ಪೋಷಿಸುವವ, ಬ್ರಹ್ಮ. ಸಂಗೀತ ನೃತ್ಯಗಳನ್ನು ಸವಿಯುತ್ತಲೆ ಹೃದಯದಲ್ಲಿ ಕೃಷ್ಣ ಪರಮಾತ್ಮನ ನಾಮ ಜಪಿಸುತ್ತಿದ್ದ. ಶಿಷ್ಯಸಮೂಹ ಕೇಳುವ ಪ್ರಶ್ನೆಗಳಿಗೆಲ್ಲ ಸಮಾಧಾನ ನೀಡುತ್ತಿದ್ದ. ರಹಸ್ಯವಾದ ಯೋಗಶಾಸ್ತ್ರವನ್ನು ಬೋಧಿಸುತ್ತಿದ್ದ. ಇಂಥ ಬ್ರಹ್ಮನನ್ನು ಕಂಡು ಪರಶುರಾಮ ಭಕ್ತಿಯಿಂದ ನಮಿಸಿ ಗಟ್ಟಿಯಾಗಿ ಅತ್ತು ತನ್ನ ವೃತ್ತಾಂತವನ್ನು ಹೇಳಿದ.

ಪರಶುರಾಮ— ನಾನು ನಿನ್ನ ವಂಶದಲ್ಲಿ ಜನಿಸಿದವ. ಜಮದಗ್ನಿಯ ಮಗ. ನೀನು ಪಿತಾಮಹ. ಎಲ್ಲವನ್ನೂ ತಿಳಿದಿರುವ ನಿನಗೆ ನಾನೇನು ಹೇಳಲಿ ? ಕಾರ್ತವೀರ್ಯಾರ್ಜುನ ಬೇಟೆಗೆಂದು ಬಂದು ನಮ್ಮ ಆಶ್ರಮದ ಬಳಿ ಉಪವಾಸ-ವಿದ್ದಾಗ ನನ್ನ ತಂದೆ ಅವನನ್ನು ಆಶ್ರಮಕ್ಕೆ ಕರೆಸಿಕೊಂಡು ಕಾಮಧೇನು ಕೊಟ್ಟ ಮಿಷ್ಟಾನ್ನದಿಂದ ಉಪಚರಿಸಿದ. ರಾಜ ಕಾಮಧೇನುವಿನ ಮೇಲಿನ ದುರಾಸೆಯಿಂದ ತಂದೆಯನ್ನೆ ಕೊಂದ. ಪತಿವ್ರತಾಶಿರೋಮಣಿಯಾದ ನನ್ನ ಮಾತೆ ಪಿತನ ಚಿತೆಯೇರಿ ಸಹಗಮನ ಮಾಡಿದಳು. ನನ್ನನ್ನು ಅನಾಥಳನ್ನಾಗಿ ಮಾಡಿದಳು. ನನಗೆ ಈಗ ಯಾರೂ ದಿಕ್ಕಿಲ್ಲ. ತಾಯಿ ತಂದೆ ಗುರು ಬಂಧು ಎಲ್ಲವೂ ನನಗೆ ನೀನೆ. ನಿನ್ನಾಸರೆ-ಯನ್ನೆ ಬೇಡುತ್ತಿದ್ದೇನೆ. ಸಹಗಮನಕ್ಕೆ ಮುನ್ನ ಮಾತೆ ನನಗೆ ನೀಡಿದ ಆದೇಶದಂತೆ ನಾ ನಿನ್ನ ಬಳಿಗೆ ಬಂದಿದ್ದೇನೆ. ಈಗ ನನ್ನ ವೈರಿಯ ವಧವಾಗಬೇಕಾಗಿದೆ. ಬೇರೆ ಉಪಾಯವಿಲ್ಲ. ದೀನರನ್ನು ಕಾಪಾಡುವವನೆ ರಾಜ. ಅವನೆ ಧರ್ಮಿಷ್ಠ ಪೂಜ್ಯ. ಅವನಲ್ಲಿಯೆ ಸಂಪತ್ತು ಸ್ಥಿರವಾಗಿರುತ್ತದೆ. ಧನಿಕರು ದರಿದ್ರರೆನ್ನದೆ ಎಲ್ಲ ಪ್ರಜೆಗಳನ್ನೂ ಸಮಾನವಾಗಿ ಪ್ರೀತಿಸಿ ಕಾಪಾಡಬೇಕು ರಾಜ. ಹಾಗೆ ಮಾಡದ ಈ ಕಾರ್ತವೀರ್ಯ ರಾಜ್ಯ ಕಳೆದುಕೊಳ್ಳುತ್ತಾನೆ. ಲಕ್ಷ್ಮಿ ಕುಪಿತಳಾಗಿ ಅವನಿಂದ ದೂರವಾಗುತ್ತಾಳೆ.

ಹೀಗೆ ಹೇಳುತ್ತ ಪರಶುರಾಮ ತನ್ನ ದುಷ್ಟ ಕ್ಷತ್ರಿಯ ವಧೆಯ ಘೋರ ಪ್ರತಿಜ್ಞೆ-ಯನ್ನು ಬ್ರಹ್ಮನಿಗೆ ತಿಳಿಸಿದ. ಬ್ರಹ್ಮ ಎಲ್ಲವನ್ನೂ ಕೇಳಿ ಪರಶುರಾಮನನ್ನು ಆಶೀರ್ವದಿಸಿ ಎದೆಗಪ್ಪಿಕೊಂಡ. ಹಿತವನ್ನು ಬೋಧಿಸಿದ.

ಬ್ರಹ್ಮ— ನಿನ್ನ ಪ್ರತಿಜ್ಞೆ ಬಹಳ ದುಷ್ಕರ. ಬಹು ಜೀವಹತ್ಯೆಗೆ ಕಾರಣವಾಗುತ್ತದೆ. ಈ ಸೃಷ್ಟಿಯನ್ನು ಪರಮಾತ್ಮನ ಆಜ್ಞೆಯಿಂದ ಬಹಳ ಶ್ರಮಪಟ್ಟು ಮಾಡಿದ್ದೇನೆ. ಸೃಷ್ಟಿಯನ್ನೆ ನಾಶ ಮಾಡುವ ನಿನ್ನ ಪ್ರತಿಜ್ಞೆ ಕ್ರೂರ, ದಾರುಣ. ಇಪ್ಪತ್ತೊಂದು ಬಾರಿ ಕ್ಷತ್ರಿಯ ಸಂತತಿಯನ್ನು ಅಳಿಸಲು ಹೊರಟಿರುವೆ. ಒಬ್ಬ ಕ್ಷತ್ರಿಯ ಮಾಡಿದ ಅಪರಾಧಕ್ಕೆ ಕ್ಷತ್ರಿಯ ಜಾತಿಯನ್ನೇ ನಾಶ ಪಡಿಸುತ್ತಿರುವೆ. ಆದರೂ ಅದು ಪುನಃ ಹುಟ್ಟಿ-ಕೊಳ್ಳುವುದು ನಿಶ್ಚಿತ. ಬ್ರಾಹ್ಮಣಾದಿ ನಾಲ್ಕು ವರ್ಣಗಳೂ ಹರಿಯಿಂದ ಸದಾ ಆವಿರ್ಭೂತವಾಗುತ್ತವೆ, ತಿರೋಧಾನ ಹೊಂದುತ್ತವೆ.

ಮಗು, ನೀನು ಸಾಧಿಸಲು ಹೊರಟಿರುವ ಕಾರ್ಯ ಶ್ರಮಸಾಧ್ಯ. ಅದಕ್ಕೆ ನೀನು ಶಿವಲೋಕಕ್ಕೆ ಹೋಗಿ ಶಿವನನ್ನು ಆಶ್ರಯಿಸು. ಭೂಮಿಯಲ್ಲಿರುವ ರಾಜರುಗಳಲ್ಲೆಲ್ಲ ಹೆಚ್ಚಿನವರು ಶಿವಭಕ್ತರು. ಶಿವನ ಇಚ್ಛೆ ಇಲ್ಲದೆ ಅವರನ್ನು ಯಾರೂ ಕೊಲ್ಲಲಾರರು. ಅವರು ಶಿವಶಕ್ತಿಯ ದಿವ್ಯಕವಚ ತೊಟ್ಟಿರುತ್ತಾರೆ. ನೀನು ನಿನ್ನ ಕಾರ್ಯದಲ್ಲಿ ಜಯಗಳಿಸಲು ಸರಿಯಾದ ಉಪಾಯ ಹೂಡು.

**ಉಪಾಯತಃ ಸಮಾರಬ್ಧಾಃ ಸರ್ವೇ ಸಿಧ್ಯಂತ್ಯುಪಕ್ರಮಾಃ**

ಉಪಾಯದಿಂದ ಸಾಧಿಸಿದರೆ ಎಲ್ಲ ಕಾರ್ಯವೂ ಸಿದ್ಧಿಸುವುದು.

ಆದರಿಂದ ನೀನು ಶಿವನಿಂದ ಕೃಷ್ಣಮಂತ್ರದ ಕವಚವನ್ನು ಸ್ವೀಕರಿಸು. ವೈಷ್ಣವ ತೇಜಸ್ಸು ಬಹಳ ದುರ್ಲಭ. ಅದು ಶೈವ ಅಥವಾ ಶಾಕ್ತತೇಜಸ್ಸನ್ನು ಮೀರಿಸಬಲ್ಲುದು. ನಿನಗೆ ಜನ್ಮಜನ್ಮಗಳಲ್ಲಿಯೂ ಜಗದೀಶ್ವರನಾದ ಶಿವನೆ ಗುರು. ಆದರಿಂದ ನಾನು ನಿನಗೆ ಮಂತ್ರೋಪದೇಶ ನೀಡುವುದು ಯುಕ್ತವಲ್ಲ. ಯಾವುದು ಯುಕ್ತವೆನಿಸು-ವುದೋ ಅದೇ ವಿಧಿವಿಹಿತವೆನಿಸುವುದು. ತ್ರೈಲೋಕ್ಯ ವಿಜಯ ಎಂದೆನಿಸುವ ಆ ಕೃಷ್ಣಮಂತ್ರ ಕವಚವನ್ನು ಶಿವನಿಂದ ನೀನು ಪಡೆದೆಯಾದರೆ ಇಪ್ಪತ್ತೊಂದು ಬಾರಿ ಭೂಮಿಯಲ್ಲಿ ಕ್ಷತ್ರಿಯ ಸಂತತಿಯನ್ನು ನಾಶಗೊಳಿಸಬಲ್ಲೆ. ದಿವ್ಯವಾದ ಪಾಶುಪತವನ್ನು ಶಿವ ನಿನಗೆ ನೀಡುತ್ತಾನೆ. ಆ ಮಂತ್ರದಿಂದ ನೀನು ಎಲ್ಲ ಕ್ಷತ್ರಿಯರನ್ನೂ ಪರಾಭವಗೊಳಿಸುವೆ.

**ಇಲ್ಲಿಗೆ ಶ್ರೀ ಬ್ರಹ್ಮವೈವರ್ತ ಮಹಾಪುರಾಣದಲ್ಲಿ ಮೂರನೆಯದಾದ ಗಣಪತಿಖಂಡದ ನಾರದ ನಾರಾಯಣ ಸಂವಾದದಲ್ಲಿ ಪರಶುರಾಮನ ಬ್ರಹ್ಮಲೋಕಗಮನ ಬ್ರಹ್ಮೋಕ್ತೋಪಾಯ ವರ್ಣನ ಎಂಬ ಇಪ್ಪತ್ತೆಂಟನೆ ಅಧ್ಯಾಯ ಮುಗಿಯಿತು.**

# ಪರಶುರಾಮನ ಕೈಲಾಸಗಮನ ಮತ್ತು ಶಿವಸ್ತುತಿ

ಅಧ್ಯಾಯ-೨೯

ಬ್ರಹ್ಮನ ಮಾತನ್ನು ಕೇಳಿ ಪರಶುರಾಮ ಅವನನ್ನು ವಂದಿಸಿ ವರ ಪಡೆದು ಶಿವಲೋಕಕ್ಕೆ ಹೊರಟ. ಬ್ರಹ್ಮಲೋಕಕ್ಕಿಂತ ಲಕ್ಷಯೋಜನ ಎತ್ತರದಲ್ಲಿ ಶಿವಲೋಕ-ವಿದೆ. ಅದು ವರ್ಣನಾತೀತ. ಅದರ ಬಲಗಡೆ ವೈಕುಂಠಲೋಕವಿದೆ. ಎಡಗಡೆ ಗೌರೀ ಲೋಕ. ಕೆಳಗಡೆ ಎಲ್ಲ ಲೋಕಗಳಿಗಿಂತ ಮೇಲೆ ಧ್ರುವಲೋಕ. ಇವೆಲ್ಲಕ್ಕಿಂತ ಮೇಲಿರುವುದು ಗೋಲೋಕ. ಅದಕ್ಕಿಂತ ಮೇಲೆ ಯಾವ ಲೋಕವೂ ಇಲ್ಲ. ಮನೋವೇಗದಿಂದ ಹೋಗಬಲ್ಲ ಯೋಗೀಶ್ವರನಾದ ಪರಶುರಾಮ ಅನುಪಮವಾದ ಆ ಶಿವಲೋಕವನ್ನು ಹೋಗಿ ಸೇರಿದ.

ಶಿವಲೋಕ ಕೋಟಿಕಲ್ಪಗಳಲ್ಲಿ ತಪಸ್ಸು ಮಾಡಿ ಪುಣ್ಯಗಳಿಸಿದ ಯೋಗೀಶ್ವರರು ವಾಸ ಮಾಡುವ ಸ್ಥಳ. ಬೇಡಿದ್ದನ್ನು ಕೊಡುವ ಕಲ್ಪವೃಕ್ಷಗಳು ಕಾಮಧೇನುಗಳು ಅಲ್ಲಿ ಅಸಂಖ್ಯವಾಗಿವೆ. ಪಾರಿಜಾತದ ಉದ್ಯಾನಗಳು ಎಲ್ಲೆಲ್ಲೂ ಕಂಗೊಳಿಸುತ್ತವೆ. ರತ್ನ-ಮಯವಾದ ವೇದಿಕೆಗಳೂ ರಾಜಮಾರ್ಗಗಳೂ ಮನೆಮಠಗಳೂ ಎಲ್ಲೆಡೆ ಕಂಡುಬರುತ್ತವೆ. ನಡುವೆ ಶಿವನ ಮಂದಿರವಿದೆ. ಅದಕ್ಕೆ ಮಣಿಮಯ ಪ್ರಾಕಾರಗಳಿವೆ. ಹದಿನಾರು ಮಹಾದ್ವಾರಗಳು. ಹಾಲಿನಂತೆ ಬಿಳಿಯಾಗಿ ಗಗನ ಚುಂಬಿಯಾಗಿ ಅಮೂಲ್ಯ ರತ್ನಕಲಶಗಳಿಂದ, ಮಾಣಿಕ್ಯ ಹಾರಗಳಿಂದ, ಚಿತ್ರವಿಚಿತ್ರ ಗೋಡೆಗಳಿಂದ ಶೋಭಿಸುವ ಆ ಮಂದಿರದ ಸಿಂಹದ್ವಾರಕ್ಕೆ ಬಂದಾಗ ಕೃಷ್ಣವರ್ಣದ ಕೆಂಗಣ್ಣ ಕರಾಳ ಆಕೃತಿಯ ದ್ವಾರಪಾಲಕರು ಇದಿರಾದರು. ಅವರು ಮೈಗೆ ವಿಭೂತಿ ಬಳಿದುಕೊಂಡು ಹುಲಿದೊವಲನ್ನು ಉಟ್ಟಿದ್ದರು. ಜಟಾಧಾರಿಗಳಾಗಿ ತ್ರಿಶೂಲ ಪಟ್ಟಿಶ ಧರಿಸಿ ಬ್ರಹ್ಮ-ತೇಸ್ಸಿನಿಂದ ಜ್ವಲಿಸುವ ಮೂರುಕಣ್ಣುಗಳುಳ್ಳ ಆ ದ್ವಾರಪಾಲಕರನ್ನು ಕಂಡು ಪರಶುರಾಮ ಭೀತನಾಗಿ ವಿನಯದಿಂದ ತನ್ನ ವೃತ್ತಾಂತವನ್ನೆಲ್ಲ ಸಂಕ್ಷೇಪವಾಗಿ ತಿಳಿಸಿದ. ಅವರು ದಯೆದೋರಿ ದೂತರ ಮೂಲಕ ಶಿವನಾಜ್ಞೆ ಪಡೆದು ಅವನನ್ನು ಒಳಗೆ ಬಿಟ್ಟರು. ಆತ ಒಳಗೆ ಬಂದು ಸಿದ್ಧರಿಂದಲೂ ಮಹರ್ಷಿಗಳಿಂದಲೂ ತುಂಬಿದ, ಪಾರಿಜಾತ ಹೂಗಳ ಸುಗಂಧದಿಂದ ಸುವಾಸಿತವಾದ ಶಿವನ ಓಲಗವನ್ನು ಪ್ರವೇಶಿಸಿದ.

ಅಲ್ಲಿ ಶಿವ ಮೈಗೆ ವಿಭೂತಿ ಬಳಿದುಕೊಂಡು ಹುಲಿದೊವಲುಟ್ಟು ನಾಗ ಯಜ್ಞೋಪವೀತ ಧರಿಸಿದ್ದ. ರತ್ನಾಭರಣ ಭೂಷಿತನಾಗಿ ಕೋಟಿ ಸೂರ್ಯರಂತೆ ಹೊಳೆಯುತ್ತ ಪಾರ್ವತೀ ಸಹಿತನಾಗಿ ಪ್ರಸನ್ನ ಮುಖದಿಂದ ಭಕ್ತರನ್ನು ಅನುಗ್ರಹಿಸು-ತ್ತಿದ್ದ. ಶಿಷ್ಯರಿಗೆ ಪರಮಾತ್ಮ ತತ್ವವನ್ನು ಉಪದೇಶಿಸುತ್ತಿದ್ದ. ಪರಂಜ್ಯೋತಿಃ ಸ್ವರೂಪನಾದ ಕೃಷ್ಣಪರಮಾತ್ಮನ ಧ್ಯಾನದಲ್ಲಿ ಆನಂದದಿಂದ ಮೈರೋಮಾಂಚ-

ಗೊಂಡು ಆನಂದ ಬಾಷ್ಪಸುರಿಸುತ್ತಿದ್ದ. ಕೃಷ್ಣನ ಮಹಿಮೆಯನ್ನು ಗಾನ ಮಾಡುತ್ತ ಭೂತಗಣ ರುದ್ರಗಣ ಕ್ಷೇತ್ರಪಾಲರಿಂದ ಪರಿವೃತನಾಗಿ ವಿರಾಜಿಸುವ ಪಂಚಮುಖ-ನಾದ ಮುಕ್ಕಣ್ಣ ಶಿವನನ್ನು ಪರಶುರಾಮ ಕಂಡು ತಲೆಬಾಗಿ ನಮಿಸಿದ. ಶಿವನ ಎಡದಲ್ಲಿ ಕಾರ್ತಿಕೇಯ ಬಲದಲ್ಲಿ ಗಣೇಶ. ಇದಿರಲ್ಲಿ ನಂದಿ ಮಹಾಕಾಲ ವೀರಭದ್ರರು ನಿಂತಿದ್ದರು. ಪರಶುರಾಮ ಎಲ್ಲರನ್ನೂ ನಮಿಸಿದ. ಶಿವನ ಕಡೆಗೆ ತಿರುಗಿ ಕೈಮುಗಿದು ಶೋಕದ ಕಣ್ಣೀರು ಸುರಿಸುತ್ತ ಗದ್ಗದ ಕಂಠದಿಂದ ಸ್ತುತಿಸಿದ—

'ಈಶ್ವರ, ನಾನು ನಿನ್ನನ್ನು ಸ್ತುತಿಸಬೇಕೆಂದೇನೋ ಸಂಕಲ್ಪಿಸುತ್ತೇನೆ. ಆದರೆ ಸಾಮರ್ಥ್ಯ ಸಾಲದು. ನೀನು ನಾಶರಹಿತ. ನಾಶರಹಿತವಾದ ಮೋಕ್ಷಕ್ಕೆ ಬೀಜಸ್ವರೂಪ. ಇಂಥ ನಿನ್ನನ್ನು ನಾನು ಹೇಗೆ ಸ್ತುತಿಸಲಿ ? ಪದಗಳನ್ನು ಜೋಡಿಸಲರಿಯದ ಮೂಢ-ನಾದ ನಾನು ನಿನ್ನನ್ನು ಸ್ತುತಿಸಲು ಹೊರಟಿದ್ದೇನೆ. ವೇದಗಳೇ ನಿನ್ನನ್ನು ಸ್ತುತಿಸುವು-ದರಲ್ಲಿ ಅಸಮರ್ಥವಾಗಿರುವಾಗ ನಾನು ಏನು ಮಾಡಬಲ್ಲೆ ? ಶಬ್ದ, ಬುದ್ಧಿ ಮನಸ್ಸುಗಳಿಗೆ ನಿಲುಕದ ಪರಾತ್ಪರ ವಸ್ತು ನೀನು. ಆಕಾಶದಂತೆ ಆದ್ಯಂತ ರಹಿತ. ಸ್ವತಂತ್ರ. ಇಂಥ ನಿನ್ನನ್ನು ಕಂಡಬಳಿಕ ನನ್ನ ಜನ್ಮ ಸಫಲವಾಯಿತು. ಭಕ್ತರು ನಿನ್ನನ್ನು ಸ್ವಪ್ನದಲ್ಲಿಯೂ ಕಾಣಲಾರರು. ನಾನು ಕಣ್ಣಾರೆ ಕಾಣುತ್ತಿದ್ದೇನೆ. ಇಂದ್ರಾದಿ ದೇವತೆ-ಗಳು ನಿನ್ನ ಅಂಶಸಂಭೂತರು. ಚರಾಚರವೆಲ್ಲವೂ ನಿನ್ನದೆ ಅಂಶ. ಸ್ತ್ರೀ ಪುರುಷ ನಪುಂಸಕ ರೂಪಗಳನ್ನು ತಳೆದು ಸರ್ವಾಧಾರನೂ ಸರ್ವರೂಪನೂ ಆಗಿರುವ ನಿನಗೆ ನಮಸ್ಕಾರ. ಸೂರ್ಯಚಂದ್ರ ಅಗ್ನಿ ಜಲವಾಯುರೂಪನಾಗಿರುವ ನೀನು ಕ್ಷಣದಲ್ಲಿ ಲೀಲಾ ಮಾತ್ರದಿಂದ ಪ್ರಪಂಚ ಲಯಗೈಯಬಲ್ಲೆ. ಕಾಲ ಸ್ವರೂಪನಾಗಿ ಕಾಲನಿಗೂ ಕಾಲನಾಗಬಲ್ಲೆ. ಇಂಥ ನಿನ್ನನ್ನು ನಮಿಸುತ್ತೇನೆ. ದಯಾಸಮುದ್ರನಾದ ನೀನು ನನ್ನನ್ನು ಕಾಪಾಡು.'

ಹೀಗೆ ಹೇಳಿ ಪರಶುರಾಮ ಶಿವನ ಕಾಲಿಗೆ ಬಿದ್ದ. ಶಿವ ಅವನಿಗೆ ಆಶೀರ್ವಾದ ಮಾಡಿದ.

ಪರಶುರಾಮ ಮಾಡಿದ ಈ ಶಿವಸ್ತುತಿಯನ್ನು ಭಕ್ತಿಯಿಂದ ಪಠಿಸುವವ ಸಕಲ ಪಾಪಗಳಿಂದ ಮುಕ್ತನಾಗಿ ಶಿವಲೋಕ ಸೇರುತ್ತಾನೆ.

**ಇಲ್ಲಿಗೆ ಶ್ರೀ ಬ್ರಹ್ಮವೈವರ್ತ ಮಹಾಪುರಾಣದಲ್ಲಿ ಮೂರನೆಯದಾದ ಗಣಪತಿಖಂಡದ ನಾರದ ನಾರಾಯಣ ಸಂವಾದದಲ್ಲಿ ಪರಶುರಾಮನ ಕೈಲಾಸಗಮನವೆಂಬ ಇಪ್ಪತ್ತೊಂಬತ್ತನೆ ಅಧ್ಯಾಯ ಮುಗಿಯಿತು.**

## ಶಿವನಿಂದ ಪರಶುರಾಮನಿಗೆ ಶಸ್ತ್ರಾಸ್ತ್ರ ಪ್ರಾಪ್ತಿ

ಅಧ್ಯಾಯ-೩೦

**ಶಿವ—** ಬ್ರಹ್ಮಚಾರಿ, ನೀನಾರು ? ಯಾರ ಮಗ ? ನಿನ್ನ ವಾಸಸ್ಥಾನ ಯಾವುದು ? ನನ್ನನ್ನು ಏಕೆ ಸ್ತುತಿಸುತ್ತಿರುವೆ ? ನಿನ್ನ ಅಭೀಷ್ಟವೇನು ? ಹೇಳು.

**ಪಾರ್ವತಿ—** ವಯಸ್ಸಿನಲ್ಲಿ ಬಹಳ ಚಿಕ್ಕವನಾದರೂ ಶಾಂತ್ಯಾದಿ ಸದ್ಗುಣಗಳಲ್ಲಿ ಎಲ್ಲರನ್ನೂ ಮೀರಿಸುತ್ತಿರುವೆ. ಆದರೂ ಶೋಕಾಕುಲನಾಗಿರುವಂತೆ ಕಾಣುತ್ತಿರುವೆ. ಏನು ಕಾರಣ ?

ಪರಶುರಾಮ— ಈಶ್ವರ, ನಾನು ಭೃಗುವಂಶದಲ್ಲಿ ಹುಟ್ಟಿದವ, ಜಮದಗ್ನಿಯ ಮಗ. ತಾಯಿ ರೇಣುಕೆ. ಹೆಸರು ಪರಶುರಾಮ. ಜ್ಞಾನಧನವನ್ನಿತ್ತು ನನ್ನನ್ನು ಕೊಂಡು-ಕೊಳ್ಳು, ನಾನು ನಿನ್ನ ಆಸರೆ ಬೇಡಿ ಬಂದಿದ್ದೇನೆ, ಕಾಪಾಡು.

ಬೇಟೆಯಾಡುತ್ತ ನಮ್ಮ ಆಶ್ರಮದ ಬಳಿಗೆ ಬಂದು ಉಪವಾಸವಿದ್ದ ಕಾರ್ತವೀರ್ಯಾರ್ಜುನನ್ನು ಕಾಮಧೇನು ಕೊಟ್ಟ ಪದಾರ್ಥಗಳಿಂದ ನನ್ನ ತಂದೆ ಉಪಚರಿಸಿದ. ಆದರೆ ಆತ ಕಾಮಧೇನುವನ್ನು ಬಯಸಿ ತಂದೆಯನ್ನೆ ವಧಿಸಿದ. ಈಗ ಕಾಮಧೇನು ಗೋಲೋಕಕ್ಕೆ ಹೊರಟುಹೋಗಿದ್ದಾಳೆ. ತಾಯಿ ಪತಿಯೊಡನೆ ಸಹಗಮನ ಮಾಡಿದ್ದಾಳೆ. ನಾನು ಅನಾಥನಾಗಿದ್ದೇನೆ. ಪ್ರಭು, ನನಗೆ ನೀನೆ ತಂದೆ. ಪಾರ್ವತಿಯೆ ತಾಯಿ. ನನ್ನನ್ನು ಮಗನಂತೆ ನೋಡಿಕೊಳ್ಳು,

ಮಾತಾಪಿತೃಗಳ ಮರಣದ ಶೋಕಾವೇಗದಿಂದ ನಾನು ಇಪ್ಪತ್ತೊಂದು ಬಾರಿ ಭೂಪ್ರದಕ್ಷಿಣೆ ಮಾಡಿ ಕ್ಷತ್ರಿಯರನ್ನು 'ಅಳಿಸುವ ಪ್ರತಿಜ್ಞೆ ಮಾಡಿದ್ದೇನೆ. ತಂದೆಯ ಹಂತಕನಾದ ಕಾರ್ತವೀರ್ಯನನ್ನು ಯುದ್ಧದಲ್ಲಿ ವಧಿಸುವ ಪ್ರತಿಜ್ಞೆಯನ್ನೂ ಮಾಡಿದ್ದೇನೆ. ನನ್ನ ಈ ಅಭೀಷ್ಟವನ್ನು ನೀನು ಪೂರೈಸಬೇಕು.'

ಈ ಮಾತನ್ನು ಕೇಳಿ ಶಿವ ಪಾರ್ವತಿಯ ಮುಖ ನೋಡಿ ತಲೆತಗ್ಗಿಸಿದ. ಪಾರ್ವತಿಗೂ ತುಟಿ ಗಂಟಲುಗಳು ಒಣಗಿದುವು. ಅವಳು ಹೇಳಿದಳು—

'ಬ್ರಾಹ್ಮಣ ಪುತ್ರ ನೀನು, ಕ್ಷತ್ರಿಯ ಕುಲವನ್ನೆ ಅಳಿಸಲು ಹೊರಟಿರುವುದು ಮಹಾ ಸಾಹಸವೆ ಸರಿ. ಹುಬ್ಬು ಕುಣಿಸುವಂತೆ ಲೀಲಾಜಾಲವಾಗಿ ರಾವಣನನ್ನು ಸೋಲಿಸಬಲ್ಲ ಕಾರ್ತವೀರ್ಯನನ್ನು ನಿರಾಯುಧನಾಗಿ ಕೊಲ್ಲಲು ಹೊರಟಿರುವುದೂ ಸಾಹಸವೆ. ಆ ರಾಜನಿಗೆ ಹರಿಯ ಕವಚವನ್ನು ದತ್ತಾತ್ರೇಯ ಕೊಟ್ಟಿದ್ದಾನೆ. ನಿನ್ನ ತಂದೆಯ ಮೇಲೆ ಎಸೆದ ಶಕ್ತ್ಯಾಯುಧವನ್ನೂ ಅವನಿಗೆ ದತ್ತಾತ್ರೇಯನೆ ಕೊಟ್ಟಿದ್ದ. ಹಗಲಿರುಳೆನ್ನದೆ ಸದಾ ವಿಷ್ಣುಮಂತ್ರ ಜಪಿಸುತ್ತ ವಿಷ್ಣುಸ್ತುತಿ ಪಠಿಸುವ ಆ ರಾಜನನ್ನು ಕೊಲ್ಲಬಲ್ಲ ಸಮರ್ಥ

ಯಾರಿದ್ದಾನೆ ಭೂಮಿಯಲ್ಲಿ ? ನೀನು ಮನೆಗೇ ಹಿಂತಿರುಗು. ಶಿವನಾದರೂ ಏನು ಮಾಡಬಲ್ಲ. ಅನೇಕ ರಾಜರೂ ನನ್ನ ಭಕ್ತರಾಗಿದ್ದಾರೆ. ನಾನಿರುವಷ್ಟುಕಾಲ ಅವರಿಗೆ ಏನು ಅಪಾಯ ಬಂದೀತು?' ಕಾಳಿಯೂ ಹೇಳಿದಳು— 'ನಿನ್ನ ಈ ಪ್ರಯತ್ನ ಕುಳ್ಳ ಚಂದ್ರನನ್ನು ಹಿಡಿಯಲು ಕೈಚಾಚುವಂತಾದೀತು. ಯಾಗಾದಿ ಪುಣ್ಯಕರ್ಮ ಮಾಡಿರುವ ಮಹಾಬಲ ಪರಾಕ್ರಮಿಗಳಾದ ನನ್ನ ಭಕ್ತರೂ ಆದ ರಾಜರನ್ನು ಶಿವನ ಸಹಾಯದಿಂದ ಹೇಗೆ ಕೊಲ್ಲುವಿ' ?

ಪರಶುರಾಮ ಈ ಮಾತುಗಳನ್ನು ಕೇಳಿ ಅಳುತ್ತ ಪ್ರಾಣತ್ಯಾಗ ಮಾಡಲು ಉದ್ಯುಕ್ತನಾದ.

ಶಿವ ಕರುಣಾನಿಧಿ. ಪರಶುರಾಮನ ಆಳುವ ಧ್ವನಿ ಕೇಳಿ ದುರ್ಗೆ ಕಾಳಿಯರ ಕಡೆಗೆ ನೋಡಿ ಅವರ ಇಂಗಿತವನ್ನು ಅರಿತು ಅವರ ಅನುಮತಿ ಪಡೆದು ಹೇಳಿದ—

'ಮಗು, ಇಂದಿನಿಂದ ನೀನು ನನಗೆ ಮಗನಂತೆ. ನಿನಗೆ ಮೂಲೋಕದಲ್ಲಿ ದುರ್ಲಭವಾದ ರಹಸ್ಯವಾದ ಮಂತ್ರವನ್ನು ನಾನು ಉಪದೇಶಿಸುತ್ತೇನೆ. ಅದ್ಭುತವಾದ ಕವಚವನ್ನೂ ನೀಡುತ್ತೇನೆ. ನನ್ನ ಅನುಗ್ರಹದಿಂದ ನೀನು ಅನಾಯಾಸವಾಗಿ ಕಾರ್ತವೀರ್ಯನನ್ನು ಕೊಲ್ಲುವೆ. ಇಪ್ಪತ್ತೊಂದು ಬಾರಿ ದುಷ್ಟಕ್ಷತ್ರಿಯರನ್ನು ಸಂಹರಿಸುವೆ. ಜಗತ್ತಿನಲ್ಲೆಲ್ಲ ನಿನ್ನ ಕೀರ್ತಿ ಹರಡುತ್ತದೆ.'

ಹೀಗೆ ಹೇಳಿ ಶಿವ ದುರ್ಲಭವಾದ ವಿಷ್ಣುಮಂತ್ರವನ್ನೂ ತ್ರೈಲೋಕ್ಯ ವಿಜಯವೆಂಬ ಅದ್ಭುತವಾದ ಕವಚವನ್ನೂ, ಸ್ತೋತ್ರ ಪೂಜಾವಿಧಾನ ಪುರಶ್ಚರಣಗಳನ್ನೂ, ಮಂತ್ರ-ಸಿದ್ಧಿಗೆ ಬೇಕಾಗುವ ನಿಯಮಾನುಷ್ಠಾನ ಕ್ರಮ, ಸಿದ್ಧಿಸ್ಥಾನ, ಕಾಲಮಿತಿಗಳನ್ನೂ, ವೇದ ವೇದಾಂಗಗಳನ್ನೂ ಉಪದೇಶಿಸಿದ. ನಾಗಪಾಶ, ಬ್ರಹ್ಮಾಸ್ತ್ರ, ಪಾಶುಪತ, ನಾರಾಯಣಾಸ್ತ್ರ-ಗಳನ್ನೂ, ಆಗ್ನೇಯ ವಾಯವ್ಯ ವಾರುಣ ಗಾಂಧರ್ವ ಗಾರುಡ ಜ್ರಂಭಣಾಸ್ತ್ರಗಳನ್ನೂ, ಗದಾಶಕ್ತಿ ಶೂಲಾದಿ ಆಯುಧಗಳನ್ನೂ ನೀಡಿದ. ಶಸ್ತ್ರಾಸ್ತ್ರ ಮಂತ್ರಗಳ ಪ್ರಯೋಗ ಹಾಗೂ ಉಪಸಂಹಾರಗಳನ್ನೂ ತಿಳಿಸಿದ. ಅಕ್ಷಯವಾದ ಬಾಣ ಬತ್ತಳಿಕೆಗಳನ್ನೂ ನೀಡಿದ. ಆತ್ಮರಕ್ಷಣೆ ಮಾಡಿಕೊಳ್ಳುತ್ತ ಇದಿರಾಳಿಯನ್ನು ಆಕ್ರಮಿಸುವ ಮಾಯಾಯುದ್ಧ ಮಾಡುವ ಕ್ರಮವನ್ನು ಹೇಳಿಕೊಟ್ಟ. ಆಪತ್ಕಾಲದಲ್ಲಿ ಪ್ರಯೋಗಿಸುವ ಮೃತ್ಯು-ಪರಿಹಾರಕವಾದ ಮೋಹಿನೀ ವಿದ್ಯೆಯನ್ನೂ ಉಪದೇಶಿಸಿದ.

ಪರಶುರಾಮ ಹೀಗೆ ಗುರುಕುಲ ವಾಸಮಾಡಿ ಎಲ್ಲ ವಿದ್ಯೆಗಳನ್ನೂ ಕಲಿತು ತೀರ್ಥ-ಕ್ಷೇತ್ರದಲ್ಲಿ ಮಂತ್ರಸಿದ್ಧಿಯನ್ನೂ ಪಡೆದುಕೊಂಡ.

**ಇಲ್ಲಿಗೆ ಶ್ರೀ ಬ್ರಹ್ಮವೈವರ್ತ ಮಹಾಪುರಾಣದಲ್ಲಿ ಮೂರನೆಯದಾದ ಗಣಪತಿಖಂಡದ ನಾರದ ನಾರಾಯಣ ಸಂವಾದದಲ್ಲಿ ಪರಶುರಾಮನಿಗೆ ಶಿವನಿಂದ ಅಸ್ತ್ರಶಸ್ತ್ರಾದಿಪ್ರಾಪ್ತಿಯೆಂಬ ಮೂವತ್ತನೆ ಅಧ್ಯಾಯ ಮುಗಿಯಿತು.**

# ಶಿವನಿಂದ ಪರಶುರಾಮನಿಗೆ ಕೃಷ್ಣಕವಚ ಸ್ತೋತ್ರದ ಉಪದೇಶ

**ಅಧ್ಯಾಯ-೩೧**

ನಾರದ— ಪೂಜ್ಯನೆ, ಶಿವ ಪರಶುರಾಮನಿಗೆ ನೀಡಿದ ಮಂತ್ರ ಸ್ತೋತ್ರ ಕವಚಗಳು ಯಾವುವು ? ಅವುಗಳ ದೇವತೆ ಫಲಗಳು ಯಾವುವು ?

ನಾರಾಯಣ— ಮಂತ್ರಕ್ಕೆ ಗೋಲೋಕನಾಥನಾದ ಶ್ರೀಕೃಷ್ಣನೆ ದೇವತೆ. ಕಲ್ಪವೃಕ್ಷದಂತೆ ಸರ್ವಾಭೀಷ್ಟಪ್ರದವಾದ ಈ ಮಂತ್ರವನ್ನೂ ತ್ರೈಲೋಕ್ಯ ವಿಜಯವೆಂಬ ಪರಮಾದ್ಭುತವಾದ ಕವಚವನ್ನೂ ಸ್ವಯಂಪ್ರಭಾ ನದೀತೀರದ ಪಾರಿಜಾತವನದಲ್ಲಿ ವಿಷ್ಣುಸನ್ನಿಧಿಯಲ್ಲಿ ಶಿವ ಪರಶುರಾಮನಿಗೆ ಉಪದೇಶಿಸಿದ—

'ವತ್ಸ, ಪರಶುರಾಮ, ನೀನು ನನಗೆ ಮಗನಿಗಿಂತ ಹೆಚ್ಚು. ಆದರಿಂದ ಪರಮಾದ್ಭುತವಾದ ವಿಷ್ಣುಕವಚವನ್ನು ಉಪದೇಶಿಸುತ್ತೇನೆ. ತ್ರೈಲೋಕ್ಯವಿಜಯವೆಂಬ ಈ ಕವಚವನ್ನು ಹಿಂದೆ ಗೋಲೋಕದ ರಾಸಮಂಡಲ ಮಧ್ಯದಲ್ಲಿರುವ ವೃಂದಾವನದ ರಾಧಾಶ್ರಮದಲ್ಲಿ ಕೃಷ್ಣ ನನಗೆ ಉಪದೇಶಿಸಿದ್ದ. ಸಕಲ ಮಂತ್ರಗಳಿಂದ ಗರ್ಭಿತ-ವಾಗಿದ್ದು ಪರಮಪುಣ್ಯಪ್ರದವಾಗಿದೆ ಈ ಕವಚ. ಇದರ ಪ್ರಭಾವದಿಂದಲೆ ದುರ್ಗೆ, ಶುಂಭ, ನಿಶುಂಭ, ರಕ್ತಬೀಜ, ಮಹಿಷಾಸುರರನ್ನು ಕೊಂದಳು. ನಾನು ತ್ರಿಪುರಾಸುರ-ರನ್ನು ಕೊಂದೆ ಬ್ರಹ್ಮ ಜಗತ್ಸೃಷ್ಟಿ ಮಾಡಿದ. ಶೇಷ ಪ್ರಪಂಚವನ್ನು ಹೊರಲು ಸಮರ್ಥನಾದ. ಕೂರ್ಮ ಶೇಷನನ್ನು ಹೊರಲು ಸಮರ್ಥನಾದ. ವಾಯು ವಿಶ್ವಕ್ಕೇ ಆಧಾರನಾಗಿರುವುದು, ವರುಣ ಜಲಾಧಿಪತಿಯಾದುದು, ಕುಬೇರ ಧನಾಧಿಪತಿ-ಯಾದುದು, ಇಂದ್ರ ದೇವಾಧಿಪತಿಯಾದುದು, ಸೂರ್ಯ ತೇಜೋರಾಶಿಯಾದುದು, ಚಂದ್ರ ಮಹಾಬಲ ಪರಾಕ್ರಮಿಯಾದುದು, ಅಗಸ್ತ್ಯ ಏಳು ಸಮುದ್ರಗಳ ನೀರು ಕುಡಿದುದು, ವಾತಾಪಿ ದೈತ್ಯನನ್ನು ಹೊಟ್ಟೆಯಲ್ಲಿ ಜೀರ್ಣಿಸಿಕೊಂಡುದು, ಭೂದೇವಿ ಸರ್ವಾಧಾರಳೆನಿಸಿದುದು, ಧರ್ಮ ಜಗತ್ಸಾಕ್ಷಿ ಎನಿಸಿದುದು, ಸರಸ್ವತಿ ಸರ್ವ-ವಿದ್ಯಾಧಿದೇವತೆಯೆನಿಸಿದುದು, ಲಕ್ಷ್ಮಿ ಲೋಕಕ್ಕೆ ಅನ್ನದಾತೆ ಎನಿಸಿದುದು, ಸಾವಿತ್ರಿ ವೇದಮಾತೆ ಎನಿಸಿದುದು, ವೇದಗಳು ಧರ್ಮಬೋಧಕವೆನಿಸಿದುದು, ಅಗ್ನಿ ಶುದ್ಧ-ನೆನಿಸಿದುದು, ಸನತ್ಕುಮಾರ ಶ್ರೇಷ್ಠಜ್ಞಾನಿಯೆನಿಸಿದುದು -ಎಲ್ಲವೂ ಈ ಕವಚದ ಪ್ರಭಾವದಿಂದಲೇ. ಆದ್ದರಿಂದ ಇದನ್ನು ಒಳ್ಳೆಯ ಕೃಷ್ಣಭಕ್ತನಾದ ಶಿಷ್ಯನಿಗೆ ಮಾತ್ರವೆ ಉಪದೇಶಿಸಬೇಕು ಹೊರತು ದುಷ್ಟರಿಗೆ ಉಪದೇಶಿಸಿದರೆ ಮರಣ ಸಂಭವಿಸುವುದು.

ಈ ಕವಚಕ್ಕೆ ಪ್ರಜಾಪತಿ ಋಷಿ. ಗಾಯತ್ರಿ ಛಂದಸ್ಸು. ರಾಸೇಶ್ವರ ಕೃಷ್ಣನೆ ದೇವತೆ. ತ್ರೈಲೋಕ್ಯ ವಿಜಯಪ್ರಾಪ್ತಿಯ ಉದ್ದೇಶದಿಂದ ಜಪಿಸಬೇಕು.

'ಓಂ ಶ್ರೀಕೃಷ್ಣಾಯ ನಮಃ' ಎಂಬ ಮಂತ್ರ ನನ್ನ ಶಿರಸ್ಸನ್ನು ಕಾಪಾಡಲಿ.
'ಕೃಷ್ಣಾಯ ಸ್ವಾಹಾ' ಎಂಬ ಪಂಚಾಕ್ಷರ ಮಂತ್ರ ನನ್ನ ಕಪಾಲವನ್ನು ಕಾಪಾಡಲಿ.
'ಕೃಷ್ಣ' ಎಂಬ ಮಂತ್ರ ಕಣ್ಣುಗಳನ್ನು ರಕ್ಷಿಸಲಿ.
'ಕೃಷ್ಣಸ್ವಾಹಾ' ಕಣ್ಣುಗುಡ್ಡೆಗಳನ್ನು ರಕ್ಷಿಸಲಿ.
'ಹರಯೇ ನಮಃ' ಹುಬ್ಬುಗಳನ್ನು ರಕ್ಷಿಸಲಿ.
'ಓಂ ಗೋವಿಂದಾಯ ಸ್ವಾಹಾ' ಮೂಗನ್ನು ಕಾಪಾಡಲಿ.
'ಗೋಪಾಲಾಯ ನಮಃ' ಕಪೋಲಗಳನ್ನು ಕಾಪಾಡಲಿ.
'ಓಂ ನಮೋ ಗೋಪಾಂಗನೇಶಾಯ' ಕಿವಿಗಳನ್ನು ರಕ್ಷಿಸಲಿ.
'ಓಂ ಕೃಷ್ಣಾಯ ನಮಃ' ಎರಡು ತುಟಿಗಳನ್ನೂ ಕಾಪಾಡಲಿ.
'ಓಂ ಗೋವಿಂದಾಯ ಸ್ವಾಹಾ' ಹಲ್ಲುಗಳನ್ನು ರಕ್ಷಿಸಲಿ.
'ಕೃಷ್ಣಾಯ ಸ್ವಾಹಾ' ಹಲ್ಲುಗಳ ಕೆಳಭಾಗವನ್ನು ರಕ್ಷಿಸಲಿ.
'ಕ್ಲೀಂ ಕೃಷ್ಣಾಯ ಸ್ವಾಹಾ' ಹಲ್ಲುಗಳ ಮೇಲ್ಭಾಗವನ್ನು ರಕ್ಷಿಸಲಿ.
'ಓಂ ಶ್ರೀಕೃಷ್ಣಾಯ ಸ್ವಾಹಾ' ನಾಲಿಗೆಯನ್ನು ಕಾಪಾಡಲಿ.
'ರಾಸೇಶ್ವರಾಯ ಸ್ವಾಹಾ' ಕಾಲುಗಳನ್ನು ಕಾಪಾಡಲಿ.
'ರಾಧಿಕೇಶಾಯ ಸ್ವಾಹಾ' ಕಂಠವನ್ನು ಕಾಪಾಡಲಿ.
'ನಮೋ ಗೋಪಾಂಗನೇಶಾಯ' ಎದೆಯನ್ನು ಕಾಪಾಡಲಿ.
'ಓಂ ಗೋಪೇಶಾಯ ಸ್ವಾಹಾ' ಹೆಗಲನ್ನು ಕಾಪಾಡಲಿ.
'ನಮಃ ಕಿಶೋರವೇಷಾಯ ಸ್ವಾಹಾ' ಬೆನ್ನನ್ನು ಕಾಪಾಡಲಿ.
'ಮುಕುಂದಾಯ ನಮಃ' ಹೊಟ್ಟೆಯನ್ನು ಕಾಪಾಡಲಿ.
'ಓಂ ಹ್ರೀಂ ಕ್ಲೀಂ ಕೃಷ್ಣಾಯ ಸ್ವಾಹಾ' ಕೈಗಳನ್ನು ಕಾಲುಗಳನ್ನೂ ಕಾಪಾಡಲಿ.
'ಓಂ ವಿಷ್ಣವೇ ನಮಃ' ಎರಡು ಭುಜಗಳನ್ನು ಕಾಪಾಡಲಿ.
'ಓಂ ಹ್ರೀಂ ಭಗವತೇ ಸ್ವಾಹಾ' ಉಗುರುಗಳನ್ನು ಕಾಪಾಡಲಿ.
'ಓಂ ನಮೋ ನಾರಾಯಣಾಯ' ಉಗುರು ಸಂಧಿಗಳನ್ನು ಕಾಪಾಡಲಿ.
'ಓಂ ಹ್ರೀಂ ಹ್ರೀಂ ಪದ್ಮನಾಭಾಯ' ನಾಭಿಯನ್ನು ಕಾಪಾಡಲಿ.
ಓಂ ಸರ್ವೇಶಾಯ ಸ್ವಾಹಾ' ಎಲುಬುಗಳನ್ನು ಕಾಪಾಡಲಿ.
'ಓಂ ಗೋಪೀರಮಣಾಯ ಸ್ವಾಹಾ' ನಿತಂಬವನ್ನು ಕಾಪಾಡಲಿ.
'ಓಂ ಗೋಪೀರಮಣನಾಥಾಯ ಸ್ವಾಹಾ' ಪಾದಗಳನ್ನು ಕಾಪಾಡಲಿ.
'ಓಂ ಹ್ರೀಂ ಕ್ಲೀಂ ರಸಿಕೇಶಾಯ ಸ್ವಾಹಾ' ಸರ್ವಾಂಗಗಳನ್ನು ರಕ್ಷಿಸಲಿ.

ಅತ್ಯಂತ ಪರಿಪೂರ್ಣನಾದ ಕೃಷ್ಣ ಪೂರ್ವದಿಕ್ಕಿನಲ್ಲಿ, ಗೋಲೋಕನಾಥ ಆಗ್ನೇಯ-ದಲ್ಲಿ, ಪೂರ್ಣ ಬ್ರಹ್ಮಸ್ವರೂಪ ದಕ್ಷಿಣದಲ್ಲಿ, ಕೃಷ್ಣ ನೈಋತ್ಯದಲ್ಲಿ, ಹರಿ ಪಶ್ಚಿಮದಲ್ಲಿ, ಗೋವಿಂದ ವಾಯವ್ಯದಲ್ಲಿ, ರಸಿಕ ಶಿರೋಮಣಿ ಉತ್ತರದಲ್ಲಿ, ವೃಂದಾವನ ವಿಹಾರಿ

ಈಶಾನ್ಯದಲ್ಲಿ, ವೃಂದಾವತೀ ಪ್ರಾಣನಾಥ ಊರ್ಧ್ವದಿಕ್ಕಿನಲ್ಲಿ, ನರಸಿಂಹ ನೀರು ನೆಲ ಅಂತರಿಕ್ಷಗಳಲ್ಲಿ, ಮಾಧವ ಸ್ವಪ್ನ ಜಾಗರಗಳಲ್ಲಿ ಮತ್ತು ಸರ್ವಾಂತರಾತ್ಮನಾಗಿ ನಿರ್ಲಿಪ್ತನಾಗಿರುವ ಪ್ರಭು ಎಲ್ಲೆಡೆಯಲ್ಲಿ ನನ್ನನ್ನು ರಕ್ಷಿಸಲಿ.

ಇದು ತ್ರೈಲೋಕ್ಯವಿಜಯವೆಂಬ ಕವಚ. ಸರ್ವಮಂತ್ರ ಗರ್ಭಿತವಾಗಿದ್ದು ಪರಮಾದ್ಭುತವಾಗಿದೆ. ಕೃಷ್ಣನೆ ನನಗೆ ಇದನ್ನು ಉಪದೇಶಿಸಿದ. ಯಾರಿಗೂ ಇದನ್ನು ಹೇಳಬೇಡ. ಗುರುವನ್ನು ವಿಧ್ಯುಕ್ತವಾಗಿ ಪೂಜಿಸಿ ಈ ಕವಚವನ್ನು ಕಂಠದಲ್ಲಾಗಲಿ ಬಲತೋಳಲ್ಲಾಗಲಿ ಧರಿಸಿದರೆ ವಿಷ್ಣುವಿಗೆ ಪರಮಪ್ರಿಯನೆನಿಸುತ್ತಾನೆ. ಅವನು ವಾಸಮಾಡುವಲ್ಲೆಲ್ಲ ಲಕ್ಷ್ಮೀಸರಸ್ವತಿಯರ ಸನ್ನಿಧಾನವಿರುತ್ತದೆ. ಕವಚಸಿದ್ಧಿಯಾಯಿತೆಂದರೆ ಜೀವನ್ಮುಕ್ತಿ ಕರಗತವಾಗುವುದು. ಕೋಟಿವರ್ಷಗಳ ಪೂಜಾಫಲ, ಸಾವಿರ ರಾಜಸೂಯಯಾಗಗಳ ಫಲ, ನೂರು ವಾಜಪೇಯಗಳ ಫಲ, ಹತ್ತುಸಾವಿರ ಅಶ್ವಮೇಧಗಳ ಫಲ, ಹತ್ತುಸಾವಿರ ನರಮೇಧಗಳ ಫಲ, ಮಹಾದಾನವೆಲ್ಲವುಗಳೂ ಭೂಪ್ರದಕ್ಷಿಣೆಯೂ ಈ ಕವಚಧಾರಣೆಯ ಹದಿನಾರನೆ ಒಂದಂಶಕ್ಕೆ ಸಮವಾಗದು. ವ್ರತ ಉಪವಾಸಾದಿ ನಿಯಮ, ವೇದಾಧ್ಯಯನ, ತಪಸ್ಸು, ತೀರ್ಥಸ್ನಾನಗಳೂ ಅಷ್ಟೇ. ಸರ್ವಸಿದ್ಧಿಗಳನ್ನೂ ದೇವತ್ವವನ್ನೂ ಹರಿಯ ದಾಸ್ಯವನ್ನೂ ಕವಚಸಿದ್ಧಿಯ ಬಲದಿಂದ ಹೊಂದಬಹುದು. ಹತ್ತುಲಕ್ಷ ಜಪದಿಂದ ಕವಚಸಿದ್ಧಿಯಾಗುವುದು. ಕವಚವನ್ನರಿಯದೆ ಕೋಟಿಕಲ್ಪಕಾಲ ಜಪಿಸಿದರೂ ಯಾವ ಮಂತ್ರವೂ ಸಿದ್ಧಿಪ್ರದವಾಗದು. ಆದ್ದರಿಂದ ಪರಶುರಾಮ, ನೀನು ಅನಾಯಾಸವಾಗಿ ಈ ಕವಚದ ಬಲದಿಂದಲೆ ದುಷ್ಟ-ಕ್ಷತ್ರಿಯರನ್ನೆಲ್ಲ ನಾಶಮಾಡುವಿ. ಇದರಲ್ಲಿ ಸಂಶಯಬೇಡ. ನೀನು ಅನ್ಯರಿಗೆ ರಾಜ್ಯ-ವನ್ನಾದರೂ ಕೊಡು. ತಲೆಯನ್ನಾದರೂ ಕೊಡು, ಪ್ರಾಣವನ್ನಾದರೂ ಕೊಡು. ಈ ಕವಚವನ್ನು ಮಾತ್ರ ಎಂಥ ಪ್ರಾಣಸಂಕಟದಲ್ಲಿಯೂ ಅನ್ಯರಿಗೆ ನೀಡಬೇಡ.

**ಇಲ್ಲಿಗೆ ಶ್ರೀ ಬ್ರಹ್ಮವೈವರ್ತ ಮಹಾಪುರಾಣದಲ್ಲಿ ಮೂರನೆಯದಾದ ಗಣಪತಿಖಂಡದ ನಾರದ ನಾರಾಯಣ ಸಂವಾದದಲ್ಲಿ ಪರಶುರಾಮನಿಗೆ ಶ್ರೀಕೃಷ್ಣಕವಚಪ್ರದಾನವೆಂಬ ಮೂವತ್ತೊಂದನೆ ಅಧ್ಯಾಯ ಮುಗಿಯಿತು.**

## ಶ್ರೀಕೃಷ್ಣನ ಮಂತ್ರಸ್ತೋತ್ರ ಧ್ಯಾನ ವಿಧಿ

ಅಧ್ಯಾಯ-೩೨

ಪರಶುರಾಮ— ಪ್ರಭು, ಶತ್ರು ಸಂಸಾರಕಾರಕವಾದ ಉತ್ತಮವಾದ ಕವಚವನ್ನು ನನಗೆ ನೀನು ಉಪದೇಶಿಸಿರುವೆ. ಈಗ ಕೃಷ್ಣನ ಮಂತ್ರ ಸ್ತೋತ್ರ ಪೂಜಾವಿಧಿಗಳನ್ನೂ ಉಪದೇಶಿಸು.

ಮಹಾದೇವ— 'ಓಂ ಹ್ರೀಂ ಶ್ರೀಂ ನಮಃ ಕೃಷ್ಣಾಯ ಪರಿಪೂರ್ಣತಮಾಯ ಚ' -ಈ ಹದಿನೇಳು ಅಕ್ಷರಗಳ ಮಹಾಮಂತ್ರ ಮಂತ್ರಗಳಲ್ಲೆಲ್ಲ ಶ್ರೇಷ್ಠ. ಐದು ಲಕ್ಷಬಾರಿ ಜಪಿಸಿದಾಗ ಸಿದ್ಧಿಯಾಗುವುದು. ಜಪವಾದ ಬಳಿಕ, ಜಪದ ಹತ್ತನೆಯ ಒಂದು ಭಾಗದಷ್ಟು ಹೋಮ, ಹೋಮದ ಹತ್ತನೆ ಒಂದು ಭಾಗದಷ್ಟು ಅಭಿಷೇಕ, ಅಭಿಷೇಕದ ಹತ್ತನೆ ಒಂದುಭಾಗದಷ್ಟು ತರ್ಪಣ, ತರ್ಪಣದ ಹತ್ತನೆ ಒಂದು ಭಾಗ-ದಷ್ಟು ಮಾರ್ಜನಗಳನ್ನು ಮಾಡಬೇಕು. ನೂರು ಸುವರ್ಣ ನಾಣ್ಯಗಳನ್ನು ಪುರಶ್ಚರಣ ದಕ್ಷಿಣೆಯಾಗಿ ಕೊಡಬೇಕು.

ಈ ಮಂತ್ರಸಿದ್ಧಿ ಪಡೆದವನಿಗೆ ಪ್ರಪಂಚವೆ ವಶವಾಗುವುದು. ಆತ ಸಪ್ತ-ಸಮುದ್ರಗಳನ್ನು ಪಾನ ಮಾಡಬಲ್ಲ. ವಿಶ್ವವನ್ನೆ ಸಂಹರಿಸಬಲ್ಲ. ಪಾಂಚಭೌತಿಕ ಶರೀರದಿಂದ ವೈಕುಂಠಕ್ಕೆ ಹೋಗಬಲ್ಲ. ಅವನ ಪಾದಧೂಳಿಯ ಸಂಪರ್ಕದಿಂದ ಸಕಲತೀರ್ಥಗಳೂ ಪಾವನವಾಗುವುವು, ಭೂಮಿ ಪಾವನವಾಗುವುದು.

ಸಾಮವೇದೋಕ್ತವಾದ ಸರ್ವೇಶ್ವರ ಕೃಷ್ಣಪರಮಾತ್ಮನ ಧ್ಯಾನಪ್ರಕಾರವನ್ನೂ ಹೇಳುತ್ತೇನೆ. ಅದು ಭಕ್ತಿ ಮುಕ್ತಿಗಳನ್ನು ನೀಡಬಲ್ಲುದು.

'ನೀಲಮೇಘಶ್ಯಾಮ, ನೀಲಕಮಲದಂಥ ಕಣ್ಣಿನವ, ಶರತ್ಕಾಲದ ಹುಣ್ಣಿಮೆ-ಚಂದ್ರನಂಥ ಮುಖದವ, ಕೋಟಿಮನ್ಮಥರ ಸೌಂದರ್ಯದಿಂದೊಪ್ಪುವ ಶ್ರೀಗಂಧ-ಲೇಪನಯುಕ್ತವಾದ, ಪೀತಾಂಬರಧಾರಿ, ರತ್ನಾಲಂಕಾರ ಭೂಷಿತ ಸುಂದರ ಶರೀರ-ದವ. ರತ್ನಸಿಂಹಾಸನದಲ್ಲಿ ಕುಳಿತು ನಗುಮೊಗದ ಗೋಪಿಯರ ಪ್ರಣಯಕಟಾಕ್ಷ-ಗಳನ್ನು ಸ್ವೀಕರಿಸುತ್ತಿದ್ದಾನೆ. ಜಾಜಿ ಮತ್ತು ಮೊಲ್ಲೆ ಹೂಗಳ ವನಮಾಲೆ ಧರಿಸಿ ತಲೆಯಲ್ಲಿ ನವಿಲಗರಿ ಇಟ್ಟುಕೊಂಡು ಚಂದ್ರನಕ್ಷತ್ರಮಾಲೆಗಳಿಂದ ಹೊಳೆವ ಆಕಾಶದಂತೆ ಕಾಣುತ್ತಿದ್ದಾನೆ. ಎದೆಯಲ್ಲಿ ರಾಧೆ ಕುಳಿತಿದ್ದಾಳೆ. ಬ್ರಹ್ಮವಿಷ್ಣುಮಹೇಶ್ವ-ರರೂ ಮೂರ್ತಿಮತ್ತಾಗಿ ಬಂದ ವೇದಗಳೂ ದೇವ ಋಷಿ ಸಿದ್ಧರೂ ಸ್ತೋತ್ರ ಮಾಡುತ್ತಿದ್ದಾರೆ. ಇಂಥ ಶ್ರೀಕೃಷ್ಣನನ್ನು ಆರಾಧಿಸುತ್ತೇನೆ.'

ಹೀಗೆ ಧ್ಯಾನ ಮಾಡಿ ಷೋಡಶೋಪಚಾರಗಳನ್ನಿತ್ತು ಭಕ್ತಿಯಿಂದ ಪೂಜಿಸಿದರೆ ಸರ್ವಜ್ಞತ್ವ ಲಭಿಸುತ್ತದೆ. ಅರ್ಘ್ಯ, ಪಾದ್ಯ, ಆಸನ, ವಸನ, ಭೂಷಣ, ಮಧುಪರ್ಕ, ಯಜ್ಞೋಪವೀತ, ಧೂಪ, ದೀಪ, ನೈವೇದ್ಯ, ಪುನರಾಚಮನ, ಪುಷ್ಪ, ತಾಂಬೂಲ,

ಶಯನ, ಪುಷ್ಪಮಾಲೆಗಳನ್ನರ್ಪಿಸಿ ಪುಷ್ಪಾಂಜಲಿಯನ್ನು ಮೂರು ಬಾರಿ ಕೃಷ್ಣನಿಗೆ ನೀಡಬೇಕು. ಬಳಿಕ ಗಣೇಶ, ದಿನೇಶ, ವಹ್ನಿ, ವಿಷ್ಣು, ಶಿವ, ದುರ್ಗೆಯರನ್ನೂ, ಶ್ರೀದಾಮ, ಸುದಾಮ, ವಸುದಾಮ, ಹರಿಭಾನು, ಚಂದ್ರಭಾನು, ಸೂರ್ಯಭಾನು, ಸುಭಾನು ಎಂಬ ಏಳುಮಂದಿ ಪಾರ್ಷದರನ್ನೂ ಅನಂತರ ರಾಧೆಯನ್ನೂ ಗೋಪ-ಗೋಪಿಯರನ್ನೂ ಶಿವಬ್ರಹ್ಮ ಪಾರ್ವತಿ ಲಕ್ಷ್ಮಿ ಸರಸ್ವತಿ ಪೃಥ್ವಿಯರನ್ನೂ ಪೂಜಿಸಬೇಕು. ಪುನಃ ಗಣೇಶ ಮುಂತಾದ ಆರು ಮಂದಿ ದೇವತೆಗಳನ್ನು ಪೂಜಿಸಬೇಕು. ಪಂಚೋಪಚಾರಗಳನ್ನು ಸಲ್ಲಿಸಬೇಕು. ಬಳಿಕ ಕೃಷ್ಣನನ್ನು ಇನ್ನೊಮ್ಮೆ ಪೂಜಿಸಬೇಕು. ಅಪರಾಧ ಕ್ಷಮಾಯಾಚನೆ ಮಾಡಿ ಸಾಮವೇದೋಕ್ತ ರೀತಿಯಿಂದ ಹೀಗೆ ಸ್ತೋತ್ರ ಮಾಡಬೇಕು—

'ಪರಂಜ್ಯೋತಿಃ ಸ್ವರೂಪ ಪರಬ್ರಹ್ಮ ಪರಮಾತ್ಮನನ್ನು ನಮಿಸುವೆನು. ಅವನೆ ಸಕಲ ಪ್ರಪಂಚಕ್ಕೆ ಕಾರಣ. ಅಣೋರಣೀಯನೂ ಮಹತೋಮಹೀಯನೂ ಅವನೆ. ಸರ್ವದೃಶ್ಯನೂ ಅದೃಶ್ಯನೂ ಅವನೆ. ಸಾಕಾರ ನಿರಾಕಾರ ಸಗುಣ ನಿರ್ಗುಣಗಳೂ ಅವನೆ. ಸ್ವೇಚ್ಛೆಯಿಂದ ಯಾವುದೇ ರೂಪ ತಾಳಬಲ್ಲವನು ಆತ. ಅವನ ಎಲ್ಲ ರೂಪವೂ ಅತ್ಯಂತ ಮನೋಹರ. ಕರಾಳ ರೂಪವೂ ಮನೋಹರವೆ. ಕರ್ಮಸಾಕ್ಷಿ-ಯಾಗಿದ್ದು ಕರ್ಮಗಳಿಗೆ ಫಲ ನೀಡುವವನೂ ಅವನೆ. ಬೇರೆ ಬೇರೆ ರೂಪಗಳಿಂದ ಒಬ್ಬನೆ ಪ್ರಪಂಚದ ಸೃಷ್ಟಿ ಸ್ಥಿತಿ ಲಯಗಳನ್ನು ಮಾಡುತ್ತಾನೆ. ಪ್ರಕೃತಿ ಪುರುಷರಲ್ಲಿ ಪ್ರಕೃತಿ ಪುರುಷರೂಪದಿಂದಿದ್ದು ಅವರಿಗೆ ಅತೀತನೂ ಆಗುತ್ತಾನೆ. ಮಾಯಾವಿಯೂ ತಾನೆ ಆಗಿರುತ್ತಾನೆ. ಸರ್ವವಿಶ್ವಧಾರಕ, ಸರ್ವದುಃಖ ಪರಿಹಾರಕ. ಅಂಥ ನಿನಗೆ ನಮಸ್ಕಾರ.

ಲೋಕದಲ್ಲಿ ಶ್ರೇಷ್ಠ ವ್ಯಕ್ತಿಗಳು ಯಾರೆ ಇರಲಿ, ಶ್ರೇಷ್ಠವಸ್ತು ಏನೇ ಇರಲಿ ಅವೆಲ್ಲಕ್ಕೂ ನಿನ್ನ ಸನ್ನಿಧಾನದಿಂದಲೆ ಶ್ರೇಷ್ಠತ್ವ ಬಂದಿದೆ. ಉದಾಹರಣೆಗೆ ತೇಜಸ್ವಿ-ಗಳಲ್ಲೆಲ್ಲ ಸೂರ್ಯ ಶ್ರೇಷ್ಠ. ನಾಲ್ಕು ವರ್ಣಗಳಲ್ಲಿ ಬ್ರಾಹ್ಮಣ. ನಕ್ಷತ್ರಗಳ ನಡುವೆ ಚಂದ್ರ. ರುದ್ರರಲ್ಲಿ, ವಿಷ್ಣುಭಕ್ತರಲ್ಲಿ ಶಂಕರ. ನಾಗರಲ್ಲಿ ಶೇಷ. ಪ್ರಜಾಪತಿಗಳಲ್ಲಿ ಬ್ರಹ್ಮ. ಸಿದ್ಧರಲ್ಲಿ ಕಪಿಲ. ಮುನಿಗಳಲ್ಲಿ ಸನತ್ಕುಮಾರ. ದೇವತೆಗಳಲ್ಲಿ ವಿಷ್ಣು. ದೇವಿಯರಲ್ಲಿ ಪ್ರಕೃತಿ. ಮನುಗಳಲ್ಲಿ ಸ್ವಾಯಂಭುವ. ಮಾನವರಲ್ಲಿ ವೈಷ್ಣವ. ನಾರಿಯರಲ್ಲಿ ಶತರೂಪೆ, ಋತುಗಳಲ್ಲಿ ವಸಂತ. ಮಾಸಗಳಲ್ಲಿ ಮಾರ್ಗಶೀರ್ಷ. ತಿಥಿಗಳಲ್ಲಿ ಏಕಾದಶಿ, ನದಿಗಳ ನಡುವೆ ಗಂಗೆ, ಪರ್ವತಗಳ ನಡುವೆ ಹಿಮಾಲಯ ಸಹನೆ ಉಳ್ಳವರಲ್ಲಿ ಭೂಮಿ, ಪತ್ರಗಳಲ್ಲಿ ತುಲಸಿಪತ್ರ, ವೃಕ್ಷಗಳಲ್ಲಿ ಗಂಧದ ಮರ, ಪುಷ್ಪಗಳಲ್ಲಿ ಪಾರಿಜಾತ, ಸಸ್ಯಗಳಲ್ಲಿ ಧಾನ್ಯಸಸ್ಯ, ಭಕ್ಷ್ಯವಸ್ತುಗಳಲ್ಲಿ ಅಮೃತ, ಆನೆಗಳಲ್ಲಿ ಐರಾವತ, ಪಕ್ಷಿಗಳಲ್ಲಿ ಗರುಡ, ಗೋವುಗಳಲ್ಲಿ ಕಾಮಧೇನು, ತೈಜಸ-

ಪದಾರ್ಥಗಳಲ್ಲಿ ಚಿನ್ನ, ಧಾನ್ಯಗಳಲ್ಲಿ ಯವ, ಪ್ರಾಣಿಗಳಲ್ಲಿ ಸಿಂಹ, ಯಕ್ಷರ ನಡುವೆ ಕುಬೇರ, ಗ್ರಹಗಳಲ್ಲಿ ಗುರು, ದಿಕ್ಪಾಲಕರಲ್ಲಿ ಇಂದ್ರ, ಶಾಸ್ತ್ರಗಳಲ್ಲಿ ವೇದ, ಪಂಡಿತರ ನಡುವೆ ಸರಸ್ವತಿ, ಅಕ್ಷರಗಳಲ್ಲಿ ಅಕಾರ, ಮಂತ್ರಗಳಲ್ಲಿ ವಿಷ್ಣುಮಂತ್ರ, ತೀರ್ಥಗಳಲ್ಲಿ ಗಂಗೆ, ಇಂದ್ರಿಯಗಳಲ್ಲಿ ಮನಸ್ಸು. ಆಯುಧಗಳಲ್ಲಿ ಸುದರ್ಶನ ಚಕ್ರ, ಜ್ವರಗಳಲ್ಲಿ ವೈಷ್ಣವ ಜ್ವರ, ತೇಜಸ್ಸುಗಳಲ್ಲಿ ಬ್ರಹ್ಮ ತೇಜಸ್ಸು, ಬಲಿಷ್ಠರಲ್ಲಿ ಬಲ, ಶೀಘ್ರಗಾಮಿಗಳಲ್ಲಿ ಮನಸ್ಸು, ಬಂಧಕಗಳಲ್ಲಿ ಕಾಲ, ಗುರುಗಳಲ್ಲಿ ಜ್ಞಾನದಾಯಕ, ಬಂಧುಗಳಲ್ಲ ಮಾತೆ, ಮಿತ್ರರಲ್ಲಿ ಜನ್ಮದಾತ, ಶಿಲ್ಪಿಗಳಲ್ಲಿ ವಿಶ್ವಕರ್ಮ, ಸುರೂಪಿಗಳಲ್ಲಿ ಮನ್ಮಥ, ಸ್ತ್ರೀಯರಲ್ಲಿ ಪತಿವ್ರತೆ, ಪ್ರಿಯರಲ್ಲಿ ಪುತ್ರ, ನರರಲ್ಲಿ ನರಪತಿ, ಯಂತ್ರಗಳಲ್ಲಿ ಶಾಲಗ್ರಾಮ, ಸುಖಹೇತುಗಳಲ್ಲಿ ಧರ್ಮ, ವೇದಗಳಲ್ಲಿ ಸಾಮವೇದ, ಧರ್ಮಗಳಲ್ಲಿ ಸತ್ಯ, ಜಲದಲ್ಲಿ ಶೈತ್ಯ, ನೆಲದಲ್ಲಿ ಗಂಧ, ಆಕಾಶದಲ್ಲಿ ಶಬ್ದ, ಯಜ್ಞಗಳಲ್ಲಿ ರಾಜಸೂಯ, ಛಂದಸ್ಸು-ಗಳಲ್ಲಿ ಗಾಯತ್ರಿ, ಗಂಧರ್ವರಲ್ಲಿ ಚಿತ್ರರಥ, ಪಂಚಗವ್ಯಗಳಲ್ಲಿ ಹಾಲು, ಪವಿತ್ರ-ವಸ್ತುಗಳಲ್ಲಿ ಅಗ್ನಿ, ಪುಣ್ಯಕರ್ಮಗಳಲ್ಲಿ ಸ್ತೋತ್ರ, ತೃಣಗಳಲ್ಲಿ ದರ್ಭೆ, ಶತ್ರುಗಳಲ್ಲಿ ವ್ಯಾಧಿ, ಗುಣಗಳಲ್ಲಿ ಶಾಂತಿ. ಇವೆಲ್ಲ ಶ್ರೇಷ್ಠವೆನಿಸಲು ನಿನ್ನ ವಿಭೂತಿರೂಪಗಳು ಇರುವುದೇ ಕಾರಣ.

ನೀನು ತೇಜೋರೂಪ, ಜ್ಞಾನರೂಪ, ಸರ್ವರೂಪ, ನಿನ್ನನ್ನು ಪೂರ್ತಿ ವರ್ಣಿಸಲು ಯಾರಿಂದಲೂ ಸಾಧ್ಯವಿಲ್ಲ. ಆಧಾರಗಳಲ್ಲಿ ವಾಯು, ನಿತ್ಯವಸ್ತುಗಳಲ್ಲಿ ಆತ್ಮ, ವ್ಯಾಪಕ-ವಸ್ತುಗಳಲ್ಲಿ ಆಕಾಶ ಶ್ರೇಷ್ಠವೆನಿಸಿದುದು ನಿನ್ನಿಂದಲೆ. ವೇದಗಳೂ ನಿನ್ನನ್ನು ಪೂರ್ತಿ ಹೊಗಳಲಾರವು. ಇನ್ನು ಉಳಿದವರ ಪಾಡೇನು ? ಸರಸ್ವತಿಯೂ ಈ ವಿಷಯದಲ್ಲಿ ಸೋತಳು. ಬೇರೆ ವಿದ್ವಾಂಸರು ಏನು ಮಾಡಬಲ್ಲರು ?

ಶುದ್ಧ ತೇಜೋರೂಪನಾಗಿದ್ದರೂ ಭಕ್ತರಿಗಾಗಿ ತನ್ನ ಶರೀರವನ್ನು ವ್ಯಕ್ತ ಮಾಡುವೆ. ಅತ್ಯಂತ ಮನೋಹರ ಶ್ಯಾಮರೂಪದ ನೀನು ಕೊಳಲೂದುವ ನಗುಮೊಗದ ದ್ವಿಭುಜ ಬಾಲರೂಪನಾಗಿ ಗೋಪಾಂಗನೆಯರ ಪ್ರೇಮಕಟಾಕ್ಷಕ್ಕೆ ಪಾತ್ರನಾಗಿರುವೆ. ರಾಧೆ ನೀಡುವ ತಾಂಬೂಲವನ್ನು ಮೆಲ್ಲುತ್ತ ರತ್ನ ಸಿಂಹಾಸನದಲ್ಲಿ ಮಂಡಿಸಿರುವೆ. ರತ್ನಾಭರಣ ಭೂಷಿತನಾಗಿರುವೆ. ಬಿಳಿ ಚಾಮರಗಳ ಸೇವೆ ಮಾಡುವ ಗೋಪಬಾಲಕ-ರಿಂದಲೂ ಪಾರ್ಷದರಿಂದಲೂ ಪರಿವೃತನಾಗಿರುವೆ. ವೃಂದಾವನದ ರಾಸಮಂಡಲ-ದಲ್ಲಿ ರಾಸಕ್ರೀಡಾರತನಾಗಿರುವೆ. ಗೋಲೋಕದಲ್ಲಿ ರತ್ನಮಯವಾದ ಶತಶೃಂಗ ಪರ್ವತದಲ್ಲಿಯೂ ವಿರಜಾನದೀತೀರದ ಮರಳಿನಲ್ಲಿಯೂ ವಿಹರಿಸುವೆ. ಪರಿಪೂರ್ಣನಾದ ಸತ್ಯಬ್ರಹ್ಮ ಸ್ವರೂಪನಾದ ರಾಧಾರಮಣನಾದ ಕೃಷ್ಣನೆ, ನಿನ್ನನ್ನು ನಮಿಸುವೆನು. ಶ್ರೀಕೃಷ್ಣನ ಈ ಸ್ತೋತ್ರವನ್ನು ತ್ರಿಸಂಧ್ಯೆಗಳಲ್ಲಿ ಪಠಿಸುವವನಿಗೆ ಧರ್ಮ-ಅರ್ಥಕಾಮ ಮೋಕ್ಷಗಳೆಲ್ಲವೂ ದೊರಕುವುವು. ಹರಿದಾಸ್ಯ ಹರಿಭಕ್ತಿಗಳು

ಲಭಿಸುವುವು. ಇಹಲೋಕದಲ್ಲಿ ಪೂಜ್ಯನೆನಿಸಿ ವಿಷ್ಣುವಿನಂತೆ ಬೆಳಗುತ್ತಾನೆ. ಸರ್ವಸಿದ್ಧಿಗಳನ್ನು ಪಡೆದು ಕೊನೆಯಲ್ಲಿ ಹರಿಪದವನ್ನು ಸೇರುತ್ತಾನೆ. ತೇಜಸ್ಸು ಯಶಸ್ಸುಗಳಲ್ಲಿ ಸೂರ್ಯನಂತೆ ಹೊಳೆಯುತ್ತಾನೆ. ಜೀವನ್ಮುಕ್ತನೆನಿಸುತ್ತಾನೆ. ಆರೋಗ್ಯ ಗುಣ ವಿದ್ಯೆ ಧನ ಷಟ್‌ಶಾಸ್ತ್ರ ಪಾಂಡಿತ್ಯ ಬಲ ಮನೋವೇಗಗಳನ್ನು ಹೊಂದಿ ಬೇಡಿದವರಿಗೆ ಸರ್ವಸಂಪತ್ತನ್ನು ನೀಡುವ ಕಲ್ಪವೃಕ್ಷದಂತಾಗುತ್ತಾನೆ.

ಪರಶುರಾಮ, ನೀನು ಪುಷ್ಕರಕ್ಷೇತ್ರದಲ್ಲಿ ಮಂತ್ರಸಿದ್ಧಿ ಮಾಡಿಕೊಳ್ಳು, ಆಗ ನಿನ್ನ ಅಭೀಷ್ಟ ಸಿದ್ಧಿಸುವುದು. ಇಪ್ಪತ್ತೊಂದು ಬಾರಿ ಭೂಪ್ರದಕ್ಷಿಣೆ ಮಾಡಿ ನನ್ನ ಆಶೀರ್ವಾದ ಮತ್ತು ಕೃಷ್ಣನ ಅನುಗ್ರಹಗಳಿಂದ ದುಷ್ಟಕ್ಷತ್ರಿಯರನ್ನು ನಾಶಗೊಳಿಸುವೆ.

**ಇಲ್ಲಿಗೆ ಶ್ರೀ ಬ್ರಹ್ಮವೈವರ್ತ ಮಹಾಪುರಾಣದಲ್ಲಿ ಮೂರನೆಯದಾದ ಗಣಪತಿಖಂಡದ ನಾರದ ನಾರಾಯಣ ಸಂವಾದದಲ್ಲಿ ಸ್ತೋತ್ರಪ್ರದಾನರೂಪವಾದ ಮೂವತ್ತೆರಡನೆ ಅಧ್ಯಾಯ ಮುಗಿಯಿತು.**

## ಪರಶುರಾಮನ ದಿಗ್ವಿಜಯಕ್ಕೆ ಶುಭಶಕುನಗಳು ಸ್ವಪ್ನದಲ್ಲಿ ಕಂಡವು

**ಅಧ್ಯಾಯ-೩೩**

ಪರಶುರಾಮ ಶಿವ, ಕಾಳಿ, ದುರ್ಗೆಯರನ್ನು ನಮಿಸಿ ಪುಷ್ಕರಕ್ಕೆ ಹೋಗಿ ಮಂತ್ರ ಸಿದ್ಧಿ ಪಡೆದ. ಒಂದು ತಿಂಗಳು ನಿರಾಹಾರನಾಗಿದ್ದು ಪ್ರಾಣಾಯಾಮ ಪೂರ್ವಕವಾಗಿ ಕೃಷ್ಣನ ಪಾದಕಮಲಗಳನ್ನು ಧ್ಯಾನಿಸಿದ. ಆಗ ಆಕಾಶದಲ್ಲಿ ದಶದಿಕ್ಕುಗಳನ್ನೂ ಬೆಳಗುತ್ತ ಸೂರ್ಯಮಂಡಲವನ್ನೂ ಮರೆಮಾಡುವ ಅಪಾರ ತೇಜೋಮಂಡಲದ ನಡುವೆ ರತ್ನ ವಿಮಾನದಲ್ಲಿದ್ದ ನಗುಮೊಗದ ಮನೋಹರ ರೂಪಿನ ಕೃಷ್ಣನನ್ನು ಕಂಡ. ದಂಡ ಪ್ರಣಾಮ ಮಾಡಿ 'ಇಪ್ಪತ್ತೊಂದು ಬಾರಿ ಭೂಮಿಯನ್ನು ಸುತ್ತಿ ದುಷ್ಟ ಕ್ಷತ್ರಿಯರನ್ನು ನಾಶ ಪಡಿಸುವೆ'ನೆಂದು ವರ ಬೇಡಿದ. ಭಕ್ತಿ ದಾಸ್ಯಗಳನ್ನೂ ಬೇಡಿದ. ಕೃಷ್ಣ ಆ ವರಗಳನ್ನು ನೀಡಿ ಅಂತರ್ಧಾನ ಹೊಂದಿದ.

ಪರಶುರಾಮ ಅಲ್ಲಿಂದ ಹೊರಟಾಗ ಶುಭಸೂಚಕವಾಗಿ ಬಲಭಾಗ ಸ್ಫುರಿಸಿತು. ರಾತ್ರಿ ಸುಸ್ವಪ್ನಗಳೂ ಕಂಡುಬಂದುವು. ಮನಸ್ಸು ಪ್ರಸನ್ನವಾಯಿತು. ತನ್ನ ಶಿಷ್ಯರನ್ನೂ ತಂದೆಯ ಶಿಷ್ಯರನ್ನೂ ಸೋದರಬಾಂಧವರನ್ನೂ ಕರೆಸಿ .ಮಂತ್ರಾಲೋಚನೆ ಮಾಡಿ ಅವರಿಂದೊಡಗೂಡಿ ಶತ್ರುನಾಶಕ್ಕೆ ಹೊರಟ. ಆಗಲೂ ಶುಭಶಕುನಗಳು ಕಂಡುಬಂದುವು. ಜಯಸೂಚಕ ಶಬ್ದಗಳೂ ಕೇಳಿಬಂದುವು. ಸಿಂಹಧ್ವನಿ ಗಂಟೆ ನಗಾರಿಗಳ

ಶಬ್ದಗಳೂ ಆಕಾಶವಾಣಿಯ ಜಯಗೀತಗಳೂ ಮೋಡಗಳ ಮಂಗಳಕರವಾದ ಗುಡುಗುಗಳೂ ಕೇಳಿಬಂದುವು. ಬ್ರಾಹ್ಮಣರು, ವಂದಿಮಾಗಧರು, ಜ್ಯೋತಿಷಿಗಳು, ಭಿಕ್ಷುಕರು ಇದಿರಲ್ಲಿ ಕಂಡುಬಂದರು. ಪತಿಪುತ್ರವತಿಯಾದ ಪತಿವ್ರತೆ ನಾನಾಲಂಕಾರ-ಭೂಷಿತಳಾಗಿ ಉರಿವ ದೀಪ ಹಿಡಿದು ನಗುಮೊಗದಿಂದ ನಿಂತಿರುವುದು ಕಾಣಿಸಿತು. ಹೆಣ, ನರಿ, ಪೂರ್ಣಕುಂಭ, ಗುಬ್ಬಚ್ಚಿ, ಮುಂಗುಸಿ, ಜಿಂಕೆ, ಆನೆ, ಸಿಂಹ, ಕುದುರೆ, ಖಡ್ಗಮೃಗ, ಚಮರೀಮೃಗ ರಾಜಹಂಸ, ಚಕ್ರವಾಕ, ಗಿಳಿ, ಕೋಗಿಲೆ, ನವಿಲು, ಖಂಜರೀಟ, ಶಂಖಚಿಲ್ಲ, ಚಕೋರ, ಪಾರಿವಾಳ, ಬೆಳ್ಳಕ್ಕಿ, ಬಾತು, ಜಾತಕ, ಮಿಂಚಿನ ಬಳ್ಳಿ, ಕಾಮನಬಿಲ್ಲು, ಸೂರ್ಯ, ಸೂರ್ಯಪ್ರಭೆ, ಮಾಂಸ, ಜೀವಂತವಾದ ಮೀನು, ಶಂಖ, ಚಿನ್ನ, ಮಾಣಿಕ್ಯ, ಬೆಳ್ಳಿ, ಮುತ್ತು, ಕೆಂಪು, ಹವಳ, ಮೊಸರು, ಅರಳು, ಬಿಳಿಧಾನ್ಯ, ಬಿಳಿಹೂ, ಕುಂಕುಮ, ಹಸುರೆಲೆ, ಧ್ವಜ, ಛತ್ರಿ, ಕನ್ನಡಿ, ಬಿಳಿಚಾಮರ, ಕರುಸಹಿತವಾದ ಹಸು, ರಥದಲ್ಲಿ ಕುಳಿತರಾಜ ಹಾಲು, ತುಪ್ಪ, ಅಡಿಕೆ, ಅಮೃತ, ಪಾಯಸ, ಶಾಲಗ್ರಾಮ, ಮಾಗಿದಹಣ್ಣು, ಸಕ್ಕರೆ, ಜೇನು, ಬೆಕ್ಕು, ಬಸವ, ಟಗರು, ಬೆಟ್ಟದ ಇಲಿ, ಮೋಡಮುಚ್ಚಿದ ಸೂರ್ಯನ ಉದಯ, ಚಂದ್ರಮಂಡಲ, ಕಸ್ತೂರಿ, ಬೀಸಣಿಗೆ, ತಿಳಿನೀರು, ಅರಿಶಿಣ, ಪುಣ್ಯಕ್ಷೇತ್ರದ ಮಣ್ಣು, ಬಿಳಿ ಮತ್ತು ಕಪ್ಪು ಸಾಸಿವೆ, ಗರಿಕೆ, ಬ್ರಾಹ್ಮಣ ಬಾಲಕ, ಬಾಲಿಕೆ, ಜಿಂಕೆ, ವೇಶ್ಯಾಸ್ತ್ರೀ, ದುಂಬಿ, ಕರ್ಪೂರ, ಪೀತಾಂಬರ, ಹಸುವಿನ ಗಂಜಲ, ಸಗಣಿ, ಪಾದಧೂಳಿ, ಗೋ ಪಾದ ಚಿಹ್ನೆ, ಕೊಟ್ಟಿಗೆ, ಗೋವುಗಳ ಸಂಚಾರಮಾರ್ಗ, ಆಭರಣ, ದೇವತಾವಿಗ್ರಹ, ಉರಿವಬೆಂಕಿ, ಮಹಾ ಉತ್ಸವ, ತಾಮ್ರಸ್ಫಟಿಕ, ಸಿಂದೂರ, ಹೂಮಾಲೆ, ಶ್ರೀಗಂಧ, ವಜ್ರ ಮುತ್ತು ಈ ಎಲ್ಲ ಶುಭಶಕುನಗಳನ್ನು ಪರಶುರಾಮ ತನ್ನ ಪ್ರಯಾಣಕಾಲದಲ್ಲಿ ಬಲಭಾಗದಲ್ಲಿ ಕಂಡ. ಸುಗಂಧಯುಕ್ತವಾದ ವಾಯು ಬೀಸಿತು. ಬ್ರಾಹ್ಮಣರು ಆಶೀರ್ವದಿಸಿದರು. ಇವೆಲ್ಲ ಇವೆಲ್ಲ ಶುಭಸೂಚಕವೆಂದು ತಿಳಿದು ಸಂತೋಷದಿಂದ ಪ್ರಯಾಣ ಮಾಡಿ ಸೂರ್ಯಾಸ್ತಮಯಕಾಲದಲ್ಲಿ ನರ್ಮದಾ ನದೀ ತೀರವನ್ನು ಸೇರಿದ, ಪರಶುರಾಮ. ಅಲ್ಲಿ ದಿವ್ಯ ಮನೋಹರವಾದ ಅಕ್ಷಯ ವಟವೃಕ್ಷದ ಬುಡದಲ್ಲಿ ಕುಬೇರ ಹಿಂದೆ ತಪಗೈದಿದ್ದ ಪುಣ್ಯಾಶ್ರಮದಲ್ಲಿ ಹೂವಿನ ಹಾಸಿಗೆ ಮೇಲೆ ಮಲಗಿದ. ಬೆಳಗಿನ ಜಾವದಲ್ಲಿ ಒಳ್ಳೆಯ ಕನಸುಗಳನ್ನೂ ಕಂಡ.

ಒಳ್ಳೆಯ ಕನಸುಗಳೆಂದರೆ ಆನೆ ಕುದುರೆ ಬೆಟ್ಟ ಮಹಡಿ ಎತ್ತು ಮರಗಳನ್ನೇರಿದಂತೆ, ಕ್ರಿಮಿಗಳು ಕಚ್ಚಿದಂತೆ, ದೋಣಿಯೇರಿದಂತೆ, ಗಂಧಮಾಲ್ಯ ಪೀತಾಂಬರಗಳನ್ನು ಧರಿಸಿದಂತೆ, ಮೈಗೆಲ್ಲ ಮಲಮೂತ್ರ ಕೀವು ಮಜ್ಜೆಗಳ ಲೇಪವಾದಂತೆ, ವೀಣಾವಾದನ ಮಾಡಿದಂತೆ, ಕಮಲದ ಎಲೆಯಲ್ಲಿ ಮೊಸರು ತುಪ್ಪ ಜೇನು ಬೆರೆತ ಪಾಯಸ ಉಂಡಂತೆ, ತಾಂಬೂಲ ಮೆದ್ದಂತೆ, ಬ್ರಾಹ್ಮಣಾಶೀರ್ವಾದ ಪಡೆದಂತೆ, ಹೂಹಣ್ಣು ದೀಪಗಳನ್ನು ಕಂಡಂತೆ ಹಾಲು ಹಣ್ಣು ಸಕ್ಕರೆ ಬೆರೆಸಿದ ಅನ್ನಗಳನ್ನು ಉಂಡಂತೆ, ಜಿಗಣೆ

ಜೇಳು ಮೀನು ಹಾವುಗಳು ಕಚ್ಚಿದಂತೆ, ಭಯದಿಂದ ಓಡಿದಂತೆ, ಚಂದ್ರ, ಸೂರ್ಯ, ಪತಿಪುತ್ರವತಿಯಾದ ನಾರಿಯರನ್ನು ಕಂಡಂತೆ. ಅಲಂಕೃತಕನ್ಯೆ, ನಗುಮೊಗದ ಬ್ರಾಹ್ಮಣರು ತನ್ನನ್ನು ಆಲಿಂಗಿಸಿದಂತೆ, ಫಲಪುಷ್ಪ ಭರಿತವಾದ ವೃಕ್ಷ, ದೇವತಾ ಪ್ರತಿಮೆ, ಆನೆಯ ಮೇಲೆ ಅಥವಾ ರಥದಲ್ಲಿ ಕುಳಿತ ರಾಜ, ಮನೆಯೊಳಗೆ ಪ್ರವೇಶಿಸುತ್ತಿರುವ ಪೀತಾಂಬರ ರತ್ನಾಭರಣಗಳಿಂದ ಒಪ್ಪುವ ಬ್ರಾಹ್ಮಣ ಸ್ತ್ರೀ, ಶಂಖ, ಸ್ಫಟಿಕ, ಬಿಳಿ ಹೂಮಾಲೆ, ಮುತ್ತು, ಶ್ರೀಗಂಧ, ಚಿನ್ನ ಬೆಳ್ಳಿ ರತ್ನ, ಆನೆ, ಎತ್ತು, ಹಾವು, ಬಿಳಿಚಾಮರ, ಕನ್ನೈದಿಲೆ, ಕನ್ನಡಿಗಳನ್ನು ಕಂಡಂತೆ, ನವರತ್ನಾಭರಣ ಜಾಜಿಯ ಹೂಮಾಲೆಗಳಿಂದ ಅಲಂಕೃತನಾಗಿ ತಾನು ರಥವೇರಿರುವಂತೆ, ರತ್ನಸಿಂಹಾಸನದಲ್ಲಿ ಕುಳಿತಿರುವಂತೆ, ಕಮಲ, ಪೂರ್ಣಕುಂಭ, ಮೊಸರು, ಅರಳಿ, ತುಪ್ಪ, ಜೇನುತುಪ್ಪ, ಛತ್ರಿ, ಛತ್ರಿಹಿಡಿದ ಜನರು, ಬಕಹಂಸಳ ಪೂರ್ಣಕುಂಭ ಹಿಡಿದ ಕನ್ಯೆಯರ ಸಾಲುಗಳು, ಉನ್ನತವಾದ ಮಂಟಪದಲ್ಲಿ ಹರಿಹರರನ್ನು ಪೂಜಿಸುವ ಜಯಘೋಷ ಮಾಡುವ ಬ್ರಾಹ್ಮಣರು, ಅಮೃತ ಫಲಪುಷ್ಪ ಶ್ರೀಗಂಧಗಳ ವೃಷ್ಟಿ, ಹೊಸ ಮಾಂಸ, ಬದುಕಿರುವ ಮೀನು ನವಿಲು ಸರೋವರ ಪುಣ್ಯತೀರ್ಥ ಪಾರಿವಾಳ ಗಿಳಿ ಗುಬ್ಬಚ್ಚಿ ಶಂಖಚಿಲ್ಲ, ಜಾತಕ ಹುಲಿ ಸಿಂಹ ಹಸು ಗೋರೋಚನ ಅರಿಶಿಣ ಬಿಳಿ ಧಾನ್ಯ ಉನ್ನತವಾದ ಪರ್ವತ, ಉರಿವ ಬೆಂಕಿ, ಗರಿಕೆಹುಲ್ಲು, ದೇವಾಲಯಗಳು, ಪೂಜೆಗೊಂಡ ಶಿವಲಿಂಗ ಪಾರ್ವತೀ ಪ್ರತಿಮೆಗಳು, ಅಕ್ಕಿ ಗೋದಿ ಹಿಟ್ಟುಗಳ ಭಕ್ಷ್ಯಗಳು, ಅವುಗಳನ್ನು ತಾನು ತಿನ್ನುವುದು, ಕುಣಿಯುತ್ತಿರುವ ವೇಶ್ಯೆಯನ್ನು ಕಾಣುವುದು, ರಕ್ತಪಾನ, ಸುರಾಪಾನ, ಮೈಗೆ ರಕ್ತಲೇಪನ, ಹಳದಿ ಬಣ್ಣದ ಪಕ್ಷಿಗಳ ಮನುಷ್ಯರ ಮಾಂಸ ತಿಂದಂತೆ ಕಾಣುವುದು, ಸಂಕೋಲೆಗಳ ಬಂಧನದಲ್ಲಿದ್ದಂತೆ ಶಸ್ತ್ರಾಘಾತವಾದಂತೆ ಕಾಣುವುದು ಇವೆಲ್ಲವೂ ಬೆಳಗುಜಾವದಲ್ಲಿ ಕನಸಿನಲ್ಲಿ ಕಂಡರೆ ಶುಭವಾಗುವುದು. ಮಲಗುವಾಗ ಇವನ್ನು ಮೊದಲಿಗೆ ಆಲೋಚಿಸಿರಬಾರದು ಮತ್ತು ವಾತಪಿತ್ತಕಫಗಳ ದೋಷದಿಂದ ಕನಸು ಬಿದ್ದಿರಬಾರದು. ಆಗ ಮಾತ್ರ ಕನಸುಗಳು ಶುಭಸೂಚಕಗಳಾಗುವುವು.

ಪರಶುರಾಮ ಶುಭ ಸ್ವಪ್ನಗಳನ್ನು ಕಂಡು ಎದ್ದು ಹರಿಸ್ಮರಣೆ ಮಾಡಿ ಪ್ರಾತಃಕಾಲದ ಅನುಷ್ಠಾನಗಳನ್ನು ತೀರಿಸಿದ. ಸುಸ್ವಪ್ನ ದರ್ಶನದಿಂದ ಸಂತುಷ್ಟನಾಗಿ ಎಲ್ಲ ಶತ್ರುಗಳನ್ನೂ ಗೆಲ್ಲುವೆನೆಂದು ವಿಶ್ವಾಸ ಹೊಂದಿದ.

**ಇಲ್ಲಿಗೆ ಶ್ರೀ ಬ್ರಹ್ಮವೈವರ್ತ ಮಹಾಪುರಾಣದಲ್ಲಿ ಮೂರನೆಯದಾದ ಗಣಪತಿಖಂಡದ ನಾರದ ನಾರಾಯಣ ಸಂವಾದದಲ್ಲಿ ಮೂವತ್ತಮೂರನೆ ಅಧ್ಯಾಯ ಮುಗಿಯಿತು.**

# ಕಾರ್ತವೀರ್ಯಾರ್ಜುನನಿಗೆ ದುಸ್ವಪ್ನ ದರ್ಶನ. ರಾಣಿ ಮನೋರಮೆಯ ಮಾತು ಕೇಳದೆ ಯುದ್ಧಕ್ಕೆ ಪ್ರಯಾಣ

ಅಧ್ಯಾಯ-೩೪

ಪರಶುರಾಮ ಅಲ್ಲಿಗೆ ಸಮೀಪದಲ್ಲಿಯೆ ಇದ್ದ ಕಾರ್ತವೀರ್ಯನ ಅರಮನೆಗೆ ದೂತನನ್ನಟ್ಟಿದ. ದೂತ ರಾಜನ ಆಸ್ಥಾನಕ್ಕೆ ಬಂದು ನುಡಿದ—

'ರಾಜನ್, ನರ್ಮದಾತೀರದ ಅಕ್ಷಯವಟದ ಬುಡದಲ್ಲಿ ಪರಶುರಾಮ ತನ್ನ ಸೋದರರೊಂದಿಗೆ ಬಂದು ಬಿಡಾರ ಮಾಡಿದ್ದಾನೆ. ನೀನು ನಿನ್ನ ಬಂಧುಗಳೊಂದಿಗೆ ಮತ್ತು ನಿನ್ನ ಜಾತಿಯ ಎಲ್ಲ ಕ್ಷತ್ರಿಯ ವೀರರೊಂದಿಗೆ ಹೊರಟು ಅವನೊಡನೆ ಯುದ್ಧ ಮಾಡು. ಅವನು ಇಪ್ಪತ್ತೊಂದು ಬಾರಿ ಭೂಪ್ರದಕ್ಷಿಣೆ ಮಾಡಿ ಕ್ಷತ್ರಿಯರನ್ನು ನಾಶ ಮಾಡಲು ಪ್ರತಿಜ್ಞೆ ಗೈದಿದ್ದಾನೆ.'

ಹೀಗೆ ಹೇಳಿ ದೂತ ಪರಶುರಾಮನ ಬಳಿಗೆ ಹಿಂತಿರುಗಿದ. ರಾಜ ಯುದ್ಧ-ಸನ್ನದ್ಧನಾಗಿ ಹೊರಟುನಿಂತ. ರಾಣಿ ಮನೋರಮೆ ತಡೆದಳು. ರಾಜ ಅವಳಿಗೆ ಸಮಾಧಾನದ ಮಾತುಗಳನ್ನಾಡಿದ—

'ಪ್ರಿಯೆ, ಪರಶುರಾಮ ನನ್ನನ್ನೆ ಯುದ್ಧಕ್ಕೆ ಕರೆಯುತ್ತಿದ್ದಾನೆ. ಶಿವನಿಂದ ಶ್ರೀಹರಿಯ ಮಂತ್ರ ಕವಚಗಳನ್ನು ಶಸ್ತ್ರಗಳನ್ನೂ ಪಡೆದಿದ್ದಾನೆ. ಇಪ್ಪತ್ತೊಂದು ಬಾರಿ ಭೂಮಿಯ ಮೇಲಿನ ಎಲ್ಲ ಕ್ಷತ್ರಿಯರನ್ನೂ ನಾಶಮಾಡುವ ಪ್ರತಿಜ್ಞೆ ತೊಟ್ಟಿದ್ದಾನೆ. ನನ್ನ ಪ್ರಾಣಗಳು ಈಗ ದೋಲಾಯಮಾನವಾಗಿವೆ, ಮನಸ್ಸು ಉದ್ವಿಗ್ನವಾಗಿದೆ. ನನ್ನ ಶರೀರದ ಎಡಭಾಗ ಅದುರುತ್ತಿದೆ. ದುಃಸ್ವಪ್ನದರ್ಶನವೂ ಆಗಿದೆ.

ದುಃಸ್ವಪ್ನಗಳು ಇವು- ಮೈಗೆ ಎಣ್ಣೆ ಬಳಿದುಕೊಂಡು ಕತ್ತೆಯನ್ನೇರುವುದು, ಕೆಂಪು ಚಂದನ, ಕೆಂಪು ದಾಸವಾಳ ಹೂ, ಕೆಂಪುಬಟ್ಟೆ, ಕಬ್ಬಿಣದ ಆಭರಣಗಳನ್ನು ಧರಿಸು-ವುದು, ಇಜ್ಜಲಿನ ರಾಶಿಯಲ್ಲಿ ಆಟವಾಡುತ್ತ ನಗುವುದು, ನೆಲವೆಲ್ಲ ಬೂದಿ ಮುಚ್ಚಿ-ದಂತೆ, ಕೆಂಪುದಾಸವಾಳ ಹೂಗಳಿಂದಾವೃತವಾದಂತೆ ಕಾಣುವುದು, ಸೂರ್ಯಚಂದ್ರ-ರಿಲ್ಲದ ಕೆಂಬಣ್ಣದ ಆಕಾಶ, ಕೆಂಪುಬಟ್ಟೆ ಉಟ್ಟು ತಲೆಗೂದಲು ಕೆದರಿಕೊಂಡು ಅಟ್ಟಹಾಸದಿಂದ ಕುಣಿವ ಮೂಗಿಲ್ಲದ ವಿಧವಾಸ್ತ್ರೀ, ಬೆಂಕಿ ಆರಿ ಬೂದಿಮಾತ್ರವಿರುವ ಚಿತೆ, ಭಸ್ಮರಕ್ತ ಬೆಂಕಿಗಳ ಮಳೆಯಾಗುವುದು, ತಾಳೆಹಣ್ಣುಗಳಿಂದ ತುಂಬಿದ ನೆಲದಲ್ಲಿ ಎಲ್ಲೆಡೆ ಮೂಳೆಗಳು, ಕತ್ತರಿಸಿ ಹಾಕಿದ ಕೂದಲು ಉಗುರು, ಉಪ್ಪು, ಕವಡೆ ಹಿಟ್ಟುಗಳ ರಾಶಿಗಳು, ಎಣ್ಣೆಯ ಪ್ರವಾಹ, ಹೂಬಿಟ್ಟ ಅಶೋಕ ಕೆಂಪುಕಣಗಿಲೆ ಮರಗಳು, ತಾಳೆಮರದಿಂದ ಉದುರುವ ಹಣ್ಣುಗಳು, ತನ್ನ ಕೈಯಿಂದ ಪೂರ್ಣಕಲಶ ಬಿದ್ದು

ಒಡೆಯುವುದು, ಚಂದ್ರ ಸೂರ್ಯಮಂಡಲಗಳು ಆಕಾಶದಿಂದ ಜಾರಿ ಬೀಳುವುದು, ಉಲ್ಕಾಪಾತ, ಧೂಮಕೇತು, ಚಂದ್ರಸೂರ್ಯಗ್ರಹಣಗಳು, ದೊಡ್ಡ ಬಾಯಿಯ ಭಯಂಕರ ವಿಕೃತಾಕಾರದ ದಿಗಂಬರನಾದ ಪುರುಷ ತನ್ನ ಮುಂದೆ ಬರುವುದು, ವಸ್ತ್ರಾಲಂಕಾರ ಭೂಷಿತಳಾದ ಹನ್ನೆರಡು ವರ್ಷ ವಯಸ್ಸಿನ ಕನ್ಯೆ ಕೋಪಗೊಂಡು ತನ್ನ ಮನೆಯಿಂದ ಹೊರಗೆ ಹೋಗುವುದು, ''ನಿನ್ನ ಮನೆಯನ್ನು ತೊರೆದು ಕಾಡಿಗೆ ಹೋಗುವೆನು, ಆಜ್ಞೆ ನೀಡೆಂದು'' ತನ್ನ ಹೆಂಡತಿ ಹೇಳುವುದು, ಬ್ರಾಹ್ಮಣ, ಸನ್ಯಾಸಿ, ಗುರುಗಳು ಕೋಪಗೊಂಡು ಶಪಿಸುವುದು, ಗೋಡೆಯ ಮೇಲೆ ಬರೆದ ಚಿತ್ರದ ಗೊಂಬೆಗಳೆದ್ದು ಕುಣಿಯುವುದು, ಹದ್ದು ಕಾಗೆ ಕೋಣಗಳು ತನ್ನನ್ನು ಪೀಡಿಸುವುದು ಗಾಣಿಗ ತನ್ನನ್ನು ಗಾಣದಲ್ಲಿ ಹಾಕಿ ತಿರುವುದು, ದಿಗಂಬರರಾದ ಪಾಶಧಾರಿಗಳು, ಗಾಯನ, ನರ್ತನ, ವಿವಾಹ ಮಹೋತ್ಸವಗಳಲ್ಲಿ ಎಲ್ಲರೂ ಆನಂದಿಸುತ್ತಿರುವುದು, ಜನರು ಪರಸ್ಪರ ಕೂದಲುಗಳನ್ನು ಹಿಡಿದೆಳೆದು ಜಗಳಾಡುವುದು, ಕಾಗೆ ನಾಯಿಗಳು ಜಗಳಾಡುವುದು, ಶವಯುಕ್ತವಾದ ಸ್ಮಶಾನ, ಕಪ್ಪುಬಟ್ಟೆಯುಟ್ಟು ತಲೆಗೂದಲು ಕೆದರಿ-ಕೊಂಡು ಕಪ್ಪುಬಣ್ಣದ ವಿಧವೆ ತನ್ನನ್ನು ಆಲಿಂಗಿಸುವುದು; ಹಜಾಮ ತಲೆಕೂದಲು ಗಡ್ಡ ಮೀಸೆ ಎದೆಯ ರೋಮ ಉಗುರುಗಳನ್ನು ಕತ್ತರಿಸುವುದು; ರಾಶಿಯಾಗಿ ಬಿದ್ದ ಪಾದುಕೆಯ ಚರ್ಮ ಹಗ್ಗಗಳು, ತಿರುಗುತ್ತಿರುವ ಕುಂಬಾರನ ಚಕ್ರ, ಬಿರುಗಾಳಿಗೆ ಸಿಲುಕಿ ಬೇರುಸಹಿತ ಕಿತ್ತು ತಿರುಗುವ ಒಣಗಿದ ಮರ, ತಿರುಗುವ ಮುಂಡ, ರುಂಡಮಾಲೆಗಳು, ಬೆಂಕಿ ಉಗುಳುತ್ತಿರುವ ಭೂತಪ್ರೇತಗಳು, ಸುಟ್ಟಮರ, ವ್ಯಾಧಿಗ್ರಸ್ತ ಮನುಷ್ಯ, ಅಂಗವಿಕಲನಾದ ಶೂದ್ರ, ಮನೆ ಬೆಟ್ಟ ಮರಗಳು ಇದ್ದಕ್ಕಿದ್ದಂತೆ ಬೀಳುವುದು, ಪದೇಪದೇ ಸಿಡಿಲು ಬಡಿಯುವುದು, ನಾಯಿನರಿಗಳು ಅಳುವುದು, ದಿಗಂಬರನಾಗಿ ತಲೆಗೂದಲು ಕೆದರಿಕೊಂಡು ತಲೆಕೆಳಗಾಗಿ ತಿರುಗುವ ಮನುಷ್ಯ, ಗ್ರಾಮದ ಹೆಬ್ಬಾಗಿಲಲ್ಲಿ ಗ್ರಾಮದೇವತೆ ವಿಕಾರವಾಗಿ ಅಳುವುದು -ಇವೆಲ್ಲವೂ ದುಃಸ್ವಪ್ನಗಳು.

ಪ್ರಿಯೆ, ಇಂಥ ಕನಸುಗಳನ್ನು ಬೆಳಗಿನ ಜಾವದಲ್ಲಿ ಕಂಡು ಹಾಸಿಗೆ ಬಿಟ್ಟೆದ್ದಿದ್ದೇಕೆ ? ಈಗ ನಾನೇನು ಮಾಡಲಿ ?'

ರಾಜನ ಈ ಮಾತುಗಳನ್ನು ಕೇಳಿ ರಾಣಿ ದುಃಖಿಗೊಂಡು ಗದ್ಗದ ಕಂಠದಿಂದ ನುಡಿದಳು—

'ನಾಥ, ಪರಶುರಾಮ, ನಾರಾಯಣ ಸಂಭೂತ. ಲಯಕಾರಕನಾದ ರುದ್ರನ ಶಿಷ್ಯ. ಮಹಾಬಲಿಷ್ಠ. ಇಪ್ಪತ್ತೊಂದು ಬಾರಿ ಕ್ಷತ್ರಿಯರನ್ನು ಭೂಮಿಯ ಮೇಲಿಂದ ಒರೆಸಿ-ಹಾಕುವ ಪ್ರತಿಜ್ಞೆ ಮಾಡಿದವ. ಅಂಥವನೊಡನೆ ಯುದ್ಧ ಬೇಡ. ಪಾಪಿ ರಾವಣನನ್ನು ಗೆದ್ದ ಶೂರ ತಾನೆಂದು ನೀನು ತಿಳಿದಿರಬಹುದು. ಆದರೆ ಆತ ನಿನ್ನ ಪರಾಕ್ರಮಕ್ಕೆ

ಸೋಲಲಿಲ್ಲ, ತನ್ನ ಪಾಪದಿಂದಲೆ ಸೋಲನ್ನಪ್ಪಿದ. ಧರ್ಮವನ್ನು ಯಾರು ಕಾಪಾಡು-ವುದಿಲ್ಲವೊ ಅವನನ್ನು ಯಾರುತಾನೆ ಕಾಪಾಡಬಲ್ಲ ? ಅವನು ಸ್ವಯಂ ನಾಶ ಹೊಂದುತ್ತಾನೆ. ಬದುಕಿದ್ದರೂ ಸತ್ತಂತೆ ಇರುತ್ತಾನೆ. ಶುಭಾಶುಭ ಕರ್ಮಗಳಿಗೆ ಧರ್ಮ ಸಾಕ್ಷಿಯಾಗಿರುತ್ತಾನೆ. ಇದನ್ನು ನೀನು ತಿಳಿದಿಲ್ಲ. ಪತ್ನೀ ಪುತ್ರಾದಿ ಸಕಲೈಶ್ವರ್ಯಗಳೂ ನೀರಗುಳ್ಳೆಯಂತೆ ಅಶಾಶ್ವತ. ಸಂಸಾರಸುಖ ಸ್ವಪ್ನದಂತೆ ಕ್ಷಣಿಕವೆಂದು ತಿಳಿದು ಭಾರತ ಭೂಮಿಯಲ್ಲಿ ಸಜ್ಜನರು ತಪಸ್ಸು ಮಾಡುತ್ತಾರೆ. ದತ್ತಾತ್ರೇಯ ಬೋಧಿಸಿದ್ದ ಜ್ಞಾನ-ವನ್ನೆಲ್ಲ ನೀನು ಮರೆತಿರುವೆ. ಇಲ್ಲದಿದ್ದರೆ ಬ್ರಾಹ್ಮಣಹತ್ಯೆ ಮಾಡುವ ದುರ್ಬುದ್ಧಿ ನಿನ್ನ ಮನಸ್ಸಿನಲ್ಲಿ ಹೇಗೆ ಉಂಟಾಯಿತು ? ವಿನೋದಕ್ಕಾಗಿ ಬೇಟೆಯಾಡಲು ಹೋಗಿ ಹಸಿದು ಬ್ರಾಹ್ಮಣನ ಆಶ್ರಮದಲ್ಲಿ ಮೃಷ್ಟಾನ್ನ ಉಂಡು ಆ ಬ್ರಾಹ್ಮಣನನ್ನೆ ನಿರರ್ಥಕವಾಗಿ ಕೊಂದೆ. ಗುರು ಬ್ರಾಹ್ಮಣ ದೇವತೆಗಳ ಮೇಲೆ ಆಕ್ರಮಣ ಮಾಡಿದರೆ ಇಷ್ಟದೈವ ಮುನಿದು ಆಪತ್ತು ತಂದುಕೊಡುತ್ತದೆ.

ನಾಥ, ನೀನೀಗ ದತ್ತಾತ್ರೇಯನ ಪಾದಕಮಲಗಳನ್ನು ಸ್ಮರಿಸು. ಗುರುಭಕ್ತಿ ಒಂದಿದ್ದರೆ ಎಲ್ಲ ಆಪತ್ತುಗಳೂ ಪರಿಹಾರವಾಗುವುವು. ಗುರುದೇವನನ್ನು ಪೂಜಿಸಿ ಆ ಪರಶುರಾಮನನ್ನೂ ಶರಣುಹೊಂದು. ದೇವತೆಗಳೂ ಬ್ರಾಹ್ಮಣರೂ ಒಲಿದರೆ ಕ್ಷತ್ರಿಯರಿಗೆ ಎಂದೂ ಹಾನಿಯಾಗಲಾರದು. ಬ್ರಾಹ್ಮಣನಿಗೆ ರಾಜ ಸೇವಕ. ರಾಜನಿಗೆ ವೈಶ್ಯ ಸೇವಕ. ಇವರೆಲ್ಲರಿಗೂ ಶೂದ್ರ ಸೇವಕ. ಆದ್ದರಿಂದ ಕ್ಷತ್ರಿಯ ಕ್ಷತ್ರಿಯನನ್ನು ಶರಣು ಹೊಂದಿದಾಗ ಅಪಕೀರ್ತಿ ಉಂಟಾದರೂ ಗುರು ದೇವ ಬ್ರಾಹ್ಮಣರನ್ನು ಶರಣು ಹೊಂದಿದಾಗ ಮಹತ್ತಾದ ಕೀರ್ತಿಯೆ ಲಭಿಸುವುದು. ದೇವತೆಗಳಿಗಿಂತಲೂ ಬ್ರಾಹ್ಮಣ ಶ್ರೇಷ್ಠ. ಅವನು ಒಲಿದರೆ ಎಲ್ಲ ದೇವತೆಗಳೂ ಒಲಿಯುತ್ತಾರೆ. ಆದ್ದರಿಂದ ಬ್ರಾಹ್ಮಣನಾದ ಪರಶುರಾಮನನ್ನು ಶರಣು ಹೊಂದು.'

ಹೀಗೆ ಹೇಳಿ ರಾಣಿ ಕಾರ್ತವೀರ್ಯನನ್ನು ತನ್ನೆದೆಗೆ ಅಪ್ಪಿಕೊಂಡು ಅವನ ಮುಖವನ್ನು ದಿಟ್ಟಿಸುತ್ತ ವಿಲಾಪ ಮಾಡಿದಳು, ಅತ್ತಳು. ಪುನಃ ಹೇಳಿದಳು—

'ಮಹಾರಾಜ, ಒಂದುಕ್ಷಣ ನಿಲ್ಲು. ಸ್ನಾನಮಾಡು. ನಿನಗೆ ಇಷ್ಟವಾದ ಭೋಜನ ನೀಡಿ ತೃಪ್ತಿಪಡಿಸುತ್ತೇನೆ. ಚಂದನ ಅಗರು ಕಸ್ತೂರಿ ಕರ್ಪೂರ ಕುಂಕುಮಗಳ ಲೇಪವನ್ನು ಸರ್ವಾಂಗಗಳಿಗೂ ಲೇಪಿಸುತ್ತೇನೆ. ಹೂವಿನ ಹಾಸಿಗೆಯಲ್ಲಿ ಮಲಗಿಸು-ತ್ತೇನೆ. ಸತಿಯರಿಗೆ ಪತಿಯೆಂದರೆ ನೂರುಮಂದಿ ಪುತ್ರರಿಗಿಂತ ಹೆಚ್ಚು ಎಂದು ವೇದಗಳಲ್ಲಿ ಶ್ರೀಹರಿಯೆ ಹೇಳಿದ್ದಾನೆ.'

ರಾಜ ಹೇಳಿದ, 'ಪ್ರಿಯೆ, ಕೇಳು, ನೀನು ಹೇಳಿದುದನ್ನೆಲ್ಲ ನಾನು ಕೇಳಿದ್ದೇನೆ. ಆದರೆ ದುಃಖಾರ್ತರಾದ ಜನರು ಆಡುವ ಮಾತಿಗೆ ಬಲ್ಲವರು ಏನೂ ಬೆಲೆ ಕೊಡುವುದಿಲ್ಲ. ಜೀವಿಗಳಿಗೆ ಸುಖದುಃಖ ಭಯ ಶೋಕ ಕಲಹ ಪ್ರೀತಿ ಎಲ್ಲವೂ

ಕರ್ಮಾನುಗುಣವಾಗಿ ಆಯಾ ಕಾಲದಲ್ಲಿ ಬಂದೇ ಬರುವುದು. ಕಾಲರೂಪಿಯಾದ ಶ್ರೀಕೃಷ್ಣ ಸೃಷ್ಟಿಕರ್ತನಿಗೂ ಸೃಷ್ಟಿಕರ್ತ, ಲಯಕಾರನಿಗೂ ಲಯಕಾರಕ, ಪಾಲಕನಿಗೂ ಪಾಲಕ. ಕರ್ಮಕ್ಕೆ ಫಲ ನೀಡುವವ ಅವನೆ. ಯಾರು ಯಾರನ್ನು ಕೊಲ್ಲುತ್ತಾನೆ ? ಸೃಜಿಸುವವನಾಗಲಿ ಸಂಹರಿಸುವವನಾಗಲಿ ಪಾಲಿಸುವವನಾಗಲಿ ಕೃಷ್ಣನ ಆಜ್ಞೆಯಂತೆಯೆ ನಡೆಯುತ್ತಾರೆ. ಅವನ ಇಚ್ಛೆಯಂತೆಯೆ ಎಲ್ಲ ನಡೆಯುತ್ತದೆ. ಮಾನವನ ಇಚ್ಛೆಯಂತೆ ಏನೂ ಆಗುವುದಿಲ್ಲ. ಪರಶುರಾಮ ನಾರಾಯಣನ ಅಂಶ. ಇಪ್ಪತ್ತೊಂದು ಬಾರಿ ಕ್ಷತ್ರಿಯರನ್ನು ಅಳಿಸುವೆನೆಂದು ಆತ ಪ್ರತಿಜ್ಞೆ ಮಾಡಿದ್ದಾನೆ ಎಂದರೆ ಅದು ಎಷ್ಟು ಮಾತ್ರಕ್ಕೂ ವಿಫಲವಾಗದು. ನಾನು ಅವನಿಂದ ಹತನಾಗುವುದು ನಿಶ್ಚಿತ. ಇದು ನನಗೆ ಗೊತ್ತಿದೆ. ಗೊತ್ತಿದ್ದೂ ನಾನು ಅವನನ್ನು ಹೇಗೆ ಶರಣುಹೊಂದಲಿ ? ಪ್ರತಿಷ್ಠಿತರಾದ ವ್ಯಕ್ತಿಗಳಿಗೆ ಅಪಕೀರ್ತಿ ಎಂಬುದು ಮರಣಕ್ಕಿಂತ ಹೆಚ್ಚು.'

ಹೀಗೆ ಹೇಳಿ ಕಾರ್ತವೀರ್ಯಾರ್ಜುನ ರಣರಂಗಕ್ಕೆ ಹೊರಟುನಿಂತ. ವಾದ್ಯಘೋಷಪೂರ್ವಕವಾಗಿ ಸ್ವಸ್ತಿವಾಚನ ಮಾಡಿಸಿದ. ನೂರುಕೋಟಿ ರಾಜರು ಮೂರುಲಕ್ಷ ರಾಜೇಂದ್ರರು, ನೂರು ಅಕ್ಷೌಹಿಣಿ ಸೇನೆ, ಅಸಂಖ್ಯ ಆನೆ ಕುದುರೆ ರಥ ಪದಾತಿಗಳು ಇವರೆಲ್ಲರಿಂದೊಡಗೂಡಿ ಯುದ್ಧಕ್ಕೆ ಹೊರಟು ಬಿಲ್ಲನ್ನೂ ಅಕ್ಷಯ ಬತ್ತಳಿಕೆಯನ್ನೂ ಕೈಗೆತ್ತಿಕೊಂಡ. ರಾಣಿ ಈಗ ಸುಮ್ಮನಾದಳು. ಅಂತಃಪುರದಲ್ಲಿ ಅವನನ್ನು ತಬ್ಬಿಕೊಂಡಳು. ಮುಖಕಮಲವನ್ನು ನೋಡುತ್ತ ಪುನಃಪುನಃ ಮುದ್ದಿಸಿದಳು.

**ಇಲ್ಲಿಗೆ ಶ್ರೀ ಬ್ರಹ್ಮವೈವರ್ತ ಮಹಾಪುರಾಣದಲ್ಲಿ ಮೂರನೆಯದಾದ ಗಣಪತಿಖಂಡದ ನಾರದ ನಾರಾಯಣ ಸಂವಾದದಲ್ಲಿ ಮೂವತ್ತನಾಲ್ಕನೆ ಅಧ್ಯಾಯ ಮುಗಿಯಿತು.**

## ಶಿವಕವಚದ ಕಥನ

**ಅಧ್ಯಾಯ-೩೫**

ಮನೋರಮೆ ಒಂದುಕ್ಷಣ ಪತಿಯನ್ನು ಆಲಿಂಗಿಸಿಕೊಂಡು ಅವನಾಡಿದ ಮಾತು-ಗಳನ್ನು ನೆನೆದು ಭವಿಷ್ಯವನ್ನು ಮನಸ್ಸಿನಲ್ಲಿ ಚಿತ್ರಿಸಿಕೊಂಡಳು. ತನ್ನ ಮಕ್ಕಳು, ಆಪ್ತ-ವರ್ಗದವರು ಸೇವಕರು ಮುಂತಾದವರೆಲ್ಲರನ್ನೂ ಬಳಿಗೆ ಕರೆಸಿಕೊಂಡಳು. ಅವರೆಲ್ಲರೂ ನೋಡುತ್ತಿದ್ದಂತೆಯೆ ಯೋಗಶಕ್ತಿಯಿಂದ ಷಟ್ಚಕ್ರಗಳನ್ನು ಭೇದಿಸಿ ಬ್ರಹ್ಮರಂಧ್ರದಲ್ಲಿರುವ ಸಹಸ್ರದಳಕಮಲದಲ್ಲಿ ವಾಯುವನ್ನು ನಿರೋಧಿಸಿದಳು. ಮನಸ್ಸನ್ನು ವಿಷಯಗಳಿಂದ ಈಚೆಗೆ ಸೆಳೆದುಕೊಂಡಳು. ವಿಷಯಸುಖ ನೀರ ಮೇಲಿನ ಗುಳ್ಳೆಯಂತೆ ಕ್ಷಣಿಕವೆಂದು ಚಿಂತಿಸಿ ಪರಬ್ರಹ್ಮನಲ್ಲಿಯೆ ಮನಸ್ಸನ್ನು ನಿಲ್ಲಿಸಿದಳು. ಪ್ರಾಣವನ್ನು ತೊರೆದಳು. ಪ್ರಾಣಕಾಂತನನ್ನು ಮಾತ್ರ ಇನ್ನೂ ತಬ್ಬಿಕೊಂಡೇ ಇದ್ದಳು. ರಾಜ ಕಣ್ಣಲ್ಲಿ ನೀರು ತುಂಬಿಕೊಂಡು ಬಿಲ್ಲುಬತ್ತಳಿಕೆಗಳನ್ನು ಕೆಳಗಿಟ್ಟು ರಾಣಿಯ ಶವವನ್ನು ಎದೆಗೆ ಅಪ್ಪಿಕೊಂಡು ವಿಲಾಪ ಮಾಡತೊಡಗಿದ-

'ಮನೋರಮೆ, ನಾನು ರಣರಂಗಕ್ಕೆ ಹೋಗುವುದಿಲ್ಲ, ನೋಡು, ಕಣ್ಣು ತೆರೆದು-ನೋಡು ನಾನು ನಿನ್ನನ್ನು ವಿಹಾರಕ್ಕೆ ಕರೆದೊಯ್ಯುತ್ತೇನೆ. ಶ್ರೀಶೈಲಕ್ಕೆ ಹೋಗೋಣ. ಬೆಟ್ಟದಲ್ಲಿ ವಿಹರಿಸೋಣ. ಗೋದಾವರಿಗೆ ಹೋಗಿ ಜಲವಿಹಾರ ಮಾಡೋಣ. ಪುಷ್ಪಭದ್ರಾ ನದೀ ತೀರದ ನಂದನವನದಲ್ಲಿಯೂ ವಿಹರಿಸೋಣ. ಮಲಯಾಚಲದ ಶ್ರೀಗಂಧದ ಕಾಡುಗಳಲ್ಲಿ ಸಂಚರಿಸೋಣ. ಸುಗಂಧಭರಿತವಾದ ತಂಪಾದ-ಗಾಳಿಯನ್ನು ಸೇವಿಸುತ್ತ ದುಂಬಿಯ ನಾದವನ್ನೂ ಕೋಗಿಲೆಯ ಗಾನವನ್ನೂ ಆಲಿಸೋಣ. ನನ್ನ ಮೈಯೆಲ್ಲ ಚಂದನ ಅಗರುಕಸ್ತೂರಿ ಕುಂಕುಮಲೇಪ ಲೇಪಿಸು. ಅಮೃತದಂಥ ಸಿಹಿಯಾದ ಮಾತುಗಳನ್ನಾಡು. ಪ್ರಣಯ ಕೋಪ ಬಂದಿರುವುದಾದರೆ ಅದೇಕೆ ಹುಬ್ಬು ಗಂಟಿಕ್ಕುವುದಿಲ್ಲ ?'

ಹೀಗೆ ರಾಜ ವಿಲಾಪ ಮಾಡುತ್ತಿದ್ದಂತೆ ಆಕಾಶವಾಣಿ ನುಡಿಯಿತು—

'ರಾಜನ್, ತಾಳು, ತಾಳು, ನಿನ್ನಂಥ ಧೀರ ಅಳುವುದೆಂದರೇನು ? ನೀನು ಮಹಾಜ್ಞಾನಿಗಳಲ್ಲಿಯೆ ಶ್ರೇಷ್ಠನಾದವ. ದತ್ತಾತ್ರೇಯನ ಅನುಗ್ರಹಪಾತ್ರ. ವಿಷಯ-ಸುಖವನ್ನು ನೀರಮೇಲಿನ ಗುಳ್ಳೆಯಂತೆ ತಿಳಿ. ನಿನ್ನ ಮನೋರಮೆ ಲಕ್ಷ್ಮಿಯ ಅಂಶ-ಯುಕ್ತಳಾದವಳು, ಲಕ್ಷ್ಮಿಯನ್ನೆ ಹೋಗಿ ಸೇರಿದ್ದಾಳೆ. ನೀನೂ ರಣರಂಗದಲ್ಲಿ ಕಾದು ಮಡಿದು ವೈಕುಂಠವನ್ನು ಸೇರು.'

ರಾಜ ಶೋಕವನ್ನು ತ್ಯಜಿಸಿ ಚಂದನ ಕಾಷ್ಠಗಳಿಂದ ಚಿತೆಯನ್ನು ಸಿದ್ಧಗೊಳಿಸಿದ. ಮಗನಿಂದ ಅಗ್ನಿಸಂಸ್ಕಾರ ಮಾಡಿಸಿದ. ಬ್ರಾಹ್ಮಣರಿಗೆ ನಾನಾ ಬಗೆಯ ರತ್ನಗಳನ್ನು ದಾನಮಾಡಿದ. ಅನ್ನದಾನ ದ್ರವ್ಯದಾನಗಳನ್ನೂ ಯಥೇಚ್ಛ ನೀಡಿದ. ತನ್ನ ಬೊಕ್ಕಸವನ್ನೆ

ಬರಿದು ಮಾಡಿದ. ಭಾರವಾದ ಹೃದಯದಿಂದ ಸಪರಿವಾರನಾಗಿ ರಣರಂಗದಲ್ಲಿ ಕಾಲಿಟ್ಟ. ಆಗಲೆ ಅವನಿಗೆ ಅಶುಭ ಶಕುನಗಳು ಕಾಣಿಸಿಕೊಂಡುವು.

ಪ್ರಯಾಣಕ್ಕೆ ಹೊರಟಾಗ ಇವು ಕಾಣಿಸಿಕೊಂಡರೆ ಅಶುಭ—

ತಲೆಕೂದಲು ಕೆದರಿಕೊಂಡು ದಿಗಂಬರಳಾಗಿ ಅಳುತ್ತ ಬರುವ ಮೂಗಿಲ್ಲದ ಹೆಣ್ಣು, ಕಪ್ಪುಬಟ್ಟೆ ಉಟ್ಟ ವಿಧವೆ. ಕೆಟ್ಟಮಾತಾಡುವ ನೀತಿಗೆಟ್ಟ ವ್ಯಾಧಿಗ್ರಸ್ತ ಹೆಣ್ಣು, ಪತಿಪುತ್ರರಹಿತಳಾದ ಹೆಣ್ಣು, ಡಾಕಿನಿ, ವೇಶ್ಯೆ, ಕುಂಬಾರ, ಗಾಣಿಗ, ಬೇಡ, ಹಾವಾಡಿಗ, ಕೊಳಕು ಬಟ್ಟೆ ಉಟ್ಟವ, ಸ್ನಾನವಿಲ್ಲದ ಒರಟುಮೈಯವ, ಬೆತ್ತಲೆಯಾದವ, ಕಾವಿಬಟ್ಟೆ ಉಟ್ಟವ, ಮಾಂಸಮಜ್ಜೆಗಳನ್ನು ಮಾರುವವ, ಮಗಳನ್ನು ಹಣಕ್ಕೆ ಮಾರುವವ, ಚಿತೆಯಲ್ಲಿ ಅರೆಬೆಂದ ಹೆಣ, ಬೂದಿ, ಇದ್ದಿಲು, ಹಾವುಕಡಿದ ಮನುಷ್ಯ, ಹಾವು, ಹಲ್ಲಿ, ಮೊಲ, ವಿಷ, ಶ್ರಾದ್ಧದ ಪಿಂಡ, ಎಳ್ಳು, ದೇವಪೂಜೆ ವೃತ್ತಿಯವ, ಎತ್ತಿನಿಂದ ಜೀವಿಸುವವ, ಶೂದ್ರನಿಗೆ ಅಡಿಗೆ ಮಡುವ ಯಾಗ ಮಾಡಿಸುವ ವೃತ್ತಿಯವ, ಅವನ ಶ್ರಾದ್ಧಾನ್ನ ಉಣ್ಣುವವ, ಗ್ರಾಮಪುರೋಹಿತ, ದರ್ಭೆಯಿಂದ ಮಾಡಿದ ಬೊಂಬೆ, ಶವದಾಹ ಮಾಡಿಸುವವ, ಬರಿದಾದ ಒಡೆದ ಮಡಿಕೆ, ಎಣ್ಣೆ, ಉಪ್ಪು, ಎಲುಬು, ಹತ್ತಿ, ಆಮೆ, ಬೊಗಳುವ ನಾಯಿ, ಬಲಭಾಗದಲ್ಲಿ ಕೂಗುವ ನರಿ, ಕವಡೆ, ಕ್ಷೌರ, ಕತ್ತರಿಸಿದ ಕೂದಲು, ಉಗುರು, ಅಮೇಧ್ಯ, ಕಲಹ, ವಿಲಾಪ, ಅಮಂಗಳ ರೋದನ, ಸುಳ್ಳುಸಾಕ್ಷಿ ಹೇಳುವ ವ್ಯಕ್ತಿ, ಕಳ್ಳ, ನರಘಾತುಕ, ವೇಶ್ಯೆಯ ಪತಿಪುತ್ರರು, ವೇಶ್ಯೆಯ ಅನ್ನ ಉಣ್ಣುವವ, ದೇವಗುರು ಬ್ರಾಹ್ಮಣರ ಸೊತ್ತನ್ನು ಅಪಹರಿಸುವವ, ಕೊಟ್ಟುದನ್ನು ತಿರುಗಿ ಅಪಹರಿಸುವವ, ದರೋಡೆಗಾರ, ಕಟುಕ, ಚಾಡಿಕೋರ, ತಂದೆತಾಯಿಯರಲ್ಲಿ ಭಕ್ತಿ ಇಲ್ಲದವ, ಬ್ರಹ್ಮಹತ್ಯೆ ಮಾಡುವವ, ಅಶ್ವತ್ಥವೃಕ್ಷವನ್ನು ನಾಶಮಾಡುವವ, ಸತ್ಯವನ್ನು ಅಲ್ಲಗಳೆಯುವವ, ಕೃತಘ್ನ ಅಡವಿಟ್ಟುದನ್ನು ಅಪಹರಿಸುವವ, ಬ್ರಾಹ್ಮಣರಿಗೆ ಮಿತ್ರರಿಗೆ ನಂಬಿದವರಿಗೆ ದ್ರೋಹ ಮಾಡುವವ, ಗುರುದೇವ ಬ್ರಾಹ್ಮಣನಿಂದಕ, ಆತ್ಮಘಾತಕ, ಪ್ರಾಣಿಹಿಂಸಕ, ನಿರ್ದಯ, ವ್ರತೋಪವಾಸ ದೀಕ್ಷೆಗಳಿಲ್ಲದವ, ನಪುಂಸಕ, ಕುಷ್ಠ ವ್ಯಾಧಿಗ್ರಸ್ತ, ಕುರುಡ, ಕಿವುಡ, ಚಂಡಾಲ, ಮಧ್ಯಪಾನದಿಂದ ಮತ್ತೇರಿದವ, ರಕ್ತಕಾರಿ ಬಿದ್ದವ, ಕೋಣ, ಕತ್ತೆ, ಮಲಮೂತ್ರಾದಿಗಳು. ನರಕಪಾಲ, ಬಿರುಗಾಳಿ, ರಕ್ತದ ಮಳೆ, ಮರ ಬೀಳುವುದು, ತೋಳ, ಹಂದಿ, ಹದ್ದು, ಗಿಡುಗ, ರಣಹದ್ದು, ಕರಡಿ, ಹಗ್ಗ, ಒಣಗಿದ ಕಟ್ಟಿಗೆ, ಕಾಗೆ, ದುಷ್ಟ ದಾನ ಸ್ವೀಕರಿಸುವವ, ಮಂತ್ರ ತಂತ್ರಗಳಿಂದ ಬದುಕುವವ, ವೈದ್ಯ, ಕೆಂಪು ಹೂ, ಔಷದ, ಹೊಟ್ಟು, ಕೆಟ್ಟವಾರ್ತೆ, ಮರಣವಾರ್ತೆ, ಬ್ರಾಹ್ಮಣ ಶಾಪ, ದುರ್ಗಂಧಯುಕ್ತವಾದ ಗಾಳಿ, ಕೆಟ್ಟಶಬ್ದ, ತನ್ನ ಮನಸ್ಸು ಕುಗ್ಗುವುದು, ಪ್ರಾಣಗಳು ಕ್ಷೋಭೆ ಹೊಂದುವುದು, ಶರೀರದ ಎಡಭಾಗದಲ್ಲಿ ಅದುರುವುದು, ದೇಹದಲ್ಲಿ ಜಾಡ್ಯ ತಲೆದೋರುವುದು ಇವೆಲ್ಲವೂ ಅಶುಭ ಶಕುನಗಳು.

ರಾಜಾ ಕಾರ್ತವೀರ್ಯಾರ್ಜುನ ಇಂಥ ಅಶುಭ ಶಕುನಗಳನ್ನು ಕಂಡರೂ ಧೈರ್ಯಗುಂದಲಿಲ್ಲ. ರಣರಂಗವನ್ನು ಪ್ರವೇಶಿಸಿ ರಥದಿಂದ ಇಳಿದು ಜೊತೆಯ ರಾಜರಿಂದೊಡಗೂಡಿ ಪರಶುರಾಮನಿಗೆ ದಂಡಪ್ರಣಾಮ ಮಾಡಿದ. ಸ್ವರ್ಗಕ್ಕೆ ಹೋಗೆಂದು ಆಶೀರ್ವದಿಸಿದ ಪರಶುರಾಮ. ಏಕೆಂದರೆ ಅವನಿಗೂ ಅದೇ ಅಪೇಕ್ಷಿತ-ವಾಗಿತ್ತು. ರಾಜ ರಥವೇರಿ ರಣವಾದ್ಯಗಳನ್ನು ಮೊಳಗಿಸಿ ಬ್ರಾಹ್ಮಣರಿಗೆ ದ್ರವ್ಯದಾನ ಮಾಡಿದ. ಪರಶುರಾಮ ರಾಜನಿಗೆ ಹಿತನುಡಿ ನುಡಿದ-

'ರಾಜೇಂದ್ರ, ನೀನು ಚಂದ್ರವಂಶೋದ್ಭವನಾದ ಧರ್ಮಿಷ್ಠನಾದ ರಾಜ. ವಿಷ್ಣುವಿನ ಅಂಶಭೂತನಾದ ದತ್ತಾತ್ರೇಯನ ಶಿಷ್ಯ. ಸ್ವತಃ ವಿದ್ವಾಂಸ, ವೇದಜ್ಞನಾದ ಗುರುವಿನ ಮುಖದಿಂದ ವೇದಾಧ್ಯಯನವನ್ನೂ ಮಾಡಿದವ. ನಿನಗೆ ಏಕೆ ಸಜ್ಜನರನ್ನು ಹಿಂಸಿಸುವ ದುರ್ಬುದ್ಧಿ ಬಂದಿತು ? ಏಕೆ ವಿರಕ್ತನಾದ ಬ್ರಾಹ್ಮಣನನ್ನು ಲೋಭದಿಂದ ಕೊಂದೆ ? ಪತಿವ್ರತೆಯಾದ ಆತನ ಮಡದಿ ಶೋಕಸಂತಪ್ತಳಾಗಿ ಪತಿಯೊಡನೆ ಚಿತೆ ಏರಿದಳು. ಇವರಿಬ್ಬರ ಸಾವಿನಿಂದ ನಿನಗೆ ಪರಲೋಕದಲ್ಲಿ ಏನು ಅನಿಷ್ಟ ಕಾದಿರ-ಬಹುದೆಂದು ಆಲೋಚಿಸಿ ನೋಡಿರುವೆ ಏನು ? ಈ ಲೋಕದ ಭೋಗಭಾಗ್ಯವೆಲ್ಲ ತಾವರೆ ಎಲೆಯ ಮೇಲಿನ ನೀರ ಹನಿಯಂತೆ ಕೇವಲ ಕ್ಷಣಿಕ. ಈಗ ಆ ಕಾಮಧೇನುವೆಲ್ಲಿ ? ನೀನೆಲ್ಲಿ ? ನಡೆದು ಹೋದ ಆ ವಾದವಿವಾದವೆಲ್ಲಿ ? ಮುನಿ ಎಲ್ಲಿ ? ಜ್ಞಾನಿಯಾದ ರಾಜನಾದ ನೀನು ಮಾಡಿದ ಈ ಕೆಲಸವನ್ನು ಅಜ್ಞನಾದ ಒಬ್ಬ ಬೇಸಾಯಗಾರನೂ ಮಾಡಲಾರ. ನೀನು ಹಸಿದಿದ್ದುದನ್ನು ಕಂಡು ನಮ್ಮ ತಂದೆ ಧರ್ಮಬುದ್ಧಿಯಿಂದ ನಿನಗೆ ಮೃಷ್ಟಾನ್ನ ನೀಡಿದರೆ ನೀನು ಅದಕ್ಕೆ ಸರಿಯಾದ ಪ್ರತಿಫಲ ಕೊಟ್ಟೆ! ಒಳ್ಳೆಯ ವೇದಾಧ್ಯಯನ ಮಾಡಿ ಬ್ರಾಹ್ಮಣರಿಗೆ ಪ್ರತಿದಿನ ದಾನಗಳನ್ನೂ ನೀಡಿ ಜಗತ್ತಿನಲ್ಲೆಲ್ಲ ಕೀರ್ತಿ ಹರಡಿಸಿ ಈಗ ವೃದ್ಧಾಪ್ಯದಲ್ಲಿ ಇಂಥ ಅಪಕೀರ್ತಿ ಏಕೆ ಗಳಿಸಿಕೊಂಡೆ ?

**ದಾತಾ ವರಿಷ್ಠೋ ಧರ್ಮಿಷ್ಠೋ ಯಶಸ್ವೀ ಪುಣ್ಯವಾನ್ ಸುಧೀಃ ।**
**ಕಾರ್ತವೀರ್ಯಾರ್ಜುನ ಸಮೋ ನ ಭೂತೋ ನ ಭವಿಷ್ಯತಿ ॥**

''ದಾನದಲ್ಲಿ ಶ್ರೇಷ್ಠತೆಯಲ್ಲಿ ಧರ್ಮಾಚರಣೆಯಲ್ಲಿ ಯಶಸ್ಸಿನಲ್ಲಿ ಪುಣ್ಯ-ಸಂಪಾದನೆಯಲ್ಲಿ ಸದ್ಬುದ್ಧಿಯಲ್ಲಿ ಕಾರ್ತವೀರ್ಯಾರ್ಜುನನಿಗೆ ಸಮನಾದವನು ಹಿಂದೆ ಇರಲಿಲ್ಲ ಮುಂದೆ ಇರಲಾರ'' ಎಂದು ಪುರಾಣಗಳಲ್ಲಿ ಪ್ರಸಿದ್ಧನಾದವ, ಭೂ-ಮಂಡಲದಲ್ಲೆಲ್ಲ ಸ್ತುತಿ ಪಾಠಕರಿಂದ ಹೊಗಳಿಸಿಕೊಳ್ಳುತ್ತಿರುವವ ನೀನು. ನಿನಗಿಂತಹ ಅಪಕೀರ್ತಿ ಬೇಕಿತ್ತೆ ? ಇದಕ್ಕೆ ಉತ್ತರ ಹೇಳು. ಇಲ್ಲಿ ನೆರೆದ ರಾಜರುಗಳಲ್ಲಿ ಸೂರ್ಯಚಂದ್ರ ಮನುಗಳ ವಂಶದವರಿದ್ದಾರೆ. ಮೇಲೆ ಆಕಾಶದಲ್ಲಿ ಪಿತೃಗಳೂ ದೇವತೆಗಳೂ ನಿಂತುನೋಡುತ್ತಿದ್ದಾರೆ. ನಿಜ ಹೇಳು. ಎಲ್ಲರೂ ಕೇಳಲಿ.

**ಕಾರ್ತವೀರ್ಯಾರ್ಜುನ ಹೇಳತೊಡಗಿದ—**

'**ಪರಶುರಾಮ, ಕೇಳು,** ನೀನು ಹರಿಯ ಅಂಶ, ಹರಿಭಕ್ತ, ಜಿತೇಂದ್ರಿಯ. ಧರ್ಮೋಪದೇಶಕರಾದ ಗುರುಗಳಿಗೂ ಪರಮಗುರು ನೀನು. ಬ್ರಾಹ್ಮಣನಾಗಿರುವೆ, ಮುನಿಯಾಗಿರುವೆ, ಯೋಗಿಯಾಗಿರುವೆ. ಬ್ರಾಹ್ಮಣನೆಂದರೆ ಸ್ವಧರ್ಮ ನಿರತನಾಗಿದ್ದು ಕರ್ಮದಿಂದ ಜ್ಞಾನ ಸಂಪಾದಿಸಿ ಪರಬ್ರಹ್ಮನನ್ನು ಧ್ಯಾನಿಸುತ್ತಿರಬೇಕು. ಮುನಿಯೆಂದರೆ ಮೌನವಾಗಿದ್ದು ತತ್ವವನ್ನು ಮನನ ಮಾಡಬೇಕು, ಯೋಗ್ಯಕಾಲ ಬಂದಾಗ ಮಾತ್ರ ಮಿತವಾಗಿ ಮಾತನಾಡಬೇಕು. ಯೋಗಿಯೆಂದರೆ ಮಣ್ಣು ಬಂಗಾರಗಳಲ್ಲಿ ಮನೆ ಕಾಡುಗಳಲ್ಲಿ ಕೆಸರು ಶ್ರೀಗಂಧಗಳಲ್ಲಿ ಸಮಾನಭಾವನೆ ಉಳ್ಳವನಾಗಿರಬೇಕು. ಬ್ರಾಹ್ಮಣನಿಗೆ ತಪಸ್ಸೆ ಕಾಮಧೇನು. ಅದರಲ್ಲಿಯೆ ಸತತ ಆಸೆ ಇರಬೇಕು. ಕ್ಷತ್ರಿಯರು ಹಾಗಲ್ಲ. ಅವರಿಗೆ ಅಧಿಕಾರದಲ್ಲಿ ಆಸೆ ಬೇಕು. ತಪಸ್ಸಿನಲ್ಲಿ ಹೆಚ್ಚು ಆಶೆ ಪಡುವುದು ಅವರಿಗೆ ಯೋಗ್ಯವಲ್ಲ. ಬ್ರಾಹ್ಮಣರಿಗೆ ಕಲಹದಲ್ಲಿ ಆಸಕ್ತಿ ಎಷ್ಟುಮಾತ್ರಕ್ಕೂ ಒಳ್ಳೆಯ-ದಲ್ಲ. ರಾಜ ರಾಗದಿಂದ ರಾಜಸಕರ್ಮ ಮಾಡುವುದು. ಅವನಿಗೆ ಸ್ವಭಾವ ಸಹಜ. ಅದರಿಂದ ನಾನು ಕಾಮಧೇನುವಿನ ಮೇಲಿನ ರಾಗದಿಂದ ಅದನ್ನು ಕೊಡಲು ಕೇಳಿಕೊಂಡೆ. ಇದರಲ್ಲಿ ನನ್ನ ತಪ್ಪೇನಿದೆ ? ನಿಮ್ಮನ್ನು ಹೊರತು ಇನ್ನಾರೂ ಬ್ರಾಹ್ಮಣರು ಕಾಮಧೇನುವನ್ನು ಇಟ್ಟುಕೊಂಡಿರುವುದುಂಟೆ ? ಕಾಮಧೇನು ನೀಡುವ ಭೋಗಪದಾರ್ಥಗಳಲ್ಲಿ ಆಸಕ್ತಿ, ಅವಳನ್ನೊಯ್ಯುವವರ ಮೇಲೆ ಯುದ್ಧ ಸಾರುವ ಪ್ರವೃತ್ತಿ ಇವೆರಡೂ ಬ್ರಾಹ್ಮಣರಾದ ನಿಮಗೆ ಯುಕ್ತವಲ್ಲ. ನಿನ್ನ ತಂದೆ ನನ್ನ ಕಡೆಯ ಮೂರುಕೋಟಿ ರಾಜರುಗಳನ್ನೂ ನನ್ನ ಮೂವತ್ತು ಅಕ್ಷೌಹಿಣಿ ಸೈನ್ಯವನ್ನೂ ನಾಶ ಮಾಡಿ ಏಕಾಕಿಯಾದ ನನ್ನನ್ನೂ ಕೊಲ್ಲಲು ಬಂದಾಗ ನಾನು ಸುಮ್ಮನಿರಬೇಕಿತ್ತೆ ? ತನ್ನನ್ನು ಕೊಲ್ಲಲು ಬಂದವ ವೇದ ವೇದಾಂಗ ಪಾರಂಗತನಾಗಿದ್ದರೂ ಅವನನ್ನು ಕೊಲ್ಲುವುದರಿಂದ ಯಾವ ದೋಷವೂ ಇಲ್ಲ. ಅದರಿಂದ ನಾನು ಬ್ರಹ್ಮಹತ್ಯಾಪಾತಕಿ ಎನಿಸಲಾರೆ. ಹಿಂಸಕರಿಗೆ ಪ್ರಾಯಶ್ಚಿತ್ತವನ್ನು ವೇದದಲ್ಲಿ ಎಲ್ಲಿಯೂ ಹೇಳಿಲ್ಲ. ಅಂಥವರನ್ನು ಕೊಲ್ಲುವುದೆ ಉಚಿತವೆಂದು ಬ್ರಹ್ಮ ಹೇಳಿದ್ದಾನೆ. ನಿನ್ನ ತಂದೆ ಮಹಾಬಲ ಪರಾಕ್ರಮಿಗಳಾದ ರಾಜರನ್ನೆಲ್ಲ ಕೊಂದಿದ್ದಾನೆ. ಈಗ ಇರುವವರು ಎಳೆವಯಸ್ಸಿನ ರಾಜಕುಮಾರರು. ಇಪ್ಪತ್ತೊಂದು ಬಾರಿ ಭೂಮಿಯಲ್ಲಿ ಸುತ್ತಿ ಎಲ್ಲ ರಾಜರನ್ನು ನಾಶ ಮಾಡುವ ಪ್ರತಿಜ್ಞೆಯನ್ನು ನೀನು ಮಾಡಿರುವಿ. ಆ ಪ್ರತಿಜ್ಞೆಯನ್ನು ನೀನು ಈಡೇರಿಸಿಕೊಳ್ಳು, ನಾವು ಕ್ಷತ್ರಿಯರು ಯುದ್ಧ ನಮಗೆ ಧರ್ಮ. ಯುದ್ಧದಲ್ಲಿ ಸಾಯುವುದೂ ಅನುಚಿತವಲ್ಲ. ಆದರೆ ನಿಮ್ಮಂಥ ಬ್ರಾಹ್ಮಣರಿಗೆ ಯುದ್ಧದಲ್ಲಿ ಆಸಕ್ತಿ ಎಂಬುದು ಲೋಕವಿರುದ್ಧ. ವೇದಕ್ಕೂ ವಿರುದ್ಧ. ತಪಸ್ಸನ್ನೆ ಧನವೆಂದು ಭಾವಿಸುವ ಬ್ರಾಹ್ಮಣರಿಗೆ ಎಲ್ಲ ಯುಗಗಳಲ್ಲಿಯೂ ಮಾತೇ ಬಲ. ಶಾಂತಿ ಅಧ್ಯಯನಗಳೆ ಧರ್ಮ. ಯುದ್ಧವಲ್ಲ. ಕ್ಷತ್ರಿಯರಿಗೆ ಯುದ್ಧ, ವೈಶ್ಯರಿಗೆ ವ್ಯಾಪಾರ, ಯತಿಗಳಿಗೆ ಭಿಕ್ಷೆ. ಶೂದ್ರರಿಗೆ

ಬ್ರಾಹ್ಮಣ ಸೇವೆ, ವೈಷ್ಣವರಿಗೆ ಹರಿಭಕ್ತಿ, ಹರಿದಾಸ್ಯಗಳು, ದುಷ್ಟರಿಗೆ ಹಿಂಸೆ, ತಪಸ್ವಿಗಳಿಗೆ ತಪಸ್ಸು, ವೇಶ್ಯೆಯರಿಗೆ ವೇಷಭೂಷಣಗಳು, ಸ್ತ್ರೀಯರಿಗೆ ಯೌವನ, ರಾಜರಿಗೆ ಪ್ರತಾಪ, ಬಾಲಕರಿಗೆ ರೋದನ, ಸಜ್ಜನರಿಗೆ ಸತ್ಯ, ದುಷ್ಟರಿಗೆ ಅಸತ್ಯ, ಸೇವಕರಿಗೆ ಅನುನಯ, ದರಿದ್ರರಿಗೆ ಧನಸಂಗ್ರಹ, ಪಂಡಿತರಿಗೆ ವಿದ್ಯೆ, ಸಾಹಸಿಗಳಿಗೆ ಧೈರ್ಯ, ಧನಿಕರಿಗೆ ಧನ, ಶಾಂತರಿಗೆ ವಿವೇಕ, ಗುಣವಂತರಿಗೆ ಐಕಮತ್ಯ, ಚೋರರಿಗೆ ಚೌರ್ಯ, ನೀತಿಗೆಟ್ಟ ಹೆಣ್ಣಿಗೆ ಪ್ರಿಯವಚನ, ಕಪಟ, ಅಧರ್ಮಗಳು, ಹಿಂಸ್ರ ಜಂತುಗಳಿಗೆ ಹಿಂಸೆ, ಸತಿಯರಿಗೆ ಪತಿಸೇವೆ, ದೇವತೆಗಳಿಗೆ ವರ ಶಾಪಗಳು, ಶಿಷ್ಯರಿಗೆ ಗುರುಸೇವೆ, ಗೃಹಸ್ಥರಿಗೆ ಧರ್ಮಾಚರಣೆ, ಭೃತ್ಯರಿಗೆ ರಾಜಸೇವೆ, ಹೊಗಳುಭಟರಿಗೆ ಸ್ತೋತ್ರ, ಬ್ರಹ್ಮಚಾರಿಗಳಿಗೆ ವೇದ, ಯತಿಗಳಿಗೆ ಸದಾಚಾರ, ಸನ್ಯಾಸಿಗಳಿಗೆ ಸರ್ವಸಂಗ ಪರಿತ್ಯಾಗ, ಪಾಪಿಗಳಿಗೆ ಪಾಪ, ಅಶಕ್ತರಿಗೆ ಹರಿಯ ಅನುಗ್ರಹ, ಪುಣ್ಯವಂತರಿಗೆ ಪುಣ್ಯ, ಪ್ರಜೆಗಳಿಗೆ ರಾಜ, ವೃಕ್ಷಗಳಿಗೆ ಫಲ, ಕಮಲಗಳಿಗೆ, ಸಸ್ಯಗಳಿಗೆ, ಮೀನುಗಳಿಗೆ ನೀರು ಬಲ. ರಾಜರುಗಳಿಗೂ, ವಿಶೇಷವಾಗಿ ಬ್ರಾಹ್ಮಣರಿಗೂ ಶಾಂತಿಯೆ ಬಲ. ಶಾಂತಿಯನ್ನು ಕಾಪಾಡಬೇಕಾಗಿರುವ ಬ್ರಾಹ್ಮಣ ಯುದ್ಧನಿರತನಾಗುವುದನ್ನು ನಾವೆಂದೂ ನೋಡಿಲ್ಲ ಕೇಳಿಯೂ ಇಲ್ಲ. ನಾರಾಯಣ ದೇವನಿರುವಾಗಲೆ ಈ ವಿಪರೀತ ಉಂಟಾಯಿತಲ್ಲ !'

ಕಾರ್ತವೀರ್ಯನ ಈ ಮಾತಿಗೆ ಪರಶುರಾಮ ಪ್ರತ್ಯುತ್ತರ ನೀಡಲಿಲ್ಲ. ಅವನ ಸೋದರರೆಲ್ಲರೂ ಹರಿತವಾದ ಖಡ್ಗ ಮುಂತಾದ ಆಯುಧಗಳನ್ನು ಝಳಪಿಸಿದರು. ಪರಶುರಾಮನ ಅನುಮತಿಯಿಂದ ಯುದ್ಧ ಮಾಡಲಾರಂಭಿಸಿದರು. ಅವರ ಮುಂದೆ ಮತ್ಸ್ಯರಾಜ ನಿಂತು ನೂರು ಸೂರ್ಯರಂತೆ ಉರಿವ ದಿವ್ಯಾಸ್ತ್ರ ಪ್ರಯೋಗಿಸಿದ. ಆದರೆ ಮುನಿಗಳ ಮಾಹೇಶ್ವರಾಸ್ತ್ರದ ಮುಂದೆ ಅದು ವಿಫಲಗೊಂಡಿತು. ಅವನ ಧನುರ್ಬಾಣ ರಥ ಸಾರಥಿಗಳೆಲ್ಲವೂ ನಾಶ ಹೊಂದಿದುವು. ಅಮೋಘವಾದ ಶಿವನ ಶೂಲವನ್ನು ಮುನಿಗಳು ರಾಜನ ಮೇಲೆ ಪ್ರಯೋಗಿಸಲು ಕೈಗೆತ್ತಿಕೊಂಡರು. ಆಗ ಆಕಾಶವಾಣಿ ಕೇಳಿಸಿತು—

'ಮುನಿಗಳೆ, ಈ ರಾಜನಿಗೆ ದೂರ್ವಾಸಮುನಿ ಅನುಗ್ರಹಿಸಿಕೊಟ್ಟ ಶಿವಕವಚದ ರಕ್ಷಣೆಯಿದೆ. ಅದರ ಮುಂದೆ ಶೂಲ ವ್ಯರ್ಥವಾದೀತು. ನೀವು ಕವಚವನ್ನು ಬೇಡಿ ಪಡೆಯಿರಿ. ಆತ ಕವಚವೇನು, ಪ್ರಾಣವನ್ನಾದರೂ ಕೊಡುವ ಉದಾರಿ.'

ಮುನಿಗಳು ಅಷ್ಟರಲ್ಲಿ ಶೂಲವನ್ನು ಪ್ರಯೋಗಿಸಿ ಬಿಟ್ಟಿದ್ದರು. ಅದು ರಾಜನ ಶಸ್ತ್ರದಿಂದ ನೂರು ತುಂಡುಗಳಾಗಿ ಬಿದ್ದು ಆಕಾಶವಾಣಿಯ ಸತ್ಯತೆಗೆ ಸಾಕ್ಷಿಯಾಯಿತು. ಜಮದಗ್ನಿಯ ಪುತ್ರನಾದ ಶೃಂಗಿ ಸನ್ಯಾಸ ವೇಷದಿಂದ ರಾಜನ ಬಳಿಗೆ ಹೋಗಿ ಕವಚವನ್ನು ಬೇಡಿದ. ರಾಜ ಕೊಟ್ಟುಬಿಟ್ಟ. ಬ್ರಹ್ಮಾಂಡವಿಜಯವೆಂಬ ಆ ಕವಚವನ್ನು ಧರಿಸಿ ಶೃಂಗಿ ರಾಜನನ್ನು ಶೂಲದಿಂದ ಇರಿದ. ಮಹಾಪರಾಕ್ರಮಿ ಸದ್ಗುಣಶಾಲಿಯಾದ ಚಂದ್ರವಂಶ ಸಂಭೂತವಾದ ಆ ಮತ್ಸ್ಯರಾಜ ನೆಲಕ್ಕೆ ಒರಗಿ ಅಸುನೀಗಿದ.

ನಾರದ— ಮತ್ಸ್ಯರಾಜ ಧರಿಸಿದ್ದ ಆ ಶಿವಕವಚವನ್ನು ವರ್ಣಿಸು. ಅದನ್ನು **ಕೇಳುವ ಕುತೂಹಲ** ನನಗೆ ಉಂಟಾಗಿದೆ.

ನಾರಾಯಣ— **ದೂರ್ವಾಸ ಮುನಿ** ಉಪದೇಶಿಸಿದ ಬ್ರಹ್ಮಾಂಡವಿಜಯವೆಂಬ ಆ ಶಿವಕವಚವನ್ನು ಹಿಂದೆ ಬಾಣ, ನಂದಿ, ವೀರಭದ್ರ, ಹಿರಣ್ಯಕಶಿಪು ಇವರೆಲ್ಲ ಧರಿಸಿ **ಶಿವನಿಗೆ ಸಮಾನ**ರಾದರು. ದೂರ್ವಾಸ ಜೈಗೀಷವ್ಯ ವಾಮದೇವ ದೇವಲ ಪವನ **ಅಗಸ್ತ್ಯ ಪುಲಸ್ತ್ಯ ಇವರೆಲ್ಲ ಕವಚವನ್ನು** ಪಠಿಸಿಯೆ ಸಿದ್ಧಿಪಡೆದು ವಿಶ್ವವಂದ್ಯರೆನಿಸಿದರು. **ಕವಚ**ಮಂತ್ರ ಹೀಗಿದೆ-

'**ಓಂ ನಮಃ ಶಿವಾಯ**' ಎಂಬ ಮಂತ್ರ ನನ್ನ ಶಿರಸ್ಸನ್ನು ಕಾಪಾಡಲಿ.
'**ಓಂ ನಮಃ ಶಿವಾಯ ಸ್ವಾಹಾ**' ಹಣೆಯನ್ನು ಕಾಪಾಡಲಿ.
'ಓಂ ಹ್ರೀಂ ಶ್ರೀಂ ಕ್ಲೀಂ ಹೂಂ ಶಿವಾಯ ನಮಃ' ಮೂಗನ್ನು ರಕ್ಷಿಸಲಿ.
'ಓಂ ನಮಃ ಶಿವಾಯ ಶಾಂತಾಯ ಸ್ವಾಹಾ' ಕಂಠವನ್ನು ರಕ್ಷಿಸಲಿ.
'ಓಂ ಹ್ರೀಂ ಶ್ರೀಂ ಹೂಂ ಸಂಹಾರಕರ್ತ್ರೇ ನಮಃ' ಕಿವಿಗಳನ್ನು ರಕ್ಷಿಸಲಿ.
'ಓಂ ಹ್ರೀಂ ಶ್ರೀಂ ಪಂಚವಕ್ತ್ರಾಯ ಸ್ವಾಹಾ' ಹಲ್ಲುಗಳನ್ನು ರಕ್ಷಿಸಲಿ.
'ಓಂ ಹ್ರೀಂ ಮಹೇಶಾಯ ಸ್ವಾಹಾ' ತುಟಿಯನ್ನು ರಕ್ಷಿಸಲಿ.
'ಓಂ ಹ್ರೀಂ ಶ್ರೀಂ ಕ್ಲೀಂ ತ್ರಿನೇತ್ರಾಯ ಸ್ವಾಹಾ' ಕೂದಲುಗಳನ್ನು ಕಾಪಾಡಲಿ.
'ಓಂ ಹ್ರೀಂ ಐಂ ಮಹಾದೇವಾಯ ಸ್ವಾಹಾ' ಎದೆಯನ್ನು ಕಾಪಾಡಲಿ.
'ಓಂ ಹ್ರೀಂ ಶ್ರೀಂ ಕ್ಲೀಂ ಮ್ಯೆಂ ರುದ್ರಾಯ ಸ್ವಾಹಾ' ನಾಭಿಯನ್ನು ರಕ್ಷಿಸಲಿ.
'ಓಂ ಹ್ರೀಂ ಮ್ಯೆಂ ಶ್ರೀಂ ಈಶ್ವರಾಯ ಸ್ವಾಹಾ' ಬೆನ್ನನ್ನು ಕಾಪಾಡಲಿ.
'ಓಂ ಹ್ರೀಂ ಕ್ಲೀಂ ಮೃತ್ಯುಂಜಯಾಯ ಸ್ವಾಹಾ' ಹುಬ್ಬುಗಳನ್ನು ರಕ್ಷಿಸಲಿ.
'ಓಂ ಹ್ರೀಂ ಶ್ರೀಂ ಕ್ಲೀಂ ಈಶಾನಾಯ ಸ್ವಾಹಾ' ಪಾರ್ಶ್ವವನ್ನು ರಕ್ಷಿಸಲಿ.
'ಓಂ ಹ್ರೀಂ ಈಶ್ವರಾಯ ಸ್ವಾಹಾ' ಹೊಟ್ಟೆಯನ್ನು ಕಾಪಾಡಲಿ.
'ಓಂ ಶ್ರೀಂ ಹ್ರೀಂ ಮೃತ್ಯುಂಜಯಾಯ ಸ್ವಾಹಾ' ಬಾಹುಗಳನ್ನು ಕಾಪಾಡಲಿ.
'ಓಂ ಹ್ರೀಂ ಶ್ರೀಂ ಕ್ಲೀಂ ಈಶ್ವರಾಯ ಸ್ವಾಹಾ' ಕೈಗಳನ್ನು ಕಾಪಾಡಲಿ.
'ಓಂ ಮಹೇಶ್ವರಾಯ ರುದ್ರಾಯ' ನಿತಂಬವನ್ನು ಕಾಪಾಡಲಿ.
'ಓಂ ಹ್ರೀಂ ಶ್ರೀಂ ಭೂತನಾಥಾಯ ಸ್ವಾಹಾ' ಪಾದಗಳನ್ನು ಕಾಪಾಡಲಿ.
'ಓಂ ಸರ್ವೇಶ್ವರಾಯ ಸರ್ವಾಯ ಸ್ವಾಹಾ' ಕಾಲುಗಳನ್ನು ಕಾಪಾಡಲಿ.

ಭೂತೇಶ ಪೂರ್ವದಲ್ಲಿ, ಶಂಕರ ಆಗ್ನೇಯದಲ್ಲಿ, ರುದ್ರ ದಕ್ಷಿಣದಲ್ಲಿ, ಸ್ಥಾಣು ನೈಋತ್ಯದಲ್ಲಿ ಖಂಡ ಪರಶು ಪಶ್ಚಿಮದಲ್ಲಿ, ಚಂದ್ರಶೇಖರ ವಾಯವ್ಯದಲ್ಲಿ, ಗಿರಿಶ ಉತ್ತರದಲ್ಲಿ, ಈಶ್ವರ ಈಶಾನ್ಯದಲ್ಲಿ, ಮೃಡ ಊರ್ಧ್ವದಲ್ಲಿ, ಮೃತ್ಯುಂಜಯ ಅಧೋ-ದಿಕ್ಕಿನಲ್ಲಿ, ಪಿನಾಕಿ ಜಲಸ್ಥಲ ಅಂತರಿಕ್ಷಗಳಲ್ಲಿ ಮತ್ತು ಸ್ವಪ್ನ ಜಾಗರಗಳಲ್ಲಿ ನನ್ನನ್ನು ಕಾಪಾಡಲಿ.

ಪರಮಾದ್ಭುತವಾದ ಈ ಕವಚವನ್ನು ಹತ್ತುಲಕ್ಷ ಬಾರಿ ಜಪಿಸಿದರೆ ಸಿದ್ಧಿ ಉಂಟಾಗುವುದು. ರುದ್ರನಂತೆ ಸಾಮರ್ಥ್ಯ ಲಭಿಸುವುದು. ಇದು ಕಾಣ್ವ ಶಾಖೋಕ್ತ-ವಾದ ಅತ್ಯಂತ ಗೋಪ್ಯವಾದ ದುರ್ಲಭವಾದ ಕವಚ. ಸಾವಿರ ಅಶ್ವಮೇಧಗಳು, ನೂರು ರಾಜಸೂಯಗಳೂ ಈ ಕವಚದ ಹದಿನಾರನೆ ಒಂದಂಶಕ್ಕೆ ಸಮಾನ-ವಾಗಲಾರವು. ಈ ಕವಚದ ಪ್ರಭಾವದಿಂದ ಮಾನವ ಜೀವನ್ಮುಕ್ತನೆನಿಸುತ್ತಾನೆ. ಸರ್ವಜ್ಞನೂ ಸರ್ವಸಿದ್ಧಿಶಾಲಿಯೂ ಮನೋವೇಗದಿಂದ ಸಂಚರಿಸಬಲ್ಲವನೂ ಆಗುತ್ತಾನೆ. ಈ ಕವಚ ಉಪದೇಶ ಪಡೆಯದಿದ್ದರೆ ನೂರು ಲಕ್ಷಬಾರಿ ಮಂತ್ರಗಳನ್ನು ಜಪಿಸಿದರೂ ಸಿದ್ಧಿಯಾಗದು.

**ಇಲ್ಲಿಗೆ ಶ್ರೀ ಬ್ರಹ್ಮವೈವರ್ತ ಮಹಾಪುರಾಣದಲ್ಲಿ ಮೂರನೆಯದಾದ ಗಣಪತಿಖಂಡದ ನಾರದ ನಾರಾಯಣ ಸಂವಾದದಲ್ಲಿ ಶಂಕರಕವಚ ಕಥನವೆಂಬ ಮೂವತ್ತೆರಡನೆ ಅಧ್ಯಾಯ ಮುಗಿಯಿತು.**

## ಪರಶುರಾಮನಿಂದ ಸುಚಂದ್ರರಾಜನ ಸಮರ ಮತ್ತು ಸಂಹಾರ

**ಅಧ್ಯಾಯ-೩೬**

ಮತ್ಸ್ಯರಾಜ ಯುದ್ಧದಲ್ಲಿ ಮಡಿದಾಗ ಕಾರ್ತವೀರ್ಯ ಬೇರೆ ರಾಜರನ್ನು ಕಳಿಸಿದ. ಬೃಹದ್ಬಲ ಸೋಮದತ್ತರೂ, ವಿದರ್ಭ, ಮಿಥಿಲ, ನಿಷಧ, ಮಗಧ ರಾಜರುಗಳೂ ಅವನ ಆಜ್ಞೆಯಂತೆ ಯುದ್ಧಕ್ಕೆ ನಿಂತರು. ಅವರ ಜೊತೆಗೆ ಮೂರು ಅಕ್ಷೌಹಿಣೀ ಸೇನೆಗಳಿದ್ದುವು. ಮೊದಲಿಗೆ ಪರಶುರಾಮನ ಸೋದರರು ಈ ರಾಜರೊಡನೆ ಯುದ್ಧ ಮಾಡಿ ಸೋತರು. ಆಗ ಪರಶುರಾಮ ತಾನೇ ಪಿನಾಕಧನುಸ್ಸನ್ನು ಹಿಡಿದು ಬೆಂಕಿ-ಯಂತೆ ಜ್ವಲಿಸುತ್ತ ಬಂದುನಿಂತ. ಸರ್ಪಾಸ್ತ್ರವನ್ನು ಪ್ರಯೋಗಿಸಿದ. ಅದನ್ನು ಸೋಮದತ್ತ ಗರುಡಾಸ್ತ್ರದಿಂದ ಕತ್ತರಿಸಿದ. ಆದರೆ ಪರಶುರಾಮನ ಶೂಲಕ್ಕೆ ಬಲಿಯಾಗಿ ಅಸುನೀಗಿದ. ಹಾಗೇ ಬೃಹದ್ಬಲ ಗದೆಗೂ, ವಿದರ್ಭ ರಾಜ ಮುಷ್ಟಿಗೂ, ಮಿಥಿಲಾಧಿಪತಿ ಮುದ್ಗರಕ್ಕೂ, ನಿಷಧರಾಜ ಶಕ್ತಿಗೂ, ಮಗಧರಾಜ ಕಾಲ ತುಳಿತಕ್ಕೂ ಬಲಿಯಾದರು. ಬಳಿಕ ಕಾನ್ಯ, ಕುಬ್ಜ, ಸೌರಾಷ್ಟ್ರ, ರಾಷ್ಟ್ರಕೂಟ, ಸೌಮ್ಯ, ವಂಗ, ಮಹಾರಾಷ್ಟ್ರ, ಗುರ್ಜರ, ಕಲಿಂಗ ದೇಶಗಳ ನೂರಾರು ರಾಜರುಗಳೂ ಹತರಾದರು. ಪರಶುರಾಮ ಖಡ್ಗದಿಂದ ಹನ್ನೆರಡು ಅಕ್ಷೌಹಿಣೀ ಸೇನೆಯನ್ನು ಲೀಲಾಜಾಲವಾಗಿ ತರಿದು, ಶಿವ ಶೂಲದಿಂದ ಎಲ್ಲ ರಾಜರುಗಳನ್ನೂ ಇರಿದು, ಮಂಜಿನ ಮುಸುಕನ್ನು ಹರಿದೊಗೆದು ಬೆಳಗುವ ಸೂರ್ಯನಂತೆ ಪ್ರಜ್ವಲಿಸಿದ.

ಸೂರ್ಯವಂಶದ ಸುಚಂದ್ರರಾಜ ಲಕ್ಷ ರಾಜರೊಡನೆ ಮತ್ತು ಹನ್ನೆರಡು ಅಕ್ಷೌಹಿಣೀ ಸೈನ್ಯದೊಡನೆ ಬಂದು ಸಿಂಹದ ಮುಂದೆ ಸಿಂಹ ನಿಂತಂತೆ ನಿಂತು ಯುದ್ಧ ಮಾಡಲು ತೊಡಗಿದ. ಆದರೆ ಅವನ ಕಡೆಯವರೆಲ್ಲ ಪರಶುರಾಮನ ಶೂಲಕ್ಕೆ ಬಲಿಯಾದರು. ಸುಚಂದ್ರನು ಮಾತ್ರ ಸ್ಥಿರವಾಗಿ ನಿಂತು ಪರಶುರಾಮನ ಸರ್ವಾಸ್ತ್ರವನ್ನು ಗರುಡಾಸ್ತ್ರದಿಂದ ಹಿಮ್ಮೆಟ್ಟಿಸಿದ. ನಾರಾಯಣಾಸ್ತ್ರವನ್ನು ಸಾಷ್ಟಾಂಗ ನಮಸ್ಕಾರದಿಂದ ಹಿಂತಿರುಗಿಸಿದ. ಅವನ ರಥದಲ್ಲಿದ್ದ ಭದ್ರಕಾಳಿ ಪರಶುರಾಮ ಪ್ರಯೋಗಿಸಿದ ಶಕ್ತಿ ಮುಸಲ ತೋಮರ ಪಟ್ಟಿಶ ಗದಾ ಪರಶು ಮುಂತಾದ ಎಲ್ಲ ಆಯುಧಗಳನ್ನೂ ನುಂಗಿದಳು. ಶೂಲಾಯುಧ ರಾಜನ ಕೊರಳಲ್ಲಿ ಹಾರವಾಗಿ ಕುಳಿತಿತು. ಪರಶುರಾಮ ಶಸ್ತ್ರಾಸ್ತ್ರಗಳನ್ನೂ ಪಿನಾಕ ಧನುಸ್ಸನ್ನೂ ಕೆಳಗಿಟ್ಟು ರುಂಡಮಾಲಾ ಭೂಷಿತಳಾದ ಏಕಟಾನನೆಯಾದ ಜಗನ್ಮಾತೆ ಭದ್ರಕಾಳಿಯನ್ನು ಭಕ್ತಿಯಿಂದ ಸ್ತುತಿಸಿದ-

'ಶಂಕರ ಪ್ರಿಯೆಯಾದ ಮಹಾಮಾಯೆಗೆ ನಮಸ್ಕಾರ. ನೀನು ಜಗನ್ಮಾತೆ. ಜಗತ್ತಿಗೆ ಸೃಷ್ಟಿಸ್ಥಿತಿ ಸಂಹಾರಗಳನ್ನು ಮಾಡುವವಳು. ನಾನು ನಿನ್ನ ಪಾದಗಳನ್ನು ಮೊರೆ ಹೊಕ್ಕಿರುವೆನು. ನನ್ನ ಪ್ರತಿಜ್ಞೆಯನ್ನು ಸಾರ್ಥಕಗೊಳಿಸು. ನೀನು ನನ್ನಲ್ಲಿ ಮುನಿದರೆ ಯಾರು ನನ್ನನ್ನು ಕಾಪಾಡಬಲ್ಲರು ? ಪ್ರಸನ್ನಳಾಗು. ಶಿವಲೋಕದಲ್ಲಿ ನೀವೆ ನನಗೆ ವರ ನೀಡಿರುವಿರಿ. ಅದನ್ನು ಈಗ ಸಫಲಗೊಳಿಸು.'

ಪರಶುರಾಮನ ಸ್ತೋತ್ರಕ್ಕೆ ಮೆಚ್ಚಿ ಭದ್ರಕಾಳಿ ಅಭಯ ನೀಡಿ ಕಣ್ಮರೆಯಾದಳು. ಈ ಸ್ತೋತ್ರಪಠನದಿಂದ ಮಹಾಭಯ ನಿವಾರಣೆಯಾಗುವುದು. ಮೂಲೋಕದಲ್ಲಿ ಪ್ರತಿಷ್ಠೆ ದೊರಕುವುದು. ಎಲ್ಲೆಡೆ ವಿಜಯವೂ ಉತ್ತಮ ಜ್ಞಾನವೂ ಶತ್ರುನಾಶವೂ ಉಂಟಾಗುವುದು.

ಈ ಮಧ್ಯದಲ್ಲಿ ಬ್ರಹ್ಮ ಬಂದು ಪರಶುರಾಮನಿಗೆ ರಹಸ್ಯವಾಗಿ ನುಡಿದ—

'ಪರಶುರಾಮ, ನಿನಗೆ ನಾನೊಂದು ರಹಸ್ಯವನ್ನು ಹೇಳುತ್ತೇನೆ, ಕೇಳು. ಹಿಂದೆ ದೂರ್ವಾಸಮುನಿ ಈ ಸುಚಂದ್ರರಾಜನಿಗೆ ಭದ್ರಕಾಳಿಯ ದಶಾಕ್ಷರ ಮಂತ್ರವನ್ನೂ ಕವಚವನ್ನು ಉಪದೇಶಿಸಿದ್ದ. ಈ ಕವಚ ಸರ್ವಶತ್ರುನಾಶಕ. ಮೂಲೋಕ ಜಯಕ್ಕೆ ಕಾರಣ. ಅಂಥ ಕವಚ ರಾಜನ ಕಂಠದಲ್ಲಿರುವಾಗ ಅವನನ್ನು ಯಾರು ತಾನೆ ಸೋಲಿಸಬಲ್ಲ ? ನೀನು ಅವನಲ್ಲಿ ಆ ಕವಚವನ್ನು ಬೇಡು. ಆತ ಸೂರ್ಯವಂಶದವ, ಪರಮಧಾರ್ಮಿಕ. ಕವಚವನ್ನೇಕೆ, ಪ್ರಾಣವನ್ನೂ ಕೊಡಬಲ್ಲ.'

ಪರಶುರಾಮ ಈ ಮಾತನ್ನು ಕೇಳಿ ಸಂನ್ಯಾಸಿ ವೇಷದಿಂದ ರಾಜನ ಬಳಿಗೆ ಹೋಗಿ ಮಂತ್ರ ಕವಚಗಳನ್ನು ಪಡೆದು ಶಿವನ ಶೂಲದಿಂದ ಅವನನ್ನು ಇರಿದುಕೊಂದ.

**ಇಲ್ಲಿಗೆ ಶ್ರೀ ಬ್ರಹ್ಮವೈವರ್ತ ಮಹಾಪುರಾಣದಲ್ಲಿ ಮೂರನೆಯದಾದ ಗಣಪತಿಖಂಡದ ನಾರದ ನಾರಾಯಣ ಸಂವಾದದಲ್ಲಿ ಭೃಗು ಕಾರ್ತವೀರ್ಯಯುದ್ಧವರ್ಣನವೆಂಬ ಮೂವತ್ತಾರನೆ ಅಧ್ಯಾಯ ಮುಗಿಯಿತು.**

## ಭದ್ರಕಾಳಿಯ ದಶಾಕ್ಷರ ಕವಚ ನಿರೂಪಣೆ | ಅಧ್ಯಾಯ-೩೭

ನಾರದ— ಪ್ರಭು, ಭದ್ರಕಾಳಿಯ ದಶಾಕ್ಷರ ಮಂತ್ರ ಯಾವುದು ? ಕವಚ ಯಾವುದು ?

ನಾರಾಯಣ- 'ಓಂ ಹ್ರೀಂ ಶ್ರೀಂ ಕ್ಲೀಂ ಕಾಲಿಕಾಯೈ ಸ್ವಾಹಾ' ಎಂಬುದು ದಶಾಕ್ಷರ ಕಾಲೀಮಂತ್ರ. ಇದನ್ನು ಪುಷ್ಕರಕ್ಷೇತ್ರದಲ್ಲಿ ಸೂರ್ಯಗ್ರಹಣಕಾಲದಲ್ಲಿ ದುರ್ವಾಸ-ಮುನಿ ರಾಜನಿಗೆ ಉಪದೇಶಿಸಿದ. ಹತ್ತುಲಕ್ಷ ಜಪದಿಂದ ರಾಜ ಅದನ್ನು ಸಿದ್ಧಿ ಮಾಡಿಕೊಂಡ. ಐದು ಲಕ್ಷ ಜಪದಿಂದ ಕವಚವನ್ನೂ ಸಿದ್ಧಿಮಾಡಿಕೊಂಡ. ಈ ಕವಚ ಪರಮಾದ್ಭುತ. ಹಿಂದೆ ನಾರಾಯಣ ಶಿವನಿಗೆ ಇದನ್ನು ಉಪದೇಶಿಸಿದ. ಇದರ ಪ್ರಭಾವದಿಂದ ತ್ರಿಪುರಾಸುರರೊಡನೆ ಯುದ್ಧದಲ್ಲಿ ಶಿವನಿಗೆ ಜಯ ಲಭಿಸಿತು. ಶಿವ ಮುಂದೆ ಈ ಕವಚವನ್ನೆ ದೂರ್ವಾಸನಿಗೆ ಉಪದೇಶಿಸಿದ. ದೂರ್ವಾಸ ಸುಚಂದ್ರ-ರಾಜನಿಗೆ ಉಪದೇಶಿಸಿದ. ಎಲ್ಲ ಮಂತ್ರಗಳಿಂದ ಗರ್ಭಿತವಾದ ರಹಸ್ಯವಾದ ಈ ಕವಚ ಹೀಗಿದೆ—

ಓಂ ಹ್ರೀಂ ಶ್ರೀಂ ಕ್ಲೀಂ ಕಾಲಿಕಾಯೈ ಸ್ವಾಹಾ' ಎಂಬ ಮಂತ್ರ ನನ್ನ ಶಿರಸ್ಸನ್ನು ರಕ್ಷಿಸಲಿ.
'ಕ್ಲೀಂ' ಎಂಬ ಮಂತ್ರ ಕಪಾಲವನ್ನು ಕಾಪಾಡಲಿ.
'ಹ್ರೀಂ ಹ್ರೀಂ ಹ್ರೀಂ' ಕಣ್ಣುಗಳನ್ನು, ಕಾಪಾಡಲಿ.
'ಓಂ ಹ್ರೀಂ ತ್ರಿಲೋಚನೇ ಸ್ವಾಹಾ' ಮೂಗನ್ನು ಕಾಪಾಡಲಿ.
'ಕ್ಲೀಂ ಕಾಲಿಕೇ ರಕ್ಷ ರಕ್ಷ ಸ್ವಾಹಾ' ತಲೆಯನ್ನು ಕಾಪಾಡಲಿ.
'ಕ್ಲೀಂ ಕಾಲಿಕೇ ರಕ್ಷ ರಕ್ಷ ಸ್ವಾಹಾ' ಹಲ್ಲುಗಳನ್ನು ಕಾಪಾಡಲಿ.
'ಕ್ಲೀಂ ಭದ್ರಕಾಲಿಕೇ ಸ್ವಾಹಾ' ಎರಡು ತುಟಿಗಳನ್ನು ಕಾಪಾಡಲಿ.
'ಓಂ ಹ್ರೀಂ ಹ್ರೀಂ ಕ್ಲೀಂ ಕಾಲಿಕಾಯೈ ಸ್ವಾಹಾ' ಕಂಠವನ್ನು ಕಾಪಾಡಲಿ.
'ಓಂ ಹ್ರೀಂ ಕಾಲಿಕಾಯೈ ಸ್ವಾಹಾ' ಎರಡು ಕಿವಿಗಳನ್ನು ಕಾಪಾಡಲಿ.
'ಓಂ ಕ್ರೀಂ ಕ್ರೀಂ ಕ್ಲೀಂ ಕಾಳ್ಯೈ ಸ್ವಾಹಾ' ಹೆಗಲನ್ನು ರಕ್ಷಿಸಲಿ.
'ಓಂ ಕ್ರೀಂ ಭದ್ರಕಾಯೈ ಸ್ವಾಹಾ' ನಾಭಿಯನ್ನು ಕಾಪಾಡಲಿ.
'ಓಂ ಕ್ಲೀಂ ಕಾಲಿಕಾಯೈ ಸ್ವಾಹಾ' ಬೆನ್ನನ್ನು ಕಾಪಾಡಲಿ.
'ರಕ್ತಬೀಜ ವಿನಾಶಿನ್ಯೈ ಸ್ವಾಹಾ' ಕೈಗಳನ್ನು ಕಾಪಾಡಲಿ.
'ಓಂ ಹ್ರೀಂ ಕ್ಲೀಂ ಮುಂಡಮಾಲಿನ್ಯೈ ಸ್ವಾಹಾ' ಪಾದಗಳನ್ನು ರಕ್ಷಿಸಲಿ.
'ಓಂ ಹ್ರೀಂ ಚಾಮುಂಡಾಯೈ ಸ್ವಾಹಾ' ಸರ್ವಾಂಗಗಳನ್ನು ರಕ್ಷಿಸಲಿ.

ಪೂರ್ವದಿಕ್ಕಿನಲ್ಲಿ ಮಹಾಕಾಳಿ, ಆಗ್ನೇಯದಲ್ಲಿ ರಕ್ತದಂತಿಕೆ, ದಕ್ಷಿಣದಲ್ಲಿ ಚಾಮುಂಡಿ, ನೈಋತ್ಯದಲ್ಲಿ ಕಾಳಿ, ಪಶ್ಚಿಮದಲ್ಲಿ ಶ್ಯಾಮೆ, ವಾಯುವ್ಯದಲ್ಲಿ ಚಂಡಿ, ಉತ್ತರದಲ್ಲಿ

**ವಿಕಟಾಸ್ಯೆ** ಈಶಾನ್ಯದಲ್ಲಿ ಅಟ್ಟಹಾಸಿನಿ, ಊರ್ಧ್ವದಲ್ಲಿ ಲೋಲಜಿಹ್ವೆ, ಅಧೋದಿಕ್ಕಿನಲ್ಲಿ **ಆದಿಮಾಯೆ**, ಜಲಸ್ಥಲ ಅಂತರಿಕ್ಷದಲ್ಲಿ ಜಗನ್ಮಾತೆ ರಕ್ಷಿಸಲಿ.

ಇದು ಎಲ್ಲ ಕವಚಗಳಲ್ಲಿ ಶ್ರೇಷ್ಠವಾದ ಕವಚ. ಇದರ ಪ್ರಭಾವದಿಂದಲೆ ಸುಚಂದ್ರ-ರಾಜ ಸಪ್ತದ್ವೀಪಾಧಿ ಪತಿಯಾದ, ಮಾಂಧಾತ ಚಕ್ರವರ್ತಿಯಾದ. ಪ್ರಚೇತಸನೂ **ಲೋಮಶನೂ** ಸಿದ್ಧರೆನಿಸಿದರು. ಸೌಭರಿ ಪಿಪ್ಪಲಾಯನರು ಯೋಗಿ ಶ್ರೇಷ್ಠ-ರೆನಿಸಿದರು. ಈ ಕವಚ ಸಿದ್ಧಿಯಾದರೆ ಎಲ್ಲ ಸಿದ್ಧಿಗಳೂ ಲಭಿಸುವುವು. ಎಲ್ಲ ಮಹಾದಾನ ತಪಸ್ಸು ವ್ರತಗಳೂ ಈ ಕವಚದ ಹದಿನಾರನೆ ಒಂದಂಶಕ್ಕೆ ಸಮವಾಗ-ಲಾರವು. ಈ ಕವಚದ ಉಪದೇಶವಿಲ್ಲದವ ನೂರುಲಕ್ಷ ಜಪದಿಂದ ಕಾಳಿಯನ್ನು ಧ್ಯಾನಿಸಿದರೂ ಮಂತ್ರ ಸಿದ್ಧಿಸಲಾರದು.

**ಇಲ್ಲಿಗೆ ಶ್ರೀ ಬ್ರಹ್ಮವೈವರ್ತ ಮಹಾಪುರಾಣದಲ್ಲಿ ಮೂರನೆಯದಾದ ಗಣಪತಿಖಂಡದ ನಾರದ ನಾರಾಯಣ ಸಂವಾದದಲ್ಲಿ ಭದ್ರಕಾಳೀ ಕವಚನಿರೂಪಣೆ ಎಂಬ ಮೂವತ್ತೇಳನೆ ಅಧ್ಯಾಯ ಮುಗಿಯಿತು.**

## ಮಹಾಲಕ್ಷ್ಮೀ ಕವಚ ವರ್ಣನೆ

## ಅಧ್ಯಾಯ-೩೮

ರಾಜಾ ಸುಚಂದ್ರ ಯುದ್ಧದಲ್ಲಿ ಮಡಿದಾಗ ಅವನ ಮಗ ಪುಷ್ಕರಾಕ್ಷ ಯುದ್ಧಕ್ಕೆ ನಿಂತ. ಆತ ಸೂರ್ಯನಂತೆ ತೇಜಸ್ವಿ, ಮಹಾಲಕ್ಷ್ಮಿಯ ಉಪಾಸನೆ ಮಾಡಿ ಅವಳ ಅನುಗ್ರಹಕ್ಕೆ ಪಾತ್ರನಾದವ. ಅವನ ಕಂಠದಲ್ಲಿ ಮಹಾಲಕ್ಷ್ಮಿ ಕವಚವಿದ್ದುದರಿಂದ ತ್ರೈಲೋಕ್ಯ ವಿಜಯಿಯಾಗಿ ಪರಮೈಶ್ವರ್ಯ ಹೊಂದಿದ್ದ. ಆದರೂ ಅವನ ರಥ, ಸಾರಥಿ, ಧನುಸ್ಸು, ಬತ್ತಳಿಕೆಗಳನ್ನು ಪರಶುರಾಮನ ಸೋದರರು ನಾಶ ಮಾಡಿದರು. ಅವನ ಸೋದರರನ್ನೂ ಶಿವಶೂಲದಿಂದ ಸಂಹರಿಸಿದರು. ಅವನ ಮೂರು ಅಕ್ಷೌಹಿಣೀ ಸೈನ್ಯವೂ ನಾಶವಾಯಿತು. ಕೊನೆಯಲ್ಲಿ ಅವನ ಸಂಹಾರಕ್ಕಾಗಿ ಶಿವಶೂಲ-ವನ್ನು ಪ್ರಯೋಗಿಸಿದಾಗ ಅದು ಅವನ ಕಂಠದಲ್ಲಿ ಕಮಲದ ಮಾಲೆಯಂತೆ ಕುಳಿತಿತು. ಶಕ್ತಿ, ಪರಿಘ, ಭುಶುಂಡಿ, ಮುದ್ಗರ, ಗದೆ ಮುಂತಾದ ಎಲ್ಲ ಆಯುಧಗಳೂ ಅವನ ಮೈಗೆ ತಾಗಿದೊಡನೆ ಪುಡಿ ಪುಡಿಯಾದುವು. ಅಷ್ಟರಲ್ಲಿ ಕಾರ್ತವೀರ್ಯ ರಥ ಧನುರ್ಬಾಣಗಳನ್ನೂ ಶಸ್ತ್ರಾಸ್ತ್ರಗಳನ್ನೂ ಅಸಂಖ್ಯ ಸೇನೆಯನ್ನೂ ಅವನ ಸಹಾಯಕ್ಕಾಗಿ ಕಳಿಸಿದ. ಒಡನೆ ಆತ ರಥವೇರಿ ಯುದ್ಧ ಮಾಡತೊಡಗಿದ. ಸಮ್ಮೋಹನಾಸ್ತ್ರದಿಂದ

ಪರಶುರಾಮನ ಸೋದರರೆಲ್ಲರನ್ನೂ ಮಲಗಿಸಿದ. ಅವರೆಲ್ಲರೂ ನಿದ್ರಿಸಿದರು. ಅವರ ಮೈಯೆಲ್ಲ ಕ್ಷತವಿಕ್ಷಕವಾಗಿತ್ತು. ಪರಶುರಾಮ ಅವರನ್ನೆಬ್ಬಿಸಿ ಸಂತೈಸಿ ಹಿಂದೆ ಕಳಿಸಿ ತಾನೆ ರಾಜನ ಮುಂದೆ ನಿಂತ. ಕೊಡಲಿ ಬೀಸಿ ಒಗೆದ. ಅದು ರಾಜನ ಕಿರೀಟವನ್ನು ಕಿತ್ತೆಸೆದು ನೆಲದಲ್ಲಿ ಬಿದ್ದಿತು. ಶಿವಶೂಲವನ್ನೆಸೆದ. ಅದೂ ರಾಜನ ಕರ್ಣಕುಂಡಲವನ್ನು ಕತ್ತರಿಸಿ ಶಿವನ ಬಳಿಗೆ ಹೋಯಿತು. ಬ್ರಹ್ಮಾಸ್ತ್ರವೆಸೆದ. ಅದನ್ನೂ ರಾಜ ಮಂತ್ರದಿಂದ ಉಪಶಮಗೊಳಿಸಿದ. ಈಗ ಶಿವನನ್ನು ಸ್ತುತಿಸಿ ಪಾಶುಪತಾಸ್ತ್ರವನ್ನೆತ್ತಿಕೊಂಡ. ಆದರೆ ನಾರಾಯಣ ಬ್ರಾಹ್ಮಣರೂಪದಿಂದ ಬಂದು ಪರಶುರಾಮನನ್ನು ತಡೆದು ಹೇಳಿದ-

'ಪರಶುರಾಮ, ಇದೇನು ಮಾಡುತ್ತಿರುವೆ ? ನೀನು ತಿಳಿದವ. ಆದರೂ ಒಬ್ಬ ಮಾನವನನ್ನು ಕೊಲ್ಲಲು ಪಾಶುಪತಾಸ್ತ್ರ ಪ್ರಯೋಗಿಸುತ್ತಿರುವೆ. ಅದು ಪ್ರಪಂಚವನ್ನೆ ಸುಟ್ಟೀತು. ಕೃಷ್ಣಪರಮಾತ್ಮನನ್ನು ಹೊರತು ಎಲ್ಲರನ್ನೂ ಸಂಹರಿಸೀತು. ಎಲ್ಲ ಅಸ್ತ್ರ-ಗಳನ್ನೂ ಮರ್ದಿಸಬಲ್ಲ ಸುದರ್ಶನ ಚಕ್ರವೂ ಪಾಶುಪತಾಸ್ತ್ರವನ್ನು ಏನೂ ಮಾಡಲಾರದು. ಶಿವನ ಪಾಶುಪತ ಒಂದು, ಹರಿಯ ಸುದರ್ಶನವಿನ್ನೊಂದು. ಇವೆರಡೇ ಮೂಲೋಕದ ಅಸ್ತ್ರಗಳಲ್ಲೆಲ್ಲ ಪ್ರಧಾನವಾದವುಗಳು. ಅದರಿಂದ ಪರಶುರಾಮ, ನೀನೀ ಪಾಶುಪತಾಸ್ತ್ರವನ್ನು ಕೆಳಗಿಡು. ನನ್ನ ಮಾತುಕೇಳು. ರಾಜಾ ಪುಷ್ಕರಾಕ್ಷನನ್ನು ಗೆಲ್ಲುವ ಬಗೆ ಹೇಗೆಂಬುದನ್ನು ನಾನು ಹೇಳುತ್ತೇನೆ. ಕಾರ್ತವೀರ್ಯನನ್ನೂ ಹೇಗೆ ಗೆಲ್ಲಬಹುದೆಂಬುದನ್ನೂ ಹೇಳುತ್ತೇನೆ. ಈ ಪುಷ್ಕರಾಕ್ಷ ಮೂಲೋಕದಲ್ಲಿ ದುರ್ಲಭ-ವಾದ ಮಹಾಲಕ್ಷ್ಮೀ ಕವಚವನ್ನು ಕಂಠದಲ್ಲಿ ಧರಿಸಿದ್ದಾನೆ. ಇವನ ಮಗನೂ ದುರ್ಗಾಕವಚವನ್ನು ಬಲತೋಳಿನಲ್ಲಿ ಧರಿಸಿದ್ದಾನೆ. ಇವರಿಬ್ಬರೂ ಕವಚಗಳ ಪ್ರಭಾವದಿಂದ ಪ್ರಪಂಚವನ್ನೇ ಗೆಲ್ಲಬಲ್ಲರು. ಯಾರು ತಾನೆ ಅವರನ್ನು ಗೆಲ್ಲುವರು ? ಆದ್ದರಿಂದ ನಾನು ಈಗ ಅವರ ಬಳಿಗೆ ಹೋಗಿ ಕವಚಭಿಕ್ಷೆ ಬೇಡಿ ಪಡೆಯುತ್ತೇನೆ. ನಿನ್ನ ಪ್ರತಿಜ್ಞೆ ಈಡೇರುವಂತೆ ಮಾಡುತ್ತೇನೆ.'

ಬ್ರಾಹ್ಮಣನ ಮಾತು ಕೇಳಿ ಪರಶುರಾಮ ಭೀತನಾಗಿ 'ಬ್ರಾಹ್ಮಣ, ನೀನಾರೆಂದು ನನಗೆ ತಿಳಿಯದು. ಅದನ್ನು ನನಗೆ ಹೇಳಿ ರಾಜನ ಬಳಿಗೆ ಹೋಗು' ಎಂದ. ಬ್ರಾಹ್ಮಣ ನಕ್ಕು ತಾನು ನಾರಾಯಣನೆಂದು ಹೇಳಿ ರಾಜನ ಬಳಿಗೆ ನಡೆದ. ರಾಜನಿಂದಲೂ ರಾಜಕುಮಾರನಿಂದಲೂ ಕವಚಗಳನ್ನು ಬೇಡಿ ಪಡೆದು ವೈಕುಂಠಕ್ಕೆ ತೆರಳಿದ.

ನಾರದ— ಮಹಾಲಕ್ಷ್ಮೀ ಕವಚವನ್ನು ಪುಷ್ಕರಾಕ್ಷನಿಗೆ ಯಾರು ಉಪದೇಶಿಸಿದರು ? ದುರ್ಗಾಕವಚವನ್ನು ಅವನ ಮಗನಿಗೆ ಯಾರು ಉಪದೇಶಿಸಿದರು. ಆ ಕವಚಗಳ ಮಂತ್ರವೇನು ? ಮಹಿಮೆ ಏನು, ಹೇಳು.

ನಾರಾಯಣ— ಮಹಾಲಕ್ಷ್ಮೀ ಕವಚವನ್ನೂ ದಶಾಕ್ಷರ ಮಂತ್ರ ಸ್ತೋತ್ರಧ್ಯಾನ ಪೂಜಾಕ್ರಮಗಳನ್ನೂ ಸನತ್ಕುಮಾರ ಪುಷ್ಕರಾಕ್ಷನಿಗೆ ಉಪದೇಶಿಸಿದ. ಒಂದು ಮಹಾ-

ಯುದ್ಧದ ಪ್ರಾರಂಭಕಾಲದಲ್ಲಿ ಅವನ ಮಗನಿಗೆ ದೂರ್ವಾಸಮುನಿ ದುರ್ಗಾಕವಚ ಸ್ತೋತ್ರಾದಿಗಳನ್ನು ಉಪದೇಶಿಸಿದ. ದುರ್ಗಾಕವಚದ ಬಗ್ಗೆ ಮುಂದೆ ಹೇಳುತ್ತೇನೆ. ಈಗ ಮಹಾಲಕ್ಷ್ಮೀಮಂತ್ರವನ್ನೂ ಸಾಮವೇದೋಕ್ತವಾದ ಧ್ಯಾನಕ್ರಮವನ್ನೂ ಹೇಳುತ್ತೇನೆ.

'ಓಂ ಶ್ರೀ ಕಮಲ ವಾಸಿನ್ಯೈ ಸ್ವಾಹಾ' -ಇದು ದಶಾಕ್ಷರ ಮಹಾಲಕ್ಷ್ಮೀ ಮಂತ್ರ. 'ಮಹಾಲಕ್ಷ್ಮಿ ಸಹಸ್ರದಳ ಪದ್ಮದಲ್ಲಿ ಕುಳಿತಿದ್ದಾಳೆ. ಪದ್ಮನಾಭನ ಪ್ರೇಯಸಿಯಾಗಿದ್ದಾಳೆ. ಪದ್ಮದಲ್ಲಿ ವಾಸ. ಪದ್ಮದಂಥ ಮುಖ. ಪದ್ಮದಳದಂಥ ಕಣ್ಣುಗಳು. ಪದ್ಮ ಪುಷ್ಪದಲ್ಲಿ ಪ್ರೀತಿ. ಪದ್ಮಪುಷ್ಪಗಳ ಹಾಸಿಗೆಯಲ್ಲಿ ಮಲಗುತ್ತಾಳೆ. ಪದ್ಮವನ್ನು ಕೈಯಲ್ಲಿ ಹಿಡಿದಿದ್ದಾಳೆ. ಪದ್ಮಮಾಲೆ ಧರಿಸಿದ್ದಾಳೆ. ಪದ್ಮಭೂಷಣ ಭೂಷಿತಳಾಗಿದ್ದಾಳೆ. ಪದ್ಮಕ್ಕೇ ಶೋಭೆಯನ್ನು ಹೆಚ್ಚಿಸುತ್ತಾಳೆ. ಪದ್ಮವನವನ್ನು ನೋಡಿ ಆನಂದಿಸುತ್ತಾಳೆ. ಇಂಥ ಮಹಾಲಕ್ಷ್ಮಿಯನ್ನು ಆರಾಧಿಸುತ್ತೇನೆ,' -ಇದು ಮಹಾಲಕ್ಷ್ಮೀಧ್ಯಾನ. ಚಂದನದಿಂದ ಅಷ್ಟದಳಪದ್ಮ ರಚಿಸಿ ದೇವಿಯನ್ನು ಧ್ಯಾನಪೂರ್ವಕವಾಗಿ ಪ್ರತಿಷ್ಠೆ ಮಾಡಿ ಪದ್ಮಪುಷ್ಪಗಳಿಂದ ಪೂಜಿಸಬೇಕು. ಪರಿವಾರ ದೇವತೆಗಳೊಡನೆ ಷೋಡಶೋಪಚಾರಗಳಿಂದ ಸತ್ಕರಿಸಬೇಕು. ಸ್ತೋತ್ರ ನಮಸ್ಕಾರಗಳನ್ನೂ ಸಲ್ಲಿಸಬೇಕು. ಈಗ ಕವಚವನ್ನು ಹೇಳುತ್ತೇನೆ, ಕೇಳು. ಇದನ್ನು ಹಿಂದೆ ಪದ್ಮನಾಭ ತನ್ನ ನಾಭಿಪದ್ಮದಲ್ಲಿ ಜನಿಸಿದ ಬ್ರಹ್ಮನಿಗೆ ಉಪದೇಶಿಸಿದ್ದ. ಅದರಿಂದ ಬ್ರಹ್ಮ ಮಹಾಲಕ್ಷ್ಮಿಯ ಅನುಗ್ರಹದಿಂದ ಪಾದ್ಮಕಲ್ಪದಲ್ಲಿ ಪ್ರಪಂಚ ಸೃಷ್ಟಿಮಾಡಿ ಮಹಾಐಶ್ವರ್ಯ ಪಡೆದ. ಬಳಿಕ ತನ್ನ ಪ್ರಿಯಪುತ್ರನಾದ ಸನತ್ಕುಮಾರನಿಗೆ ಉಪದೇಶಿಸಿದ. ಸನತ್ಕುಮಾರ ಪುಷ್ಕರಾಕ್ಷನಿಗೆ ಉಪದೇಶಿಸಿದ. ಈ ಕವಚಧಾರಣೆಯಿಂದಲೆ ಬ್ರಹ್ಮ, ಕುಬೇರ, ಸ್ವಾಯಂಭುವ, ಮನು, ಪ್ರಿಯವ್ರತ, ಉತ್ತಾನಪಾದರು, ಪೃಥು, ದಕ್ಷಪ್ರಜಾಪತಿ, ಧರ್ಮ, ವಿಷ್ಣು, ಶೇಷ ಇವರೆಲ್ಲ ಮಹಾ ಐಶ್ವರ್ಯ ಶಾಲಿಗಳಾದರು. ಕಶ್ಯಪ ವಾಮನನ್ನು ಮಗನನ್ನಾಗಿ ಪಡೆದ. ಇಂದ್ರ ಸರ್ವದೇವಾಧಿಪತಿಯಾದ. ರಾಜಾ ಮರುತ್ತನೂ ನಹುಷನೂ ತ್ರೈಲೋಕ್ಯಾಧಿಪತಿಗಳೆನಿಸಿದರು. ಖಟ್ವಾಂಗ ಮುಚುಕುಂದರೂ ಪ್ರಪಂಚವನ್ನು ಗೆದ್ದರು. ಹೀಗೆ ಸರ್ವಸಂಪತ್‌ಪ್ರದವಾದ ಈ ಕವಚಕ್ಕೆ ಪ್ರಜಾಪತಿಯೆ ಋಷಿ. ಬೃಹತೀ ಛಂದಸ್ಸು, ಮಹಾಲಕ್ಷ್ಮಿ ದೇವತೆ. ಧರ್ಮಅರ್ಥಕಾಮ ಮೋಕ್ಷಗಳನ್ನು ಸಾಧಿಸಲು ಈ ಮಂತ್ರ ವಿಹಿತವಾಗಿದೆ—

'ಓಂ ಹ್ರೀಂ ಕಮಲವಾಸಿನ್ಯೈ ಸ್ವಾಹಾ' ಎಂಬ ಮಂತ್ರ ಶಿರಸ್ಸನ್ನು ಕಾಪಾಡಲಿ.

'ಶ್ರೀಂ' ಎಂಬ ಮಂತ್ರ ಕಪಾಲವನ್ನು ಕಾಪಾಡಲಿ.

'ಶ್ರೀಂ ಶ್ರಿಯೈನಮಃ' ಕಣ್ಣುಗಳನ್ನು ಕಾಪಾಡಲಿ.

'ಓಂ ಶ್ರೀಂ ಶ್ರಿಯೈ ಸ್ವಾಹಾ' ಕಿವಿಗಳನ್ನು ಕಾಪಾಡಲಿ.

'ಓಂ ಶ್ರೀಂ ಕ್ಲೀಂ ಮಹಾಲಕ್ಷ್ಮ್ಯೈ ಸ್ವಾಹಾ' ಮೂಗನ್ನು ರಕ್ಷಿಸಲಿ.

'ಓಂ ಶ್ರೀಂ ಪದ್ಮಾಲಯಾಯೈ ಸ್ವಾಹಾ' ದಂತಗಳನ್ನು ರಕ್ಷಿಸಲಿ.
'ಓಂ ಶ್ರೀಂ ಕೃಷ್ಣಪ್ರಿಯಾಯೈ ಸ್ವಾಹಾ' ದಂತ ಸಂಧಿಗಳನ್ನು ಕಾಪಾಡಲಿ.
'ಓಂ ಶ್ರೀಂ ನಾರಾಯಣೇಶಾಯೈ ಸ್ವಾಹಾ' ಕಂಠವನ್ನು ಕಾಪಾಡಲಿ.
'ಓಂ ಶ್ರೀಂ ಕೇಶವಕಾಂತಾಯೈ ಸ್ವಾಹಾ' ಹೆಗಲನ್ನು ಕಾಪಾಡಲಿ.
'ಓಂ ಶ್ರೀಂ ಪದ್ಮನಿವಾಸಿನ್ಯೈ ಸ್ವಾಹಾ' ನಾಭಿಯನ್ನು ರಕ್ಷಿಸಲಿ.
'ಓಂ ಹ್ರೀಂ ಶ್ರೀಂ ಸಂಸಾರಮಾತ್ರೇ ಸ್ವಾಹಾ' ಎದೆಯನ್ನು ರಕ್ಷಿಸಲಿ.
'ಓಂ ಶ್ರೀಂ ಮೋಂ.ಕೃಷ್ಣಕಾಂತಾಯೈ ಸ್ವಾಹಾ' ಬೆನ್ನನ್ನು ರಕ್ಷಿಸಲಿ.
'ಓಂ ಹ್ರೀಂ ಶ್ರೀಂ ಶ್ರಿಯೈ ಸ್ವಾಹಾ' ಕೈಗಳನ್ನು ರಕ್ಷಿಸಲಿ.
'ಓಂ ಶ್ರೀನಿವಾಸ ಕಾಂತಾಯೈ ಸ್ವಾಹಾ' ಕಾಲುಗಳನ್ನು ಕಾಪಾಡಲಿ.
'ಓಂ ಹ್ರೀಂ ಶ್ರೀಂ ಕ್ಲೀಂ ಶ್ರಿಯೈಸ್ವಾಹಾ' ಸರ್ವಾಂಗವನ್ನು ಕಾಪಾಡಲಿ.

ಪೂರ್ವದಿಕ್ಕಿನಲ್ಲಿ ಮಹಾಲಕ್ಷ್ಮಿ, ಆಗ್ನೇಯದಲ್ಲಿ ಕಮಲಾಲಯೆ, ದಕ್ಷಿಣದಲ್ಲಿ ಪದ್ಮೆ, ನೈಋತ್ಯದಲ್ಲಿ ಶ್ರೀಹರಿಪ್ರಿಯೆ, ಪಶ್ಚಿಮದಲ್ಲಿ ಪದ್ಮಾಲಯೆ, ವಾಯವ್ಯದಲ್ಲಿ ಶ್ರೀ, ಉತ್ತರದಲ್ಲಿ ಕಮಲೆ, ಈಶಾನ್ಯದಲ್ಲಿ ಸಿಂಧುಕನ್ಯಕೆ, ಊರ್ಧ್ವದಿಕ್ಕಿನಲ್ಲಿ ನಾರಾಯಣಿ, ಅಧೋದಿಕ್ಕಿನಲ್ಲಿ ವಿಷ್ಣುಪ್ರಿಯೆ ಎಲ್ಲ ಕಡೆ ಎಲ್ಲ ಕಾಲದಲ್ಲಿ ವಿಷ್ಣುಪ್ರಾಣಾಧಿಕೆ ನನ್ನನ್ನು ರಕ್ಷಿಸುತ್ತಿರಲಿ.'

ಸರ್ವೈಶ್ವರ್ಯಪ್ರದವೆಂಬ ಈ ಕವಚ ಎಲ್ಲ ಮಂತ್ರಗಳಿಂದ ಗರ್ಭಿತವಾಗಿದ್ದು ಇದರಿಂದ ಮೇರುವಿನಂಥ ಬಂಗಾರದ ಬೆಟ್ಟವನ್ನು ದಾನಮಾಡಿದ್ದಕ್ಕಿಂತ ಹೆಚ್ಚಿನ ಫಲ ಸಿಗುತ್ತದೆ. ಗುರುವನ್ನು ವಿಧ್ಯುಕ್ತವಾಗಿ ಪೂಜಿಸಿ ಕಂಠದಲ್ಲಿ ಅಥವಾ ಬಲತೋಳಿನಲ್ಲಿ ಈ ಕವಚ ಧರಿಸಿದರೆ ಪ್ರತಿಜನ್ಮದಲ್ಲಿಯೂ ಐಶ್ವರ್ಯಶಾಲಿಯಾಗುತ್ತಾನೆ. ಅವನ ಮನೆಯಲ್ಲಿ ನೂರು ತಲೆಗಳವರೆಗೂ ಲಕ್ಷ್ಮಿ ಸ್ಥಿರವಾಗಿ ನಿಲ್ಲುತ್ತಾಳೆ. ದೇವಾಸುರ-ರಿಂದಲೂ ಆತ ಅವಧ್ಯನೆನಿಸುತ್ತಾನೆ. ಸರ್ವಪುಣ್ಯಕರ್ಮಗಳ ಯಜ್ಞಗಳ ತೀರ್ಥಸ್ನಾನ-ಗಳ ಫಲ ಕವಚಧಾರಣೆಯಿಂದ ಲಭಿಸುತ್ತದೆ. ಇದನ್ನು ಲೋಭ ಮೋಹ ಭಯ-ಗಳಿಂದ ಯಾರಿಗಾದರೂ ಉಪದೇಶಿಸಕೂಡದು. ಗುರುವಿನಲ್ಲಿ ಶರಣಾಗತನಾಗಿ ಭಕ್ತಿಯಿಂದ ಬಂದ ಶಿಷ್ಯನಿಗೇ ಉಪದೇಶಿಸಬೇಕು. ಈ ಕವಚದ ಉಪದೇಶ-ವಿಲ್ಲದವನು. ಕೋಟಿಜಪದಿಂದಲೂ ಲಕ್ಷ್ಮೀಮಂತ್ರವನ್ನು ಸಾಧಿಸಿಕೊಳ್ಳಲಾರ.

**ಇಲ್ಲಿಗೆ ಶ್ರೀ ಬ್ರಹ್ಮವೈವರ್ತ ಮಹಾಪುರಾಣದಲ್ಲಿ ಮೂರನೆಯದಾದ ಗಣಪತಿಖಂಡದ ನಾರದ ನಾರಾಯಣ ಸಂವಾದದಲ್ಲಿ ಶ್ರೀ ಲಕ್ಷ್ಮೀಕವಚವರ್ಣನವೆಂಬ ಮೂವತ್ತೆಂಟನೆ ಅಧ್ಯಾಯ ಮುಗಿಯಿತು.**

# ಬ್ರಹ್ಮಾಂಡ ವಿಜಯ ಎಂಬ ದುರ್ಗಾಕವಚ ನಿರೂಪಣ

## ಅಧ್ಯಾಯ-೩೯

ನಾರದ— ಮಹಾಲಕ್ಷ್ಮೀ ಕವಚವನ್ನು ಹೇಳಿರುವಿ. ಇನ್ನುಮುಂದೆ ದುರ್ಗಾ-ಕವಚವನ್ನೂ ಹೇಳು.

ನಾರಾಯಣ— ನಾರದ, ಕೇಳು. ಶ್ರೀಕೃಷ್ಣ ಗೋಲೋಕದಲ್ಲಿ ಬ್ರಹ್ಮನಿಗೂ, ಬ್ರಹ್ಮ ತ್ರಿಪುರಾಸುರ ಸಂಗ್ರಾಮಕಾಲದಲ್ಲಿ ಶಿವನಿಗೂ ಈ ಕವಚವನ್ನು ಉಪದೇಶಿಸಿದ. ಶಿವ ಇದನ್ನು ಧರಿಸಿಯೆ ತ್ರಿಪುರರನ್ನು ಸಂಹರಿಸಿದ. ಗೌತಮನಿಗೆ ಅವನೆ ಇದನ್ನು ಉಪದೇಶಿಸಿದ. ಗೌತಮ ಪದ್ಮಾಕ್ಷನಿಗೆ ಉಪದೇಶಿಸಿದ. ಅದರಿಂದ ಪದ್ಮಾಕ್ಷ ಸಪ್ತ-ದ್ವೀಪಾಧಿಪತಿಯೆನಿಸಿದ. ಬ್ರಹ್ಮ ಜ್ಞಾನಿಯೂ ಶಕ್ತಿ ಶಾಲಿಯೂ ಆದುದು ಈ ಕವಚ-ಬಲದಿಂದ. ಗೌತಮ ಮುನಿಯೂ ಅದರಿಂದಲೆ ಶಿವನಂತೆ ಜ್ಞಾನಿಯಾದ.

ಬ್ರಹ್ಮಾಂಡವಿಜಯವೆಂಬ ಈ ಕವಚಕ್ಕೆ ಪ್ರಜಾಪತಿ ಋಷಿ. ಗಾಯತ್ರಿ ಛಂದಸ್ಸು. ದುರ್ಗೆದೇವತೆ. ಬ್ರಹ್ಮಾಂಡ ವಿಜಯ ಸಾಧನೆಯಲ್ಲಿ ಈ ಕವಚಮಂತ್ರ ಅತ್ಯಂತ ಉಪಯುಕ್ತವಾಗಿದೆ.

'ಓಂ ಹ್ರೀಂ ದುರ್ಗತಿನಾಶಿನ್ಯೈ ಸ್ವಾಹಾ' ಎಂಬ ಮಂತ್ರ ನನ್ನ ಶಿರಸ್ಸನ್ನು ಕಾಪಾಡಲಿ.
'ಓಂ ಹ್ರೀಂ' ನನ್ನ ಕಪಾಲವನ್ನು ಕಾಪಾಡಲಿ.
'ಓಂ ಹ್ರೀಂ ಶ್ರೀಂ' ಕಣ್ಣುಗಳನ್ನು ಕಾಪಾಡಲಿ.
'ಓಂ ದುರ್ಗಾಯೈ ನಮಃ' ಕಿವಿಗಳನ್ನು ಕಾಪಾಡಲಿ.
'ಓಂ ಹ್ರೀಂ ಶ್ರೀಂ ದುರ್ಗಾಯೈ ನಮಃ' ಮೂಗನ್ನು ರಕ್ಷಿಸಲಿ.
'ಓಂ ಶ್ರೀಂ ಹ್ರೂಂ' ಹಲ್ಲುಗಳನ್ನು ರಕ್ಷಿಸಲಿ.
'ಕ್ಲೀಂ' ತುಟಿಗಳನ್ನು ರಕ್ಷಿಸಲಿ.
'ಕ್ಲೀಂ ಕ್ಲೀಂ ಕ್ಲೀಂ' ಕಂಠವನ್ನು ರಕ್ಷಿಸಲಿ.
'ದುರ್ಗೇ ರಕ್ಷ' ಕೆನ್ನೆಗಳನ್ನು ಕಾಪಾಡಲಿ.
'ಮಹಾಕಾಲಿದುರ್ಗೇ ಸ್ವಾಹಾ' ಹೆಗಲನ್ನು ರಕ್ಷಿಸಲಿ.
'ವಿಪದ್ವಿನಾಶಿನ್ಯೈ ಸ್ವಾಹಾ' ಎದೆಯನ್ನು ಕಾಪಾಡಲಿ.
'ದುರ್ಗೇ ದುರ್ಗೇ ರಕ್ಷ' ಪಾರ್ಶ್ವಗಳನ್ನು ಕಾಪಾಡಲಿ.
'ದುರ್ಗೇ ದುರ್ಗೇ ಸ್ವಾಹಾ' ನಾಭಿಯನ್ನು ಕಾಪಾಡಲಿ.
'ದುರ್ಗೇ ದುರ್ಗೇ ದೇಹಿ ರಕ್ಷಾಂ' ಬೆನ್ನನ್ನು ರಕ್ಷಿಸಲಿ.
'ಓಂ ಹ್ರೀಂ ದುರ್ಗಾಯೈ ಸ್ವಾಹಾ' ಕೈಕಾಲುಗಳನ್ನು ರಕ್ಷಿಸಲಿ.
'ಓಂ ಹ್ರೀಂ ದುರ್ಗಾಯೈ ಸ್ವಾಹಾ' ಸರ್ವಾಂಗಗಳನ್ನು ಕಾಪಾಡಲಿ.

ಪೂರ್ವದಿಕ್ಕಿನಲ್ಲಿ ಮಹಾಮಾಯೆ. ಆಗ್ನೇಯದಲ್ಲಿ ಕಾಳಿಕೆ, ದಕ್ಷಿಣದಲ್ಲಿ ದಕ್ಷಕನ್ಯೆ, ನೈಋತ್ಯದಲ್ಲಿ ಶಿವಸುಂದರಿ, ಪಶ್ಚಿಮದಲ್ಲಿ ಪಾರ್ವತಿ, ವಾಯವ್ಯದಲ್ಲಿ ವಾರಾಹಿ, ಉತ್ತರದಲ್ಲಿ ಕುಬೇರಮಾತೆ, ಈಶಾನ್ಯದಲ್ಲಿ ಈಶ್ವರಿ, ಊರ್ಧ್ವದಿಕ್ಕಿನಲ್ಲಿ ನಾರಾಯಣಿ, ಅಧೋದಿಕ್ಕಿನಲ್ಲಿ ಅಂಬಿಕೆ, ಜಾಗರದಲ್ಲಿ ಜ್ಞಾನಪ್ರದೆ, ಸ್ವಪ್ನದಲ್ಲಿ ನಿದ್ರೆ ಸದಾ ನನ್ನನ್ನು ರಕ್ಷಿಸುತ್ತಿರಲಿ.'

-ಇದು ಬ್ರಹ್ಮಾಂಡವಿಜಯವೆಂಬ ಪರಮಾದ್ಭುತವಾದ ದುರ್ಗಾಕವಚ. ಇದರಿಂದ ಸರ್ವತೀರ್ಥಸ್ನಾನ, ಸರ್ವಯಜ್ಞಾನುಷ್ಠಾನ, ಸರ್ವವ್ರತೋಪವಾಸಗಳ ಫಲ ಲಭಿಸು-ವುದು. ಗುರುವನ್ನು ವಿಧ್ಯುಕ್ತರೀತಿಯಿಂದ ವಸ್ತ್ರಾಭರಣ ಚಂದನಗಳಿಂದ ಪೂಜಿಸಿ ಕಂಠದಲ್ಲಿ ಅಥವಾ ಬಲತೋಳಿನಲ್ಲಿ ಕವಚಧಾರಣ ಮಾಡಿದರೆ ಆತ ಸರ್ವಶತ್ರು-ಗಳನ್ನು ನಿಗ್ರಹಿಸಿ ಮೂಲೋಕವನ್ನು ಜಯಿಸುತ್ತಾನೆ. ಈ ಕವಚದ ಉಪದೇಶವಿಲ್ಲದೆ ನೂರುಲಕ್ಷ ಜಪದಿಂದಲೂ ದುರ್ಗಾಮಂತ್ರ ಸಿದ್ಧಿಸಲಾರದು. ಇದು ಕಾಣ್ವಶಾಖೋಕ್ತ, ಸರ್ವಸಿದ್ಧಿದಾಯಕ. ಅಯೋಗ್ಯರಿಗೆ ಉಪದೇಶಿಸುವಂಥದ್ದಲ್ಲ. ಅತ್ಯಂತ ರಹಸ್ಯ, ದುರ್ಲಭ.

**ಇಲ್ಲಿಗೆ ಶ್ರೀ ಬ್ರಹ್ಮವೈವರ್ತ ಮಹಾಪುರಾಣದಲ್ಲಿ ಮೂರನೆಯದಾದ ಗಣಪತಿಖಂಡದ ನಾರದ ನಾರಾಯಣ ಸಂವಾದದಲ್ಲಿ ದುರ್ಗತಿನಾಶಿನೀಕವಚವೆಂಬ ಮೂವತ್ತೊಂಬತ್ತನೆ ಅಧ್ಯಾಯ ಮುಗಿಯಿತು.**

## ಅಧ್ಯಾಯ-೪೦

## ಕೃಷ್ಣಕವಚ ಪಡೆದ ಪರಶುರಾಮನಿಂದ ಕಾರ್ತವೀರ್ಯಾರ್ಜುನನ ವಧ

ಶ್ರೀಹರಿ ಬ್ರಾಹ್ಮಣರೂಪದಿಂದ ಪುಷ್ಕರಾಕ್ಷ ಪದ್ಮಾಕ್ಷರ ಬಳಿಗೆ ಬಂದು ಕವಚಗಳನ್ನು ಬೇಡಿ ಪಡೆದು ವೈಕುಂಠಕ್ಕೆ ತೆರಳಿದ. ಇತ್ತ ಪರಶುರಾಮ ಅವರಿಬ್ಬರನ್ನೂ ಇದಿರಿಸಿ ಒಂದುವಾರ ಯುದ್ಧಮಾಡಿ ಕೊನೆಗೆ ಬ್ರಹ್ಮಾಸ್ತ್ರದಿಂದ ಇಬ್ಬರನ್ನೂ ವಧಿಸಿದ. ಒಡನೆ ಎರಡು ಲಕ್ಷ ಅಕ್ಷೌಹಿಣಿಸೈನ್ಯ ಸಮೇತನಾಗಿ ಕಾರ್ತವೀರ್ಯನೆ ಸ್ವತಃ ಯುದ್ಧಕ್ಕೆ ನಿಂತ. ರತ್ನಖಚಿತವಾದ ಬಂಗಾರದ ರಥವೇರಿ ಕೋಟಿ ರಾಜರುಗಳಿಂದ ಪರಿವೃತನಾಗಿ ಬಂದು ಪರಶುರಾಮನನ್ನು ಕಂಡು ರಥದಿಂದಿಳಿದು ನಮಿಸಿದ. ಪರಶುರಾಮ 'ಪರಿವಾರ ಸಮೇತನಾಗಿ ಸ್ವರ್ಗವನ್ನು ಹೊಂದು' ಎಂದು ಆಶೀರ್ವದಿಸಿದ. ರಾಜ

ಪರಿವಾರ ಸಮೇತನಾಗಿ ಯುದ್ಧದಲ್ಲಿ ಮಡಿದು ವೀರಸ್ವರ್ಗ ಹೊಂದಬೇಕೆಂಬುದೆ ಪರಶುರಾಮನ ಸಂಕಲ್ಪವಾಗಿದ್ದುದರಿಂದ ಹಾಗೇ ಆಶೀರ್ವಾದ ಮಾಡಿದ. ಬಳಿಕ ಯುದ್ಧ ಪ್ರಾರಂಭವಾಯಿತು. ಆಗ್ನೇಯಾಸ್ತ್ರ, ವಾರುಣಾಸ್ತ್ರ, ಗಾಂಧರ್ವಾಸ್ತ್ರ-ವಾಯವ್ಯಾಸ್ತ್ರ, ಸರ್ಪಾಸ್ತ್ರ-ಗರುಡಾಸ್ತ್ರ, ಮಾಹೇಶ್ವರಾಸ್ತ್ರ-ವೈಷ್ಣವಾಸ್ತ್ರ, ಹೀಗೆ ಅಸ್ತ್ರ ಪ್ರತ್ಯಸ್ತ್ರಗಳಿಂದ ಪರಶುರಾಮ ಕಾರ್ತವೀರ್ಯಾರ್ಜುನರು ಹೋರಾಡಿದರು. ಪರಶುರಾಮನ ಬ್ರಹ್ಮಾಸ್ತ್ರವನ್ನೂ ಕಾರ್ತವೀರ್ಯ ಬ್ರಹ್ಮಾಸ್ತ್ರದಿಂದಲೆ ಇದಿರಿಸಿದ. ಬಳಿಕ ದತ್ತಾತ್ರೇಯ ಕೊಟ್ಟಿದ್ದ ಅಮೋಘವಾದ ಶೂಲಾಯುಧವನ್ನು ಮಂತ್ರಪೂರ್ವಕವಾಗಿ ಪ್ರಯೋಗಿಸಿದ. ಆಗ ಪರಶುರಾಮ ಹರಿಸ್ಮರಣಮಾಡುತ್ತ ಮೂರ್ಛಿತನಾಗಿ ಬಿದ್ದ. ದೇವತೆಗಳು ಹಾಹಾಕಾರ ಮಾಡಿದರು. ಬ್ರಹ್ಮ ವಿಷ್ಣು ಮಹೇಶ್ವರರೂ ರಣರಂಗಕ್ಕೆ ಬಂದರು. ಶಿವ ವಿಷ್ಣುವಿನಾಜ್ಞೆಯಂತೆ ಪರಶುರಾಮನನ್ನು ಎಚ್ಚರಗೊಳಿಸಿದ. ಅಷ್ಟರಲ್ಲಿ ಶಿಷ್ಯನಾದ ಕಾರ್ತವೀರ್ಯನ ರಕ್ಷಣೆಗಾಗಿ ದತ್ತಾತ್ರೇಯನ ದೃಷ್ಟಿಮಾತ್ರದಿಂದ ಸ್ತಂಭೀಭೂತನಾಗಿ ನಿಂತ. ರಾಜನನ್ನು ಸ್ವತಃ ಶ್ರೀಕೃಷ್ಣನೆ ರಕ್ಷಣ ಮಾಡುತ್ತಿದ್ದ. ಪಾರ್ಷದರೊಡನೆ ಕೃಷ್ಣ ರಾಜನ ಬಳಿಯೆ ನಿಂತಿದ್ದ. ಸುದರ್ಶನ ಚಕ್ರ ಸುತ್ತಲೂ ತಿರುಗುತ್ತ ರಾಜನನ್ನು ರಕ್ಷಿಸುತ್ತಿತ್ತು. ಅಷ್ಟರಲ್ಲಿ ಅಶರೀರವಾಣಿಯಾಯಿತು- 'ಕಾರ್ತವೀರ್ಯನಿಗೆ ಬಲತೋಳಿನಲ್ಲಿ ದತ್ತಾತ್ರೇಯ ನಿತ್ತಿರುವ ಶ್ರೀಕೃಷ್ಣ ಕವಚವಿದೆ. ಶಿವ ಅದನ್ನು ಭಿಕ್ಷೆ ಬೇಡಿ ಪಡೆದರೆ ರಾಜನನ್ನು ಪರಶುರಾಮ ವಧಿಸಬಲ್ಲ.' ಒಡನೆ ಶಿವ ರಾಜನಲ್ಲಿ ಕವಚವನ್ನು ಭಿಕ್ಷೆ ಬೇಡಿ ಪಡೆದು ಪರಶುರಾಮನಿಗಿತ್ತ.

ಈಗ ಪರಶುರಾಮ ಕಾರ್ತವೀರ್ಯನ ಮುಂದೆ ನಿಂತು ಯುದ್ಧಕ್ಕೆ ಆಹ್ವಾನಿಸುತ್ತ ನುಡಿದ— 'ರಾಜೇಂದ್ರ ಬಾ, ಯುದ್ಧ ಮಾಡು. ಮಾನವರಿಗೆ ಒಂದು ಕಾಲದಲ್ಲಿ ಯುದ್ಧದಲ್ಲಿ ಜಯ ದೊರೆತರೂ ಇನ್ನೊಂದು ಕಾಲದಲ್ಲಿ ಪರಾಜಯವಿದ್ದೇ ಇದೆ. ನೀನು ವಿಧಿವತ್ತಾಗಿ ಅಧ್ಯಯನ ಮಾಡಿ ದಾನಧರ್ಮ ಮಾಡುತ್ತ ಸಮಗ್ರ ಭೂಮಂಡಲವನ್ನು ಆಳಿರುವೆ. ಒಳ್ಳೆಯ ಯುದ್ಧವನ್ನೂ ಮಾಡಿ ನನ್ನನ್ನು ಮೂರ್ಛೆಗೊಳಿಸಿರುವೆ. ಎಲ್ಲ ರಾಜರನ್ನೂ ಗೆದ್ದು, ರಾವಣನನ್ನೂ ಸೋಲಿಸಿ, ಶಿವನ ಶೂಲದಿಂದ ನನ್ನನ್ನೂ ಸೋಲಿಸಿರುವೆ. ಆದರೆ ಆ ಶಿವನಿಂದಲೇ ಈಗ ನಾನು ಪುನಃ ಚೈತನ್ಯಗೊಂಡು ನಿಂತಿದ್ದೇನೆ.'

ಪರಮಧಾರ್ಮಿಕನಾದ ರಾಜಾ ಕಾರ್ತವೀರ್ಯ ಪರಶುರಾಮನಿಗೆ ತಲೆಬಾಗಿ ವಂದಿಸಿ ನುಡಿದ 'ಮುನಿಯೆ, ನಾನೇನು ಅಧ್ಯಯನ ಮಾಡಿದೆ ? ಏನು ದಾನಧರ್ಮ ಮಾಡಿದೆ ? ಏನು ರಾಜ್ಯವಾಳಿದೆ ? ನನ್ನಂಥ ರಾಜರು ಎಷ್ಟುಮಂದಿ ಈ ಭೂಮಿಯ ಮೇಲೆ ಆಗಿ ಹೋಗಿದ್ದಾರೆ! ನನ್ನಲ್ಲಿದ್ದ ಬುದ್ಧಿ, ತೇಜಸ್ಸು, ಪರಾಕ್ರಮ, ಐಶ್ವರ್ಯ, ಜ್ಞಾನ, ದಾನಧರ್ಮ, ಆಚಾರ, ವಿನಯ, ವಿದ್ಯೆ, ಪ್ರತಿಷ್ಠೆ, ತಪಸ್ಸು ಎಲ್ಲವೂ ನನ್ನ

ಮಡದಿ ಮನೋರಮೆಯ ಹಿಂದೆಯೆ ಹೊರಟುಹೋದುವು. ಅವಳು ನನ್ನ ಪ್ರಾಣ-ಪ್ರಿಯೆ ಎನಿಸಿದ್ದಳು. ಪತಿವ್ರತೆ, ಲಕ್ಷ್ಮಿಯ ಅಂಶದಿಂದ ಜನಿಸಿದವಳು. ಯಜ್ಞಕಾರ್ಯ-ಗಳಲ್ಲಿ ಪತ್ನಿ, ಸ್ನೇಹ ವಾತ್ಸಲ್ಯಗಳಲ್ಲಿ ಮಾತೆ, ರತಿಕ್ರೀಡೆಯಲ್ಲಿ ಪ್ರೇಯಸಿ. ಬಾಲ್ಯ-ದಿಂದಲೂ ಅವಳು ನನಗೆ ಭೋಜನ ಶಯನಗಳಲ್ಲಿ ಹೇಗೋ ಹಾಗೆ ಯುದ್ಧ-ದಲ್ಲಿಯೂ ಜೊತೆಗಾತಿಯಾಗಿದ್ದಳು. ಅವಳಿಲ್ಲದೆ ನನಗೆ ಈಗ ಪ್ರಾಣವೆ ಹೋದಂತಾಗಿದೆ. ವಿಷವಿಲ್ಲದ ಹಾವಿನಂತಾಗಿದ್ದೇನೆ. ಅವಳಿದ್ದಾಗ ನಾನು ಎಂಥ ಯುದ್ಧ ಮಾಡುತ್ತಿದ್ದೆ ಎಂಬುದನ್ನು ನೀನು ನೋಡಿಲ್ಲ. ಅವಳು ಮರಣ ಹೊಂದಿದುದೆ ನನಗೆ ಮೊದಲನೆ ಆಘಾತ. ಇದೀಗ ಬ್ರಾಹ್ಮಣನಾದ ನೀನು ನನ್ನೊಡನೆ ಕಾದುವುದು ಎರಡನೆ ಆಘಾತ. ಆಯಾ ಕಾಲಗಳಲ್ಲಿ ಜಯ ಪರಾಜಯ-ಗಳಾಗುವುವು ಎಂದು ನೀನು ಹೇಳುವುದು ನಿಜವೆ. ಸಿಂಹ ನರಿಯನ್ನು ಕೊಲ್ಲುವಂತೆ ಕಾಲಬಂದಾಗ ನರಿಯೂ ಸಿಂಹವನ್ನು ಕೊಂದೀತು. ಸಾಮಾನ್ಯ ಮೃಗವೂ ಹುಲಿಯನ್ನು ಕೊಂದೀತು, ಜಿಂಕೆ ಆನೆಯನ್ನು ಕೊಂದೀತು. ನೊಣ ಕೋಣನನ್ನು ಕೊಂದೀತು. ಹಾವು ಹದ್ದನ್ನು ಕೊಂದೀತು. ಭಟ ರಾಜನನ್ನು ಸ್ತುತಿಸುವಂತೆ ರಾಜನೆ ಭಟನನ್ನು ಸ್ತುತಿಸುವಂತಾದೀತು. ಮಾನವ ಇಂದ್ರನನ್ನು ಹೊಗಳುವಂತೆ ಇಂದ್ರ ಮಾನವನನ್ನು ಹೊಗಳುವ ಕಾಲವೂ ಬಂದೀತು. ಏಕೆಂದರೆ ಸೃಷ್ಟಿಕರ್ತನಾದ ಬ್ರಹ್ಮನೆ ಒಂದು ಕಾಲದಲ್ಲಿ ಸಾಯುತ್ತಾನೆ. ಪ್ರಕೃತಿಯೂ ಕಾಲಬಂದಾಗ ಕೃಷ್ಣನಲ್ಲಿ ಲಯ ಹೊಂದು-ತ್ತಾಳೆ. ದೇವತೆಗಳೂ ಮೂರ್ಲೋಕದ ಎಲ್ಲ ಚರಾಚರ ಪ್ರಾಣಿಗಳೂ ಸಾಯುತ್ತಾರೆ. ಕಾಲವನ್ನು ಯಾರು ಮೀರಬಲ್ಲರು ?

ಆದರೆ ಕೃಷ್ಣ ಕಾಲಕ್ಕೂ ಕಾಲ. ಸೃಷ್ಟಿಕರ್ತನಿಗೂ ಸೃಷ್ಟಿಕರ್ತ. ಲಯಕರ್ತನಿಗೂ ಲಯಕರ್ತ. ಪಾಲಕನಿಗೂ ಪಾಲಕ. ಸ್ಥೂಲಕ್ಕಿಂತ ಅತ್ಯಂತ ಸ್ಥೂಲ, ಸೂಕ್ಷ್ಮಕ್ಕಿಂತ ಅತ್ಯಂತ ಸೂಕ್ಷ್ಮ. ಕಾಲ ಎಷ್ಟೆಂದರೂ ಪರಮಾಣು. ಕಾಲಕ್ಕಿಂತ ಸೂಕ್ಷ್ಮವಿರುವುದಿಲ್ಲ. ಕೃಷ್ಣ ಅದಕ್ಕಿಂತಲೂ ಸೂಕ್ಷ್ಮ. ಹಾಗೇ ಮಹತ್ತಿನಲ್ಲಿಯೂ ಅವನಿಗೆ ಸಮಾನರಿಲ್ಲ. ಯಾವ ಮಹಾವಿರಾಟ್ ಪುರುಷನ ರೋಮಕೂಪಗಳಲ್ಲಿ ವಿಶ್ವವೆ ಅಡಗುವುದೋ ಅವನೂ ಕೂಡ ಕೃಷ್ಣನ ಹದಿನಾರನೆ ಒಂದಶ ಮಾತ್ರ. ಅವನಿಂದಲೆ ಜನಿಸಿದ ವಿಷ್ಣು-ವಿನ ನಾಭಿಕಮಲದಲ್ಲಿ ಸೃಷ್ಟಿಕರ್ತನಾದ ಬ್ರಹ್ಮ ಹುಟ್ಟಿ ಆ ಕಮಲದ ನಾಳದ ತುದಿ ಎಲ್ಲಿ ಎಂಬುದನ್ನೆ ಅರಿಯಲು ಅಸಮರ್ಥನಾದ. ಒಂದು ಲಕ್ಷವರ್ಷ ನಾಳದಲ್ಲಿ ಸಂಚರಿಸಿ ಸೋತು ಹಿಂದಿರುಗಿದ. ಲಕ್ಷವರ್ಷಕಾಲ ಬರಿಗಾಳಿ ಸೇವನೆ ಮಾಡುತ್ತ ತಪಸ್ಸು ಮಾಡಿ ಗೋಲೋಕವನ್ನೂ ಅದರಲ್ಲಿ ಪರಿವಾರಸಮೇತನಾಗಿರುವ ಕೃಷ್ಣನನ್ನು ಕಂಡ. ಅವನ ಆಜ್ಞೆಯಂತೆ ಸೃಷ್ಟಿಮಾಡತೊಡಗಿದ. ಅವನ ಹಣೆಯಿಂದ ಮುಂದೆ ಲಯಕರ್ತನಾದ ರುದ್ರ ಜನಿಸಿದ. ಈ ದೇವತೆಗಳೆಲ್ಲ ಪ್ರಕೃತಿಬಂಧಕ್ಕೆ ಸಿಲುಕಿದವರೆ. ಕೃಷ್ಣನೊಬ್ಬನೆ ಅದಕ್ಕೆ ಅತೀತ. ಹಾಗಿದ್ದರೂ ಆತ ಪ್ರಕೃತಿಯ ಸಹಾಯವಿಲ್ಲದೆ ಏನೂ ಸೃಷ್ಟಿ

ಮಾಡುವುದಿಲ್ಲ. ಕುಂಬಾರ ಮಣ್ಣಿನಿಂದ ಗಡಿಗೆ ಮಾಡುವಂತೆ, ಅಕ್ಕಸಾಲೆ ಚಿನ್ನದಿಂದ ಕುಂಡಲ ತಯಾರಿಸುವಂತೆ ಕೃಷ್ಣ ಪ್ರಕೃತಿಯಿಂದ ವಿಶ್ವವನ್ನು ಸೃಷ್ಟಿಸುತ್ತಾನೆ. ಆ ಪ್ರಕೃತಿ ರಾಧೆ, ಲಕ್ಷ್ಮಿ, ಸಾವಿತ್ರಿ, ದುರ್ಗೆ, ಸರಸ್ವತಿ ಎಂದು ರೂಪಗಳಿಂದ ಪ್ರಾದುರ್ಭವಿಸು-ವಳು. ರಾಧೆ ಕೃಷ್ಣನಿಗೆ ಪ್ರಾಣಪ್ರಿಯೆ. ಲಕ್ಷ್ಮಿ ಸಂಪತ್ತಿಗೆ ಅಧಿಷ್ಠಾತ್ರಿ, ಸಾವಿತ್ರಿ ವಿದ್ಯೆಗೆ ಅಧಿಷ್ಠಾತ್ರಿ. ದುರ್ಗೆ ಬುದ್ಧಿಗೆ ಅಧಿಷ್ಠಾತ್ರಿ, ಸರಸ್ವತಿ ವಾಗಧಿಷ್ಠಾತ್ರಿ. ಇದೆಲ್ಲವನ್ನೂ ನನಗೆ ಪುಷ್ಕರಕ್ಷೇತ್ರದಲ್ಲಿ ಮುನಿಗಳ ಸಮ್ಮುಖದಲ್ಲಿ ದತ್ತಾತ್ರೇಯ ಉಪದೇಶಿಸಿದ.'

ಹೀಗೆ ಹೇಳಿ ಕಾರ್ತವೀರ್ಯ ಪರಶುರಾಮನನ್ನು ನಮಿಸಿ ರಥವನ್ನೇರಿ ಧನುರ್ಬಾಣಗಳನ್ನು ಎತ್ತಿಕೊಂಡ. ಪರಶುರಾಮ ಅವನ ಸೈನ್ಯವನ್ನು ಬ್ರಹ್ಮಾಸ್ತ್ರದಿಂದ ನಾಶಮಾಡಿ ಪಾಶುಪತಾಸ್ತ್ರದಿಂದ ಅವನನ್ನೂ ವಧಿಸಿದ. ಹೀಗೆ ಇಪ್ಪತ್ತೊಂದು ಬಾರಿ ಭೂಪ್ರದಕ್ಷಿಣೆ ಮಾಡಿ ದುಷ್ಟ ಕ್ಷತ್ರಿಯರನ್ನೆಲ್ಲ ಸಂಹರಿಸಿದ. ದೇವಋಷಿ ಸಿದ್ಧ-ಗಂಧರ್ವಕಿನ್ನರರೆಲ್ಲ ಪರಶುರಾಮನ ಶಿರಸ್ಸಿನ ಮೇಲೆ ಪುಷ್ಪವೃಷ್ಟಿಮಾಡಿ ಜಯಕಾರ ಮಾಡಿದರು. ದುಂದುಭಿ ಮೊಳಗಿಸಿದರು. ಪರಶುರಾಮನ ಕೀರ್ತಿ ಜಗತ್ತನ್ನೆಲ್ಲ ವ್ಯಾಪಿಸಿತು. ಬ್ರಹ್ಮ, ಭೃಗು, ಶುಕ್ರ, ವಾಲ್ಮೀಕಿ, ಚ್ಯವನ, ಜಮದಗ್ನಿ ಎಲ್ಲರೂ ಬ್ರಹ್ಮ-ಲೋಕದಿಂದ ಬಂದು ಕೈಯಲ್ಲಿ ದೂರ್ವೆ ಪುಷ್ಪಗಳನ್ನು ಹಿಡಿದು ಆನಂದದಿಂದ ಮೈರೋಮಾಂಚಗೊಂಡು ಮಂಗಳಾಶೀರ್ವಾದ ಮಾಡಿದರು. ಪರಶುರಾಮ ಅವರೆಲ್ಲರಿಗೂ ದಂಡಪ್ರಣಾಮ ಮಾಡಿದ.

ಬ್ರಹ್ಮ ಪರಶುರಾಮನನ್ನು ಎದೆಗೆ ತಬ್ಬಿಕೊಂಡು, 'ವತ್ಸ, ರಾಮ, ಕಾಣ್ವಶಾಖೆಯಲ್ಲಿ ಹೇಳಿದಂತೆ ಸರ್ವಸಂಪತ್ಕರವಾದ ಕೆಲವು ಮಾತುಗಳನ್ನು ನಿನಗೆ ಹೇಳುತ್ತೇನೆ, ಕೇಳು, ಪೂಜ್ಯರಲ್ಲೆಲ್ಲ ಮೊದಲಿಗೆ ಪೂಜ್ಯನೆನಿಸುವವನು ಜನ್ಮ ನೀಡುವ ತಂದೆ. ಅವನಿಗಿಂತ ಅನ್ನದಾತ ಹೆಚ್ಚುಪೂಜ್ಯ. ಅನ್ನವಿಲ್ಲದೆ ದೇಹ ಉಳಿಯದು. ಇವರಿಬ್ಬರಿಗಿಂತ ನೂರರಷ್ಟು ಪೂಜ್ಯಳು ತಾಯಿ. ಅವಳು ಗರ್ಭದಲ್ಲಿ ಹೊತ್ತು ಹೆತ್ತು ಸಲಹುವವಳು. ಅವಳಿಗಿಂತಲೂ ನೂರರಷ್ಟು ಪೂಜ್ಯ ಇಷ್ಟದೇವ. ಅವನಿಗಿಂತಲೂ ವಿದ್ಯೆ ನೀಡಿ ಮಂತ್ರೋಪದೇಶ ಮಾಡುವ ಗುರು ಹೆಚ್ಚು ಪೂಜ್ಯ.

ದೇವೇ ರುಷ್ಟೇ ಗುರೂ ರಕ್ಷೇದ್ ಗುರೌ ರುಷ್ಟೇ ನ ಕಶ್ಚನ ।
ಗುರುರ್ಬ್ರಹ್ಮಾ ಗುರುರ್ವಿಷ್ಣು ಗುರುರ್ದೇವೋ ಮಹೇಶ್ವರಃ ।
ಗುರುರೇವ ಪರಂ ಬ್ರಹ್ಮ ಬ್ರಾಹ್ಮಣೇಭ್ಯಃ ಪ್ರಿಯಃ ಪರಃ ॥

ದೇವ ಮುನಿದಾಗ ಗುರು ರಕ್ಷಿಸಬಲ್ಲ. ಗುರು ಮುನಿದಾಗ ಯಾರೂ ರಕ್ಷಣೆ ನೀಡಲಾರರು. ಗುರು ಬ್ರಹ್ಮ ವಿಷ್ಣು ಮಹೇಶ್ವರರಿಗೆ, ಪರಬ್ರಹ್ಮ ಕೃಷ್ಣ ಪರಮಾತ್ಮನಿಗೆ, ಪ್ರತಿನಿಧಿಯಾಗಿದ್ದು ಬ್ರಾಹ್ಮಣರಿಗೆ ಅತಿಪ್ರಿಯನೆನಿಸುತ್ತಾನೆ.

ಗುರು ಜ್ಞಾನದಾನ ಮಾಡಿ ಹರಿಭಕ್ತಿಯನ್ನು ಬೆಳೆಸುತ್ತಾನೆ. ಅಜ್ಞಾನಾಂಧಕಾರದಲ್ಲಿ ಜ್ಞಾನದ ದೀಪವನ್ನು ಬೆಳಗಿ ನಿರ್ಮಲವಾದ ಪರಮಾತ್ಮ ತತ್ವವನ್ನು ತೋರುವ ಈ ಗುರುವೆ ಶ್ರೇಷ್ಠ ಬಂಧು. ಗುರುವನ್ನು ದರಿದ್ರನಾದ ಅಲ್ಪ ಮನುಷ್ಯನೆಂದು ಕಾಣುವ ಮಾನವ ತೀರ್ಥಸ್ನಾನ ಮಾಡಿದರೂ ಅಶುಚಿಯೆ. ಅವನಿಗೆ ಯಾವ ಕರ್ಮದಲ್ಲಿಯೂ ಅಧಿಕಾರವಿಲ್ಲ.

ರಾಮ, ನಿನಗೆ ಅಭೀಷ್ಟದೇವ ಶ್ರೀಕೃಷ್ಣನೆ. ಆದರೂ ಗುರು ಶಿವ. ಅವನ ಅನುಗ್ರಹದಿಂದಲೆ ನೀನು ಇಪ್ಪತ್ತೊಂದು ಬಾರಿ ಕ್ಷತ್ರಿಯರನ್ನು ಜಯಿಸಿದೆ. ಅಚಲ-ವಾದ ಹರಿಭಕ್ತಿ ಪಡೆದೆ. ಕೃಷ್ಣನೆ ಒಂದು ಅಂಶದಿಂದ ಶಿವನಾಗಿ ಬಂದಿದ್ದಾನೆ. ಅದರಿಂದ ಇಷ್ಟದೇವನೆ ನಿನಗೆ ಗುರುವೂ ಆಗಿದ್ದಾನೆ. ಮೃತ್ಯುಂಜಯನಾದ ಆ ಶಿವ ನಿನಗೆ ಜ್ಞಾನದಾಯಕನಾಗಿದ್ದಾನೆ. ಪ್ರಕೃತಿ ಲಕ್ಷವರ್ಷಕಾಲ ತಪಸ್ಸು ಮಾಡಿ ಅವನನ್ನು ಹೊಂದಿದಳು. ಅವನ ಪ್ರೀತಿಯ ಮಡದಿಯಾದಳು. ಅಂಥ ಶಿವನನ್ನು ಶರಣುಹೋಗು.'

ಹೀಗೆ ಹೇಳಿ ಬ್ರಹ್ಮ ಇತರ ಮುನಿಗಳೊಡನೆ ಹೊರಟುಹೋದ. ಪರಶುರಾಮ ಕೈಲಾಸಕ್ಕೆ ಹೋಗಲು ಸಂಕಲ್ಪಿಸಿದ.

**ಇಲ್ಲಿಗೆ ಶ್ರೀ ಬ್ರಹ್ಮವೈವರ್ತ ಮಹಾಪುರಾಣದಲ್ಲಿ ಮೂರನೆಯದಾದ ಗಣಪತಿಖಂಡದ ನಾರದ ನಾರಾಯಣ ಸಂವಾದದಲ್ಲಿ ಪರಶುರಾಮನಿಗೆ ಕೈಲಾಸಗಮನೋಪದೇಶವೆಂಬ ನಲವತ್ತನೆ ಅಧ್ಯಾಯ ಮುಗಿಯಿತು.**

## ಪರಶುರಾಮ ಕಂಡ ಕೈಲಾಸ

**ಅಧ್ಯಾಯ-೪೧**

ಪರಶುರಾಮ ವಿಷ್ಣುಕವಚವನ್ನು ಧರಿಸಿ ಭೂಮಿಯಲ್ಲಿ ಕ್ಷತ್ರಿಯರಿಲ್ಲದಂತೆ ಮಾಡಿ ಶಿವನನ್ನು ನಮಸ್ಕರಿಸಲು ಕೈಲಾಸಕ್ಕೆ ತೆರಳಿದ. ಮನೋವೇಗದಿಂದ ಕೈಲಾಸವನ್ನು ಸೇರಿದ. ಶುದ್ಧ ಸ್ಫಟಿಕದಂಥ ಮಣಿಗಳಿಂದ ಕೂಡಿದ ಸುವರ್ಣಭೂಮಿಯಂಥ ರಾಜ-ಮಾರ್ಗಗಳಿಂದಲೂ ಮಣಿಮಯವಾದ ವೇದಿಕೆ ಮಂಟಪಗಳಿಂದಲೂ ನೂರುಕೋಟಿ ಯಕ್ಷಮಂದಿರಗಳಿಂದಲೂ ಸ್ವರ್ಣಕಲಶ ಶ್ವೇತಚಾಮರಗಳಿಂದಲೂ ಶೋಭಿಸಿತ್ತು ಕೈಲಾಸ. ರತ್ನ ಭೂಷಣ ಭೂಷಿತರಾಗಿ ಪುತ್ಥಳಿ ಬೊಂಬೆಗಳಂತೆ ಮನಸೆಳೆವ ಸುಂದರ ಸ್ತ್ರೀಯರಿಂದಲೂ ಬಾಲಕ ಬಾಲಕಿಯರಿಂದಲೂ ಸುಗಂಧ ಪುಷ್ಪಗಳಿಂದ ಕೂಡಿದ ಪಾರಿಜಾತ ವೃಕ್ಷಗಳಿಂದಲೂ ಮೂರುಲಕ್ಷ ಯೋಜನದೆತ್ತರಕ್ಕೆ ಬೆಳೆದುನಿಂತ ಆಲದ ಮರಗಳಿಂದಲೂ ಪುಷ್ಪೋದ್ಯಾನ ಸರೋವರಗಳಿಂದಲೂ ಶೋಭಿಸುವ ನಗರವನ್ನು ಪರಶುರಾಮ ಕಂಡ. ಆ ನಗರದಲ್ಲಿ ಚಿನ್ನ ರತ್ನಗಳಿಂದ ವಿಶ್ವಕರ್ಮ ನಿರ್ಮಿಸಿದ, ಎಂಟು ಯೋಜನ ಎತ್ತರ ನಾಲ್ಕು ಯೋಜನ ಉದ್ದಗಲದ ಚೌಕಾಕಾರದ ಪ್ರಾಕಾರದೊಳಗೆ ಶೋಭಿಸುವ ಶಿವಮಂದಿರವನ್ನು ಕಂಡ. ಮುತ್ತು ಮಾಣಿಕ್ಯ ಮಾಲೆಗಳಿಂದ ಶೋಭಿಸುವ ಧ್ವಾರವನ್ನು ಪ್ರವೇಶಿಸಿದ. ಷಣ್ಮುಖ, ಗಣೇಶ, ವೀರಭದ್ರ ಮುಂತಾದ ಪ್ರಧಾನ ಪಾರ್ಷದರನ್ನು ಮಾತನಾಡಿಸಿ ಶಿವನ ಬಳಿಗೆ ಹೊರಟ. ಆಗ ಗಣೇಶ ತಡೆದ. 'ಒಂದು ಕ್ಷಣ ನಿಲ್ಲು, ಶಿವನೀಗ ನಿದ್ದೆ ಮಾಡುತ್ತಿದ್ದಾನೆ. ಅವನ ಆಜ್ಞೆ ಪಡೆದು ನಿನ್ನನ್ನು ಅವನ ಬಳಿಗೆ ಕರೆದೊಯ್ಯುತ್ತೇನೆ,' ಎಂದ. ಪರಶುರಾಮ ಹೇಳತೊಡಗಿದ.

**ಇಲ್ಲಿಗೆ ಶ್ರೀ ಬ್ರಹ್ಮವೈವರ್ತ ಮಹಾಪುರಾಣದಲ್ಲಿ ಮೂರನೆಯದಾದ ಗಣಪತಿಖಂಡದ ನಾರದ ನಾರಾಯಣ ಸಂವಾದದಲ್ಲಿ ಕೈಲಾಸವರ್ಣನವೆಂಬ ನಲವತ್ತೊಂದನೆ ಅಧ್ಯಾಯ ಮುಗಿಯಿತು.**

# ಗಣೇಶ ಪರಶುರಾಮರ ಸಂವಾದ

**ಅಧ್ಯಾಯ-೪೨**

'ಅಣ್ಣ, ಗಣೇಶ, ಶಿವನಿಗೆ ವಂದಿಸಲು ಅವನ ಅಂತಃಪುರಕ್ಕೆ ಹೋಗುತ್ತೇನೆ. ಮಾತೆಗೂ ವಂದಿಸಿ ನನ್ನ ಮನೆಗೆ ಹಿಂತಿರುತ್ತೇನೆ. ನಾನು ಇಪ್ಪತ್ತೊಂದು ಬಾರಿ ಭೂಮಿಯಲ್ಲಿ ಕ್ಷತ್ರಿಯರನ್ನು ನಾಶ ಮಾಡಿದ್ದು, ಕಾರ್ತವೀರ್ಯ ಸುಚಂದ್ರರನ್ನು ಕೊಂದಿದ್ದು ಶಿವನ ಅನುಗ್ರಹದಿಂದ. ನಾನಾ ವಿದ್ಯೆಗಳನ್ನೂ ದುರ್ಲಭವಾದ ನಾನಾ ಶಸ್ತ್ರಗಳನ್ನೂ ಪಡೆದುದು ಅವನಿಂದ. ಜಗದೀಶ್ವರನೂ ಜಗದ್ಗುರುವೂ ಆದ ಆ ಶಿವನ ದರ್ಶನ ಮಾಡಲು ಬಯಸಿದ್ದೇನೆ. ಭಕ್ತರಿಗೆ ಬೇಗನೆ ಒಲಿವ, ಶರಣಾಗತವತ್ಸಲನಾದ ಅವನ ಬಳಿಗೆ ಹೋಗುತ್ತೇನೆ.'

ಪರಶುರಾಮನ ಈ ಮಾತನ್ನು ಕೇಳಿ ಗಣಪತಿ ನುಡಿದ—

'ಒಂದು ಕ್ಷಣ ತಡೆದುಕೊಳ್ಳು, ತಮ್ಮ, ನಿನಗೊಂದು ಮಾತು ಹೇಳುತ್ತೇನೆ. ಸ್ತ್ರೀಯ ಜೊತೆಗೆ ಏಕಾಂತದಲ್ಲಿದ್ದಾಗ ಪುರುಷನನ್ನು ನೋಡಕೂಡದು. ಅವನ ಸುಖಕ್ಕೆ ಭಂಗ-ತರಬಾರದು. ಅದರಿಂದ ಕಾಲಸೂತ್ರ ನರಕ ಲಭಿಸುವುದು. ಅಂಥ ಪಾಪಿ ನರಾಧಮ ಚಂದ್ರ ಸೂರ್ಯರಿರುವಷ್ಟುಕಾಲ ಆ ನರಕದಲ್ಲಿರುತ್ತಾನೆ. ತಂದೆ ತಾಯಿಗಳು ಗುರು-ಹಿರಿಯರು ಏಕಾಂತದಲ್ಲಿದ್ದಾಗ ಅವರನ್ನು ಕಂಡರೆ ಇನ್ನೂ ಹೆಚ್ಚು ಪಾಪ. ಸ್ತ್ರೀಸಂಗ-ದಲ್ಲಿರುವ ಪುರುಷನನ್ನು ಕಂಡರೆ ಏಳು ಜನ್ಮಗಳಲ್ಲಿ ಹೆಂಡತಿಯ ವಿಯೋಗ ಉಂಟಾಗುವುದು. ಪರಸ್ತ್ರೀಯ ಶರೀರ ಸೌಂದರ್ಯವನ್ನು ಆಸೆಯಿಂದ ನೋಡಿದರೆ ಜನ್ಮಾಂತರದಲ್ಲಿ ಮೂಢನಾಗುತ್ತಾನೆ. ಕುರುಡನೂ ಆಗುತ್ತಾನೆ.'

ಗಣೇಶನ ಈ ಮಾತನ್ನು ಕೇಳಿ ಪರಶುರಾಮ ನಕ್ಕು ಆಕ್ಷೇಪಿಸಿದ—

'ಆಹಾ! ಎಂಥ ಮಾತು! ಎಂಥ ನೀತಿಬೋಧೆ. ಸಾಕ್ಷಾತ್ ಶಿವನ ಬಾಯಿಂದಲೂ ಇಂಥ ನೀತಿಬೋಧೆಯನ್ನು ನಾನು ಕೇಳಿಲ್ಲ. ನೀನು ಹೇಳಿದುದೆಲ್ಲ ಕೇವಲ ಮನೋವಿಕಾರ ಉಳ್ಳ ಕಾಮಿಗಳಿಗೆ ಮಾತ್ರ ಅನ್ವಯಿಸುತ್ತದೆ. ನನ್ನಂತೆ ನಿರ್ವಿಕಾರನಾಗಿ ಮಗುವಿನಂಥ ಮನಸ್ಸುಳ್ಳವನಿಗೆ ಅಲ್ಲ. ಆದ್ದರಿಂದ ನಾನು ಶಿವನ ಅಂತಃಪುರಕ್ಕೆ ಹೋಗುತ್ತೇನೆ. ನೀನು ಸುಮ್ಮನಿರು. ನೀನಿನ್ನೂ ಮಗು. ನಿನಗೇನೂ ತಿಳಿಯದು. ನನಗೆ ತಿಳಿದಂತೆ ನನ್ನ ಕಾರ್ಯವನ್ನು ಸಮಯೋಚಿತವಾಗಿ ಪೂರೈಸಿ ಹಿಂತಿರುಗುತ್ತೇನೆ.

ಶಿವ ಪಾರ್ವತಿಯರು ನಿನಗೆ ಮಾತ್ರವಲ್ಲ, ಜಗತ್ತಿಗೆ ತಂದೆತಾಯಿಗಳು. ಅವರೂ ಗಂಡು ಹೆಣ್ಣುಗಳೆ ಆಗಿದ್ದರೂ ಗುಣಾತೀತರು. ಅವರಿಗೆ ರತಿ ಎಂದರೇನು ? ಅದಕ್ಕೆ ಭಂಗ ಬರುವುದೆಂದರೇನು ? ಅದೆಲ್ಲ ಅಜ್ಞಮಾನವರಿಗೆ.

ಮೊಲೆಯೂಡುವ ಶಿಶು ಕಂಡರೆ ತಂದೆ ತಾಯಿಗಳಿಗೆ ಲಜ್ಜೆಯಾಗುವುದುಂಟೆ ? ಅದರಂತೆ ನಿರ್ವಿಕಾರ ಮನಸ್ಸಿನ ನಾನು ಶಿವ ಪಾರ್ವತಿಯರನ್ನು ಏಕಾಂತದಲ್ಲಿ ಕಂಡರೆ ಹೇಗೆ ಲಜ್ಜೆ ಉಂಟಾದೀತು ?

ಪಾರ್ವತಿ ಲಜ್ಜಾರೂಪಳು. ಶಿವ ಲಜ್ಜೆಯೆನಿಸಿದ ಅವಳಿಗೆ ಪತಿ. ಅವರಿಗೆ ಲಜ್ಜೆ ಎಂದರೇನು ? ತಾಪ ಉಂಟುಮಾಡುವ ಬೆಂಕಿಗೇ ತಾಪವಿರುವುದುಂಟೆ ? ಚಳಿಗೆ ಚಳಿ, ಸೆವೆಗೆ ಸೆವೆ, ಭಯಕ್ಕೆ ಭಯ, ಮೃತ್ಯುವಿಗೆ ಮೃತ್ಯು, ಜ್ವರಕ್ಕೆ ಜ್ವರ, ವ್ಯಾಧಿಗೆ ವ್ಯಾಧಿ, ಹಸಿವಿಗೆ ಹಸಿವು, ಬಾಯಾರಿಕೆಗೆ ಬಾಯಾರಿಕೆ, ನಿದ್ದೆಗೆ ನಿದ್ದೆ, ಶೋಭೆಗೆ ಶೋಭೆ, ಶಾಂತಿಗೆ ಶಾಂತಿ, ಪುಷ್ಟಿಗೆ ಪುಷ್ಟಿ, ತುಷ್ಟಿಗೆ ತುಷ್ಟಿ, ಕ್ಷಮೆಗೆ ಕ್ಷಮೆ, ಪರಮಾತ್ಮನಿಗೆ ಪರಮಾತ್ಮ, ಶಕ್ತಿಗೆ ಶಕ್ತಿ, ಕಾಮಕ್ರೋಧ ಲೋಭ ಮೋಹಗಳಿಗೆ ಕಾಮಕ್ರೋಧ ಲೋಭ ಮೋಹಗಳು, ದಯೆಯೆ ದಯೆ, ಜರೆಗೆ ಜರೆ, ಚಿಂತೆಗೆ ಚಿಂತೆ, ಕಣ್ಣಿಗೆ ಕಣ್ಣು, ಹರ್ಷಕ್ಕೆ ಹರ್ಷ, ಶೋಕಕ್ಕೆ ಶೋಕ, ಆಪತ್ತಿಗೆ ಆಪತ್ತು, ಸಂಪತ್ತಿಗೆ ಸಂಪತ್ತು, ಧಾರಣಶಕ್ತಿಗೆ ಧಾರಣಶಕ್ತಿ, ಸ್ಮರಣೆಗೆ ಸ್ಮರಣೆ, ಹೀಗೆ ಲೋಕದಲ್ಲಿ ಎಲ್ಲಿಯಾದರೂ ಉಂಟೆ ? ಸೂರ್ಯ ತನ್ನ ಬಿಸಿಲಿಗೆ ತಾನೆ ಬೆಂದುಹೋಗುವನೆ ? ನೀನು ಹೇಳುವುದು ವಿಪರೀತವಾಗಿದೆ. ಅದನ್ನು ಗುರುಮುಖದಿಂದ ನಾನೆಂದೂ ಕೇಳಿಲ್ಲ, ಶ್ರುತಿಯಲ್ಲಿಯೂ ಹೇಳಿಲ್ಲ.'

ಹೀಗೆ ಹೇಳುತ್ತ ಪರಶುರಾಮ ಶಿವನ ಅಂತಃಪುರಕ್ಕೆ ಪ್ರವೇಶಿಸತೊಡಗಿದ. ಈ ಅಪಹಾಸದ ಮಾತನ್ನು ಕೇಳಿಯೂ ಗಣಪತಿ ಕುಪಿತನಾಗಲಿಲ್ಲ. ಆತ ಕೋಪವನ್ನು ಗೆದ್ದವ. ಪರಶುರಾಮನಿಗೆ ಹೇಳಿದ-

'ಅಜ್ಞಾನದ ಅಂಧಕಾರದಲ್ಲಿ ಮುಳುಗಿದವ ಜ್ಞಾನಿಯಿಂದ ಜ್ಞಾನದ ಬೆಳಕನ್ನು ಪಡೆಯುತ್ತಾನೆ. ತಂದೆಯಿಂದ ಸೋದರನಿಂದ ಜ್ಞಾನ ಭಾಗ್ಯಶಾಲಿಗಳಿಗೆ ಮಾತ್ರ ದೊರಕೀತು. ನಾನು ಭಾಗ್ಯಶಾಲಿ. ಜ್ಞಾನಿಗಳಿಗೂ ದುರ್ಲಭವಾದ ಜ್ಞಾನ ನಿನ್ನಿಂದ ನನಗೆ ಲಭಿಸಿತು. ಈಗ ಮಂದಬುದ್ಧಿಯವನಾದ ನನ್ನ ಮಾತನ್ನು ಸ್ವಲ್ಪ ಕೇಳು. ಗುಣಾತೀತನಾದ ಪರಮಾತ್ಮ ನಿರ್ಲಿಪ್ತನೆ. ಅವನಿಗೆ ಲಜ್ಜೆ ಭಯ ಮುಂತಾದುವು ಇಲ್ಲ. ಆದರೆ ಉಳಿದವರಿಗೆ ಹಾಗಿಲ್ಲ. ಕೃಷ್ಣ ಪರಮಾತ್ಮನೊಬ್ಬನನ್ನು ಬಿಟ್ಟರೆ ಎಲ್ಲರ ಶರೀರಗಳೂ ಪ್ರಾಕೃತವೆ. ಕೃಷ್ಣ ಶುದ್ಧ ಜ್ಞಾನಸ್ವರೂಪಿ. ವೈಷ್ಣವರು ಯೋಗಿಗಳು ಅವನಿಗೆ ಪ್ರಾಕೃತವಾದ ಹಸ್ತಪಾದಾದಿಗಳಿಲ್ಲವೆಂದೆ ಧ್ಯಾನಿಸುತ್ತಾರೆ. ಜ್ಯೋತಿಃಸ್ವರೂಪವಾದ ನಿತ್ಯವಾದ ಸುಂದರವಾದ ಪೀತಾಂಬರಧಾರಿ ಮುರಲೀಹಸ್ತ ದ್ವಿಭುಜ ರೂಪವನ್ನೆ ಧ್ಯಾನಿಸುತ್ತಾರೆ. ಕೃಷ್ಣ ಸೃಷ್ಟಿಮಾಡಲು ಬಯಸಿ ವಾಯುಜಲಗಳನ್ನೂ ಮಹಾವಿರಾಟ್‌ಪುರುಷನನ್ನೂ ಬ್ರಹ್ಮವಿಷ್ಣುಮಹೇಶ್ವರರನ್ನೂ ಸೃಷ್ಟಿಸಿದ. ಆಗ ಜನಿಸಿದವ ಶಿವ, ಸಗುಣ, ಅವನಿಗೆ ಲಜ್ಜೆ ಏಕೆ ಇಲ್ಲ ? ಲಜ್ಜೆಗೆ ಲಜ್ಜೆ ಇಲ್ಲವೆನ್ನುವುದು ನಿಜವೆ. ಆದರೆ ಲಜ್ಜೆಯುಳ್ಳ ಪಾರ್ವತಿಗೆ ಲಜ್ಜೆ ಏಕೆ ಇಲ್ಲ ? ಪರಿಪೂರ್ಣನಾಗಿ ಸತ್ವರಜಸ್ತಮೋಗುಣಗಳಿಲ್ಲದೆ ಪ್ರಕೃತಿಗೆ ಅತೀತನಾಗಿದ್ದು ಸ್ವೇಚ್ಛಾಮಯ ಪರಮಾನಂದ ರೂಪನಾದವ

ಶ್ರೀಕೃಷ್ಣನೊಬ್ಬನೆ ಸರ್ವೇಶ್ವರ ಸರ್ವಶಕ್ತ. ಈ ರಹಸ್ಯವನ್ನೂ ನನಗೆ ಶಿವನೆ ಉಪದೇಶಿಸಿದ. ಆದ್ದರಿಂದ ಒಂದುಕ್ಷಣಕಾಲ ತಡೆ. ಶಿವನೀಗ ಏಕಾಂತದಲ್ಲಿದ್ದಾನೆ.'

**ಇಲ್ಲಿಗೆ ಶ್ರೀ ಬ್ರಹ್ಮವೈವರ್ತ ಮಹಾಪುರಾಣದಲ್ಲಿ ಮೂರನೆಯದಾದ ಗಣಪತಿಖಂಡದ ನಾರದ ನಾರಾಯಣ ಸಂವಾದದಲ್ಲಿ ಗಣೇಶಪರಶುರಾಮ ಸಂವಾದವೆಂಬ ನಲವತ್ತೆರಡನೆ ಅಧ್ಯಾಯ ಮುಗಿಯಿತು.**

## ಪರಶುರಾಮನಿಂದ ಗಣೇಶನ ದಂತಭಂಗ ಅಧ್ಯಾಯ-೪೩

ಗಣೇಶನ ಮಾತನ್ನು ಅಲಕ್ಷಿಸಿ ಪರಶುರಾಮ ಶಿವನ ಅಂತಃಪುರಕ್ಕೆ ಹೊರಟಾಗ ಗಣೇಶ ಅವನನ್ನು ತಡೆದು ನಿಲ್ಲಿಸಲು ಯತ್ನಿಸಿದ. ಪರಶುರಾಮ ಅವನನ್ನೇ ತಳ್ಳಿ ಮುಂದುವರಿದ. ಈಗ ಇಬ್ಬರೂ ಕೈ ಕೈ ಹಿಡಿದು ಜಗಳಕ್ಕೆ ಪ್ರಾರಂಭಿಸಿದರು. ಪರಶುರಾಮ ಕೊಡಲಿಯನ್ನೆತ್ತಿದ. ಷಣ್ಮುಖ ಹಾಹಾಕಾರ ಮಾಡುತ್ತ ಬಂದು ಪರಶುರಾಮನನ್ನು ತಡೆದು ಹೇಳಿದ, ''ತಮ್ಮ, ನಿನ್ನ ಕೊಡಲಿ ಅಮೋಘವಾದುದು. ಅದನ್ನು ನಿನ್ನ ಗುರುವಾದ ಶಿವನ ಪುತ್ರನ ಮೇಲೆ ಹೇಗೆ ಎಸೆಯುವಿ ? ಗುರುವಿನಂತೆ ಗುರುಪುತ್ರನನ್ನೂ ಹೊಡೆಯಬಾರದು ತಾನೆ ?''

ಪರಶುರಾಮನ ಕಣ್ಣುಗಳು ಕೋಪದಿಂದ ಕೆಂಪಾಗಿದ್ದುವು. ಆದರೂ ಗಣೇಶ ಅವನನ್ನು ತಡೆದು ಹಿಂತಿರುಗಲು ಬೋಧಿಸಿದ. ಪರಶುರಾಮ ಕೆರಳಿ ಗಣೇಶನನ್ನು ದೂರಕ್ಕೆ ತಳ್ಳಿದಾಗ ಆತ ವೇಗದಿಂದ ಮುಂದೆ ಹೋಗಿ ಬಿದ್ದ. ಎದ್ದು ಪುನಃ ಪರಶುರಾಮನಿಗೆ ಬುದ್ಧಿ ಹೇಳಿದ - 'ಪರಶುರಾಮ, ಹೋಗು, ಹಿಂದೆ ಹೋಗು, ಶಿವನ ಅಪ್ಪಣೆ ಇಲ್ಲದೆ ಅವನ ಅಂತಃಪುರವನ್ನು ಪ್ರವೇಶಿಸಲು ನಿನಗೆ ಏನು ಶಕ್ತಿ ಇದೆ ? ನೀನು ನನಗೆ ವಿದ್ಯಾ ಸಂಬಂಧದಿಂದ ತಮ್ಮ. ಶಿವನ ಪ್ರಿಯ ಶಿಷ್ಯ. ನನಗೆ ಅತಿಥಿಯಾಗಿರುವೆ. ಅದರಿಂದ ನಾನು ಸುಮ್ಮನಿದ್ದೇನೆ. ನನ್ನನ್ನು ಕಾರ್ತವೀರ್ಯನಂತೆ ಕ್ಷತ್ರ ರಾಜರುಗಳಂತೆ ತಿಳಿಯಬೇಡ. ನಾನು ಶಿವನ ಪುತ್ರನೆಂಬುದನ್ನೂ ಮರೆತೆಯಾ ? ಕ್ಷಣಕಾಲ ನಿಲ್ಲು. ಇನ್ನೊಂದು ಕ್ಷಣದಲ್ಲಿ ನಾನು ನಿನ್ನನ್ನು ಶಿವನ ಬಳಿಗೆ ಕರೆದೊಯ್ಯುತ್ತೇನೆ.

ಗಣೇಶನ ಮಾತು ಕೇಳಿ ನಕ್ಕ ಪರಶುರಾಮ. ಹರಿಹರರನ್ನು ನಮಿಸಿ ಗಣೇಶನ ಮೇಲೆ ಕೊಡಲಿ ಎತ್ತಿದ. ಗಣೇಶ ಯೋಗ ಬಲದಿಂದ ತನ್ನ ಸೊಂಡಿಲನ್ನು ಕೋಟಿ ಯೋಜನದ ಉದ್ದಕ್ಕೆ ಬೆಳೆಸಿ ಅದರಿಂದ ಪರಶುರಾಮನನ್ನು ಸುತ್ತಿ ಎತ್ತಿ ತಿರುಗಿಸಿದ. ಎಲ್ಲೆಡೆ ನೂರು ಸುತ್ತು ಸುತ್ತಿಸಿ ಗರುಡ ಸಣ್ಣ ಹಾವನ್ನು ಎತ್ತಿ ಹಿಡಿವಂತೆ ಮೇಲೆತ್ತಿ

ಹಿಡಿದ. ಸಪ್ತದ್ವೀಪಗಳನ್ನು ಮೇರು ಮುಂತಾದ ಪರ್ವತಗಳನ್ನೂ ಎಲ್ಲ ಸಾಗರಗಳನ್ನೂ ಕ್ಷಣದಲ್ಲಿ ತೋರಿಸಿದ. ಪರಶುರಾಮನಿಗೆ ಈಗ ಮೈಯೆಲ್ಲ ಜಡವಾಯಿತು. ಕೈಕಾಲು ಸ್ವಾಧೀನ ತಪ್ಪಿತು. ಸರ್ವಾಂಗಗಳು ನಡುಗಿದವು. ಆಗ ತಿರುಗಿ ಅವನನ್ನೆತ್ತಿ ತಿರುಗಿಸಿದ ಗಣೇಶ. ಭೂಲೋಕ ಭುವರ್ಲೋಕ ಸುವರ್ಲೋಕ ಜನೋಲೋಕ ತಪೋಲೋಕ ಧ್ರುವಲೋಕ, ಗೌರೀಲೋಕ, ಶಿವಲೋಕಗಳನ್ನೂ ತೋರಿಸಿದ. ಏಳು ಸಮುದ್ರಗಳ ನೀರನ್ನು ಹೀರಿ ತಿರುಗಿ ಹೊರಗೆ ಬಿಟ್ಟ. ಗಂಭೀರವಾದ ಸಾಗರ ಜಲದಲ್ಲಿ ಪರಶುರಾಮನನ್ನು ಮುಳುಗಿಸಿದ. ಸಾಯುವ ಸ್ಥಿತಿಗೆ ಬಂದು ಸಮುದ್ರ ದಾಟುತ್ತಿದ್ದ ಪರಶುರಾಮನನ್ನು ತಿರುಗಿ ಎತ್ತಿ ತಿರುಗಿಸಿ ಬ್ರಹ್ಮಾಂಡಕ್ಕಿಂತ ಹೊರಗಿನ ವೈಕುಂಠ ಗೋಲೋಕಗಳನ್ನು ತೋರಿಸಿದ. ಪರಶುರಾಮ ವೈಕುಂಠದಲ್ಲಿ ನಾರಾಯಣನನ್ನೂ, ಗೋಲೋಕದಲ್ಲಿ ಕೃಷ್ಣನನ್ನೂ ನೋಡಿದ. ನೆಲಕ್ಕೆ ಬಿದ್ದು ಕ್ಷಣಮಾತ್ರದಲ್ಲಿ ಚೇತರಿಸಿಕೊಂಡು ಶ್ರೀ ಕೃಷ್ಣನ ಕವಚ ಸ್ತೋತ್ರಗಳನ್ನು ಸ್ಮರಿಸಿ ಗುರುವಾದ ಶಿವನನ್ನೂ ನೆನೆದು ತನ್ನ ಕೊಡಲಿಯನ್ನು ಗಣಪತಿಯ ಮೇಲೆ ಪ್ರಯೋಗಿಸಿದ. ಶಿವನಂಥ ತೇಜಸ್ಸಿನಿಂದ ಕೂಡಿ ಗ್ರೀಷ್ಮಕಾಲದ ಮಧ್ಯಾಹ್ನ ಸೂರ್ಯನಿಗೂ ನೂರರಷ್ಟು ಹೊಳೆಯುತ್ತಿದ್ದ ಅಮೋಘವಾದ ಆ ಕೊಡಲಿಯನ್ನು ಗಣಪತಿ ಎಡದ ದಂತದಲ್ಲಿ ಸ್ವೀಕರಿಸಿದ. ತಂದೆಯಾದ ಶಿವನ ಆಯುಧ ಅದು. ಮಗನಾದ ಗಣಪತಿ ವ್ಯರ್ಥಮಾಡಲಿಲ್ಲ. ವೇಗದಿಂದ ಬಂದು ದಂತವನ್ನು ಬೇರು ಸಹಿತ ಕಿತ್ತು ಪರಶುರಾಮನ ಕೈಗೇ ಬಂದಿತು ಕೊಡಲಿ. ಆಕಾಶದಲ್ಲಿ ದೇವತೆಗಳು ಮಹಾಭಯದಿಂದ ಹಾಹಾಕಾರ ಮಾಡಿದರು. ವೀರಭದ್ರ, ಷಣ್ಮುಖ, ಕ್ಷೇತ್ರಪಾಲ ಮುಂತಾದ ಪಾರ್ಷದರೂ ಭಯಗೊಂಡರು. ರಕ್ತಸಿಕ್ತವಾದ ಗಣೇಶನ ದಂತ ಗೈರಿಕಾಧಾತುಯುಕ್ತವಾದ ಸ್ಫಟಿಕ ಪರ್ವತದಂತೆ ಹೊಳೆಯುತ್ತ ದೊಪ್ಪನೆ ನೆಲಕ್ಕೆ ಬಿದ್ದಿತು. ಆ ಶಬ್ದಕ್ಕೇ ಭೂಮಿ ನಡುಗಿತು. ಕೈಲಾಸದ ಜನರೆಲ್ಲ ಒಂದು ಕ್ಷಣ ಭಯದಿಂದ ಮೂರ್ಛಿತರಾದರು. ನಿದ್ರಿಸುತ್ತಿದ್ದ ಶಿವ ಎಚ್ಚರಗೊಂಡು ಗಡಿಬಿಡಿಯಿಂದ ಪಾರ್ವತೀ ಸಹಿತನಾಗಿ ಹೊರಗೆ ಬಂದು ನೋಡಿದ.

ಗಣೇಶನ ಮುಖ ಗಾಯದಿಂದ ರಕ್ತಮಯವಾಗಿತ್ತು. ದಂತ ಮುರಿದಿತ್ತು. ಕೋಪವನ್ನು ಗೆದ್ದುದರಿಂದ ಮುಖದಲ್ಲಿ ಮಂದಹಾಸವಿದ್ದರೂ ಜೊತೆಗೆ ಲಜ್ಜೆಯೂ ಆವರಿಸಿತ್ತು. ಪಾರ್ವತಿ ಷಣ್ಮುಖನನ್ನು ಕರೆದು, 'ಮಗು, ಏನಾಯಿತು, ಹೇಳು, ಬೇಗ ಹೇಳು' ಎಂದಳು. ಆತ ನಡೆದ ಸಂಗತಿಯ ಪೂರ್ವಾಪರವೆಲ್ಲವನ್ನೂ ತಿಳಿಸಿದ. ಪಾರ್ವತಿಗೆ ಒಂದೆಡೆ ಕೋಪ, ಇನ್ನೊಂದೆಡೆ ದುಃಖ. ತಡೆಯಲಾರದೆ ಅಳುತ್ತ ಮಗನನ್ನು ತಬ್ಬಿಕೊಂಡಳು. ಶಿವನ ಮುಂದೆ ವಿನಯದಿಂದ ಹೇಳತೊಡಗಿದಳು.

**ಇಲ್ಲಿಗೆ ಶ್ರೀ ಬ್ರಹ್ಮ ವೈವರ್ತ ಮಹಾಪುರಾಣದಲ್ಲಿ ಮೂರನೆಯದಾದ ಗಣಪತಿ ಖಂಡದಲ್ಲಿ ನಾರದ ನಾರಾಯಣ ಸಂವಾದದಲ್ಲಿ ಗಣೇಶ ದಂತ ಭಂಗ ಕಾರಣ ವರ್ಣನವೆಂಬ ನಲವತ್ತ ಮೂರನೆ ಅಧ್ಯಾಯ ಮುಗಿಯಿತು.**

# ಗಣೇಶನ ಸ್ತೋತ್ರ ಹಾಗೂ ಅವನ ಎಂಟು ನಾಮಗಳ ನಿರ್ವಚನ

## ಅಧ್ಯಾಯ-೪೪

'ನಾಥ, ನಾನು ನಿನ್ನ ದಾಸಿ ಎಂದು ಪ್ರಪಂಚದಲ್ಲಿ ಎಲ್ಲರೂ ಬಲ್ಲರು. ಈ ದಾಸಿಯ ಬದುಕು ಇಂದು ವ್ಯರ್ಥವಾಯಿತು. ಹೇಳು, ತಪ್ಪು ಯಾರದು? ಈ ದಾಸಿಯ ಪುತ್ರನದೆ ಅಥವಾ ನಿನ್ನ ಶಿಷ್ಯನದೆ ? ನೀನು ನಿಷ್ಪಕ್ಷಪಾತಿ. ನಿನಗೆ ಒಂದು ತೃಣವೂ ಪರ್ವತವೂ ಸಮಾನವೆ. ಧರ್ಮವನ್ನು ತಿಳಿದ ನೀನೆ ವಿಚಾರಮಾಡುವುದು ಉಚಿತ. ಸಾಕ್ಷಿ ಹೇಳಲು ವೀರಭದ್ರನಿದ್ದಾನೆ, ಷಣ್ಮುಖನಿದ್ದಾನೆ, ಎಲ್ಲ ಪಾರ್ಷದ-ರಿದ್ದಾರೆ. ಇವರಲ್ಲಿ ಯಾರೂ ಸುಳ್ಳು ಹೇಳಲಾರರು. ಎಲ್ಲರಿಗೂ ಇವರಿಬ್ಬರು ಅಣ್ಣ-ತಮ್ಮಂದಿರು ಸಮಾನರು. ನಿಜವನ್ನು ತಿಳಿದೂ ಕಾಮಕ್ರೋದಾಧಿಗಳಿಗೊಳಗಾಗಿ ಸುಳ್ಳುಸಾಕ್ಷಿ ನೀಡುವವ ಕುಂಭೀಪಾಕ ನರಕದಲ್ಲಿ ಬೀಳುತ್ತಾನೆ. ತನ್ನ ಕುಲದ ನೂರುಮಂದಿ ಪೂರ್ವಜರನ್ನೂ ಬೀಳಿಸುತ್ತಾನೆ. ಅವರೊಂದಿಗೆ ಆ ನರಕದಲ್ಲಿ ಸೂರ್ಯಚಂದ್ರರಿರುವಷ್ಟು ಕಾಲ ವಾಸ ಮಾಡುತ್ತಾನೆ. ನಾನೇ ತೀರ್ಪು ಹೇಳಲು ಶಕ್ತಳಾಗಿದ್ದರೂ ನಿನ್ನ ಮುಂದೆ ಹಾಗೆ ಮಾಡಮಾಡಬಾರದು. ಅದು ವೇದವಿರುದ್ಧ. ಸೂರ್ಯನ ಮುಂದೆ ಮಿಣಕು ಹುಳುವಿನಂತೆ ರಾಜನ ಮುಂದೆ ಸೇವಕನ ಮಾತಿಗೆ ಏನೂ ಬೆಲೆ ಇಲ್ಲ. ಬಹುಕಾಲದ ತಪಸ್ಸಿನಿಂದ ನಾನು ನಿನ್ನ ಚರಣ ಸೇವಕಿಯಾದೆ. ಎಲ್ಲಿ ನನ್ನನ್ನು ನೀನು ತ್ಯಜಿಸುವೆಯೋ ಎಂದು ಸದಾ ಭೀತಳಾಗಿದ್ದೇನೆ. ಪುತ್ರ-ಪ್ರೇಮದಿಂದ ಕೋಪ ಶೋಕಗಳಿಗೀಡಾಗಿ ನಾನೇನಾದರೂ ತಪ್ಪು ನುಡಿದಿದ್ದರೆ ಕ್ಷಮಿಸು. ನೀನು ನನ್ನನ್ನು ಬಿಟ್ಟೆಯಾದರೆ ನನಗೆ ಮಗನಿಂದಲಾದರೂ ಏನು ? ಉತ್ತಮ ಕುಲದಿಂದ ಬಂದ ಪತಿವ್ರತೆಗೆ ನೂರುಮಂದಿ ಮಕ್ಕಳಿಗಿಂತ ಒಬ್ಬ ಪತಿ ಹೆಚ್ಚು. ದುಷ್ಕುಲದಲ್ಲಿ ಜನಿಸಿದವಳು ಮಾತ್ರ ಅಜ್ಞಳಾಗಿದ್ದು ದುಃಶೀಲೆಯಾಗಿದ್ದು ಪತಿಯನ್ನು ಗೌರವಿಸಲಾರಳು. ಪತಿವ್ರತೆಯ ತೇಜಸ್ಸಿನ ಮುಂದೆ ಅಗ್ನಿಯದೂ ಕಡಿಮೆ, ಸೂರ್ಯನದೂ ಕಡಿಮೆಯೆ. ಮಹಾದಾನಗಳಾಗಲಿ, ವ್ರತ ಉಪವಾಸಗಳಾಗಲಿ, ಪುಣ್ಯತಪಸ್ಸುಗಳಾಗಲಿ ಪತಿಸೇವೆಯ ಹದಿನಾರನೆ ಒಂದು ಭಾಗಕ್ಕೂ ಸಮಾನವಲ್ಲ. ಪತಿವ್ರತೆಯ ದೃಷ್ಟಿಯಲ್ಲಿ ಪುತ್ರನಾಗಲಿ ಪಿತನಾಗಲಿ ಬಂಧುಗಳಾಗಲಿ ಸೋದರರಾಗಲಿ ಪತಿಗೆ ಸಮಾನರಾಗಲಾರರು.'

ಪಾರ್ವತಿ ಹೀಗೆ ಹೇಳಿ ಪರಶುರಾಮನನ್ನು ಆಕ್ಷೇಪಿಸಿ ನುಡಿದಳು—

'ಪರಶುರಾಮ, ನೀನು ಬ್ರಹ್ಮಕುಲದಲ್ಲಿ ಜನಿಸಿದವ, ಪಂಡಿತ, ಜಮದಗ್ನಿಯ ಪುತ್ರ, ಯೋಗಿಗಳಿಗೆ ಗುರುವಾದ ಶಿವನ ಶಿಷ್ಯ. ನಿನ್ನ ತಾಯಿ ರೇಣುಕೆ ಪತಿವ್ರತೆ. ಸತ್ಕುಲ ಪ್ರಸೂತೆ. ನಿನ್ನ ತಾಯಿಯ ತಂದೆಯಾಗಲಿ, ಸೋದರನಾಗಲಿ, ವಿಷ್ಣುಭಕ್ತರೆ

ಆಗಿದ್ದರು. ಯಾರ ದೋಷದಿಂದ ನೀನು ಹೀಗೆ ಕೆಟ್ಟಿರುವಿ ? ನನಗೆ ತಿಳಿಯದು. ಗುರುವಾದ ಶಿವನಿಂದ ಅಮೋಘವಾದ ಕೊಡಲಿಯನ್ನು ಪಡೆದು ಅದನ್ನು ಕ್ಷತ್ರಿಯ-ರಲ್ಲಿ ಪರೀಕ್ಷೆ ಮಾಡಿನೋಡಿ ಈಗ ಗುರುಪುತ್ರನಲ್ಲಿಯೆ ಪ್ರಯೋಗಿಸಿದೆಯ ? ಗುರುವಿಗೆ ದಕ್ಷಿಣೆ ನೀಡಬೇಕೆಂದು ಶ್ರುತಿಗಳು ಸಾರುತ್ತಿದ್ದರೆ ನೀನು ಗುರುಪುತ್ರನ ದಂತವನ್ನು ಮುರಿದು ಹಾಕಿದೆ. ಏಕೆ, ಅವನ ತಲೆಯನ್ನೂ ಕಡಿದು ಹಾಕು. ಗಣಪತಿ-ಯನ್ನು ಯುದ್ಧದಲ್ಲಿ ಗೆದ್ದು ನಮ್ಮ ಮುಂದೆ ನಿಂತ ದಂತ ನಮ್ಮ ಆಶೀರ್ವಾದ ಪಡೆದು ಮೂಲೋಕದಲ್ಲಿಯೆ ಪೂಜ್ಯನೆನಿಸುತ್ತಿದೆ ತಾನೆ?

''ಪರಮರಾಮ, ನಿನ್ನ ಕೊಡಲಿ ಅಮೋಘ. ಶಿವನ ವರಬಲ ಅದಕ್ಕಿದೆ. ಅದರಿಂದ ನೀನು ಗಣೇಶನನ್ನು ಹೊಡೆದೆ. ಶಿವನ ವರವಿದ್ದರೆ ನರಿಯೂ ಸಿಂಹವನ್ನು ಇದಿರಿಸ-ಬಲ್ಲುದು. ಬೆಕ್ಕೂ ಹುಲಿಯನ್ನು ಇದಿರಿಸೀತು. ಇಲ್ಲದಿದ್ದರೆ ನಿನ್ನಂಥವರು ಲಕ್ಷ ಕೋಟಿ ಬಂದರೂ ಅವರನ್ನು ಒಬ್ಬ ಗಣೇಶ ಕೊಲ್ಲಬಲ್ಲ. ಆದರೆ ಆತ ಒಳ್ಳೆಯ ಇಂದ್ರಿಯ ನಿಗ್ರಹ ಉಳ್ಳವ. ಒಂದು ನೊಣವನ್ನೂ ಕೊಲ್ಲುವುದಿಲ್ಲ. ಕೃಷ್ಣನ ಅಂಶದಿಂದ ಯುಕ್ತವಾಗಿದ್ದು ಕೃಷ್ಣನಂತೆ ಶೂರನಾಗಿದ್ದಾನೆ. ಬೇರೆ ಎಲ್ಲ ದೇವತೆಗಳು ಕೃಷ್ಣನ ಕಲೆಯಿಂದ ಹುಟ್ಟಿದವರು. ಅವರೆಲ್ಲರ ಮುಂದೆ ಈತನಿಗೆ ಮೊದಲ ಪೂಜೆ ಸಲ್ಲುತ್ತದೆ. ಇಂಥ ಮಗನನ್ನು ನಾನು ವ್ರತ ಪ್ರಭಾವದಿಂದಲೂ ಶಿವನ ವರದಿಂದಲೂ ಪಡೆದಿದ್ದೇನೆ.''

ಹೀಗೆ ಹೇಳುತ್ತ ಪಾರ್ವತಿ ಪರಶುರಾಮನನ್ನು ಕೊಲ್ಲಲು ಹೊರಟಳು. ಪರಶುರಾಮ ಕೃಷ್ಣನನ್ನೂ ಶಿವನನ್ನೂ ನೆನೆದು ಮನದೊಳಗೇ ಅವರಿಬ್ಬರನ್ನೂ ನಮಿಸಿದ.

ಅಷ್ಟರಲ್ಲಿ ಪಾರ್ವತಿಯ ಮುಂದೆ ಕೋಟಿಸೂರ್ಯರಂತೆ ಹೊಳೆವ ಸಣ್ಣ ಬ್ರಾಹ್ಮಣ ವಟು ಒಬ್ಬ ಗೋಚರನಾದ. ಬಿಳಿ ಬಟ್ಟೆಯಿಟ್ಟು ಕೈಯಲ್ಲಿ ಛತ್ರ ದಂಡಗಳನ್ನು ಹಿಡಿದು ಹಣೆಯಲ್ಲಿ ಉಜ್ಜ್ವಲವಾದ ತಿಲಕ ಧರಿಸಿದ್ದ. ರತ್ನಾಭರಣಗಳನ್ನೂ ತುಲಸೀ ಮಾಲೆಯನ್ನೂ ತೊಟ್ಟಿದ್ದ. ಅವನನ್ನು ಕಂಡು ಶಿವ ಸಂಭ್ರಮದಿಂದ ಪತ್ನಿ ಪುತ್ರ ಪರಿವಾರಗಳೊಂದಿಗೆ ಬಂದು ಪ್ರಣಾಮ ಮಾಡಿದ. ಬಾಲಕ ಎಲ್ಲರಿಗೂ ಆಶೀರ್ವದಿಸಿದ. ಶಿವ ರತ್ನ ಸಿಂಹಾಸನದಲ್ಲಿ ಕೂಡಿಸಿ ಭಕ್ತಿಯಿಂದ ಷೋಡಶೋಪ-ಚಾರಗಳನ್ನು ಸಲ್ಲಿಸಿದ. ಕಾಣ್ವಶಾಖೋಕ್ತವಾದ ಕ್ರಮದಿಂದ ಸ್ತೋತ್ರ ಮಾಡಿ ನುಡಿದ.

'ಬ್ರಹ್ಮಚಾರಿಯೆ, ಆತ್ಮಾರಾಮರಾದ ನಿನ್ನಂಥವರಲ್ಲಿ ಕುಶಲ ಪ್ರಶ್ನೆ ಮಾಡುವುದು ಹಾಸ್ಯಾಸ್ಪದ. ಅವರು ಯಾವಾಗಲೂ ಕುಶಲಿಗಳೆ, ಇನ್ನೊಬ್ಬರಿಗೆ ಕುಶಲ ಉಂಟು ಮಾಡುತ್ತಾರೆ. ಇಂದು ನನ್ನ ಜನ್ಮ ಸಫಲವಾಯಿತು. ಬದುಕು ಬಂಗಾರವಾಯಿತು. ಕೃಷ್ಣಾನುಗ್ರಹದಿಂದ ನನಗೆ ನಿನ್ನಂಥ ಅತಿಥಿ ದೊರಕಿದ್ದಾನೆ. ಅತಿಥಿಯನ್ನು ಸತ್ಕರಿಸಿದರೆ

ಎಲ್ಲ ದೇವತೆಗಳನ್ನು ಸತ್ಕರಿಸಿದಂತೆ. ಅತಿಥಿ ಸಂತುಷ್ಟನಾದರೆ ಸ್ವಯಂ ಹರಿ ಸಂತುಷ್ಟನಾಗುತ್ತಾನೆ.

**ಅತಿಥಿಃ ಪೂಜಿತೋ ಯೇನ ಪೂಜಿತಾಃ ಸರ್ವ ದೇವತಾಃ ।**
**ಅತಿಥಿರ್ಯಸ್ಯ ಸಂತುಷ್ಟಸ್ತಸ್ಯ ತುಷ್ಟೋ ಹರಿಃ ಸ್ವಯಂ ॥**

ಯಾರ ಮನೆಯಿಂದ ಅತಿಥಿ ನಿರಾಶನಾಗಿ ಹಿಂತಿರುಗುವನೋ ಅವನ ಕೋಟಿ ಜನ್ಮಗಳ ಪುಣ್ಯನಾಶ ಹೊಂದುವುದು. ಸ್ತ್ರೀ ಹತ್ಯೆ ಗೋಹತ್ಯೆ, ಬ್ರಹ್ಮಹತ್ಯೆ, ನರಹತ್ಯೆ, ಗುರುಹಿರಿಯರ ನಿಂದೆ ಹರಿನಿಂದೆ ಮುಂತಾದ ಎಲ್ಲ ಪಾಪಗಳಿಗಿಂತಲೂ ಹೆಚ್ಚು ಅತಿಥಿ ಸತ್ಕಾರ ಲೋಪ. ಶಿವನ ಮಾತನ್ನು ಕೇಳಿ ಬ್ರಹ್ಮಚಾರಿ ನುಡಿದ.

''ಇಲ್ಲಿ ನಡೆಯುತ್ತಿದ್ದ ಕೋಲಾಹಲವನ್ನು ಕಂಡು ಶ್ವೇತದ್ವೀಪದಿಂದ ಬಂದೆ. ಕೃಷ್ಣಭಕ್ತನಾದ ಪರಶುರಾಮನ ರಕ್ಷಣೆಗಾಗಿ ಬಂದೆ. ಕೃಷ್ಣ ಭಕ್ತರಿಗೆ ಎಂದೂ ಅನಿಷ್ಟ ಬಾರದು. ಚಕ್ರಧರನಾಗಿ ನಾನು ಅವರನ್ನು ರಕ್ಷಿಸುತ್ತೇನೆ. ಆದರೆ ಗುರು ಸೇವೆ ಮಾಡದೆ ಅವನನ್ನು ತಿರಸ್ಕರಿಸಿ ಅವನ ಆಗ್ರಹಕ್ಕೆ ತುತ್ತಾದವನನ್ನು ಮಾತ್ರ ನಾನು ಕಾಪಾಡಲಾರೆನು. ಹೆತ್ತ ತಂದೆ ಎಲ್ಲರಿಗೂ ಪೂಜ್ಯ. ಆತ ಜನ್ಮವಿತ್ತು ರಕ್ಷಣೆ ಮಾಡುತ್ತಾನೆ. ಅವನಿಗಿಂತಲೂ ಗರ್ಭಧಾರಣ ಪೋಷಣಗಳನ್ನು ಮಾಡುವ ತಾಯಿ ನೂರರಷ್ಟು ಪೂಜ್ಯಳು. ಅವಳಿಗಿಂತ ನೂರರಷ್ಟು ಅನ್ನದಾತ. ಅನ್ನದಾತನಿಗಿಂತ ನೂರರಷ್ಟು ಪೂಜ್ಯ ಇಷ್ಟದೇವತೆ. ಅವನಿಗಿಂತಲೂ ನೂರರಷ್ಟು ಪೂಜ್ಯ ವಿದ್ಯೆ ಮಂತ್ರ-ಗಳನ್ನು ನೀಡುವ ಗುರು. ಅಜ್ಞಾನಾಂಧಕಾರದಿಂದ ಆವೃತವಾದ ಕಣ್ಣಿಗೆ ಜ್ಞಾನ ದೀಪ-ವಿತ್ತು ಎಲ್ಲವನ್ನೂ ತೋರುವ ಗುರುವಿಗಿಂತ ಹೆಚ್ಚಿನ ಬಂಧು ಇನ್ನೊಬ್ಬನಿಲ್ಲ. ಗುರು ದರಿದ್ರನಾದರೂ ಸರಿಯೆ, ಅವನನ್ನು ಪತಿತನಂತೆ ಕ್ಷುದ್ರಮನುಷ್ಯನಂತೆ ಕಂಡರೆ ಅದೇ ಅಶೌಚ. ಯಾವ ತೀರ್ಥಸ್ನಾನದಿಂದಲೂ ಅವನು ಶುಚಿಯಾಗಲಾರ. ಯಾವ ಕರ್ಮಕ್ಕೂ ಅವನು ಅರ್ಹನಾಗಲಾರ.

**ಗುರುರ್ಬ್ರಹ್ಮಾ ಗುರುರ್ವಿಷ್ಣುರ್ಗುರುರ್ದೇವೋ ಮಹೇಶ್ವರಃ ।**
**ಗುರುರೇವ ಪರಂ ಬ್ರಹ್ಮ ಗುರುರ್ಭಾಸ್ಕರ ರೂಪಕಃ ॥**

**ಗುರುಶ್ಚಂದ್ರಸ್ತಥೇಂದ್ರಶ್ಚ ವಾಯುಶ್ಚ ವರುಣೋಽನಲಃ ।**
**ಸರ್ವರೂಪೋಹಿ ಭಗವಾನ್ ಪರಮಾತ್ಮಾ ಸ್ವಯಂ ಗುರುಃ ॥**

ಬ್ರಹ್ಮ ವಿಷ್ಣು ಮಹೇಶ್ವರರೂ, ಪರಂಬ್ರಹ್ಮ, ಕೃಷ್ಣನೂ, ಸೂರ್ಯ, ಚಂದ್ರ, ಇಂದ್ರ, ವಾಯು, ವರುಣ, ಅಗ್ನಿಗಳೂ ಎಲ್ಲರೂ ಗುರುವಿನಲ್ಲಿ ಸನ್ನಿಹಿತರಾಗಿರುವರು. ಆದರಿಂದ ಗುರು ಪರಮಾತ್ಮನ ಆರಾಧನೆಗೆ ಅತ್ಯಂತ ಪ್ರಶಸ್ತವಾದ ಪ್ರತೀಕ-ವೆನಿಸುತ್ತಾನೆ.

ಆಗಿದ್ದರು. ಯಾರ ದೋಷದಿಂದ ನೀನು ಹೀಗೆ ಕೆಟ್ಟಿರುವಿ ? ನನಗೆ ತಿಳಿಯದು. ಗುರುವಾದ ಶಿವನಿಂದ ಅಮೋಘವಾದ ಕೊಡಲಿಯನ್ನು ಪಡೆದು ಅದನ್ನು ಕ್ಷತ್ರಿಯರಲ್ಲಿ ಪರೀಕ್ಷೆ ಮಾಡಿನೋಡಿ ಈಗ ಗುರುಪುತ್ರನಲ್ಲಿಯೆ ಪ್ರಯೋಗಿಸಿದೆಯ ? ಗುರುವಿಗೆ ದಕ್ಷಿಣೆ ನೀಡಬೇಕೆಂದು ಶ್ರುತಿಗಳು ಸಾರುತ್ತಿದ್ದರೆ ನೀನು ಗುರುಪುತ್ರನ ದಂತವನ್ನು ಮುರಿದು ಹಾಕಿದೆ. ಏಕೆ, ಅವನ ತಲೆಯನ್ನೂ ಕಡಿದು ಹಾಕು. ಗಣಪತಿಯನ್ನು ಯುದ್ಧದಲ್ಲಿ ಗೆದ್ದು ನಮ್ಮ ಮುಂದೆ ನಿಂತ ದಂತ ನಮ್ಮ ಆಶೀರ್ವಾದ ಪಡೆದು ಮೂಲೋಕದಲ್ಲಿಯೆ ಪೂಜ್ಯನೆನಿಸುತ್ತಿದೆ ತಾನೆ?

"ಪರಮರಾಮ, ನಿನ್ನ ಕೊಡಲಿ ಅಮೋಘ. ಶಿವನ ವರಬಲ ಅದಕ್ಕಿದೆ. ಆದರಿಂದ ನೀನು ಗಣೇಶನನ್ನು ಹೊಡೆದೆ. ಶಿವನ ವರವಿದ್ದರೆ ನರಿಯೂ ಸಿಂಹವನ್ನು ಇದಿರಿಸಬಲ್ಲುದು. ಬೆಕ್ಕೂ ಹುಲಿಯನ್ನು ಇದಿರಿಸೀತು. ಇಲ್ಲದಿದ್ದರೆ ನಿನ್ನಂಥವರು ಲಕ್ಷ ಕೋಟಿ ಬಂದರೂ ಅವರನ್ನು ಒಬ್ಬ ಗಣೇಶ ಕೊಲ್ಲಬಲ್ಲ. ಆದರೆ ಆತ ಒಳ್ಳೆಯ ಇಂದ್ರಿಯ ನಿಗ್ರಹ ಉಳ್ಳವ. ಒಂದು ನೊಣವನ್ನೂ ಕೊಲ್ಲುವುದಿಲ್ಲ. ಕೃಷ್ಣನ ಅಂಶದಿಂದ ಯುಕ್ತವಾಗಿದ್ದು ಕೃಷ್ಣನಂತೆ ಶೂರನಾಗಿದ್ದಾನೆ. ಬೇರೆ ಎಲ್ಲ ದೇವತೆಗಳು ಕೃಷ್ಣನ ಕಲೆಯಿಂದ ಹುಟ್ಟಿದವರು. ಅವರೆಲ್ಲರ ಮುಂದೆ ಈತನಿಗೆ ಮೊದಲ ಪೂಜೆ ಸಲ್ಲುತ್ತದೆ. ಇಂಥ ಮಗನನ್ನು ನಾನು ವ್ರತ ಪ್ರಭಾವದಿಂದಲೂ ಶಿವನ ವರದಿಂದಲೂ ಪಡೆದಿದ್ದೇನೆ."

ಹೀಗೆ ಹೇಳುತ್ತ ಪಾರ್ವತಿ ಪರಶುರಾಮನನ್ನು ಕೊಲ್ಲಲು ಹೊರಟಳು. ಪರಶುರಾಮ ಕೃಷ್ಣನನ್ನೂ ಶಿವನನ್ನೂ ನೆನೆದು ಮನದೊಳಗೇ ಅವರಿಬ್ಬರನ್ನೂ ನಮಿಸಿದ.

ಅಷ್ಟರಲ್ಲಿ ಪಾರ್ವತಿಯ ಮುಂದೆ ಕೋಟಿಸೂರ್ಯರಂತೆ ಹೊಳೆವ ಸಣ್ಣ ಬ್ರಾಹ್ಮಣ ವಟು ಒಬ್ಬ ಗೋಚರನಾದ. ಬಿಳಿ ಬಟ್ಟೆಯುಟ್ಟು ಕೈಯಲ್ಲಿ ಛತ್ರ ದಂಡಗಳನ್ನು ಹಿಡಿದು ಹಣೆಯಲ್ಲಿ ಉಜ್ಜ್ವಲವಾದ ತಿಲಕ ಧರಿಸಿದ್ದ. ರತ್ನಾಭರಣಗಳನ್ನೂ ತುಲಸೀ ಮಾಲೆಯನ್ನೂ ತೊಟ್ಟಿದ್ದ. ಅವನನ್ನು ಕಂಡು ಶಿವ ಸಂಭ್ರಮದಿಂದ ಪತ್ನಿ ಪುತ್ರ ಪರಿವಾರಗಳೊಂದಿಗೆ ಬಂದು ಪ್ರಣಾಮ ಮಾಡಿದ. ಬಾಲಕ ಎಲ್ಲರಿಗೂ ಆಶೀರ್ವದಿಸಿದ. ಶಿವ ರತ್ನ ಸಿಂಹಾಸನದಲ್ಲಿ ಕೂಡಿಸಿ ಭಕ್ತಿಯಿಂದ ಷೋಡಶೋಪಚಾರಗಳನ್ನು ಸಲ್ಲಿಸಿದ. ಕಾಣ್ವಶಾಖೋಕ್ತವಾದ ಕ್ರಮದಿಂದ ಸ್ತೋತ್ರ ಮಾಡಿ ನುಡಿದ.

'ಬ್ರಹ್ಮಚಾರಿಯೆ, ಆತ್ಮಾರಾಮರಾದ ನಿನ್ನಂಥವರಲ್ಲಿ ಕುಶಲ ಪ್ರಶ್ನೆ ಮಾಡುವುದು ಹಾಸ್ಯಾಸ್ಪದ. ಅವರು ಯಾವಾಗಲೂ ಕುಶಲಿಗಳೆ, ಇನ್ನೊಬ್ಬರಿಗೆ ಕುಶಲ ಉಂಟು ಮಾಡುತ್ತಾರೆ. ಇಂದು ನನ್ನ ಜನ್ಮ ಸಫಲವಾಯಿತು. ಬದುಕು ಬಂಗಾರವಾಯಿತು. ಕೃಷ್ಣಾನುಗ್ರಹದಿಂದ ನನಗೆ ನಿನ್ನಂಥ ಅತಿಥಿ ದೊರಕಿದ್ದಾನೆ. ಅತಿಥಿಯನ್ನು ಸತ್ಕರಿಸಿದರೆ

ಎಲ್ಲ ದೇವತೆಗಳನ್ನು ಸತ್ಕರಿಸಿದಂತೆ. ಅತಿಥಿ ಸಂತುಷ್ಟನಾದರೆ ಸ್ವಯಂ ಹರಿ ಸಂತುಷ್ಟನಾಗುತ್ತಾನೆ.

**ಅತಿಥಿಃ ಪೂಜಿತೋ ಯೇನ ಪೂಜಿತಾಃ ಸರ್ವ ದೇವತಾಃ ।**
**ಅತಿಥಿರ್ಯಸ್ಯ ಸಂತುಷ್ಟಸ್ತಸ್ಯ ತುಷ್ಟೋ ಹರಿಃ ಸ್ವಯಂ ॥**

ಯಾರ ಮನೆಯಿಂದ ಅತಿಥಿ ನಿರಾಶನಾಗಿ ಹಿಂತಿರುಗುವನೋ ಅವನ ಕೋಟಿ ಜನ್ಮಗಳ ಪುಣ್ಯನಾಶ ಹೊಂದುವುದು. ಸ್ತ್ರೀ ಹತ್ಯೆ ಗೋಹತ್ಯೆ, ಬ್ರಹ್ಮಹತ್ಯೆ, ನರಹತ್ಯೆ, ಗುರುಹಿರಿಯರ ನಿಂದೆ ಹರಿನಿಂದೆ ಮುಂತಾದ ಎಲ್ಲ ಪಾಪಗಳಿಗಿಂತಲೂ ಹೆಚ್ಚು ಅತಿಥಿ ಸತ್ಕಾರ ಲೋಪ. ಶಿವನ ಮಾತನ್ನು ಕೇಳಿ ಬ್ರಹ್ಮಚಾರಿ ನುಡಿದ.

''ಇಲ್ಲಿ ನಡೆಯುತ್ತಿದ್ದ ಕೋಲಾಹಲವನ್ನು ಕಂಡು ಶ್ವೇತದ್ವೀಪದಿಂದ ಬಂದೆ. ಕೃಷ್ಣಭಕ್ತನಾದ ಪರಶುರಾಮನ ರಕ್ಷಣೆಗಾಗಿ ಬಂದೆ. ಕೃಷ್ಣ ಭಕ್ತರಿಗೆ ಎಂದೂ ಅನಿಷ್ಟ ಬಾರದು. ಚಕ್ರಧರನಾಗಿ ನಾನು ಅವರನ್ನು ರಕ್ಷಿಸುತ್ತೇನೆ. ಆದರೆ ಗುರು ಸೇವೆ ಮಾಡದೆ ಅವನನ್ನು ತಿರಸ್ಕರಿಸಿ ಅವನ ಅಗ್ರಹಕ್ಕೆ ತುತ್ತಾದವನನ್ನು ಮಾತ್ರ ನಾನು ಕಾಪಾಡಲಾರೆನು. ಹೆತ್ತ ತಂದೆ ಎಲ್ಲರಿಗೂ ಪೂಜ್ಯ. ಆತ ಜನ್ಮವಿತ್ತು ರಕ್ಷಣೆ ಮಾಡುತ್ತಾನೆ. ಅವನಿಗಿಂತಲೂ ಗರ್ಭಧಾರಣ ಪೋಷಣಗಳನ್ನು ಮಾಡುವ ತಾಯಿ ನೂರರಷ್ಟು ಪೂಜ್ಯಳು. ಅವಳಿಗಿಂತ ನೂರರಷ್ಟು ಅನ್ನದಾತ. ಅನ್ನದಾತನಿಗಿಂತ ನೂರರಷ್ಟು ಪೂಜ್ಯ ಇಷ್ಟದೇವತೆ. ಅವನಿಗಿಂತಲೂ ನೂರರಷ್ಟು ಪೂಜ್ಯ ವಿದ್ಯೆ ಮಂತ್ರ-ಗಳನ್ನು ನೀಡುವ ಗುರು. ಅಜ್ಞಾನಾಂಧಕಾರದಿಂದ ಆವೃತವಾದ ಕಣ್ಣಿಗೆ ಜ್ಞಾನ ದೀಪ-ವಿತ್ತು ಎಲ್ಲವನ್ನೂ ತೋರುವ ಗುರುವಿಗಿಂತ ಹೆಚ್ಚಿನ ಬಂಧು ಇನ್ನೊಬ್ಬನಿಲ್ಲ. ಗುರು ದರಿದ್ರನಾದರೂ ಸರಿಯೆ, ಅವನನ್ನು ಪತಿತನಂತೆ ಕ್ಷುದ್ರಮನುಷ್ಯನಂತೆ ಕಂಡರೆ ಅದೇ ಅಶೌಚ. ಯಾವ ತೀರ್ಥಸ್ನಾನದಿಂದಲೂ ಅವನು ಶುಚಿಯಾಗಲಾರ. ಯಾವ ಕರ್ಮಕ್ಕೂ ಅವನು ಅರ್ಹನಾಗಲಾರ.

**ಗುರುರ್ಬ್ರಹ್ಮಾ ಗುರುರ್ವಿಷ್ಣುರ್ಗುರುರ್ದೇವೋ ಮಹೇಶ್ವರಃ ।**
**ಗುರುರೇವ ಪರಂ ಬ್ರಹ್ಮ ಗುರುರ್ಭಾಸ್ಕರ ರೂಪಕಃ ॥**

**ಗುರುಶ್ಚಂದ್ರಸ್ತಥೇಂದ್ರಶ್ಚ ವಾಯುಶ್ಚ ವರುಣೋಽನಲಃ ।**
**ಸರ್ವರೂಪೋಹಿ ಭಗವಾನ್ ಪರಮಾತ್ಮಾ ಸ್ವಯಂ ಗುರುಃ ॥**

ಬ್ರಹ್ಮ ವಿಷ್ಣು ಮಹೇಶ್ವರರೂ, ಪರಂಬ್ರಹ್ಮ, ಕೃಷ್ಣನೂ, ಸೂರ್ಯ, ಚಂದ್ರ, ಇಂದ್ರ, ವಾಯು, ವರುಣ, ಅಗ್ನಿಗಳೂ ಎಲ್ಲರೂ ಗುರುವಿನಲ್ಲಿ ಸನ್ನಿಹಿತರಾಗಿರುವರು. ಆದರಿಂದ ಗುರು ಪರಮಾತ್ಮನ ಆರಾಧನೆಗೆ ಅತ್ಯಂತ ಪ್ರಶಸ್ತವಾದ ಪ್ರತೀಕ-ವೆನಿಸುತ್ತಾನೆ.

**ನಾಸ್ತಿ ವೇದಾತ್ ಪರಂ ಶಾಸ್ತ್ರಂ ನ ಹಿ ಕೃಷ್ಣಾತ್ ಪರಃ ಸುರಃ**
**ನಾಸ್ತಿ ಗಂಗಾಸಮಂ ತೀರ್ಥಂ ನ ಪುಷ್ಪಂ ತುಲಸೀದಲಾತ್ ।**
**ನಾಸ್ತಿ ಕ್ಷಮಾವತೀ ಭೂಮೇಃ ಪುತ್ರಾನ್ನಾಸ್ತ್ಯಪರಃ ಪ್ರಿಯಃ**
**ನ ಚ ದೈವಾತ್ ಪರಾಶಕ್ತಿಃ ನೈಕಾದಶ್ಯಾಃ ಪರಂ ವ್ರತಂ ॥**

ವೇದಕ್ಕಿಂತ ಶ್ರೇಷ್ಠವಾದ ಶಾಸ್ತ್ರವಿಲ್ಲ. ಕೃಷ್ಣನಿಗಿಂತ ಶ್ರೇಷ್ಠ ದೇವನಿಲ್ಲ. ಗಂಗೆಗೆ ಸಮವಾದ ತೀರ್ಥವಿಲ್ಲ. ತುಲಸೀದಲಕ್ಕಿಂತ ಶ್ರೇಷ್ಠ ಪುಷ್ಪವಿಲ್ಲ. ಭೂಮಿಗಿಂತ ಹೆಚ್ಚು ಕ್ಷಮಾಗುಣದವರಿಲ್ಲ. ಪುತ್ರನಿಗಿಂತ ಹೆಚ್ಚು ಪ್ರಿಯರಿಲ್ಲ. ದೈವಕ್ಕಿಂತ ಬಲಿಷ್ಠವಾದುದು ಇನ್ನೊಂದಿಲ್ಲ. ಏಕಾದಶಿಯನ್ನು ಮೀರಿಸುವ ವ್ರತವಿಲ್ಲ.

ಸಾಲಿಗ್ರಾಮಕ್ಕಿಂತ ಶ್ರೇಷ್ಠವಾದ ಯಂತ್ರವಿಲ್ಲ. ಭಾರತಕ್ಕಿಂತ ಪವಿತ್ರ ಭೂಮಿ ಇಲ್ಲ. ವೃಂದಾವನಕ್ಕಿಂತ ಪುಣ್ಯ ಸ್ಥಳ ಬೇರೆ ಇಲ್ಲ. ಕಾಶಿಗಿಂತ ಹೆಚ್ಚಿನ ಮೋಕ್ಷದಾಯಕ ಕ್ಷೇತ್ರವಿಲ್ಲ. ಶಿವನನ್ನು ಮೀರಿಸುವ ವಿಷ್ಣು ಭಕ್ತನಿಲ್ಲ. ಪಾರ್ವತಿಗಿಂತ ಹೆಚ್ಚಿನ ಪತಿವ್ರತೆ ಇಲ್ಲ. ಗಣೇಶನಿಗಿಂತ ಹೆಚ್ಚು ಇಂದ್ರಿಯ ನಿಗ್ರಹ ಉಳ್ಳವರಿಲ್ಲ. ವಿದ್ಯೆಗೆ ಸಮಾನ ಬಂಧು ಇಲ್ಲ. ಗುರುವಿಗಿಂತ ಹೆಚ್ಚಿನ ಪೂಜ್ಯನಿಲ್ಲ. ಗುರುವಿನ ಮಡದಿ ಮಕ್ಕಳೂ ಗುರುವಿನಂತೆಯೇ ಪೂಜ್ಯ.

ಪಾರ್ವತಿ, ಪರಶುರಾಮ ಈಗ ಗುರು ಪತ್ನಿಯಾದ ನಿನ್ನಲ್ಲಿಯೂ ಗುರು ಪುತ್ರನಾದ ಗಣೇಶನಲ್ಲಿಯೂ ಅಪರಾಧ ಮಾಡಿರುವುದರಿಂದ ಅದರ ಪರಿಮಾರ್ಜನೆಗಾಗಿ ನಾನು ಇಲ್ಲಿಗೆ ಬಂದಿದ್ದೇನೆ. ದೇವಿ, ನಿನಗೆ ಗಣೇಶ ಷಣ್ಮುಖರಂತೆಯೆ ಪರಶುರಾಮನೂ ಪ್ರೀತಿಪಾತ್ರ. ಈ ಮೂವರಲ್ಲಿ ನಿನಗಾಗಲಿ ಶಿವನಿಗಾಗಲಿ ಭೇದಭಾವನೆ ಎಂಬುದಿಲ್ಲ. ಇದನ್ನು ಆಲೋಚಿಸಿ ಯುಕ್ತವೆನಿಸಿದುದನ್ನು ನೀನು ಮಾಡು. ಮಕ್ಕಳ ಪರಸ್ಪರ ಜಗಳ-ವಾಡುವುದು ದೈವದೋಷದಿಂದ. ಆ ದೈವವನ್ನು ಯಾರೂ ಮೀರಲಾರರು. ಆದರಿಂದ ಶಾಂತಳಾಗು. ಗಣೇಶನ ಒಂದು ದಂತ ಮುರಿದುದು ದೈವಾಬಲದಿಂದಲೆ. ಏಕೆಂದರೆ ಅವನಿಗೆ ವೇದಗಳಲ್ಲಿಯೆ ಏಕದಂತ ಎಂಬ ಒಂದು ಹೆಸರಿದೆ. ಅದು ಈಗ ನಿಜವಾಯಿತು.

ಗಣೇಶನ ನಾಮಾಷ್ಟಕ ಸ್ತೋತ್ರ ಸಾಮವೇದದಲ್ಲಿ ಉಕ್ತವಾಗಿದೆ. ಅದನ್ನು ಹೇಳುತ್ತೇನೆ. ಕೇಳು. ಅದು ಸರ್ವ ವಿಘ್ನ ಪರಿಹಾರಕ.

**ಗಣೇಶಮೇಕದಂತಂ ಚ ಹೇರಂಬಂ ವಿಘ್ನನಾಯಕಂ ।**
**ಲಂಬೋದರಂ ಶೂರ್ಪಕರ್ಣಂ ಗಜವಕ್ತ್ರಂ ಗುಹಾಗ್ರಜಂ ॥**

ಗಣೇಶ, ಏಕದಂತ, ಹೇರಂಬ, ವಿಘ್ನನಾಯಕ, ಲಂಬೋದರ, ಶೂರ್ಪಕರ್ಣ, ಗಜವಕ್ತ್ರ, ಗುಹಾಗ್ರಜ, ಇವು ಎಂಟು ಗಣಪತಿಯ ನಾಮಗಳು.

'ಗಣೇಶ' ನಾಮದಲ್ಲಿ ಗ ಎಂದರೆ ಜ್ಞಾನ, ಣ ಎಂದರೆ ಮೋಕ್ಷ. ಜ್ಞಾನ ಮೋಕ್ಷಗಳನ್ನು ಕೊಡಲು 'ಈಶ' ಸಮರ್ಥನಾದ್ದರಿಂದ ಗಣೇಶ ಎಂದು ಹೆಸರು.

'ಏಕ' ಎಂದರೆ ಪ್ರಧಾನ 'ದಂತ' ಎಂದರೆ ಬಲ. ಗಣೇಶನ ಬಲ ಎಲ್ಲರಿಗಿಂತ ಪ್ರಧಾನವಾದ್ದರಿಂದ ಏಕದಂತ ಎಂದು ಅವನಿಗೆ ಹೆಸರು.

'ಹೇ' ಎಂದರೆ ದೀನ ಜನರು. 'ರಂಬ' ಎಂದರೆ ಪಾಲಕ. ದೀನ ಜನರಿಗೆ ಪಾಲಕನಾದ್ದರಿಂದ ಹೇರಂಬ' 'ವಿಘ್ನ' ಎಂದರೆ ಆಪತ್ತು. 'ನಾಯಕ' ಎಂದರೆ ನಾಶಕ. ಎಲ್ಲ ಆಪತ್ತನ್ನು ಕಳೆಯುವುದರಿಂದ ವಿಘ್ನನಾಯಕನೆನಿಸುತ್ತಾನೆ.

ವಿಷ್ಣುವೂ ಶಿವನೂ ಕೊಡುವ ನಾನಾ ಬಗೆಯ ನೈವೇದ್ಯದಿಂದ ಹೊಟ್ಟೆ ಬೆಳೆದು ನೇತಾಡುವುದರಿಂದ ಲಂಬೋದರನೆನಿಸುತ್ತಾನೆ.

ಗಣೇಶನ ಕಿವಿಗಳು ಮೊರದ ಆಕಾರದಲ್ಲಿದ್ದು ವಿಘ್ನಗಳನ್ನು ಕಳೆಯುತ್ತವೆ. ಸಂಪತ್ತನ್ನು ಜ್ಞಾನವನ್ನೂ ಕೊಡುತ್ತವೆ. ಆದ್ದರಿಂದ ಆತ ಶೂರ್ಪಕರ್ಣ.

ದೂರ್ವಾಸ ಮುನಿ ಕೊಟ್ಟ ವಿಷ್ಣುವಿನ ನಿರ್ಮಾಲ್ಯ ಪುಷ್ಪವನ್ನು ಧರಿಸಿದ ಆನೆಯ ತಲೆಯನ್ನೇ ಗಣೇಶನಿಗೆ ಜೋಡಿಸಿದ್ದರಿಂದ ಆತ ಗಜವಕ್ತ್ರನೆನಿಸಿದ.

ಷಣ್ಮುಖನಿಗಿಂತ ಮೊದಲಿಗೆ ಶಿವನ ಮಂದಿರದಲ್ಲಿ ಜನಿಸಿದವನಾದ್ದರಿಂದ ಅವನು ಗುಹಾಗ್ರಜ. ಗಣೇಶನ ಎಂಟು ನಾಮಗಳ ಅರ್ಥವನ್ನು ಹೇಳುವ ಈ ಸ್ತೋತ್ರವನ್ನು ಮೂರು ಸಂಧ್ಯೆಗಳಲ್ಲಿ ಪಠಿಸಿದರೆ ವಿಘ್ನಗಳು ಗರುಡನನ್ನು ಹಾವುಗಳಂತೆ ದೂರ ಓಡುವವು. ಜ್ಞಾನ, ಪುತ್ರ, ಸಂತತಿ, ಸ್ತ್ರೀ ಸುಖಗಳು ಲಭಿಸುವುವು. ಮಹಾ ಅಜ್ಞಾನಿಯೂ ವಿದ್ಯಾವಂತನಾಗುತ್ತಾನೆ. ಶ್ರೇಷ್ಠ ಕವಿಯೆನಿಸುತ್ತಾನೆ.

ಆದ್ದರಿಂದ ವೇದಗಳಲ್ಲಿ ಗಣೇಶ ಏಕದಂತನೆನಿಸಿರುವುದನ್ನು ಆಲೋಚಿಸಿ ಪರಶುರಾಮನಲ್ಲಿ ಕೋಪ ಬಿಡು.

**ಇಲ್ಲಿಗೆ ಶ್ರೀ ಬ್ರಹ್ಮವೈವರ್ತ ಮಹಾಪುರಾಣದಲ್ಲಿ ಮೂರನೆಯದಾದ ಗಣಪತಿ ಖಂಡದಲ್ಲಿ ನಾರಾಯಣನಾರದ ಸಂವಾದದಲ್ಲಿ ಗಣೇಶ ಸ್ತೋತ್ರ ಕಥನವೆಂಬ ನಲವತ್ತನಾಲ್ಕನೆ ಅಧ್ಯಾಯ ಮುಗಿಯಿತು.**

## ಪರಶುರಾಮಕೃತ ದುರ್ಗಾಸ್ತೋತ್ರ

**ಅಧ್ಯಾಯ-೪೫**

ವಿಷ್ಣು ಪಾರ್ವತಿಗೆ ಹೀಗೆ ಸಮಾಧಾನ ಹೇಳಿ ಪರಶುರಾಮನಿಗೂ ಉಪದೇಶಿಸಿದ - 'ರಾಮ, ನೀನು ಈಗ ನಿಜವಾಗಿಯೂ ಶಾಸ್ತ್ರ ದೃಷ್ಟಿಯಿಂದ ಅಪರಾಧಿ. ಅದರಿಂದ ನೀನು ನಾನು ಹೇಳುವ ಗಣೇಶ ಸ್ತೋತ್ರದಿಂದ ಗಣೇಶನನ್ನೂ, ದುರ್ಗಾ-ಸ್ತೋತ್ರದಿಂದ ಪಾರ್ವತಿಯನ್ನೂ ಸ್ತುತಿಸು. ಪಾರ್ವತಿ ಶ್ರೀಕೃಷ್ಣನ ಪರಾಶಕ್ತಿ, ಬುದ್ಧಿ-ರೂಪಳು. ಅವಳು ಕುಪಿತಳಾದರೆ ನಿನ್ನ ಬುದ್ಧಿ ನಾಶವಾದೀತು. ಸರ್ವ ಶಕ್ತಿ ಸ್ವರೂಪಳಾದ ಅವಳಿಂದರೆ ಜಗತ್ತಿನಲ್ಲಿ ಶಕ್ತಿ ಕಂಡು ಬರುತ್ತದೆ. ಅವಳಿಂದಲೆ ಕೃಷ್ಣ ಶಕ್ತಿಶಾಲಿಯೆನಿಸುತ್ತಾನೆ. ಅವಳಿಲ್ಲದಿದ್ದರೆ ನಿರ್ಗುಣನಾದ ಕೃಷ್ಣ ಸೃಷ್ಟಿ ಮಾಡಲಾರ. ನಾವು ಬ್ರಹ್ಮ ವಿಷ್ಣು ಮಹೇಶ್ವರರು ಹುಟ್ಟಿರುವುದು ಅವಳಿಂದಲೆ.

ಹಿಂದೆ ದೇವತೆಗಳೆಲ್ಲ ರಾಕ್ಷಸರ ಬಾಧೆಗೊಳಗಾಗಿದ್ದಾಗ ಅವರ ತೇಜಸ್ಸುಗಳಲ್ಲಿ ಆವಿರ್ಭವಿಸಿ ಕೃಷ್ಣನಾಜ್ಞೆಯಂತೆ ರಾಕ್ಷಸರನ್ನು ಕೊಂದು ದೇವತೆಗಳಿಗೆ ಅವರ ಪದವಿ-ಗಳನ್ನು ಇವಳೆ ಕೊಟ್ಟಳು. ಬಳಿಕ ದಕ್ಷನ ತಪಸ್ಸಿಗೆ ಮೆಚ್ಚಿ ಅವನ ಮಗಳಾಗಿ ಹುಟ್ಟಿ ದಾಕ್ಷಾಯಿಣಿ ಎನಿಸಿ ಶಿವನ ಮಡದಿಯಾದಳು. ಆಗ ಪತಿನಿಂದೆ ಕೇಳಿ ಸಹಿಸಲಾರದೆ ದೇಹತ್ಯಾಗ ಮಾಡಿದಳು. ಅನಂತರ ಹಿಮಾಲಯದ ಪತ್ನಿಯಾದ ಮೇನೆಯಲ್ಲಿ ಪಾರ್ವತಿಯಾಗಿ ಜನಿಸಿದಳು. ಬಹಳ ತಪಸ್ಸು ಮಾಡಿ ಶಿವನನ್ನು ಪತಿಯಾಗಿ ಪಡೆದಳು. ಕೃಷ್ಣನನ್ನು ಆರಾಧಿಸಿ ಕೃಷ್ಣನ ಅಂಶದಿಂದ ಯುಕ್ತವಾದ ಗಣಪತಿಯನ್ನು ಮಗನನ್ನಾಗಿ ಪಡೆದಳು. ನೀನು ಸದಾ ಧ್ಯಾನಿಸುವ ಆ ಕೃಷ್ಣನ ಅಂಶದಿಂದಲೇ ಈ ಗಣೇಶ ಜನಿಸಿದ್ದಾನೆ.

ಕೈ ಮುಗಿದು ತಲೆಬಾಗಿ ಶಿವಪ್ರಿಯೆಯಾದ ಪಾರ್ವತಿಯ ಸ್ತೋತ್ರವನ್ನು ಪಠಿಸು. ಹಿಂದೆ ತ್ರಿಪುರವಧದ ಕಾಲದಲ್ಲಿ ಬ್ರಹ್ಮನಾಜ್ಞೆಯಂತೆ ಶಿವನೆ ಪಾರ್ವತಿಯ ಸ್ತೋತ್ರ ಮಾಡಿದ್ದ. ಆ ಸ್ತೋತ್ರದಿಂದಲೇ ನೀನು ಸ್ತುತಿಸು.

ಹೀಗೆ ಹೇಳಿ ವಿಷ್ಣು ವೈಕುಂಠಕ್ಕೆ ಹಿಂತಿರುಗಿದ. ಪರಶುರಾಮ ವಿಷ್ಣುವನ್ನು ಸ್ಮರಿಸಿ ಅವನು ಉಪದೇಶಿಸಿದ ಸ್ತೋತ್ರದಿಂದ ಪಾರ್ವತಿಯನ್ನು ಸ್ತುತಿಸಿದ.

ಗೋಲೋಕದಲ್ಲಿ ಕೃಷ್ಣ ಸೃಷ್ಟಿ ಮಾಡಲು ಬಯಸಿದಾಗ ಮೊದಲಿಗೆ ಆವಿರ್ಭವಿಸಿ-ದವಳೆ ಪ್ರಕೃತಿ.

ವಸ್ತ್ರಾಲಂಕಾರ ಭೂಷಿತಳಾಗಿ, ನವ ಯೌವನದಿಂದ ಒಪ್ಪುತ್ತ, ಮಂದ ಹಾಸ ಸೂಸುತ್ತ, ಅನಿರ್ವಚನೀಯ ಸುಂದರಾಕಾರದ ಕೋಟಿ ಸೂರ್ಯರಂತೆ ಹೊಳೆವ ಶರೀರ ಧರಿಸಿ, ಕೃಷ್ಣನ ಶರೀರದಿಂದ ಅವಳು ಹೊರ ಬಂದಿದ್ದಳು. ಕೃಷ್ಣ ಅವಳನ್ನು ಕಂಡು ಕ್ಷಣ ಮಾತ್ರದಲ್ಲಿ ಮೋಹಗೊಂಡ. ಅವಳೂ ಕೃಷ್ಣನ ಬಳಿಗೆ ಓಡಿಬಂದಳು.

ಹೀಗೆ ರಾಸ ಮಂಡಲದಲ್ಲಿ ಉದಿಸಿ ಕೃಷ್ಣನ ಬಳಿಗೆ ಧಾವಿಸಿದ್ದರಿಂದ ಅವಳಿಗೆ ರಾಧೆ ಎಂದೇ ಹೆಸರಾಯಿತು. ಕೃಷ್ಣ ಅವಳಲ್ಲಿ ಮಹಾ ವಿರಾಟ ಪುರುಷನನ್ನು ಹುಟ್ಟಿಸಿದ. ಅವನ ನಿಶ್ವಾಸ ಮಹಾ ವಾಯು ಎನಿಸಿತು. ಬೆವರು ಜಲರಾಶಿಯಾಯಿತು.

ದೇವಿ ಪಾರ್ವತಿ, ನೀನು ಪ್ರಕೃತಿಯ ಐದು ಮೂರ್ತಿಗಳಲ್ಲಿ ಒಬ್ಬಳಾಗಿರುವೆ. ಮೊದಲನೆ ಮೂರ್ತಿಯೆ ರಾಧೆ. ಎರಡನೆಯ ಮೂರ್ತಿ ವೇದ ಮಾತೆಯಾದ ಸಾವಿತ್ರಿ. ಐಶ್ವರ್ಯದ ಅಧಿ ದೇವತೆಯಾದ ಲಕ್ಷ್ಮಿ ಮೂರನೆ ಮೂರ್ತಿ. ವಾಗಧಿ-ದೇವತೆಯಾದ ಸರಸ್ವತಿ ನಾಲ್ಕನೆ ಮೂರ್ತಿ. ಶಿವನ ಮಡದಿ ನೀನು ಐದನೆಯ ಮೂರ್ತಿ. ನೀನೆ ಲಕ್ಷ್ಮಿಯಾಗಿ ಸರಸ್ವತಿಯಾಗಿ ನಾರಾಯಣನ ಮಡದಿ. ಸಾವಿತ್ರಿ-ಯಾಗಿ ಬ್ರಹ್ಮನ ಮಡದಿಯಾಗಿರುವೆ. ರಾಧೆಯಾಗಿ ಕೃಷ್ಣನ ಬಳಿ ಇರುವೆ. ಎಲ್ಲ ದೇವತೆಗಳ ಮಡದಿಯರೂ ನಿನ್ನ ಅಂಶಗಳಿಂದ ಯುಕ್ತರು. ಸೂರ್ಯನಿಗೆ ಛಾಯೆ-ಯಾಗಿ, ಚಂದ್ರನಿಗೆ ರೋಹಿಣಿಯಾಗಿ, ಇಂದ್ರನಿಗೆ ಶಚಿಯಾಗಿ, ಮನ್ಮಥನಿಗೆ ರತಿ-ಯಾಗಿ, ವರುಣನಿಗೆ ವರುಣಾನಿಯಾಗಿ, ವಾಯುವಿಗೆ ವಾಯುವಿಯಾಗಿ, ಅಗ್ನಿಗೆ ಸ್ವಾಹೆಯಾಗಿ, ಕುಬೇರನಿಗೆ ಮನೋರಮೆಯಾಗಿ, ಯಮನಿಗೆ ಶ್ಯಾಮಲೆಯಾಗಿ, ನಿಋತಿಗೆ ಕೈಟಭಿಯಾಗಿ, ಈಶಾನನಿಗೆ ಶಶಿಕಲೆಯಾಗಿ, ಸ್ವಾಯಂಭುವ ಮನುವಿಗೆ ಶತರೂಪೆಯಾಗಿ, ಕರ್ದಮನಿಗೆ ದೇವಹೂತಿಯಾಗಿ, ವಸಿಷ್ಠನಿಗೆ ಅರುಂಧತಿಯಾಗಿ, ಅಗಸ್ತ್ಯನಿಗೆ ಲೋಪಾಮುದ್ರೆಯಾಗಿ, ಕಶ್ಯಪನಿಗೆ ಅದಿತಿಯಾಗಿ, ಗೌತಮನಿಗೆ ಅಹಲ್ಯೆ-ಯಾಗಿ, ಸರ್ವಾಧಾರಳಾದ ವಸುಂಧರೆಯಾಗಿ, ತುಲಸಿಯಾಗಿ, ಗಂಗೆಯಾಗಿ, ಮಾನವರಿಗೆ ಗೃಹಲಕ್ಷ್ಮಿಯಾಗಿ, ರಾಜರಿಗೆ ರಾಜಲಕ್ಷ್ಮಿಯಾಗಿ ತಪಸ್ವಿಗಳಿಗೆ ತಪಸ್ಸಾಗಿ, ಬ್ರಾಹ್ಮಣರಿಗೆ ಗಾಯತ್ರಿಯಾಗಿ, ಸಜ್ಜನರಿಗೆ ಸಜ್ಜನಿಕೆಯಾಗಿ, ದುಷ್ಟರಿಗೆ ಕಲಹ ಸ್ವರೂಪಳಾಗಿ ನಿರ್ಗುಣನಾದ ಪರಮಾತ್ಮನಿಗೆ ಜ್ಯೋತಿಃ ಸ್ವರೂಪಳಾಗಿ ಸಗುಣನಿಗೆ ಶಕ್ತಿರೂಪಳಾಗಿ, ಸೂರ್ಯ ಮಂಡಲದಲ್ಲಿ ಪ್ರಭೆಯಾಗಿ ಬೆಂಕಿಯಲ್ಲಿ ದಾಹಶಕ್ತಿಯಾಗಿ, ನೀರಲ್ಲಿ ಶೈತ್ಯವಾಗಿ, ಚಂದ್ರನಲ್ಲಿ ಶೋಭೆಯಾಗಿ, ಭೂಮಿಯಲ್ಲಿ ಗಂಧವಾಗಿ, ಆಕಾಶ-ದಲ್ಲಿ ಶಬ್ದವಾಗಿ, ಜೀವಿಗಳಲ್ಲಿ ಹಸಿವು ಬಾಯಾರಿಕೆಗಳಾಗಿ, ಜ್ಞಾನಿಗಳಲ್ಲಿ ಜ್ಞಾನ-ಶಕ್ತಿಯಾಗಿ, ಬ್ರಹ್ಮ ವಿಷ್ಣು ಮಹೇಶ್ವರರಲ್ಲಿ ಸೃಷ್ಟಿ ಸ್ಥಿತಿ ಸಂಹಾರ, ಶಕ್ತಿಗಳಾಗಿ ನೀನೇ ನೆಲೆಸಿರುವೆ. ನಿನಗೆ ನಮಸ್ಕಾರ.

ಮಧುಕೈಟಭರ ಭಯದಿಂದ ಕಳವಳಗೊಂಡ ಬ್ರಹ್ಮ ನಿನ್ನನ್ನು ಸ್ತುತಿಸಿ ಭಯ-ಮುಕ್ತನಾದ. ವಿಷ್ಣು ನಿನ್ನನ್ನು ಸ್ತುತಿಸಿ ಮಧುಕೈಟಭರನ್ನು ಕೊಲ್ಲಲು ಶಕ್ತನಾದ. ಶಿವನ ರಥ ತ್ರಿಪುರರ ಯುದ್ಧದಲ್ಲಿ ಕೆಳಗೆ ಬೀಳುತ್ತಿದ್ದಾಗ ದೇವತೆಗಳೆಲ್ಲರೂ ನಿನ್ನನ್ನೆ ಸ್ತುತಿಸಿದರು. ಆಗ ವಿಷ್ಣು ವೃಷಭ ರೂಪದಿಂದ ಬಂದು ಶಿವನ ರಥವನ್ನು ಎತ್ತಿ ಹಿಡಿದ. ಶಿವ ನಿನ್ನನ್ನು ಸ್ತುತಿಸಿ ತ್ರಿಪುರಾಸುರರನ್ನು ಕೊಂದ. ನಿನ್ನ ಆಜ್ಞೆಯಿಂದ ಗಾಳಿ

ಬೀಸುತ್ತದೆ. ಸೂರ್ಯ ಹೊಳೆಯುತ್ತಾನೆ. ಇಂದ್ರ ಮಳೆ ತರುತ್ತಾನೆ. ಬೆಂಕಿ ಸುಡುತ್ತದೆ. ಕಾಲ ಯಮ ವೇಗವಾಗಿ ಓಡುತ್ತಾನೆ. ಜಂತುಗಳಿಗೆ ಮೃತ್ಯು ಧಾವಿಸಿ ಬರುತ್ತಾನೆ. ಸೃಷ್ಟಿಕರ್ತ ಸೃಜಿಸುತ್ತಾನೆ. ಪಾಲಕ ಪಾಲಿಸುತ್ತಾನೆ. ಸಂಹಾರಕ ಸಂಹರಿಸುತ್ತಾನೆ. ಜ್ಯೋತಿ ಸ್ವರೂಪನಾದ ಕೃಷ್ಣನೂ ನಿನ್ನ ಸಹಾಯವಿಲ್ಲದೆ ಸೃಷ್ಟಿ ಮಾಡಲಾರ. ದೇವಿ, ನಿನಗೆ ನನ್ನ ನಮಸ್ಕಾರ.

ದೇವಿ, ಜಗನ್ಮಾತೆ, ನೀನು ನನ್ನ ಅಪರಾಧವನ್ನು ಕ್ಷಮಿಸು. ಮಕ್ಕಳು ತಪ್ಪು ಮಾಡಿದರೆ ಮಾತೆ ಏಕೆ ಕೋಪಗೊಳ್ಳುತ್ತಾಳೆ ?

ಹೀಗೆ ಹೇಳಿ ಪರಶುರಾಮ ನಮಿಸಿ ಕಣ್ಣೀರು ಸುರಿಸಿದ. ಪಾರ್ವತಿ ಸಂತುಷ್ಟಳಾಗಿ ಅಭಯ ನೀಡಿದಳು. 'ಮಗು, ನೀನು ಅಮರನೆನಿಸು, ನಿನಗೆ ಎಲ್ಲೆಡೆ ಜಯವಾಗಲಿ, ಸರ್ವಾಂತರಾತ್ಮನಾದ ಹರಿ ನಿನ್ನಲ್ಲಿ ಪ್ರೀತನಾಗಲಿ. ನಿನಗೆ ಹರಿ ಗುರು ಭಕ್ತಿ ಹೆಚ್ಚಲಿ.

ಇಷ್ಟ ದೇವೇ ಗುರೌ ಯಸ್ಯ ಭಕ್ತಿರ್ಭವತಿ ಶಾಶ್ವತೀ ।
ತಂ ಹಂತುಂ ನಹಿ ಶಕ್ತಾ ವಾ ರುಷ್ಟಾ ವಾ ಸರ್ವದೇವತಾಃ ॥

ಇಷ್ಟ ದೇವನಲ್ಲಿಯೂ ಗುರುವಿನಲ್ಲಿಯೂ ಶಾಶ್ವತ ಭಕ್ತಿ ಇಟ್ಟವನನ್ನು ಯಾವ ದೇವತೆ ಸಿಟ್ಟಾದರೂ ಕೊಲ್ಲಲು ಸಮರ್ಥನಾಗಲಾರ.

ಪರಶುರಾಮ, ನೀನು ಕೃಷ್ಣನ ಭಕ್ತ. ಶಿವನ ಶಿಷ್ಯ. ಗುರುಪತ್ನಿಯಾದ ನನ್ನನ್ನು ಸ್ತುತಿಸುವಿ. ಇನ್ನು ನಿನ್ನನ್ನು ಯಾರು ತಾನೆ ಕೊಲ್ಲಬಲ್ಲ? ಕೃಷ್ಣಭಕ್ತನಿಗೆ ಎಂದೂ ಕೇಡಾಗುವುದಿಲ್ಲ. ಅನ್ಯ ದೇವತೆಗಳಲ್ಲಿ ಆತ ಭಕ್ತನಾದರೂ ಸರಿಯೆ, ಭಕ್ತನಲ್ಲ-ದಿದ್ದರೂ ಸರಿಯೆ. ಅವನನ್ನು ನಿಯಂತ್ರಿಸಬಲ್ಲವರು ಯಾರೂ ಇಲ್ಲ. ಚಂದ್ರಬಲ-ವಿದ್ದವನಿಗೆ ತಾರಾ ಬಲವೇಕೆ? ತಾರೆಗಳು ಕ್ರುದ್ಧರಾದರೂ ದುರ್ಬಲರಾದ ಅವರು ಏನು ಮಾಡಬಲ್ಲರು ? ರಾಜನ ಅನುಗ್ರಹವಿದ್ದರೆ ಭೃತ್ಯರು ಕ್ರುದ್ಧರಾದರೂ ಏನು ಮಾಡಬಲ್ಲರು ?

ಹೀಗೆ ಹೇಳಿ ಪಾರ್ವತಿ ಪರಶುರಾಮನಿಗೆ ಆಶೀರ್ವದಿಸಿ ಅಂತಃಪುರವನ್ನು ಸೇರಿದಳು. ಎಲ್ಲರೂ ಸಂತೋಷ ವ್ಯಕ್ತಪಡಿಸಿದರು.

ಕಾಣ್ವಶಾಖೋಕ್ತವಾದ ಈ ದುರ್ಗಾಸ್ತೋತ್ರವನ್ನು ಪೂಜಾಕಾಲ ಪ್ರಯಾಣ ಕಾಲಗಳಲ್ಲಿ ಭಕ್ತಿ ಪೂರ್ವಕವಾಗಿ ಪಠಿಸಿದರೆ ಅಭೀಷ್ಟ ಸಿದ್ಧಿಯಾಗುವುದು. ಪುತ್ರಾರ್ಥಿಗೆ ಪುತ್ರ, ಕನ್ಯಾರ್ಥಿಗೆ ಕನ್ಯೆ, ವಿದ್ಯಾರ್ಥಿಗೆ ವಿದ್ಯೆ, ಸಂತಾನಾರ್ಥಿಗೆ ಸಂತತಿ, ರಾಜ್ಯ ಕಳೆದುಕೊಂಡವನಿಗೆ ರಾಜ್ಯ, ಧನವನ್ನು ಕಳೆದುಕೊಂಡವನಿಗೆ ಧನ ಲಭಿಸುತ್ತದೆ. ಗುರು ದೇವ ರಾಜ ಬಂಧುಗಳು ಕುಪಿತರಾದರೂ ಈ ಸ್ತೋತ್ರ ಪ್ರಭಾವದಿಂದ ಪ್ರಸನ್ನರಾಗುತ್ತಾರೆ. ದರೋಡೆಕೋರರಿಗೆ, ಹಾವುಗಳಿಗೆ, ಶತ್ರುಗಳಿಗೆ ವ್ಯಾಧಿಗಳಿಗೆ

ಬಲಿಯಾದರೂ ಈ ಸ್ತೋತ್ರದ ಸ್ಮರಣ ಮಾತ್ರದಿಂದ ಮುಕ್ತನಾಗುತ್ತಾನೆ. ರಾಜದ್ವಾರ ಸ್ಮಶಾನ, ಕಾರಾಗಾರ, ಸಾಗರಗಳಲ್ಲಿ ಈ ಸ್ತೋತ್ರ ಸ್ಮರಣದಿಂದಲೇ ಭಯ ನಿವಾರಣೆ-ಯಾಗುವುದು. ಹವಿಷ್ಯಾನ್ನ ಉಣ್ಣುತ್ತ ಒಂದು ವರ್ಷಕಾಲ ದುರ್ಗೆಯನ್ನಾರಾಧಿಸಿ ಈ ಸ್ತೋತ್ರ ಶ್ರವಣ ಮಾಡಿದರೆ ಮಹಾವಂಧ್ಯೆಯೂ ಪುತ್ರವತಿಯಾಗುವಳು ದಿವ್ಯಜ್ಞಾನಿ-ಯಾದ ಚಿರಂಜೀವಿಯಾದ ಮಗನನ್ನು ಪಡೆಯುವಳು. ಒಂದೇ ಮಗುವಿದ್ದರೆ, ಅಥವಾ ಹುಟ್ಟುವ ಮಕ್ಕಳೆಲ್ಲ ಸಾಯುತ್ತಿದ್ದರೆ ಒಂಬತ್ತು ತಿಂಗಳು ಈ ಸ್ತೋತ್ರ ಶ್ರವಣ ಮಾಡಬೇಕು. ಹುಟ್ಟಿದ ಮಕ್ಕಳೆಲ್ಲ ಹೇಡಿ ಆಗಿದ್ದರೆ ಐದು ತಿಂಗಳ ಕಾಲ ಈ ಸ್ತೋತ್ರ ಶ್ರವಣ ಮಾಡಬೇಕು. ಕಲಶದಲ್ಲಿ ದುರ್ಗೆಯನ್ನಾವಾಹಿಸಿ ಪೂಜಿಸಬೇಕು. ಆಗ ಗಂಡು ಮಗುವಾಗುತ್ತದೆ.

**ಇಲ್ಲಿಗೆ ಶ್ರೀ ಬ್ರಹ್ಮವೈವರ್ತ ಮಹಾಪುರಾಣದಲ್ಲಿ ಮೂರನೆಯದಾದ ನಾರದ ನಾರಾಯಣ ಸಂವಾದದಲ್ಲಿ ಪರಶುರಾಮಕೃತ ದುರ್ಗಾಸ್ತೋತ್ರವೆಂಬ ನಲವತ್ತೈದನೆ ಅಧ್ಯಾಯ ಮುಗಿಯಿತು.**

## ಅಧ್ಯಾಯ-೪೬

## ತುಳಸಿಯಿಂದ ಗಣೇಶನಲ್ಲಿ ಪ್ರೇಮಯಾಚನೆ. ಅವನು ತಿರಸ್ಕರಿಸಿದಾಗ ಪರಸ್ಪರ ಶಾಪ ಪ್ರಧಾನ. ಗಣಪತಿಯಿಂದ ತುಲಸಿಯ ಸಾಂತ್ವನ. ಹರಿಯ ಆರಾಧನೆಗಾಗಿ ಗಣೇಶನ ಬದರಿಕಾಶ್ರಮಗಮನ, ಗಣೇಶನ ಶಾಪದಿಂದ ತುಲಸಿ ಶಂಖಚೂಡನ ಮಡದಿಯಾಗಿ ಅವನು ಸತ್ತಬಳಿಕ ತುಳಸಿ ಗಿಡವಾಗಿ ಹರಿಗೆ ಅರ್ಪಿತಳಾದಳು.

ನಾರಾಯಣ— ಪರಶುರಾಮ ಪಾರ್ವತಿಯನ್ನು ಹೀಗೆ ಸ್ತುತಿಸಿ ಮೆಚ್ಚಿಸಿ ಗಣಪತಿಯನ್ನು ಹರಿಯ ಉಪದೇಶದಂತೆ ಸ್ತುತಿಸಿದ. ನಾನಾ ಬಗೆಯ ನೈವೇದ್ಯ-ಗಳಿಂದ, ಧೂಪ-ದೀಪಗಳಿಂದ, ಗಂಧ ಪುಷ್ಪಗಳಿಂದ ಅವನನ್ನು ಆರಾಧಿಸಿದ. ತುಲಸಿಯೊಂದನ್ನು ಬಿಟ್ಟು ಬೇರೆ ಎಲ್ಲ ಹೂಗಳಿಂದಲೂ ಅರ್ಚಿಸಿದ.

ನಾರದ— ಪ್ರಭು, ಪರಶುರಾಮ ಗಣಪತಿಯನ್ನು ತುಲಸಿಯಿಂದ ಏಕೆ ಪೂಜಿಸಲಿಲ್ಲ? ತುಲಸಿ ಎಲ್ಲ ಹೂಗಳಿಗಿಂತ ಶ್ರೇಷ್ಠ, ಸುಂದರ. ಅದರಿಂದ ಮಾಡಿದ ಪೂಜೆಯೂ ಶ್ರೇಷ್ಠ ಸುಂದರ.

ನಾರಾಯಣ ನಾರದ, ಇದರ ಹಿಂದೆ ಒಂದು ಇತಿಹಾಸವಿದೆ. ಹೇಳುತ್ತೇನೆ ಕೇಳು. ಒಮ್ಮೆ ತುಲಸಿ ನವ ಯೌವನವತಿಯಾಗಿ ನಾರಾಯಣ ಪರಾಯಣೆಯಾಗಿ ತಪಸ್ವಿನಿಯಾಗಿ ತೀರ್ಥಕ್ಷೇತ್ರಗಳಲ್ಲಿ ಸಂಚರಿಸುತ್ತಿದ್ದಳು. ಆಗ ಗಣೇಶ ಸ್ಫುರದ್ರೂಪಿಯಾದ ನವ ಯುವಕ. ಮೈಯೆಲ್ಲ ಶ್ರೀಗಂಧ ಪೂಸಿಕೊಂಡು ಪೀತಾಂಬರ ಉಟ್ಟು, ರತ್ನಾಭರಣ ತೊಟ್ಟು ಮುಖದಲ್ಲಿ ಮಂದಹಾಸ ಬೀರುತ್ತ ಕೃಷ್ಣನ ಪಾದಕಮಲಗಳನ್ನೆ ಧ್ಯಾನಿಸುತ್ತ ಗಂಗಾತೀರದಲ್ಲಿ ಕುಳಿತಿದ್ದ. ಜಿತೇಂದ್ರಿಯರಲ್ಲೆ ಅಗ್ರಗಣ್ಯ ಆತ. ಯೋಗಿಗಳಿಗೇ ಪರಮ ಗುರು. ಅವನನ್ನು ತುಲಸಿ ಕಂಡು ಮೋಹಿತಳಾದಳು. 'ಗಜಾನನ, ಏನು ಧ್ಯಾನಿಸುತ್ತಿರುವೆ ? ನೀನು ಹೇಗೆ ಗಜಾನನನಾದೆ, ಹೇಳು, ಏಕೆ ಲಂಬೋದರನಾದೆ? ನಿನ್ನ ಮುಖದಲ್ಲಿ ಒಂದು ದಂತ ಹೇಗೆ ತುಂಡಾಯಿತು? ನಿನ್ನ ಧ್ಯಾನವನ್ನು ನಿಲ್ಲಿಸು. ಸಂಜೆಯಾಯಿತು. ಎನ್ನುತ್ತ ಒಂದೇ ಸಮನೆ ನಗತೊಡಗಿದಳು. ಹೊರಗೆ ಪರಿಹಾಸ ಕಂಡರೂ ಒಳಗೆ ಒಲವು ತುಡಿಯುತ್ತಿತ್ತು. ಅದರಿಂದ ಗಣೇಶನ ತಲೆಯ ಮೇಲೆ ಸ್ವಲ್ಪ ನೀರು ಸುರಿದು ತೋರು ಬೆರಳ ತುದಿಯಿಂದ ಮೆಲ್ಲನೆ ತಟ್ಟಿದಳು. ನೋವಾಯಿತು ಗಣೇಶನಿಗೆ. ತಟ್ಟಿದ್ದರಿಂದಲ್ಲ, ಧ್ಯಾನಭಂಗವಾದ್ದರಿಂದ ನೋವು. ಕಣ್ಣು ತೆರೆದು ನೋಡುತ್ತಾನೆ. ಇದಿರಿಗೆ ನವಯೌವನ ಸಂಪನ್ನೆಯಾದ, ಅನುರಾಗದ ನಸುನಗೆ-ಯಿಂದ ಒಪ್ಪುವ ಚೆಲುವೆ. ವಿನಯದಿಂದ ನುಡಿದ ಗಣೇಶ - 'ತಾಯಿ, ನೀನಾರು? ಯಾರ ಮಗಳು? ತಪಸ್ವಿಗಳ ಧ್ಯಾನಕ್ಕೆ ಭಂಗ ತರುವುದು ಶ್ರೇಯಸ್ಸಲ್ಲ. ಅದರಿಂದ ಪಾಪ ಬರುತ್ತದೆ. ಕೃಷ್ಣ ದಯಾನಿಧಿ ದಯೆಯಿಂದ ನಿನಗೆ ಶುಭ ಉಂಟುಮಾಡಲಿ. ಅವನ ಧ್ಯಾನಕ್ಕೆ ಭಂಗ ಉಂಟು ಮಾಡಿದುದರ ಪಾಪದಿಂದ ನಿನಗೆ ಅನಿಷ್ಟ ಉಂಟಾಗದಿರಲಿ.'

ತುಲಸಿ ಹೇಳಿದಳು— 'ಪ್ರಭು, ನಾನು ತುಲಸಿ, ಧರ್ಮಧ್ವಜನ ಮಗಳು. ಯೋಗ್ಯ ವರನನ್ನು ಪಡೆಯಲು ತಪಸ್ಸು ಮಾಡುತ್ತಿದ್ದೇನೆ. ನೀನೆ ನನಗೆ ಪತಿಯಾಗು'.

ಗಣೇಶ ನುಡಿದ— 'ತಾಯಿ, ನನಗೆ ಮದುವೆಯಾಗುವ ಇಚ್ಛೆಯಿಲ್ಲ. ಮದುವೆ-ಯಿಂದ ದುಃಖವೆ ಹೊರತು ಸುಖವಿಲ್ಲ. ಅದು ಹರಿಭಕ್ತಿಗೆ ಅಡ್ಡಿಯಾಗುತ್ತದೆ. ತಪಸ್ಸನ್ನು ನಾಶಗೊಳಿಸುತ್ತದೆ. ಮೋಕ್ಷದ್ವಾರವನ್ನು ಮುಚ್ಚುತ್ತದೆ. ಸಂಸಾರ ಬಂಧನ-ವನ್ನು ಬಿಗಿಗೊಳಿಸುತ್ತದೆ. ಗರ್ಭವಾಸ ಉಂಟು ಮಾಡುತ್ತದೆ. ತತ್ವಜ್ಞಾನವನ್ನು ಕಳೆಯುತ್ತದೆ. ಸಂಶಯಗಳನ್ನು ಹುಟ್ಟಿಸುತ್ತಿದೆ. ಅದರಿಂದ ಶೂದ್ರನಿಗೂ ತ್ಯಾಜ್ಯ. ನೀನು ಬೇರೆಯಾರನ್ನಾದರೂ ವರಿಸು, ಹೋಗು, ಕನ್ಯಾರ್ಥಿಯನ್ನೆ ಕನ್ಯೆ ಸೇರಬೇಕು. ಅದೇ ಉಚಿತವೆನಿಸುತ್ತದೆ.'

ತುಳಸಿ ಕೋಪಗೊಂಡಳು, 'ಗಣೇಶ, ನಿನಗೆ ಶೀಲವಿಲ್ಲದ ಹೆಣ್ಣು ಸಿಗಲಿ' ಎಂದು ಶಪಿಸಿದಳು. ಗಣೇಶನೂ ಶಪಿಸಿದ, 'ದೇವಿ, ನೀನು ಅಸುರನ ವಶಳಾಗುವಿ. ಬಳಿಕ

ಗಿಡವಾಗಿ ಹುಟ್ಟುವಿ.' ಈ ಶಾಪವನ್ನು ಕೇಳಿ ತುಲಸಿ ಅಳತೊಡಗಿದಳು. ಗಣೇಶ ಸಮಾಧಾನ ಪಡಿಸಿದ— 'ಸುಂದರಿ ಅಳಬೇಡ. ನೀನು ಗಿಡವಾಗಿ ಹುಟ್ಟಿದರೂ ಎಲ್ಲ ಪುಷ್ಪಗಳಿಗಿಂತ ಶ್ರೇಷ್ಠಳೆನಿಸುವಿ. ನಾರಾಯಣನ ಪ್ರೇಯಸಿಯಾದ ಲಕ್ಷ್ಮಿಯ ಅಂಶ ನಿನ್ನಲ್ಲಿರುವುದು. ಎಲ್ಲ ದೇವತೆಗಳಿಗೂ ನೀನು ಪ್ರಿಯಳೆನಿಸುವಿ. ಕೃಷ್ಣನಿಗೆ ಅತ್ಯಂತ ಪ್ರಿಯಳೆನಿಸುವಿ. ಭಕ್ತರಿಗೆ ಮುಕ್ತಿದಾಯಕಳೆನಿಸುವಿ. ಅದರಿಂದ ನಾನು ನಿನ್ನನ್ನು ಎಂದೂ ಉಪಭೋಗಿಸಲಾರೆ.'

ಹೀಗೆ ಹೇಳಿ ಗಣೇಶ ಹರಿಯ ಆರಾಧನೆಗಾಗಿ ಬದರಿಕಾಶ್ರಮಕ್ಕೆ ತೆರಳಿದ. ಇತ್ತ ತುಲಸಿ ದುಃಖದಿಂದ ಪುಷ್ಕರ ಕ್ಷೇತ್ರಕ್ಕೆ ಹೋಗಿ ಲಕ್ಷ ವರ್ಷ ಕಾಲ ನಿರಾಹಾರಳಾಗಿ ತಪಸ್ಸು ಮಾಡಿದಳು. ಶಂಖಚೂಡನೆಂಬ ಅಸುರನ 'ಮಡದಿಯಾದಳು.' ಶಿವನ ಶೂಲದಿಂದ ಆತ ಸತ್ತಾಗ ತುಲಸಿ ಗಿಡವಾದಳು. ಪರಶುರಾಮ ಶಿವ ಪಾರ್ವತಿ-ಯರನ್ನು ಗಣೇಶನನ್ನೂ ವಂದಿಸಿ ತಪಸ್ಸಿಗೆ ತೆರಳಿದ.

ಈ ಗಣಪತಿ ಖಂಡ ಶ್ರವಣದಿಂದ ರಾಜಸೂಯಯಾಗದ ಫಲ ದೊರಕುವುದು. ಪುತ್ರರಿಲ್ಲದವರಿಗೆ ಪುತ್ರಲಾಭ. ಧೀರ ವೀರನೂ, ಶ್ರೀಮಂತನೂ, ಕೀರ್ತಿಶಾಲಿಯೂ, ಜ್ಞಾನಿಯೂ, ಮಹಾ ಜಿತೇಂದ್ರಿಯನೂ, ದಾನಶೀಲನೂ, ಒಳ್ಳೆಯ ಶೀಲ ಸದಾಚಾರ ಉಳ್ಳವನೂ, ಅಹಿಂಸೆ ದಯೆಗಳಿಂದ ಕೂಡಿದವನೂ, ತತ್ವಜ್ಞಾನಿಯೂ, ವಿಷ್ಣುಭಕ್ತನೂ ಆದ ಪುತ್ರ ಗಣೇಶನ ಅನುಗ್ರಹದಿಂದ ಲಭಿಸುತ್ತಾನೆ.

ಹುಟ್ಟು ಬಂಜೆಯೂ ಗಣೇಶನನ್ನು ಪೂಜಿಸಿ ಗಣೇಶ ಖಂಡ ಶ್ರವಣ ಮಾಡಿದರೆ ಪುತ್ರವತಿಯಾಗುವಳು. ಹಡೆದ ಮಕ್ಕಳನ್ನೆಲ್ಲ ಕಳೆದುಕೊಳ್ಳುವವಳೂ ಒಂದೇ ಮಗು-ವಿಗೆ ಜನ್ಮ ನೀಡಿದವಳೂ ಈ ಖಂಡದ ಶ್ರವಣದಿಂದ ಬಹುಪುತ್ರವತಿಯಾಗುವಳು. ಈ ಖಂಡದ ಶ್ರವಣದಿಂದಲೆ ಪೂರ್ಣ ಬ್ರಹ್ಮ ವೈವರ್ತ ಶ್ರವಣದ ಫಲ ಸಿಗುವುದು. ಅಭೀಷ್ಟ ಸಿದ್ಧಿಯಾಗುವುದು. ಶ್ರವಣ ಮಾಡಿದ ಬಳಿಕ ಪ್ರವಚನಕಾರನಿಗೆ ಸುವರ್ಣದ ಯಜ್ಞೋಪವೀತ, ಶ್ವೇತಛತ್ರ, ಪುಷ್ಪಮಾಲೆ, ಸ್ವಸ್ತಿ, ವಾಯನ ಎಳ್ಳುಂಡೆಗಳನ್ನೂ ಮಾಗಿದ ಹಣ್ಣುಹಂಪಲುಗಳನ್ನು ನೀಡಬೇಕು.

**ಇಲ್ಲಿಗೆ ಶ್ರೀ ಬ್ರಹ್ಮವೈವರ್ತ ಮಹಾಪುರಾಣದಲ್ಲಿ ಮೂರನೆಯದಾದ ಗಣಪತಿಖಂಡದಲ್ಲಿ ನಾರದ ನಾರಾಯಣ ಸಂವಾದದಲ್ಲಿ ಪರಶುರಾಮಾಗಮನ ಗಣಪತಿಖಂಡ ಶ್ರವಣ ಫಲವರ್ಣನವೆಂಬ ನಲವತ್ತಾರನೆ ಅಧ್ಯಾಯ ಮುಗಿಯಿತು.**

*ಮಹಾಗಣಪತಿಖಂಡ ಸಮಾಪ್ತ*

